**(ರಾಜ್ಯ ಸರ್ಕಾರದ ಲಾಂಛನ)**

ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ,
ಕರ್ನಾಟಕ ಸರ್ಕಾರ.

ಇತಿಹಾಸ ಸ್ನಾತಕೋತ್ತರ ಅಧ್ಯಯನ ವಿಭಾಗ,
ಸರ್ಕಾರಿ ಮಹಾವಿದ್ಯಾಲಯ (ಸ್ವಾಯತ್ತ), ಕಲಬುರಗಿ.

# ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆ

**(ಕಾಲೇಜಿನ ಲಾಂಛನ)**

ಸಂಪಾದಕರು.
**ಡಾ. ಇಂದುಮತಿ ಪಿ.ಪಾಟೀಲ**
**ಡಾ.ವೀರಶೆಟ್ಟಿ ಬಿ.ಗಾರಂಪಳ್ಳಿ.**

ಪ್ರಕಾಶಕರು.
**ಶ್ರೀ ಸಿದ್ಧಲಿಂಗೇಶ್ವರ ಬುಕ್ ಪ್ರಕಾಶನ, ಕಲಬುರಗಿ.**

**KALYANA KARNATAKADA AMURTA PARAMPARE** (Seminar Proceedings) Edited by DR Indumati Patil And DR Veershetty B Garamaplli, Published by: Siddalinga B Konek, Sri Siddalingeshwar Prakashana, Saraswathi Godam, Kalaburagi-585 101, Ph:226303, Mob:9448124431, 9880020808, 9731828999.



**First Impression : 2022.**

**Pages : 20+487.**

**Price : 250/-**

**Used Papers : 70GSM Maplitho.**

**Cover Page Design :**

**ISBN No:**

**ಪ್ರಕಾಶಕರು** : ಶ್ರೀ ಸಿದ್ಧಲಿಂಗೇಶ್ವರ ಬುಕ್ ಪ್ರಕಾಶನ,
ಮುಖ್ಯಬೀದಿ, ಕಲಬುರಗಿ–585 101.

ಫೋನ್ : 08472-222431. ಮೊ: 94498 25431.

Printed at : Omshakthi Printers, Bengaluru.

**ವಿಶೇಷ ಸೂಚನೆ:** ಪುಸ್ತಕದ ಲೇಖನಗಳಲ್ಲಿ ಮಂಡನೆಯಾದ ಅಭಿಪ್ರಾಯಗಳು ಆಯಾ ಲೇಖಕರ ಅಭಿಪ್ರಾಯಗಳಾಗಿರುತ್ತವೆ. ಅದಕ್ಕೆ ಕಾಲೇಜು ಆಡಳಿತ ಮಂಡಳಿ/ಸಂಪಾದಕರು/ಸರ್ಕಾರ ಜವಾಬ್ದಾರವಲ್ಲ.

# ಸಂಪಾದಕೀಯ ಮಂಡಳಿ.





**ಕಲ್ಯಾಣ ಕರ್ನಾಟಕ : ಜಾತ್ಯತೀತ ನೆಲೆಯ ಕಣಜ.**

ನಾಡಿನ ಯಾವುದೇ ಪರಂಪರೆಯ ನೆಲೆ ಪ್ರಧಾನವಾಗಿ ಜಾತ್ಯಾತೀತವೇ ಆಗಿರುತ್ತದೆ. ಆ ದಿಸೆಯಲ್ಲಿ ಕಲ್ಯಾಣ ಕರ್ನಾಟಕದ ಪರಂಪರೆಯ ನೆಲೆಗಳ ಬೇರುಗಳ ಸಹ ಜಾತ್ಯಾತೀತ ಗುಣಗಳನ್ನು ಮೈಗೂಡಿಸಿಕೊಂಡು ಬೆಳೆದವುಗಳಾಗಿವೆ. ಅವುಗಳಿಗೆ ಕಳಶಪ್ರಾಯವೆಂಬಂತೆ ನಡೆದ ೧೨ನೆಯ ಶತಮಾನದ ವಚನ ಚಳುವಳಿ ನಭೂತೋ ನಭವಿಷತ್ ಎಂಬಂತೆ ತನ್ನ ಪರಿಣಾಮಗಳನ್ನು ಈ ಜಗಕ್ಕೆ ನೀಡಿದೆ. ಅಂತಹ ಪರಂಪರೆಗಳ ಅಧ್ಯಯನ ಜಾಗತೀಕರಣದ ಈ ಹೊತ್ತಿನಲ್ಲಿ ನಡೆಯುತ್ತಿರುವುದು ಔಚಿತ್ಯಪೂರ್ಣ ಕೆಲಸ ಎನಿಸಿದೆ. ನಮ್ಮ ಪರಂಪರೆಯ ಮೂಲ ಆಶಯಗಳು ಜನರ ಸ್ಮೃತಿಪಟಲದಿಂದ ಮರೆಯಾಗುತ್ತಿರುವ ಸಂದರ್ಭದಲ್ಲಿ ಅವುಗಳ ಬಗ್ಗೆ ಚರ್ಚಿಸುವುದು ಮತ್ತು ಆ ಕುರಿತು ಸಂಶೋಧಕರ ಬರವಣಿಗೆಗಳನ್ನು ಪುಸ್ತಕ ರೂಪದಲ್ಲಿ ದಾಖಲಿಸುವುದು ಮಹತ್ವಪೂರ್ಣ ಕಾರ್ಯವೇ ಸರಿ.

ಸಮಷ್ಟಿ ಜೀವನದ ಅಂತರಂಗದ ಸಾಧನೆಗೆ ಸಹಕಾರಿಯಾದ ಸಾಮಗ್ರಿಗಳಿಂದ ಹಿಡಿದು, ವ್ಯಷ್ಟಿ ಜೀವನದ ವಿಕಾಸಕ್ಕೆ ಕಾರಣವಾದ ಸಂಸ್ಕಾರದವರೆಗೆ ನಮ್ಮ ಸಂಸ್ಕೃತಿ ಬೆಳೆದಿದೆ. ವ್ಯಕ್ತಿಯ ವಿಕಾಸಕ್ಕೆ ಕಾರಣವಾಗುವ ಸಾಮಾಜಿಕ ಪರಿಕರಗಳು ಸಹ ಸಂಸ್ಕೃತಿಯಲ್ಲಿಯೇ ಸಮಾವೇಶಗೊಳ್ಳುತ್ತವೆ. ಈ ಅರ್ಥದಲ್ಲಿ ಅದನ್ನು ಕೆಲವು ವೇಳೆ ದೇಶವಾಚಕವಾಗಿ ಬಳಸುವುದುಂಟು. ಒಟ್ಟು ಜನಜೀವನದ ಅಂತರಂಗದ ಅನುಭವ ಇಲ್ಲಿ ಪ್ರಧಾನವಾದ ಅಂಶವಾಗಿ ಗೋಚರವಾಗುತ್ತದೆ. ಆಯಾ ಪ್ರದೇಶ, ಭಾಷೆ, ಧರ್ಮಗಳ ಜನರು ತಂತಮ್ಮ ಬಹುಮುಖ ಸಮಸ್ಯೆಗಳಿಗೆ ಉತ್ತರವನ್ನು ಕಾಣಬಯಸುವ ಅಂತರಂಗದ ಸಾಧನೆಯೇ ಸಂಸ್ಕೃತಿಯ ಮೂಲಸಾಮಗ್ರಿಯಾಗಿದೆ. ಆ ದಿಸೆಯಲ್ಲಿ ಪರಂಪರಾಗತವಾಗಿ ಬಂದ ಆಚರಣೆಗಳು, ರೂಢಿ ಸಂಪ್ರದಾಯಗಳು, ನಂಬಿಕೆಗಳು ಜನಮಾನಸದಲ್ಲಿ ಹಾಸುಹೊಕ್ಕಾಗಿವೆ. ಈ ನಾಡಿಗೆ ಬಂದ ಮತ್ತು ಇಲ್ಲಿಯೇ ಹುಟ್ಟಿ ಬೆಳೆದ ಧಾರ್ಮಿಕ ಆಂದೋಲನಗಳು, ಜನಪದವನ್ನು ಅವು ರೂಪಿಸಿದ ಬಗೆ, ಸಾಹಿತ್ಯ ಮತ್ತು ಜನಪದ ಸಾಹಿತ್ಯಗಳು ಪಡೆದ ಅಭಿವ್ಯಕ್ತಿ ಎಲ್ಲವೂ ಇಲ್ಲಿ ಚರ್ಚೆಗೊಳಪಟ್ಟಿದೆ. ಜನಪದ ಸಂಸ್ಕೃತಿಯ ಸ್ವರೂಪವನ್ನೂ, ಸಾರವನ್ನೂ ಇನ್ನೂ ಸಾರವತ್ತಾಗಿ ಮತ್ತು ಜೀವಂತವಾಗಿ ತೋರಿಸಿಕೊಡುವ ಮಾಧ್ಯಮವಾಗಿ ಈ ವಿಚಾರ ಸಂಕಿರಣ ಕೆಲಸ ಮಾಡಿದೆ ಎಂದು ಹೇಳಬಲ್ಲೆ.

ಬದಲಾಗುತ್ತಿರುವ ಸನ್ನಿವೇಶಕ್ಕೆ ಅನುಗುಣವಾಗಿ ಜನಜೀವನ ಹೊಂದಿಕೊಳ್ಳಬೇಕಾಗುತ್ತದೆ. ಹೊಸ ಹೊಸ ವಿಚಾರಗಳ ಮಥನದಿಂದ ಅನೇಕ ಹಳೆಯ ನಂಬಿಕೆಗಳು ಕುಸಿಯುತ್ತವೆ; ಹೊಸ ಬೆಳಕು ಮೂಡುತ್ತದೆ. ಅದು ಅನಿವಾರ್ಯ ಮತ್ತು ಅಗತ್ಯ; ಹಣ್ಣೆಲೆ ಉದುರಿ ಹೊಸ ಎಲೆ ಚಿಗುರುವಂತೆ ಸಹಜವೂ ಹೌದು. ವೃಕ್ಷ ಜೀವಂತವಾಗಿರುವುದರ ಲಕ್ಷಣ ಅದು. ಕಲ್ಯಾಣ ಕರ್ನಾಟಕ ಪರಂಪರೆ ಇಂಥ ಜೀವಂತ ಲಕ್ಷಣವನ್ನು ಪಡೆದು ಹೊಸ ಹೊಸ ಚಿಗುರನ್ನು, ಹೂವುಹಣ್ಣುಗಳನ್ನು ಅರಳಿಸುತ್ತ ಬಂದಿದೆ. ತಳದಲ್ಲಿರುವ ತಾಯಿಬೇರಿನ ಸತ್ವದಿಂದ ಮೇಲೆ ಪಲ್ಲವಿಸಿ ನಿತ್ಯನೂತನವಾಗಿ ನಳನಳಿಸುತ್ತಿದೆ. ಹಾಗಾಗಿ 'ಕೀಳು – ಮೇಲಾಗಬೇಕು, ಮೇಲು ಕೀಳಾಗಬೇಕು, ಜಾತಿ ಮತವೆಲ್ಲಾ ಹೋಗಬೇಕು, ಏಕವಾಗಿ ಬಾಳಬೇಕು' ಎಂಬ ತತ್ವ ನಂಬಿಕೆಯ ಮೂಲರೂಪವಾಗಿ ನಡೆದ ವಿಚಾರ ಸಂಕಿರಣ ಈ ಭಾಗದ ಪರಂಪರೆಯ ಚಾರಿತ್ರಿಕ ಹಿನ್ನಲೆಗೆ ಹಿಡಿದ ಕೈಗನ್ನಡಿಯಾಗಿದೆ. ಇಂತಹ ಚರ್ಚೆಗಳು ಇನ್ನೂ ಹೆಚ್ಚು ಹೆಚ್ಚು ನಡೆಯಲಿ ಎಂದು ಹಾರೈಸುತ್ತ, ಇದಕ್ಕೆ ಕಾರಣವಾದ ಎಲ್ಲ ಮನಸ್ಸುಗಳಿಗೆ ಮನಃಪೂರ್ವಕವಾಗಿ ಶುಭ ಹಾರೈಸುವೆ.

**–ಸುಲಫಲ ಶ್ರೀಗಳು.**

**ಶುಭ ಸಂದೇಶ.**

ಕಲ್ಯಾಣ ಕರ್ನಾಟಕ, ಶರಣರ ದಾಸರ ಸಂತರ ಸೂಫಿಗಳ ನೆಲೆಬೀಡು. ಬಹುಧರ್ಮಗಳು ಬಹುಸಂಪ್ರದಾಯ, ಬಹುಆಚರಣೆಗಳೊಂದಿಗೆ ಇಲ್ಲಿ ಬದುಕು ಮಾಡುತ್ತಿವೆ. ಅವುಗಳ ಆಚಾರ–ವಿಚಾರದಲ್ಲಿ ಬಹುತ್ವ ಕಂಡರೂ ಏಕತ್ವ ಅವುಗಳ ತತ್ವಸೆಲೆ. ಪ್ರಾಚೀನ ಕಾಲದಿಂದಲೂ ಅವುಗಳ ಮಧ್ಯ ಕೊಡುಕೊಳ್ಳುವಿಕೆಗೆ ಎಂದೂ ಎಳ್ಳಷ್ಟು ಕುಂದುಂಟಾಗಿಲ್ಲ. ಸಹಬಾಳ್ವೆ ಮತ್ತು ಸಹೋದರತ್ವಗಳಿಗೆ ಕಲ್ಯಾಣ ಕರ್ನಾಟಕದ ಪರಂಪರೆ ಚರಿತ್ರೆಯಲ್ಲಿ ಹೆಸರುವಾಸಿಯಾಗಿದೆ. ಇಲ್ಲಿಯ ಶರಣಬಸವೇಶ್ವರರು, ಖಾಜಾ ಬಂದೇನವಾಜರು, ಕಡಿಕೋಳ ಮಡಿವಾಳಪ್ಪನವರು, ಬೌದ್ಧರ ಸನ್ನತಿ, ತಿಂತಣಿಯ ಮೌನೇಶ್ವರರು ಹೀಗೆ ಎಲ್ಲವೂ ಇಲ್ಲಿಯ ಜನರಿಗೆ ಪೂಜ್ಯಸ್ಥಳಗಳಾಗಿವೆ. ಅವರುಗಳ ಹೆಸರಿನಲ್ಲಿ ನಡೆಯುವ ಜಾತ್ರೆಗಳು, ಹಬ್ಬ ಹರಿದಿನಗಳು ಸಹ ಭಾರತದ ಬಹುತ್ವಕ್ಕೆ ಹಿಡಿದ ಕೈಗನ್ನಡಿಯಂತಿವೆ. ಅಂತಹ ಚರಿತ್ರೆಯನ್ನು ರಚಿಸುವಲ್ಲಿ ನಡೆಯುವ ವಿಚಾರ ಸಂಕಿರಣಗಳಿಗೆ ಅಂತೆಯೇ ಮಹತ್ವವಿದೆ. ನಮ್ಮ ಪರಂಪರೆ ಅವುಗಳ ಮೌಲ್ಯ, ಪರಿಕಲ್ಪನೆ, ತತ್ವಸಿದ್ಧಾಂತಗಳು ಮತ್ತು ಅವುಗಳ ಚಿಂತನೆಗಳನ್ನು ಅರಿಯುವಲ್ಲಿ ಇಂತಹ ವಿಚಾರ ಸಂಕಿರಣಗಳು ಉಪಯುಕ್ತವೆನಿಸಲಿವೆ. ಮತ್ತು ನಮ್ಮ ಸಂಸ್ಕೃತಿಯನ್ನು ನಾವು ಅರಿತು ಬೆಳೆಸಲು ಇವು ಸಹಕಾರಿಯಾಗಿವೆ.

ಆ ದಿಶೆಯಲ್ಲಿ ಸರ್ಕಾರಿ ಮಹಾವಿದ್ಯಾಲಯ (ಸ್ವಾಯತ್ತ), ಕಲಬುರಗಿಯ ಇತಿಹಾಸ ಸ್ನಾತಕೋತ್ತರ ಅಧ್ಯಯನ ವಿಭಾಗದ ವತಿಯಿಂದ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಕಲಬುರಗಿ ಇವರ ಸಹಯೋಗದೊಂದಿಗೆ 'ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆ' ಎಂಬ ವಿಷಯದ ಮೇಲೆ ನಡೆದ ಒಂದು ದಿನದ ರಾಜ್ಯಮಟ್ಟದ ವಿಚಾರ ಸಂಕಿರಣ ಸಕಾಲಿಕವೂ, ಔಚಿತ್ಯಪೂರ್ಣವೂ ಆಗಿತ್ತು. ಈ ವಿಚಾರ ಸಂಕಿರಣದಲ್ಲಿ ಮಂಡನೆಯಾದ ಲೇಖನಗಳನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿರುವುದು ಇನ್ನೂ ಸಂತೋಷದಾಯಕ ವಿಷಯವಾಗಿದೆ. ಈ ಪುಸ್ತಕವು ಸಂಶೋಧಕರಿಗೆ, ಇತಿಹಾಸ ಆಸಕ್ತರಿಗೆ ಹಾಗೂ ಜನಸಾಮಾನ್ಯರಿಗೆ ಉಪಯುಕ್ತವಾಗಲೆಂದು ಆಶಿಸುತ್ತೇನೆ. ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆಯ ತಾತ್ವಿಕ ಧಾರೆಗಳ ಕುರಿತಾದ ಪರಿಣಾಮಕಾರಿಯಾದ ಅಧ್ಯಯನಗಳು ಡಾ.ಇಂದುಮತಿ ಪಿ.ಪಾಟೀಲ ಇವರ ಮೂಲಕ ಇನ್ನು ಹೆಚ್ಚು ಹೆಚ್ಚು ನಡೆಯುವಂತಾಗಲಿ ಎಂದು ಶುಭ ಹಾರೈಸುವೆ.

**ಶ್ರೀ ದತ್ತಾತ್ರೆಯ ಪಾಟೀಲ ರೇವೂರ,**
**ಮಾನ್ಯ ಸಾಸಕರು, ದಕ್ಷಿಣ ವಿಧಾನಸಭಾ ಮತಕ್ಷೇತ್ರ,**
**ಅಧ್ಯಕ್ಷರು, ಕಾಲೇಜು ಅಭಿವೃದ್ಧಿ ಸಮಿತಿ,**
**ಕಲಬುರಗಿ.**

**ಹಾರೈಕೆ.**

ಮನುಷ್ಯನಿಗೆ ನೆನಪಿದ್ದಂತೆ ಸಮಾಜಕ್ಕೆ ಚರಿತ್ರೆ ಇದೆ. ಚರಿತ್ರೆಯ ಬರವಣಿಗೆಯಲ್ಲಿ ದಾಖಲೆಗಳು ಎಷ್ಟು ಮುಖ್ಯವೋ ಸಂವಾದವೂ ಕೂಡ ಅಷ್ಟೇ ಮುಖ್ಯ. ವಿಚಾರ ಸಂಕಿರಣಗಳು, ಇತಿಹಾಸ ರಚನೆಯಲ್ಲಿ ಒಂದು ವಿಷಯದ ಬೆಳವಣಿಗೆಗೆಯ ಬಗೆ ಮತ್ತು ಖಚಿತವಾದ ಚಿತ್ರಣಗಳನ್ನು ಕಟ್ಟುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಹಾಗಾಗಿಯೇ ನಮ್ಮ ಸರ್ಕಾರಗಳು ವಿಚಾರ ಸಂಕಿರಣಗಳನ್ನು, ಕಾರ್ಯಾಗಾರಗಳನ್ನು ನಡೆಸುವಲ್ಲಿ ಮುತುವರ್ಜಿಯನ್ನು ವ್ಯಕ್ತಪಡಿಸಿವೆ. ಆ ಮೂಲಕ ಗತಕಾಲಕ್ಕೆ ಸಂಬಂಧಿಸಿದ ವಿಷಯಗಳ ಕುರಿತು ಅಧ್ಯಾಪಕರಲ್ಲಿ, ವಿದ್ಯಾರ್ಥಿಗಳಲ್ಲಿ ಹಾಗೂ ಜನಸಾಮಾನ್ಯರಲ್ಲಿ ಅರಿವು ಮೂಡಿಸುವ ಕೆಲಸ ಆಗಬೇಕಿದೆ. ಹಾಗಾಗಿ ಇದು ಇತಿಹಾಸ ರಚನೆಗೆ ಪೂರಕವಾದ ಕೆಲಸವೆನಿಸಿಕೊಂಡಿದೆ.

ಸರ್ಕಾರಿ ಮಹಾವಿದ್ಯಾಲಯ (ಸ್ವಾಯತ್ತ), ಕಲಬುರಗಿಯ ಇತಿಹಾಸ ಸ್ನಾತಕೋತ್ತರ ಅಧ್ಯಯನ ವಿಭಾಗದ ವತಿಯಿಂದ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಕಲಬುರಗಿ ಇವರ ಸಹಯೋಗದೊಂದಿಗೆ **'ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆ'** ಎಂಬ ವಿಷಯದ ಮೇಲೆ ಒಂದು ದಿನದ ರಾಜ್ಯಮಟ್ಟದ ವಿಚಾರ ಸಂಕಿರಣವನ್ನು ದಿನಾಂಕ:೨೯.೧೧.೨೦೨೧ರಂದು ಹಮ್ಮಿಕೊಂಡಿದ್ದು ಸಕಾಲಿಕವೂ, ಔಚಿತ್ಯಪೂರ್ಣವೂ ಆಗಿತ್ತು. ಈ ವಿಚಾರ ಸಂಕಿರಣದಲ್ಲಿ ಮಂಡನೆಯಾದ ಲೇಖನಗಳನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿರುವುದು ಇನ್ನೂ ಸಂತೋಷದಾಯಕ ವಿಷಯವಾಗಿದೆ. ಈ ಪುಸ್ತಕವು ಸಂಶೋಧಕರಿಗೆ, ಇತಿಹಾಸ ಆಸಕ್ತರಿಗೆ ಹಾಗೂ ಜನಸಾಮಾನ್ಯರಿಗೆ ಉಪಯುಕ್ತವಾಗಲೆಂದು ಆಶಿಸುತ್ತೇನೆ. ಶುಭವಾಗಲಿ ತಂಡಕ್ಕೆ.

**ಪ್ರಾದೇಶಿಕ ಜಂಟಿ ನಿರ್ದೇಶಕರು,**
**ಕಾಲೇಜು ಶಿಕ್ಷಣ ಇಲಾಖೆ,**
**ಪ್ರಾದೇಶಿಕ ಕಚೇರಿ, ಕಲಬುರಗಿ.**

**ಪ್ರಾಂಶುಪಾಲರ ಮಾತು.**

ಕಲ್ಯಾಣ ಕರ್ನಾಟಕದ ಜಿಲ್ಲೆಗಳಲ್ಲಿನ ಅಮೂರ್ತ ಪರಂಪರೆಯನ್ನು ಜತನದಿಂದ ಕಾಪಾಡಿಕೊಂಡು ಬರಬೇಕಿದೆ. ಆ ದಿಶೆಯಲ್ಲಿ ನಾವು ಇಂದು ಹೆಚ್ಚು ಹೆಚ್ಚು ಆ ಬಗ್ಗೆ ಚರ್ಚೆಗಳನ್ನು, ಅಧ್ಯಯನಗಳನ್ನು ಮಾಡಬೇಕಿದೆ. ಆ ಮೂಲಕ ಅದನ್ನು ಮುಂದಿನ ಪೀಳಿಗೆಗೆ ಕೊಂಡೊಯ್ಯಲು ಸಾಧ್ಯವಿದೆ. ನಮ್ಮ ಮಹಾವಿದ್ಯಾಲಯದ ಇತಿಹಾಸ ಸ್ನಾತಕೋತ್ತರ ಅಧ್ಯಯನ ವಿಭಾಗದ ವತಿಯಿಂದ ಮೈಸೂರಿನ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರ ಸಹಯೋಗದಲ್ಲಿ ಆಯೋಜಿಸಿದ್ದ 'ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆ' ಕುರಿತ ಒಂದು ದಿನದ ರಾಜ್ಯಮಟ್ಟದ ವಿಚಾರ ಸಂಕಿರಣ ಆ ದಿಶೆಯಲ್ಲಿ ಮಹತ್ವದ ಹೆಜ್ಜೆಗುರುತಾಗಿ ದಾಖಲಾಗಲಿದೆ. ಇಡಿ ದಿನ ಅಲ್ಲಿ ನಡೆದ ಚರ್ಚೆ, ಸಂವಾದಗಳು ಆರೋಗ್ಯಕರ ಸಮಾಜದ ನಿರ್ಮಾಣಕ್ಕೆ ಮಹತ್ವದ ಕೊಡುಗೆಗಳನ್ನು ನೀಡಲಿವೆ.

ಸಮಾಜದ ಎಲ್ಲರಿಗೂ ಒಂದು ಪರಂಪರೆ ಇದೆ. ಆ ಎಲ್ಲ ಗುರು ಪರಂಪರೆಗಳು ಸಮಾಜಕ್ಕೆ ಒಳ್ಳೆಯದನ್ನೇ ನೀಡಿವೆ. ಅವುಗಳ ದಾಖಲೀಕರಣದ ದೃಷ್ಟಿಯಿಂದ ಈ ವಿಚಾರ ಸಂಕಿರಣ ಮಹತ್ವದ ಕ್ರಮವೆನಿಸಲಿದೆ. ಈ ಮಾದರಿಯ ವಿಚಾರ ಸಂಕಿರಣಗಳು ಶೋಷಿತರ ಜೀವನದಲ್ಲಿ ಹಾಗೂ ಸಮುದಾಯಗಳಲ್ಲಿ ಜಾಗೃತಿಯನ್ನುಂಟು ಮಾಡಿಲಿ ಎಂದು ಆಶಿಸುವೆ. ಅಮೂರ್ತ ಪರೆಂಪರೆಯ ಯಾವ ಅಂಶಗಳು ಕಲೆ–ಸಂಸ್ಕೃತಿ, ಸಾಹಿತ್ಯ, ಸಾಮಾಜಿಕತೆ, ಧಾರ್ಮಿಕತೆ ಮೇಲೆ ಪ್ರಭಾವ ಬೀರಿವೆಯೋ ಅವೆಲ್ಲವೂ ಮತ್ತೆ ಜನಸಾಮಾನ್ಯರಲ್ಲಿ ಮರುಜೀವಪಡೆಯುವಂತಾಗಲಿ. ಇಂತಹ ಮಹತ್ವದ ವಿಚಾರ ಸಂಕಿರಣವನ್ನು ನಮ್ಮ ಮಹಾವಿದ್ಯಾಲಯದಲ್ಲಿ ಹಮ್ಮಿಕೊಂಡ ಡಾ. ಇಂದುಮತಿ ಪಿ.ಪಾಟೀಲ, ಶ್ರೀ ರಾಜಾರಾಂ ಬಿ.ಸಿ ಅವರಿಗೂ ಹಾಗೂ ಅದಕ್ಕೆ ಸಹಕರಿಸಿದ ಉಳಿದೆಲ್ಲ ಪ್ರಾಧ್ಯಾಪಕ ವೃಂದದವರಿಗೂ ನನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುವೆ. ವಿಚಾರ ಸಂಕಿರಣದಲ್ಲಿ ಭಾಗವಹಿಸಿ ತಮ್ಮ ಅನುಭವದ ನುಡಿಗಳನ್ನು ಹಂಚಿಕೊಂಡು ಕಾಲೇಜಿನ ಮಕ್ಕಳ ವಿಚಾರ ಲಹರಿಯನ್ನು ಚಿಮ್ಮಿಸಿದ ಶ್ರೀ ರಿಷಿಕೇಶ ಬಹಾದ್ದೂರ ದೇಸಾಯಿ, ಶ್ರೀ ಪೀರ ಬಾಷ, ಡಾ.ಶಿವಗಂಗಾ ರುಮ್ಮಾ ಮತ್ತು ಡಾ.ಚಂದ್ರಶೇಖರ ಬಿರಾದಾರ ಅವರುಗಳಿಗೂ ಕಾಲೇಜಿನ ವತಿಯಿಂದ ಧನ್ಯವಾದಗಳನ್ನು ಸಲ್ಲಿಸುವೆ.

ಈ ವಿಚಾರ ಸಂಕಿರಣದಲ್ಲಿ ಮಂಡನೆಯಾದ ಲೇಖನಗಳನ್ನು ಸಂಗ್ರಹಿಸಿ 'ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆ' ಎಂಬ ಪುಸ್ತಕವನ್ನು ತರುತ್ತಿರುವುದು ಸಂತೋಷದಾಯಕ ವಿಷಯವಾಗಿದೆ. ಈ ಪುಸ್ತಕ ಮತ್ತು ವಿಚಾರ ಸಂಕಿರಣದಲ್ಲಿ ಮಂಡನೆಯಾದ ಚಿಂತನೆಗಳು ನಮ್ಮ ಮಕ್ಕಳಿಗೆ ದಾರಿದೀಪವಾಗಿ ಎಂದು ಹಾರೈಸುವೆ.

**ಡಾ. ಶಂಕ್ರೆಪ್ಪ ಎಸ್. ಹತ್ತಿ,**
**ಪ್ರಾಂಶುಪಾಲರು,**
**ಸರ್ಕಾರಿ ಮಹಾವಿದ್ಯಾಲಯ (ಸ್ವಾಯತ್ತ),**
**ಕಲಬುರಗಿ.**

## ನೆನಕೆಗಳು.

ಹೈದರಾಬಾದ್ ಕರ್ನಾಟಕ ಪ್ರಾಂತ್ಯವು ವರ್ಷದ ಕೆಳಗೆ 'ಕಲ್ಯಾಣ ಕರ್ನಾಟಕ' ಎಂದು ನಾಮಕರಣಗೊಂಡಿದೆ. ಹಾಗೆ ನೋಡಿದರೆ, ಪ್ರಾಚೀನ ಕಾಲದಿಂದಲೇ ಸಾಂಸ್ಕೃತಿಕವಾಗಿ ಈ ಪ್ರಾಂತ್ಯ ಅನೇಕ ಕಾರಣಗಳಿಗಾಗಿ ಅನನ್ಯತೆ ಪಡೆಯುತ್ತ ಬಂದಿದೆ. ಈ ಪ್ರಾಂತ್ಯದ ಒಳಗಡೆಯೇ 'ಎಡೆದೊರೆ ನಾಡು' 'ಸಗರ ನಾಡು' ಮುಂತಾದ ಹೆಸರುಳ್ಳ ಕೆಲವು ಪ್ರಾಂತ್ಯಗಳೂ ಇವೆ. ಈ ಹೆಸರುಗಳು ಕೂಡ ಸಾಂಸ್ಕೃತಿಕ–ರಾಜಕೀಯ ಭಾಗವಾಗಿ ರೂಪ ಪಡೆದಿವೆ. ಅವು ಪ್ರಕೃತಿ, ಹವಾಮಾನ, ನದಿಗಳು, ಗುಡ್ಡಬೆಟ್ಟಗಳು ಮುಂತಾದವುಗಳ ನಿಸರ್ಗ ಗುಣಗಳಿಂದ ಸಂಪತ್ತನ್ನು ಸೃಷ್ಟಿಸುತ್ತವೆ. ಈ ಪ್ರಾಂತ್ಯದಲ್ಲಿರುವ ಜನಸಮುದಾಯಗಳು ಪ್ರಾಕೃತಿಕ ಗುಣಗಳಿಂದ ತಮ್ಮದೇ ಆದ ಚರಿತ್ರೆಯನ್ನು ಹಾಗೂ ಸಂಸ್ಕೃತಿಯನ್ನು ಪಡೆದುಕೊಂಡು ಅನನ್ಯ ರೂಪ ತಾಳಿರುತ್ತವೆ. ಈ ಹೊತ್ತಿನ ಜಾಗತೀಕರಣದ ಬೆಳವಣಿಗೆಯಿಂದ ಪ್ರಾಂತ್ಯಗಳು ತಮ್ಮ ಪಾರಂಪರಿಕ ರೂಪಗಳನ್ನು ಸಡಿಲಿಸುತ್ತಿವೆ ಅಥವಾ ಬದಲಿಸಿಕೊಳ್ಳುತ್ತಿವೆ. ಆದರೂ ಕಲ್ಯಾಣ ಕರ್ನಾಟಕದ ಪರಂಪರಾಗತ ನೆನಪುಗಳಿಂದ, ಬದುಕುಗಳಿಂದ ಆಡುವ ನುಡಿಗಳಿಂದ ಅನನ್ಯತೆಯನ್ನು ಉಳಿಸಿಕೊಂಡು ಇಲ್ಲಿಯ ಸಮಾಜ ಬಂದಿದೆ.

ಸಂಸ್ಕೃತಿಗೆ ಗಡಿರೇಖೆಗಳಿಲ್ಲ. ರಾಜಕೀಯಕ್ಕೆ ಗಡಿರೇಖೆಗಳಿರುತ್ತವೆ. ಕಲ್ಯಾಣ ಕರ್ನಾಟಕದ ಸರಹದ್ದಿನಲ್ಲಿ ಸಾಹಿತ್ಯ, ಸಂಸ್ಕೃತಿ, ಕಲೆಗಳು ಬೆಳೆದುಬಂದಿವೆ. ಪ್ರಾಚೀನ ಕಾಲದಿಂದ ಈ ಪ್ರದೇಶವೇ ಜನವಸತಿ ಇರುವ ಪ್ರಾಂತ್ಯವಾಗಿತ್ತು. ಕರ್ನಾಟಕದ ದಕ್ಷಿಣ ಭಾಗಕ್ಕಿಂತ ಕರ್ನಾಟಕದ ಉತ್ತರ ಭಾಗದಲ್ಲಿ ಜನಸಮುದಾಯಗಳು, ರಾಜತ್ವಗಳು, ಧರ್ಮಗಳು ಮತ್ತು ಯುದ್ಧಗಳು ಸಂಭವಿಸಿದ್ದು ಇಲ್ಲಿಯೇ. ಇದಕ್ಕೆ ದೀರ್ಘ ಪರಂಪರೆ ಇದೆ, ಚರಿತ್ರೆಯಿದೆ, ಸಂಸ್ಕೃತಿಯಿದೆ. ಅದನ್ನು ಈ ವಿಚಾರ ಸಂಕಿರಣದ ಮೂಲಕ ಕಟ್ಟುವ; ನೆನಪಿಸುವ ಕೆಲಸವನ್ನು ಮಾಡಲಾಗಿದೆ. ಕೇವಲ ಒಂದು ದಿನದಮಟ್ಟಿಗೆ ಚರ್ಚಿಸಿ ಮರೆತುಬಿಡುವ ಬದಲು ಅಲ್ಲಿ ಮಂಡನೆಯಾದ ವಿಚಾರಗಳನ್ನು ಪುಸ್ತಕ ರೂಪದಲ್ಲಿ ದಾಖಲೀಕರಣ ಮಾಡುತ್ತಿರುವುದು ಹೆಮ್ಮೆಯ ಕೆಲಸವೆನಿಸಿದೆ. ಈ ಕಾರ್ಯಕ್ಕಾಗಿ ಕಾಲೇಜು ಆಡಳಿತ ಮಂಡಳಿಗೂ, ಅಧ್ಯಾಪಕರಿಗೂ ಹಾಗೂ ಉಳಿದೆಲ್ಲ ಮಹನಿಯರಿಗೂ ವೈಯಕ್ತಿಕವಾಗಿ ಮತ್ತು ಇಲಾಖೆಯ ವತಿಯಿಂದ ಧನ್ಯವಾದಗಳನ್ನು ಸಲ್ಲಿಸುತ್ತಿದ್ದೇನೆ.

**ಡಾ. ರಾಜಾರಾಂ ಬಿ.ಸಿ,**
**ಉಪನಿರ್ದೇಶಕರು (ಪ್ರ),**
**ಪುರಾತತ್ವ, ಸಂಗ್ರಹಾಲಯಗಳು & ಪರಂಪರೆ**
**ಇಲಾಖೆ, ಕಲಬುರಗಿ.**



## ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ.

ಭಾರತೀಯ ಸಂದರ್ಭದ ಚರಿತ್ರೆಯಲ್ಲಿ 'ಏಕಸಂಸ್ಕೃತಿ' 'ಏಕಪರಂಪರೆ' ಎಂಬುದೊಂದು ಯಾವತ್ತಿಗೂ ಉಸಿರಾಡಿದ್ದಿಲ್ಲ. ಭಾರತ ಯಾಹೊತ್ತಿಗೂ 'ಬಹುಸಂಸ್ಕೃತಿ' 'ಬಹುಪರಂಪರೆ'ಗಳ ಒಕ್ಕೂಟ ವ್ಯವಸ್ಥೆ. ಅಂತೆಯೇ ಈ ದೇಶದಲ್ಲಿ ಹಲವು ಜನಾಂಗಗಳಿರುವಂತೆ ಹಲವು ಧರ್ಮಗಳಿವೆ. ಆ ಎಲ್ಲ ಧರ್ಮಗಳು ಈ ದೇಶಕ್ಕೆ ಮತ್ತು ಜಗತ್ತಿಗೆ ಒಳ್ಳೆಯದನ್ನೇ ಬೋಧಿಸಿವೆ. ಈ ಬೋಧನೆಯಲ್ಲಿ 'ದೇಸಿಯತೆ'ಯ ಅಮೃತವಾಹಿನಿಯೊಂದು ಎದೆಯಿಂದಲೆದೆಗೆ ಸದಾ ಹರಿದಿದೆ; ಹರಿಯುತ್ತಿದೆ. ನಮ್ಮ ಪಂಪ ಅದನ್ನು 'ದೇಸಿಯೊಳ್ ಪುಗುವುದು ಪೊಕ್ಕು ಮಾರ್ಗದೊಳೆ ತಳ್ವುದು' ಎಂದು ಉತ್ತರದ ಮೂಲಭಾವಕ್ಕೆ ಸಂವಾದಿಯಾಗಿ ದಕ್ಷಿಣದ 'ಮಾರ್ಗ' ಮತ್ತು 'ದೇಸಿ'ಯತೆಯನ್ನು ಪ್ರತಿಷ್ಠಾಪಿಸುವ ಮೂಲಕ ಪ್ರಾದೇಶಿಕ ಭಿನ್ನತೆಯನ್ನು; ಅಸ್ಮಿತೆಗಳನ್ನು ಎತ್ತಿಹಿಡಿಯುವ ಕಾರ್ಯ ಮಾಡಿದ. ಅದನ್ನೇ ನಮ್ಮ ಕವಿರಾಜಮಾರ್ಗಕಾರ 'ಕಸವರಮೆಂಬುದು ನೆರೆಸೈರಿಸಲಾರ್ಪೊಡೆ ಪರಧರ್ಮಮುಮಂ ಪರವಿಚಾರಮುಮಂ' ಎಂದು ಹೇಳುವ ಮೂಲಕ ಎಲ್ಲವನ್ನೂ ಸ್ವೀಕರಿಸುವ ಮತ್ತು ತನ್ನದನ್ನು ಉಳಿಸಿಕೊಳ್ಳುವ ಮೀಮಾಂಸೆಯ ಕುರಿತಾಡಿರುವ ಮಾತುಗಳು ಕಲ್ಯಾಣ ಕರ್ನಾಟಕ ಜನತೆಯ ಜೀವಧ್ವನಿಗಳು ಎಂದು ನಮಗನಿಸುತ್ತವೆ. ಬಹುಭಾಷಿಕ–ಬಹುಸಾಂಸ್ಕೃತಿಕ ಪರಂಪರೆಗಳನ್ನುಳ್ಳ ಈ ದೇಶದ 'ಬಹುತ್ವ'ವನ್ನೇ ಇವರಿಬ್ಬರು ಧ್ವನಿಸಿದಂತೆ ಮಾತನಾಡಿದ್ದಾರೆ. ಇಲ್ಲಿ ಒಂದನ್ನು ಧಿಕ್ಕರಿಸಿ ಇನ್ನೊಂದರ ಪ್ರತಿಷ್ಠಾಪನೆ ಎಂದಾಗಲಿ ಅಥವಾ ಒಂದನ್ನು ಸಾರಸಗಟಾಗಿ ನಿರಾಕರಿಸುವುದಾಗಲಿ ಅವರು ಮಾಡಿದ್ದಿಲ್ಲ. ಅದನ್ನು ಒಪ್ಪಿಯೂ ತನ್ನದನ್ನು–ತನ್ನ ಬದುಕಿನ ಮೀಮಾಂಸೆಯ ಹಕ್ಕನ್ನು ಪ್ರತಿಷ್ಠಾಪಿಸಿಕೊಳ್ಳುವುದು. ಇದು ಇಡೀ ಕಲ್ಯಾಣ ಕರ್ನಾಟಕ ಜನತೆಯ ಬದುಕಿನ ಕ್ರಮ.

ಆದರೆ, ಅದಕ್ಕೆ ವಿರುದ್ದವಾದ ಲಕ್ಷಣವೆಂಬಂತೆ ಈ ಹೊತ್ತಿನ ರಾಜಕಾರಣದ ಚಿಂತನಾಕ್ರಮ ಏಕಮುಖಿಯಾಗಿ ಚಲಿಸುತ್ತಿರುವ ಹೊತ್ತಿನಲ್ಲಿ 'ಭಾರತೀಯತೆ' ಮತ್ತು 'ಭಾರತೀಯ ಸಂಸ್ಕೃತಿ'ಯ ಜೊತೆ–ಜೊತೆಗೆ 'ದೇಸಿಯತೆ' ಮತ್ತು 'ದೇಸಿಸಂಸ್ಕೃತಿ'ಯ ಚಿಂತನಾಕ್ರಮಗಳ ಬಗ್ಗೆ, ಅವರು ಮಂಡಿಸಿರುವ ದೇಸಿಮಾರ್ಗಗಳ ಬಗ್ಗೆ ಹೆಚ್ಚೆಚ್ಚು ಚಿಂತಿಸಬೇಕಾದ ಅನಿವಾರ್ಯತೆ ಬಂದೊದಗಿದೆ ಎಂದೆನಿಸುತ್ತದೆ. ಯಾಹೊತ್ತು ಭಾರತೀಯ ಮಣ್ಣಿನ ಗುಣವಾಗಿದ್ದ 'ಬಹುಸಂಸ್ಕೃತಿ' – 'ಬಹುಪರಂಪರೆ'ಗಳ ಪರಿಕಲ್ಪನೆಗಳಿಗೆ ವಿರುದ್ಧವಾಗಿ ಇತ್ತಿಚೆಗೆ ಹುಟ್ಟಿಕೊಳ್ಳುತ್ತಿರುವ 'ಏಕಸಂಸ್ಕೃತಿ'ಯ ಕುರಿತು ನಾವಿಂದು ಪುನರಾಲೋಚಿಸಬೇಕಾಗಿದೆ. ಕೋಮುದ್ವೇಷ, ಜಾತಿ–ಧರ್ಮದ ಅಮಲು ಮಾನವತೆಯನ್ನು ಮಂಕಾಗಿಸಿರುವ ಹಾಗೂ 'ಗಾಂಧೀಯ ಬದಲಿಗೆ ಗೋಡ್ಸೆ' ಎಂಬ ವಿಪ್ಲವದ ಈ ದಿನಗಳಲ್ಲಿ ಈ ಬಗೆಗಿನ ಚರ್ಚೆ ಇನ್ನೂ ಅರ್ಥಪೂರ್ಣವೆನಿಸಿಕೊಳ್ಳುತ್ತದೆ. ಆ ಮೂಲಕ ಭಾರತದ ಬಹುತ್ವದ ಜೀವಾಳವನ್ನು ಈ 'ದೇಸಿದಾರಿ'ಯಲ್ಲಿ ಹುಡುಕಬೇಕಿದೆ. ಆ ಹುಡುಕಾಟದ ಫಲವಾಗಿ ಈ ವಿಚಾರ ಸಂಕಿರಣ ಮತ್ತು ಪುಸ್ತಕ ಪ್ರಕಟಣೆ.

'ಪದನಱಿದು ನುಡಿಯಲುಂ ನುಡಿದುದನಱಿದಾರಯಲುಮಾರ್ಪರಾ ನಾಡವರ್ಗಳ್ ಚದುರರ್ ನಿಜದಿಂ ಕುಱಿತೋದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್' ಯಾವ ಮಣ್ಣಿನಲ್ಲಿ ನಿಂತು ಶ್ರೀವಿಜಯ ಈ ಮಾತುಗಳನ್ನು ಆಡಿದ್ದನೋ, ಆ ಮಣ್ಣಿನಲ್ಲಿಯೇ ಹುಟ್ಟಿಬೆಳೆದ ವಚನಕ್ರಾಂತಿ 'ತಾಳ ಮಾನ ಸರಿಸವನರಿಯೆ ಓಜೆಬಜಾವಣೆ ಲೆಕ್ಕವನರಿಯೆ ಅಮೃತಗಣ ದೇವಗಣವನರಿಯೆ ಕೂಡಲಸಂಗಮದೇವಾ ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂಬ ಸ್ವಾಭಿಮಾನದ ನುಡಿಗಳನ್ನೊಳಗೊಂಡ ವಚನವನ್ನೂ ರಚಿಸಿತು. 'ಇತರರನ್ನು ನೀನು ನಿನ್ನಂತೆಯೇ ಕಾಣು' ಎಂದ ಬೌದ್ಧಮತ ಧರ್ಮಪಾದದ, ಪಾದರಸವೂ ಇಲ್ಲಿಯ ಜನರ ಉಸಿರನಲ್ಲಿದೆ. ಪ್ರೀತಿ ಮತ್ತು ದಯೆಗಳ ಬಗ್ಗೆ ಮಾತಾಡಿದ ಪ್ರವಾದಿಯ ತತ್ವಗಳಡಿ ಇದೇ ನೆಲ ಖಾಜಾಬಂದೇನವಾಜರ ಮತ್ತು ಶರಣಬಸವರ ಐಕ್ಯತೆಯ ಮಂತ್ರವೂ ಪಠಿಸಿದೆ.

ಕರ್ನಾಟಕದ ಸಂದರ್ಭವನ್ನೇ ಪಡೆದರು ಕಲ್ಯಾಣ ಕರ್ನಾಟಕ, ಉತ್ತರಕ್ಕಿಂತ ಬಹುತ್ವಕ್ಕೆ–ಬಹುವಿಚಾರಗಳಿಗೆ ಪೋಸಿಸಿ ನೀರೆರೆದ ಭೂಮಿ. ಇಲ್ಲಿ ಬುದ್ದನು ಇದ್ದಾನೆ; ಬಸವನೂ ಇದ್ದಾನೆ. ಬಂದೇನವಾಜನು ಇದ್ದಾನೆ; ಶರಣಬಸವನೂ ಇದ್ದಾನೆ. ಖಾದ್ರಿಯ ಜೊತೆಗೆ ನಾಗಲಿಂಗನೂ ಪೂಜೆಗೊಳ್ಳುತ್ತಾನೆ. ಹೀಗೆ ಪೂಜೆಗೊಳ್ಳುವ ಮತ್ತು ಪೂಜಿಸುವವರಲ್ಲಿನ ಭೇದ ಎಣಿಸಲಾಗದು. ಇಲ್ಲಿ ಯಾರನ್ನೂ ಹೊರಗಿಟ್ಟು ಇನ್ನೊಬ್ಬರನ್ನು ಕಟ್ಟಿಕೊಳ್ಳಲು ಸಾಧ್ಯವಿಲ್ಲ. ಅವರೆಲ್ಲರೂ ಎಂದೂ ಬೇರ್ಪಡದ ಭಾವವಾಗಿ ಇಲ್ಲಿಯ ಜನರ ಬದುಕಿನಲ್ಲಿ ಹಾಸುಹೊಕ್ಕಾಗಿದ್ದಾರೆ. ಇದು ಈ ಮಣ್ಣಿನ ಗುಣ. ಅದನ್ನೇ ಈ ವಿಚಾರ ಸಂಕಿರಣದ ಮೂಲಕ ಮರುಹುಡುಕುವ ಅಥವಾ ಮರುಚರ್ಚಿಸುವ ಪ್ರಯತ್ನ ಮಾಡಲಾಯಿತು. ಆ ಪ್ರಯತ್ನದಲ್ಲಿ ಕಂಡುಂಡ ಫಲವನ್ನು **'ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆ'** ಎಂಬ ಈ ಪುಸ್ತಕ ರೂಪದಲ್ಲಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ಇಂತಹ ಮಹತ್ವದ ವಿಚಾರ ಸಂಕಿರಣಕ್ಕೆ ಸಕಾಲದಲ್ಲಿ ಸ್ಪಂದಿಸಿ ಹಣ ಬಿಡುಗಡೆ ಮಾಡಿದ ಮೈಸೂರಿನ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆಯುಕ್ತರಿಗೂ, ಪರಂಪರೆ ವಿಭಾಗದ ಶ್ರೀಮತಿ ನಿರ್ಮಲಾ ಮಠಪತಿ ಮೇಡಂ ಅವರಿಗೂ, ಕಲ್ಬುರ್ಗಿಯ ಉಪನಿರ್ದೇಶಕರಾದ ಶ್ರೀ ರಾಜಾರಾಂ ಬಿ.ಸಿ. ಸರ್ ಅವರಿಗೂ ನಮ್ಮ ಹೃತ್ಪೂರ್ವಕ ನಮನಗಳು. ವಿಚಾರ ಸಂಕಿರಣಕ್ಕೆ ಅಗತ್ಯವಾದ ಸಹಕಾರ–ಸಲಹೆಗಳನ್ನು ನೀಡಿದ ಕಾಲೇಜು ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾದ ಮಾನ್ಯ ಶ್ರೀ ದತ್ತಾತ್ರೆಯ ಪಾಟೀಲ ರೇವೂರು ಸರ್ ಅವರಿಗೂ ಹಾಗೂ ಕಾಲೇಜು ಶಿಕ್ಷಣ ಇಲಾಖೆಯ ಜಂಟಿನಿರ್ದೇಶಕರಾದ ಶ್ರೀ ಸಿ.ಎಸ್.ಸಾಲಿಮಠ ಅವರಿಗೂ, ಕಾಲೇಜಿನ ಪ್ರಾಂಶುಪಾಲರಾದ ಡಾ.ಶಂಕ್ರೆಪ್ಪ ಎಸ್.ಹತ್ತಿ ಅವರಿಗೂ ನಮ್ಮ ನಮನಗಳನ್ನು ಸಲ್ಲುತ್ತವೆ. ನಮ್ಮ ಕರೆಗೆ ಸ್ಪಂದಿಸಿ ಬಂದು ತಮ್ಮ ವಿಚಾರಗಳನ್ನು ಹಂಚಿಕೊಂಡ ಎಲ್ಲ ಸಂಪನ್ಮೂಲ ವ್ಯಕ್ತಿಗಳಿಗೂ, ಪುಸ್ತಕಕ್ಕೆ ಸಕಾಲದಲ್ಲಿ ಲೇಖನಗಳನ್ನು ಕಳುಹಿಸಿದ ಮಹನಿಯರಿಗೂ, ಸಹಕರಿಸಿದ ಕಾಲೇಜಿನ ಎಲ್ಲ ಪ್ರಾಧ್ಯಾಪಕರಿಗೂ ಹಾಗೂ ಇತರೆ ಸಿಬ್ಬಂದಿಗಳಿಗೂ, ವಿಶೇಷವಾಗಿ ಎನ್.ಸಿ.ಸಿ ಕ್ರೆಡಿಟ್‌ನ ವಿದ್ಯಾರ್ಥಿಗಳಿಗೂ ನಾವು ಅಭಾರಿಯಾಗಿದ್ದೇವೆ. ನಮ್ಮ ಈ ಕಾರ್ಯಯೋಜನೆಯಲ್ಲಿ ಅವರ ಸೇವೆ ಅನುಪಮ.

ಇಂತಹ ಮಹತ್ವದ ವಿಚಾರಗಳ ಪುಸ್ತಕವನ್ನು ಪ್ರಕಟಿಸಿರುವ ಕಲ್ಬುರ್ಗಿಯ ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನದ ಶ್ರೀ ಬಸವರಾಜ ಕೊನೆಕ ಅವರಿಗೂ ನಾವು ಅಭಾರಿಯಾಗಿದ್ದೇವೆ. ಪರೋಕ್ಷವಾಗಿ–ಅಪರೋಕ್ಷವಾಗಿ ಈ ವಿಚಾರ ಸಂಕಿರಣಕ್ಕೆ ಸಹಕರಿಸಿದ ಎಲ್ಲರಿಗೂ ಮತ್ತೊಮ್ಮೆ ಮನಃಪೂರ್ವಕವಾಗಿ ನಮಿಸುವೆವು. ತಮ್ಮ ಪ್ರೀತಿಯ ಬೆಂಬಲ ನಮಗೆ ಸದಾ ಹೀಗೆ ಇರಲಿ ಎಂದು ಅಶಿಸುವೆವು.

**೦೪/೦೨/೨೦೨೨.** **ಸಂಪಾದಕರು.**



**ಪರಿವಿಡಿ.**

- ಹೃಷಿಕೇಶ ಬಹದ್ದೂರ ದೇಸಾಯಿ.
  **ಆಶಯ ನುಡಿಗಳು: ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆ ವಿಚಾರ ಸಂಕಿರಣ । 1**

- ಡಾ. ಶಿವಗಂಗಾ ರುಮ್ಮಾ.
  **ಕಲ್ಯಾಣ ಕರ್ನಾಟಕದ ಶಾಕ್ತ ಪರಂಪರೆ ।**

- ಡಾ. ಚಂದ್ರಶೇಖರ ಬಿರಾದಾರ.
  **ದರ್ಶನ–ಪಂಥ–ಧರ್ಮಗಳು : ಕಲ್ಯಾಣ ಕರ್ನಾಟಕವನ್ನು ಅನುಲಕ್ಷಿಸಿ ।**

- ರಂಜಾನ್ ದರ್ಗಾ.
  **ಶರಣರ ಕಾಯಕ ಪ್ರಸಾದ ದಾಸೋಹ ।**

- ರಂಜಾನ್ ದರ್ಗಾ.
  **ಅರಿದಡೆ ಶರಣ, ಮರೆದಡೆ ಮಾನವ ।**

- ಡಾ. ಮೀನಾಕ್ಷಿ ಬಾಳಿ.
  **ಬೌದ್ಧತತ್ವ ಸ್ಪರ್ಶದಲ್ಲಿ ತತ್ವಪದಗಳು ।**

- ಡಾ. ಇಂದುಮತಿ ಪಿ.ಪಾಟೀಲ.
  **ಸಮಾಜೋನ್ಮುಖಿ ಡಾ.ಚನ್ನಬಸವ ಪಟ್ಟದ್ದೇವರು ।**

- ಡಾ. ರಘುಶಂಖ ಭಾತಂಬ್ರಾ.
  **ಬೀದರ : ಶೈಕ್ಷಣಿಕ ಕೇಂದ್ರಗಳಾಗಿ ಖಾನ್‌ಕಾ ।**

- ಡಾ. ವೀರಶೆಟ್ಟಿ.
  **ಶರಣರ ಅಜ್ಞಾತ ಸ್ಮಾರಕಗಳು : ಬೀದರ ಜಿಲ್ಲೆ ।**

- ರಂಗನಗೌಡ ಹೆಚ್. ಪಾಟೀಲ .
  **ಬೇಡರ ನಡತೆ ಮತ್ತು ಸಂಪ್ರದಾಯ ।**

- ಡಾ. ರೆಹಮಾನ್ ಪಟೇಲ್.
  **ಬಿದ್ರಿ ಕಲೆ – ಬಹಮನಿ ಸುಲ್ತಾನರ ಕೊಡುಗೆ ।**

- ಭರತ್ ಎ ಸಿ.

**ಕಲ್ಯಾಣ ಕರ್ನಾಟಕದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳಿಗೆ ತೆರಿಗೆ ದಾನಗಳು ಒಂದು ಅವಲೋಕನ ।**

- ರಾಘವೇಂದ್ರ ಎಸ್.
  **ಜಂಗಮಕ್ಷೇತ್ರ ಲಿಂಗನಾಯಕನ ಹಳ್ಳಿಯ ವಿರಕ್ತ ಮಠದ ಪರಂಪರೆ ।**

- ಶ್ರೀಶೈಲ ನರಸಪ್ಪ.
  **ಮೈಲಾರಲಿಂಗ ಪರಂಪರೆ ಜಾನಪದೀಯ ಹಿನ್ನೆಲೆ ।**

- ಡಾ. ಅಂಬಿಕಾ ಚಂದನಕೇರಿ.
  **ಧಾರ್ಮಿಕ ಕೇಂದ್ರ – ಬೀದರ್ ಜಿಲ್ಲೆಯ ನೆಲದಲ್ಲಿ ಜೈನಧರ್ಮ : ಶಾಸನಾತ್ಮಕ ಪಕ್ಷಿನೋಟ ।**

- ಡಾ. ಆನಂದ ಮಾಣಿಕರಾವ.
  **ಕಲ್ಯಾಣ ಕ್ರಾಂತಿಯ ಫಲಿತಗಳು – ಒಂದು ಅವಲೋಕನ ।**

- ಡಾ. ವಿಶ್ವನಾಥರೆಡ್ಡಿ ಹೆಚ್. ಪಾಟೀಲ.
  **ಕಲ್ಯಾಣ ಕರ್ನಾಟಕದಲ್ಲಿ ಬೌದ್ಧಧರ್ಮದ ನೆಲೆಗಳು ।**

- ಶಾಂತಾ ಲಕ್ಷ್ಮಣ ಬಿ.
  **ತತ್ವಪದ ಸಾಹಿತ್ಯಕ್ಕೆ ರಾಯಚೂರು ಜಿಲ್ಲೆಯ ಕೊಡುಗೆ ।**

- ಡಾ. ಬಸವರಾಜ.
  **ಗುಲಬರ್ಗಾ ಜಿಲ್ಲೆಯ ಸಂಪ್ರದಾಯಗಳು ।**

- ಡಾ.ಮಂಜುನಾಥ ಎಸ್.ಪಾಟೀಲ.
  **ಯೂಸೂಫ್ ಆದಿಲ್‌ಖಾನ್ ಮತ್ತು ಬಹಮನಿ ಸಾಮ್ರಾಜ್ಯ ।**

- ಶ್ರೀಮತಿ ಅನ್ನಪೂರ್ಣ ವಿ. ಪಾಟೀಲ.
  **ರಾಷ್ಟ್ರೀಯ ಭಾವೈಕ್ಯತೆ ಮೂಡಿಸಿದ ಕಲ್ಯಾಣ ಕರ್ನಾಟಕದ ಶ್ರೀ ಶರಣಬಸವೇಶ್ವರರು ।**

- ಡಾ. ನಿವೇದಿತಾ ಸ್ವಾಮಿ.
  **ಶಾಸನಗಳಲ್ಲಿ ರಾಣಿಯರ ಉಲ್ಲೇಖ ।**

- ಶ್ರೀಮತಿ ಸುಜಾತ.
  **ಬೌದ್ಧ ಧಮ್ಮ ಮತ್ತು ಛಲವಾದಿ ಸಮುದಾಯ ।**

- ಶ್ರೀಮತಿ ಬಸವರಾಜೇಶ್ವರಿ ಸಿದ್ರಾಮಪ್ಪ.

**ಭಾರತದ ರಾಜಕೀಯ ಚಿಂತನೆಯಲ್ಲಿ ಧರ್ಮದ ಕುರಿತಾದ ಸಕರಾತ್ಮಕ ದೃಷ್ಟಿಕೋನ : ಒಂದು ವಿಶ್ಲೇಷಣಾತ್ಮಕ ಅಧ್ಯಯನ ।**

- ಡಾ. ನರಸಿಂಹ.
  **ಕಲ್ಯಾಣ ಕರ್ನಾಟಕದ ಬೀದರ್ ಸಹಕಾರ ಕನ್ನಡ ಕೃಷಿ ಪತ್ರಿಕೆ ।**

- ರೇಖಾ ಧೂಳಪ್ಪಾ,
  **ಜನಪದ ಮತ್ತು ತತ್ವಪದಕಾರರು ।**

- ವಿನುತ ಎಂ.ಕೆ.
  **ಸಾಹಿತ್ಯದ ಬೆಳವಣಿಗೆಗೆ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳ ಕೊಡುಗೆ : ಕಲ್ಯಾಣ ಕರ್ನಾಟಕಕ್ಕೆ ಸಂಬಂಧಿಸಿದಂತೆ ।**

- ಶೋಭಾ ಬಿ.ಎಸ್.
  **ಕಲೆ ಮತ್ತು ವಾಸ್ತುಶಿಲ್ಪಕ್ಕೆ ವಿಜಯನಗರ ಹಾಗೂ ಬಹಮನಿ ಸಾಮ್ರಾಜ್ಯಗಳ ಕೊಡುಗೆಯ ಒಂದು ಐತಿಹಾಸಿಕ ಅಧ್ಯಯನ : ಕಲ್ಯಾಣ ಕರ್ನಾಟಕಕ್ಕೆ ಸಂಬಂಧಿಸಿದಂತೆ ।**

- ರಾಜಶೇಖರ ಬಿರಾದಾರ ಬೋನ್ಹಾಳ.
  **ಕೊಡೇಕಲ್ಲ ಬಸವಣ್ಣನವರ ತತ್ವಪದಗಳಲ್ಲಿ ಸಾಮಾಜಿಕ ಪ್ರಜ್ಞೆ।**

- ಮಂಜುನಾಥ ಆಚಾರಿ.
  **ಬಸವ ಚಿಂತನೆಯ ಸಾಮಾಜಿಕ ಸಮಾನತೆಯ ವಿವಿಧ ಆಯಾಮಗಳು : ಕಲ್ಯಾಣ ಕರ್ನಾಟಕಕ್ಕೆ ಸಂಬಂಧಿಸಿದಂತೆ ।**

- ಡಾ. ಮಂಜುಳಾ ಹುಲ್ಲಹಳ್ಳಿ.
  **ವಚನ ಕಲ್ಯಾಣ ।**

- ರಾಜಶೇಖರ ಶರಣಪ್ಪ ಸಜ್ಜನ.
  **ಬಸವತತ್ವ ಪ್ರಚಾರಕ್ಕೆ ಶ್ರೀ ಶಿವಾನಂದ ಶಿವಯೋಗಿಗಳ ಬಸವಜ್ಯೋತಿ ಸದ್ಭಾವನ ಪಾದಯಾತ್ರೆ ।**

- ಡಾ. ಸವಿತಾ ಎಸ್. ಹೊಸಮನಿ.
  **ಕಲ್ಯಾಣ ಕರ್ನಾಟಕದ ಪ್ರಮುಖ ಹಬ್ಬಹರಿದಿನಗಳ ಹಿನ್ನೆಲೆ ಮತ್ತು ಪರಂಪರೆ ।**

- ಡಾ. ಭಾಗೀರತಿ ಬಿ.ಕೆ.
  **ವೀರಶೈವ ತತ್ವಾನುಸಂಧಾನಿ ಕಲ್ಯಾಣ ಕರ್ನಾಟಕದ ಶ್ರೀ ಶರಣಬಸವೇಶ್ವರರು ।**

- ಹಣಮಂತರಾಯ ಜಿ.ಗುಡ್ಡೇವಾಡಿ.

**ಕಲ್ಯಾಣ ಕರ್ನಾಟಕದ ಕಲಬುರಗಿ ಶ್ರೀ ಶರಣಬಸವೇಶ್ವರರು ನೀಡಿದ ವಿಶ್ವ ಸಂದೇಶ ।**

- ಜಿ. ವಿ. ಶಶಿಕಲಾ.
  **ಗವಿಸಿದ್ಧಯ್ಯಪ್ಪನ ಜಾತ್ರೆ ।**
- ನಾಗರಾಜ ಆರ್. ಸಾಲೋಳ್ಳಿ.
  **ಕಲ್ಯಾಣ ಕರ್ನಾಟಕದ ಮೇಲೆ ಯೋಗದ ಪ್ರಭಾವ ಮತ್ತು ಆಚರಣೆ ।**

- ಡಾ. ಚನ್ನಮ್ಮ ಎಸ್. ಬಿರಾದಾರ.
  **ದಕ್ಷಿಣ ಕಾಶಿ ಮೈಲಾರಲಿಂಗೇಶ್ವರ ।**

- ಡಾ. ಕಾಶಿನಾಥ ಡಿ.
  **ಕಲ್ಯಾಣ ಕರ್ನಾಟಕದ ಪ್ರಮುಖ ಜಾತ್ರೆಗಳ ಚರಿತ್ರೆ ಮತ್ತು ಪರಂಪರೆ ।**

- ಡಾ. ಕಾಶಿನಾಥ ಡಿ.
  **ಕಲ್ಯಾಣ ಕರ್ನಾಟಕದ ಚಿತ್ರ ಕಲಾವಿದರ ಪರಂಪರೆ : ವಿಠ್ಠಲ ಬಂಕೂರಕರ್ ।**

- ಡಾ. ಬಿ.ಆರ್. ಅಣ್ಣಾಸಾಗರ.
  **ಶರಣರ ಆರ್ಥಿಕ ವಿಚಾರಗಳು ।**

- ಡಾ. ಶಾಮಲಾ ಧುರೇಂದ್ರ.
  **ಗುಲಬರ್ಗಾ ಜಿಲ್ಲೆಯ ಉತ್ತರ ಭಾಗದ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿ (ಶಾಸನಗಳನ್ನು ಮತ್ತು ದೇವಾಲಯಗಳನ್ನು ಅನುಲಕ್ಷಿಸಿ) ।**

- ಡಾ. ಸಿದ್ದಣ್ಣ ಸುಭಾಸಚಂದ್ರ.
  **ಸುರಪುರ ಸಂಸ್ಥಾನದ ಸೈನ್ಯ ಮತ್ತು ನ್ಯಾಯಾಡಳಿತ ।**

- ಅಲ್ಲಾಭಕ್ಷ್ ಎಲ್. ಪಟೇಲ್.
  **ಬಹಮನಿ ಸುಲ್ತಾನರ ಕೊಡುಗೆಗಳು – ಒಂದು ಅವಲೋಕನ ।**

- ಶ್ರೀಮತಿ ಸುಧಾ ಲಕ್ಷ್ಮಣದಾಸ್.
  **ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆಗಳಲ್ಲಿ ವಾರಕರಿ ಸಂಪ್ರದಾಯ ಮತ್ತು ಆಚರಣೆ ಒಂದು ಅವಲೋಕನ ।**

- ಡಾ. ಶಿವಲೀಲಾ ವೀರಯ್ಯ.
  **ಕಲ್ಯಾಣ ಕರ್ನಾಟಕದ ಜಾತ್ರ್ಯೋತ್ಸವ ಹಾಗೂ ಪ್ರದರ್ಶನ ಕಲೆಗಳು ।**

- ಡಾ. ಗುರುಪ್ರಕಾಶ ಹೂಗಾರ.
  **ಸಗರನಾಡಿನ ಶ್ರೇಷ್ಠ ಸಂತ ತಿಂತಣಿ ಮೌನೇಶ್ವರರ ವಚನಗಳಲ್ಲಿ ಮಾನವೀಯ ಮೌಲ್ಯಗಳು ।**

- ಶ್ಯಾಮಲಾ ಎಸ್ ಸ್ವಾಮಿ.
  **ನಮ್ಮ ಊರಿನ ಸೂಫಿ ಸಂತ ಹಜ್ರತ್ ಖ್ವಾಜಾ ಬಂದೇನವಾಜ್ ।**

- ಕಲ್ಯಾಣಪ್ಪಾ ಎಂ. ನಾವದಗಿ.
  **ಬಿದ್ರಿ ಕಲೆಯ ಚಾರಿತ್ರಿಕ ಹಿನ್ನೋಟ ।**

- ಡಾ. ಸತ್ಯವತಿ ಎನ್.
  **ಮೊಹರಂ ಆಚರಣೆ : ತತ್ವಪದಕಾರರು ಹಾಗೂ ಪರಂಪರೆ ।**

- ಸಂತೋಷಿ ಸಿ. ಹೆಚ್.
  **ಕಲ್ಯಾಣ ಕರ್ನಾಟಕದಲ್ಲಿ ಸೂಫಿ ಪಂಥ ।**

- ಶಿವಶರಣಪ್ಪಾ.
  **ಜಾತ್ರೆಗಳಲ್ಲಿ ಆರ್ಥಿಕ ಪರಂಪರೆ ।**

- ಶ್ರೀಮತಿ ಭಾಗ್ಯವತಿ.
  **ಧರಿನಾಡು ಬೀದರ ಜಿಲ್ಲೆ ।**

- ಡಾ. ಚಿದಾನಂದ ಚಿಕ್ಕಮಠ.
  **ಕಿನ್ನರಿ ಬ್ರಹ್ಮಯ್ಯ ಸ್ಥಾವರ ದೈವದ ಆರಾಧಕನಾಗಿದ್ದನೆ? ।**

- ಡಾ. ಸಂತೋಷ ಜಗನ್ನಾಥ.
  **ಕಲ್ಯಾಣ ಕರ್ನಾಟಕದಲ್ಲಿ ಕನ್ನಡ ಸಾಹಿತ್ಯಕ್ಕೆ ಸೂಫಿಗಳ ಕೊಡುಗೆ ।**

- ಲಕ್ಷ್ಮೀಬಾಯಿ ಮಲ್ಲಿನಾಥ ಕುಂಬಾರ.
  **ಸಂಶೋಧನೆಯ ತಾತ್ವಿಕತೆ ।**

- ಜಯಲಕ್ಷ್ಮಿ ಎಸ್. ಹಾವಪ್ಪಗೋಳ.
  **ವಿಶ್ವ ಯೋಗ ದಿನ : ಮಹತ್ವ ಮತ್ತು ಇತಿಹಾಸ, ಯೋಗದ ಲಾಭಗಳು ।**

- Abdul Aziz U. Rajput.
  **Makhdum Shamshuddin Abul Fatah Muhammad Multani Padshah : A Renowned Sufi Of Muhammadabad Bidar |**

- DR. Jagadevappa T. Dharani.
  **A View On Political History Of Gulbarga District |**

- Meenakshi C.
  **Dargas Of Kalyan Karnataka |**

- DR. Lingabasava Patil.
  **The Role Of Poojya Doddappa Appa In Freedom Movement |**

- DR. Renuka S. Gubbewad.
  **The Economic Thoughts As Emerging From vachana Philosophy |**

- DR. Ramesh.
  **An Overview Of Sufism In Karnataka |**

- DR. Jyothi Keerangi.
  **Women's Empowerment In Digital Age |**

- DR. Shantala A.C.
  **Status Of women In Pre-independence india |**

- DR. Devidas Rathod.
  **CAA And Indian Democracy |**

- DR. Mallikarjun Shetty.
  **Epigrammatic on Buddhist Centres in Hyderabad Karnataka |**

- DR. Siddaram B. Itagi.
  **Gulbarga District : Folk Medicinal Plants |**

- DR. T.V. Adivesha.
  **Saivism as Picturised in the Monuments of Pallavas |**

- Balraj Machnoor.
  **EDUCATIONAL CONDITIONS OF WOMEN DURING MEDIEVAL KARNATAKA |**

- ಶ್ರೀ ಬಿ.ಪೀರ್ ಬಾಷ.
  **ಸಮಾರೋಪ ಭಾಷಣ : ಕಲ್ಯಾಣ ಕರ್ನಾಟಕ ಸಾಂಸ್ಕೃತಿಕ ಸಾವಯವದ ಆಗರ ।**



## ಆಶಯ ನುಡಿಗಳು : 'ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆ' ವಿಚಾರ ಸಂಕಿರಣ.

**–ಶ್ರೀ ಹೃಷಿಕೇಶ ಬಹದ್ದೂರ ದೇಸಾಯಿ,**
ಪತ್ರಕರ್ತರು, ವಿಶೇಷ ವರದಿಗಾರರು,
'ದ ಹಿಂದೂ' ಬೆಳಗಾವಿ.

**ಎಲ್ಲರಿಗೂ ನಮಸ್ಕಾರ.,**

ಭಾಷಣ ಎಂದರೆ ಏನು ಅಂದರೆ ಒಂದು ಒಳ್ಳೆಯ ಸಂಗೀತ ಕಾರ್ಯಕ್ರಮವನ್ನು ಭಂಗಗೊಳಿಸುವುದು ಅಂತ ಅರ್ಥ. ನಾವು ಬರುವಾಗ ಇಲ್ಲಿ ನಮ್ಮ ಸ್ನೇಹಿತರು ಕನಕದಾಸರ ಹಾಡು ಹೇಳುತ್ತಿದ್ದರು. ಅದೇ ಮುಂದುವರೆಯುತ್ತಾ ಇದ್ದರೆ ಚೆನ್ನಾಗಿತ್ತು. ನಮ್ಮ ಭಾಷಣಗಳಿಂದ ನೀವು ಬಚಾವು ಆಗುತ್ತಿದ್ದೀರಿ. ನಮ್ಮ ತಾಯಿಯ ಊರು ಬಾಡ, ಕನಕದಾಸರ ಊರು. ನಮ್ಮ ಊರಿನಲ್ಲಿ ಸಂಗೀತ ಹೇಳಿ ಕೊಡುವವರು ಎಲ್ಲರೂ ಕನಕದಾಸರ ಹಾಡು ಹೇಳಿ ಕೊಡುತ್ತಿದ್ದರು. ನಾವು ಸಣ್ಣವರಿದ್ದಾಗ ನಮಗೆ ಹೇಳಿಕೊಟ್ಟಿದ್ದ ಹಾಡು ಒಂದನ್ನು ನಾವು ಹೇಳುತ್ತಿದ್ದೆವು. ಅದರಲ್ಲಿ ಒಂದು ಸಾಲು ಹೀಗಿತ್ತು. ಅದು 'ಅಸಮ ಭಾವ ಆದಿಕೇಶವ ರಾಯ'. ಆದರೆ ನಾವು ಅದನ್ನು 'ಅಸಂಭವ ಆದಿಕೇಶವ ರಾಯ' ಅಂತ ಹೇಳುತ್ತಿದ್ದೆವು. ಅನೇಕ ವರ್ಷಗಳ ನಂತರ ನನಗೆ ಅದರ ನಿಜವಾದ ಅರ್ಥ ಆಯಿತು. ಅದನ್ನು ನನಗೆ ಹೇಳಿಕೊಟ್ಟವರು ಮಲಯಾಳಿ ಸಾಧಕರು ಹಾಗೂ ಅನುವಾದಕರು ಆಗಿರುವ ವಿನಯ ಚೈತನ್ಯ ಅವರು. ಅವರು ಅಕ್ಕಮಹಾದೇವಿ ವಚನಗಳನ್ನು ಇಂಗ್ಲೀಷ್‌ಗೆ ಅನುವಾದ ಮಾಡಿದ್ದರು. ಅವರು ಹೇಳಿದರು "ಭವ ಅಂದರೆ ಬೀಯಿಂಗ್. ಅದಕ್ಕೆ ಅಸಮಭವ ಎಂದರೆ ನಿನಗೆ ಸಮನಾಗಿರುವವರು ಇನ್ನು ಮುಂದೆ ಹುಟ್ಟಲಾರರು," ಅಂತ. ನನಗೆ ನನ್ನ ತಪ್ಪಿನ ಅರಿವು ಆಯಿತು. ಅಲ್ಲದೆ, ನಾವು ಅನಿರೀಕ್ಷಿತ ಮೂಲಗಳಿಂದ ಬದುಕಿನ ಪಾಠಗಳನ್ನು ಕಲಿಯಬಹುದು ಅನ್ನುವುದು ಸಾಬೀತು ಆಯಿತು.

**ನಾನು – ನನ್ನ ಊರು.**

ಹೋದಲ್ಲಿ ಬಂದಲ್ಲಿ, ನಾನು ಬೀದರ್–ಗುಲ್ಬರ್ಗ ಕತೆಗಳನ್ನು ಹೇಳುವುದರಿಂದಲೋ ಏನೋ ಅನೇಕರು ನನ್ನನ್ನು ಒಂದು ಪ್ರಶ್ನೆ ಕೇಳುತ್ತಾರೆ. ನೀವು ಬೀದರ್‌ನವರೆ? ಗುಲ್ಬರ್ಗದವರೆ? ಒಟ್ಟಿನಲ್ಲಿ ನೀವು ಹೈದರಾಬಾದ್ ಕರ್ನಾಟಕದವರು, ಅದೇ ಆ ೩೭೧ದವರು ಅಲ್ಲವೇ? ಅಂತ. ಉತ್ತರವಾಗಿ ನಾನು ನಕ್ಕು ಬಿಡುತ್ತೇನೆ. "ಅಯ್ಯೋ ನಾನು ಅಷ್ಟು ಒಳ್ಳೆಯವನಲ್ಲ ಬಿಡಿ," ಅಂತ ಹೇಳುತ್ತೇನೆ. ಅವರು ಆಶ್ಚರ್ಯ ಸೂಚಿಸುವ ಮೊದಲೇ, "ನಾನು ಅಲ್ಲಿ ಬಹಳ ವರ್ಷ ಕೆಲಸ ಮಾಡಿದೆ. ಅಲ್ಲಿಯ ಜನ ನನ್ನನ್ನು ತುಂಬ ಹಚ್ಚಿಕೊಂಡು ಬಿಟ್ಟಿದ್ದಾರೆ," ಅಂತ ಸಮಜಾಯಿಷಿ ಕೊಡುತ್ತೇನೆ. ಪ್ರತಿ ಬಾರಿಯೂ ಈ ಪ್ರಶ್ನೆ ಎದುರಾದಾಗ ನನಗೆ ತುಂಬ ಖುಷಿಯಾಗುತ್ತದೆ. "ಅವರ ಬಾಯ ಹರಕೆಯಂತೆ ಆಗಬಾರದಿತ್ತೆ," ಅಂತ ಅನ್ನಿಸುತ್ತದೆ. ಆದರೆ ಇಲ್ಲಿನ ಜನರ ಹೃದಯ ವೈಶಾಲ್ಯದ ಬಗ್ಗೆ ಹೊರಗಿನವರಿಗೆ ಮನವರಿಕೆ ಮಾಡಿ ಕೊಡಲು ನನಗೆ ಇನ್ನು ಸಾಧ್ಯ ಆಗಿಲ್ಲವಲ್ಲ ಅಂತ ಕೊಂಚ ಬೇಸರವೂ ಮೂಡುತ್ತದೆ. ಆದರೆ ಇಲ್ಲಿ ಇಂತಹ ಕಾರ್ಯಕ್ರಮ ನಡೆದಾಗಲೆಲ್ಲಾ, ಇಲ್ಲಿಗೆ ಆಹ್ವಾನ ಬಂದಾಗಲೆಲ್ಲಾ, ನಿಮ್ಮ ಸ್ಮೃತಿಪಟಲದಿಂದ ನಾವು ಇನ್ನೂ ಅಳಿಸಿ ಹೋಗಿಲ್ಲ ಎನ್ನುವುದನ್ನು ಅರಿತು ಸಮಾಧಾನವಾಗುತ್ತದೆ.

ಇನ್ನು, ಇಂದಿನ ಕಾರ್ಯಕ್ರಮದಲ್ಲಿ ಭಾಗವಹಿಸುವುದು ನನಗೆ ನಿಜವಾಗಿಯೂ ಸಂತೋಷದ ವಿಷಯ. ನಿಜ ಹೇಳಬೇಕೆಂದರೆ ನಾನು ಇಂತಹ ವಿಚಾರ ಸಂಕಿರಣಗಳಲ್ಲಿ ಮುಂದಿನ ಸಾಲಿನಲ್ಲಿ ಕುಳಿತುಕೊಂಡು ಕೇಳಲು ಬರಬೇಕೆ ಹೊರತು, ಮಾತನಾಡಲು ಅಲ್ಲ. ಇಷ್ಟೆಲ್ಲ ಓದಿಕೊಂಡವರ ನಡುವೆ, ಸಂಶೋಧನೆ ಮಾಡಿದ ನಿಮ್ಮಂಥವರ ಮಧ್ಯೆ ಮಾತನಾಡಲು, ಅದರಲ್ಲೂ ಆಶಯ ನುಡಿ ನುಡಿಯಲು ನನಗೆ ಯಾವ ಆಕೆಡೆಮಿಕ್ ಅರ್ಹತೆಯೂ ಇಲ್ಲ. ನನ್ನ ಕೆಲಸದ ಸ್ವರೂಪದಿಂದಾಗಿ ನಾನು ಅನೇಕ ಊರುಗಳಲ್ಲಿ ಓಡಾಡಿದ್ದೇನೆ, ವಿಶೇಷ ರೀತಿಯ ವ್ಯಕ್ತಿಗಳನ್ನು ಭೇಟಿಯಾಗಿದ್ದೇನೆ, ವಿವಿಧ ರೀತಿಯ

ಆಸಕ್ತಿಕರ ಘಟನೆಗಳನ್ನು ಹತ್ತಿರದಿಂದ ನೋಡಿದ್ದೇನೆ. ಇದು ನನಗೆ ಆನಂದದಾಯಕ, ಅವಿಸ್ಮರಣೀಯ, ಅಸಹಜ ಅನುಭವಗಳನ್ನು ನೀಡಿದೆ. ಇವುಗಳ ಹಿಂದೆ ಹೊಸ ವಿಷಯಗಳನ್ನು ಕಲಿತುಕೊಳ್ಳುವ ನನ್ನ ಕುತೂಹಲ ಕೆಲಸ ಮಾಡಿರಬಹುದು.

ಈ ರೀತಿಯ ಅಮೂಲ್ಯ ಅನುಭವಗಳಿಂದ ಕಲಿಯಬೇಕಷ್ಟು ಪಾಠ ಕಲಿಯಲು ನನಗೆ ಸಾಧ್ಯ ಅಗಿರಲಿಕ್ಕಿಲ್ಲ. ಹಳ್ಳಿಯ ಜಾತ್ರೆಯಲ್ಲಿ ಚಿಕ್ಕಮಕ್ಕಳು ಬಯಸ್ಕೋಪು ನೋಡಿ ಆನಂದ ಪಡುತ್ತಾರೆ ಅಷ್ಟೇ ಅಲ್ಲವೇ? ಅದರಿಂದ ಏನಾದರೂ ಪಾಠ ಕಲಿತಾರೆಯೇ? ನನ್ನ ಬದುಕು ಸಹ ಅಷ್ಟೇ ಅಂತ ನಾನು ಅಂದುಕೊಳ್ಳುತ್ತೇನೆ. ಬದುಕು ನನ್ನ ಎದುರು ತೆರೆದಿಟ್ಟ ಅನುಭವಗಳು–ಅನುಭೂತಿಯಾಗಿ ಬದಲಾಗಲು ನನಗೆ ಇನ್ನೂ ಸಮಯಬೇಕೆನೋ. ಆದರೆ ನಾನು ಜನ್ಮಜಾತ ಪತ್ರಕರ್ತನಾಗಿರುವುದರಿಂದ, ಕೇಳುಗರನ್ನು ಸುತ್ತ ಕೂಡಿಸಿಕೊಂಡು ಸುದ್ದಿ ಹೇಳುವುದು ನನಗೆ ರೂಢಿಗತ ಆಗಿರುವುದರಿಂದ, ನನಗೆ ಆಗಿರುವ ಅನುಭವಗಳನ್ನು, ನನ್ನ ಅಳವಿಗೆ ತಕ್ಕಷ್ಟು ನಿಮಗೆ ಹೇಳಲು ಇಲ್ಲಿಗೆ ಬಂದಿದ್ದೇನೆ ಅಂತ ಅಷ್ಟೇ ಹೇಳುತ್ತೇನೆ.

**ನೇತಿ – ನೇತಿ.**

ನನ್ನ ಇಷ್ಟದ ನೀತಿ ಕತೆಗಳಲ್ಲಿ ಒಂದು ಗೋವಿನ ಕತೆ. ಇದು ನಾವೆಲ್ಲರೂ ಚಿಕ್ಕಂದಿನಲ್ಲಿ ಕಲಿತ, ತನ್ನ ಸತ್ಯದ ಬಲದಿಂದ ಕ್ರೂರ ಹುಲಿಯ ಹೃದಯ ಪರಿವರ್ತನೆ ಮಾಡಿದ ಗೋವಿನ ಕತೆ ಅಲ್ಲ. ಇದು ಸದಾ ಸತ್ಯದ ಹುಡುಕಾಟದಲ್ಲಿ ಮುಳುಗಿ ಹೋಗಿರುವ ಗೋವಿನ ಕತೆ. ಇದು ರಾಮಕೃಷ್ಣ ಪರಮಹಂಸ ಅವರು ಹೇಳುತ್ತಿದ್ದ ನೀತಿ ಕತೆಗಳಲ್ಲಿ ಒಂದು. ಹಸುವೊಂದು ಹುಲ್ಲುಗಾವಲಿನಲ್ಲಿ ಅಲೆದಾಡುತ್ತಾ ಇದ್ದಾಗ ಅದಕ್ಕೆ ಒಂದು ಸಂದೇಹ ಬಂತು. ದೇವರು ಎಲ್ಲಿ ಇದ್ದಾನೆ? ನನಗೆ ದೇವರು ದೊರಕುವುದು ಹೇಗೆ? ನನ್ನ ದಿನನಿತ್ಯದ ಜೀವನದಲ್ಲಿ ನಾನು ನೋಡುವ, ಕೇಳುವ, ಗ್ರಹಿಸುವ ವಸ್ತುಗಳಲ್ಲಿ ದೇವರು ಇದ್ದಾನೆಯೇ? ಎಂದು ಅದಕ್ಕೆ ಅನ್ನಿಸತೊಡಗಿತು. ಅದು ಹೋಗಿ ಹುಲ್ಲು ತಿನ್ನಲು ಶುರು ಮಾಡಿತು. ಈ ಹುಲ್ಲೇ ದೇವರು ಇರಬಹುದೇ ಅಂತ ಅದರ ಮನಸ್ಸಿನಲ್ಲಿ ಪ್ರಶ್ನೆ ಮೂಡಿತು. ನೇತಿ–ನೇತಿ (ಇಲ್ಲ ಇದಲ್ಲ) ಎಂದು ಹೇಳಿ ಮುಂದೆ ಸಾಗಿತು. ಅಲ್ಲಿ ಬೆಳೆದ ದೊಡ್ಡ ಗಿಡದ ಎಲೆಗಳನ್ನು ಕಿತ್ತು ತಿಂದಿತು. ಈ ಎಲೆಗಳೇ ದೇವರು ಇರಬಹುದೇ? ನೇತಿ–ನೇತಿ ಇಲ್ಲ ಇಲ್ಲ, ಅಂತ ಅನ್ನಿಸಿ ಮುಂದೆ ಸಾಗಿತು. ನಂತರ ನೀರು ಕುಡಿಯಲು ಕೆರೆಯ ಕಡೆ ಹೋಯಿತು. ಈ ನೀರಿನಲ್ಲಿ ದೇವರು ಇದ್ದಾನೆಯೇ? ನೇತಿ–ನೇತಿ ಇಲ್ಲ ಇಲ್ಲ, ಇದಲ್ಲ ಅಂತ ಅಲೆದಾಡಿತು. ಮಧ್ಯಾಹ್ನದ ಬಿಸಿಲು ಜೋರಾಗಿತ್ತು. ಆ ಹಸು ಮರವೊಂದರ ಕೆಳಗೆ ನೆರಳಿನಲ್ಲಿ ನಿಂತು ಸುಧಾರಿಸಿಕೊಂಡಿತು. ಈ ಸುಡುವ ಬಿಸಿಲಿನಲ್ಲಿ ತಾಯಿಯ ಸೆರಗಿನಂತೆ ನನ್ನನ್ನು ಕಾಪಾಡಿದ ಈ ನೆರಳೇ ದೇವರು ಇರಬಹುದೇ? ಅಥವಾ ನಮಗೆ ಕಾಲಕಾಲಕ್ಕೆ ಶಿಕ್ಷೆ ನೀಡಿ ಬುದ್ಧಿ ಕಲಿಸುವ ಬಿಸಿಲೇ ದೇವರು ಇರಬಹುದೇ? ಈಗ ಬಿಸುತ್ತಿರುವ ತಂಗಾಳಿ ಇರಬಹುದೇ? ಆ ಆಕಾಶ ಇರಬಹುದೇ? ಈ ಭೂಮಿ ಇರಬಹುದೇ? ಇಲ್ಲ, ಇವು ಯಾವುವೂ ಅಲ್ಲ, ನೇತಿ–ನೇತಿ ಎಂದು ಹೇಳುತ್ತಾ ಅದು ಬೇರೆ ಕಡೆಗೆ ಹೊರಟು ಹೋಯಿತು. ಇದು ನೇತಿಯ ಗೋವಿನ ಕತೆ.

ಬ್ರಹದಾರಣ್ಯಕ ಉಪನಿಷತ್ತುನಲ್ಲಿ ಕಂಡ ಒಂದು ಸಾಲನ್ನು ಬಳಸಿ ಶಂಕರಾಚಾರ್ಯರು ನಿರ್ವಾಣ ಶತಕದಲ್ಲಿ ಒಂದು ಸೂತ್ರವನ್ನು ತಿಳಿಸಿದ್ದಾರೆ. ಇದನ್ನು ರಾಮಕೃಷ್ಣ ಪರಮಹಂಸರು ತಮ್ಮ ಮಕ್ಕಳ ಕತೆಗಳಲ್ಲಿ ಸೇರಿಸಿದ್ದರು. ಹಾಗಾದರೆ ದೇವರಿಗಾಗಿ ಮಾನವ ಮಾಡುವ ಈ ಹುಡುಕಾಟ ಶುರು ಆಗಿದ್ದು ಯಾವಾಗ? ಅದಕ್ಕೆ ಕೊನೆ ಇದೆಯೇ? ಈಗಲೂ ಅದು ನಡೆಯುತ್ತಿದೆಯೇ? ಇದ್ದರೆ ಅದು ಎಲ್ಲಿದೆ? ನನ್ನ ಪ್ರಕಾರ ಈ ಜಗತ್ತಿನಲ್ಲಿ ಮನುಷ್ಯ ಹುಟ್ಟಿಕೊಂಡ ಮೊದಲ ದಿನದಿಂದಲೇ ಅದು ಶುರು ಆಗಿದೆ. ಹುಲ್ಲುಗಾವಲಿನ ಗೋವು ದೇವರನ್ನು ಹುಡುಕುತ್ತಾ ಇದೆಯೋ ಇಲ್ಲವೋ. ಆದರೆ ಮನುಷ್ಯ ಮಾತ್ರ ಹುಡುಕುತ್ತಲೇ ಇದ್ದಾನೆ.

**ದೇವರು.**

ಹಾಗಾದರೆ ಈ ದೇವರು ಎಂದರೆ ಯಾರು? ಸಕಲ ಜೀವರಾಶಿಗಳಿಗೆ ದೊರಕಿದ ಆ ಬೃಹತ್ ಮೇಧಾ ಶಕ್ತಿಯ ಮೂಲದ ಸ್ವರೂಪ ಯಾವುದು ? ಅದು ಮೂರ್ತವೋ ಅಮೂರ್ತವೋ? 'ಅಖಂಡ ಮಂಡಲಾಕಾರಂ, ವ್ಯಾಪತಮ್ ಯೇನ ಚರಾಚರಂ' ಎಂದು ನಾವು ನೆನೆಸುವಾಗ, 'ಸಚ್ಚಿದಾನಂದ ರೂಪಾಯ, ಆನಂದಾಯ ನಮೋ ನಮಃ' ಎಂದು ಜಪಿಸುವಾಗ ನಮ್ಮ ಕಣ್ಣ ಮುಂದೆ ಬರುವುದು ಏನು? ಇಲ್ಲಿ ಬೇರೆಯವರು ತಿಳಿದುಕೊಂಡಿದ್ದನ್ನು ಹೇಳುವುದಕ್ಕೆ ಮೊದಲು ನನಗೆ ತೋಚಿದ್ದನ್ನು ಹೇಳುತ್ತೇನೆ.

ನನ್ನ ಪ್ರಕಾರ ನಿಸರ್ಗವೇ ಮನುಷ್ಯನಿಗೆ ಕಂಡ ಮೊದಲ ದೇವರು. ಶಿಲಾಯುಗದ ಮಾನವ ಅನುಭವಿಸಿದ ಚಂಡಮಾರುತ, ಭೀಕರ ಮಳೆ, ಪ್ರಚಂಡ ಪ್ರವಾಹ, ಗೊತ್ತಿಲ್ಲದೆ ಹತ್ತಿಕೊಳ್ಳುತ್ತಿದ್ದ ಕಾಡಿನ ಕಿಚ್ಚು, ವನ್ಯಮೃಗಗಳು, ರೋಗ, ಸಾವು, ಇತ್ಯಾದಿಗಳು ಅವನಲ್ಲಿ ಅತೀವ ಭಯ ಹುಟ್ಟಿಸಿದವು. ಗೊಂದಲಕ್ಕೆ ಉಂಟು ಮಾಡಿದವು. ತನ್ನ ಸುತ್ತಮುತ್ತಲೂ ಸುಂದರವಾಗಿಯೂ, ಘನಘೋರವಾಗಿಯೂ ಇರುವ ಪ್ರಕೃತಿ ತನ್ನ ಅಳವಿಗೆ ಮೀರಿದ್ದು ಎಂದು ಅವನಿಗೆ ಗಾಬರಿಯಾಯಿತು. ಅದರ ಬಗ್ಗೆ ಅವನಿಗೆ ಅನೇಕ ಪ್ರಶ್ನೆಗಳು ಇದ್ದವು, ಸುಲಭವಾಗಿ ಪರಿಹಾರವಾಗಲಾರದ ಸಂದೇಹಗಳು ಇದ್ದವು. ಈ ಸಂದೇಹ–ಪ್ರಶ್ನೆಗಳನ್ನು ಎಲ್ಲರ ಎದುರು, ಖುಲ್ಲಂ ಖುಲ್ಲಾ ಕೇಳಿಕೊಂಡ ವ್ಯಕ್ತಿ ಗುರು ಆಗಿಹೋದ. ಮಾನವನಿಗೆ ನಿಸರ್ಗದ ವಿಸ್ಮಯಗಳ ಬಗ್ಗೆ ಅನೇಕ ವರ್ಷಗಳಾದರೂ ಮಾಸಲಾರದ ಹೆದರಿಕೆ ಇತ್ತು. ಆ ಅನೂಹ್ಯ ಅಂಜಿಕೆಯೇ ದೈವೀರೂಪ ಪಡೆಯಿತು ಅಂತ ನನಗೆ ಅನ್ನಿಸುತ್ತದೆ. ತನ್ನ ವಾತಾವರಣದ ಬಗ್ಗೆ ಅವನಲ್ಲಿ ಹುಟ್ಟಿಕೊಂಡ ಆ ಅಂಜಿಕೆಯೇ ಆದರವಾಗಿ, ಆರಾಧನೆಯಾಗಿ ಮಾರ್ಪಾಡು ಆಯಿತು. ಯಾವುದು ತನಗೆ ತಿಳಿಯಲಿಲ್ಲವೋ, ತನ್ನ ಸುತ್ತಲಿನ ಬದಲಾವಣೆಗಳು ತನ್ನ ಅರಿವಿಗೆ ಮೀರಿದಂತೆ ಆದವೋ, ಯಾವುದು ತನ್ನ ಮಿದುಳಿನ ಅಂಕೆ ಮೀರಿ ಹೋಗಿ, ಅವನ್ನು ಅರ್ಥ ಮಾಡಿಕೊಳ್ಳಲು ಅವನು ತನ್ನ ಎದೆಯಾಳದ ನಂಬಿಕೆಗೆ ಮೊರೆ ಹೋದ. "ಆವುದನು ಕಾಣದೊಡಮಳ್ತಿಯಿಂ ನಂಬಿಹುದೊ। ಆ ವಿಚಿತ್ರಕೆ ನಮಿಸೊ – ಮಂಕುತಿಮ್ಮ" ಎಂಬ ಕವಿವಾಣಿಯಂತೆ ಕಾಣದ–ತಿಳಿಯದ–ಹುಲುಮಾನವರ ಲೆಕ್ಕಕ್ಕೆ ಸಿಗದೇಹೋದ ಶಕ್ತಿಗೆ ಆಗ ಶರಣಾದ.

ಈಗಲೂ ಇದು ಸ್ವಲ್ಪ ಹಾಗೆಯೇ ಇದೆ. ತುಂಬಾನೇ ಏನೂ ಬದಲಾಗಿಲ್ಲ. ನಾವು ನಿಯಮಿತವಾಗಿ ಮಾಡುವ ಪಂಚಭೂತಗಳ ಆರಾಧನೆಯಲ್ಲಿ ಇದನ್ನು ಕಾಣಬಹುದು. ವಿವಿಧ ಹಬ್ಬ ಹರಿದಿನಗಳಲ್ಲಿ, ಬಾವಿ ತೆಗೆಸುವಾಗ, ಮನೆ ಕಟ್ಟಿಸುವಾಗ, ಸುಗ್ಗಿಯ ಆಚರಣೆಯಲ್ಲಿ, ನಾವು ನಿಸರ್ಗವನ್ನು ಆರಾಧಿಸುತ್ತೇವೆ. ನಾನು ಇದನ್ನು ಋಣಾತ್ಮಕವಾಗಿ ನೋಡೋದಿಲ್ಲ. ಧನಾತ್ಮಕವಾಗಿಯೇ ನೋಡುತ್ತೇನೆ. ಇದು ನನ್ನ ಅಭಿಪ್ರಾಯ. 'ಲೋಕೋ ಭಿನ್ನ ರುಚಿಃ' ಅನ್ನುವಂತೆ ಇದಕ್ಕೂ ಭಿನ್ನವಾದ ಅಭಿಪ್ರಾಯ ನಿಮಗೆ ಇರಬಹುದು. ಈ ರೀತಿ ಇರುವುದು ಸಮಾಜದ ಆರೋಗ್ಯಕ್ಕೆ ಒಳ್ಳೆಯದು. 'ವಾದೇ ವಾದೇ ಜಾಯತೆ ತತ್ವ ಬೋಧಹ' ಎನ್ನುವ ನುಡಿಯಂತೆ ಅದು ನಮಗೆಲ್ಲರಿಗೂ ಕಲಿಕೆಯ ಅವಕಾಶ ಒದಗಿಸಿಕೊಡುತ್ತದೆ. ಈ ರೀತಿಯ ವಾತಾವರಣ ಸೃಜನಶೀಲತೆಗೆ ಫಲವತ್ತಾದ ನೆಲ, ನಾವೀನ್ಯತೆಯ ಸೆಲೆ. ಇದು ನನ್ನ ಇನ್ನೊಂದು ಅಭಿಪ್ರಾಯ. ಇದರ ಜೊತೆಗೂ ನಿಮಗೆ ಭಿನ್ನ ಅಭಿಪ್ರಾಯ ಇರಬಹುದು. ಅದಕ್ಕೂ ಸ್ವಾಗತ ಇದೆ.

**ಕರ್ನಾಟಕದ ಕಲ್ಯಾಣ ಭೂಮಿ.**

ಇವು ಇಡೀ ಜಗದ ಮಾತು. ಆದರೆ ನಮ್ಮ ಹೈದರಾಬಾದು ಕರ್ನಾಟಕ ಅಥವಾ ಕಲ್ಯಾಣ ಕರ್ನಾಟಕದ ವಿಶೇಷತೆ ಏನು? ನನ್ನ ಪ್ರಕಾರ ಭಾರತ ವಿವಿಧ ಧರ್ಮಗಳಿಗೆ ಜನ್ಮಕೊಟ್ಟ ನಾಡು. ಆದರೆ, ಹೈದರಾಬಾದ್ ಕರ್ನಾಟಕ ವಿವಿಧ ಅಧ್ಯಾತ್ಮ ಪರಂಪರೆಗಳ ನೆಲೆ. ನಾವು ಇವುಗಳನ್ನು ಹುಡುಕಲಿಕ್ಕೆ ಹೋಗಬೇಕಾಗಿಲ್ಲ. ಸುಮ್ಮನೇ ನಮ್ಮ ಸುತ್ತಮುತ್ತ ಕಣ್ಣು ಹಾಯಿಸಿದರೆ ನಮಗೆ ಅವು ಕಾಣದೇ ಇರಲು ಸಾಧ್ಯವೇ ಇಲ್ಲ. ಇವುಗಳಲ್ಲಿ ಕೆಲವನ್ನು ನೆನಪು ಮಾಡಿಕೊಳ್ಳೋಣ. ಕಲ್ಯಾಣ ಕರ್ನಾಟಕ ದಾಸ ಸಾಹಿತ್ಯದ, ವಚನ ಸಾಹಿತ್ಯದ, ತತ್ವಪದಕಾರರ, ಸೂಫಿ ಸಂತರ ನೆಲ. ಇಲ್ಲಿನ ಗಾಳಿಗೆ ಇವೆಲ್ಲರ ಗಂಧವೂ ಪೂಸಿದೆ.

ಅನೇಕ ಪ್ರಮಥರು ತಮ್ಮ ತಮ್ಮ ಪ್ರಯತ್ನದಿಂದಾಗಿ ಬೇರೆ ಬೇರೆ ಕಾಲಘಟ್ಟದಲ್ಲಿ ಕಂಡುಕೊಂಡ ಈ ಸತ್ಯದ ನೆಲೆಗಳು ಈಗಿನ ಕಾಲದಲ್ಲಿಯೂ ಸಹವಾಸಿಗಳಾಗಿ ಇಲ್ಲಿ ಏಕಕಾಲಕ್ಕೆ ಜೀವಂತ ಇರುವುದು ಇಲ್ಲಿನ ವೈಶಿಷ್ಟ್ಯ. 'ನಾನು ಹೇಳುವುದಷ್ಟೇ ಸತ್ಯ, ನೀನು ಹೇಳುವುದು ಎಲ್ಲಾ ಸುಳ್ಳು' ಎನ್ನುವ ಭಾವನೆ ಇಲ್ಲಿ ಇಲ್ಲ. 'ನನ್ನ ಧರ್ಮ ನನಗೆ, ನಿಮ್ಮ ಧರ್ಮ ನಿಮಗೆ. ಇಬ್ಬರ ಹಾದಿ ಬೇರೆ ಇದ್ದೀತು, ಆದರೆ ನಮ್ಮ ನಡೆ ಅಧ್ಯಾತ್ಮದ ಎಡೆಗೆ' ಎನ್ನುವ ಧೋರಣೆಯೇ ಇದೆ.

ನಾನು ಕಲ್ಯಾಣ ಕರ್ನಾಟಕದ ತುಂಬ ಓಡಾಡಿದ್ದೇನೆ. ಇಲ್ಲಿನ ಅಸಂಖ್ಯ ಸಂತರು. ಇವರಲ್ಲಿ ಕೆಲವರು ತುಂಬ ಜನಪ್ರಿಯತೆ ಗಳಿಸಿ ಈ ನಾಡಿನ ಆಚೆಗೂ ಪರಿಚಿತರಾಗಿದ್ದಾರೆ. ಅವರಿಗೆ ರಾಷ್ಟ್ರೀಯ–ಅಂತರರಾಷ್ಟ್ರೀಯ ಮಟ್ಟದ ಭಕ್ತರಿದ್ದಾರೆ. ಅಂತ ಕೆಲವರನ್ನು ಹೊರತುಪಡಿಸಿ ನೋಡಿದರೆ, ಇಲ್ಲಿ ಪ್ರತಿ ಹಳ್ಳಿ–ಹಳ್ಳಿಯಲ್ಲಿಯೂ ಗುರುಪಂಥದ ಪ್ರತಿನಿಧಿಗಳು ಇದ್ದಾರೆ. ಸೂಫಿ ಸಂತರು–ದಾಸರು–ಶರಣರು–ತತ್ವಪದಕಾರರು, ಸ್ಥಳೀಯ ಶ್ರದ್ಧಾಕೇಂದ್ರದ ಗುರುಗಳು–ಪೀರರು, ಇದ್ದಾರೆ. ಹಿಂದೊಮ್ಮೆ ವಿದೇಶಿ ಪ್ರವಾಸಿಯೊಬ್ಬರು ನನ್ನನ್ನು ಹೈದರಾಬಾದ್ ಕರ್ನಾಟಕದ ಸಾಂಸ್ಕೃತಿಕ ವೈಶಿಷ್ಟ್ಯ ಏನು? ಇಲ್ಲಿನ ಜೀವಂತ ಪರಂಪರೆ ಯಾವುದು? ಅಂತ ಕೇಳಿದಾಗ ನಾನು "ಇದು ಮಲ್ಲಿಕಾರ್ಜುನ ಸ್ವಾಮಿ ದರ್ಗಾ ಹಾಗೂ ಖಾದರ ಲಿಂಗನ ಮಠ ಇರುವ ಭೂಮಿ. ಅವು ಕೇವಲ ಕಟ್ಟಡಗಳಾಗಿ ಉಳಿದಿಲ್ಲ. ಅವುಗಳ ಹಿಂದಿನ ತತ್ವಗಳನ್ನು ಜನ ಇಂದಿಗೂ ಉಸಿರಾಡುತ್ತಾರೆ. ಇದೇ ಇಲ್ಲಿನ ಜೀವಂತ ಪರಂಪರೆ" ಅಂತ ಹೇಳಿದ್ದೆ. ಇಲ್ಲಿನ ಗುರುಪಂಥ, ಅವರಿಗೆ ನಡೆದುಕೊಳ್ಳುವ ಶಿಷ್ಯರು, ವಿಶ್ವಾಸಿಕರ ಪ್ರಶ್ನಾತೀತ ಶ್ರದ್ಧೆ ಇವೆಲ್ಲವೂ ನನ್ನನ್ನು ಮೂಕನನ್ನಾಗಿ ಮಾಡಿದೆ. ನನ್ನ ಪ್ರಕಾರ ಗುರುಪಂಥ ಎನ್ನುವುದೇ ಅಮೂರ್ತ ಪರಂಪರೆಯ ಪ್ರತೀಕಗಳಲ್ಲಿ ಒಂದು. ಹಾಗೆಂದು ಇದು ಕೇವಲ ಧಾರ್ಮಿಕ ವಿಷಯಗಳಿಗೆ ಸೀಮಿತ ಆಗಿಲ್ಲ. ಅದು ಒಂದು ಜೀವನ ಶೈಲಿಯಾಗಿ ರೂಪುಗೊಂಡು ಬಿಟ್ಟಿದೆ. ಇಲ್ಲಿನ ಸಾಹಿತ್ಯ, ಸಂಗೀತ, ವಾಸ್ತುಶಿಲ್ಪ, ಇಲ್ಲಿನ ಜನ ನಡೆದುಕೊಳ್ಳುವ ರೀತಿ, ಅವರ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಆಚರಣೆಗಳು, ಇವೆಲ್ಲವುಗಳ ಮೇಲೆ ಈ ತತ್ವ–ಸಿದ್ಧಾಂತಗಳ ಪ್ರಭಾವ ಇದೆ. ಅಷ್ಟು ಅಲ್ಲದೆ, ಇಲ್ಲಿನ ಜನರ ರೀತಿ–ನೀತಿ–ಸೌಜನ್ಯ, ಭಾಷೆ, ಅವರ ನಾಡುವಳಿಕೆ ಎಲ್ಲರ ಮೇಲೆಯೂ ಈ ಅಧ್ಯಾತ್ಮದ ಪ್ರಭಾವಳಿಯ ಛಾಪು ಮೂಡಿದೆ.

ಇದನ್ನು ಹೇಳುವಾಗ ಒಂದು ಘಟನೆ ನೆನಪಾಗುತ್ತದೆ. ಒಂದು ದಿನ ನಾವು ಹಿರಿಯ ಪತ್ರಕರ್ತ ಹನುಮಂತಪ್ಪ ಪಾಟೀಲ್ ಅವರ ಮನೆಗೆ ಹೋಗಿದ್ದೆವು. ನನ್ನ ಹೆಂಡತಿ ವೀಣಾ ಮತ್ತು ನಮ್ಮ ಪುಟ್ಟ ಮಗಳು ಜೊತೆಗೆ ಇದ್ದರು. ನಾವು ಸ್ವಲ್ಪ ಹೊತ್ತು ಕೂತು, ಅವರ ಆತಿಥ್ಯ ಸ್ವೀಕರಿಸಿ, ಹೊರಟು ಬರುವಾಗ ಅವರು ನನ್ನ ಹೆಂಡತಿಯ ಕಾಲಿಗೆ ನಮಸ್ಕಾರ ಮಾಡಿದರು. ಇದನ್ನು ನಿರೀಕ್ಷೆ ಮಾಡದ ನಾವು ಗಾಬರಿಗೊಂಡೆವು. ಎಪ್ಪತ್ತಕ್ಕೂ ಹೆಚ್ಚು ವಯಸ್ಸಾಗಿದ್ದ ಪಾಟೀಲರು ನಿವೃತ್ತರಾದ ಮೇಲೂ ವರದಿಗಾರಿಕೆ ಮಾಡುತ್ತಿದ್ದರು. ವಯಸ್ಸಿನಲ್ಲಿ ಅಷ್ಟೊಂದು ಹಿರಿಯರು ಹೀಗೆ ಮಾಡಿದ್ದು ನಮಗೆ ಆಶ್ಚರ್ಯವಾಯಿತು. ಹೀಗೇಕೆ ಎನ್ನುವ ಪ್ರಶ್ನೆ ಮೂಡಿ ಆಶ್ಚರ್ಯ ಆಯಿತು. ಆ ನಂತರ ಅವರ ಮನೆಯವರು ತಿಳಿ ಹೇಳಿದರು.

"ಇದು ಬಸವಣ್ಣನ ಭೂಮಿ ಅಲ್ಲವೇ, ಇಲ್ಲಿ ಮನೆಯ ಹೆಣ್ಣು ಮಕ್ಕಳಿಗೆ ಗೌರವ ಕೊಡುವುದು ಹೀಗೆಯೇ, ಅವರಿಗೆ ದೊಡ್ಡವರು ಕಾಲಿಗೆ ನಮಸ್ಕಾರ ಮಾಡುವುದು ಸಹಜ", ಅಂತ ಹೇಳಿದರು. ಆ ಹೊತ್ತಿಗೆ ನಿರಾಳವಾದರೂ ಕೂಡ ನನಗೆ ಅನೇಕ ದಿನ ಆ ವಿಷಯ ಕಾಡಿತು. ಸಿದ್ಧಾಂತವೊಂದು ಜನ ಜೀವನದಲ್ಲಿ ಹಾಸುಹೊಕ್ಕಾಗಿ ಅವರ ದಿನನಿತ್ಯದ ಬದುಕನ್ನು ಪ್ರಭಾವಿಸುವುದು, ನಂಬಿಕಸ್ತರ ಆಚಾರ, ವಿಚಾರ, ನಡುವಳಿಕೆ ಎಲ್ಲವನ್ನೂ ನಿರ್ಧರಿಸುವುದಕ್ಕೆ ಇದೊಂದು ಉದಾಹರಣೆ.

ಹಿರಿಯ ಸಾಹಿತಿ ದೇಶಾಂಶ ಹುಡುಗಿ ಅವರು ನನಗೆ ಒಂದು ಪುಸ್ತಕ ಕೊಟ್ಟರು. ಅದು ಛಲಾಯಿ ಹಾಡಿನ ಪುಸ್ತಕ. ಅದರ ಹಿನ್ನೆಲೆ ನನಗೆ ಗೊತ್ತಿರಲಿಲ್ಲ. ಅವರನ್ನು ಕೇಳಿದಾಗ ನಮ್ಮ ಪ್ರದೇಶದಲ್ಲಿ ಹೈದರಾಬಾದಿನ ಆಳುವ ಪಕ್ಷದ ಅರೆಸೇನಾ ಪಡೆಯಾಗಿದ್ದ ರಜಾಕಾರರು ನಡೆಸಿದರು ಎನ್ನಲಾದ ಕ್ರೌರ್ಯದ ಬಗ್ಗೆ ನಮ್ಮ ಜಾನಪದರು ಒಂದು ರೀತಿಯ ಹಾಡುಗಳನ್ನು ಹೇಳುತ್ತಾರೆ. ಅವು

ಭುಲಾಯಿ ಹಾಡುಗಳು. ನಮ್ಮ ಜನ ತಮ್ಮ ಪೂರ್ವಜರು ಅನುಭವಿಸಿದ ಹಿಂಸೆಯನ್ನು ಮರೆಯಲು ಈ ಹಾಡು ಹೇಳುತ್ತಾರೆ. ಅಂತ ಅಂದ್ರು. ಅಲ್ಲ ಸಾರ್, ಮರೆಯಬೇಕಾದ ವಿಷಯಗಳ ಬಗ್ಗೆ ಹಾಡು ಹೇಳಿಕೊಂಡು ಇದ್ದರೆ ಮರೆಯುವುದು ಹೇಗೆ ಅಂತ ನಾನು ಕೇಳಿದೆ. ಆಗ ಅವರು ಜೋರಾಗಿ ನಕ್ಕರು. ಇದು ಒಂದು ರೀತಿಯ ಗ್ರೀಕ್ ನಾಟಕಗಳ ಕಥಾರಸಿಸ ತಂತ್ರ. ನಮ್ಮ ಸಂಕಟವನ್ನು ಹೊರಗೆ ಹಾಕಿ ಮರೆಯಲು ಪ್ರಯತ್ನಿಸುವುದು, ಅಂತ ಅವರು ಹೇಳಿದರು. ಅದರ ಹಿಂದೆಯೂ ಒಂದು ಸಿದ್ಧಾಂತ ಇದೆ. ಅಂತೆಯೇ ಇಲ್ಲಿನ ಪ್ರತಿ ಸಿದ್ಧಾಂತದ ಪ್ರಭಾವದ ಬಗ್ಗೆಯೂ ಈ ರೀತಿಯ ಉದಾಹರಣೆಗಳನ್ನು ಕೊಡಬಹುದು ಅನ್ನಿಸುತ್ತದೆ.

**ಬಾಂಧವ್ಯ.**

ನನ್ನ ಅನುಭವಕ್ಕೆ ಬಂದ ಕೆಲವು ಸ್ಥಳ–ವ್ಯಕ್ತಿ–ಪರಂಪರೆಗಳನ್ನು ನೆನಸಿಕೊಳ್ಳಬಹುದಾದರೆ ಈ ಹೆಸರುಗಳನ್ನು ಹೇಳಬಹುದು. ಇವು ಎಲ್ಲವೂ ಅಮೂರ್ತ ಪರಂಪರೆಯ ಉದಾಹರಣೆಗಳು.

ಬೀದರ್‌ನಿಂದ ಎರಡೇ ಕಿಲೋಮೀಟರ್ ದೂರ ಇರುವ ಅಷ್ಟೂರಿನ ನಾಗರಿಕರು ಎರಡು ಹಬ್ಬಗಳನ್ನು ಆಚರಿಸುತ್ತಾರೆ. ಅವು ಹದಿನಾಲ್ಕನೇ ಶತಮಾನದಲ್ಲಿ ಭಾರತದ ಬಹುಭಾಗವನ್ನು ಆಳಿದ, ದೊರೆ ಅಹ್ಮದ್ ಷಾ ಬಹಮನಿಯ ಜಯಂತಿ ಹಾಗೂ ಪುಣ್ಯತಿಥಿ. ಬೀದರ್ ಅನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಹತ್ತು ವರ್ಷಕ್ಕೂ ಮೀರಿ ಆಡಳಿತ ನಡೆಸಿದ, ತನ್ನ ರಾಜ್ಯವನ್ನು ದಖನ್ ಪ್ರಸ್ಥಭೂಮಿಯ ಆಚೆ ಬೆಳೆಸಿದ ಅಹ್ಮದ್ ಷಾ ತನ್ನ ಕೊನೆಗಾಲಕ್ಕೆ ಅಧ್ಯಾತ್ಮದ ರುಚಿ ಹಚ್ಚಿಸಿಕೊಂಡ. ಪರ್ಶಿಯಾದ ಧರ್ಮ ಗುರು ಮೊಹಮ್ಮದ್ ಕಲಿ ಉಲ್ಲಾ ಅವರನ್ನು ಬೀದರ್‌ಗೆ ಕರೆಸಿದ. ತನ್ನ ಹೆಸರಿಗೆ 'ವಲಿ' (ಸಂತ) ಎನ್ನುವ ಪದ ಸೇರಿಸಿಕೊಂಡ, ತನ್ನ ಗುರುಗಳ ಗೋರಿಯ ಹತ್ತಿರ ತನ್ನ ಗೋರಿಯನ್ನು ತಾನೇ ನಿಂತ ಕಟ್ಟಿಸಿಕೊಂಡ. ಅಷ್ಟೂರಿನಲ್ಲಿ ಇರುವ ವಲಿಯ ಗೋರಿ ಇಡೀ ಏಷಿಯಾ ದೇಶದಲ್ಲಿ ವಿಶಿಷ್ಟವಾಗಿದೆ. ಅದರ ಹೊರ ಮೈಯಲ್ಲಿ ನೀಲಿ ಟೈಲ್ಸ್ ಹೊದಿಸಿರುವ, ಒಳಮೈಗೆ ಬಹುವರ್ಣದ ಚಿತ್ತಾರಗಳು ಇರುವ ಈ ಸ್ಮಾರಕವನ್ನು ಅಧ್ಯಯನ ಮಾಡಲು ಜಗತ್ತಿನ ಮೂಲೆ – ಮೂಲೆಯಿಂದ ಆಸಕ್ತರು ಬರುತ್ತಾರೆ.

ಈ ವಲಿಯ ಸಮಾಧಿಯನ್ನು ಇಲ್ಲಿನ ಜನ 'ಅಲ್ಲಮಪ್ರಭು ಗುಡಿ' ಎಂದು ಕರೆಯುತ್ತಾರೆ. ಅದಕ್ಕೆ ಒಬ್ಬ ಹಿಂದೂ ಪೂಜಾರಿ, ಒಬ್ಬ ಮುಸ್ಲಿಂ ಮುತಾವಲ್ಲಿಗಳು ಇದ್ದಾರೆ. ಇದರ ಎದುರು ಇರುವ ರಾಜನ ರಾಣಿ ರಾಜೇಶ್ವರಿ ದೇವಿಯ ಸಮಾಧಿಯನ್ನು ಅಲ್ಲಮ ಪ್ರಭುವಿನ ಮಡದಿ 'ಮಾಯಿದೇವಿ'ಯ ಗುಡಿ ಎಂದು ಕರೆಯುತ್ತಾರೆ. ಅಹ್ಮದ್ ಷಾನ ಹುಟ್ಟಿದ ದಿನವನ್ನು ಅಲ್ಲಮಪ್ರಭು ಜಯಂತಿ ಎಂದು ಹಿಗ್ಗಿನಿಂದ ಆಚರಿಸುತ್ತಾರೆ. ಊರ ಮುಂದಿನ ದೊಡ್ಡ ಜಾಗೆಯಲ್ಲಿ ಜಾತ್ರೆ ನಡೆಯುತ್ತದೆ. ಹಳ್ಳಿಯ ಪಾಟೀಲರ ಮನೆಯ ಹಿರಿಯರು ಜಾತ್ರಾ ಸಮಿತಿಯ ಅಧ್ಯಕ್ಷರಾಗುತ್ತಾರೆ. ಜಾತ್ರೆಯಲ್ಲಿ ಕುಸ್ತಿ–ಹಾಡು ಕುಣಿತ–ಮಕ್ಕಳ ಆಟದ ಸಾಮಾನುಗಳನ್ನು ಇರಿಸಲಾಗುತ್ತದೆ. ಪಕ್ಕದ ಕಲಬುರ್ಗಿಯ ಮಾಡ್ಯಾಳ್ ಗ್ರಾಮದ ಶಿವಪ್ಪ ಒಡೆಯರ್ ಸ್ವಾಮೀಜಿ ಅವರು ಪಾದಯಾತ್ರೆಯಲ್ಲಿ ಬಂದು ಇಲ್ಲಿ ಕುಸ್ತಿ ಪಂದ್ಯ ಉದ್ಘಾಟಿಸಿದ ನಂತರ ಜಾತ್ರೆ ಆರಂಭ ಆಗುತ್ತದೆ. ವಲಿಯ ಪುಣ್ಯತಿಥಿಯ ದಿವಸ ಉರುಸ ಆಯೋಜಿಸಲಾಗುತ್ತದೆ. ಹಳ್ಳಿಯ ಉರುಸು ಕಮೀಟಿಯಲ್ಲಿ ವಿವಿಧ ಧರ್ಮದ ಜನ ಇರುತ್ತಾರೆ. ಈ ಎರಡೂ ದಿನಗಳನ್ನು ಹಿಂದೂ–ಮುಸ್ಲಿಮರು ಒಟ್ಟಿಗೆ ಆಚರಿಸುತ್ತಾರೆ. ಜಾತ್ರೆ–ಉರುಸಿನ ದಿನಗಳಲ್ಲಿ ಒಂದು ಮೂಲೆಯಲ್ಲಿ ತತ್ವಪದ ಗಾಯನ ನಡೆಯುತ್ತಿದ್ದರೆ, ಇನ್ನೊಂದು ಮೂಲೆಯಲ್ಲಿ ಕವಾಲಿ ಕಾರ್ಯಕ್ರಮ ನಡೆಯುತ್ತಾ ಇರುತ್ತದೆ. ಅಲ್ಲಿಗೆ ಹೋಗಿ ಬಂದವರಿಗೆ ಸಂತನ ಸಮಾಧಿಯ ಪಕ್ಕದ ಬಕುಲದ ಹೂವಿನ ಪರಿಮಳ, ಸ್ಮಾರಕಕ್ಕೆ ಲೇಪಿಸಿದ ಚಂದನ–ಆರತಿಯ ಕರ್ಪೂರ–ಲೋಬಾನ ಮಾತ್ರ ನೆನಪಿರುತ್ತದೆ. ಮತ–ಕುಲಗಳ ವ್ಯತ್ಯಾಸದ, ಮೇಲೂ ಕೀಳಿನ ಘಾಟು ಅವರ ಮೂಗಿಗೆ ಬಡಿಯುವುದಿಲ್ಲ. ದ್ವೇಷದ ಭಾವನೆ ಅಲ್ಲಿ ಸುಳಿಯುವುದಿಲ್ಲ.

ಹಿಂದೊಮ್ಮೆ ನಾವು ಬೀದರ್‌ನಲ್ಲಿ ಪಾರಂಪರಿಕ ಮ್ಯಾರಥಾನ್ ಆಯೋಜಿಸಿದಾಗ ಅಲ್ಲಿಗೆ ಬಂದ ದೆಹಲಿಯ ಪ್ರವಾಸಿಯೊಬ್ಬರು ಗುರುದ್ವಾರದ ರಸ್ತೆ ಕೇಳಿದರು. ನಾನು ನಿಮಗೆ ಯಾವುದು ಬೇಕು–ಗುರು

ನಾನಕ ಅವರದೋ, ಸಾಹಿಬ್‌ಸಿಂಗ್ ಅವರದೋ ಅಥವಾ ಮಾಯಿ ಭಾಗೋ ಅವರದೋ ಅಂತ ಕೇಳಿದೆ. ಅವರಿಗೆ ಆಶ್ಚರ್ಯವಾಗಿ ಈ ಸಣ್ಣ ಊರಿನಲ್ಲಿ ಮೂರು ಗುರುದ್ವಾರ ಇವೆಯಾ ಅಂತ ಗಾಬರಿ ಹಾಗೂ ಸಂತೋಷದಿಂದ ಕೇಳಿದರು. ಇದು ಅನೇಕರಿಗೆ ಗೊತ್ತಿಲ್ಲ. ಸುಮಾರು ಐದು ನೂರು ವರ್ಷ ಹಿಂದೆ ತಮ್ಮ ದಕ್ಷಿಣಾಪಥದ ಯಾತ್ರೆಯಲ್ಲಿ ಗುರುನಾನಕರು ನಾಂದೇಡ್‌ದಿಂದ ಇಲ್ಲಿಗೆ ಬಂದಿದ್ದರು ಎನ್ನುವ ನಂಬಿಕೆ ಇದೆ. ಅವರು ಬಂದಾಗ ಬರಗಾಲ ಬಿದ್ದಿತ್ತು. ಗುರುಗಳು ತಮ್ಮ ಕಾಲು ಬೆರಳಿನಿಂದ ಒಂದು ಕಲ್ಲು ಸರಿಸಿದಾಗ ಅಲ್ಲಿಂದ ಸಿಹಿ ನೀರಿನ ಝರಿ ಹರಿಯಿತು ಎಂದು ಆಸಕ್ತರು ನಂಬುತ್ತಾರೆ. ನಗರ ಬಸ್ ನಿಲ್ದಾಣದ ಎದುರು ಗುರುದ್ವಾರ ಇದೆ. ಗುರುನಾನಕ ಝೀರಾ ಈಗಲೂ ಹರಿಯುತ್ತಿದೆ.

ಅಂತೆಯೇ, ಸುಮಾರು ಮೂರು ನೂರು ವರ್ಷದ ಹಿಂದೆ ಸಾಹಿಬ್‌ಚಂದ ಎನ್ನುವ ಸವಿತಾ ಸಮಾಜದ ಬಾಲಕ ಇಲ್ಲಿಂದ ಪಂಜಾಬಿನ ಆನಂದಪುರ ಸಾಹಿಬ್ ನಗರಕ್ಕೆ ಹೋಗಿ ಗುರು ಗೋವಿಂದ ಸಿಂಗ್ ಅವರ ಕರೆಗೆ ಓಗೊಟ್ಟು ಖಾಲಸಾ ಪಂಥ ಸೇರಿದ ಎನ್ನುವ ನಂಬಿಕೆಯೂ ಇದೆ. ಇವರ ನೆನಪಿನಲ್ಲಿ ಬೀದರ್– ನಾಂದೇಡ್ ರಸ್ತೆಯಲ್ಲಿ ಸಾಹಿಬ್‌ಸಿಂಗ್ ಗುರುದ್ವಾರ ಇದೆ.

ಬೀದರ್ ಹಾಗೂ 'ಮಾಯಿ ಭಾಗೋ' ಅವರ ನಂಟಿಗೆ ಐತಿಹಾಸಿಕ ಪುರಾವೆ ಇದೆ. ಗುರು ಗೋವಿಂದ ಸಿಂಗ್ ಅವರ ಮಹಿಳಾ ರಕ್ಷಣಾ ಪಡೆಯಲ್ಲಿ ಕೆಲಸ ಮಾಡುತ್ತಿದ್ದ ಮಾಯಿ ಭಾಗೋ ಅವರು ನಾಂದೇಡ್ ಯುದ್ಧದಲ್ಲಿ ತಮ್ಮ ಸಂಬಂಧಿಕರೆಲ್ಲರನ್ನೂ ಕಳೆದುಕೊಂಡು ಬೀದರ್ ಹತ್ತಿರದ ಜೈನ ಕುಟುಂಬಗಳು ಹೆಚ್ಚಾಗಿದ್ದ 'ಜಿನಾವಾಡ'ಕ್ಕೆ (ಪ್ರಸ್ತುತ ಜನವಾಡ) ಬರುತ್ತಾರೆ. ಅಲ್ಲಿ ಒಬ್ಬರ ಮನೆಯಲ್ಲಿ ಇದ್ದುಕೊಂಡು ತಮ್ಮ ಉಳಿದ ಜೀವನವನ್ನು ವೈರಾಗ್ಯ–ಅಧ್ಯಾತ್ಮದಲ್ಲಿ ಕಳೆಯುತ್ತಾರೆ. ಅವರು ಇದ್ದ ಮನೆಯನ್ನು ಈಗ ಗುರುದ್ವಾರವಾಗಿ ಪರಿವರ್ತಿಸಲಾಗಿದೆ.

ಹೈದರಾಬಾದ್‌ನಿಂದ ಸುಮಾರು ೧೮೯೦ರ ಸುಮಾರಿಗೆ ಕ್ರಿಶ್ಚಿಯನ್ ಮಿಷಿನರಿಗಳು ಹೈದರಾಬಾದ್ ಕರ್ನಾಟಕದ ಜಿಲ್ಲೆಗಳ ಕಡೆ ಬಂದರು. ಅದು ಇನ್ನೂ ನಿಜಾಮರ ಪ್ರದೇಶ ಆಗಿತ್ತು. ಆಗ ಅವರು ಮೊದಲು ಉಳಿದುಕೊಂಡಿದ್ದು, ಬೀದರ್‌ನ ಒಬ್ಬ ಮುಸ್ಲಿಂ ವರ್ತಕರ ಮನೆಯಲ್ಲಿ. ಆ ಮಿಷಿನರಿಗಳು ೧೮೯೨ರಲ್ಲಿ ಇಡೀ ಪ್ರದೇಶದ ಮೊದಲ ಕನ್ನಡ ಶಿಕ್ಷಕ ತರಬೇತಿ ಕೇಂದ್ರ ಶುರು ಮಾಡಿದರು. ಕನ್ನಡ ಕಲಿಕೆಗೆ ಅನುಕೂಲ ಆಗಲು ಕೈಬರಹದ ಪಠ್ಯ ಪುಸ್ತಕ ಮಾಡಿದರು. ಇಂದಿಗೂ ಸೇಂಟ್ ಜೋಸೆಫ್ ಶಾಲೆಯ ಹಾಗೂ ಹಬಶಿ ಕೋಟೆಯ ಸೂರ್ಯೋದಯದ ಗುಹಾಂತರ್ಗತ ಚರ್ಚಿನ ವಾರ್ಷಿಕೋತ್ಸವ ಆರಂಭ ಆಗುವುದು ಆ ವರ್ತಕರ ಮನೆಯ ಅಂಗಳದಿಂದ.

ಹುಟ್ಟಿನಿಂದ ಮುಸ್ಲಿಂನಾಗಿ ಕೊನೆಗೆ ಹರಿದಾಸನಾಗಿ ಮಾರ್ಪಟ್ಟ ಗೋನವಾರದ ಬಾಡೆಸಾಬನ ನಾಡು ಇದು. ಮಂತ್ರಾಲಯ ಮಠಕ್ಕೆ ಅನುದಾನ ನೀಡಿದ, ರಾಘವೇಂದ್ರ ಸ್ವಾಮಿಗಳ ಪಾಂಡಿತ್ಯವನ್ನು ಮೆಚ್ಚಿ ಅವರೊಂದಿಗೆ ಅನ್ಯೋನ್ಯ ಸಂಬಂಧ ಬೆಳೆಸಿದ, ಆದೋನಿ ನವಾಬರ ನಾಡು. ಇಲ್ಲಿನ ಇಂಡೋ ಸಾರಸೇನಿಕ ವಾಸ್ತುಶಿಲ್ಪ ಶೈಲಿ ತನ್ನ ಗಾಢ ಛಾಯೆಯನ್ನು ಎಲ್ಲ ಕಡೆ ಬೀರಿದೆ. ಮಂತ್ರಾಲಯವೂ ಸೇರಿದಂತೆ ಇಲ್ಲಿನ ಅನೇಕ ಮುಸ್ಲಿಮೇತರ ಸಂತರ ಬೃಂದಾವನ, ಸಮಾಧಿ, ಸ್ಮಾರಕ, ಆಲಯ, ಮನೆ, ಇತ್ಯಾದಿಗಳಲ್ಲಿ ಈ ವಾಸ್ತುಶಿಲ್ಪದ ಪ್ರಭಾವ ಕಾಣಬಹುದು.

ಎಲ್ಲಾ ರೀತಿಯ ತತ್ವ–ಆದರ್ಶ–ಸಿದ್ಧಾಂತಗಳನ್ನು ಅರಿತುಕೊಂಡು ತಮ್ಮ ಭಕ್ತರಿಗೆ ಅವೆಲ್ಲದರ ರಸಸ್ವಾದ ಉಣಿಸಿದ ಸಕಲ ಮತಾಚಾರ್ಯ ಮಾಣಿಕಪ್ರಭು ಮಹಾರಾಜರು ಹುಮಾನಬಾದ್‌ನಲ್ಲಿ ತೆರೆದ ಬಾಗಿಲ ಆಶ್ರಮ ಕಟ್ಟಿದ್ದಾರೆ. ಪ್ರತಿವರ್ಷ ದತ್ತಜಯಂತಿಯನ್ನು ಎಷ್ಟು ವಿಜೃಂಭಣೆಯಿಂದ ಅಚ್ಚರಿಸುತ್ತಾರೋ, ಅಷ್ಟೇ ಶ್ರದ್ಧಾ ಭಕ್ತಿಯಿಂದ ಸೂಫಿ ಸಂತ ಮೆಹಬೂಬ್ ಸುಬಾನಿಯ ಗ್ಯಾರಾಹವಿಯನ್ನು ಆಚರಿಸುತ್ತಾರೆ. ಮಾಣಿಕನಗರದಲ್ಲಿ ಆ ಸೂಫಿ ಸಂತನ ಸ್ಮಾರಕವನ್ನು ಜತನದಿಂದ ರಕ್ಷಿಸಿ ಇಟ್ಟಿದ್ದಾರೆ.

ಇಳಿ ವಯಸ್ಸಿನಲ್ಲಿ ಕಲಬುರ್ಗಿಗೆ ಬಂದು ಇಲ್ಲಿನ ಭಾಷೆಯಲ್ಲಿ ಸಾಹಿತ್ಯ ರಚಿಸಿ, ಸಾಮ್ರಾಟ್‌ನಿಗೂ, ಸಮಾನ್ಯರಿಗೂ ದಾರಿ ತೋರಿದ, 'ಪ್ರೀತಿಗೂ ಮುಂದೆ ಯಾವುದೇ ಸಿದ್ಧಾಂತ ಇಲ್ಲ' ಎಂಬಂತೆ ಬದುಕಿದ ಖಾಜಾ ಬಂದೇ ನವಾಜರು ಹೇಳಿದ ಮಾತು ಒಂದನ್ನು ಇಲ್ಲಿ ನೆನಪಿಸುತ್ತೇನೆ. "ಪಾನಿ ಮೇ ನಮಕ ಡಾಲ ಔರ ದೇಖ ಉಸೆ. ಪಾನಿ ಮೇ ನಮಕ ಘುಲ ಜಾಯೆಗಾ ತೋ ನಮಕ ಕಹೆ ಕಿಸೆ?" (ನೀರಿನಲ್ಲಿ ಉಪ್ಪು ಹಾಕು. ನೀರಿನಲ್ಲಿ ಕರಗಿದ ಮೇಲೆ ಉಪ್ಪು ಅಂತ ಕರೆಯುವುದು ಯಾವುದನ್ನು?). ತಿಂಥಣಿ ಮೌನೇಶ್ವರನ ಆಲಯದಲ್ಲಿ ದಿನ ಬೆಳಿಗ್ಗೆ ಮೊಳಗುವ 'ಏಕ ಲಾಖ ಯಸ್ಸಿ ಹಜಾರ ಪಾಂಚೊ ಪೀರ್ ಪೈಗಂಬರ..' ಎಂದು ಆರಂಭವಾಗುವ ಶ್ಲೋಕ ಮೌನೇಶ್ವರನ ಸ್ವರೂಪದ ಬಗ್ಗೆ ತಿಳಿಸಿದಷ್ಟೇ, ಅವನ ಭಕ್ತರ ಮನಸ್ಸಿನ ಆಳದ ಬಗೆಗೂ ತಿಳಿಸುತ್ತದೆ.

ಐದು ಶತಮಾನಗಳ ಹಿಂದೆ ಸಮಾನತೆಯ ಸಂದೇಶ ಸಾರುವ ಒಂದು ಲಕ್ಷ ೯೬ ಸಾವಿರ ವಚನ ಬರೆದ, 'ಬಜಾರದಾಗ ಹಸಿರು ಪಲ್ಲಕ್ಕಿ ಮೆರದ' ಬಸವಣ್ಣ ನೆಲೆಸಿದ ಕೊಡೆಕಲ್, ಸಕಲ ಧರ್ಮಿಯರನ್ನು ಆಕರ್ಷಿಸುತ್ತದೆ. ಇಂಡೋ ಸಾರಸೇನಿಕ ವಾಸ್ತುಶಿಲ್ಪದ ಮಠದಲ್ಲಿ ಇರುವುದು ಸಾವಳಗಿ ಶಿವಲಿಂಗನ ಸನ್ನಿಧಿ. ಬಂದೇನವಾಜರ ಸಹವಾಸ–ಸಾಂಸ್ಕೃತಿಕ ಸ್ನೇಹ ಹೊಂದಿದ್ದ ಶಿವಲಿಂಗೇಶ್ವರರು ಅಧ್ಯಾತ್ಮ ಎನ್ನುವುದು ಧರ್ಮದ ಎಲ್ಲೆಗಳನ್ನು ಮೀರಿದ್ದು. ಅದನ್ನು ಕೇವಲ ಪ್ರವಾದಿಗಳು, ಸಂತರು ಮಾತ್ರ ಸಾಧಿಸಿದರೆ ಸಾಲದು. ಎಲ್ಲರೂ ಸಾಧಿಸಬೇಕು ಎಂದು ತಿಳಿ ಹೇಳಿದರು.

ಕಲಬರುಗಿಯ ನಾರಾಯಣಪುರ ಹತ್ತಿರ, ಕೃಷ್ಣಾ ನದಿ ದಂಡೆಯ ಮೇಲೆ ಇರುವ ಛಾಯಾ ಭಗವತಿ, ಬೌದ್ಧ ತಾಂತ್ರಿಕ ಪಂಥದ ನೆಲೆ. ಇಡೀ ವಿಶ್ವದಲ್ಲಿಯೇ ವಿಶಿಷ್ಟವಾದ ಸಾಮ್ರಾಟ್ ಅಶೋಕ ಚಕ್ರವರ್ತಿಯ ಹೆಸರು ಹಾಗೂ ಚಿತ್ರ ಇರುವ ಶಿಲ್ಪ ಸನ್ನತಿಯಲ್ಲಿ ಸಿಕ್ಕಿದೆ. ಇಲ್ಲಿ ಬರೆದಿರುವ 'ರಾಯಾ ಅಸೋಕ' ಎನ್ನುವ ಒಂದು ಸಾಲು ವಿಶ್ವದ ಮೂಲೆ ಮೂಲೆಯಿಂದ ಸಂಶೋಧಕರನ್ನು ಸೆಳೆಯುತ್ತದೆ. ಅದು ಕೇವಲ ಬೌದ್ಧ ಧರ್ಮದ ಬಗ್ಗೆ ಅಲ್ಲ, ಭಾರತದ ಭಾಷಾ ಬೆಳವಣಿಗೆಯ ಬಗ್ಗೆ ಸಹಿತ ನಮ್ಮ ಕಣ್ಣು ತೆರೆಸುತ್ತದೆ. ಬೀದರನಲ್ಲಿ ಕಮಠಾಣ, ಗುಲಬರ್ಗಾದ ಮಳಖೇಡ, ಪಟ್ಟಣ, ಹರಸೂರ, ಹೆಬ್ಬಾಳ, ಹುಣಸಿ ಹಡಗಿಲಗಳಲ್ಲಿ ಜೈನ ಪರಂಪರೆ ಕಾಣುತ್ತೇವೆ.

ನಾನು ಮೊದಲೇ ಹೇಳಿದಂತೆ ಇವು ಕೇವಲ ಕೆಲವು ಉದಾಹರಣೆಗಳು ಅಷ್ಟೇ. ಇಂತಹ ಧರೆಗೆ ದೊಡ್ಡವರು, ನಮ್ಮೆಲ್ಲರ ಬದುಕನ್ನು ಹಸನು ಮಾಡಿದವರು ಪ್ರತಿ ಹಳ್ಳಿ–ಪಟ್ಟಣ, ಶಹರಗಳಲ್ಲಿ ಇದ್ದಾರೆ. ದ್ವೇಷದ ಕೊರೆವ ಚಳಿ ನಮಗೆ ತಾಕದಂತೆ ನಮ್ಮನ್ನು ತಮ್ಮ ತೊಡೆಯ ಮೇಲೆ ಕೂಡಿಸಿಕೊಂಡು ತಮ್ಮ ದಪ್ಪ ಕಂಬಳಿಯಿಂದ ನಮ್ಮನ್ನು ಮುಚ್ಚಿಕೊಂಡಿದ್ದಾರೆ. ದಾವಾನಿಲದ ಬೇಗೆಯಿಂದ ನಮ್ಮನ್ನು ತಪ್ಪಿಸಿದ್ದಾರೆ. ಕಲ್ಯಾಣ ಕರ್ನಾಟಕದ ಏಳು ಜಿಲ್ಲೆಗಳಲ್ಲಿ ಎಲ್ಲಾ ರೀತಿಯ ಧಾರ್ಮಿಕ ಪರಂಪರೆಯ ಜನರನ್ನು ನಾವು ಕಾಣುತ್ತೇವೆ. ರಾಜ್ಯದ–ದೇಶದ ಇತರ ಕಡೆಗಳಿಗೆ ಹೋಲಿಸಿದರೆ ಇಲ್ಲಿ ಕೋಮುಗಲಭೆಗಳು, ದ್ವೇಷ, ಅಸಹಿಷ್ಣುತೆ ಕಂಡು ಬರುವುದು ಕಮ್ಮಿ.

ಇಂತಹ ಜಾಗೃತ ಸ್ಥಾನಗಳಿಗೆ ಭೇಟಿ ನೀಡುವ ಭಕ್ತರು ಕಣ್ಣು ಮುಚ್ಚಿ ಏನನ್ನು ಧ್ಯಾನಿಸುತ್ತಾರೆ? ಅವರ ಮನಸ್ಸಿನಲ್ಲಿ ಯಾವ ಮೂರ್ತಿ ಮೂಡುತ್ತದೆ? ಅವರ ಪಾಲಿನ ದೈವಿ ಶಕ್ತಿ ಮೂರ್ತವೋ, ಅಮೂರ್ತವೋ? ನಾನು ತಿಳಿದಂತೆ ಇವೆಲ್ಲವೂ ಅಮೂರ್ತ. ಇಂತಹ ತತ್ವಾನ್ವೇಷಕರು ಪ್ರತಿಪಾದಿಸಿದ ವಿಚಾರಗಳು ಯಾವ ಸಾಹಿತ್ಯ, ಸಂಗೀತ, ಕಲೆ, ವಸ್ತು ಶಿಲ್ಪ, ಸಾಂಸ್ಕೃತಿಕ–ಸಾಮಾಜಿಕ–ಧಾರ್ಮಿಕ ಆಚರಣೆಗಳ ಮೇಲೆ ಪ್ರಭಾವ ಬೀರಿದವೋ, ಅವು ಅಮೂರ್ತ ಪರಂಪರೆಯ ಭಾಗಗಳೆ ಆಗಿವೆ. ಇವನ್ನು ಜತನದಿಂದ ಕಾಪಾಡಿಕೊಂಡು ಇರಬೇಕಾದ ಜವಾಬುದಾರಿ ನಮ್ಮೆಲ್ಲರ ಮೇಲೆ ಇದೆ.

ಇವತ್ತು ಅತಿ ಮಹತ್ವದ ಕಾರ್ಯಕ್ರಮ ವೊಂದನ್ನು ನೀವು ಆಯೋಜಿಸಿದ್ದೀರಿ, ನಿಮಗೆ ಎಲ್ಲರಿಗೂ ಧನ್ಯವಾದ. "ದುರಿತ ಕಾಲದಲ್ಲಿಯೂ ಹಾಡು–ಹಸೆ ಇರುತ್ತದೆಯೋ? ಅವಶ್ಯವಾಗಿ ಇರುತ್ತದೆ. ದುರಿತ ಕಾಲದಲ್ಲಿ, ದುರಿತ ಕಾಲದೇ ಆದ ಹಾಡು–ಹಸೆ ಇದ್ದೇ ಇರುತ್ತದೆ," ಅಂತ ನಾಟಕ ಕಾರ ಬರಟೋಲಟ

ಬ್ರೆಕ್ಟ್ ಅಭಿಪ್ರಾಯ ಪಟ್ಟಿದ್ದಾನೆ. ಎಂಥ ದುರಿತ ಕಾಲವೂ ಕೂಡ ಮಾನವ ಸಹಜ ಕಾರುಣ್ಯವನ್ನು ಕೊನೆಗಾಣಿಸಲಾರದು, ಎನ್ನುವುದನ್ನು ಅರಿಯಲು ಇಂತಹ ಕಾರ್ಯಕ್ರಮಗಳು ಸಹಾಯ ಮಾಡುತ್ತವೆ. ನಾವೆಲ್ಲರೂ 'ಅಮೃತ ವಾಹಿನಿಯೊಂದು ಹರಿಯುತಿದೆ ಮಾನವನ ಎದೆಯಿಂದ ಎದೆಗೆ ಸತತ,' ಅನ್ನುವ ಗೋಪಾಲ ಕೃಷ್ಣ ಅಡಿಗರ ಕವಿ ವಾಣಿಯ ಅಶಯದಂತೆ ಇರೋಣ. ಜನಮಾನಸದಲ್ಲಿ ಪಟ್ಟಭದ್ರ ಹಿತಾಸಕ್ತಿಗಳು ಎಂಥ ಹುಳಿ ಹಿಂಡಿದರೂ ಸಹಿತ, ಕೊನೆಗೆ ಗೆಲ್ಲುವುದು ಪ್ರೀತಿ ಎನ್ನುವ ಆಶಾಭಾವನೇ ಇಂದ ಬಾಳೋಣ.

ನನ್ನನ್ನು ನೆನಪಿಸಿಕೊಂಡ ವೀರಶೆಟ್ಟಿ ಗಾರಂಪಳ್ಳಿ ಅವರಿಗೆ, ಆಹ್ವಾನ ನೀಡಿದ ಪ್ರೊ. ಇಂದುಮತಿ ಪಾಟೀಲ್ ಅವರಿಗೆ, ಸಂಸ್ಥೆಯ ಮುಖ್ಯಸ್ಥರಿಗೆ, ಈ ವಿಷಯದ ಬಗ್ಗೆ ಮಾರ್ಗದರ್ಶನ ನೀಡಿದ ಮಿತ್ರರೂ, ಬಹುಶ್ರುತ ಆಸಕ್ತರೂ ಆದ ದೇವು ಪತ್ತಾರ ಅವರಿಗೆ, ಪ್ರೊ. ರೇಹಮತ ತರೀಕೆರೆ ಅವರಿಗೆ, ಸೂಫಿ ಸಾಹಿತಿ ರಿಯಾಜ ಅಹ್ಮದ್ ಬೊಡೆ ಅವರಿಗೆ, ಪ್ರೊ. ಶಿವಗಂಗಾ ರುಮ್ಮಾ ಅವರಿಗೆ ಧನ್ಯವಾದಗಳು. ಆಯೋಜಕರಿಗೆ, ವಿದ್ಯಾರ್ಥಿಗಳಿಗೆ, ಇಂದು ಮಾತನಾಡಲಿರುವ ಇತರರಿಗೆ ಅಭಿನಂದನೆಗಳು.

**ಎಲ್ಲರಿಗೂ ನಮಸ್ಕಾರಗಳು,**
**ಧನ್ಯವಾದ.**



# ಕಲ್ಯಾಣ ಕರ್ನಾಟಕದ ಶಾಕ್ತ ಪರಂಪರೆ : ಹುಣ್ಣಿಮೆಗಳು.

**–ಡಾ. ಶಿವಗಂಗಾ ರುಮ್ಮಾ,**
ಪ್ರಾಧ್ಯಾಪಕರು, ಕನ್ನಡ ವಿಭಾಗ,
ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರ್ಗಿ.

ತಂತ್ರ, ಕೌಲ, ವಾಮ, ಶಾಕ್ತ, ಸಾಂಖ್ಯ, ಶೈವ, ಮಹಾಶೈವ, ಅನುಶೈವ, ಅವಾಂತರ ಶೈವ, ಅಂತ್ಯಶೈವ, ಮಾರ್ಗಶೈವ, ಕಾಶ್ಮೀರ ಶೈವ, ದ್ರಾವಿಡ ಶೈವ, ಸಾಮಾನ್ಯ ಶೈವ, ಮಿಶ್ರ ಶೈವ, ಕಾಪಾಲಿಕ, ಕಾರುಣೀಕ ಸಿದ್ಧಾಂತ, ಭೈರವ, ಸೋಮಸಿದ್ಧಾಂತ, ಲಾಕುಳ, ಪಾಶುಪತ, ಕಾಳಾಮುಖ, ನಾಥ, ಸಿದ್ಧ, ಕಣ್ಪಥ, ಮುಂತಾದ ಶೈವದ ಶಾಖೆಗಳ ಅಧ್ಯಯನ ಮತ್ತು ತಿಳುವಳಿಕೆ ಇಂದಿನ ಬಹುಮುಖ್ಯ ಜವಾಬ್ದಾರಿಯಾಗಿದೆ. ಈ ಜವಾಬ್ದಾರಿ ಭೂತವನ್ನು ವೈಭವೀಕರಿಸಲೂ ಅಲ್ಲ, ತಿರಸ್ಕರಿಸಲೂ ಅಲ್ಲ. ಹಿಂದಿನ ಬೆಳಕಿಂಡಿಯ ಮುಖಾಂತರ ಇಂದಿನ ಬದುಕನ್ನು ನೇರ್ಪಡಿಸಿಕೊಳ್ಳುವ ಅದರ ಬೆಳಕಿನಲ್ಲಿ ನಮ್ಮಕಾಲದ ತಿಳುವಳಿಕೆಯನ್ನು ವಿಸ್ತರಿಸಿಕೊಳ್ಳುವುದರ ಮೂಲಕ ಇಂದಿನ ಬದುಕಿಗೆ ಬೇಕಾಗುವ ಸ್ವಂತಿಕೆಯನ್ನು ಪಡೆಯುವುದು ಪ್ರಸ್ತುತ ಸಂದರ್ಭದ ಆದ್ಯತೆಯಾಗಿದೆ.

ಶಾಕ್ತವೆಂದರೇನು ಎಂಬುದು ಬಹುಚರ್ಚಿತವಾದ ವಿಷಯವಾಗಿದೆ. ಈ ಮೇಲೆ ಉಲ್ಲೇಖಿಸಿದ ಶೈವ ಭೇದಗಳಲ್ಲಿ ಇಂದು ಅನುಯಾಯಿಗಳಲ್ಲಿಯೂ ಓದುಗರಲ್ಲಿಯೂ, ವಿದ್ವಾಂಸರಲ್ಲಿಯೂ ಗೊಂದಲಗಳಿರುವುದು ಸಹಜ. ಏಕೆಂದರೆ ಆಚರಣೆಯ ವಿಧಾನಗಳಲ್ಲಿ ತುಂಬಿರುವ ಕೊಡುಕೊಳ್ಳುವಿಕೆ, ಸಹಬಾಳ್ವೆ, ಸಂಘರ್ಷ, ಮೇಲಾಟ ಮುಂತಾದವುಗಳಿಂದ ಈ ಎಲ್ಲ ಪಂಥಗಳು ಮೇಲ್ನೋಟಕ್ಕೆ ಗಲಿಬಿಲಿಗೊಳ್ಳುವಂತೆ ಮಾಡುತ್ತವೆ. ಜನಮಾನಸದಲ್ಲಿ ಪ್ರಸ್ತುತ ಸಂದರ್ಭದಲ್ಲಿ ಅಸ್ತಿತ್ವದಲ್ಲಿರುವ ಸಂಗತಿಗಳು ಯಾವುದರ ಮೂಲ ಯಾವುದು ಎನ್ನುವುದನ್ನು ನಿರ್ಣಯಿಸುವಲ್ಲಿ ದಿಕ್ಕು ತಪ್ಪಿಸುತ್ತವೆ. ಚಾರಿತ್ರಿಕವಾಗಿ ಹಾಗೆ ಯಾವುದೂ ಕೇವಲ ಶುದ್ಧವಾಗಿ ಉಳಿಯಲು ಸಾಧ್ಯವಿಲ್ಲ. ಆದರೆ ಅವುಗಳ ಚಾರಿತ್ರಿಕ ಬೆಳವಣಿಗೆಯ ಅರಿವನ್ನು ವಿಸ್ತರಿಸಿಕೊಳ್ಳುವ ಮುಖಾಂತರ ಭವಿಷ್ಯದ ಬದುಕಿನ ಬಗ್ಗೆ ಸರಿಯಾದ ನಿಲುವನ್ನು ಪಡೆಯುವುದು ಸಾಧ್ಯವಾಗುತ್ತದೆ. ಇದರ ಜೊತೆಗೆ ಸದಾ ಪ್ರಭುತ್ವದ (ಕೇವಲ ಆಳುವವರಲ್ಲ, ಆಳುವವರ ಜೊತಿಗಿರುವ ತತ್ವಜ್ಞಾನವನ್ನು ಒಳಗಿಂದೊಳಗೆ ಪ್ರತಿಪಾದಿಸುವವರು ನಿಜವಾದ ಪ್ರಭುತ್ವವನ್ನು ಪಡೆದಿರುತ್ತಾರೆ) ಜೊತೆಗಿದ್ದು ಜನವಿರೋಧಿಯಾದ ಜೀವವಿರೋಧಿಯಾದ ಅಂಶಗಳನ್ನು ತತ್ವಜ್ಞಾನದ ಹೆಸರಿನಲ್ಲಿ ಪ್ರಚಾರ ಮಾಡುತ್ತಾ ಸಮಾಜಕ್ಕೆ ದಿಕ್ಕುತಪ್ಪಿಸುವವರು ಮುಖ್ಯವಾಹಿನಿಯಲ್ಲಿ ಸೇರಿಹೋದ ಧರ್ಮಗಳನ್ನೇ ಮತ್ತೆ ಮತ್ತೆ ಹೇಳಿದುದರಿಂಧಾಗಿ, ಜನರೇ ಹುಟ್ಟಿಸಿದ ಕಾಲುದಾರಿಗಳು ಹೈವೆಯಲ್ಲಿ ಮುಚ್ಚಿ ಹೋಗಿವೆ.

ಹೀಗಾಗಿ ಮಹಿಳೆಯರು, ಅಸ್ಪ್ರಶ್ಯರು, ಶೂದ್ರರು, ಬುಡಕಟ್ಟು ಸಮುದಾಯಗಳು ಇಡೀ ಜಗತ್ತಿನಲ್ಲಿ ಬಿಕ್ಕಟ್ಟುಗಳನ್ನು ಎದುರಿಸುತ್ತಿರುವ ಇಂದಿನ ಸಂದರ್ಭದಲ್ಲಿಶಾಕ್ತ, ತಂತ್ರ ಇವುಗಳ ತಿಳಿವು ನಮಗೆ ಮುಖ್ಯವಾಗುತ್ತದೆ. "ಶಕ್ತಿಯ ಆರಾಧನೆಯನ್ನು ಬೋಧಿಸುವ ತತ್ವ ತಂತ್ರವಾದರೆ, ತಂತ್ರದ ಆ ನಿರ್ದೇಶನದ ಪ್ರಕಾರ ಶಕ್ತಿಯನ್ನು ಆರಾಧಿಸುವ ವ್ಯಕ್ತಿ–ಸಾಧಕನು ಶಾಕ್ತ. ಶಾಕ್ತನ ದೈವತ ಶಕ್ತಿ. ಅವನ ಶಾಸ್ತ್ರ ತಂತ್ರ. ಅವನ ದೈವತ, ಆಚಾರ–ವಿಚಾರ, ಪೂಜಾ ಪುನಸ್ಕಾರಾದಿ ವಿಷಯಗಳ ಮೊತ್ತವೇ ಶಾಕ್ತ ಮತದ ತಿರುಳು. ಶಾಕ್ತಕ್ಕೆ ತಂತ್ರವೇ ಶಾಸ್ತ್ರವಾಗಿರುವುದರಿಂದತಂತ್ರದ ಮೂಲಕವೇ ನಾವು ಶಾಕ್ತ ದೈವತ್ವದ ಕಲ್ಪನೆ, ಆಚಾರ–ವಿಚಾರಾದಿಗಳ ತಿರುಳನ್ನು ಅರಿಯಲು ಸಾಧ್ಯ."[1] ಹೀಗಾಗಿ ಶಾಕ್ತವೆಂದು ಕರೆಯಲಾಗುವ ಆಚರಣೆಗಳೆಲ್ಲ ತಂತ್ರವನ್ನೇ ಅವಲಂಬಿಸಿರುತ್ತವೆ. ಯಾಕೆಂದರೆ ಮೂಲದಲ್ಲಿ ತಂತ್ರದಿಂದಲೇ ಶಾಕ್ತ ಹುಟ್ಟಿರುವುದರಿಂದ ಶಾಕ್ತದ ಬೇರುಗಳು ತಂತ್ರದಲ್ಲಿಯೇ ಇವೆ. ಇಂದು ನಮ್ಮೆದುರಿಗಿರುವ ಅತ್ಯಂತ ಕ್ಷೀಣವಾಗಿರುವ ಎಳೆಗಳಿಂದ ಇದರ ಹುಡುಕಾಟವನ್ನು ಮಾಡಬಹುದಾಗಿದೆ.

ಹುಣ್ಣಿಮೆ ಮತ್ತು ಅಮಾವಾಸ್ಯೆಗಳು ಪ್ರಾಚೀನ ತಂತ್ರ ಮತ್ತು ಶಾಕ್ತದ ಬಹುದೊಡ್ಡ ಸಂಶೋಧನಾ ಆಕರಗಳಾಗಿವೆ. ಭಾರತದ ಮೂಲೆಮೂಲೆಯಲ್ಲಿ ಹುಣ್ಣಿಮೆಗಳಂದು ನಡೆಯುವ ಆಚರಣೆಗಳು ಇಂದಿಗೂ ಪ್ರಾಚೀನ ಸಾಂಸ್ಕೃತಿಕ ಲೋಕವನ್ನು ಒಡಲೊಳಗಿಟ್ಟುಕೊಂಡಿವೆ. ಇವುಗಳಲ್ಲದೆ ನಾಗಪೂಜೆ[೨]. ಮಣ್ಣಿನ ಪೂಜೆ, ಹುತ್ತಿನ ಪೂಜೆ, ಹಿರೋಡ್ಯಾನ ಆರಾಧನೆ, ಗಂಗಮ್ಮನ ಪೂಜೆನೀರು,ಕೆರೆ, ಹೊಂಡ, ನದಿ, ಬಾವಿ, ಈಗ ಬೋರವೆಲ್, ಜಗಲಿ ಮೇಲೆ ಇಂದಿನ ದಿನಗಳಲ್ಲಿಯೂ ಕಡ್ಡಾಯವಾಗಿ ತುಂಬಿಡುವ ಮಿಳ್ಳಿ[೩]. ಉಡಿಯಕ್ಕಿ ತುಂಬುವದು, ಒಳ್ಳುಕಲ್ಲಿಡುವುದು, ಹಾಲಗಂಬದ ಸ್ಥಾಪನೆ, ಹಾಲಗುಗ್ಗುಳ ತರುವುದು, ಐರಾಣಿ ತರುವುದು, ಅರಿಶಿಣ ಹಚ್ಚುವುದು, ಸುರಗಿ ಸುತ್ತುವುದು, ತೋಳ ನಿಲ್ಲಿಸುವುದು, ಕಂಕಣ ಕಟ್ಟುವುದು, ಅಕ್ಷತೆ ಹಾಕುವುದು, ಭಾಸಿಂಗ ಕಟ್ಟುವುದು, ಸೇಸೆ ಬರೆಯುವುದು, ಎಡಕ್ಕುಂತಕಿಯನ್ನು ಮೊದಲಿಗೆ ಸಂಪ್ರೀತಗೊಳಿಸುವುದು, ಮದುಮಕ್ಕಳಿಗೆ ಕವಡಿ ಆಡಿಸುವುದು, ಮದುಮಕ್ಕಳಿಗೆ ಭೂಮದೂಟ ಮಾಡಿಸುವುದು, ಕೊಯಿಲ್ ಮುರಿಯುವುದು, ಸೆಟಗೆವ್ವನ ಪೂಜೆ, ಘಟ ಕೂಡಿಸುವುದು, ಧಾರ ಕಟ್ಟಿಕೊಳ್ಳುವುದು, ಸತ್ತಾಗ ಹೂಳುವುದು, ಮದುವೆಯಾಗದೆ ಸತ್ತರೆ ಎಕ್ಕಿಗಿಡಕ್ಕೆ ಬಾಸಿಂಗ ಕಟ್ಟುವುದು, ಸತ್ತವರನ್ನು ಜಗಲಿಮೇಲೇ ಕೂಡಿಸಿಕೊಳ್ಳುವುದು, ಎಳ್ಳಚಿಗಳಿಯನ್ನು ವಿಶೇಷ ಸಂದರ್ಭಗಳಲ್ಲಿ ಕೊಡುವುದು, ಕಾಲ್ಲೂಢೀ ತೆಗೆಯುವುದು, ದೃಷ್ಟಿ ತೆಗೆಯುವುದು, ಮೂರು ದಾರಿಗಳಲ್ಲಿ ಇಳಿಸಿ ಭೀಟುವುದು[೪]. ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರಿಗೂ ಕಿವಿ ಊರಿಸುವುದು, ಉಡದಾರ ಕಟ್ಟುವುದು, ಹುಡುಗಿ ಮೈನೆರೆದಾಗ ಎಬ್ಬಿಸುವವರೆಗೂ ಜೊತೆಯಲ್ಲಿ ಕಡ್ಡಾಯವಾಗಿ ಕಟ್ಟಿಗೆಯ ಗೊಂಬೆಯನ್ನು ಜೊತೆಗೆ ಇಟ್ಟುಕೊಳ್ಳಲು ಹೇಳುವುದು, ಕೃಷಿಗೆ ಸಂಬಂಧಿಸಿದಂತೆ ಆಚರಿಸುವ ಅಳ್ ಮಳ್, ಕೂರಿಗಿ ಪೂಜಿ, ಭಣಮಿ ಹಬ್ಬ, ಚರಗ ಚಲ್ಲುವುದು, ಆಷಾಢ ಮಾಸದಲ್ಲಿ ಹೆಣ್ಣು ಗಂಡು ಕೂಡದೆ ಒಂದು ದಿನವಾದರೂ ಪಾಲಿಸುವುದು, ಹೀಗೆ ಅಸಂಖ್ಯಾತ ಸಂಗತಿಗಳು ಶಾಕ್ತವನ್ನು ವಿವರಿಸುವ ಆಕರಗಳಾಗಿ ನಮ್ಮ ಸುತ್ತಲೂ ಕಿಕ್ಕಿರಿದಿವೆ, ಹೆಣ್ಣು, ಭೂಮಿ, ಹುತ್ತ, ಗಿಡ, ಯೋನಿರೂಪದ ನೈಸರ್ಗಿಕ ತಾಣಗಳು, ಕುಂಭ, ಘಟ, ನೀರು ಇವೆಲ್ಲವೂ ಫಲವಂತಿಕೆಯ ಸಂಕೇತಗಳಾಗಿ ಇಂದಿಗೂ ಪೂಜೆಗೊಳ್ಳುತ್ತಿವೆ. ಇವುಗಳಿಂದಲೇ ಮುಂದೆ ಭಾರತೀಯ ದರ್ಶನಗಳು ತಮ್ಮ ದೇಹವಾದಕ್ಕೆ ಪೂರಕವಾದ ತಾತ್ವಿಕತೆಯನ್ನು ಪಡೆದವೆಂಬುದು ಬಹುಮುಖ್ಯವಾದ ಸಂಗತಿಯಾಗಿದೆ.

ಇವುಗಳಲ್ಲದೆ ಶಾಕ್ತ ಮೂಲದ ಪರಂಪರೆಯನ್ನು ಇನ್ನೂ ಕಾಪಾಡಿಕೊಂಡು ಬಂದಿರುವ ಚಾಳಕಾಪುರ, ಉಮ್ಮಾಪುರ, ಭಗದುರಿ, ಜಗತ್, ಮೈಲಾರ, ಕರಕನಳ್ಳಿ, ಉಡಬಾಳ, ಆಳಂದ, ಚಿಂಚೂರು, ಛಾಯಾಭಗವತಿ, ಘತ್ತರಗಿ, ಸನ್ನತಿ, ನಾಗಾವಿ, ಹುಲಿಗಿ, ಬಳಗಾನೂರು, ಹಲಸಿ, ಕಾಳಗಿ, ಸೇಡಂ, ಅರೋಲಿ, ಅಲ್ಲೂರ, ಘಾಟ ಹಿಪ್ಪರಗಿ ಇನ್ನೂ ನಮ್ಮ ಅರಿವಿಗೆ ಬಾರದ ಹಾಗು ಪುರುಷದೈವಗಳ ದರ್ಬಾರಿನಲ್ಲಿ ಕಳೆದುಹೋದ ಎಷ್ಟೋ ಶಾಕ್ತ ಪರಂಪರೆಯ ಹೆಜ್ಜೆ ಗುರುತುಗಳನ್ನು ನಾವು ಶೋಧಿಸಬೇಕಾಗಿದೆ.

ಶಾಕ್ತ ಮತ್ತು ತಾಂತ್ರಿಕ ಪರಂಪರೆಗಳ ಬಗ್ಗೆ ಕರ್ನಾಟಕ ಮತ್ತು ಕನ್ನಡವನ್ನು ಅನುಲಕ್ಷಿಸಿ ತುಂಬಾ ಸಂಶೋಧನಾ ಜವಾಬ್ದಾರಿಗಳಿವೆ. ಕಲ್ಯಾಣ ಕರ್ನಾಟಕದಲ್ಲಿ ಇಂದಿಗೂ ನಮ್ಮಾಚರಣೆಗಳ ಭಾಗವಾಗಿ ಉಳಿದಿರುವ ಕೆಲವು ಸಂಗತಿಗಳನ್ನು ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದ್ದೇನೆ. ಸ್ಥಳಾಭಾವದ ಕಾರಣದಿಂದಈಲೇಖನದಲ್ಲಿ ಕೇವಲ ಹುಣ್ಣಿಮೆಗಳನ್ನು ಮಾತ್ರ ದೃಷ್ಟಿಯಲ್ಲಿಸಿರಿಕೊಂಡು ವ್ಯಾಖಾನಿಸಲು ಪ್ರಯತ್ನಿಸಲಾಗಿದೆ.

ಎಲ್ಲ ಹುಣ್ಣಿಮೆಗಳು ಚಂದ್ರನನ್ನೇ ನೇರವಾಗಿ ಆರಾಧನೆಯ ಮೂಲವೆಂದು ಪರಿಗಣಿಸುತ್ತವೆ. ಹಾಗೂ ಇವೆಲ್ಲವೂ ತಳವರ್ಗದ ಜನರ ಬದುಕಿನೊಂದಿಗೆ ಹೆಚ್ಚಾಗಿ ನಂಟು ಹೊಂದಿರುವುದನ್ನು ನೋಡುತ್ತೇವೆ. ಇಂದು ಇವರನ್ನು ಹಿಂದುಳಿದವರೂ, ಬಡವರೂ ಎಂದು ತೀರ್ಮಾನಿಸಲಾಗಿದೆ. ಆದರೆ ತಳವರ್ಗದವರೇ ಈ ತಾಂತ್ರಿಕ ಪಂಥಗಳ ಒಡೆಯರೂ ಹೌದು, ಅನುಯಾಯಿಗಳೂ ಹೌದು. ಏಕೆಂದರೆ ಅವರೇ ಈ ಪಂಥಗಳ ಜನಕರಾಗಿದ್ದಾರೆ. ಅದರಲ್ಲೂ ತಳವರ್ಗದ ಸ್ತ್ರೀಯರೇ ಆಗಿದ್ದಾರೆ. ಇಂದು

ಅವರೆಲ್ಲ ಬಡವಾಗಿರುವುದರಿಂದ ಮತ್ತು ಅಧಿಕಾರ ಹಾಗೂ ಸಂಪತ್ತಿನ ಕೇಂದ್ರಗಳಿಂದ ದೂರವಾಗಿರುವುದರಿಂದ ಈ ಚಾರಿತ್ರಿಕ ಬದಲಾವಣೆಯಾಗಿದೆ ಎಂಬುದು ತುಂಬಾ ಮುಖ್ಯವಾಗಿ ಗಮನಿಸಬೇಕಾದ ವಿಚಾರವಾಗಿದೆ.

ಪ್ರಾಚೀನ ಕಾಲದಲ್ಲಿ ಫಲವಂತಿಕೆಯನ್ನು ದಯಪಾಲಿಸುವವಳು ಹೆಣ್ಣು ಎಂಬುದನ್ನು ಎಲ್ಲರೂ ತಿಳಿದಿದ್ದರು. ಆ ಕಾಲದಲ್ಲಿ ಸಂಪತ್ತು ಎಂದರೆ ಆಹಾ ಸಂಗ್ರಹಣೆಮತ್ತು ಆಹಾರ ಉತ್ಪಾದನೆಯೇ ಆಗಿತ್ತು, ಚಿನ್ನ, ಬೆಳ್ಳಿ, ನಾಣ್ಯ, ಬ್ಯಾಂಕ, ಕ್ರಿಪ್ಟೋ ಕರೆನ್ಸಿ, ಮುಂತಾದವುಗಳು ಗೊತ್ತಿರದ ಕಾಲದಲ್ಲಿ ಎಲ್ಲ ರೀತಿಯ ಆಹಾರ ಉತ್ಪಾದನೆಗೆ ಮನುಷ್ಯರ ಶ್ರಮವೇ ಮುಖ್ಯ ಪಾತ್ರ ವಹಿಸುತಿತ್ತು. ಹೀಗಾಗಿ ಅಂತಹ ಸಂಪತ್ತನ್ನು ಉತ್ಪಾದಿಸುವ ಮನುಷ್ಯರನ್ನು ಹುಟ್ಟಿಸುವವಳು ಹೆಣ್ಣಾಗಿದ್ದಳು. ಹೀಗಾಗಿ ಹೆಚ್ಚು ಮಕ್ಕಳನ್ನು ಹೆತ್ತು ಕೊಡುವವಳು ಸಾಮಾಜಿಕವಾಗಿ ಗೌರವಿಸಲ್ಪಡುತ್ತಿದ್ದಳು. ಸಿಂಧೂ ನದಿಯ ನಾಗರಿಕತೆಯಲ್ಲಿ ಸಿಕ್ಕಿರುವ ಮಗುವನ್ನು ಕಂಕುಳಲ್ಲಿ ಇಟ್ಟುಕೊಂಡಿರುವ ಮಹಿಳೆಯ ಚಿತ್ರ ಹಾಗು ಸ್ತನಗಳುಳ್ಳ ಚಿತ್ರಗಳು ಇದನ್ನೇ ಹೇಳುತ್ತವೆಂದು ಗುರುತಿಸಲಾಗಿದೆ[5].

ಎಲ್ಲ ಹುಣ್ಣಿಮೆಗಳಲ್ಲಿ ಚಂದ್ರನೇ ಮೂಲ ದೈವವಾಗಿರುವುದರಿಂದ ಚಂದ್ರನ ಪೂಜೆ ಎಲ್ಲ ಹುಣ್ಣಿಮೆಗಳಲ್ಲಿ ಸಾಮಾನ್ಯವಾಗಿರುತ್ತದೆ. ನಮ್ಮ ವರ್ಷಗಳು ಆರಂಭವಾಗುವುದೇ ಚಾಂದ್ರಮಾನ ಯುಗಾದಿಯಿಂದ. ಅಷ್ಟೇ ಅಲ್ಲ ನಮ್ಮವಾರಗಳು ಕೂಡ ಚಂದ್ರನ ಹೆಸರಿನಿಂದಲೇ ಆರಂಭವಾಗುತ್ತವೆ . ಸೋಮವಾರವು ಚಂದ್ರನ ವಾರವೇ ಆಗಿದೆ. ಅದರ ಜೊತೆಗೆ ತಾಂತ್ರಿಕ-ಶಾಕ್ತ ಪಂಥಗಳ ಅನುಯಾಯಿಗಳಲ್ಲಿ ಹೆಚ್ಚಿನ ಜನರೂ ಕೃಷಿಕರೇ ಆಗಿರುವುದರಿಂದ ಹಿಂದಿನ ಕಾಲದಲ್ಲಿ ಕೃಷಿಕೆಲಸಗಳಿಗೆ ಸೋಮವಾರದಂದು ವಾರದ ರಜೆಯಿರುತ್ತಿತ್ತು. ಇದು ನಮ್ಮ ಪೂರ್ವಜರು ಚಂದ್ರನಿಗೆ ನೀಡಿರುವ ಪ್ರಾಮುಖ್ಯತೆಯನ್ನು ತಿಳಿಸುತ್ತದೆ.

ಚಂದ್ರನು ಪ್ರಾಚೀನರಿಗೆ ಗಂಡಸಾಗಿದ್ದನು. ಆದಿಮ ಕಾಲದಲ್ಲಿ ಗಂಡಿನಿಂದ ಮಕ್ಕಳಾಗುತ್ತವೆಂದು ಗೊತ್ತಿರದ ಸಂದರ್ಭದಲ್ಲಿ ಚಂದ್ರನಿಂದಲೇ ಮಕ್ಕಳಾಗುತ್ತವೆ ಎಂದು ನಂಬಲಾಗಿತ್ತು.[6] ಈಗಲೂ ಕಲ್ಯಾಣ ಕರ್ನಾಟಕದ ಭಾಗದಲ್ಲಿ ಚಂದಮಾಮ ಎಂದೇ ಕರೆಯುವುದರ ಹಿಂದೆ ಇದೇ ಭಾವನೆಯ ಪಳೆಯುಳಿಕೆಯನ್ನು ಕಾಣಬಹುದು. ಪೂರ್ಣಚಂದಿರ ಮತ್ತು ಮುಟ್ಟು ಎರಡೂ ತಿಂಗಳಿಗೊಮ್ಮೆ ಆಗುವುದರಿಂದ ಚಂದ್ರನಿಂದಲೇ ಮಕ್ಕಳಾಗುತ್ತವೆ ಎಂದು ಮಹಿಳೆಯ ಗರ್ಭಧಾರಣೆಗೂ ಚಂದ್ರನಿಗೂ ಸಮೀಕರಿಸಲಾಗಿತ್ತು.ಅವನು ಕೊಡುವ ಬೆಳ್ದಿಂಗಳಿನಿಂದಲೇ ಸಸ್ಯಸಮೃದ್ಧಿ, ಅದರಿಂದಲೇ ರಸ, ಆ ರಸವೇ ಜೀವದಾಯಿನಿಯಾದ ಸೋಮರಸ  ಎಂಬ ನಂಬಿಕೆ ಅವರದಾಗಿತ್ತು.ಚಂದ್ರನೇ ರಾತ್ರಿಯ ವೇಳೆಯಲ್ಲಿ ಹಾವಾಗಿ ಬಂದು ಕೂಡುತ್ತಾನೆ ಎಂಬ ನಂಬಿಕೆಯ ಕುರುಹಾಗಿಯೇ ಸಾರ್ವತ್ರಿಕವಾಗಿ ಭಾರತದ ತುಂಬೆಲ್ಲ ನಾಗಪೂಜೆಯ ಕುರುಹುಗಳನ್ನು ಕಾಣುತ್ತೇವೆ.

**ದವನದ ಹುಣ್ಣಿಮೆ:** ದವನದ ಹುಣ್ಣಿಮೆಯು ಏಪ್ರಿಲ್ ಮೇ ತಿಂಗಳಲ್ಲಿ ಬರುತ್ತದೆ. ದಾವಂದ ಹುಣ್ಣಿಮೆಯನ್ನು ಈಗ ಹೆಚ್ಚಿನ ಮೇಲ್ಜಾತಿಯವರು ತುಂಬಾ ಗಂಭಿರವಾಗಿ ತೆಗೆದುಕೊಳ್ಳುವುದಿಲ್ಲ. ಅವರು ಇದನ್ನು ಚೈತ್ರ ಪೂರ್ಣಿಮಾ ಎಂದು ಕರೆಯುತ್ತಾರೆ. ಆದರೆ ತಳವರ್ಗದವರಲ್ಲಿ, ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಇದು ಜೀವಂತವಾಗಿದೆ. ಯುಗಾದಿ ಅಮಾವಾಸ್ಯೆಯ ನಂತರ ಬರುವಈ ಹುಣ್ಣಿಮೆಗೆ ಅವರು 'ಚಂದ್ರನ್ಹುಣ್ಣಿ' ಎಂದೇ ಕರೆಯುತ್ತಾರೆ. ಚಂದ್ರೋದಯ ಆದಮೇಲೆಯೇ ಚಂದ್ರನನ್ನು ನೋಡಿ ಅವನಿಗೆ ಪೂಜೆ ಮಾಡಿ ನೈವೇದ್ಯ ತೋರಿದ ಮೇಲೇಯೇ ಉಣ್ಣುತ್ತಾರೆ. ಆ ನೈವೇದ್ಯಕ್ಕೆ ಗೋಧಿ ಹಿಟ್ಟಿನ ಲ್ಲಿ ಮೂರುಮೂಲೆಯ ಗೋಧಿ ಕಡಬುಗಳನ್ನು ಮಾಡಿ ಉಗಿಯ ಮೇಲೇ ಬೇಯಿಸಿ, ಅದರ ಜೊತೆಗೆ ಸಪ್ಪನಬ್ಯಾಳಿ ಮಾಡಿ ಉಪವಾಸ ಬಿಡುತ್ತಾರೆ.

**ಆಗೇದ ಹುಣ್ಣಿಮೆ:** ಇದನ್ನು ಮರಾಠಿಗರು ಆಹೇವ ಹುಣ್ಣಿಮೆ ಎಂದೂ ಕರೆಯುತ್ತಾರೆ. ಕಲ್ಯಾಣ ಕರ್ನಾಟಕದಲ್ಲಿ ಹಿಂದೆ ಇದನ್ನು ಮುತ್ತೈದಿ ಹುಣ್ಣಿ ಎಂದು ಕರೆಯುತ್ತಿದ್ದರು.  ಮೇಲ್ವರ್ಗದವರು ಇದನ್ನು

ಅರ್ಧನಾರೀಶ್ವರ ಹುಣ್ಣಿಮೆ ಎಂದು ಕರೆಯುತ್ತಾರೆ. ಈಗೀಗ ಇದನ್ನು ಬುದ್ಧಪೂರ್ಣಿಮಾ ಎಂದು ಕರೆಯುತ್ತಿದ್ದಾರೆ (ಸಿದ್ಧಾರ್ಥನ ತಾಯಿ ಮಹಾಮಾಯಾ ಕೂಡ ಹುಣ್ಣಿಮೆಯಂದೇ ವರ ಪಡೆದ ಕತೆಯನ್ನು ಇಲ್ಲಿ ಗಮನಿಸಬಹುದು). ಮೂಲ ಮಾತೃಪ್ರಧಾನ ರೂಢಿಯಿಂದ ಹೇಗೆ ಚಾರಿತ್ರಿಕವಾಗಿ ಬದಲಾಗುತ್ತಾ ಬಂದಿದೆಯೆಂಬುದು ಈ ಹೆಸರುಗಳಿಂದ ತಿಳಿಯಬಹುದಾಗಿದೆ. ನಾಗರಿಕತೆಯ ಆರಂಭದಲ್ಲಿ ಅಸ್ತಿತ್ವದಲ್ಲಿಲ್ಲದ ವಿವಾಹ ಸಂಸ್ಥೆಯ ಬಗ್ಗೆಯೂ ಈ ಹುಣ್ಣಿಮೆಯ ಹೆಸರಿನ ಚಲನೆ ಹೇಳುತ್ತದೆ. ಏಕೆಂದರೆ ರಂಡಿ ಹುಣ್ಣಿಮೆಯ ಸಂದರ್ಭದಲ್ಲಿ ಭೂಮಿತಾಯಿ ತನ್ನ ಎಲ್ಲ ಫಸಲನ್ನು ಕೊಟ್ಟು ನಿರಾಳವಾದಾಗ ಅವಳು ಗಂಡನನ್ನು ಕಳೆದುಕೊಳ್ಳುತ್ತಾಳೆ. ಅದರ ನಂತರ ನಾಲ್ಕು ತಿಂಗಳಿಗೆ ಅವಳು ಪುನ ಮುತ್ತೈದೆಯಾಗುತ್ತಾಳೆ ಎಂದು ನಂಬಲಾಗಿದೆ. ಇದಕ್ಕೆ ಎಲ್ಲಮ್ಮನ ಕತೆಯನ್ನೂ ಜೋಡಿಸಲಾಗಿದೆ. ಎಲ್ಲಮ್ಮನ ಜೀವಂತ ಪಳೆಯುಳಿಕೆಯ ರೂಪದಲ್ಲಿರುವ ಜೋಗತಿಯರ ಬಳೆಗಳನ್ನು ಮುತ್ತೈದೆಯ ಸಂಕೇತವಾಗಿ ಈಹುಣ್ಣಿಮೆಯಂದು ಧರಿಸಲಾಗುತ್ತದೆ.[೭]

**ಕಾರ ಹುಣ್ಣಿಮೆ:** ಕಾರ್ ಹುಣ್ಣಿಮೆ ಪದವೇ ಹೇಳುವಂತೆ ಕಾರ್ಮೋಡ ತುಂಬಿದ ಆಕಾಶ, ಮಳೆ,ಬಿತ್ತನೆಗೆ ಪೂರಕವಾದ ವಾತಾವರಣವಿರುತ್ತದೆ. ಮುಂಗಾರು ಬಿತ್ತನೆಯ ಈ ಕಾಲದಲ್ಲಿ ಈ ಹುಣ್ಣಿಮೆಯು ರೈತರ ಬದುಕಿನ ಮುನ್ಸೂಚಿಯಾಗಿರುತ್ತದೆ. ಭೂಮಿಯ ಫಲವಂತಿಕೆಯ ಕಾರಣಕ್ಕಾಗಿ ಎಲ್ಲ ಮಹಿಳೆಯರು ಕಾರ್ಹುಣ್ಣಿಮೆಯ ಹಿಂದಿನ ದಿನ ಪೂರ್ತಿ ಉಪವಾಸವಿರುತ್ತಾರೆ. ಈ ದಿನವನ್ನು ಹೊನ್ನುಗ್ಗಿ ಎಂದು ಕರೆಯುತ್ತಾರೆ. ರಾತ್ರಿ ಚಂದ್ರ ಬಂದಮೇಲೆ ಅವನಿಗೆ ಜ್ವಾಳದ ಕಿಚಡಿ, ಕುಸುಬಿಹಾಲಿನಿಂದ ಮಾಡಿದ ಹುಗ್ಗಿಯನ್ನು ತೋರಿ ನಂತರ ಉಣ್ಣುತ್ತಾರೆ. ಚಂದ್ರನು ಹೆಣ್ಣುಮಕ್ಕಳಿಗೆ ಸಂತಾನ ಫಲವನ್ನು ಕೊಟ್ಟರೆ, ಭೂಮಿತಾಯಿಗೆ ಬೆಳೆಯ ಫಸಲನ್ನು ಕೊಡುತ್ತಾನೆ ಎಂಬ ನಂಬಿಕೆ ಇಲ್ಲಿ ಕೆಲಸ ಮಾಡುತ್ತದೆ. ಮರುದಿನ ಹುಣ್ಣಿಮೆಯಂದು ಮನೆ ಎಲ್ಲ ದನಗಳ (ಧನದ ಮೂಲ ದನಗಳೇ ಆಗಿದ್ದವು) ಮೈತೊಳೆದು ಪೂಜೆ ಮಾಡಿ ಇಡೀ ಊರಲ್ಲಿ ಮೆರೆಸಿಕೊಂಡು ಬರುವ ಸಂಭ್ರಮವು ಮುಂದಿನ ಫಸಲನ್ನು ಪಡೆಯಲು ನಡೆಸುವ ತಂತ್ರದ ಭಾಗವಾಗಿಯೇ ಬರುತ್ತದೆ. ಜೊತೆಗೆ ಕೂರಿಗಿ, ಕುಂಟಿ, ಪಲಗ, ಚಡ್ಡಿ, ತಾಳ, ನೇಗಿಲು, ರುಮ್ಮಾ, ಮಿಣಿ, ಚಬಕಾ, ಭಂಡಿ, ನೊಗ, ಜತಗಿ, ಎಡಿದಿಂಡು, ಎಡಿಪಲಗ, ಖುರಪಿ, ಕುಡಗೋಲು, ಕೊಡಲಿ, ಇತ್ಯಾದಿ ಕೃಷಿ ಉಪಕರಣಗಳಿಗೂ ಪೂಜೆ ಸಲ್ಲುತ್ತದೆ. ಹುಣ್ಣಿಮೆಯ ಮರುದಿನ ಕರಿಯ ನಿಮಿತ್ತ ಸೀತ್ನಿ ಘಾರಗಿ ಕಡ್ಡಾಯವಾಗಿ ಮಾಡಲಾಗುತ್ತದೆ. ರುತುಮಾನದ ಜೊತೆಗೆ ಸರಿಯಾದ ಆಹಾರ ಕ್ರಮವೂ ವೈಜ್ಞಾನಿಕವಾಗಿ ಇಲ್ಲಿ ಪಾಲಿಸಲ್ಪಡುತ್ತಿತ್ತು.

**ಕೊಟಗ್ಹುಣ್ಣಿ:** ಕೊಟಗ್ಹುಣ್ಣಿಯನ್ನು ಇಂದು ದನಗಳನ್ನು ಕಟ್ಟುವ ಕೊಟ್ಟಿಗೆಯೆಂದೇ ಭಾವಿಸಲಾಗಿದೆ. ಅದರೆ ಆದಿಮ ಕಾಲದಲ್ಲಿ ಕೋಟವ್ವೆ ಅಥವಾ ಕೊರವ್ವೆ ಎಂದು ಪೂಜಿಸಿಕೊಳ್ಳುತ್ತಿದ್ದ ಇವಳು ದ್ರಾವಿಡರ ಮತೃಸಮಾಜದ ಹಿರಿಯ ನಾಯಕಿಯಾಗಿದ್ದಾಳೆ. ತಮಿಳು ವಾಗ್ಮಯದಲ್ಲಿ ಇವಳ ಉಲ್ಲೇಖ ಇದೆ. ರಾಂಚಿ ಥೇರೆಯವರು ಇವಳನ್ನು ಕುರಿತು ಇವಳು ನಗ್ನ ದೇವತೆಯಾಗಿದ್ದಳು ಎಂದು ಹೇಳುತ್ತಾರೆ.[೮] ದಕ್ಷಿಣ ಭಾರತದ ಮಾತೃದೇವತೆಯಾದ ಇವಳನ್ನು ಅನಂತರದಲ್ಲಿ ಶಿವನ ಹೆಂಡತಿ ಪಾರ್ವತಿಯಲ್ಲಿ ಲೀನಗೊಳಿಸಲಾಯಿತು. ಈ ನಗ್ನ ಪರಂಪರೆಯು ಮೊಂದೆ ಲಜ್ಜಾಗೌರಿಯ ಮುಖಾಂತರ ಅಮೂರ್ತದಿಂದ ಮೂರ್ತದೆಡೆಗೆ ಹೊರಳಿತು. ಗುಪ್ತರನ್ನು ಒಳಗೊಂಡಂತೆ ಅವರ ನಂತರದ ಕಾಲಘಟ್ಟದಲ್ಲಿ ಇಂತಹ ತಾಯಿ ಮೂಲದ ಪಂಥಗಳನ್ನು ಪ್ರಭುತ್ವಗಳು ಮೂಲೆಗೆ ತಳ್ಳಿದವು. ಇಂತಹ ಗುಪ್ತ ಪಂಥಗಳನ್ನು ತುಚ್ಛೀಕರಿಸಲಾಯಿತು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಸಮಕಾಲೀನತೆಗೆ ತೆರೆದುಕೊಳ್ಳದ ಈ ತಾಂತ್ರಿಕ–ಶಾಕ್ತ ಪಂಥಗಳು ನಿಧಾನವಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು. ವಚನಕಾರ್ತಿಸೂಳೆ ಸಂಕವ್ವೆ ಇದೇ ಪಂಥಕ್ಕೆ ಸೇರಿದವಳಾಗಿದ್ದಳು. ಫಲವಂತಿಕೆಯ ಕಾರಣವಾಗಿ ನಗ್ನ ಸ್ತ್ರೀಯನ್ನು ಪೂಜಿಸುವ ಪ್ರಾಚೀನರ ಸಣ್ಣ ಎಳೆಯಾಗಿ ಕೊಟಗ್ಹುಣ್ಣಿ ಹಾಗೂ ಕೊಟಗಿ ಪೂಜೆಗಳು ಇಂದಿಗೂ ನಮ್ಮ ನಡುವೆ ಚಾಲ್ತಿಯಲ್ಲಿವೆ. ಕೊಟಗ್ಯಾಳ ಎಂಬ ಊರು ಕೂಡ ಬೀದರನಲ್ಲಿರುವುದು ವಿಶೇಷ.

**ನೂಲು ಹುಣ್ಣಿಮೆ:** ಮಾನವ ಸಮಾಜಗಳು ಶಿಲಾಯುಗದ ಹಂತದಿಂದ ನಿಧಾನವಾಗಿ ನಾಗರಿಕತೆಯ ಹೆಜೆಯನ್ನುಇಡುತ್ತಾ ಹೋದವು ಅದರಲ್ಲಿ ಬಟ್ಟೆಯ ನೇಯ್ಗೆ ಕೂಡ ಒಂದು. ಫಸಲು ಬೆಳೆ ಇತ್ಯಾದಿಗಳ ನಿಕಟ ಸಂಪರ್ಕದಲ್ಲಿ ಮಹಿಳೆಯು ನಿಧಾನವಾಗಿ ಹತ್ತಿ ಬೆಳೆಯ ಜೊತೆಗೆ ನೂಲುವುದನ್ನೂ ಕಂಡುಹಿಡಿದಳು. ಅದರ ಆದಿಮ ನೆನಪಿಗಾಗಿ ನೂಲು ಹುಣ್ಣಿಮೆ ಆರಂಭಗೊಂಡಿತು, ಆದರೆ ಇಂದು ಅವಳೇ ಅಬಲೆ ಎಂದು ಅವಳಿಗೆ ರಕ್ಷಣೆ ಕೊಡುವ ಅವಮಾನಕರ ರೀತಿಯಲ್ಲಿ ಇದನ್ನು ಆಚರಿಸಲಾಗುತ್ತಿದೆ. ಅದನ್ನಿಂದು ರಾಖಿ ಹುಣ್ಣಿಮೆ ಎಂದು ಕರೆಯುತ್ತಿದ್ದಾರೆ. ಮಾನವ ಜನಾಂಗಕ್ಕೇ ಬಟ್ಟೆ ಉಡಿಸಿದವಳಿಗೆ ನಡುಬೀದಿಯಲ್ಲಿ ಹುಟ್ಟುಡುಗೆಯಲ್ಲಿ ನಿಲ್ಲಿಸಲಾಗುತ್ತಿದೆ.

**ಜೊಕ್ಯಾನ ಹುಣ್ಣಿ:** ಕನ್ನಡ ಸಾಹಿತ್ಯ ಹಾಗು ಜನಪದ ಸಾಹಿತ್ಯದಲ್ಲಿ ಜೋಕುಮಾರನ ಕುರಿತು ಬಹಳಷ್ಟು ಕೃತಿಗಳು ಬಂದಿವೆ. ಬೀದರ್ ಜಿಲ್ಲೆಯಲ್ಲಿ ಅಳ್ ಮಳ್ ಎಂದು ಆಚರಿಸುವ ವಿಶೇಷ ಆಚರಣೆ ಇವನ ದುರಂತ ಸಾವಿನ ಶೋಕಾಚರಣೆಯೇ ಆಗಿದೆ. ಆದರೆ ವಿದ್ವತ್ ಲೋಕದ ಕಣ್ಣಿಗೆ ಇದು ಕಂಡಿಲ್ಲ ಇದು ದಾಖಲಾಗಬೇಕಾಗಿದೆ. ಜೇಷ್ಠಾದೇವಿಯ (ಸೆಟವಿ) ಪುತ್ರನಾದ ಇವನನ್ನು ತಲಸಮುದಾಯಗಳು ಇನ್ನೂ ಪೂಜಿಸುತ್ತವೆ. ಫಲವಂತಿಕೆಯ ಪ್ರತೀಕನಾದ ಇವನ ಅಂಗಕ್ಕೆ ಮೆತ್ತಿದ ಬೆಣ್ಣೆಯನ್ನು ಎಲ್ಲ ಜಾತಿ ಜನಾಂಗದವರೂ ತಮ್ಮ ಮಕ್ಕಳಿಗೆ ತಿನಿಸುತ್ತಾರೆ. ಆದರಿಂದು ಇದು ಅನಂತನ ಹುಣ್ಣಿಮೆ ಎಂದು ವೈದಿಕೀಕರಣಗೊಂಡಿದೆ.[ಗಂ]

**ಸೀಗೀ ಹುಣ್ಣಿ:** ಈ ಹುಣ್ಣಿಮೆಯನ್ನು ಬೀದರ ಜಿಲ್ಲೆಯಲ್ಲಿ ಮಾತ್ರ ವಿಶಿಷ್ಟ ರೀತಿಯಲ್ಲಿ ಆಚರಿಸಲ್ಪಡುತ್ತದೆ. ಚಂದ್ರನ ಆರಾಧನೆಯನ್ನೇ ಮುಖ್ಯವಾಗಿಟ್ಟುಕೊಂಡು ಆಚರಿಸುವ ಈ ಹುಣ್ಣಿಮೆಯಲ್ಲಿ ಇಂದಿಗೂ ಮಹಿಳೆಯರೇ ಕೇಂದ್ರಸ್ಥಾನದಲ್ಲಿದ್ದಾರೆ. ಅವರ ಅಸ್ತಿತ್ವ ಪ್ರಾಮುಖ್ಯತೆಯ ಭಾಗವಾಗಿಯೇ ಇದು ಆಚರಿಸಲ್ಪಡುತ್ತದೆ. ಹುಣ್ಣಿಮೆಗೆ ಏಳು ದಿನಗಳಿರುವಾಗ ಆರಂಬವಾಗುವ ಸೀಗೀ ಪೂಜೆ ಸೀಗೀ ಹುಣ್ಣಿಮೆಯ ದಿನದಂದು ಮುಗಿಯುತ್ತದೆ. ಮನೆಯ ಹೊರಗಿನ ಗೋಡೆಯ ಮೇಲೆ ಆಕಳ ಸೆಗಣಿಯಿಂದ ಮೊದಲ ದಿನ ಚುಕ್ಕಿ ಚಂದ್ರಾಮನನ್ನು ಇಳಿಸುತ್ತಿದ್ದರು. ಈಗೀಗ ಸೂರ್ಯ ಚಂದ್ರರನ್ನು ಇಳಿಸುತ್ತಾರೆ. ಇಲ್ಲಿ ಸೂರ್ಯನು ನಂತರದಲ್ಲಿ ಸೇರಿಕೊಂಡಿದ್ದಾನೆ. ನಂತರ ಮರುದಿನ ಹೆಂಡಿಯನ್ನು ದುಂಡಗಾಗಿ ಬಡಿದು ಅದರಲ್ಲಿ ಬೆರಳಿನಿಂದ ತೂತು ಮಾಡಿ ಅದನ್ನು ಪೂಜಿಸುತ್ತಾರೆ.ಸ್ತ್ರೀ ಜನನಾಂಗದ ಸಂಕೇತವಾಗಿ ಇದನ್ನು ಪೂಜಿಸುತ್ತಾರೆ. ಗಂಗಿ ಗೌರಿಯರ ಚಿತ್ರಗಳನ್ನು ಮೂರನೆಯ ದಿನಪೂಜಿಸುತ್ತಾರೆ. ನಂತರದಲ್ಲಿ ಬಾಳೆತೋಟ, ಇತ್ಯಾದಿ ಬೆಳೆಗಳ ಚಿತ್ರವನ್ನು ಹೀಗೆ ಏಳು ದಿನಗಳ ಕಾಲ ಪೂಜಿಸಿ ಸೀಗೀ ಹಾಡುಗಳನ್ನು ಹಾಡಿ ನೈವೇದ್ಯ ತೋರಿ ಸರಿರಾತ್ರಿಯ ನಂತರ ಅವರವರ ಮನೆಗಳಿಗೆ ತೆರಳುತ್ತಾರೆ. ಹುಣ್ಣಿಮೆಯ ದಿನ ಉಪವಾಸವಿದ್ದು ರಾತ್ರಿ ಚಂದ್ರನನ್ನು ನೋಡಿದ ನಂತರ ಅವನನ್ನು ಪೂಜಿಸಿ ಉಪವಾಸವನ್ನು ಬಿಡುತ್ತಾರೆ. ಸೀಗೆವ್ವ ಶಿವನ ಎರಡನೆಯ ಹೆಂಡತಿ ಅಥವಾ ಸಣ್ಣಕ್ಕಿ ಎಂದು ನಂಬುತ್ತಾರೆ.

**ಗೌರಿ ಹುಣ್ಣಿ:** ಗೌರಿ ಶಿವನ ಮೊದಲ ಹೆಂಡತಿ ಎಂದು ನಂಬುತ್ತಾರೆ, ಚಂದ್ರಗುತ್ತಿಯ ಬೆತ್ತಲೆ ಸೇವೆಯ ಜಾತ್ರೆಯೂ ಈ ಹುಣ್ಣಿಮೆಯಂದೇ ನಡೆಯುತ್ತದೆ. ಗೌರಿ ಕುಳ್ಳಿಗಳ ಪೂಜೆ ಪ್ರತಿಯೊಂದು ಹೆಣ್ಣುಮಗುವಿನ ಗರ್ಭದ ಸಂಕೇತವಾಗಿ ಇದೆ. ಅದನ್ನು ಯಾವಾಗಲೂ ಖಾಲಿ ಇಡಬಾರದು ಎಂದು ನಂಬುತ್ತಾರೆ. ಹುಣ್ಣಿಮೆಯ ಮುಂಚಿನ ಏಳು ದಿನಗಳ್ಲ ಕಾಲ ಜಗಲಿ, ಅಡಕಿಲ, ಬೀಸುವಕಲ್ಲು ಒಳಕಲ್ಲು, ಬಾಗಿಲು, ಯಾವುದಾದರೂ ನದಿಯ ಸಮೀಪ ಅಥವಾ ಭಾವಿದಂಡೆಮೇಲೆ ಇಟ್ಟು ಪೂಜಿಸುತ್ತಾರೆ. ಇಂತಹ ಸ್ಥಳಗಳಿಗೆ ಹೋಗುವಾಗ ಮಾತನಾಡುವುದಿಲ್ಲ ಏಕಾಗ್ರಚಿತ್ತದಿಂದ ಈ ಕೆಲಸವನ್ನು ಮಾಡಬೇಕಿರುವುದು ಹಾಗು ತಾಂತ್ರಿಕ ಪಂಥದ ನಿಯಮಗಳು ಇದರ ಹಿನ್ನೆಲೆಯಾಗಿರುತ್ತದೆ. ಹೀಗೆ ಹೋದಾಗ ಕೂಡಿಸುವ ಕುಂಯ್ಯ ಹಾಗು ಅವನ ಹೆಂಡತಿಯರನ್ನು ಮಣ್ಣಿನಿಂದ ಮಾಡಿ ಅವನು ಸತ್ತನೆಂದು ಅಳುತ್ತಾರೆ. ಹೀಗೆ ಅಳುವಾಗ ಲೈಂಗಿಕ ಪದಪ್ರೋಯೋಗ ಪುಖಾನುಪುಂಖವಾಗಿ ತರುತ್ತಾರೆ. ಗೌರಿಯ ಶಿವನ ಜೀವನವನ್ನು ಕುರಿತ ಹಾಡುಗಳನ್ನೂ ವಾಪಸ್ಸು ಬರುವಾಗ ಹಾಡುತ್ತಾರೆ. ಇವೆಲ್ಲವೂ ಆದಿಮ ಕಾಲದ ಶಾಕ್ತದ ಎಳೆಗಳಾಗಿ ನಮ್ಮ ಆಚರಣೆಯಲ್ಲಿ ಇಂದಿಗೂ ಇವೆ.

**ರಂಡಿ ಹುಣ್ಣಿಮೆ:** ಕನ್ನಡ ಜನಪದರಲ್ಲಿ ರಂಡಿ ಪದಕ್ಕೆ ಎರಡು ಅರ್ಥಗಳಿವೆ. ಒಂದು ವಿಧವೆ ಎಂದಾದರೆ ಇಟ್ಟುಕೊಂಡವಳು ಅಥವಾ ವೇಶ್ಯೆ ಎಂದು. ವಿವಾಹ ಸಂಸ್ಥೆಯ ಪೂರ್ವದ ಕಾಲಘಟ್ಟದ ಹೆಣ್ಣನ್ನು ಪೂಜಿಸುವ ಸಂಕೇತ ಇದಾಗಿದೆ. ಸದ್ಯ ಎಲ್ಲಮ್ಮನ ಸಂಪ್ರದಾಯದವರು ಇದನ್ನು ಸಾಂಪ್ರದಾಯಿಕವಾಗಿ ಇನ್ನೂ ಆಚರಿಸುತ್ತಾರೆ. ಇದನ್ನು ಭಂಡಾರ ಹುಣ್ಣೀಮೆ ಎಂದು ನಂತರದಲ್ಲಿ ಪುರುಷ ವೀರ್ಯದ ಸಂಕೇತವಾಗಿ ಕರೆಯಲಾಗಿದೆ. ತಾಯಾಳಿಕೆಯಿಂದ ಸಮಾಜವು ತಂದೆಯಾಳಿಕೆಗೆ ಹೊರಳುವಾಗಿನ ಸಂದರ್ಭದಲ್ಲಿ ಈ ಹುಣ್ಣಿಮೆಯ ಹೆಸರು ಬದಲಿಯಾಗಿದೆ. ಈನ್ನೂ ಮುಂದುವರೆದು ವೈದಿಕೀಕರಣಗೊಂಡು  ಈಗ ಈ ಹುಣ್ಣಿಮೆಗೆ ಹೊಸ್ತಿಲ ಹುಣ್ಣಿಮೆ ಎಂದು ಕರೆಯುತ್ತಿದ್ದಾರೆ.

**ಕಾದಪ್ ಹುಣ್ಣಿ:** ಬೀದರನಲ್ಲಿ ಇದನ್ನು ಜನಪದರು ಕಾದಪ್ ಹುಣ್ಣಿ ಎಂದೇ ಕರೆಯುತ್ತಾರೆ. ಕಾದಪ್ ಪದವು ಕಂದರ್ಪನಿಂದ ಬಾಯ್ಮಾತಿನಲ್ಲಿ ಕಾದಪ್ ಆಗಿದೆ. ಮನ್ಮಥನು ಬೇಟೆಯಾಡಲು ಹೋಗುತ್ತಾನೆ ಎಂದು ನಂಬಿದ್ದಾರೆ. ಮಾವು, ಬೇವು ಮುಂತಾದ ಇಡೀ ನಿಸರ್ಗವು ಚಿಗುರನ್ನು ನೀಡುವ ಕಾಲ ಇದು. ಇದನ್ನೇ ಈಗ ಬನದ ಹುಣ್ಣಿಮೆ ಎಂದು ಸಂಸ್ಕೃತೀಕರಿಸಲಾಗಿದೆ. ಬೀದರನಲ್ಲಿ ಕಾದಪನು ಲಡಾಯಿಯಾಡಲು ಹೋಗಿದ್ದಾನೆ ಎನ್ನುತ್ತಾರೆ. ಸಮಸ್ತ ಸಸ್ಯರಾಶಿಗೆ ಚಿಗುರನ್ನು ತರುವ ಚಂದ್ರನನ್ನು ಕುರಿತು ಈ ಆಚರಣೆ ನಡೆಯುತ್ತದೆ.

**ತೆನಿಕಟ್ ಹುಣ್ಣಿ:** ಇದನ್ನು ಈಗ  ಭಾರತ್ ಹುಣ್ಣಿಮೆ ಎಂದು ಬದಲಾಯಿಸಲಾಗಿದೆ.  ಜೋಳ, ಗೋಧಿ, ಅಗಸಿ, ಕುಸುಬಿ ಇತ್ಯಾದಿ ತೆನೆಗಳು ಕಾಳು ತುಂಬಿರುತ್ತವೆ, ರಾಶಿಯಾಗಿರುವುದಿಲ್ಲ. ಹುಣ್ಣಿಮೆಯ ಹಿಂದಿನ ದಿನ ಅಂಗಳದಲ್ಲಿ ಚಂದ್ರಬಂದಮೇಲೆ ಅವುಗಳನ್ನಿಟ್ಟು ಪೂಜಿಸಿ, ಎಲ್ಲ ತೆನೆಗಳನ್ನು ಮನೆಯ ಬಾಗಿಲಿನ ತೋರಣಕ್ಕೆ ಕಟ್ಟಿ ಚಂದ್ರನಿಗೆ ಪೂಜಿಸಿ, ಗಂಗಾಳವನ್ನು ಬಾರಿಸುತ್ತ ಹೊರಗಿನ ದೇವ್ರು ಒಳಗೆ ಹೋಗ್ಲಿ ಒಳಗಿನ ದೇವ್ರು ಹೊರಗ ಹೋಗ್ಲಿ ಎಂದು ಜಗಲಿಯ ದೇವರುಗಳನ್ನೆಲ್ಲ ಹೊರತರುತ್ತಾರೆ. ಇಷ್ಟೇ ಅಲ್ಲ ಅವರವರ ಪ್ರೇಮಿಗಳ ಕುರಿತು ನಕರಿ (ಚೇಸ್ಟೆ) ಕೂಡ ಮಾಡುತ್ತಾರೆ. ನಮ್ಮ ಪ್ರಾಚೀನ ಹಿರಿಯರು ಅಪ್ಪಟ ಭೌತವಾದಿಗಳಾಗಿದ್ದರು ಎನ್ನುವುದಕ್ಕೆ ಇದೊಂದು ಸಣ್ಣ ಉದಾಹರಣೇ ಅಷ್ಟೆ. ಕಲಬುರಗಿ ಭಾಗದಲ್ಲಿ ಇದನ್ನು ಮುದ್ದೆ ಹುಣ್ಣಿ ಎಂದೂ ಕರೆಯುತ್ತಾರೆ. ಸಕಲ ಹೊಸ ಧಾನ್ಯಗಳ ಸಹಿತ ಚಂದ್ರ ಮನೆಯೊಳಗೆ ಬರುತ್ತಾನೆ, ಹಾಗೆಯೇ ಕಾದಲು ಹೋದ ಕಂದರ್ಪನೂ ಮನೆಯೊಳಗೆ ಬರುತ್ತಾನೆ ಎಂದು ಮಹಿಳೆಯರು ನಾಚುವ ಸಂಗತಿ ಇಂದಿಗೂ ಉಳಿದುಬಂದಿರುವುದು ಭೂಮಿ–ಬೆಳೆ, ಹೆಣ್ಣು–ಸಂತಾನೋತ್ಪತ್ತಿ ಇವುಗಳ ಸಮೀಕರಣವನ್ನು ತಿಳಿಸುತ್ತದೆ.

**ಹೋಳಿ ಹುಣ್ಣಿ:** ಇದನ್ನು ಗಂಡಸರ ಹಬ್ಬ ಎಂದು ಕರೆಯುತ್ತಾರೆ. ಆದರೆ ಜನಪದರಲ್ಲಿ ಇದು ಹೆಣ್ಣುಮಕ್ಕಳ ಹಬ್ಬವೇ ಆಗಿದೆ. ಈ ದಿನದಂದು ನಡೆಯುವ ಅಶ್ಲೀಲ ಬೈಗುಳ ಹಾಗು ಒಕಳಿ ಆಟಗಳು ಆದಿಮ ಸಮಾಜದಲ್ಲಿದ್ದ ಗಂಡು ಹೆಣ್ಣಿನ ನಡುವಿನ ಮುಕ್ತ ಸಂಬಂಧವನ್ನೇ ಪ್ರತಿಧಿಸುತ್ತವೆ. ಇದಕ್ಕಿಂತಲೂ ಮಿಗಿಲಾಗಿಕಲಬರಗಿಯ ಭಾಗದಲ್ಲಿ ಅಂಬಾಬಾಯಿಗೆ, ಎಲ್ಲಮ್ಮನಿಗೆ ಇಂದೇ ಹಡಗಿ ತುಂಬುತ್ತಾರೆ. ಯಥಾಪ್ರಕಾರ ರಾತ್ರಿ ಚಂದ್ರೋದಯವಾದ ಮೇಲೆ ಚಂದ್ರನಿಗೆ ಪೂಜೆ ಸಲ್ಲುತ್ತದೆ. ಹೀಗೆ ವಿಶ್ವದಾದ್ಯಂತ ಹುಣ್ಣಿಮೆಗೆ ಸಂಬಂಧಪಟ್ಟ ಆಚರಣೆಗಳನ್ನು ಗಮನಿಸಿದರೆ ಬಹುತೇಕ ಆಚರಣೆಗಳು ತಂತ್ರ ಮತ್ತು ಶಾಕ್ತಕ್ಕೇ ಹೋಗಿ ನಿಲ್ಲುತ್ತವೆ. ಈಕೆಳಗಿನ ಪಟ್ಟಿಯು ಹುಣ್ಣಿಮೆಗಳ ಚಾರಿತ್ರಿಕ ಚಲನೆಯನ್ನು ಗುರುತಿಸಲು ನೆರವಾಗುತ್ತದೆ.

| ಕ್ರ.ಸಂ | ಮಾಸ | ತಿಂಗಳು | ಹುಣ್ಣಿಮೆ ಹಿಂದಿನ ಹೆಸರು | ಹುಣ್ಣಿಮೆ ಇಂದಿನ ಹೆಸರು | ಇಂದಿನ ಪೂಜಾವಿಧಾನ |
|---|---|---|---|---|---|
| ೧ | ಚೈತ್ರ | ಏಪ್ರಿಲ್/ಮೇ | ದವನದ | ಚೈತ್ರ ಪೂರ್ಣಿಮಾ/ ಬುದ್ಧ ಪೂರ್ಣಿಮಾ | |
| ೨ | ವೈಶಾಖ | ಮೇ/ಜೂನ್ | ಆಗೇದ | | |
| ೩ | ಜೇಷ್ಠ | ಜೂನ್/ಜುಲೈ | ಕಾರ್ ಹುಣ್ಣಿ | ಕಾರ/ಫಲ/ ಭೂಮಿ ಹುಣ್ಣಿಮೆ | ವಟಸಾವಿತ್ರೀ ವ್ರತ |
| ೪ | ಆಷಾಢ | ಜುಲೈ/ಆಗಸ್ಟ್ | ಕೊಟಗ್ಹುಣ್ಣಿ | ಕಡ್ಲಿಗಡಬ ಹುಣ್ಣಿ | |
| ೫ | ಶ್ರಾವಣ | ಆಗಸ್ಟ್/ಸೆಪ್ಟೆಂಬರ್ | ನೂಲು ಹುಣ್ಣಿ | ರಾಖಿ ಹುಣ್ಣಿ | |
| ೬ | ಭಾದ್ರಪದ | ಸೆಪ್ಟೆಂಬರ್/ಅಕ್ಟೋಬರ್ | ಜೋಕ್ಯಾನ ಹುಣ್ಣಿ | ಅನಂತನ ಹುಣ್ಣಿಮೆ | ಉಮಾಮಹೇಶ್ವರ ವೃತ |
| ೭ | ಆಶ್ವೀಜ | ಅಕ್ಟೋಬರ್/ನವೆಂಬರ್ | ಸೀಗೀ ಹುಣ್ಣಿ | ಸೀಗಿ | |
| ೮ | ಕಾರ್ತೀಕ | ನವೆಂಬರ್/ಡಿಸೆಂಬರ್ | ಗೌರಿ ಹುಣ್ಣಿ | ಗೌರಿ | |
| ೯ | ಮಾರ್ಗಶಿರ | ಡಿಸೆಂಬರ್/ಜನವರಿ | ರಂಡಿ/ಭಂಡಾರ ಹುಣ್ಣಿ | ಹೊಸ್ತಿಲ ಹುಣ್ಣಿ | |
| ೧೦ | ಪುಷ್ಯ | ಜನವರಿ/ಫೆಬ್ರವರಿ | ಕಾದಪ್ ಹುಣ್ಣಿ | ಬನದ ಹುಣ್ಣಿ | ಬನಶಂಕರಿವೃತ |
| ೧೧ | ಮಾಘ | ಫೆಬ್ರವರಿ/ಮಾರ್ಚ್ | ತೆನಿಕಟ್ಟ್ ಹುಣ್ಣಿ | ಭಾರತ ಹುಣ್ಣಿಮೆ/ವ್ಯಾಸ ಪೂರ್ಣಿಮಾ | |
| ೧೨ | ಫಾಲ್ಗುಣ | ಮಾರ್ಚ್/ಏಪ್ರಿಲ್ | ಹೋಳಿಹುಣ್ಣಿ | ಹೋಳಿ | |

**ಅಡಿಟಿಪ್ಪಣಿಗಳು:**

೧. ಲೋಕಾಯತ ಮತ್ತು ಶಾಕ್ತ; ಬಸವರಾಜ ತೂಲಹಳ್ಳಿ; ಪುಟ–೨೪೧೨.
೨. ಕೇರಳದ ನಾಗಾರಾಧನೆ; ಎಸ್.ಎ.ಕೃಷ್ಣಯ್ಯ (ಸಂ); ಸುವರ್ಣ ಜಾನಪದ; ಪುಟ–೫೭೯.
೩. ನೀರದೀವಿಗೆ; ಕೆ.ವೈ.ನಾರಾಯಣಸ್ವಾಮಿ, ೨೦೦೦.
೪. ಪುರಾಣ ಮತ್ತು ವಾಸ್ತವ; ಡಿ.ಡಿ.ಕೊಸಾಂಬಿ; ಪುಟ–೧೧೮–೧೩೯.
೫. ಗ್ರಾಮದೇವತೆಗಳು; ಸಿದ್ಧಲಿಂಗಯ್ಯ; ಪುಟ–೨೧.
೬. The Mothers; Robert Briffault; p-303, 1931.
೭. ಲಜ್ಜಾಗೌರಿ; ರಾಮಚಂದ್ರ ಚಿಂ.ಢೇರೆ; ಅನು: ವಿಠಲರಾವ್ ಗಾಯಕವಾಡ; ಪುಟ–೧೮೮.
೮. ಅದೇ; ಪುಟ–೧೬–೨೦ ಹಾಗು ೨೦೦.
೯. The Mothers; Robert Briffault; p-167, 1931.
೧೦. ಕನ್ನಡ ಜಾನಪದ ಗೀತಗಳು; ಬಿಎಸ್ ಗದ್ದಗಿಮಠ; ಪುಟ–೧೩೬.
೧೧. ಜನ, ಜನಪದ, ಜಾನಪದ; ಎಂ.ಚಿದಾನಂದಮೂರ್ತಿ; ಪು–೩೨–೫೪.
೧೨. ಬೆಳೆ–೧; ಎಂ.ಜಿ.ಬಿರಾದಾರ; ಪುಟ–೩೨೨.



# ದರ್ಶನ–ಪಂಥ–ಧರ್ಮಗಳು : ಕಲ್ಯಾಣ ಕರ್ನಾಟಕವನ್ನು ಅನುಲಕ್ಷಿಸಿ.

**–ಡಾ. ಚಂದ್ರಶೇಖರ ಬಿರಾದಾರ,**
ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ,
ಶ್ರೀ ಚನ್ನಬಸವೇಶ್ವರ ಪದವಿ ಕಾಲೇಜು, ಭಾಲ್ಕಿ.

ಕಲ್ಯಾಣ ಕರ್ನಾಟಕ ಪ್ರದೇಶದ ಅಮೂರ್ತ ಪರಂಪರೆ ಕುರಿತು ಅರಿತುಕೊಳ್ಳವುದೆಂದರೆ ಅಖಿಲ ಭಾರತೀಯತೆ ಮತ್ತು ಸ್ಥಳೀಯತೆಗಳ ಮುಖಾಮುಖಿ ಅನುಸಂಧಾನ. ಭಾರತದ ಉಪಖಂಡದಲ್ಲೆಲ್ಲ ವಿಸ್ತಾರಗೊಂಡ ಸಾಂಸ್ಕೃತಿಕ ಪರಂಪರೆಗೆ, ಸ್ಥಳಿಯತೆ – ಪ್ರಾದೇಶಿಕತೆಯ ಅನೇಕ ಆಯಾಮಗಳಿರುವದನ್ನು ಅಲ್ಲಗಳೆಯಲಾಗದು ಕಲ್ಯಾಣ ಕರ್ನಾಟಕ ಪ್ರದೇಶದ ಪರಂಪರೆ ಕೇವಲ ಆ ಪ್ರದೇಶಕ್ಕೆ ಮಾತ್ರ ಸೀಮಿತಗೊಳ್ಳದೆ, ತನ್ನ ಹರವನ್ನು ವಿಸ್ತಾರಗೊಳಿಸುವಂಥಹದಾಗಿದೆ.

## ೧. ಚಾರಿತ್ರಿಕ ಹಿನ್ನೆಲೆ.

ಪ್ರಾಚೀನ ಕರ್ನಾಟಕವನ್ನು ಶಾಸನಗಳು 'ಕುಂತಳನಾಡು' ಎಂದು ಕರೆದಿವೆ. ಆ ಕುಂತಳನಾಡಿನಲ್ಲಿ ಕಲ್ಯಾಣ ಕರ್ನಾಟಕ ಪ್ರದೇಶ ಒಳಗೊಂಡಿದನ್ನು 'ನಾಗೇನಹಳ್ಳಿ ಶಾಸನ' 'ಕುಂತಣಿಹ ಕುಂತಳ ಸಪ್ತಾರ್ದಲಕ್ಕದ ಪಾಳಿಣವನೊಲು ಗುತ್ತ, ಮೌರಿಯ ಕುಳಸಂಭವ ರಟ್ಟಕೊಟ ಭೂಪಾಳ ಬಳಕಾದಂ ಚಾಳುಕ್ಯರೊಳೆಳೆಯಂ ಪೆರ್ಮಾಡಿ ರಾಯನಲಿ ಬಳಿಕಂ, ಕಳಚೂರಿಯರೊಳಾಳ್ವಂ ಭೂತಳಂ' ಈ ನಾಡನ್ನಾಳಿದ ರಾಜಮನೆತಗಳ ಪಟ್ಟಿ ನೀಡಿದೆ.[೧]

ಪ್ರಾಚೀನ ಜಗತ್ತಿನ ಸಾಮ್ರಾಟನೆನ್ನುವ ಖ್ಯಾತಿಗೆ ಒಳಗಾಗಿರುವ ಮೌರ್ಯ ವಂಶದ ಅಶೋಕನು ಮೊದಲಬಾರಿಗೆ ಪ್ರಾಕೃತ ಭಾಷೆಯಲ್ಲಿ ಮತ್ತು ಬ್ರಾಹ್ಮಿಲಿಪಿಯಲ್ಲಿ ತನ್ನ ಚಿಂತನಗಳನ್ನು ಶಾಸನಗಳ ಮೂಲಕ ದಾಖಲೀಕರಣಗೊಳಿಸಿದ ಪರಿಣಾಮವಾಗಿಯೇ ಕರ್ನಾಟಕದಲ್ಲಿ ದೊರೆತ ಆತನ ೧೪ ಶಾಸನಗಳಲ್ಲಿ ಕ.ಕ. ಪ್ರದೇಶದಲ್ಲಿಯೇ ೧೧ ಶಾಸನಗಳಿವೆ.

ಕಲ್ಯಾಣ ಕರ್ನಾಟಕದ ಹಲವು ಪ್ರದೇಶಗಳನ್ನು ಕ್ರಮವಾಗಿ ಸಗರ, ಅಯ್ಯಣವಾಡಿ, ಮೊಸಳೆಕಲ್ಲು, ಮಲ್ಲಟ ಪ್ರದೇಶವನ್ನು ಹೈಹಯರು, ಕರಡಿಕಲ್ಲು–ಕೋಗಳಿಗಳನ್ನು ಕದಂಬರು, ಅಟ್ಟಳೆನಾಡು, ಸಾಲಗುಂದೆ, ಬಲ್ಲಕುಂದೆ, ಕೆಳವಾಡಿ ವಿಭಾಗಗಳನ್ನು ಸಿಂದರು ಆಳಿದರು. ಸುರಪುರ, ಗುಡಗುಂಟಿ, ಕನಕಗಿರಿ ಇತ್ಯಾದಿಗಳು ಪಾಳೆಯಗಾರರು, ಮೆದಕಿನಾಳ–ಜವಳಗೇರೆಗಳನ್ನು ನಾಡಗೌಡರು, ಅರಕೆರೆ – ದೇವದುರ್ಗಗಳನ್ನು ನಾಯಕರು ಆಳಿದರು.

ಕಲ್ಯಾಣ ಕರ್ನಾಟಕ ಪ್ರದೇಶವನ್ನಾಳಿದ ರಾಜಮನೆತನಗಳ ಆಡಳಿತ ವ್ಯವಸ್ಥೆಯಲ್ಲಿ ಮುಂಚೂಣಿಯಲ್ಲಿದ್ದ ಮಹಾಪ್ರಚಂಡ ದಂಡನಾಯಕ ನಾಗವರ್ಮ (ಕ್ರಿ.ಶ. ೯೮೧ರ ಭಾಲ್ಕಿ ಶಾಸನ), ಜಯಸಿಂಹನ ಅಧಿಕಾರಿ ಇಂದ್ರದಂಡನಾಯಕ (ಭಾತಂಬ್ರಾ) ಪಿರಿಯದಂಡನಾಯಕ ಮಧುವರಸ (ನಿಂಬರ್ಗಾ) ಪ್ರಧಾನಿ ಕಾಳಿಮಯ್ಯ (ಧನ್ನೂರು) ಅಲ್ಲದೆ ರೇವಕಬ್ಬೆ ಎಂಬ ಮಹಿಳೆಯು ಗಾವುಂಡಿಯಾಗಿದ್ದಳೆಂಬುದನ್ನು ಕೊಪ್ಪಳ (ಕ್ರಿ.ಶ. ೯೯೦ರ ಶಾಸನ). ಸೋಮಲದೇವಿ ಆಳಂದೆಸಾಸಿರ ಆಳ್ವಿಕೆ ಮಾಡಿದನ್ನು ಬಾಳುತಗಿ (ಕ್ರಿ.ಶ. ೧೦೨೯ರ ಶಾಸನ) ಜಾಕಲದೇವಿ ಇಂಗಳಗಿಯ ಆಡಳಿತಗಾರಳಾಗಿದ್ದಳೆಂಬುದನ್ನು (ಕ್ರಿ.ಶ. ೧೦೯೫ರ) ಶಾಸನಗಳಿಂದ ಗುರುತಿಸಬಹುದಾಗಿದೆ[೨].

## ೨. ವಿಷಯ ಪ್ರವೇಶ.

ದರ್ಶನ ಅನಾದಿ ಪ್ರಾಚೀನತೆಯಿಂದಲೂ ಬೇಧಿಸಲಾಗದೇ ಇರುವ ಬ್ರಹ್ಮಾಂಡದ ನಿಗೂಢತೆಯನ್ನು ಅನಾವರಣಗೊಳಿಸುವ ಮತ್ತು ಅಂತಿಮ ಸತ್ಯದ, ಶಾಶ್ವತ ಅನ್ವೇಣೆಯ ಅರಿವೆ 'ದರ್ಶನ'ಧ ಮೂಲವಾಗಿದೆ. ಪ್ರಬುದ್ಧ ಚಿಂತನೆಯ ದೃಷ್ಟಿಕೋನ, ತರ್ಕಬದ್ಧತೆ ಮತ್ತು ನಿಷ್ಠತೆಯ ವಿವೇಚನಗಳನ್ನೊಳಗೊಂಡ 'ದರ್ಶನ'ಗಳು ಅರಿಯುವ ಬಗ್ಗೆ ವ್ಯಾಖ್ಯಾನಿಸುವಂತೆ ಅರಿಯುವ ಕ್ರಮದ ಬಗ್ಗೆಯೂ ವ್ಯಾಖ್ಯಾನ ನೀಡುತ್ತದೆ.

'ದರ್ಶನ' ಎಂದರೆ ನೋಡುವುದು ಅಥವಾ ಮುಂಗಾಣ್ಕೆ ದಾರ್ಶನಿಕತೆಯೆಂದರೆ ಅಂತಿಮವಾಗಿ ವ್ಯಕ್ತಿ, ಜಗತ್ತು, ಸಮಾಜಗಳನ್ನು ಕುರಿತ ಅವರ ದೃಷ್ಟಿಕೋನವೇ ಆಗಿರುತ್ತದೆ[೨]. ತಂತಮ್ಮ ಕಾಲದ ವಿದ್ಯಾಮಾನಗಳಿಗೆ ಪ್ರತಿಕ್ರಿಯೆಗಾಗಿ ಚಿಂತನೆ ಮಂಡಿಸಿದ ದಾರ್ಶನಿಕರು ಅವುಗಳನ್ನು ಆಚರಿಸಿಯೂ ತೋರಿಸಿದರು. ಹುಟ್ಟುವ ವೈರುಧ್ಯಗಳಿಗೆ ವಿಮರ್ಶೆಯನ್ನು ಮಾಡಿಕೊಂಡರು.

'ದರ್ಶನ' – ಸಾಮಾಜಿಕ ಜೀವನದ, ಸಾಮಾಜಿಕ ವಾಸ್ತವಿಕತೆಯ ಒಂದು ಸೈದ್ಧಾಂತಿಕ ಉತ್ಪನ್ನ. ಪರಸ್ಪರ ವಿರೋಧಿ ಹಿತಗಳಿರುವ ಸಮಾಜದಲ್ಲಿ ಮುನ್ನಡೆಗೆ ಪೂರಕವಾಗುವ ಮತ್ತು ಪ್ರಗತಿಗೆ ಮುಳುವಾಗುವ ತತ್ವಧಾರೆಗಳ ಪರಿಶೀಲನೆಯೂ ಆಸಕ್ತಿದಾಯಕವಾಗಿದೆ. ಜೈನ ತತ್ವಧಾರೆಯಲ್ಲಿ 'ಸದ್ವಾದ'ದತ್ತಿನ ನಂಬಿಕೆಯ ಪರಿಕಲ್ಪನೆಯಿದೆ. ಇದು ಬಹು ದೃಷ್ಟಿಕೋನ ಸಂಶ್ಲೇಷಣೆಗೆ ಅವಕಾಶವಿಯುವದರಿಂದ, ಇಲ್ಲಿ ಏಕ ಪಾರಮ್ಯದ ದೃಷ್ಟಿಕೋನವಿಲ್ಲ. ಆದುದರಿಂದಲೇ ಅದನ್ನು ಅನೇಕತಾವಾದವೆಂದು ಗುರುತಿಸಲಾಗಿದೆ. ಅಮೂರ್ತವಾದ ತಾತ್ವಿಕ ಪರಿಕಲ್ಪನೆಗಳ ರೂಪದಲ್ಲಿದ್ದು ತಕ್ಕಮಟ್ಟಿಗೆ ವ್ಯವಸ್ಥಿತವಾಗಿ ಮಂಡನೆಯಾಗಿರುವ ಚಿಂತನೆಯೇ 'ದರ್ಶನ'ವಾಗಿದೆಯೆಂಬುದನ್ನು ಮನಗಾಣುತ್ತೇವೆ.

ಅಸ್ಖಲಿತತ್ವದಲ್ಲಿ, ಅತೀಂದ್ರಿಯತೆಯಲ್ಲಿ, ನಂಬಿಕೆ ಹೊಂದಿದ್ದ ವೇದಾಂತಗಳು ಭಾರತೀಯ ಪ್ರಾಚೀನ ದರ್ಶನಗಳಾಗಿದ್ದು, ಅವುಗಳ ಉಪೇಕ್ಷೆ ಸಲ್ಲದೆಂದು ಪ್ರತಿಪಾದಿಸಿವೆ. ಅನುಭವಾತ್ಮಕ ತರ್ಕ ವಿಧಾನವನ್ನು ಸಮರ್ಥಿಸುವದರೊಂದಿಗೆ ಜೈಮಿನಿಯು 'ಮೀಮಾಂಸ'ದ, ಕಪಿಲನು 'ಸಾಂಕ್ಯ'ದ ಮತ್ತು ಚಾರ್ವಾಕನು 'ಲೋಕಾಯತದ'ಸ್ಥಾಪನೆ ಮಾಡಿದರು. ಸಾಮಾನ್ಯ ಜನರ ಒಳಿತನ್ನೇ ದೃಷ್ಟಿಯಲ್ಲಿಟ್ಟುಕೊಂಡು ತಮ್ಮ ದರ್ಶನಗಳಿಗೆ 'ಸಾಮಾಜೀಕರಣ'ದ ಸ್ಪರ್ಶಕೊಟ್ಟರು.

ಅನುಭಾವಾತ್ಮಕ ತರ್ಕವಿಧಾನವನ್ನು ಪ್ರತಿಪಾದಿಸಿದ ಪರಿಣಾಮವಾಗಿ, ನ್ಯಾಯಪಂಥದ ಸ್ಥಾಪಕ ಗೌತಮನು ವೇದಾಂತಿಗಳಿಂದ 'ಅಕ್ಷಪಾದ'ನೆಂತಲೂ, ವೈಶೆಷಿಕದ ಕಣಾದನು ಕಣಭಕ್ಷನೆಂತಲೂ ಹಿಯಾಳಿಗೆಕೆ ಒಳಗಾದರು[೩].

ಸತ್ಯ ಹಾಗೂ ಶೋಧನೆಯ ಆರಂಭದಲ್ಲಿ ಸಂಶಯಗಳಿಗೆ ಉತ್ತರ ಸಿಗಬೇಕು. ಯಾವುದೇ ವಿಷಯಗಳು ಸಂಪೂರ್ಣವಾಗಿ ಪ್ರಶ್ನಾತೀತವೆಂದು ಬಗೆಯದೇ ಸತ್ಯದ ಒರೆಗಲ್ಲಿಗೆ ಹಚ್ಚಬೇಕೆನ್ನುವ ಗೌತಮನ ಪ್ರಶ್ನೆಗಳಿಗೆ ನಂತರ ಬೆಳೆದು ಬಂದ ದರ್ಶನಗಳು ಉತ್ತರವನ್ನು ಒದಗಿಸುತ್ತವೆ.

ಐದು ಸಾವಿರ ವರ್ಷಗಳ ಸುದೀರ್ಘ ಇತಿಹಾಸ ಹೊಂದಿರುವ ಭಾರತ ಕಾಲಕಾಲಕ್ಕೆ ಅನುಗುಣವಾಗಿ ಹಲವಾರು ವಿದೇಶಿ ದಾಳಿಗಳನ್ನು ಎದುರಿಸುತ್ತ ಅವರೆಲ್ಲರ ವಿಶಿಷ್ಟ ಸಂಸ್ಕೃತಿಯನ್ನು ತನ್ನಲ್ಲಿ ಸಮನ್ವಯಗೊಳಿಸಿಕೊಳ್ಳುತ್ತಾ ತನ್ನದೇ ವಿಶಿಷ್ಟ, ವಿಭಿನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಇಂಥಹ ಗಟ್ಟಿತನದ ಸಂಸ್ಕೃತಿಗೆ ಭಾರತೀಯ 'ದರ್ಶನ'ಗಳ ಕೊಡುಗೆಗಳು ಅಪಾರವಾಗಿವೆ.

**೩. ಬೌದ್ಧ ದರ್ಶನ.**

ಭಾರತದ ಪ್ರಾಚೀನ ದರ್ಶನಗಳಲ್ಲಿ ಒಂದಾಗಿ, ಭಾರತದಲ್ಲೇ ಜನ್ಮ ಪಡೆದ ಮತ್ತು ಅನ್ಯ ದೇಶಗಳಲ್ಲಿ ವ್ಯಾಪಕ ಪ್ರಸಾರ ಪಡೆದು, ಭಾರತದಲ್ಲೆ ಕ್ಷೀಣಾವಸ್ಥೆ ತಲುಪಿದ ದರ್ಶನ ಇದಾಗಿದೆ. ಬೌದ್ಧ

ಧರ್ಮದ ಪ್ರಾಚೀನ ಸಾಹಿತ್ಯ 'ಸುತ್ತನಿಪಾತ'ದಲ್ಲಿ ದಕ್ಷಿಣಾಪಥದೊಂದಿಗೆ, ಗೋದಾವರಿ ತೀರದಲ್ಲಿ ಆಶ್ರಮ ಕಟ್ಟಿಕೊಂಡ 'ಬಾವರಿ' ಹೆಸರಿನ ಉಲ್ಲೇಖ ಆಧರಿಸಿ ವಿದ್ವಾಂಸರು ಬೌದ್ಧ ಧರ್ಮ ಅಶೋಕನಿಗಿಂತ ಮುಂಚೆಯೇ ದಕ್ಷಿಣ ಭಾರತದಲ್ಲಿ ಹರಡಿರಬೇಕೆಂದು ಊಹಿಸುತ್ತಾರೆ.

ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಕ್ರಿ. ಪೂ. ೩ನೇ ಶತಮಾನದಿಂದ ಕ್ರಿ. ಶ. ೧೬ನೇ ಶತಮಾನದವರೆಗೆ ಆ ಧರ್ಮದ ಅಸ್ತಿತ್ವದ ಆಧಾರಗಳು ದೊರಕುತ್ತವೆ. ಕರ್ನಾಟಕದಲ್ಲಿ ಸಿಗುವ ಅಶೋಕನ ೧೪ ಶಾಸನಗಳಲ್ಲಿ, ೧೧–ಕಲ್ಯಾಣ ಕರ್ನಾಟಕಕ್ಕೆ ಸೇರಿವೆ[೫]. ನಿರ್ಧಿಷ್ಟರೂಪದ ದರ್ಶನಗಳು ಅನುಯಾಯಿಗಳು ದೀಕ್ಷೆ ಮುಖಾಂತರ ಸಂಘಟಿತರಾಗಿರುವ ಗುಂಪುಗಳೇ ಮೂರ್ತರೂಪದಲ್ಲಿ ಆಚರಿಸಿಕೊಂಡು ಬರುವ ಪಂಥಗಳಾಗಿವೆ.

**೩.೧ ಹೀನಯಾನ ಪಂಥ.**

ನಾಸ್ತಿಕವಾದಿ ಮತ್ತು ಅನಾತ್ಮವಾದಿಯೂ ಆಗಿರುವ ಹೀನಯಾನ ತತ್ವಧಾರೆಯು ಬುದ್ಧನ ಮೂಲ ತತ್ವಗಳಿಗೆ ನಿಷ್ಠವಾಗಿರುವ ಪಂಥವಾಗಿದೆ. ಅದು ವ್ಯಕ್ತಿಗತ ನಿರ್ಮಾಣಕ್ಕೆ ಪ್ರಾಮುಖ್ಯತೆ ಕೊಡುತ್ತದೆಯಲ್ಲದೆ, ಶಮೆ, ದಮೆ, ಕರುಣೆಗಳು ಈ ಪಂಥದ ಮುಖ್ಯಶೀಲಗಳಾಗಿವೆ. ಚಕ್ರವರ್ತಿ ಅಶೋಕನು ಶಾಸನ ಹಾಕಿಸಿದ ಕಾಲದಲ್ಲಿ ಈ ಭಾಗದಲ್ಲಿದ್ದುದು ಈ ಪಂಥವೇ[೬].

**೩.೨ ಮಹಾಯಾನ ಪಂಥ.**

ಬುದ್ಧ ಕೇವಲ ವೈಯಕ್ತಿಕ ಮುಕ್ತಿ ಸಾಧಕನಲ್ಲ ಸಾಧನೆಯಿಂದ ಅಸಾಧ್ಯವಾದುದನ್ನು ಸಾಧ್ಯವಾಗಿಸಬಹುದೆಂದು ಸಾಧಿಸಿ ತೋರಿಸಲು ಮಾನವ ದೇಹ ಧರಿಸಿಬಂದ 'ತಥಾಗತ'ನೆಂದು ಭಾವಿಸುವ ಪಂಥವೇ ಮಹಾಯಾನ ಪಂಥ.

ಬೋಧಿಸತ್ವದ ಕಲ್ಪನೆ, ಬುದ್ಧಿ ಮತ್ತು ಮನಸ್ಸಿನ ಉತ್ಕರ್ಷಕ್ಕೆ ಯತ್ನಿಸುವ ಈ ಮಹಾಯಾನಿಗಳು ಶಾತವಾಹನರ ಕಾಲದಲ್ಲಿ (ಕ್ರಿ.ಶ. ೧–೨) ಕರ್ನಾಟಕಕ್ಕೆ ಆಗಮಿಸಿದರು. ಸುಮಾರು ಎರಡು ಮೈಲಿಗಳಷ್ಟು ಉದ್ದಕ್ಕೆ ಹಮ್ಮಿಕೊಂಡಿರುವ ಬೌದ್ಧಾವಶೇಷಗಳ ಸನ್ನತಿ, ಕನಗನಹಳ್ಳಿಗಳು ಆಗ ರೂಪಗೊಂಡವು. ಬುದ್ಧನ ಇಲ್ಲವೇ ಆತನ ಶಿಷ್ಯರ ಪವಿತ್ರ ಅಸ್ಥಿಶೇಷಗಳು ಸಮಾವೇಶಗೊಂಡ ಸ್ತೂಪಗಳು, ಆರ್ಯಸ್ತಂಭಕಗಳು, ಬುದ್ಧ ಪದ ಚಿಹ್ನ, ಬೋಧಿವೃಕ್ಷ ಪವಿತ್ರ ಸಂಕೇತಗಳು ಉರ್ಜಿತಗೊಂಡವು. ಅಮಾತ್ಯಯಕ್ಷಣಿಕಾ, ಅಮಾತ್ಯಸಂಘನಿಕಾ, ಅಹಮಾರಿಕಾ, ನಾಗನಿಕಾ ಎಂಬ ಹೆಂಗಳೆಯರು ಪದವಿ ಸಹಿತರಾಗಿರುವ ಅಪರೂಪವನ್ನು ಈ ಪ್ರದೇಶದಲ್ಲೇ ಕಾಣಬಹುದಾಗಿದೆ[೭].

**೩.೩ ವಜ್ರಯಾನ ಪಂಥ.**

ಮಹಾಯಾನದ ಅತಿ ಉದಾರ ನೀತಿಯು ತಾಂತ್ರಿಕ ಕೃತಿಗಳಾದ 'ಗುಹ್ಯಸಮಾಜ', 'ಸಾಧನಮೂಲ'ಗಳ ರಚನೆಗೆ ಕಾರಣವಾಯಿತಲ್ಲದೆ, ಹಿಂದೂಗಳ ಪರಬ್ರಹ್ಮನಂತೆ ವಜ್ರಸತ್ವ ಮತ್ತು ಆತನ ಐದು ಗುಣಗಳಿಂದ ಐದು ಧ್ಯಾನಿ ಬುದ್ಧರಾದ ವೈರೋಚನ, ರತ್ನಸಂಭವ, ಅಮಿತಾಭ, ಅಮೋಘಸಿದ್ಧಿ ಮತ್ತು ಅಕ್ಷೋಬ್ಯರ ಜೊತೆಗೆ ಸ್ತ್ರೀ ಸಹಾಯಕಿರಾಗಿ ವಜ್ರಧಾತೇಶ್ವರಿ, ಲೋಚನ, ಮಾಮಕಿ, ಪಾಂಡರ ಮತ್ತು ಆದ್ಯತಾರಾ ಉದ್ಭವಿಸಿದರು[೮].

ಅವಲೋಕಿತೇಶ್ವರ (ಕರುಣೆಯ ದೇವತೆ), ತಾರಾಭಗವತಿ (ಅವಲೋಕಿತೀಶ್ವರನ ಸಂಗಾತಿ) ಹಾಗೂ ಮಂಜುಶ್ರೀ (ಜ್ಞಾನದ ದೇವತೆ) ಮೂಲ ಕಲ್ಪನೆ ಹೊಂದಿದೆ ಈ ಪಂಥ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಅಹಮಲ್ಲನ ಮಂತ್ರಿ ರೂಪಭಟಯ್ಯ ಕಟ್ಟಿಸಿದ ವಿಹಾರದಲ್ಲಿ ತಾರಾ ಭಗವತಿ

ಮೂರ್ತಿಶಿಲ್ಪಿವಿರುವುದು ಈ ಪಂಥದ ಅಸ್ತಿತ್ವವನ್ನು ಎತ್ತಿ ತೋರಿಸುತ್ತದೆ. ಸನ್ನತಿಯಲ್ಲಿ 'ತಾರಾಭಗವತಿ' ಶಿಲ್ಪಿ – ಈ ಭಾಗದಲ್ಲಿನ ಅದರ ಪ್ರಭಾವವನ್ನು ಶೃತಪಡಿಸುತ್ತದೆ.

**೪. ಜೈನ ದರ್ಶನ.**

ಅಹಿಂಸಾ ತತ್ವವನ್ನು ಅಂತರ್ಗತ ಮಾಡಿಕೊಂಡಿರುವ ಜೈನ ದರ್ಶನ – ಕರ್ನಾಟಕವನ್ನಾಳಿದ ಪ್ರಮುಖ ರಾಜಮನೆತನಗಳ ಬೆಂಬಲ, ಪ್ರೋತ್ಸಾಹಗಳಿಂದ ಕಲ್ಯಾಣ ಕರ್ನಾಟಕದ ಮೂಲೆ ಮೂಲೆಗೂ ಹಬ್ಬಿದ್ದು, ಕ್ರಿ.ಪೂ. ೩ನೇ ಶತಮಾನದಲ್ಲಿ ಅಸ್ತಿತ್ವದಲ್ಲಿತ್ತೆಂದು ವಿದ್ವಾಂಸರು ಭಾವಿಸುತ್ತಾರೆ.

ಜೈನ ಪುರುಷ ಯತಿಗಳು ತಮ್ಮ ಜ್ಞಾನ ಮತ್ತು ತಪಸ್ಸಿನಿಂದ ಪ್ರಖ್ಯಾತರಾಗಿದ್ದಂತೆ ಸನ್ಯಾಸಿನಿಯರು (ಭಟ್ಟಾರಕಿಯರು) ಖ್ಯಾತರಾಗಿದ್ದರೆಂಬುದನ್ನು ಶಾಸನಗಳು ತಿಳಿಸುತ್ತಿವೆ.

ಜೈನ ಮುನಿಗಳನ್ನು ಹೇಳುವಾಗ ಸಂಘ, ಗಣ, ಗಚ್ಚ, ಅನ್ವಯಗಳು, ಬಳಿ ರೂಢಿಯಲ್ಲಿದ್ದು, ಮೂರು ಸನ್ಯಾಸಿಗಳ ಗುಂಪನ್ನು 'ಗಣ'ವೆಂದು, ಏಳು ಜನಗಳ ಗುಂಪನ್ನು ಗಚ್ಚ'ವೆಂದೂ ಸನ್ಯಾಸಿಗಳ ಸಮುದಾಯಗಳನ್ನು 'ಸಂಘ'ವೆಂದು ಗುರುತಿಸುವದುಂಟು.

ಕಲ್ಯಾಣ ಕರ್ನಾಟಕ ಪ್ರದೇಶದ ಕೊಪ್ಪಳ (ಕೊಪಣ) ಕ್ರಿ.ಶ. ೮–೯ನೆಯ ಶತಮಾನದ ವೇಳೆಗೆ ಜೈನ ದರ್ಶನದ ಪವಿತ್ರ ನೆಲೆಯಾಗಿತ್ತು. ಜಟಾಸಿಂಹ ನಂದಿ ಇಲ್ಲಿಯೇ ಸಲ್ಲೇಖನ ವ್ರತ ಸ್ವೀಕರಿಸಿ ಮರಣ ಹೊಂದುವ ಮೂಲಕ ಈ ಊರಿನ ಪಾವಿತ್ರ್ಯ ಹೆಚ್ಚಿಸಿದರು.

ಕ್ರಿ.ಶ. ೧೦೪೭ರ ಕೊಪ್ಪಳ ಶಾಸನವು ಅಲ್ಲಿಯ ಜೈನ ಸನ್ಯಾಸಿಗಳನ್ನು 'ಸ್ಥಾವರ ಜಂಗಮ ತೀರ್ಥಮಾತಾವೇನಲ್ಪಿದ ನೀವೆ ಕಾಣಿಕೆ ಕೊಪಣ ಸ್ಥಾವರ ತೀರ್ಥಂ ಶ್ರೀಧರ ದೇವರ ಜಗತಿ ತಳಕ್ಕೆ ಜಂಗಮ ತೀರ್ಥಂ ಪಿಗಳುತ್ತಿರ್ಪುದು ಧಾತ್ರಿ' ಎಂದು ಬಣ್ಣಿಸಿದೆ. ಹಾಗೆಯೇ ಕ್ರಿ.ಶ. ೧೦೩೧ರ ಶಾಸನವೆಂದು ಮೇಘಚಂದ್ರ ಸಿದ್ಧಾಂತ ಮುನಿಗಳ್ನನು ಆ ಕಾಲದ ಜಂಗಮ ತೀರ್ಥರೆಂದು ಬಣ್ಣಿಸಿದೆ.[೧೦] ಇದರಿಂದ ಸ್ಥಾವರ ಜಂಗಮ ಪರಿಕಲ್ಪನೆ ಇಷ್ಟು ಹಿಂದಕ್ಕೆ ಹೋಗಿರುವದನ್ನು ಗಮನಿಸಬಹುದು.

**೪.೧ ದಿಗಂಬರ ಪಂಥ.**

ದಿಗಂಬರ ಪಂಥಿಗಳು ಸ್ತ್ರೀಯರಿಗೆ ಮೋಕ್ಷವಿಲ್ಲವೆಂದು ಹೇಳುತ್ತಾರೆಲ್ಲದೆ ಮೋಕ್ಷ ಪ್ರಾಪ್ತಿಗಾಗಿ ಅವರು ಪುರುಷರಾಗಿ ಹುಟ್ಟಬೇಕು. ಈ ಪಂಥದ ಮುನಿಗಳು ವಸ್ತ್ರ ಧರಿಸುವದಿಲ್ಲ. 'ಶ್ರವಣ ಬೆಳ್ಗೊಳ' ಕರ್ನಾಟಕದ ಜೈನ ಪರಂಪರೆಯ ಸಂಕ್ಷಿಪ್ತಾ ಕೃತಿಯೆಂದು ಎಂ. ಚಿದಾನಂದ ಮೂರ್ತಿಯವರು ಕರೆದಿದ್ದಾರೆ. ಬೇರೆ ಶಾಖೆಗಳು ಈ ಪಂಥದಲ್ಲೇ ಅಂತರ್ಗತವಾಗಿರುವದರಿಂದ ಜೈನ ಧರ್ಮವೆಂದರೆ ಕರ್ನಾಟಕ ಮಟ್ಟಿಗೆ ದಿಗಂಬರ ಪಂಥವೆಂದೇ ಭಾವಿಸಬಹುದು.

**೪.೨ ಶ್ವೇತಾಂಬರ ಪಂಥ.**

ಹೆಸರೇ ಸೂಚಿಸುವಂತೆ ಬಿಳಿ ಬಟ್ಟೆಯನ್ನು ಧರಿಸುವವರು ಮತ್ತು ಸ್ತ್ರೀಯರಿಗೆ ಮೋಕ್ಷವಿಜೆಯೆಂದು ಪ್ರತಿಪಾದಿಸುವ ಈ ಪಂಥವು ಪ್ರಬಲವಾಗಿ ಬೆಳೆಯಲಿಲ್ಲ. ತನ್ನ ಪರಮೋನ್ನತಿಯ ಕಾಲದಲ್ಲಿ 'ಅಲ್ಕಾವತಿ'ಯೆಂದು ಕರೆಸಿಕೊಳ್ಳುತ್ತಿದ್ದ ಆಳಂದ, ಆಚಾರ್ಯ ಪೀಠ ಹೊಂದಿದ್ದ ಮಳಖೇಡ (ಸೇಡಂ)ಗಳು ಕಲ್ಯಾಣ ಕರ್ನಾಟಕದಲ್ಲಿ ಖ್ಯಾತವಾಗಿದ್ದು, ಜಿನಸೇನ ಭಟ್ಟಾರಕರು ಆಳಂದಕ್ಕೆ ಭೇಟಿ ಕೊಟ್ಟಿದ್ದರಲ್ಲದೆ, ಇವತ್ತಿಗೂ ಜೈನ ಸಮುದಾಯ 'ಮಳಖೇಡ'ಕ್ಕೆ ಭೇಟಿಕೊಟ್ಟು ಗೌರವ ಸಲ್ಲಿಸುವುದು ಈ ಪಂಥೀಯರ ಪ್ರಾಬಲ್ಯವನ್ನು ತೋರಿಸುತ್ತದೆ.

**೪.೩ ಯಾಪನೀಯ ಪಂಥ:**

'ಸ್ತ್ರೀನಾಂ ತದ್‍ಭವ ಮೋಕ್ಷ' – ಮಹಿಳೆಯರು ಈ ಜನ್ಮದಲ್ಲೇ ಮೋಕ್ಷ ಹೊಂದಬಲ್ಲರೆಂದು ಹೇಳಿದ ಈ ಶಾಖೆಯು ಶ್ರೀ ಕಲಶನೆಂಬ ಯತಿಯಿಂದ ಕಲ್ಯಾಣ ನಗರದಲ್ಲಿ ಆರಂಭವಾಯಿತೆಂಬ ಅಭಿಪ್ರಾಯವಿದೆ. ಗಣಬೇದ ಕೃತಿಯ ಪ್ರಕಾರ ಕೊಪ್ಪಳವು ಯಾಪನೀಯ ಕೇಂದ್ರವಾಗಿತ್ತೆಂಬುದು ವೇದ್ಯವಾಗುತ್ತದೆ. ಯಕ್ಷಿ, ಆರಾಧನೆಯ್ಲಲಿ ಕೆಲವು ಯಕ್ಷಿಯರು ಕರ್ನಾಟಕದಲ್ಲಿ ವಿಶೇಷ ಪ್ರಾಧಾನ್ಯತೆಯನ್ನು ಪಡೆದರು. ಅದರಲ್ಲಿ ಎಂಟನೆಯ ಜಿನ ಚಂದ್ರ ಪ್ರಭನ ಯಕ್ಷಿ ಜ್ವಾಲಾಮಾಲಿನಿ, ಇಪ್ಪತ್ಮೂರನೇ ತೀರ್ಥಂಕರನ ಯಕ್ಷಿ 'ಪದ್ಮಾವತಿ' ಮತ್ತು ೨೩ನೇ ತೀರ್ಥಂಕರನ ಯಕ್ಷಿ 'ಕೂಷ್ಮಾಂಡಿನಿ' ಪ್ರಮುಖರಾಗಿದ್ದಾರೆ.

– ಸೇಡಂ, ಮಳಖೇಡ, ಗೋರ್ಕಲ್ಲು, ಮಸ್ಕಿ, ತಲೇಖಾನ, ಬಲ್ಲುಟಗಿ, ಚಂದನಕೆರೆ, ಕೆಂಭಾವಿ ಹಗರಟಿಗೆ, ಮಾಲಗತ್ತಿ, ಏವೂರು, ಜೈನಾಪುರ ಹುಣಸಿಹಡಗಿಲ್ಲ, ತಡಕಲ್, ಹರಸೂರು ಮುಂತಾದ ಕ.ಕ. ಪ್ರದೇಶದಲ್ಲಿರುವ ಜೈನ ಬಸದಿಗಳಲ್ಲದೆ – ಸೇಡಂ, ಭಾಲ್ಕಿಯಲ್ಲಿರುವ ಬ್ರಹ್ಮ ಜಿನಾಲಯಗಳು ಆ ಧರ್ಮದ ಪ್ರಾಬಲ್ಯವನ್ನು ಎತ್ತಿ ತೋರಿಸುತ್ತವೆ.

**೫. ಬಹುಪಂಥೀಯ ಧಾರೆಗಳು.**

**೫.೧ ಲಕುಲೀಶಪಾಶುಪತ ಪಂಥ.**

ಭಾರತದ ಪ್ರಾಚೀನ ಧರ್ಮಗಳಲ್ಲೊಂದಾದ ಶೈವ ಧರ್ಮವು ಶಿವೋಪಾಸನಾ ಮಾರ್ಗವಾಗಿದೆ. ಮಹಾಭಾರತದ ಶಾಂತಿಪರ್ವದಲ್ಲಿ ಉಕ್ತವಾದ ಪಾಶುಪತ ಧರ್ಮದ ಸ್ಥಾಪಕ ಲಕುಲೀಶ ಲಾಟದೇಶದ ಕಾರೋಹಣದವನು. ಲಕುಲೀಶ ಪಾಶುಪತ ದರ್ಶನ ಈತನಿಂದ ಆರಂಭಗೊಂಡಿತು. ಒಂದು ನಿಶ್ಚಿತ ಸ್ಥಳದಲ್ಲಿ ನಿಲ್ಲದೆ ಸಂಚರಿಸುತ್ತ ಲೋಕದ ಯಾವ ಬಂಧನವೂ ಇಲ್ಲದಂತೆ ಗುಹೆಗಳಲ್ಲಿ, ಸ್ಮಶಾನಗಳಲ್ಲಿ ಸಾಮಾನ್ಯವಾಗಿ ತುಂಡು ಬಟ್ಟೆಯನ್ನೇ ಧರಿಸಿ ಬದುಕುತಿದ್ದ ಪಾಶುಪತಿ ದರ್ಶನವು ೧೨ನೇ ಶತಮಾನದವರೆಗೆ ಪ್ರಭಾವಿಯಾಗೇ ಮುಂದುವರಿಯಿತು. ಅಭಿನವ ಪಾಶುಪತ; ಹಗರಟ್ಟಿಗೆ ಮೂನ್ನೂರರ ಅಂತರ್ಗತ ಕೊಂಡಗೂಳಿಯ – ಆಚಾರ್ಯಸಿದ್ಧಯೋಗಿ ಪಂಡಿತ – ಬಸವಪೂರ್ವದ ಲಿಂಗಾಯತರೆಂಬ ಒಟ್ಟಾಭಿಪ್ರಾಯ ಇದೆ.[೧೧]

ಶೈವಧರ್ಮದ ಶಾಖೆಗಳಲ್ಲಿ ಸೂಕ್ಷ್ಮ ಪ್ರಭೇಧಗಳನ್ನು ಕ್ರಿ.ಶ. ೯ನೇ ಶತಮಾನದ ವಾಚಸ್ಪುತಿ ಮತ್ತು ಭಾಸ್ಕರರು, ೧೧ನೇ ಶತಮಾನದ ಯಮುನಾಚಾರ್ಯರು, ೧೪ನೇ ಶತಮಾನದ ಬ್ರಹ್ಮಶಿವನು ಶೈವರಲ್ಲಿ ಕಾಳಾಮುಖ, ಕಪಾಳಿ, ಪಾಶುಪತಿ ಮತ್ತು ಶೈವರೆಂಬ ಬಗೆಗಳನ್ನು ಕುರಿತು ಉಲಲೇಖಿಸಿದ್ದಾರೆ.[೧೨]

**೫.೨ ಕಾಳಾಮುಖ ಪಂಥ.**

ಹಣಿಯ ಮೇಲೆ ಕಪ್ಪುಗೆರೆಯನ್ನು ಧರಿಸುತ್ತಿರುವ ಕಾರಣಕ್ಕೆ ಕಾಳಾಮುಖರೆಂದು ಕರೆಸಿಕೊಂಡಿರಬಹುದಾದ ಇವರು ಅನೇಕ ರಾಜರಿಂದ, ಅಧಿಕಾರಿಗಳಿಂದ ದಾನದತ್ತಿಗಳನ್ನು ಪಡೆದು ರಾಜಗುರುಗಳಾಗಿ, ಸ್ಥಾನ ಪತಿಗಳಾಗಿ ವಿದ್ಯಾಭ್ಯಾಸ ಕೇಂದ್ರಗಳು ಛತ್ರಗಳನ್ನು ನಡೆಸಿ ತಮ್ಮ ಕ್ರಿಯಾಶೀಲತೆಯನ್ನು ಮೆರೆದವರು.

ಕಾಳಾಮುಖರ ಪ್ರಮುಖ ಶಾಖೆಯಾದ ಸಿಂಹಪರ್ಷೆಗೆ ಸಂಬಂಧಿಸಿದ ದೇವಸ್ಥಾನಗಳು ಕಲ್ಯಾಣ ಕರ್ನಾಟಕದ ಬಳ್ಳಾರಿ ಮತ್ತು ಕಲಬುರ್ಗಿ ಜಿಲ್ಲೆಗಳಲ್ಲಿ ಕಾಣಬಹುದಾಗಿದೆ. ಕಲಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನ ಒಂದು ಶಾಸನ 'ಶ್ರೀ ಮದೇಳ ಮೇಲ ಶ್ರೀ ಸಿಂಹ ಪರ್ಷನ್ ಮಂಡಳಿ ಮಲೆಯಾಳ ದೇವರ ಶಿಷ್ಯರಿಪ್ಪ ಮಿರಿಂಜೆಯ ಚಿಕ್ಕದೇವರ ಸಂತಾನಮ್' ಎಂದು ಹೇಳುತ್ತದೆ. ಈ ಶಾಸನದಲ್ಲಿ

ಉಲ್ಲೇಖವಾಗಿರುವ ಮಲೆಯಾಳ ದೇವರು ಇನ್ನೂ ಕೆಲವು ಶಾಸನಗಳಲ್ಲಿ ಉಕ್ತನಾಗಿದ್ದಾನೆ. ಅವನ ಸಿಂಹಪರ್ಷೆಯ ಧಾರ್ಮಿಕ ನಾಯಕನಾಗಿ ಗುರು ಪರಂಪರೆ ಆರಂಭಿಸಿದನ್ನು ಕಾಣಬಹುದು.[೧೩]

ಶಕ್ತಿ ಪರ್ಷೆಯ ಪ್ರಭಾವ ಕರ್ನಾಟಕದ ಶಿವಮೊಗ್ಗೆ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಮಡುಗಟ್ಟಿದಂತಿದೆ. ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಅದರ ಅಸ್ತಿತ್ವ ಅಷ್ಟಾಗಿ ಕಾಣ ಸಿಗುವದಿಲ್ಲವಾದರೂ ಕೆಂಭಾವಿ ಮೋಸಂಗಿಗಳಿದ್ದವೆಂದು ತಿಳಿದು ಬರುತ್ತಿದೆ.[೧೪] ಕಾಳಾಮುಖರ ಧರ್ಮವನ್ನು ಶಾಸನಗಳು ಎಕ್ಕೋಟಿಸಮಯವೆಂದೂ, ಕರ್ನಾಟಕದಲ್ಲಿ ಮೈಲಾರನ ಒಕ್ಕಲುಗಳು 'ಏಳು ಕೋಟಿ ಏಳು ಕೋಟಿ ಉಗೇ ಚಾಂಗು ಭಲಾ' ಎಂದು ಜಯಘೋಷ ಮಾಡುತ್ತಾರೆ. ಭಷ್ಮ ಧಾರಣೆ, ಕೌಪೀನ ಧರಿಸುವಿಕೆ ಮತ್ತು ರುದ್ರಾಕ್ಷ ಮಾಲಧಾರಣೆಗಳ ವೇಷ ಭೂಷಣ ಹೊಂದಿದ ಕಾಳಾಮುಖಿಗಳು ಬಹು ವ್ಯವಸ್ಥಿತ ರೀತಿಯಲ್ಲಿ ದೇವಸ್ಥಾನ ಮತ್ತು ಮಠಗಳ ಮೂಲಕ ಧಾರ್ಮಿಕ ಚಟುವಟಿಕೆಗಳನ್ನು ನಡೆಸಿದರು. ಸಾಲಿಗಾವೆಗೇರಿ ಶಿಕ್ಷಣ ಕೇಂದ್ರವಾಗಿತ್ತು. (ಏವೂರು, ಹಗರಟ್ಟಿಗೆ ಕವಿತಾಳ ಕಲ್ಲೂರು).

**ಮಹಿಳಾ ಸನ್ಯಾಸಿನಿಯರು.**

ಶೈವರು ಸ್ತ್ರೀಯರಿಗೆ ದೇವಾಲಯ/ಮಠದ ಹಲವು ಕಾರ್ಯಗಳಲ್ಲಿ ಅವಕಾಶ ನೀಡಿದ್ದರು ಕೇಂಭಾವಿಯಲ್ಲಿದ್ದ ಇಂಥಹ ಒಬ್ಬ ಸ್ತ್ರೀ ಯೋಗಿಣಿಗೆ ಕಾಸಕಬ್ಬೆ ದಾನ ನೀಡಿದ್ದಾಳೆ. ಶೈವ ಧರ್ಮದಲ್ಲಿ ಕೆಲವು ಸನ್ಯಾಸಿಯರೂ ಇದ್ದಂತೆ ಕಾಣಬರುತ್ತದೆ. ಇಂಗಳಗಿಯ ಶಾಸನದಲ್ಲಿ ಶ್ರೀ ಗುಡ್ಡವ್ವೆಗಳು ಮುಖ್ಯವಾಗಿ ಗಣಮಠಕ್ಕೆ ಕೊಟ್ಟ ವೃತ್ತಿ ಎಂಬ ಮಾತು ಬರುತ್ತದೆ. ಇಲ್ಲಿ ಚಲವ್ವೆ ಪಾದ ಪೂಜೆ ಪಡೆಯುವುದು ಗಮನಾರ್ಹವಾಗಿದೆ.[೧೫] ಮೊಸಂಗಿಯ ಬ್ರಹ್ಮೇಶ್ವರದ ಸ್ಥಾನಾಚಾರ್ಯರಾದ ಗಂಗರಾಶಿಭಟ್ಟರರು ಶ್ರೀಶೈಲದ ಸುರೇಶ್ವರ ಪಂಡಿತರು ವಿದ್ಯಾಗುರುಗಳಾಗಿದ್ದರು.

## ೫.೩ ಕಾಪಾಳಿಕರು.

ಕಾಪಾಳಿಕರು ಶಿವನ ಉಗ್ರರೂಪವಾದ ಭೈರವನ ಆರಾಧಕರು – ಸುರೆ, ಮಾಂಸ ಸೇವಿಸುತ್ತ ಮೈಗೆ ಬೂದಿ ಬಳಿದುಕೊಂಡು ಸ್ಮಶಾನದಲ್ಲಿ, ವಾಸಿಸುತ್ತಿದ್ದು ಇವರದು ಭೀಬತ್ಸ ಆಚರಣೆಯಾಗಿದೆ. ಕಲ್ಯಾಣ ಕರ್ನಾಟಕ ಪ್ರದೇಶದ ರಾಯಚೂರು ಜಿಲ್ಲೆಯ ಚಂದನಕೆರೆ, ಬಲ್ಲಟಗಿ – ಯರಮಾರಸನಲ್ಲಿ ಭೈರವ ಶಿಲ್ಪಿಗಳು ದೊರೆತಿವೆ. ಮುಕ್ಕಂಡಿಯಲ್ಲಿ ಕಪಾಳೇಶ್ವರ ದೇವಾಲಯವಿದೆ. **ಕೌಳರು;**

ಶಾಕ್ತೇಯ ಪಂಥ ಮದ್ಯ, ಮಾಂಸ, ಮತ್ಸ್ಯ, ಮುದ್ರಾ, ಮೈಥೂನ ಇವರ ಪಂಚ ಮುದ್ರೆಗಳು ಸ್ತ್ರೀಯ ಜನನಾಂಗ ಇವರ ಆರಾಧ್ಯದೈವ. ದೇವದುರ್ಗದ ಗೋಪಾಲ ಸ್ವಾಮಿ ದೇವಾಲಯದಲ್ಲಿ ೧೭–೧೮ನೇ ಶತಮಾನಕ್ಕೆ ಸೇರಿದ ಸ್ತ್ರೀ ಶಿಲ್ಪವಿದೆ.[೧೬]

ಮಧ್ಯಕಾಲಿನ ಯುಗದಲ್ಲಿ ಪ್ರಚಲಿತವಾಗಿದ್ದು ಕೌಳರು, ಕಾಪಾಲಿಕರಂತೆ ಅತಿಮಾರ್ಗಿಗಳು, ಇರವರು ಶಕ್ತಿಯ ಆರಾಧಾಕರು. ಕೌಳ ಸಿದ್ಧಾಂತದ ಮೂಲ ಪ್ರವರ್ತಕ ಪಾಶುಪತ ಗುರುವಾದ ವಿಶ್ವರೂಪನ ಶಿಷ್ಯ ಅಲ್ಲಟ ಅಥವಾ ಭಾವರಕ್ತ. ಕೌಳರಲ್ಲಿ ಎರಡು ಬಗೆ ಪೂರ್ವಕೌಳರು ಮತ್ತು ಉತ್ತರ ಕೌಳರು. ಇಬ್ಬರೂ ತ್ರಿಪೂರ ಸುಂದರಿಯ ಆರಾಧಕಕರೆ. ಪೂರ್ವಕೌಳರು ಒಂಬತ್ತು ಸ್ತ್ರೀ ಯೋನಿಗಳ ಮಧ್ಯ ಬರೆದ ಸ್ತ್ರೀ ಯೋನಿ ಹೊಂದ್ದಿದ ಚಿತ್ರವನ್ನು ಇಷ್ಟೂ ಸೇರಿ ಶ್ರೀಚಕ್ರವೆಂದು ಕರೆಸಿಕೊಳ್ಳುತ್ತದೆ. ಉತ್ತರ ಕೌಳರು ಸುಂದರಳಾದ ಸ್ತ್ರೀ ಯೋನಿಯನ್ನೇ ಆರಾಧಿಸುವವರು.[೧೭]

## ೫.೩.೧ ನೀಲಪಟ.

ನೀಲಪಟರು ಬಹುಶ: ಬೌದ್ಧ ಶಾಖೆಯೊಂದರ ಮೂಲದಿಂದ ಬೆಳೆದು ಬಂದು ತಮ್ಮ ಅತಿರೇಕದ ಆಚರಣೆಯಿಂದ ಕಾಶ್ಮೀರ ಪ್ರದೇಶದಿಂದ ಬಹಿಷ್ಕೃತರಾಗಿ ಸುಮಾರು ೧೦–೧೧ನೇ ಶತಮಾನದಲ್ಲಿ

ಕರ್ನಾಟಕದಲ್ಲಿ ನೆಲೆಸಿದ್ದರೆಂದು ಕಾಣುತ್ತದೆ. ನೀಲಪಟವು ಸ್ತ್ರೀ ಸುಖಕ್ಕೆ ಅತಿ ಮಹತ್ವವನ್ನು ಕೊಟ್ಟು ಸಮಕಾಲೀನ ಅನ್ಯಧರ್ಮಗಳ ತಿರಸ್ಕಾರಕ್ಕೆ ಒಳಗಾಗಿ ಅಜ್ಞಾತವಾಗಿ ಉಳಿದ ಒಂದು ಅಪರೂಪದ ತಾಂತ್ರಿಕ ಪಂಥವಾಗಿದೆ.[೧೮] (ಶಾ.ಸಂ. ಪು. ೧೪೩) (ಕೆರೆಯ – ಪದ್ಮರಸ ನೀಲಪಟ ಸಾಂಖ್ಯೆ, ಬೌದ್ಧ, ಜೈನ ಮತದವರನ್ನು) ವಾದದಲ್ಲಿ ಸೋಲಿಸಿದನೆಂದು ಅವನ ಮಗ ಕುಮಾರ ಪದ್ಮರಸ ಸಾನಂದ ಚರಿತೆಯಲ್ಲಿ ಹೇಳಿದ್ದಾನೆ.

**೫.೩.೨ ಮೈಲಾರ ಮಾಳಚಿ**

ಬ್ರಹ್ಮ ಶಿವನು ಭಾವಿಸುವಂತೆ ಮೈಲಾರ ಒಬ್ಬ ಕ್ಷೂದ್ರ ದೇವ ಅವನಿಗೆ ವರ ಕೊಡುವ ಸಾಮರ್ಥ್ಯವಿಲ್ಲ. ಛಲದಿಂದ ಶೌರ್ಯವನ್ನು ತೋರಿ ಕಾದಾಡಿ ಸತ್ತ ಒಬ್ಬ ಜೈನನೆ ಮೈಲಾರ ಎನ್ನುತ್ತಾನೆ.

ಮೈಲಾರನ ಮೂಲ ಪಿಂಜೇರ ವಾಸ್ತವವಾಗಿ ಸಾತಾರಾ ಜಿಲ್ಲೆಯ ಪೆಂಜೇರವಾಗಿರಬೇಕೆಂದು ಡಾ: ಪಿ.ಬಿ. ದೇಸಾಯಿಯವರು ಉಹಿಸಿದರೆ, ಎಮ್.ಬಿ. ನೇಗಿನಹಾಳ ಅವರು ಬೀದರ ಜಿಲ್ಲೆಯ ಪ್ರೇಮಪುರವೆಂದು ಅಭಿಪ್ರಾಯಪಟ್ಟಿದ್ದಾರೆ. ಮಾಳಚಿ; ದೇವಿಲಬ್ಧ ವರಪ್ರಸಾದ – ಸಿಂದ ವಂಶದ ದೊರೆಗಳಿಗೆ ಕುಲದೇವತೆಯಾಗಿ ಪ್ರಸಿದ್ದಳು.

**೬. ಶರಣ ದರ್ಶನ – ಸೂಫಿಚಿಂತನ.**

ವೈಚಾರೀಕತೆ ಆಧಾರದಲ್ಲಿ ಸಮಾನತೆ ತತ್ವವನ್ನು ಮೈಗೂಡಿಸಿಕೊಳ್ಳುವದರೊಂದಿಗೆ ಅರಿವಿನ ಆಂದೋಳನಕ್ಕೆ ದಾರಿ ಮಾಡಿಕೊಟ್ಟ ಶರಣರು ಹೊರ ಜಗತ್ತಿನ ಪ್ರಜ್ಞೆ ಮತ್ತು ಒಳಜಗತ್ತಿನ ಅರಿವಿನೊಂದಿಗೆ ನಡೆ ಮತ್ತು ನುಡಿಯಲ್ಲಿ ವ್ಯತ್ಯಾಸವಿಲ್ಲದಂತೆ ಬದುಕಿದ ಕಾರಣಕ್ಕಾಗಿಯೇ ಅಲ್ಲಮರು ನಿಮ್ಮ ಶರಣರು ನುಡಿದು ಪಾತಕಿಗಳಲ್ಲ ನಡೆದು ಪರಿಣಾಮಿಗಳೆಂದು ಅರುಹಿದರು. ಅನುಭವ ಮಂಟಪದ ಮಹಾಮನೆಯು ಮಾನವಕುಲವನಷ್ಟೇ ಅಲ್ಲ ವಿಮೋಚನೆ, ಮಾನವ ಘನತೆ, ಲಿಂಗಭೇದ, ಜಾತಿ/ವರ್ಣಭೇದಗಳಿಲ್ಲದ ಸರ್ವ ಸಮಾನತೆಯ ಸಮಾಜ ನಿರ್ಮಾಣಕ್ಕಾಗಿ ಕಾಯಕ ಮತ್ತು ದಾಸೋಹದಂಥ ಸೂತ್ರಗಳನ್ನು ಹೆಣೆದರು.

ಸತಿಯ ಹಿಡಿದು ವೃತಿಯಾದ ಬಸವಣ್ಣ, ಅರಸೊತ್ತಿಗೆ ವೈಭವವನ್ನು ತೊರೆದು ಕಾಯಕದಲ್ಲಿ ತೊಡಗಿದ ಗುಪ್ತ ಮಂಚಣ್ಣ, ಸಕಲೇಶಮಾದರಸ, ಮೋಳಿಗೆ ಮಾರಯ್ಯಾ ನಂಥವರು, ಸ್ವತಂತ್ರ ವಿಚಾರಧಾರೆಯ ಮಸಣಮ್ಮ, ಅಕ್ಕಮ್ಮ, ಕಾಮಮ್ಮಳು ಹಾಗೂ ಶ್ರದ್ಧೆ ಭಕ್ತಿಗೆ ಬದ್ಧರಾದ ಉರಿಲಿಂಗ ಪೆದ್ದಿ, ವೀರಗೊಲ್ಲಾಳ, ಚೌಡಯ್ಯನಂಥವರು ಏರಿದ ಎತ್ತರ ಗಮನಿಸಿದರೆ, ಕೆಳಸ್ತರದ ಸಮುದಾಯಗಳ ಪ್ರಜ್ಞೆ ಮತ್ತು ಸಂಗಮವಾದ ಈ ತತ್ವಧಾರೆ ಬೆರಗುಗೊಳಿಸ್ತದೆ. ಅಂಥ ಸಶಕ್ತ ಚಳವಳಿಗೆ ಕಲ್ಯಾಣ ಕರ್ನಾಟಕ ಪ್ರದೇಶದ 'ಕಲ್ಯಾಣ'ವೇ ಕೇಂದ್ರವಾಗಿತ್ತು.

**ಸೂಫಿಗಳು.**

ಬಹಿರಂಗದ ಚಟುವಟಿಕೆಗಳಿಗಿಂತಲೂ ಅಂತರಂಗದ ಪರಿಶುದ್ಧತೆಗೆ ಹೆಚ್ಚು ಒತ್ತು ನೀಡುವದರೊಂದಿಗೆ ಆಧ್ಯಾತ್ಮಿಕ ಪರಮಾನಂದ ಪ್ರಾಪ್ತಿಗಾಗಿ ತುಡಿತ ಹೊಂದಿರುವವರು, ಮಾನವ ಜೀವಿಗಳ ಸೇವೆಯಲ್ಲಿ ಹಗಲಿರುಳು ದುಡಿದು ಸೊರಗಿ ಕೃಶವಾಗಿ ಒಣಗಿ ಎಣ್ಣೆಯಂತಾದವರೇ ಸೂಫಿಗಳು.[೧೯]

ಕೋಮು ಹಿಂಸೆಗಳು ಮತ್ತು ಧಾರ್ಮಿಕ ಮತಾಂಧತೆಯನ್ನು ಸೂಫಿಗಳು ಖಂಡಿಸಿದರು. ಹುಜವೇರಿಯು ಮುಮುಕ್ಷುಗೆ ಸಾಧನೆ ಸಾಧ್ಯವಾಗುವುದು ಜ್ಞಾನದಿಂದಲೇ ಜ್ಞಾನದಂತೆ ಆಚರಣೆ ಕೂಡ ಪ್ರಮುಖವೆನ್ನುತ್ತಾನೆ.[೨೦] ಫಕೀರನ ಸ್ಥಾನ, ಪರಮೇಶ್ವರನಿಗಿಂತಲೂ ಉಚ್ಚವಾಗಿರುತ್ತದೆ. ಫಕೀರನು ಎಷ್ಟರ

ಮಟ್ಟಿಗೆ ನಿರ್ಧನ/ನಿಸ್ಸಂಗಿಯಾಗಿರುತ್ತಾನೋ ಅಷ್ಟರ ಮಟ್ಟಿಗೆ ಆಧ್ಯಾತ್ಮಿಕ ಆಧಿಕಾರಿವೆನಿಸಿಕೊಳ್ಳುತ್ತಾನೆ. ಎನ್ನುವದನ್ನು ಈ ಪ್ರದೇಶದ ಸೂಫಿಗಳಿಂದ ತಿಳಿಯಬಹುದಾಗಿದೆ.

ಕಲಬುರ್ಗಿಯ ಹಜರತ ಖಾಜಾ ಬಂದೇನವಾಜ ಗೇಸುದರಾಜರು ಹಿಂದೂ ಪೂರಾಣಗಳು ಅಧ್ಯಯನ ಮಾಡಿ ಧಾರ್ಮಿಕ ಸಮನ್ವಯತೆಗೆ ಕಾರಣರಾದರಲ್ಲದೆ ಇವರ ಖಾನಕಾಗಳಲ್ಲಿ ಹಿಂದೂ ದೇವಾಲಯಗಳಿಗೂ ಭೂದತ್ತಿ ಗ್ರಾಮಗಳನ್ನು ನೀಡಿದ್ದಾರೆ ಸುಲ್ತಾನರು. ಬೀದರದಲ್ಲಿದ್ದ ಹಜರತ್ ಖಾಜಾ–ಅಬುಲ್ ಫೈಜ್ ಸಾದತ್ತ್ ಜೈಯಾದ ಹುಸೇನಿಯವರು ಮನುಷ್ಯ ಅವಮಾನದಿಂದ ಮತ್ತು ಸಮಯದಿಂದ ಮೌಲ್ವೀಕನಾಗುತ್ತಾನೆ ಎಂದು ತಿಳಿಸಿದ್ದಾರೆ. ಹಜರತ್ ಮುಲ್ತಾನಿ ಬಡೆಶಾ, ದಾದಾಪೀಠ, ಘೋಡವಾಡಿಯ ಇಸ್ಮಾಯಿಲ್ ಖಾದ್ರಿ, ಕಲ್ಯಾಣದ ರಾಜಾಬಾಗ್ ಸವಾರ ಮತ್ತು ಕೊಹಿನೂರು ಪಾಹಡನಲ್ಲಿನ ಜಿಂದೆವಲಿ ಮದರ್ಸಾಬರ ದರ್ಗಾಗಳು ಸೌಹಾರ್ದತೆಯ ಸಂಕೇತಗಳೆನಿಸಿದೆ.

ಜೇವರ್ಗಿಯ ಅಮಿನೋದ್ದೀನ, ಆಳಂದದ ಲಾಡ್ಲೆಮುಲ್ಲಿಕ, ಕೊಡೆಕಲ್ಲಿನ ಮಹ್ಮದ ಸರ್ವರ್, ರಾಯಚೂರಿನ ಖಾದಲಿಂಗ್ ಜಿಂದಾವಲಿ, ಬಳ್ಳಾರಿಯ ಲಂಗರ್ಶಹಾವಲಿ ಮುಂತಾದವರಿಂದ ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಬಲವಾಗಿ ನೆಲೆಯಾಗುವದಕ್ಕೆ ಪರಸ್ಪರ ಕೊಡುಕೊಳ್ಳುವಿಕೆ ಪ್ರಮುಖ ಕಾರಣವೆನ್ನಬಹುದು.

**೬.೧ ನಾಥಪಂಥ, ಆನಂದ ಮತ್ತು ಆರೂಢ ಸಂಪ್ರದಾಯಗಳು.**

ನಾಥ ಪರಂಪರೆಯು ಅಲ್ಲಮ ಪ್ರಭುವನ್ನು ಶಾ ಅಲ್ಲಮ ಪ್ರಭು ಕಮಾಲೋದ್ದೀನನನ್ನಾಗಿಸಿ ಉಳಿದ ವಚನಕಾರರನ್ನು ಅನುಯಾಯಿಗಳನ್ನಾಗಿ ಮಾಡಿಕೊಂಡಿದೆ. ಹಠಯೋಗ ಸಾಧಕರಾದ ಗೋರಖನಾಥ ಮಚೇಂದ್ರನಾಥ (ಉಜ್ಜೆಯನಿಯಲ್ಲಿ ಪೀರನೆಂದು ಸಂಬೋಧಿಸುತ್ತಾರೆ) ಖಾನೀಪನಾಥ (ಶಹಾ ರಂಜಾನ) ಪರಂಪರೆಯಲ್ಲದೆ ಬಸವಕಲ್ಯಾಣದ ಸದಾನಂದ ಸ್ವಾಮಿಯವರ ಸದಾನಂದ ಆನಂದ ಸಂಪ್ರದಾಯ ಹುಟ್ಟು ಹಾಕುವದರೊಂದಿಗೆ ದತ್ತ ಪರಂಪರೆಯ ಶ್ರೇಷ್ಠತೆಯನ್ನು ಮೆರೆದಿದೆ. ಆರೂಢ ಶ್ರೇಷ್ಠರಾದ ಸಿದ್ಧಾರೂಢರ ಜನ್ಮಭೂಮಿಯಾದ ಚಳಕಾಪುರವು ಆರೂಢ ಆಚರಣೆಯ ವೈಶಿಷ್ಟ್ಯತೆಯನ್ನು ಇಂಬಿಟ್ಟುಕೊಂಡಿದೆ.

**೬.೨ ಪ್ರಭುಪರಂಪರೆ.**

ಕಲ್ಯಾಣ ಕರ್ನಾಟಕದ ಪರಿಸರದಲ್ಲಿ ಬೆಳೆದುಬಂದ 'ಪ್ರಭುಪರಂಪರೆ' ಹೊಸ ವಿಚಾರ ಧಾರೆಯೊಂದಕ್ಕೆ ದಾರಿಮಾಡಿಕೊಟ್ಟಿರುವುದು ಒಂದು ವಿಷ್ಮಯವಾಗಿದೆ. ಈ ಪ್ರಭು ಪರಂಪರೆಯಲ್ಲಿ ಕೊಡೇಕಲ್ಲಿನ ಪರಮಪ್ರಭು, ಹುಮನಾಬಾದಿನ ಬಕ್ಕಪ್ರಭು, ಧುಮ್ಮನಸೂರಿನ ಸಿದ್ಧಪ್ರಭು ಗಳೆಲ್ಲರು ನಾಥ–ಮಹಾನುಭಾವ ಸೂಫಿಗಳ ಚಿಹ್ನೆಗಳನ್ನು ಜಟ್ಟವಾಗಿ ಉಳಿಸಿಕೊಂಡವರು.

ಜಯಜಯಹೋ ಸಕಲ ಮತ ವಿಜಯ ಹೋ ಎಂದು ಸಾರಿದ ಮಾಣಿಕ ಪ್ರಭುಗಳು ಮರಾಠಿಯಲ್ಲಿ ಸಾತವಾರ ಭಜನೆ ಹಾಗೂ ಕನ್ನಡದಲ್ಲಿ ಭಜನೆಗಳನ್ನು ರಚಿಸಿದ್ದಾರೆ ಬಸವಣ್ಣನವರನ್ನು ಕುರಿತು.

**ಬಸವ ಬಸವೆನಿಸಿ ಬಸವನಾದೆನೆ ।**
**ಪಿತ್ರ ಬಸವ, ಗೋತ್ರಬಸವ, ಸೂತ್ರ ಬಸವೆನೆ ॥**
**ವಸ್ತು ಅಲ್ಲಲ್ಲ ಅಲ್ಲಿಲ್ಲ । ಹಾನಾ ಅಲ್ಲೋ ತಾನೆ ಬಲ್ಲವೆಂದು ಸರ್ವಾಂತರ್ಯಾಮಿ**
**ಕುರಿತು ಪ್ರತಿಪಾದಿಸಿದ್ದಾರೆ.**

**೬.೩ ತತ್ವ ಪದಕಾರರು.**

ಬೇರೆ ಬೇರೆ ಸಂಸ್ಕೃತಿ ನಂಬಿಕೆಗಳ ಜನರ ನಡುವೆ ಒಂದಾಗಿ ಬಾಳುತ್ತಿದ್ದ ತತ್ವಪದಕಾರರು ಅವರ ನಂಬಿಕೆ ಆಚರಣೆಗಳನ್ನು ಜರೆಯದೆ ಅನುಭಾವದ ಮೂಲಕ ಅವೆಲ್ಲವನ್ನು ಏಕ ಸೂತ್ರದಲ್ಲಿ ಪೋಣಿಸುವ ಹಾದಿಯಲ್ಲಿದ್ದವರು. ಸಾಹಿತ್ಯ, ಸಂಗೀತ, ತತ್ವಗಳ ಮುಪ್ಪೂರಿಗಳಿಂದ ಕೂಡಿದ ಆ ತತ್ವಪದಗಳು ಜನಸಾಮಾನ್ಯರನ್ನು ಮುಟ್ಟಿ ಸಮಷ್ಟಿ ಮನಸನ್ನು ಸಂಸ್ಕಾರಗೊಳಿಸುವ ಒಂದು ಪ್ರಬಲ ಮಾಧ್ಯಮ.[೨೧] ಆಧ್ಯಾತ್ಮಿಕ ಅನುಸಂದಾನ, ಧಾರ್ಮಿಕವಾದ ಭಕ್ತಿ ಮತ್ತು ಯೋಗದ ಹಿನ್ನೆಲೆ ಹೊಂದಿರುವ ತತ್ವಪದಗಳನ್ನು 'ಕೈವಲ್ಯ ಸಾಹಿತ್ಯ'ವೆಂದೂ ಕೂಡ ಕರೆಯಲಾಗುತ್ತದೆ.

ಕಡಕೋಳ ಮಡಿವಾಳಪ್ಪ, ಕಡಲೂರು ಬಸವಲಿಂಗ ಶರಣರು, ಚೆನ್ನೂರು ಜಲಾಲಸಾಬ, ಕೊಳ್ಳೂರು ಹುಸನಾ, ಐನೂಲಿ ಕರಿಬಸವಾರ್ಯ, ಅನುಮಂತಪ್ಪ ಸಾವಳಗಿ ಮುಂತಾದವರು ಕಲ್ಯಾಣ ಪರಿಸರದ ತತ್ವಪದಕಾರರಾಗಿದ್ದಾರೆ.

ಕಡಕೋಳದ ಮಡಿಚಾಳಪ್ಪನವರ ಕಾರಣದಿಂದಾಗಿಯೇ ಕಡಕೋಳಮಠ ತತ್ವಪದಕಾರರ 'ಟಂಕಶಾಲೆ'ಯೋ ಆಯಿತು. 'ಮಾನಗೇಡಿ ಮಂದಿ ಹುಟ್ಟಿ ಮರ್ತ್ಯಾ ಕೆಡಿಸ್ಯಾರೊ', ದಾವುದೊ ಕುಲದಾವುದೋ ಕುಲದ ವಿವರವಿ ತಿಳಿದು ಹೇಳಲೊ ಮೂಢ ಎಂಬಂಥ ಪದಗಳಲ್ಲಿ ಆತನ ಲೋಕ ಪ್ರಜ್ಞೆ ಮತ್ತು ಅನುಭಾವಿಕ ಔನತ್ಯ ತೋರಿಸುತ್ತದೆ.

ಕೊಡೇಕಲ್ಲ ಬಸವಣ್ಣನವರು–ಕಲ್ಲೊಳಗಣ ಕನಕವು – ಕ್ಷಟ್ಟಿಯೊಳಗಣ ಬೆಂಕಿಯು ಎಲ್ಲರ ಮನೆ ದೀವಿಗೆ ಒಂದೇ ಅಲ್ಲವೆಂದವರಾರು – ಬಸವಣ್ಣ ಹಾಗೂ ಮೆಟ್ಟು ಮಾರುವವನಾಗಲಿ, ಕಟ್ಟಿಗೆ ತರುವವನಾಗಲಿ, ಕಷ್ಟವ ಮಾಡಿ ಉಂಬುವವರ ಮನೆಯಲ್ಲಿ ಮುಷ್ಟಿ ತುಂಬುವ ಅನ್ನ ಸಾಕು ಬಸವಣ್ಣ ಪದಗಳು ಅವನ ವೈಚಾರೀಕ ಪ್ರಖರತೆಗೆ ಸಾಕ್ಷಿಯಾಗಿದೆ.

**೭. ಧರ್ಮ.**

ಪ್ರತಿಯೊಂದು ಧರ್ಮವು ಜೀವ ಜಗತ್ತು ಈಶ್ವರ ಎಂಬ ವಿಷಯಗಳ ಕುರಿತಾಗಿ ತನ್ನದೇ ಆದ ಸಿದ್ಧಾಂತಗಳನ್ನು ಹೊಂದಿರುತ್ತದೆ. ಅದೇ ರೀತಿ ಜೀವನಕ್ಕೆ ಸಂಬಂಧಿಸಿದ ಕೆಲವು ತತ್ವ ಹಾಗೂ ಆಚರಣೆಗಳು ಇರುತ್ತವೆ. ಇಂಥ ಮೂಲಭೂತ ತಿಳವಳಿಕೆಗಳ ಒಟ್ಟು ಮೊತ್ತವೇ ಧರ್ಮ.

ಎಲ್ಲ ಸಾಮಾಜಿಕ ವರ್ಗದ ಭಿನ್ನಮನೋಭಾವದ ಜನರ ಒಂದು ಧಾರ್ಮಿಕ ಸಂಘಟನೆಗಯೇ ಧರ್ಮ. ಅದು ತುಂಬಾ ಸಂಕೀರ್ಣ ಸ್ವರೂಪ ಮತ್ತು ರಚನೆ ಹೊಂದಿರುತ್ತದೆ. ಸಮನ್ವಯದ ಸಮತೂಕ ತಪ್ಪಿದಾಗ ಸಂಘರ್ಷದ ಹಾದಿ ಹಿಡಿದಿರುವುದನ್ನು ಕಾಣುತ್ತೇವೆ. ಶಾಸನೋಕ್ತ 'ಚತುಸ್ಸಮಯ ಸಮುದ್ಧರಣ' ಬಿರುದುಗಳು ಪ್ರಜೆಗಳ ಸಂರಕ್ಷಣೆ ರಾಜನ ಹೊಣೆಯಾಗಿದೆ ಎಂದು ತಿಳಿಸುತ್ತದೆ.

ಶೈವ–ವೆಷ್ಣವರಲ್ಲಿ ಮೊದಲಿದ್ದ ಸೌಹಾರ್ದ ಮನೋಭಾವ ಮಾಯವಾಗಿ ಕ್ರಮೇಣ ವೈಷಮ್ಯ ಹಾಗೂ ಪೈಪೋಟಿ ಕಾನಿಸಿಕೊಂಡಿದ್ದರಿಂದದೇ 'ಹರಿಹರ' ಕಲ್ಪನೆಗೆ ಪ್ರೋತ್ಸಾಹ ದೊರೆಯಿತು.

ಧರ್ಮವು ಎಲ್ಲ ಕಾಲದಲ್ಲಿಯೂ ಮನುಷ ಭಾವನೆಗಳನ್ನು ಭಾವನಾತ್ಮಕವಾಗಿ ಒಗ್ಗೂಡಿಸುವ ಮತ್ತು ಪ್ರಚೋದಿಸು ಶಕ್ತಿಯಾಗಿದೆ. ಈ ಕಾರಣದಿಂದ ಧರ್ಮವು ವ್ಯಾಪಕ ಸಂಘಟನೆಗಳಿಗೆ ಕಾರಣವಾಗಿರುವಂತೆ ಬಹುದೊಡ್ಡ ಘರ್ಷಣೆಗಳಿಗೂ ಕಾರಣವಾಗಿದೆ.[೨೨]

**ಧಾರ್ಮಿಕ ಸಾಮರಸ್ಯ ಮತ್ತು ಸಂಘರ್ಷ.**

ಪ್ರಾಚೀನ ಕಾಲದಿಂದಲೂ ಈ ಪ್ರದೇಶ ಸಹಬಾಳ್ವೆಗೆ, ಸಾಮರಸ್ಯಕ್ಕೆ ಮತ್ತು ಧಾರ್ಮಿಕ ಸಹಿಷ್ಣತೆಗೆ ಹೆಸರಾಗಿದೆ. ಆ ಕಾಲದ ಹೆಚ್ಚಿನ ಶಾಸನೋಲ್ಲೇಖಗಳಲ್ಲಿ 'ಚತುಸ್ಸಮಯ' ಪ್ರಖ್ಯಾತವಾಗಿದ್ದವು. ದೊರೆಗಳು

ಹೊಂದಿದ ಚತುಸ್ಸಮಯ ಸಮ್ಮುದ್ಧರಣ ಬಿರುದು ಬೌದ್ಧ, ಜೈನ, ಶೈವ ಮತ್ತು ವೈಷ್ಣವ ಧರ್ಮಗಳ ಸಂರಕ್ಷಣೆ ಮತ್ತು ಉದ್ಧರಿಸುವ ಹೊಣೆ ಅವರದಾಗಿತ್ತೆಂದು ತಿಳಿಸುತ್ತದೆ.

**ಸಾಮರಸ್ಯ**

- ವಿಷ್ಣುಭಕ್ತನಾಗಿದ್ದ ೬ನೇ ವಿಕ್ರಮಾದಿತ್ಯ ತನ್ನ ರಾಣಿ ಜಾಕಲದೇವಿಯ ಜೈನನಿಷ್ಠೆಯಿಂದ ಪ್ರಭಾವಿತನಾಗಿ ಅವಳ ಪೂಜಾಕಾರ್ಯಗಳ ಅಗತ್ಯವನ್ನು ಪೂರೈಸಿದ ವಿಷಯ 'ಇಂಗುಳಗೆ' ಶಾಸನ ತಿಳಿಸುತ್ತದೆ.
- ಕಲ್ಯಾಣದಲ್ಲಿ ಮಧುಕೇಶ್ವರ ದೇವಾಲಯವು ಬಾಹುದ್ದೀನನ ದಂಗೆಯ ಕಾಲದಲ್ಲಿ ತುಂಬಾ ಹಾನಿಗೊಳಗಾಗಲು ಕಲ್ಯಾಣದ ಜನರ ಪ್ರಯತ್ನದಿಂದ ಪುನರ್ ಪ್ರತಿಷ್ಠೆಗೊಂಡು ಪೂಜಾ ಕಾರ್ಯಗಳು ನಡೆಯುವಂತೆ ಮಾಡಿದನ್ನು ಮಹ್ಮದಬಿನ್ ತೊಘಲಕನ ಆಳ್ವಿಕೆ ಶಾಸನ ತಿಳಿಸುತ್ತದೆ. ಮುಸ್ಲಿಂ ಅಧಿಕಾರಿಯ ಆಡಳಿತದಲ್ಲಿ ಹಿಂದೂ ಶೈವ ದೇವಾಲಯ ಜೀರ್ಣೋದ್ಧಾರವಾಗಿರುವುದು ಮತ್ತು ಬೀದರಿನ ಅಹ್ಮದಶಾ ವಲಿಜಾತ್ರೆ ಹಾಗೂ ಕಲ್ಯಾಣ ಕರ್ನಾಟ ಭಾಗದ ಮೋಹರಂ ಆಚರಣೆಗಳಲ್ಲಿ ಅನ್ಯ ಧರ್ಮಿಯರು ಪಾಲ್ಗೊಳ್ಳುವುದ ಅಪರೂಪದ ಉದಾಹರಣೆಗಳಾಗಿವೆ.
- ಗೋವಿಂದರಾಜ ಎನ್ನುವವನು ರಾಮೇಶ್ವರ ದೇವಾಲಯ ಕಟ್ಟಿಸಿ, ಯೋಗೇಶ್ವರ ಪಂಡಿತನೆಂಬ ಶೈವ ಗುರೂಜಿ ದಾನ ನೀಡಿದನು. ಆತ ವೈಷ್ಣವನಾದರೂ ಶೈವ ದೇವಾಲಯ ಕಟ್ಟಿಸಿ ಶೈವ ಗುರುತಿಗೆ ಕೊಟ್ಟಿರುವ ವಿಷಯವನು ಬಿ.ಆರ್. ಗೋಪಾಲದವರು ಮುತ್ತಗಿ ಶಾಸನದ ಉದಾಹರಣೆ ನೀಡುತ್ತಾರೆ.
- P.M. Joshi holds that, the deity (Datatraya) came to be known as 'Shaha Fakir' and Dattatraya even said to have assumed the guise of Malang for these devotees. Also known as Shaha Datta Allam Prabhu in various countries of Deccan. The deity was instrumental in bringing about synthesis among various communities like Lingayats, Muslims & the Anand Sampradayis & Giri-Gosais. Narasimha Saraswati was the main cause behind this transmission of the sect.
- ಬೀದರ ಸೀಮೆಯ ಮಾಣಿಕಪ್ರಭು, ಬಕ್ಕಪ್ರಭು ಸಂಪ್ರದಾಯಗಳು ಧಾರ್ಮಿಕ ಗೆಳೆತನ (ದೋಸ್ತಾರ ದೀನ್)ದ ಪ್ರತೀಕವಾಗಿ ನಾಸಿರುದ್ದೀನ ಚಿರಾನಕಿ ದೋಸ್ತಾರ ದೀನ್ ಹರ ಹರ ಅಂಥ ಘೋಷಣೆ ಕೂಗುವ ಸಂಪ್ರದಾಯವಿದೆ.
- ಮಾಣಿಕ ಪ್ರಭುಗಳನ್ನು ಮುಸಲ್ಮಾನರು ಮಹಬೂಬ ಸುಬಾನಿ ಅವತಾರವೆಂದು, ಪೀರಾನ ಪಿಠ ದಸ್ತಗೀರ ಎಂದು ಕರೆಯುತ್ತಾರೆ. ಸಿಕ್ಕರು ನಾನಕ ಶೋಹೆ ಮಾಣಿಕ್ ಎಂದು ಕರೆಯುತ್ತಾರೆ.

**ಸರ್ವಧರ್ಮದ ಆರಾಧ್ಯರು.**

ನಾಲ್ಕು ಶತಮಾನಗಳ ಹಿಂದೆಯೇ ಜಾತಿಯತೆ ತೊಡೆದು ದಲಿತರ ಮನೆಯಲ್ಲಿ ಪ್ರಸಾದ ಸ್ವೀಕರಿಸಿದರು. ಮೂಢ ನಂಬಿಕೆಗಳ ತೊಲಗಿಸಿ, ಕಂದಾಚಾರ ಕಿತ್ತೆಗೆದು ಮೂರ್ತಿ ಪೂಜೆ ವಿರೋಧಿಸಿ ಸರ್ವಮತ ಭಕ್ತರ ಸೇವೆಯನ್ನು ಪಡೆದ ಕೋಟಿಗೊಬ್ಬ ಶರಣ ಕೊಟ್ಟೂರೇಶ್ವರರು ಸಮಕಾಲಿನ ಸಂದರ್ಭದ ಪಂಚಗಣಾಧೀಶ್ವರರಲ್ಲಿ ಒಬ್ಬರಾದ ಕೊಟ್ಟೂರೇಶ್ವರರು, (ತಿಪ್ಪೆರಂದ್ರಸ್ವಾಮಿಗಳು, ಕೋಲಸಾಂತರು, ಮದ್ವಾನೇಶ್ವರರು, ಕೆಂಪಯ್ಯ ಸ್ವಾಮಿಗಳು ಇತರ ನಾಲ್ವರು). ರಥೋತ್ಸವದ ದಿನದಂದು

ಹರಿಜನರ ಮನೆಯಿಂದ ಪ್ರಸಾದ, ಮುಸ್ಲಿಂ ಬಾಂಧವರಿಂದ ಮುಂಡ ರೇಶ್ಮೆ ಬಟ್ಟೆಗಳು ವಾಲ್ಮೀಕಿ ಜನಾಂಗದವರಿಂದ ಕಾಯಿ ಅರ್ಪಣೆ ಪಡೆಯುವರು.

- ಧರ್ಮೋನ್ನತಿಯ ದೂರದರ್ಶಿ ನಾವದಗಿ ರೇವಪ್ಪಯ್ಯ (೧೮೩೧–೧೯೩೬) ಭಾತಂಬ್ರದಲ್ಲಿ ಗೋಸಾಯಿ ಶಿವಬಾಬು ಎಂಬ ಅಂತ್ಯಜನಿಗೆ ಲಿಂಗಧೀಕ್ಷೆ ನೀಡಿ ಬಹಿಷ್ಕಾರಕ್ಕೊಳಗಾದರು. ಹಿಡಿದ ವೃತ ಬೀಡದ ಛಲ ತಮ್ಮ ನಿತ್ಯ ನೇಮಗಳ ದೇಸಿಕ ಆಚಾರದ ಕಠಿಣ ಆಚಾರಸ್ಥರನ್ನು ಮೊದಲು ನೋಡಿದೆನೆಂದು ಮಂಜಪ್ಪನವು ೧೯೩೧ರ ಅಗಷ್ಟ ಶರಣ ದಂದೇಶದಲ್ಲಿ ತಿಳಿಸಿದ್ದಾರೆ.

**ಧಾರ್ಮಿಕ ಸಂಘರ್ಷಗಳು.**

ಕಲ್ಯಾಣ ಕರ್ನಾಟಕದ ಕೆಲವು ಶೈವ ಶೀಘ್ರಪಾದಿಗಳು ಜೈನ ಧರ್ಮದ ಮೇಲೆ ನೇರವಾದ ಶೈವ **V/s** ಜೈನ ಸಮರವನ್ನೇ ಸಾರಿದ ಪರಿಣಾಮವಾಗಿ ಅಣ್ಣಿಂಪೂರು, ಕರಹಾಡ, ಕೆಂಬಾವಿ ಮೊದಲಾದ ಸ್ಥಳಗಳಲ್ಲಿ ಬಸದಿಗಳನ್ನು ಹೊಸೆದು ಮುಕ್ಕಿ ಶಿವಲಿಂಗ ಸಿಂಹಾಸನಗೈದ ವಿವರಗಳು ಕಾಣುತ್ತೇವೆ. ಜೈನ ಧರ್ಮದ ಮೇಲೆ ನೇರ ಪ್ರಹಾರ ಮಾಡಿದ ಏಕಾಂತದ ರಾಮಯ್ಯನ ವಿಜಯವನ್ನು ಮೆಚ್ಚಿದ ಬಿಜ್ಜಳ ಅವನಿಗೆ ಜಯಪತ್ರ ನೀಡಿದ ವಿಷಯ ಶಾಸನೋಕ್ತವಾಗಿರುವದರಿಂದ ರಾಮಯ್ಯನ ಕಾರ್ಯಕ್ಕೆ ರಾಜನ ಅಂಕಿತ ಬಿದ್ದಂತಾಗಿದೆ.

**ವೈಷ್ಣವ V/s ಜೈನ.**

ಜೈನರಿಗೆ ವೈಷ್ಣವರಿಂದ ಅನ್ಯಾಯವಾದಾಗ ಆನೆಗೊಂದಿ, ಹೊಸ ಪಟ್ಟಣದ ಸಮಸ್ತ್ರ ಜನರು ಬುಕ್ಕರಾಯನ ಬಳಿಗೆ ಹೋಗಿ ಬಿನ್ನಹ ಮಾಡಿಕೊಂಡಾಗ, ಬುಕ್ಕರಾಯನು ವೈಷ್ಣವ ಮತ್ತು ಜೈನ ದರ್ಶನಕ್ಕೂ ಭೇದವಿಲ್ಲವೆಂದು ಹೇಳಿದ ಮಾತು ರಾಜನ ಉದಾತ್ತ ಭಾವನೆಯಾಗಿದ್ದರೂ ಅಂತ್ಯದಲ್ಲಿ ಅದು ವೈಷ್ಣವರ ಪ್ರಾಭಲ್ಯ ಮತ್ತು ಜೈನರ ಕ್ಷೀಣ ಸ್ಥಿತಿಯನ್ನು ಎತ್ತಿ ತೋರಿಸುತ್ತದೆ.

**ವೈಷ್ಣವ V/s ಜೈನ.**

ವೈಷ್ಣವರು ಶೈವರು ಪರಸ್ಪರ ದೂರ ಸರಿಯುತ್ತಿದ್ದುದನ್ನು ಪ್ರೊ. ಎಸ್. ಶೆಟ್ಟರ್ ರವರು ದೇವಾಲಯ ನಿರ್ಮಾಣ ಮತ್ತು ಶಿಲ್ಪಿಗಳಲ್ಲಿ ಗುರುತಿಸಿದ್ದಾರೆ.

**ಜಿಜ್ಞಾಸೆಗೆ ಇಂಬುಕೊಡುವ ವಿಷಯಗಳು.**

- ಕೊಪ್ಪಳವು ಪ್ರಮುಖ ಸ್ಥಾವರ ಕ್ಷೇತ್ರ ಮತ್ತು ಅಲ್ಲಿರುವ ಮೇಘಚಂದ್ರ ಪ್ರಮುಖ ಜಂಗಮ ಕ್ಷೇತ್ರದವರೆಂಬುದನ್ನು ನೋಡಿದಾಗ ಸ್ಥಾವರ ಮತ್ತು ಜಂಗಮ ಪರಿಕಲ್ಪನೆ ೧೨ನೇ ಶತಮಾನಕ್ಕಿಂತಲೂ ಪೂರ್ವದಲ್ಲಿರುವ ಅಸ್ತಿತ್ವ ತೋರಿಸುತ್ತದೆ.

- ಬಸವಕಲ್ಯಾಣದ ಕ್ರಿ.ಶ. ೧೧೦೦ ಶಾಸನ ಅಲ್ಲಿಯ ಚಂದ್ರಪ್ರಭ ಜಿನಾಲಯದಲ್ಲಿ ಗೋಷ್ಠಿ ನಡೆಯುತ್ತಿದ್ದನ್ನು ಹೇಳಿದದೆಲ್ಲದೆ ಈ ಗೋಷ್ಠಿಯಲ್ಲಿ ದೇವಪಾರ್ಯ, ಭರತ, ಶ್ರೀಪತಿ ಮುಂತಾದವರೆಲ್ಲ ಅತ್ಯಂತ ಉತ್ಸಾಹದಿಂದ ಭಾಗವಹಿಸುತ್ತಿದ್ದರಲ್ಲದೆ ಇಲ್ಲಿ ಧನಪತಿಯು ಗುಣಾಗ್ರಣಿಯು ಆದ ಹೀರಪಾಂಕನು ಸಹಸ್ರಕೂಟ ಬಿಂಬವನ್ನು ಈಶ್ವರ ಶೆಟ್ಟಿಯು ಮಾನಸ್ತಂಭವನ್ನು ಮಾಡಿಸಿದರು.

**ಪರಾಮರ್ಶನ ಗ್ರಂಥಗಳು.**

೧. ಡಾ: ಚನ್ನಬಸವಯ್ಯ ಹಿರೇಮಠ; ಕಲ್ಯಾಣ ಕರ್ನಾಟಕದ ಸಂಸ್ಕೃತಿ; ಪು–೧.

೨. ಡಾ: ಚಂದ್ರಶೇಖರ ಬಿರಾದಾರ; Alande 1000 – A Cultural Study un published Ph.D. work; P – 110.

೩. ರಹಮತೆ ತರಿಕೇರಿ; ಕರ್ನಾಟಕ ನಾಥಪಂಥ; ಪು–೩೪.

೪. ಎಸ್.ಜಿ. ಸರ್ದೇಸಾಯಿ; ಪ್ರಾಚೀನ ಭಾರತದಲ್ಲಿನ ದಾರ್ಶನಿಕ ಸಂಘರ್ಷ ಮತ್ತು ಅದರ ಸಮಾಜಿಕ ಮಹತ್ವ; ಪು–೨೪.

೫. ಡಾ: ಚನ್ನಬಸವಯ್ಯ ಹಿರೇಮಠ; ಕಲ್ಯಾಣ ಕರ್ನಾಟಕ ಸಂಸ್ಕೃತಿ; ಪು–೫೮.

೬. ಪೂರ್ವೋಕ್ತ; ಪು–೫೯

೭. ಹನುಮಾಕ್ಷಿ ಗೋಗಿ; ಕಲಬುರ್ಗಿ ಜಿಲ್ಲೆಯ ಶಾಸನಗಳು; ಪು–XX.

೮. ಡಾ: ಸಿ.ಯು. ಮಂಜುನಾಥ; ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ; ಪು–೧೨೩.

೯. ಡಾ: ಗಣಪತಿಗೌಡ ಎಸ್; ಇತಿಹಾಸ ಸಂಪುಟ–೨೦; ಪು–೭೫.

೧೦. ಡಾ: ಚನ್ನಬಸವಯ್ಯ ಹಿರೇಮಠ; ಕಲ್ಯಾಣ ಕರ್ನಾಟಕದ ಸಂಸ್ಕೃತಿ; ಪು–೬೧.

೧೧. ಪೂರ್ವೋಕ್ತ; ಪು–೬೭.

೧೨. ಡಾ: ಸಿ.ಯು. ಮಂಜೂನಾಥ; ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ; ಪು–೬.

೧೩. ಪೂರ್ವೋಕ್ತ; ಪು ಸಂ. – ೦೯

೧೪. ಡಾ: ಚನ್ನಬಸವಯ್ಯ ಹಿರೇಮಠ; ಕಲ್ಯಾಣ ಕರ್ನಾಟಕದ ಸಂಸ್ಕೃತಿ; ಪು–೬೫.

೧೫. ಡಾ: ಸಿ.ಯು. ಮಂಜೂನಾಥ; ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ; ಪು–೧೬.

೧೬. ಡಾ: ಚನ್ನಬಸವಯ್ಯ ಹಿರೇಮಠ; ಕಲ್ಯಾಣ ಕರ್ನಾಟಕದ ಸಂಸ್ಕೃತಿ; ಪು–೬೬

೧೭. ಡಾ: ಸಿ.ಯು. ಮಂಜೂನಾಥ; ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ; ಪು–೧೪೦.

೧೮. ಡಾ: ಸಿ.ಯು. ಮಂಜೂನಾಥ; ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ; ಪು–೧೪೧.

೧೯. ಚಂದ್ರಶೇಖರ ಬಿರಾದಾರ; ಎಮ್.ಆರ್.ಪಿ; ಪು–೬೨.

೨೦. ಚಂದ್ರಶೇಖರ ಬಿರಾದಾರ; ಎಮ್.ಆರ್.ಪಿ; ಪು–೬೬.

೨೧. ಡಾ: ಸಿ.ಎಸ್. ಯತೀಶ್ವರ; ಭಾರತೀಯ ಭಕ್ತಿ ಚಳುವಳಿಗಳು; ಪು–೪೩೭.

೨೨. ಡಾ: ಸಿ.ಯು. ಮಂಜೂನಾಥ; ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ; ಪು–೧೬೪.



## ಶರಣರ ಕಾಯಕ ಪ್ರಸಾದ ದಾಸೋಹ.

–ಶ್ರೀ ರಂಜಾನ್ ದರ್ಗಾ,
"ವಚನ", ಸಿದ್ಧಾರೂಢ ಕಾಲೋನಿ,
ಮದಿಹಾಳ, ಧಾರವಾಡ –೫೮೦೦೦೭.

ಇಡೀ ಬ್ರಹ್ಮಾಂಡವು ಕಾಯಕ ತತ್ತ್ವದ ಮೇಲೆ ನಿಂತಿದೆ. ಪೃಥ್ವಿಯು ಸೂರ್ಯನ ಸುತ್ತ ತಿರುಗುತ್ತ ಸೃಷ್ಟಿಕ್ರಿಯೆಯಲ್ಲಿ ತೊಡಗುವುದು. ಸೂರ್ಯ ಬೆಳಕನ್ನು ಕೊಡುವ ಕಾಯಕ ಮಾಡಿದರೆ ಚಂದಿರನದು ಬೆಳದಿಂಗಳು ಕೊಡುವ ಕಾಯಕ. ಸೂರ್ಯನ ತಾಪಕ್ಕೆ ಸಮುದ್ರದ ನೀರು ಆವಿಯಾಗುವುದು. ಮೋಡಾಗುವುದು, ಮಳೆಯಾಗುವುದು, ಸಕಲ ಜೀವರಾಶಿಗೆ ನೀರಾಗುವುದು. ನದಿಗಳು ತುಂಬಿ ಹರಿಯುವವು. ಸಾಗರದ ಕಡೆಗೆ ಧಾವಿಸುವವು. ಸಮುದ್ರದಲ್ಲಿ ಉಪ್ಪಿನ ಅಂಶ ಹೆಚ್ಚಾಗದಂತೆ ನೋಡಿಕೊಂಡು ಜಲಚರಗಳ ಸಂರಕ್ಷಣೆ ಮಾಡುವವು. ಪಶು ಪಕ್ಷಿಗಳು ಜೀವಜಾಲದ ಕೊಂಡಿಗಳಾಗುವವು. ಕೀಟಗಳು ಪರಾಗಸ್ಪರ್ಶ ಮಾಡುವ ನಮಗೆ ಹೂ ಹಣ್ಣು ಆಹಾರಧಾನ್ಯ ಸಿಗುವಂತೆ ಮಾಡುವವು. ರೈತರು ಸೂರ್ಯಾಸ್ತದ ನಂತರ ಹೊಲದ ಕಾಯಕ ಮುಗಿಸಿ ಮನೆಗೆ ಬಂದರೂ ಎರೆಹುಳುಗಳು ಅವರ ಭೂಮಿಯನ್ನು ಹದಗೊಳಿಸುವಲ್ಲಿ ತಲ್ಲೀನವಾಗಿರುವವು. ಮರಗಳು ಬಯಲಲ್ಲಿ ನಿಂತಲ್ಲೇ ಕಾಯಕದಲ್ಲಿ ತಲ್ಲೀನವಾಗಿರುವವು. ಅವು ಬೇರುಗಳ ಮೂಲಕ ಭೂಮಿ ಮತ್ತು ನೀರಿನ ಜೊತೆ ಸಂಬಂಧ ಹೊಂದಿರುವವು. ಎಲೆಗಳ ಮೂಲಕ ಸೂರ್ಯ ಮತ್ತು ಗಾಳಿಯ ಜೊತೆ ಸಂಬಂಧ ಪಡೆಯುವವು. ಪ್ರಸಾದದ ಹಾಗೆ ಎಷ್ಟು ಬೇಕೊ ಅಷ್ಟು ಮಾತ್ರ ಭೂಮಿಯ ಸತ್ವವನ್ನು ಸ್ವೀಕರಿಸುವವು. ನಂತರ ದಾಸೋಹ ರೂಪದಲ್ಲಿ ನಮಗೆ ಹೂ ಹಣ್ಣು ಮುಂತಾದವುಗಳಲ್ಲದೆ ಪ್ರಾಣವಾಯುವನ್ನು ಕೊಡುವ ಕಾಯಕವನ್ನೂ ಮಾಡುವವು. ಹೀಗೆ ಇಡೀ ಬ್ರಹ್ಮಾಂಡವೇ ಕಾಯಕನಿರತವಾಗಿದೆ.

ನಿಸರ್ಗದಲ್ಲಿ ಒಂದು ಮರ ಕೂಡ ಕಾಯಕ–ಪ್ರಸಾದ–ದಾಸೋಹ ತತ್ತ್ವವನ್ನು ಪಾಲಿಸುವಾಗ ನರರಿಗೇಕೆ ಸಾಧ್ಯವಾಗದು ಎಂದು ಬಸವಧರ್ಮ ಪ್ರಶ್ನಿಸುತ್ತದೆ. ಈ ಎಲ್ಲವುಗಳ ಕಾಯಕದ ಪರಿಣಾಮ ನಮಗೆ ದಾಸೋಹ ರೂಪದಲ್ಲಿ ಸಿಗುತ್ತದೆ. ಇವು ನಿಷ್ಕ್ರಿಯವಾದರೆ ಲೋಕ ನಿರ್ನಾಮವಾಗುವುದು. ಕಾಯಕ ಮತ್ತು ದಾಸೋಹ ನಿಸರ್ಗತತ್ತ್ವಗಳಾಗಿವೆ. ಮಾನವನು ನಿಸರ್ಗದ ಭಾಗವಾಗಿದ್ದಾನೆ. ಆದ್ದರಿಂದ ಆತ ಕಾಯಕ ಮತ್ತು ದಾಸೋಹ ಬಿಟ್ಟು ಬದುಕುವಂತಿಲ್ಲ ಎಂದು ಬಸವಧರ್ಮ ಸಾರುತ್ತದೆ.

ಕಾಯಕವು ನಮ್ಮ ದೈಹಿಕ ಮತ್ತು ಬೌದ್ಧಿಕ ಶಕ್ತಿಯನ್ನು ಹೆಚ್ಚಿಸುವುದು. ನಮ್ಮ ಆರೋಗ್ಯ ಮತ್ತು ಸೌಂದರ್ಯವನ್ನು ಕಾಪಾಡುವುದು. ಮಾನಸಿಕ ಒತ್ತಡಗಳಿಂದ ರಕ್ಷಿಸುವುದು. ಪರಾವಲಂಬಿಗಳಾಗದಂತೆ ನೋಡಿಕೊಳ್ಳುವುದು. ಕೊನೆಗೆ ನಮ್ಮನ್ನು ಸ್ವತಂತ್ರಧೀರರನ್ನಾಗಿ ಮಾಡುವುದು. "ಕೂಡಲಸಂಗನ ಶರಣರು ಸ್ವತಂತ್ರ ಧೀರರು" ಎಂದು ಬಸವಣ್ಣನವರು ಹೇಳುತ್ತಾರೆ.

ಕಾಯಕ ಮಾಡದೆ ಬದುಕುವವನಿಗೆ ಹಸಿವು, ರುಚಿ, ವಿಶ್ರಾಂತಿ ಮತ್ತು ನಿದ್ರೆಯ ಮಹತ್ವ ಗೊತ್ತಾಗುವುದಿಲ್ಲ. ಕಾಯಕ ಜೀವಿಯ ಹಸಿವು ಎಲ್ಲ ಆಹಾರ ಪದಾರ್ಥಗಳನ್ನು ಪ್ರಸಾದವಾಗಿಸುತ್ತದೆ. ರುಚಿಕರವಾಗಿಸುತ್ತದೆ. ಆತನಿಗೆ ವಿಶ್ರಾಂತಿ ಮತ್ತು ನಿದ್ರೆಯ ಸುಖ ಸಹಜವಾಗಿಯೇ ಸಿಗುತ್ತದೆ. ಸತ್ಯಶುದ್ಧ ಕಾಯಕದಿಂದ ಮನಸ್ಸು ಪವಿತ್ರವಾಗುತ್ತದೆ. ಆದ್ದರಿಂದ ಕಾಯಕ ತತ್ತ್ವವು ವಿಶ್ವಮಾನ್ಯವಾಗಿದೆ.

**"ಕಾಯಕದಲ್ಲಿ ನಿರತನಾದರೆ, ಗುರುದರ್ಶನವಾದರೂ ಮರೆಯಬೇಕು,**
**ಲಿಂಗಪೂಜೆಯಾದರೂ ಮರೆಯಬೇಕು,**
**ಜಂಗಮ ಮುಂದೆ ನಿಂದಿದ್ದರೂ ಹಂಗ ಹರಿಯಬೇಕು.**
**ಕಾಯಕವೇ ಕೈಲಾಸವಾದ ಕಾರಣ.**
**ಅಮರೇಶ್ವರಲಿಂಗವಾಯಿತ್ತಾದರೂ ಕಾಯಕದೊಳಗು."**

ಎಂದು ಆಯ್ದಕ್ಕಿ ಮಾರಯ್ಯನವರು ಹೇಳಿದ್ದಾರೆ. ಶರಣಸಂಕುಲದ ಹೆಮ್ಮೆಯ ವಚನ ಇದಾಗಿದೆ.

ನಿಸರ್ಗಪರವಾದ ಕಾಯಕದ ಮೇಲೆ ನಿಂತ ಬಸವದರ್ಶನವನ್ನು ಮಾರಯ್ಯನವರು ಅಪ್ಪಿಕೊಂಡರು. ಕಾಯಕವೇ ಎಲ್ಲದಕ್ಕೂ ಆಧಾರ. ಕಾಯಕವಿಲ್ಲದಿದ್ದರೆ ಇಡೀ ಲೋಕ ನಿಷ್ಕ್ರಿಯವಾಗುವುದರಿಂದ ಗುರು, ಲಿಂಗ ಮತ್ತು ತತ್ತ್ವಪ್ರಸಾರದ ಜಂಗಮರಿಗೂ ಆಧಾರವಿಲ್ಲದಂತಾಗುತ್ತದೆ. ಈ ಹಿನ್ನೆಲೆಯಲ್ಲಿ ಇದೊಂದು ವಿಶಿಷ್ಟ ವಚನವಾಗಿದೆ.

ಮಾರಯ್ಯನವರು ಗುರು, ಲಿಂಗ ಮತ್ತು ತತ್ತ್ವಜಂಗಮರ ಅವಹೇಳನ ಮಾಡುವುದಿಲ್ಲ. ಆದರೆ ಗುರು, ಲಿಂಗ, ಜಂಗಮರ ಹಾಗೂ ಒಟ್ಟಾರೆ ಸಕಲ ಜೀವಾತ್ಮರ ಸಂರಕ್ಷಣೆಗಾಗಿ ಕಾಯಕ ಎಷ್ಟೊಂದು ಮಹತ್ವದ್ದಾಗಿದೆ ಎಂಬುದನ್ನು ತಿಳಿಸುವುದಕ್ಕಾಗಿ ಮಾತ್ರ ಅವರು ಈ ವಿಚಾರ ತಿಳಿಸಿದ್ದಾರೆ.

ಕಾಯಕದಲ್ಲಿ ಮಗ್ನವಾದಾಗ ದೇವರಿಗೆ ಪ್ರಿಯವಾದುದನ್ನೇ ಮಾಡುತ್ತ ಸ್ವಾವಲಂಬಿಯಾಗಬೇಕು. ನಂತರ ದಾಸೋಹದ ಮೂಲಕ ಸಮಾಜಕ್ಕೆ ಅಳಿಲುಸೇವೆ ಸಲ್ಲಿಸಬೇಕು ಎಂಬುದನ್ನು ಬಸವಾದಿ ಶರಣರು ಹೀಗೆ ತಮ್ಮ ವಚನಗಳ ಮೂಲಕ ನಮಗೆ ಅನೇಕ ಕಡೆಗಳಲ್ಲಿ ಸೂಚಿಸಿದ್ದಾರೆ.

ಆಯ್ದಕ್ಕಿ ಮಾರಯ್ಯನವರಿಗೆ ಎಂಥ ಆತ್ಮವಿಶ್ವಾಸ ಮೂಡಿದೆ ಎಂದರೆ, ಅವರು ಕಾಯಕದಲ್ಲಿ ನಿರತರಾದಾಗ ಗುರುವಿನ ದರ್ಶನ, ಲಿಂಗಪೂಜೆ ಮತ್ತು ಜಂಗಮಸೇವೆಯನ್ನು ಕೂಡ ಮರೆಯಲು ಸಿದ್ಧರಿದ್ದಾರೆ. ಕಾಯಕದಲ್ಲೇ ಕೈಲಾಸವನ್ನು ಮತ್ತು ಆ ಕೈಲಾಸದಲ್ಲಿರುವ ದೇವರನ್ನೂ ಕಾಣುವ ಒಳನೋಟವನ್ನು ಅವರು ಹೊಂದಿದ್ದಾರೆ. ಅಯ್ದಕ್ಕಿ ಮಾರಯ್ಯನವರಂಥ ಬಡ ಕಾಯಕಜೀವಿಗಳು ಇಷ್ಟೊಂದು ಉನ್ನತವಾಗಿ ಚಿಂತನೆ ಮಾಡಬೇಕಾದರೆ ಬಸವಣ್ಣನವರು ಇಂಥ ತುಳಿತಕ್ಕೊಳಗಾದವರಿಗೆಲ್ಲ ಸಾಕ್ಷರರನ್ನಾಗಿಸಿ ಅದು ಹೇಗೆ ವೈಚಾರಿಕತೆ ಬೆಳೆಸಿದರು ಎಂಬುದು ಆನಂದಾಶ್ಚರ್ಯವನ್ನು ಉಂಟುಮಾಡುವಂಥದ್ದು.

ಕಾಯಕ ನಿರತರಾದಾಗ ಗುರುದರ್ಶನ, ಲಿಂಗಪೂಜೆ ಮತ್ತು ಜಂಗಮಸೇವೆಯ ಯೋಚನೆ ಮಾಡಬಾರದು. ಏಕೆಂದರೆ 'ಕಾಯಕದ ಪರಿಣಾಮವು ಗುರು ಲಿಂಗ ಜಂಗಮಕ್ಕಾಗಿಯೇ ಇದೆ' ಎಂಬ ಸೂಕ್ಷ್ಮತೆಯನ್ನು ಆಯ್ದಕ್ಕಿ ಮಾರಯ್ಯನವರ ಈ ವಚನ ಹೊಂದಿದೆ. ಗುರು ಲಿಂಗ ಜಂಗಮ ಮತ್ತು ಬದುಕಿನ ಒಳ್ಳೆಯದೆಲ್ಲ ಆ ಕಾಯಕದೊಳಗೇ ಇದೆ ಎಂಬ ಭಾವವನ್ನು ಈ ವಚನ ಪ್ರತಿಪಾದಿಸುತ್ತದೆ. ಅಂತೆಯೆ 'ಕಾಯಕವೇ ಕೈಲಾಸ' ಎಂಬುದು ಬಸವಧರ್ಮದ ಘೋಷವಾಕ್ಯವಾಗಿ ಅಂದರೆ ಮಹಾವಾಕ್ಯವಾಗಿ ಜನಮನದಲ್ಲಿ ಅಚ್ಚೊತ್ತಿದೆ.

'ಕಾಯಕವೇ ಕೈಲಾಸವಾದ ಕಾರಣ ದೇವರು ಕಾಯಕದೊಳಗೇ ಇರುತ್ತಾನೆ' ಎಂಬ ಮಾತು ಕಾಯಕದ ಬಗೆಗೆ ಶರಣರಿಗಿರುವ ಗೌರವದ ಪ್ರತೀಕವಾಗಿದೆ. ಶರಣರು ಕಾಯಕದ ಮೂಲಕ ಕೈಲಾಸವನ್ನು ಮತ್ತು ದೇವರನ್ನು ಕಂಡರು. ಕಾಯಕದ ಅನುಭವವನ್ನೇ ಮೆಟ್ಟಿಲಾಗಿಸಿಕೊಂಡು ಅನುಭಾವದ ತುದಿಯನ್ನು ತಲುಪಿದರು. ಅನುಭಾವವು ಬಸವಧರ್ಮದ ತತ್ತ್ವಜ್ಞಾನ(ಅಧ್ಯಾತ್ಮ)ವಾಗಿದೆ.

ಆದರೆ ನಮ್ಮ ದೇಶದ ಧರ್ಮಶಾಸ್ತ್ರಗಳು ಅಧ್ಯಾತ್ಮಕ್ಕೂ ಕಾಯಕಕ್ಕೂ ಸಂಬಂಧವನ್ನು ಕಲ್ಪಿಸಲೇ ಇಲ್ಲ. ಸಾಧುಗಳು, ಸನ್ಯಾಸಿಗಳು, ಸ್ವಾಮಿಗಳು, ಯೋಗಿಗಳು ಮತ್ತು ಯತಿಗಳು 'ಕಾಯಕದಿಂದಲೇ ಧರ್ಮ' ಎಂಬ ವಿಚಾರದ ಕಡೆಗೆ ಗಮನ ಹರಿಸಲಿಲ್ಲ. ದೊಡ್ಡ ದೊಡ್ಡ ತತ್ತ್ವಜ್ಞಾನದ ಮಾತುಗಳನ್ನು ಹೇಳುತ್ತ ಪರಾವಲಂಬಿಗಳಾಗಿ ಬದುಕುವದು ಇನ್ನೂ ನಡೆದೇ ಇದೆ. ಹೀಗೆ ನಿಷ್ಕ್ರಿಯ ಬದುಕನ್ನು ಸಾಗಿಸುವವರು ಜ್ಞಾನವನ್ನು ಕ್ರಿಯೆಗೆ ಇಳಿಸುವಲ್ಲಿ ಸೋತರು. ಉಪದೇಶ ಮಾಡುವುದೇ ಇವರ ಕಾಯಕವಾಯಿತು. ಇಂಥವರಲ್ಲಿ ಅನೇಕರು ಸಾತ್ವಿಕರೂ ಧರ್ಮಭೀರುಗಳೂ ಇದ್ದರು. ಆದರೆ ಅವರಲ್ಲಿನ ಕೆಲವರು, ರಾಜರಿಗಿರುವ ಸೌಲಭ್ಯಗಳನ್ನು ಕೂಡ ಪಡೆಯುವಲ್ಲಿ ಸಫಲರಾದರು. ಬೆಳ್ಳಿಯ ಪಲ್ಲಕ್ಕಿ, ನವರತ್ನಗಳಿಂದ ಕೂಡಿದ ಬಂಗಾರದ ಕಿರೀಟ, ಆನೆ, ಅಂಬಾರಿ, ಕುದುರೆ, ರಥ ಮತ್ತು ನೂರಾರು ಸೇವಕರನ್ನು ಹೊಂದಿ ಭಾರಿ ಮಠಮಾನ್ಯಗಳ ಒಡೆಯರಾಗಿದ್ದರು.

ಕಳ್ಳರು, ಸುಳ್ಳರು, ದರೋಡೆಕೋರರು, ಮೋಸಗಾರರು, ಕೊಲೆಗಡುಕರು, ಸುಲಿಗೆಕೋರರು, ಶ್ರೀಮಂತರು, ರಾಜ ಮಹಾರಾಜರು ಹೀಗೆ ಈ ಎಲ್ಲ ಪ್ರಕಾರದ ಜನರು ಇಂಥ ಧರ್ಮಬೋಧಕರ ಮಾತುಗಳಿಗೆ ಮರಳಾಗುತ್ತಲೇ ಇದ್ದುದಕ್ಕೆ ಇತಿಹಾಸ ಸಾಕ್ಷಿ ಇದೆ. 'ತ್ರಿಕಾಲಜ್ಞಾನಿಗಳು' ಎಂದು ಕರೆಯಿಸಿಕೊಳ್ಳುವ ಇಂಥವರು ಉಳ್ಳವರಿಗೆ ನರಕದ ಭಯವನ್ನು ಮತ್ತು ಸ್ವರ್ಗದ ಆಸೆಯನ್ನು ಹುಟ್ಟಿಸುತ್ತಿದ್ದರು. ಅವರನ್ನು ಪಾಪಕರ್ಮಗಳಿಂದ ವಿಮೋಚನೆಗೊಳಿಸುವುದಾಗಿ ಹೇಳಿ ಯಜ್ಞಯಾಗಾದಿಗಳನ್ನು ಮಾಡಿಸುತ್ತಿದ್ದರು. ನರಕದ ಭಯದೊಂದಿಗೆ ಸ್ವರ್ಗದ ಆಸೆಯನ್ನು ಹಚ್ಚುವುದರ ಮೂಲಕ ಅವರಿಂದ ಭಾರಿ ಮೊತ್ತದ ಧನಕನಕ ಮತ್ತು ಆಸ್ತಿಪಾಸ್ತಿ ಪಡೆಯುತ್ತಿದ್ದರು. ಪುಣ್ಯ ಲಭಿಸುವುದೆಂಬ ಭ್ರಮೆಯಲ್ಲಿ ಕಾಯಕಜೀವಿಗಳು ಕೂಡ ಇಂಥ 'ಮಹಾತ್ಮರ' ಬಿಟ್ಟಿ ಸೇವೆ ಮಾಡುತ್ತ ಬದುಕುತ್ತಿದ್ದರು. ಸೂಕ್ಷ್ಮಮತಿಗಳಾದ ಬಸವಣ್ಣನವರು ಇದನ್ನೆಲ್ಲ ಗಮನಿಸಿದರು.

ರಾಜರು, ಶ್ರೀಮಂತರು ಮತ್ತು ಧರ್ಮಗುರುಗಳು ಕೂಡಿಯೆ ಬಹುಸಂಖ್ಯಾತರಾದ ಕಾಯಕಜೀವಿಗಳ ಶೋಷಣೆ ಮಾಡುತ್ತಿರುವುದನ್ನು ತಪ್ಪಿಸುವುದೇ ಬಸವಣ್ಣನವರ ಉದ್ದೇಶವಾಗಿತ್ತು. ಧರ್ಮದ ವಿಚಾರದಲ್ಲಿ ದೇವರು ಮತ್ತು ಮಾನವರ ಮಧ್ಯೆ ಪೂಜಾರಿಗಳೆಂಬ ಮಧ್ಯವರ್ತಿಗಳನ್ನು ತೆಗೆದರು. ಜನರು ನೇರವಾಗಿ ತಮ್ಮ ಮತ್ತು ದೇವರ ಮಧ್ಯೆ ಸಂಬಂಧ ಕಲ್ಪಿಸುವಂಥ ಇಷ್ಟಲಿಂಗದ ಬಗ್ಗೆ ಜನರಲ್ಲಿ ಅರಿವು ಮೂಡಿಸಿದರು. 'ದೇಹವೇ ದೇವಾಲಯವೆಂದು ತಿಳಿಸುವ ಮೂಲಕ ದೇವರು ದೇವಾಲಯಗಳಲ್ಲಿ ಇಲ್ಲ, ನಿಮ್ಮೊಳಗೇ ಇದ್ದಾನೆ' ಎಂದು ಸಾರಿದರು. ಅಂತೆಯೆ ಕಾಯಕಜೀವಿಗಳನ್ನು ಒಂದು ಸಂಕುಲವಾಗಿಸಿ, ಅವರನ್ನು ವೈಚಾರಿಕ ನೆಲೆಗೆ ತಂದರು.

ಬಸವಧರ್ಮದಲ್ಲಿ ಸಂಕುಲಕ್ಕೆ ವಿಶಿಷ್ಟವಾದ ಅರ್ಥವಿದೆ. ಸಂಕುಲ ಎಂದರೆ ಬರಿ ಗುಂಪು ಅಥವಾ ಸಮೂಹ ಅಲ್ಲ. ಪ್ರಾಣಿ ಸಂಕುಲ ಎಂದರೆ ಇಲಿ, ಹುಲಿ ಸಮೇತ ಅದರೊಳಗೆ ಎಲ್ಲ ಪ್ರಾಣಿಗಳೂ ಬರುವವು. ಪ್ರತಿಯೊಂದು ಪ್ರಾಣಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುವುದು. ಹೀಗಾಗಿ ಪ್ರಾಣಿವಿಜ್ಞಾನದಲ್ಲಿ ಹುಲಿಗೆ ಇರುವ ಮಹತ್ವ ಇಲಿಗೂ ಇದೆ. ಅದೇ ರೀತಿ ಎಲ್ಲ ಪ್ರಾಣಿಗಳು ಕೂಡ ತಮ್ಮದೇ ಆದ ವೈಶಿಷ್ಟ್ಯವನ್ನು ಹೊಂದಿರುತ್ತವೆ ಎಂಬ ಸತ್ಯವನ್ನು ಪ್ರಾಣಿವಿಜ್ಞಾನ ಎತ್ತಿಹಿಡಿಯುತ್ತದೆ. ಅದೇ ರೀತಿ ಎಲ್ಲ ಮಾನವರೂ ಸಮಾನರು. ಆದರೆ ಮಾನವರ ಮಧ್ಯೆ ಮಾನವರೇ ನಿರ್ಮಿಸಿಕೊಂಡ ಭೇದಗಳಿವೆ.

ಚಿಂತನೆ, ಪ್ರತಿಭೆ, ಜ್ಞಾನ, ಕಾರ್ಯಕ್ಷಮತೆ ಮುಂತಾದ ವಿಚಾರಗಳಲ್ಲಿ ಹೆಣ್ಣು, ಗಂಡು, ಶ್ರೀಮಂತ, ಬಡವ, ಸವರ್ಣೀಯ, ಶೂದ್ರ, ಅಸ್ಪೃಶ್ಯ ಎಂಬ ಭೇದಭಾವ ಸಲ್ಲದು. ಏಕೆಂದರೆ ಮಾನವರ ಜ್ಞಾನಕ್ಕೆ ಲಿಂಗಭೇದ, ಜಾತಿಭೇದ, ವರ್ಣಭೇದ ಮತ್ತು ವರ್ಗಭೇದಗಳಿಲ್ಲ. ಆದರೆ ನಮ್ಮ ಸಮಾಜದಲ್ಲಿ ಇಂಥ ಭೇದಗಳಿವೆ. ಸಮಾಜದಿಂದ ಈ ಅನಿಷ್ಟಗಳನ್ನು ತೊಲಗಿಸಿ ಮಾನವ ಏಕತೆಯನ್ನು ಸಾಧಿಸುವಂಥ ವಚನ ಚಳವಳಿಯನ್ನು ಮಹಾ ಮಾನವತಾವಾದಿ ಬಸವಣ್ಣನವರು ೧೨ನೇ ಶತಮಾನದಲ್ಲಿ ಪ್ರಾರಂಭಿಸಿದರು.

ಗುಡಿಗಳಿಂದ, ಮೂರ್ತಿಗಳಿಂದ ತೀರ್ಥಕ್ಷೇತ್ರಗಳಿಂದ, ಶಾಸ್ತ್ರಗಳಿಂದ, ಕರ್ಮಸಿದ್ಧಾಂತ ಮತ್ತು ಪಂಚಾಂಗಗಳಿಂದ ಜನರನ್ನು ಮುಕ್ತಗೊಳಿಸಿ ಕಾಯಕ ಪ್ರಧಾನವಾದ ಜೀವನಮಾರ್ಗವನ್ನು ತೋರಿಸುವಂಥ ಹೊಸಧರ್ಮವನ್ನೇ ಬಸವಾದಿ ಶರಣರು ಜಾರಿಗೆ ತಂದರು. ಈ ಹೊಸ ಧರ್ಮವು ಅರಿವು ಆಚಾರದ ಧರ್ಮವಾಯಿತು. ದುಡಿಯುವವರಿಗೆ ಸಮಾಜದಲ್ಲಿ ಸಮಾನ ಸ್ಥಾನ ಕೊಡುವ ಧರ್ಮವಾಯಿತು. ಸಮಾಜದಲ್ಲಿನ ಜಾತಿ, ಅಸ್ಪೃಶ್ಯತೆ ಮುಂತಾದ ಮೇಲು ಕೀಳುಗಳನ್ನು ನಿವಾರಿಸುವ ಧರ್ಮವಾಯಿತು.

ಇಂಥ ಅನುಪಮ ಧರ್ಮದಿಂದ ಕಾಯಕಜೀವಿಗಳು ಪುಳಕಿತಗೊಂಡರು. 'ಕಾಯಕಕ್ಕಿಂತ ದೊಡ್ಡದು ಯಾವುದೂ ಇಲ್ಲ' ಎಂಬ ಸತ್ಯವನ್ನು ಅವರು ಅರಿತರು. ಸವರ್ಣೀಯರು ಸುಖದಿಂದ

ಬದುಕುತ್ತಿರುವುದು ತಮ್ಮ ಕಾಯಕದ ಉತ್ಪಾದನೆಗಳಿಂದಲೇ ಎಂಬುದು ಅವರಿಗೆ ಮನವರಿಕೆಯಾಯಿತು. ತಮ್ಮ ಕಾಯಕವೇ ತಮ್ಮನ್ನು ಸಲಹುತ್ತದೆ ಎಂಬ ವಾಸ್ತವವನ್ನು ಅವರು ಅರಿತರು.

ಹೀಗೆ ಬಸವಣ್ಣನವರು ದುಡಿಯುವ ಜನರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿದರು. ಪರಾವಲಂಬಿಗಳ ಅಧ್ಯಾತ್ಮವನ್ನು ಅಲ್ಲಗಳೆದರು. ಕಾಯಕದ ಅನುಭವದಿಂದ ಮಾತ್ರ ಪರಮಾತ್ಮನ ಅನುಭಾವವಾಗುವುದು ಎಂಬುದನ್ನು ಅವರಿಗೆ ಹೇಳಿಕೊಟ್ಟರು. ಹೀಗೆ ಬಸವಣ್ಣನವರು ದುಡಿಯುವ ವರ್ಗವನ್ನು ವಿಮೋಚನೆಗೊಳಿಸಿದರು.

ಕಾಯಕದ ಅನುಭವದಿಂದ ಪರಮಾತ್ಮನ ಅನುಭಾವವಾಗುವುದು ಎಂಬುದು ಬಸವಣ್ಣನವರು ಕಂಡುಕೊಂಡ ಸತ್ಯವಾಗಿದೆ. ಕಾಯಕದ ಅನುಭವವಿಲ್ಲದೆ ಅನುಭಾವದ ಸಾಕ್ಷಾತ್ಕಾರವಾಗದು. ಇಂಥ ಹೊಸ ತತ್ತ್ವಜ್ಞಾನವನ್ನು ಬಸವಣ್ಣನವರು ಜಗತ್ತಿಗೆ ಕೊಟ್ಟರು. ಇದುವೆ ಅನುಭಾವ ದರ್ಶನ. ಅನುಭಾವ ದರ್ಶನ ಪಡೆಯಬೇಕಾದರೆ ಕಾಯಕ ಮಾಡಲೇಬೇಕು. ಹಿಮಾಲಯದಲ್ಲಿ, ಅರಣ್ಯದಲ್ಲಿ, ಗುಹೆಯಲ್ಲಿ ಕುಳಿತು ತಪಸ್ಸು ಮಾಡುವ ಮೂಲಕ ಅನುಭಾವ ಪಡೆಯಲು ಸಾಧ್ಯವಿಲ್ಲ. ಹಾಗೆ ನೋಡಿದರೆ ಕಾಯಕದ ಮೂಲಕವೇ ವಾನರ ನರನಾಗಿ ಔನ್ನತ್ಯ ಸಾಧಿಸಿದ್ದಾನೆ.

ಸಮತಾವಾದದ ಜನಕ ಕಾರ್ಲ್ ಮಾರ್ಕ್ಸ್ ಅವರ ಆಪ್ತ ಸಂಗಾತಿಯಾಗಿದ್ದ ಫ್ರೆಡರಿಕ್ ಏಂಗೆಲ್ಸ್ ಅವರು ತಮ್ಮ "ದಿ ಪಾರ್ಟ್ ಪ್ಲೇಯ್ಡ್ ಬೈ ಲೇಬರ್ ಇನ್ ದಿ ಟ್ರಾಂಜಿಷನ್ ಫ್ರಾಂ ಏಪ್ ಟು ಮ್ಯಾನ್" (ವಾನರ ನರ ಆಗಿ ಪರಿವರ್ತನೆ ಆಗುವಲ್ಲಿ ದುಡಿಮೆಯ ಪಾತ್ರ) ಎಂಬ ಕಿರುಹೊತ್ತಿಗೆಯಲ್ಲಿ "ವಾನರನಿಂದ ನರನಾಗುವ ಪ್ರಕ್ರಿಯೆಯಲ್ಲಿ ಕಾಯಕದ ಪಾತ್ರ ಮಹತ್ವದ್ದಾಗಿದೆ" ಎಂದು ತಿಳಿಸಿದ್ದಾರೆ. "ಮಾನವನ ಎಲ್ಲ ಇರುವಿಕೆಗೆ ದುಡಿಮೆ ಮೊಟ್ಟಮೊದಲ ಆಧಾರ. ಇದು ಎಷ್ಟರ ಮಟ್ಟಿಗೆ ನಿಜವೆಂದರೆ ಒಂದರ್ಥದಲ್ಲಿ ದುಡಿಮೆಯೆ ಮನುಷ್ಯನನ್ನು ಸೃಷ್ಟಿಸಿತೆಂದು ನಾವು ಹೇಳಬೇಕಾಗುತ್ತದೆ." ಎಂದು ಏಂಗೆಲ್ಸ್ ಬರೆದಿದ್ದಾರೆ. "ದುಡಿಮೆಯ ಐತಿಹಾಸಿಕ ಪ್ರಕ್ರಿಯೆಯಿಂದಾಗಿ ಮಾನವನ ಮನಸ್ಸು ಮತ್ತು ದೇಹ ರೂಪುಗೊಂಡಿವೆ" ಎಂದು ಅವರು ತಿಳಿಸಿದ್ದಾರೆ.

ವಾನರ ಜಾತಿಯ ಒಂದು ಪ್ರಭೇದವಾಗಿರುವ ನರ, ದುಡಿಮೆಯಿಂದಾಗಿ ಇಂದು ಮಾನವರೂಪ ತಾಳಿ ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಮುಂದುವರಿದು ಸಂಸ್ಕೃತಿ ಮತ್ತು ನಾಗರೀಕತೆಗಳ ವಿವಿಧ ಹಂತಗಳನ್ನು ತಲುಪಿದ್ದಾನೆ. ಮಾನವಶರೀರ ಮತ್ತು ಮನಸ್ಸು ಹೀಗೆ ರೂಪುಗೊಳ್ಳಲು ಲಕ್ಷಾಂತರ ವರ್ಷಗಳು ಹಿಡಿದಿವೆ. ಇವೆಲ್ಲ ಕಾಯಕ ಸಿದ್ಧಾಂತದ ಮೂಲಾಧಾರಗಳಾಗಿವೆ.

ಕಾಯಕವು ಮಾನವ ಏಕತೆಯನ್ನು ಸಾಧಿಸುವ ಮೂಲಮಂತ್ರವಾಗಿದೆ. ಕಾಯಕವು ಭೂಲೋಕದ ಮಹತ್ವವನ್ನು ತಿಳಿಸುತ್ತದೆ. ಈ ಭೂಮಿಯನ್ನು ಬದುಕಲು ಹೆಚ್ಚು ಯೋಗ್ಯವಾಗುವಂತೆ ಮಾಡುತ್ತದೆ. ಕಾಯಕವು ಮಾನವರ ಮಧ್ಯದ ಅಂತಸ್ತುಗಳನ್ನು ಒಡೆದು ಹಾಕುತ್ತದೆ ಮತ್ತು ಕಂದಕಗಳನ್ನು ತುಂಬುತ್ತದೆ. ಕಾಯಕ ಮಾಡುವುದೆಂದರೆ ಬದುಕನ್ನು ಪ್ರೀತಿಸುವುದು.

ಮೊದಲಿಗೆ ಮಾನವರೆಲ್ಲರೂ ಕಾಯಕಜೀವಿಗಳೇ ಆಗಿದ್ದರು. ಆದರೆ ನಾಗರೀಕತೆ ಬೆಳೆದಂತೆಲ್ಲ ದುಡಿಸಿಕೊಳ್ಳುವವರು ಮತ್ತು ದುಡಿಯುವವರು ಎಂಬ ವರ್ಗಗಳು ಸಮಾಜದಲ್ಲಿ ಸೃಷ್ಟಿಯಾದವು. ದುಡಿಸಿಕೊಳ್ಳುವ ವರ್ಗದವರು ಕಡಿಮೆ ಸಂಖ್ಯೆಯಲ್ಲಿದ್ದು ದುಡಿಯುವ ವರ್ಗದವರು ಹೆಚ್ಚಿನ ಸಂಖ್ಯೆಯಲ್ಲಿರುವರು. ಈ ತಾರತಮ್ಯವನ್ನು ಗಮನಿಸಿದ ಬಸವಣ್ಣನವರು ದುಡಿಯುವ ವರ್ಗದ ಜನರ ಬದುಕನ್ನು ಸುಂದರಗೊಳಿಸುವಲ್ಲಿ ಕೊನೆಯವರೆಗೂ ಕ್ರಿಯಾಶೀಲರಾಗಿದ್ದರು. ದೊರೆ ಬಿಜ್ಜಳನ ಕಲ್ಯಾಣ ರಾಜ್ಯದ ಪ್ರಧಾನಿಯಾಗಿ ಆಡಳಿತದಲ್ಲಿ ಭಾರಿ ಸುಧಾರಣೆ ತರುವುದರ ಜೊತೆಗೇ ಕಾಯಕಜೀವಿಗಳ ಬದುಕಿನಲ್ಲೂ ಬದಲಾವಣೆ ತಂದರು. ಎಲ್ಲ ಕಾಯಕಜೀವಿಗಳನ್ನು ಒಂದುಗೂಡಿಸಿ ಶರಣಸಂಕುಲ ಎಂಬ ನವಸಮಾಜದ ನಿರ್ಮಾಣ ಮಾಡಿದರು. ಲಿಂಗ, ಜಾತಿ ಮತ್ತು ವರ್ಗಭೇದಗಳಿಲ್ಲದ ಸಮಾಜ ಇದಾಗಿತ್ತು.

**“ದೇವಸಹಿತ ಭಕ್ತ ಮನೆಗೆ ಬಂದರೆ**
**ಕಾಯಕವಾವುದೆಂದು ಬೆಸಗೊಂಡೆನಾದರೆ**
**ನಿಮ್ಮಾಣೆ! ನಿಮ್ಮ ಪುರಾತರಾಣೆ! ತಲೆದಂಡ! ತಲೆದಂಡ!**
**ಕೂಡಲಸಂಗಮದೇವಾ ಭಕ್ತರಲ್ಲಿ ಕುಲವನರಿಸಿದರೆ**
**ನಿಮ್ಮ ರಾಣಿವಾಸದಾಣೆ.”**

ಎಂದು ಬಸವಣ್ಣನವರು ಹೇಳಿದ್ದಾರೆ.

ಇಷ್ಟಲಿಂಗ ಧಾರಣೆ ಮಾಡಿದನಂತರ ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ, ಕಾಯಕಜೀವಿಗಳ ಮಕ್ಕಳಾಗಲಿ ಅಥವಾ ರಾಜರ ಮಕ್ಕಳೇ ಆಗಲಿ ಸರ್ವರೂ ಸಮಾನರಾಗುವರು ಎಂದು ಬಸವಣ್ಣನವರು ಹೇಳಿದ್ದಾರೆ. ಇಷ್ಟಲಿಂಗವು ಅರಿವಿನ ಕುರುಹು ಆಗಿದೆ. 'ಎಲ್ಲ ಭೇದಗಳನ್ನು ಅಳಿದು ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ದಾರ್ಶನಿಕವಾಗಿ ಸಮತಾ ಭಾವ ತಾಳುವುದೇ ಅರಿವು' ಎಂಬುದು ಬಸವಾದಿ ಶರಣರ ನಿಲವಾಗಿದೆ. ಈ ಅರಿವನ್ನು ಪಡೆಯಲು ಮೊದಲಿಗೆ ಕಾಯಕಗಳಿಗೆ ಅಂಟಿಕೊಂಡ ಜಾತಿಗಳನ್ನು ಕಳೆದು ಆ ಕಾಯಕಗಳ ಮಧ್ಯೆ ಸಮಾನತೆ ಸಾಧಿಸುವ ಛಲವನ್ನು ಹೊಂದಬೇಕಾಗುತ್ತದೆ. ಬಸವಧರ್ಮದಲ್ಲಿ 'ಸಮಗಾರ ಹರಳಯ್ಯನವರು' ಎಂದರೆ 'ಸಮಗಾರ ಜಾತಿಯ ಹರಳಯ್ಯನವರು' ಎಂಬ ಅರ್ಥವಲ್ಲ. 'ಸಮಗಾರ ಕಾಯಕದ ಹರಳಯ್ಯನವರು' ಎಂದು ಅರ್ಥವಾಗುತ್ತದೆ. ಜಾತಿಗಳನ್ನು ನಿರ್ನಾಮ ಮಾಡಿ ಕಾಯಕಗಳನ್ನು ಉಳಿಸಿಕೊಳ್ಳುವುದೇ ಬಸವಣ್ಣನವರ ಚಿಂತನೆಯಾಗಿತ್ತು. ಅಲ್ಲದೆ ಕಾಯಕಗಳು ಆಯಾ ಮನೆತನಗಳಿಗೆ ಸೀಮಿತವಾಗಿರದೆ, ಯಾರು ಬೇಕಾದರೂ ಯಾವುದೇ ಕಾಯಕ ಮಾಡಬಹುದಿತ್ತು. ಕಾಯಕಗಳಲ್ಲಿ ಮೇಲುಕೀಳು ಎಂಬುದಿಲ್ಲ. ಬಸವಣ್ಣನವರದು ಪ್ರಧಾನಿ ಕಾಯಕವಾಗಿತ್ತು. ಸಮಗಾರ ಹರಳಯ್ಯನವರದು ಚಮ್ಮಾವುಗೆಗಳನ್ನು ಮಾಡುವ ಕಾಯಕವಾಗಿತ್ತು. ಇಬ್ಬರೂ ತಮ್ಮ ಕಾಯಕಗಳನ್ನು ನಿಷ್ಠೆಯಿಂದ ಮಾಡುವ ಮೂಲಕ ಸಮಾನರಾದರು. ಹೀಗೆ ಬಸವಣ್ಣನವರ ಕಾಯಕಪ್ರಜ್ಞೆ ಸಮಾನತೆಯ ಮೂಲವಾಯಿತು. ಆ ಮೂಲಕ ಮಾನವಕುಲವನ್ನು ಸಮಾನತೆಯ ತಳಹದಿಯ ಮೇಲೆ ನಿಲ್ಲಿಸಲು ಬಸವಣ್ಣನವರು ಪ್ರಯತ್ನಪಟ್ಟರು. ಆದ್ದರಿಂದಲೇ **“ಕೂಡಲಸಂಗಮದೇವಾ ಭಕ್ತರಲ್ಲಿ ಕುಲವನರಿಸಿದರೆ ನಿಮ್ಮ ರಾಣಿವಾಸದಾಣೆ.”** ಎಂದು ಅವರು ಸಾರಿದ್ದಾರೆ.

**“**ತನು ಮನ ಬಳಲದೆ ಉದ್ದಂಡವೃತ್ತಿಯಲ್ಲಿ ಧನವ ಗಳಿಸಿ ತಂದು ಗುರುಲಿಂಗಜಂಗಮಕ್ಕೆ ವೆಚ್ಚಿಸಿ, ದಾಸೋಹವ ಮಾಡಿ, ಭಕ್ತರಾದೆವೆಂಬರನೆನಗೆ ತೋರದಿರಯ್ಯಾ**”** ಎಂದು ಚನ್ನಬಸವಣ್ಣನವರು ಹೇಳುವ ಮೂಲಕ ತಿರಸ್ಕಾರದ ವೃತ್ತಿಗಳಿಂದ ಸಂಪಾದಿಸಿದ ಹಣದಿಂದ ದಾಸೋಹ ಮಾಡಲಿಕ್ಕಾಗದು ಎಂದು ಎಚ್ಚರಿಸುತ್ತಾರೆ. ವ್ಯಕ್ತಿಯ ದೇಹ ಮನಸ್ಸುಗಳನ್ನು ಹಾಳು ಮಾಡುವಂಥ ವಸ್ತುಗಳನ್ನು ಉತ್ಪಾದಿಸುವುದು ಉದ್ದಂಡವೃತ್ತಿಯಾಗುತ್ತದೆ. ಕುಟುಂಬ ಮತ್ತು ಸಮಾಜವನ್ನು ಹಾಳುಮಾಡುವಂಥ ಸಾರಾಯಿ ಉತ್ಪಾದನೆ ಶರಣರ ದೃಷ್ಟಿಯಲ್ಲಿ ತಿರಸ್ಕಾರಯೋಗ್ಯವಾದ ವೃತ್ತಿಯಾಗಿದೆ. ಸಮಾಜವನ್ನು ಮತ್ತು ನಿಸರ್ಗವನ್ನು ಹಾಳು ಮಾಡುವ ಯಾವುದೇ ವೃತ್ತಿ ಉದ್ದಂಡವೃತ್ತಿಯೆ ಆಗುತ್ತದೆ.

**“**ಸಜ್ಜನ ಕಾಯಕದಲ್ಲಿ ತಂದು ಗುರು ಲಿಂಗ ಜಂಗಮಕ್ಕೆ ನೀಡಿ ಸತ್ಯಶುದ್ಧನಾಗಿಹುದೆ ಸದಾಚಾರ.**”** ಎಂದು ಚನ್ನಬಸವಣ್ಣನವರು ಪ್ರತಿಪಾದಿಸಿದ್ದಾರೆ.

**ಪ್ರಸಾದ:** ಸಾಂಪ್ರದಾಯಿಕವಾಗಿ ಪ್ರಸಾದವನ್ನು ಶುದ್ಧ, ಸಿದ್ಧ, ಪ್ರಸಿದ್ಧವೆಂದು ವಿಂಗಡಿಸಲಾಗುತ್ತದೆ. ಗುರುವಿಗೆ ಅರ್ಪಿಸಿದುದು ಶುದ್ಧ, ಲಿಂಗಕ್ಕೆ ಅರ್ಪಿಸಿದುದು ಸಿದ್ಧ, ಜಂಗಮಕ್ಕೆ ಅರ್ಪಿಸಿದುದು ಪ್ರಸಿದ್ಧ ಪ್ರಸಾದ ಎಂದು ಭಾವಿಸುತ್ತಾರೆ. ಹೀಗೆ ಗುರುವಿಗೆ, ದೇವರಿಗೆ ಮತ್ತು ಜಂಗಮ(ಸಮಾಜ)ಕ್ಕೆ ಅರ್ಪಿಸಿದ ನಂತರ ಉಳಿಯುವುದೇ ಪ್ರಸಾದ.

**“ತ್ರಿವಿಧಪ್ರಸಾದವೆಂದೆಂಬರು ಅದೆಂತಹುದೋ**

**ಶುದ್ಧಪ್ರಸಾದ ಗುರುವಿನದು ಸಿದ್ಧಪ್ರಸಾದ ಲಿಂಗದದು**
**ಪ್ರಸಿದ್ಧಪ್ರಸಾದ ಜಂಗಮದದು**
**ಇಂತೀ ತ್ರಿವಿಧ ಒಂದಾದವರ ತೋರಾ**
**ಕೂಡಲಸಂಗಮದೇವಾ."**

ಎಂದು ಬಸವಣ್ಣನವರು ಹೇಳುವ ಮೂಲಕ ಈ ತ್ರಿವಿಧ ಪ್ರಸಾದಗಳನ್ನು ಒಂದಾಗಿಸುತ್ತಾರೆ.

"ಜಂಗಮ ಪ್ರಸಾದವಿಲ್ಲದೆ ಲಿಂಗದ ಪ್ರಸಾದವ ಕೊಳಲಾಗದು" ಎಂದು ಬಸವಣ್ಣನವರು ತಿಳಿಸಿದ್ದಾರೆ. "ಉಂಬಜಂಗಮ ಬಂದರೆ ನಡೆಯೆಂಬರು, ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ" ಎಂದು ಬೇಸರ ವ್ಯಕ್ತಪಡಿಸಿದ್ದಾರೆ. "ಜಂಗಮಕ್ಕೆರೆದಡೆ ಸ್ಥಾವರ ನನೆಯಿತ್ತು" ಎಂದು ಹೇಳಿದ್ದಾರೆ.

ಜಂಗಮ ಪ್ರಸಾದವೆಂದರೆ ದಾಸೋಹದ ಮೂಲಕ ಸಮಾಜಕ್ಕೆ ಉಣಬಡಿಸಿ ಉಳಿದದ್ದೇ ಪ್ರಸಾದ. ಜನಸೇವೆಯ ಮೂಲಕ ಈ ಪ್ರಸಾದವನ್ನು ಪಡೆಯದೆ ಕೇವಲ ಲಿಂಗಕ್ಕೆ ಎಡೆ ಹಿಡಿದು "ಪ್ರಸಾದ" ಪಡೆಯುವುದನ್ನು ಬಸವಣ್ಣನವರು ಒಪ್ಪುವುದಿಲ್ಲ.

ಸಮಾನತೆ ಮತ್ತು ಮಾನವ ಏಕತೆಯ ತತ್ತ್ವವನ್ನು ಪ್ರಚಾರ ಮಾಡುವವನಿಗೂ "ಜಂಗಮ" ಎಂದು ಕರೆಯುತ್ತಾರೆ. ಅಂಥವರು ತತ್ತ್ವಪ್ರಚಾರಕ್ಕಾಗಿ ಊರೂರು ಸುತ್ತುತ್ತ ಹಸಿದು ಮನೆ ಮುಂದೆ ಬಂದರೆ 'ಮುಂದಕ್ಕೆ ಹೋಗು' ಎನ್ನುವವರು ಉಣ್ಣದ ಲಿಂಗಕ್ಕೆ ನೈವೇದ್ಯ ಅರ್ಪಿಸುವರು ಎಂದು ಬಸವಣ್ಣನವರು ಬೇಸರ ವ್ಯಕ್ತಪಡಿಸಿದ್ದಾರೆ. 'ಜಂಗಮಕ್ಕೆ ಎರೆದಡೆ' ಅಂದರೆ ಸಮಾಜದ ಕಾಳಜಿ ಮಾಡಿದರೆ ಸ್ಥಾವರ ಅಂದರೆ ಅರುಹಿನ ಕುರುಹು ಆದ ಲಿಂಗ ನನೆವುದು (ಅರಳುವುದು) ಎಂದು ಮನಸ್ಸಿಗೆ ನಾಟುವಂತೆ ತಿಳಿಸಿದ್ದಾರೆ.

ಬಸವಧರ್ಮವು ಸಮಾಜೋ ಧಾರ್ಮಿಕ ಸಿದ್ಧಾಂತವನ್ನು ಹೊಂದಿರುವುದರಿಂದ ಧರ್ಮದಿಂದ ಪಡೆದ ಅರಿವನ್ನು ಸಾಮಾಜಿಕವಾಗಿ ಆಚರಣೆಯಲ್ಲಿ ತರಬೇಕಾಗುವುದು. ಧರ್ಮವು ಸಮಾನತೆಯ ಸಮಾಜವನ್ನು ನಿರ್ಮಿಸಲು ಮಾರ್ಗದರ್ಶಿಯಾಗಬೇಕು ಎಂಬುದು ಬಸವಣ್ಣನವರ ಕಳಕಳಿಯಾಗಿದೆ. ಪ್ರತಿಯೊಬ್ಬರೂ ಹಸಿವಿನಿಂದ ಮುಕ್ತವಾಗಿ ಆತ್ಮಗೌರವದಿಂದ ತಲೆ ಎತ್ತಿವ ಮೂಲಕ ಮೇಲು ಕೀಳಿಲ್ಲದ ಬದುಕನ್ನು ಪಡೆಯಬೇಕು ಎಂಬ ಸದಾಶಯವನ್ನು ಬಸವಣ್ಣನವರು ಹೊಂದಿದ್ದರು.

**ತ್ರಿವಿಧಪ್ರಸಾದವೆಂದೆಂಬರು ಅದೆಂತಹುದೋ**
**ಶುದ್ಧಪ್ರಸಾದ ಗುರುವಿನದು ಸಿದ್ಧಪ್ರಸಾದ ಲಿಂಗದದು**
**ಪ್ರಸಿದ್ಧಪ್ರಸಾದ ಜಂಗಮದದು**
**ಇಂತೀ ತ್ರಿವಿಧ ಒಂದಾದವರ ತೋರಾ**
**ಕೂಡಲಸಂಗಮದೇವಾ.**

ಬಸವಣ್ಣನವರು ಈ ಮೂರು ಪ್ರಕಾರದ ಪ್ರಸಾದಗಳ ಕುರಿತು ಹೇಳುವುದರ ಜೊತೆಗೇ ನಮ್ಮೆಲ್ಲರ ದೇಹವೇ ದೇವರ ಪ್ರಸಾದ ಎಂದು ತಿಳಿಸಿದ್ದಾರೆ. "ಕೂಡಲಸಂಗಮದೇವರನೊಲಿಸ ಬಂದ ಪ್ರಸಾದಕಾಯವ ಕೆಡಿಸಲಾಗದು." ಎಂದು ಎಚ್ಚರಿಸಿದ್ದಾರೆ. ದೇಹವು ಪ್ರಸಾದವಾಗಬೇಕಾದರೆ ಇಡೀ ವಿಶ್ವವೇ ದೇವರುಕೊಟ್ಟ ಪ್ರಸಾದ ಎಂಬುದನ್ನು ಅರಿಯಬೇಕಾಗುತ್ತದೆ. ದೇಹವು ಪಂಚಮಹಾಭೂತಗಳಿಂದಾಗಿದೆ. ಪೃಥ್ವಿ, ಆಪ್. ತೇಜ್, ವಾಯು ಮತ್ತು ಆಕಾಶ ಎಂಬ ಪಂಚಮಹಾಭೂತಗಳು ಕೂಡ ದೇವರ ಪ್ರಸಾದವೇ ಆಗಿವೆ. ನಿಸರ್ಗ ಸಮೇತ ಸೂರ್ಯ ಚಂದ್ರ, ನಕ್ಷತ್ರ, ಆಕಾಶಕಾಯಗಳು ಕೂಡ ಜೀವಸಂಕುಲಕ್ಕೆ ದೇವರು ಕೊಟ್ಟ ಪ್ರಸಾದವೇ ಆಗಿವೆ. ಆದ್ದರಿಂದ ಎಲ್ಲ ತೆರನಾದ ನೈಸರ್ಗಿಕ ಸಂಪತ್ತನ್ನು ಕೆಡಿಸದೆ ಪ್ರಸಾದದ ಹಾಗೆ ಬಳಸಬೇಕು. ಆ ಮೂಲಕ ಜೀವಜಾಲ ಸಮತೋಲನವನ್ನು ಕಾಯ್ದುಕೊಳ್ಳಬೇಕು. ಪ್ರತಿಯೊಂದೂ ದೇವರ ಪ್ರಸಾದವೇ ಆಗಿರುವುದರಿಂದ ಈ

ಪೃಥ್ವಿಯ ಮೇಲಿರುವ ಯಾವುದೇ ವಸ್ತುವಿನ ದುರ್ಬಳಕೆ ಮತ್ತು ನಾಶ ಮಾಡುವ ಹಕ್ಕು ಮಾನವರಿಗೆ ಇಲ್ಲ. ತಮ್ಮ ಅವಶ್ಯಕತೆಗೆ ತಕ್ಕಂತೆ ಸದ್ಬಳಕೆ ಮಾಡುವ ಅವಕಾಶ ಮಾತ್ರ ಇದೆ.

**ದಾಸೋಹ:** ದಾನ ಮತ್ತು ದಾಸೋಹದಲ್ಲಿ ವ್ಯತ್ಯಾಸವಿದೆ. ದಾನವು ಕೊಡುವವನನ್ನು ಮೇಲ್ ಸ್ತರಕ್ಕೆ ಒಯ್ಯಬಲ್ಲುದು. ಪಡೆಯುವವನ ಆತ್ಮಸ್ಥೈರ್ಯವನ್ನೇ ಕುಗ್ಗಿಸಬಲ್ಲುದು. ಆದರೆ ದಾಸೋಹ ಪ್ರಜ್ಞೆಯಲ್ಲಿ ಕೊಡುವವರಿಗೆ ಕಿಂಕರ ಭಾವವಿರುತ್ತದೆ. ದಾಸೋಹಿಗಳು ತಮ್ಮಿಂದ ಪಡೆಯುವವರನ್ನು 'ಶಿವಸ್ವರೂಪಿಗಳು' ಎಂದೇ ಭಾವಿಸುತ್ತಾರೆ. 'ದೇವರು ಕೊಟ್ಟಿದ್ದನ್ನು ಸಮಾಜವೆಂಬ ದೇವರಿಗೆ ಕೊಡುತ್ತಿದ್ದೇನೆ' ಎಂಬ ಭಾವವನ್ನು ಅವರು ಹೊಂದಿರುತ್ತಾರೆ. ಅವಶ್ಯಕತೆ ಇದ್ದವರಿಗೆ ಕೊಡುವುದು ತಮ್ಮ ಕರ್ತವ್ಯವೆಂದು ಭಾವಿಸಿ ಸಮರ್ಪಣಾಭಾವದಿಂದ ಕೊಡುತ್ತಾರೆ. ಹೀಗಾಗಿ ಅದು ದಾನವಾಗದೆ ದಾಸೋಹವಾಗುತ್ತದೆ. ದಾಸೋಹಂ ಪದದಿಂದ ದಾಸೋಹ ಬಂದಿದೆ. "ದಾಸೋಹಂ" ಎಂದರೆ 'ನಾನು ದಾಸನಾಗಿದ್ದೇನೆ' ಎಂದು ಅರ್ಥ. ದೇವರು ನಮ್ಮೊಳಗೇ ಇದ್ದಾನೆ. ಆತನಿಗೆ ನಾವು ದಾಸರಾಗಿ ಇರಬೇಕು. ನಮ್ಮ ಅಂತಃಸಾಕ್ಷಿಯೆ ದೇವರು. ಅಂತಃಸಾಕ್ಷಿಯು ಸಕಲಜೀವಾತ್ಮರಿಗೆ ಲೇಸನ್ನೇ ಬಯಸುವುದು. ಅಂತಃಸಾಕ್ಷಿ ಹೇಳಿದ ಹಾಗೆ ಬದುಕಿದರೆ ಒಬ್ಬರ ಕಷ್ಟ ಎಲ್ಲರ ಕಷ್ಟವಾಗಿ ಒಬ್ಬರಿಗೊಬ್ಬರು ಸಹಕರಿಸುತ್ತ ಸರ್ವರೂ ಪ್ರೇಮಭಾವದಿಂದ ಬದುಕಲು ಸಾಧ್ಯ. ಹೀಗೆ ನಮ್ಮೊಳಗಿನ ಅಂತಃಸಾಕ್ಷಿ ಎಂಬ ದೇವರ ಮಾತನ್ನು ಪಾಲಿಸಿದರೆ ದಾಸೋಹಿಗಳಾಗುತ್ತೇವೆ. ಆಗ ಕಷ್ಟದಲ್ಲಿರುವವರ ಸೇವೆ ಮಾಡಲು ಮನಸ್ಸು ಹಾತೊರೆಯುತ್ತದೆ.

ಬಸವಧರ್ಮದಲ್ಲಿ ಅರಿವೇ ಗುರು, ಅಂತಃಸಾಕ್ಷಿಯೆ ಲಿಂಗ, ಲೋಕವೇ ಜಂಗಮ. ನಮ್ಮಲ್ಲಿರುವ ಸಂಪತ್ತನ್ನು ಅರಿವಿನ ವಿಸ್ತಾರಕ್ಕಾಗಿ, ಅಂತಃಸಾಕ್ಷಿಯ ತೃಪ್ತಿಗಾಗಿ ಮತ್ತು ಲೋಕಹಿತಕ್ಕಾಗಿ ಮಾಡುವ ದಾಸೋಹವೇ ತ್ರಿವಿಧ ದಾಸೋಹ. ಹೀಗೆ ದಾಸೋಹದಲ್ಲಿ ಮೂರು ಪ್ರಕಾರಗಳಿದ್ದು. ಅವೆಲ್ಲ ಜಂಗಮ ದಾಸೋಹದಲ್ಲಿ ಒಂದಾಗುತ್ತವೆ.

---

**"ಗುರುವಿಂಗೆ ತನುವ ಕೊಟ್ಟು, ಲಿಂಗಕ್ಕೆ ಮನವ ಕೊಟ್ಟು**
**ಜಂಗಮಕ್ಕೆ ಧನವ ಕೊಟ್ಟು**
**ಇಂತೀ ತ್ರಿವಿಧಕ್ಕೆ ತ್ರಿವಿಧವ ಕೊಟ್ಟು ನಾನು ಶುದ್ಧನಾದೆನು**
**ಕಾಣಾ ಕೂಡಲಸಂಗಮದೇವಾ."**

ಈ ವಚನದಲ್ಲಿ ಬಸವಣ್ಣನವರು ತ್ರಿವಿಧ ದಾಸೋಹದ ಪರಿಯನ್ನು ತಿಳಿಸಿಕೊಟ್ಟಿದ್ದಾರೆ. ಗುರುವಿಗೆ ತನುವ ಕೊಡುವುದೆಂದರೆ, ಅರಿವೇ ಗುರುವಾದ ಕಾರಣ ಕಾಯಕದ ಅನುಭವದ ಮೂಲಕ ಜ್ಞಾನದಾಸೋಹ ಮಾಡುವುದು. ಲಿಂಗಕ್ಕೆ ಮನವ ಕೊಡುವುದು ಎಂದರೆ ಅಂತಃಸಾಕ್ಷಿಯ ಪ್ರಕಾರ ನಡೆದುಕೊಳ್ಳುವ ಮೂಲಕ ಸನ್ನಡತೆಯ ದಾಸೋಹ ಮಾಡುವುದು. ಜಂಗಮ(ಸಮಾಜ)ಕ್ಕೆ ಧನವ ಕೊಡುವುದೆಂದರೆ ಸಮಾಜಸೇವೆಯ ಮೂಲಕ ಜಂಗಮದಾಸೋಹ ಮಾಡುವುದು. ಹೀಗೆ ಗುರು ಲಿಂಗ ಮತ್ತು ಜಂಗಮದ ದಾಸೊಹಕ್ಕೆ 'ತ್ರಿವಿಧದಾಸೋಹ' ಎನ್ನುತ್ತಾರೆ.

ನಮ್ಮ ಕಾಯಕದಿಂದ ಬಂದದ್ದನ್ನು ದೇವರ ಪ್ರಸಾದವಾಗಿ ಸ್ವೀಕರಿಸುವುದರ ಮೂಲಕ ಗಳಿಕೆಯ ಅಹಂನಿಂದ ಹೊರಬಂದು, ಆ ಗಳಿಸಿದ್ದನ್ನೆಲ್ಲ ನಮಗಾಗಿಯೇ ಖರ್ಚು ಮಾಡದೆ ಸಾಮಾಜಿಕ ಜವಾಬ್ದಾರಿಯನ್ನು ಸಮರ್ಪಣಾ ಭಾವದಿಂದ ನಿಭಾಯಿಸುವುದಕ್ಕೆ ದಾಸೋಹವೆಂದು ಕರೆಯುತ್ತಾರೆ. ಅಂತೆಯೆ ಬಸವಧರ್ಮದಲ್ಲಿ ಗುರು-ಲಿಂಗ-ಜಂಗಮಕ್ಕೂ ಕಾಯಕ-ಪ್ರಸಾದ-ದಾಸೋಹಕ್ಕೂ ಅವಿನಾಭಾವ ಸಂಬಂಧವಿದೆ. ಅಂದರೆ ಕಾಯಕ ಮತ್ತು ಗುರುವಿನ ಮಧ್ಯೆ, ಲಿಂಗ ಮತ್ತು ಪ್ರಸಾದದ ಮಧ್ಯೆ ಹಾಗೂ ದಾಸೋಹ ಮತ್ತು ಜಂಗಮದ ಮಧ್ಯೆ ಸಂಬಂಧವಿದ್ಲೆ. ಕಾಯಕ ಪ್ರಸಾದ ಮತ್ತು ದಾಸೋಹ ತತ್ತ್ವವನ್ನು ಪ್ರತಿಪಾದಿಸುವ ವಚನ ಸಾಹಿತ್ಯ ನಿಜವಾದ ಕ್ರಾಂತಿಕಾರಿ ಸಾಹಿತ್ಯವಾಗಿದೆ.

ವಚನಗಳಲ್ಲಿ ಸಂಪೂರ್ಣ ಕ್ರಾಂತಿಯ ಬೀಜಮಂತ್ರಗಳಿವೆ. ವಚನಗಳು ಲೋಕಹಿತದ ಸಾಹಿತ್ಯ ಮತ್ತು ತತ್ತ್ವದ ಆಗರಗಳಾಗಿವೆ. ಸಾಮ್ರಾಜ್ಯಶಾಹಿಗಳು ಬೀಸಿದ ಜಾಗತೀಕರಣದ ಜಾಲದಲ್ಲಿ ಜಗತ್ತು

ಸಿಕ್ಕಿಕೊಂಡು ಒದ್ದಾಡುತ್ತಿದೆ. ವಚನ ಸಾಹಿತ್ಯ ಸಾರುವ ಭಕ್ತಿಸಾಮ್ರಾಜ್ಯದ ಸ್ಥಾಪನೆಯಾದಾಗ ಮಾತ್ರ ಜಗತ್ತು ಎಲ್ಲರೀತಿಯ ಹಿಂಸೆ, ಸುಲಿಗೆ, ಗಲಭೆ ಮತ್ತು ಕ್ರೌರ್ಯದಿಂದ ಮುಕ್ತವಾಗುವುದು. ಸುಲಿಗೆಯ ಸಾಮ್ರಾಜ್ಯಕ್ಕೆ ಭಕ್ತಿಸಾಮ್ರಾಜ್ಯವೊಂದೇ ಉತ್ತರ ಎಂಬುದನ್ನು ಜಗತ್ತು ಅರಿತುಕೊಳ್ಳುವ ದಿನಗಳು ದೂರವಿಲ್ಲ.

ಬಸವಣ್ಣನವರ ಬಡ್ಡಿರಹಿತ ಅರ್ಥಶಾಸ್ತ್ರವೊಂದೇ ಈ ಜಗತ್ತನ್ನು ಕಾಪಾಡಬಲ್ಲುದು. ಯೋಗ್ಯ ಉತ್ಪಾದನೆ, ಯೋಗ್ಯ ಬಳಕೆ ಮತ್ತು ಯೋಗ್ಯ ವಿತರಣೆ ಇವು ಮೂರು ಬಸವಣ್ಣನವರ ಅರ್ಥಶಾಸ್ತ್ರದ ಪ್ರಮುಖ ಅಂಶಗಳಾಗಿವೆ. ಕಾಯಕವೆಂದರೆ ಯೋಗ್ಯವಾದುದನ್ನೇ ಉತ್ಪಾದಿಸುವ ಕ್ರಿಯೆ. ಪ್ರಸಾದವೆಂದರೆ ಉತ್ಪನ್ನದ ಯೋಗ್ಯ ಬಳಕೆ, ದಾಸೋಹವೆಂದರೆ ಆ ಹೆಚ್ಚಿನ ಉತ್ಪನ್ನದ ಯೋಗ್ಯ ಸಾಮಾಜಿಕ ವಿತರಣೆ.

ಈ ಮೂರು ಆರ್ಥಿಕ ಪ್ರಕ್ರಿಯೆಗಳನ್ನು ಜಾಗತೀಕರಣದ ಮೂಲಕ ಹಾಳುಗೆಡವಿ ಭಾರತದಂಥ ಬಡರಾಷ್ಟ್ರಗಳನ್ನು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಳ್ಳುವುದೇ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಮುಖ್ಯ ಉದ್ದೇಶವಾಗಿದೆ. ರೈತರು, ಕೃಷಿಕಾರ್ಮಿಕರು, ದಲಿತರು, ಮಹಿಳೆಯರು ಮತ್ತು ಎಲ್ಲ ವಿಧವಾದ ಕಾಯಕಜೀವಿಗಳ ಧರ್ಮವಾದ ಬಸವಧರ್ಮ ಇಂಥ ಜಾಗತಿಕ ಬಿಕ್ಕಟ್ಟನ್ನು ಪರಿಹರಿಸುವ ಸಾಮರ್ಥ್ಯವನ್ನು ಹೊಂದಿದೆ. ಹೊಸ ಮಾನವೀಯ ಜಗತ್ತಿಗಾಗಿ ಬಸವಧರ್ಮದ ರಹಸ್ಯವನ್ನು ಅರಿತುಕೊಳ್ಳುವುದು ಈ ಕಾಲದ ತುರ್ತು ಅವಶ್ಯಕತೆಯಾಗಿದೆ.



## ಅರಿದಡೆ ಶರಣ, ಮರೆದಡೆ ಮಾನವ.

**–ಶ್ರೀ ರಂಜಾನ್ ದರ್ಗಾ,**
**"**ವಚನ**"**, ಸಿದ್ಧಾರೂಢ ಕಾಲೋನಿ,
ಮದಿಹಾಳ, ಧಾರವಾಡ.

**ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ,**
**ಭಾಂಡ ಒಂದೆ ಭಾಜನ ಒಂದೆ, ಬೆಳಗೆ ಕನ್ನಡಿಯೆನಿಸಿತ್ತಯ್ಯಾ.**
**ಅರಿದಡೆ ಶರಣ, ಮರೆದಡೆ ಮಾನವ,**
**ಮರೆಯದೆ ಪೂಜಿಸು ಕೂಡಲಸಂಗನ.**
**–ಬಸವಣ್ಣನವರು**

ಮನ್ ಎಂದರೆ 'ವಿಚಾರ ಮಾಡು' ಎಂದು ಅರ್ಥ. ವಿಚಾರ ಮಾಡುವ ಶಕ್ತಿಯುಳ್ಳವನು ಮಾನವನಾಗುತ್ತಾನೆ. ವಿಚಾರಗಳ ಉತ್ಪತ್ತಿಗೆ ಪ್ರಜ್ಞೆ ಮೂಲವಾಗಿರುತ್ತದೆ. ಪ್ರಜ್ಞೆಗೆ ವಸ್ತು ಮೂಲವಾಗಿರುತ್ತದೆ. ವಸ್ತು ಎಂದರೆ ಇಡೀ ವಿಶ್ವ. ಕಣ್ಣಿಗೆ ಕಾಣುವಂಥವುಗಳೆಲ್ಲ ವಸ್ತುಗಳೇ. ನಕ್ಷತ್ರ, ಸೂರ್ಯ, ಚಂದ್ರ, ಸಮುದ್ರ, ಅರಣ್ಯ, ಪಶು, ಪಕ್ಷಿ ಮತ್ತು ಮಾನವರು ಹೀಗೆ ಕಣ್ಣಿಗೆ ಕಾಣುವ ಎಲ್ಲವೂ ಮತ್ತು ಎಲ್ಲರೂ ನಿಜವಾದ ಅರ್ಥದಲ್ಲಿ ವಸ್ತುರೂಪದಲ್ಲೇ ಇದ್ದೇವೆ.

ವಸ್ತುವಿನಿಂದ ಪ್ರಜ್ಞೆಯು ರೂಪ ತಾಳುತ್ತದೆ. ಆ ಪ್ರಜ್ಞೆಯು ವಿಶ್ವದ ಎಲ್ಲ ವಸ್ತುಗಳನ್ನು ನೋಡುಗನ ಮನದಲ್ಲಿ ಮೂಡಿಸುತ್ತದೆ. ಹೀಗೆ ಪ್ರಜ್ಞೆಯು ವಸ್ತುಗಳನ್ನು ಗ್ರಹಿಸುವ ಶಕ್ತಿಯಾಗಿದೆ. ಪ್ರಜ್ಞೆಯ ಅಸ್ತಿತ್ವಕ್ಕೆ ವಸ್ತು ಇರಲೇ ಬೇಕು. ವಸ್ತುಗಳಿಲ್ಲದೆ ಮಾನವ ಕಲ್ಪಿಸಲೂ ಸಾಧ್ಯವಿಲ್ಲ. ಕಲ್ಪನೆ ಎಂಬುದು ವಸ್ತು ಅಥವಾ ವಸ್ತುಗಳ ಸಹಾಯದಿಂದಲೇ ಮೂಡುವಂಥದ್ದು.

ಸ್ಪಿಂಕ್ಸ್ ಕೆತ್ತಿದ ಶಿಲ್ಪಿ ಸಿಂಹವನ್ನು ಮತ್ತು ಹೆಣ್ಣನ್ನು ನೋಡಿದವನಾಗಿರುತ್ತಾನೆ. ಕರಿಯ ಬಣ್ಣ ಮತ್ತು ಹುಲಿಯ ಹಿನ್ನೆಲೆಯೊಂದಿಗೆ ಕಲಾವಿದ ಕರಿಹುಲಿಯ ಚಿತ್ರವನ್ನು ಬಿಡಿಸುತ್ತಾನೆ. ಹೆಣ್ಣು ಮತ್ತು ಮತ್ಸ್ಯದ ವಾಸ್ತವದ ಹಿನ್ನೆಲೆ ಇಲ್ಲದೆ ಮತ್ಸ್ಯಕನ್ಯೆ ಮೂಡಿ ಬರಲಾರಳು. ತೆಂಗಿನ ಮರವಿಲ್ಲದೆ ಕಲ್ಪವೃಕ್ಷವಿಲ್ಲ. ಗೋವು ಇಲ್ಲದೆ ಕಾಮಧೇನು ಇಲ್ಲ. ಆನೆ ಇಲ್ಲದೆ ಐರಾವತ ಇಲ್ಲ. ಹೀಗೆ ಮಾನವನ ಕಲ್ಪನೆಯ ಹಿಂದೆ ಆತ ನೋಡಿದ ವಸ್ತುಗಳ ನೆನಪುಗಳು ಅಡಕವಾಗಿರುತ್ತವೆ. ಇವೆಲ್ಲ ಮಾನವನ ಅನುಭವಕ್ಕೆ ಸಂಬಂಧಿಸಿವೆ ಹೊರತಾಗಿ ಅನುಭಾವಕ್ಕೆ ಅಲ್ಲ.

**"**ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ?**"** ಎಂದು ಬಸವಣ್ಣನವರು ಪ್ರಶ್ನಿಸುತ್ತಾರೆ. ಭಿತ್ತಿಯಂಥ ಭೌತಿಕ ವಸ್ತುಗಳ ಸಹಾಯವಿಲ್ಲದೆ ಚಿತ್ರಗಳನ್ನು ಬಿಡಿಸಲಿಕ್ಕಾಗದು. ಭಿತ್ತಿಯು ಭೌತಿಕ ಜಗತ್ತಿನ ಅನು**ಭವದ** ಪ್ರತೀಕವಾದರೆ, ಚಿತ್ತಾರವು ಅನುಭಾವದ ಪ್ರತೀಕವಾಗಿದೆ. ಭಿತ್ತಿ ಇಲ್ಲದೆ ಚಿತ್ತಾರವಿಲ್ಲ. ಹಾಗೆಯೆ ಅನುಭವವಿಲ್ಲದೆ ಅನುಭಾವವಿಲ್ಲ. ವಸ್ತುವಿನ ಜೊತೆಗಿನ ಅನುಭವದ ಮೂಲಕ ಬರುವ ಪ್ರಜ್ಞೆಯು ಭೌತಿಕ ಜಗತ್ತಿನ ಮಹತ್ವವನ್ನು ಸೂಚಿಸುತ್ತದೆ. ಆ ಅನುಭವದ ಮೂಲಕ ಅನುಭಾವದ ಸೃಷ್ಟಿಯಾದಾಗ ಅರಿವು ಮೂಡುತ್ತದೆ.

ಹೀಗೆ ಪ್ರಜ್ಞೆ ಎಂಬುದು ವಸ್ತುವಿನ ಗ್ರಹಿಕೆಯ ಮೂಲಕ ಬಂದರೆ, ಅರಿವು ಎಂಬುದು ವಸ್ತುವಿನ ಮೂಲ ಗ್ರಹಿಕೆಯ ಮೂಲಕ ಬರುವುದು. ಈ ಸತ್ಯವನ್ನು ಅರಿತವನೇ ಶರಣ. ಮರೆತವನೇ ಮಾನವ.

ವಸ್ತುವಿನ ಗ್ರಹಿಕೆಯ ಮೂಲಕ ಸೃಷ್ಟಿಯಾಗುವ ಪ್ರಜ್ಞೆಯೊಂದಿಗೆ ಭೌತಿಕ ಜೀವನ ಸಾಗುವುದರಲ್ಲಿ ಸಂಶಯವಿಲ್ಲ. ಪ್ರತಿಯೊಬ್ಬ ಮಾನವನು ಸಹಜವಾಗಿಯೆ ಇಂಥ ಪ್ರಜ್ಞೆಯಿಂದ ಬದುಕುತ್ತಾನೆ. ಆದರೆ

ನೋಟದಿಂದ ಪ್ರಜ್ಞೆ ಪಡೆಯುವ ಶರಣ ಒಳನೋಟದಿಂದ ಅರಿವು ಪಡೆಯುತ್ತಾನೆ. ಹೀಗೆ ಒಳನೋಟವನ್ನು ಮರೆತವನು ಬರಿ ಮಾನವನಾಗಿರುತ್ತಾನೆ. ಆದರೆ ಒಳನೋಟವನ್ನು ಅರಿತವನೇ ಶರಣನಾಗುತ್ತಾನೆ ಎಂಬುದನ್ನು ಬಸವಣ್ಣನವರು ಮಾರ್ಮಿಕವಾಗಿ ಹೇಳಿದ್ದಾರೆ.

ವಸ್ತು ಮತ್ತು ಮೂಲವಸ್ತುವಾದ ಚೈತನ್ಯ ಬೇರೆ ಬೇರೆ ಅಲ್ಲ. ಅಂದರೆ ಮ್ಯಾಟರ್ ಮತ್ತು ಎನರ್ಜಿ ಬೇರೆ ಬೇರೆ ಅಲ್ಲ ಎಂಬುದು ಇದರ ಅರ್ಥ. "ಸ್ಥಾವರ ಜಂಗಮ ಒಂದೆ" ಎಂದು ಬಸವಣ್ಣನವರು ಹೇಳಿದ್ದಾರೆ. ಇಲ್ಲಿ ಸ್ಥಾವರ ಎಂದರೆ ವಸ್ತು. ಜಂಗಮ ಎಂದರೆ ಚೈತನ್ಯ. ವಸ್ತು ರೂಪುಗೊಳ್ಳಬೇಕಾದರೆ ಚೈತನ್ಯವೇ ಮೂಲವಾಗಿರುವುದರಿಂದ ವಸ್ತು ಮತ್ತು ಚೈತನ್ಯ ಆಂತರ್ಯದಲ್ಲಿ ಒಂದೇ ಆಗಿವೆ. ಚೈತನ್ಯದಿಂದ ಹೊರಹೊಮ್ಮಿದ ವಸ್ತುಗಳೆಲ್ಲ ಕೊನೆಗೊಂದು ದಿನ ತಮ್ಮ ಅಸ್ತಿತ್ವ ಕಳೆದುಕೊಳ್ಳುತ್ತವೆ. ಸೂರ್ಯ, ಚಂದ್ರ, ನಕ್ಷತ್ರ, ಪೃಥ್ವಿ ಮುಂತಾದವು ಕೂಡ ತಮ್ಮ ರೂಪವನ್ನು ಕಳೆದುಕೊಂಡು ಮೂಲ ಚೈತನ್ಯದಲ್ಲಿ ಒಂದಾಗುತ್ತವೆ. ಆಗ ಇಡೀ ವಿಶ್ವ ಬಯಲಾಗುತ್ತದೆ. ಅಂತೆಯೆ ಬಸವಣ್ಣನವರು "ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಎಂದು ಹೇಳಿದ್ದಾರೆ. ಕಣ್ಣಿಗೆ ಕಾಣುವುದೆಲ್ಲ ಸ್ಥಾವರ. ಕಣ್ಣಿಗೆ ಕಾಣದ ಚೈತನ್ಯವೇ ಜಂಗಮ.

ಜಂಗಮ ಪದಕ್ಕೆ ಚೈತನ್ಯ, ಚಲನಶೀಲವಾದುದು, ನಿರಂತರವಾದುದು, ವಿಶ್ವ, ಸಮಾಜ, ಶರಣತತ್ತ್ವ ಪ್ರಚಾರಕ ಮುಂತಾದ ಅರ್ಥಗಳಿವೆ. ಇಲ್ಲಿ "ಜಂಗಮಕ್ಕಳಿವಿಲ್ಲ" ಎಂದರೆ ಚೈತನ್ಯಕ್ಕೆ ಅಳಿವಿಲ್ಲ ಎಂದೇ ಅರ್ಥ.

ವಿಜ್ಞಾನದ ಎನರ್ಜಿ ತತ್ತ್ವಜ್ಞಾನದಲ್ಲಿ ಸ್ಪಿರಿಟ್ (ಚೈತನ್ಯ) ಎನಿಸಿಕೊಳ್ಳುತ್ತದೆ. ಮ್ಯಾಟರ್ ಎಂಬುದು ವಸ್ತುವಾದರೆ ಮೂಲವಸ್ತು ಎಂಬುದೇ ಎನರ್ಜಿ ಅಥವಾ ಸ್ಪಿರಿಟ್. ಅದುವೆ ಚೈತನ್ಯ. ಮೂಲವಸ್ತುವಾದ ಚೈತನ್ಯದಿಂದಲೇ ವಸ್ತುವಿನ ನಿರ್ಮಾಣವಾಗಿದೆ ಎಂಬುದರ ಕುರಿತು ಬಸವಣ್ಣನವರು ತಿಳಿಸಿದ್ದಾರೆ. ಇದನ್ನು ಅರಿತವನೇ ಶರಣನಾಗುತ್ತಾನೆ. ಈ ಅರಿವು ಪಡೆಯದವನು ಬರಿ ಮಾನವನಾಗಿ ಭೌತಿಕ ವಸ್ತುಗಳ ಜೊತೆಗೆ ಜೀವನ ಸಾಗಿಸುತ್ತಾನೆ.

"ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ, ಭಾಂಡ ಒಂದೆ ಭಾಜನ ಒಂದೆ, ಬೆಳಗೆ ಕನ್ನಡಿಯೆನಿಸಿತ್ತಯ್ಯಾ." ಎಂದು ಬಸವಣ್ಣನವರು ತಿಳಿಸಿದ್ದಾರೆ. ಉಣ್ಣುವ ಬಟ್ಟಲನ್ನು ಕಂಚಿನಿಂದ ತಯಾರಿಸುತ್ತಾರೆ. ಮುಖ ನೋಡಿಕೊಳ್ಳುವ ಕನ್ನಡಿಯನ್ನು ಕೂಡ ಕಂಚಿನಿಂದಲೇ ತಯಾರು ಮಾಡಬಹುದು. ಕಂಚಿನ ಫಲಕವನ್ನು ತಿಕ್ಕಿ ತಿಕ್ಕಿ ನುಣುಪುಗೊಳಿಸಿದಾಗ ಅದು ಕನ್ನಡಿಯ ರೂಪ ತಾಳುವುದು. ಬಸವಣ್ಣನವರ ಕಾಲದಲ್ಲಿ ಅಡುಗೆ ಪಾತ್ರೆ, ಊಟದ ತಟ್ಟೆ ಮತ್ತು ಕನ್ನಡಿಯ ಮೂಲ ವಸ್ತು ಕಂಚೇ ಆಗಿತ್ತು.

ಹೀಗೆ ಕಂಚನ್ನು ಸಂಸ್ಕರಣಗೊಳಿಸುವ ಮೂಲಕ ಉಣ್ಣುವ ಗಂಗಾಳ, ಅಡುಗೆ ಮಾಡುವ ಪಾತ್ರೆ ಮತ್ತು ಮುಖ ನೋಡಿಕೊಳ್ಳುವ ಕನ್ನಡಿ ಮುಂತಾದ ವಸ್ತುಗಳನ್ನು ತಯಾರಿಸಬಹುದು. ಆದರೆ ಅವೆಲ್ಲವುಗಳ ಮೂಲ ವಸ್ತು ಕಂಚೇ ಆಗಿದೆ ಎಂದು ಬಸವಣ್ಣನವರು ತಿಳಿಸುವ ಮೂಲಕ, 'ಚೈತನ್ಯವೇ ಇಡೀ ವಿಶ್ವದ ಮೂಲ' ಎಂಬುದನ್ನು ಸೂಚಿಸಿದ್ದಾರೆ.

ಈ ರೀತಿ ಜಗತ್ತು ರೂಪುಗೊಳ್ಳುವ ಕ್ರಮವನ್ನು ಬಸವಣ್ಣನವರು ಅರುಹಿದ್ದಾರೆ. ಜಗತ್ತಿನ ಎಲ್ಲ ಚರಾಚರಗಳು ಬೇರೆಬೇರೆಯಾಗಿ ಕಂಡರೂ ಅವು ಚೈತನ್ಯದಿಂದಲೇ ಸೃಷ್ಟಿಯಾದವುಗಳಾಗಿವೆ.

ಬಸವಣ್ಣನವರ ಸಿದ್ಧಾಂತ ಬಯಲುತತ್ತ್ವದ ಸಿದ್ಧಾಂತವಾಗಿದೆ. ಬಯಲಿನಿಂದ ಸೃಷ್ಟಿಯಾದುದೆಲ್ಲವೂ ಬಯಲಲ್ಲೇ ಲಯವಾಗುತ್ತವೆ. ಬಯಲು ಎಂಬುದೇ ಮೂಲವಸ್ತು. ಈ ಬಯಲನ್ನು ಶೂನ್ಯ ಅಥವಾ ಚೈತನ್ಯ ಎಂದೂ ಕರೆಯುತ್ತಾರೆ. ಇದುವೆ ಸ್ಪಿರಿಟ್ ಅಥವಾ ಎನರ್ಜಿ. ನಕ್ಷತ್ರಗಳು,

ಸೂರ್ಯ, ಚಂದ್ರ, ಪೃಥ್ವಿ ಮತ್ತು ಇತರ ಆಕಾಶಕಾಯಗಳ ನಿರ್ಮಾಣ ಕೂಡ ಈ ಮೂಲವಸ್ತುವಿನಿಂದಲೇ ಆಗಿದೆ.

ಮಾನವರು, ಪ್ರಾಣಿ, ಪಕ್ಷಿ, ಕ್ರಿಮಿ, ಕೀಟ, ಗಿಡಮರಬಳ್ಳಿಗಳು, ನದಿ ಮತ್ತು ಸಮುದ್ರಗಳು ಹೀಗೆ ಪೃಥ್ವಿಯಲ್ಲಿ ಕಾಣುವುದೆಲ್ಲವೂ ಪೃಥ್ವಿಯಿಂದಲೇ ಜನ್ಮ ತಾಳಿವೆ. ಆದರೆ ಪೃಥ್ವಿ ಸಮೇತ ಇಡೀ ವಿಶ್ವವು ಬಯಲೆಂಬ ಚೈತನ್ಯದಿಂದ ಸೃಷ್ಟಿಯಾಗಿದೆ.

ಸೂರ್ಯ, ಚಂದ್ರ ತಾರೆಗಳ ಸಮೇತ ಕಣ್ಣಿಗೆ ಕಾಣುವುದೆಲ್ಲವೂ ಒಂದಿಲ್ಲ ಒಂದು ದಿನ ಲಯವಾಗಿ ಮೂಲವಸ್ತುವಾದ ಚೈತನ್ಯದಲ್ಲಿ ಒಂದಾಗಲೇ ಬೇಕು. ಇದನ್ನು ಅರಿತವನೇ ಶರಣ. ಮರೆತವನೇ ಮಾನವ. ಆದ್ದರಿಂದಲೇ ಈ ಅರಿವಿಗಾಗಿ "ಮರೆಯದೆ ಪೂಜಿಸು ಕೂಡಲಸಂಗನ" ಎಂದು ಬಸವಣ್ಣನವರು ಹೇಳಿದ್ದಾರೆ.

ಬಸವಣ್ಣನವರ ಪೂಜೆಯು ಮೂಲವಸ್ತುವನ್ನು ಅರಿತುಕೊಳ್ಳುವ ಕ್ರಮವಾಗಿದೆ. ಆ ಕೂಡಲಸಂಗಮದೇವನೇ ಮೂಲವಸ್ತುವಾದ ಚೈತನ್ಯ. ಚೈತನ್ಯದ ಪ್ರತೀಕವಾದ ದೇವರು ಒಬ್ಬನೇ ಇದ್ದಾನೆ. ಆದರೆ ಆ ದೇವರಿಗೆ ಬೇರೆ ಬೇರೆ ಹೆಸರುಗಳಿವೆ. ಅಂತೆಯೆ ಬಸವಣ್ಣನವರು "ದೇವನೊಬ್ಬ ನಾಮ ಹಲವು" ಎಂದು ಹೇಳಿದ್ದಾರೆ. ವಿವಿಧ ಧರ್ಮಗಳಲ್ಲಿ ದೇವರ ಹೆಸರುಗಳು ಬೇರೆ ಬೇರೆಯಾಗಿವೆ. ಆದರೆ ಅವೆಲ್ಲ ಅನಂತವಾದ ಚೈತನ್ಯಕ್ಕೆ ಸಂಬಂಧಿಸಿದ ಬೇರೆ ಬೇರೆ ಹೆಸರುಗಳಾಗಿವೆ.

**"ಬಯಲ ರೂಪ ಮಾಡಬಲ್ಲಾತನೆ ಶರಣನು;**
**ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ.**
**ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ?**
**ಆ ರೂಪ ಬಯಲು ಮಾಡಲರಿಯದಿದ್ದಡೆ ಎಂತು ಲಿಂಗಾನುಭಾವಿ ಎಂಬೆ?**
**ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರಹುಂಟೆ?**
**ಕೂಡಲಸಂಗಮದೇವಾ?"**

ಎಂದು ಬಸವಣ್ಣನವರು ಹೇಳುವಲ್ಲಿ ಚೈತನ್ಯದ ವಿರಾಟ ಸ್ವರೂಪವನ್ನು ತೋರಿಸಿಕೊಟ್ಟಿದ್ದಾರೆ. ಚೈತನ್ಯದಿಂದ ವಸ್ತುವಾಗಿರುವುದನ್ನು ಅರಿತವನೇ ಶರಣ. ಆ ವಸ್ತು ಲಯವಾಗಿ ಮತ್ತೆ ಚೈತನ್ಯವಾಗುತ್ತದೆ ಎಂಬುದನ್ನು ಅರಿತವನೇ ಈ ಲಿಂಗತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡ ಲಿಂಗಾನುಭಾವಿ.

ಎಲ್ಲ ವಸ್ತುಗಳು ಚೈತನ್ಯಮಯ ಎಂಬ ಸತ್ಯವನ್ನು ಅರಿತು ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವಾತನೇ ಶರಣ. ಶಿವ ಎಂಬುದೇ ಚೈತನ್ಯ. ಆ ಚೈತನ್ಯದಿಂದ ರೂಪು ತಳೆದ ಸಕಲ ಜೀವಾತ್ಮರು ಶಿವಸ್ವರೂಪಿಗಳೇ ಆಗಿದ್ದಾರೆ. ಆದ್ದರಿಂದ ಈ ಸತ್ಯವನ್ನು ಅರಿತು ಲೋಕದಲ್ಲಿ ಯಾವುದೇ ರೀತಿಯ ಮೇಲು ಕೀಳುಗಳಿರಬಾರದು ಎಂದು ಪ್ರತಿಪಾದಿಸುವವನೇ ಶರಣ ಎಂದು ಕರೆಯಿಸಿಕೊಳ್ಳುವನು. ಇಂಥ ಚೈತನ್ಯಮಯ ಬದುಕನ್ನು ಅರ್ಥೈಸಿಕೊಳ್ಳದಿದ್ದರೆ ಅವನಿಗೆ ಶರಣನೆಂದು ಕರೆಯಲಿಕ್ಕಾಗದು. ಕೋಟಿ ಕೋಟಿ ವರ್ಷಗಳ ನಂತರವಾದರೂ ಈ ವಿಶ್ವ ಮತ್ತೆ ತನ್ನ ರೂಪವನ್ನು ಕಳೆದುಕೊಂಡು ಬಯಲಾಗುವುದು ಅಂದರೆ ಅಗಮ್ಯ, ಅಗೋಚರ, ಅಪ್ರತಿಮ ಮತ್ತು ಅಪ್ರಮಾಣವಾದ ಮೂಲ ಚೈತನ್ಯದಲ್ಲಿ ಲೀನವಾಗುವುದು. ಈ ಅಂತಿಮ ಸತ್ಯವನ್ನು ಅರಿತ ಶರಣನೇ ಲಿಂಗಾನುಭಾವಿಯಾಗುತ್ತಾನೆ. ನಾವು ಚೈತನ್ಯವನ್ನು ಮುಟ್ಟಲಿಕ್ಕಾಗದು, ನೋಡಲಿಕ್ಕಾಗದು, ಯಾವುದರ ಜೊತೆಯೂ ಹೋಲಿಸಲಿಕ್ಕಾಗದು ಮತ್ತು ಅದನ್ನು ಅಳೆಯಲಿಕ್ಕಾಗದು. ಏಕಂದರೆ ಅದು ದೇವರೇ ಆಗಿದೆ.

ಬಸವಣ್ಣನವರ ಬಯಲುತತ್ತ್ವವಾದ ಲಿಂಗತತ್ತ್ವವು ವಿಶ್ವದ ಆದಿ ಮತ್ತು ಅಂತ್ಯದ ಪರಿಜ್ಞಾನವನ್ನು ಕೊಡುವ ತತ್ತ್ವವಾಗಿದೆ. ಇವುಗಳ ಮಧ್ಯೆ ಇರುವ ಬದುಕನ್ನು ಲಿಂಗಾಂಗಸಾಮರಸ್ಯದೊಂದಿಗೆ ಅರ್ಥಪೂರ್ಣಗೊಳಿಸುವ ಕ್ರಮವನ್ನು ಸಾರುತ್ತದೆ. ಲಿಂಗವೆಂದರೆ ಪರಮಾತ್ಮ, ಅಂಗವೆಂದರೆ ಆತ್ಮ. ಆತ್ಮವು

ಪರಮಾತ್ಮನ ಅಂಶವೇ ಆಗಿದ್ದರೂ ಕಾಯದ ಜೊತೆಗಿರುವುದರಿಂದ ಅದು ಕೂಡ ಅಂಗವೇ ಎಂದನಿಸಿಕೊಳ್ಳುತ್ತದೆ. ಈ ಪರಮಾತ್ಮ ಮತ್ತು ಜೀವಾತ್ಮರ ಐಕಮತ್ಯವೇ ಲಿಂಗಾಂಗಸಾಮರಸ್ಯ ಎಂದು ಕರೆಯಿಸಿಕೊಳ್ಳುತ್ತದೆ. ಅನುಭಾವದ ಅರಿವಿನಿಂದ ಆತ್ಮವು ಪರಮಾತ್ಮನ ಜೊತೆಗೂಡಿ ಸಾಮರಸ್ಯ ಹೊಂದುವುದರಿಂದ ಆ ಲಿಂಗಾಂಗಸಾಮರಸ್ಯದಿಂದಲೇ ಮಾನವರು ಜೀವಿತಾವಧಿಯಲ್ಲೇ ಲಿಂಗೈಕ್ಯ ಸ್ಥಿತಿ ತಲುಪುವರು. ಅಂತೆಯೆ ಬಸವಣ್ಣನವರು ಕೂಡಲಸಂಗನ ಶರಣರು ಅಚ್ಚಲಿಂಗೈಕ್ಯರು ಎಂದು ಹೇಳಿದ್ದಾರೆ.

ಶರಣರು ಯಾವುದೇ ಕಾಯಕ ಮಾಡುತ್ತಿದ್ದರೂ ಆಂತರ್ಯದಲ್ಲಿ ಪರಮಾತ್ಮನ ಜೊತೆ ಸಾಮರಸ್ಯಹೊಂದಿ ಶಿವಸ್ವರೂಪಿಗಳಾಗಿರುತ್ತಿದ್ದರು. ಈ ಪ್ರಕಾರ ಶರಣರು ಜೀವತಾವಧಿಯಲ್ಲೇ ಮೋಕ್ಷ ಹೊಂದಿದವರಾಗಿದ್ದರು. ಅವರ ಲಕ್ಷ್ಯವೆಲ್ಲಾ ತಮ್ಮೊಳಗಿನ ಪರಮಾತ್ಮನ ಜೊತೆಗೇ ಇತ್ತು. ಆತ್ಮ ಮತ್ತು ಪರಮಾತ್ಮನ ಸಮ್ಮಿಲನದ ಪರಮಾನಂದದೊಂದಿಗೆ ಅವರು ದೈನಂದಿನ ಕಾಯಕದಲ್ಲಿ ತಲ್ಲೀನರಾಗಿರುತ್ತಿದ್ದರು. ಹೀಗಾಗಿ ಅವರು ಸತ್, ಚಿತ್, ಆನಂದ, ನಿತ್ಯ ಮತ್ತು ಪರಿಪೂರ್ಣರಾಗಿದ್ದರು. ಈ ಐದನ್ನು 'ಪರಮಾತ್ಮನ ಸ್ವರೂಪಗಳು' ಎನ್ನುತ್ತಾರೆ. ಲಿಂಗವೇ ಚೈತನ್ಯ. ಅಂಗವೇ ನಮ್ಮ ದೇಹ. ಚೈತನ್ಯವೇ ಶಿವ, ದೇಹವುಳ್ಳವರೇ ಜೀವರು. ಶಿವ ಮತ್ತು ಜೀವರ ಮಧ್ಯದ ಸಾಮರಸ್ಯವೇ ಲಿಂಗಾಂಗಸಾಮರಸ್ಯ. ಹೀಗೆ ಲಿಂಗಾಂಗಸಾಮರಸ್ಯ ಹೊಂದಿದವರು ಶರಣರಾಗುತ್ತಾರೆ.

ಬಸವಣ್ಣನವರು ಈ ಜೀವಾತ್ಮ ಮತ್ತು ಪರಮಾತ್ಮ ಸಂಬಂಧವನ್ನು "ಶರಣ ಸತಿ, ಲಿಂಗ ಪತಿ" ಎಂದು ಸಾರಿದ್ದಾರೆ. ಇಲ್ಲಿ ಸತಿ ಎಂದರೆ ಆಜ್ಞೆಯನ್ನು ಪಾಲಿಸುವವರು. ಪತಿ ಎಂದರೆ ಆಜ್ಞೆ ಮಾಡುವಾತ. ಜೀವಾತ್ಮರೇ ಸತಿ, ಪರಮಾತ್ಮನೇ ಪತಿ. ಜೀವಾತ್ಮರೊಳಗೆ ಪರಮಾತ್ಮನಿದ್ದಾನೆ. ಆತ ಅಂತಃಸಾಕ್ಷಿಯಾಗಿದ್ದಾನೆ. ಅಂತಃಸಾಕ್ಷಿ ಹೇಳಿದಂತೆ ನಾವು ನಡೆಯಬೇಕು. ಆಗ ಜಗತ್ತಿನ ಜೀವಾತ್ಮರೆಲ್ಲ ಲಿಂಗ, ಜಾತಿ, ವರ್ಣ ಮತ್ತು ಬಡವ–ಶ್ರೀಮಂತ ಎಂಬ ವರ್ಗಭೇದವನ್ನು ಮೀರಿ ಒಂದಾಗಿ ಕಾಣುವರು. ಹೀಗೆ ಮಾನವರು ವಿಶ್ವಮಾನವರಾಗುವ ಕ್ರಮವನ್ನು ಬಸವಣ್ಣನವರು ತಿಳಿಸಿಕೊಟ್ಟಿದ್ದಾರೆ. ಇಂಥ ನಡೆನುಡಿ ಸಿದ್ಧಾಂತವನ್ನು ಆಚರಣೆಗೆ ತರುವ ಮೂಲಕ ಶರಣರು ವಿಶ್ವಮಾನವರಾದರು. ವಿಶಿಷ್ಟವಾದ ಈ ಲಿಂಗಾಂಗಸಾಮರಸ್ಯವನ್ನು ಹೊಂದಿದವರೇ ಲಿಂಗಾನುಭಾವಿಗಳು. ಎಲ್ಲವೂ ಲಯವಾಗುವ ಅಂತಿಮ ಸತ್ಯವನ್ನು ಶರಣರು ಲಿಂಗಾಂಗಸಾಮರಸ್ಯದ ಮೂಲಕ ಅರಿತವರಾಗಿದ್ದರು. ಚೈತನ್ಯವೆಂಬ ಬಯಲಿನಿಂದ ಬಂದ ರೂಪವು ಲಯವಾಗಿ ಬಯಲಾಗುವ, ಅಂದರೆ ಮತ್ತೆ ಮೂಲ ಚೈತನ್ಯದಲ್ಲಿ ಒಂದಾಗುವ ಅಂತಿಮ ಸತ್ಯವನ್ನು ಅರಿಯದವರು ಲಿಂಗಾನುಭಾವಿಗಳಾಗಲು ಸಾಧ್ಯವಿಲ್ಲ.

ಇಂಥ ಬಯಲು ಮತ್ತು ರೂಪ ಒಂದಾಗುವ ಕ್ರಮವನ್ನು ಅರಿತುಕೊಂಡು ಆಚರಣೆಯಲ್ಲಿ ತಂದಾಗ, ಶಿವ ಮತ್ತು ಜೀವರಲ್ಲಿ ಸಾಮರಸ್ಯ ಉಂಟಾಗುವುದು. ಈ ಸತ್ಯವನ್ನು ಅರಿತುಕೊಂಡವರು ಶರಣರಾಗುತ್ತಾರೆ; ಸಕಲಜೀವಾತ್ಮರಿಗೆ ಲೇಸನ್ನೇ ಬಯಸುತ್ತಾರೆ. 'ಒಬ್ಬನೇ ಚೈತನ್ಯರೂಪಿ ದೇವರು, ಒಂದೇ ಜಗತ್ತು ಮತ್ತು ವೈವಿಧ್ಯಗಳನ್ನೊಳಗೊಂಡ ಒಂದೇ ಮಾನವಕುಲ' ಎಂದು ನಡೆ ನುಡಿಗಳ ಮೂಲಕ ಸಾಧಿಸಿ ತೋರಿಸುತ್ತಾರೆ. ಇಂಥ ಅರಿವನ್ನು ಮರೆತವರು ಮಾನವರೂಪಿಗಳಾಗಿ ಬದುಕುತ್ತಾರೆ. ಅರಿತವರು ಶರಣರಾಗುತ್ತಾರೆ.



## ಬೌದ್ಧತತ್ವ ಸ್ಪರ್ಶದಲ್ಲಿ ತತ್ವಪದಗಳು.

**–ಡಾ. ಮೀನಾಕ್ಷಿ ಬಾಳಿ,**
ಮುಖ್ಯಸ್ಥರು, ಕನ್ನಡ ವಿಭಾಗ,
ಶ್ರೀಮತಿ ವೀರಮ್ಮ ಗಂಗಶ್ರೀ ಮಹಿಳಾ ಮಹಾವಿದ್ಯಾಲಯ,
ಕಲಬುರಗಿ.

**ಬಯಲು ಬ್ರಹ್ಮವೆನುತಾ ಭಾವನೆಗೈಯ್ವಾ ಭ್ರಾಂತಿ ಬೇಡಣ್ಣಾ**

**ನಯನದೊಳು ನಿನ್ನ ಅರಿವನ್ನು ಕಂಡು ನಾಶ ಮಾಡಣ್ಣಾ ॥ ಪ ॥**

**ಅರಿವು ಮರೆವುಗಳಾ ಮೀರಿ ಏಕವಾಗಿಹುದಣ್ಣಾ**
**ಗುರುತನರಿವಾ ಈ ತನುವು  ಜಗ ಶೋಧಿಸಬೇಕಣ್ಣಾ ॥ ೧ ॥**

**ಹುಟ್ಟು ಸಾಯದೆ ಬಯಲ ಪೂರ್ಣವಾಗಿಹುದಣ್ಣಾ**
**ಮಾಯ ಮಾಡಿಹ ಮನಸನು ಹಿಡಿಯದಿದ್ದರೆ ದೊರಕದಣ್ಣಾ ॥ ೨ ॥**

**ಕನಸು ನನಸು ಬಯಲರಿವನು ಕೂಡಿಸಿ ಕಾಣಣ್ಣಾ**
**ಕನಸು ನನಸು ಅರಿವನು ಬಿಟ್ಟು ಬಯಲರಿಯಣ್ಣಾ ॥ ೩ ॥**

**ಸ್ಥಿರವಾಗಿಹ ಪೀಲ್ವಾನ ಲಕ್ಷ್ಮಣ ದೇಸಿಕ ಅರಸಿದ ಬೋಧೆಯಣ್ಣಾ**
**ನಿರುತದೊಳು ವೆಂಕಟೇಶ್ವರಯೋಗಿಗೆ ಅಚಲ ಬೋಧೆಯಣ್ಣಾ  ॥ ೪ ॥**

ಇದು ಅಚಲ ಪಂಥಾನುಸಂಧಾನಿ ಲಕ್ಷ್ಮಣ ದೇಸಿಕ ಎಂಬುವವರು ರಚಿಸಿದ ತತ್ವಪದ. ಅಚಲ ಪಂಥ ಎಂಬುದು ಬೌದ್ಧ ಮಾರ್ಗದಲ್ಲಿನ ಒಂದು ಆರಾಧನಾ ಪರಂಪರೆ. ಬುದ್ಧನ ತರುವಾಯದಲ್ಲಿ ಬಹು ದೊಡ್ಡ ಬೌದ್ಧ ಅನುಸಂಧಾನಿಯಾಗಿದ್ದ ನಾಗಾರ್ಜುನನು " ದಶಭೂಮಿಕಾ ಶಾಸ್ತ್ರ" ಕೃತಿಯಲ್ಲಿ ಜಗತ್ತನ್ನು ಗ್ರಹಿಸುವ ತನ್ಮೂಲಕ ಅದರಲ್ಲಡಕವಾಗುವ ಪರಿಯನ್ನು ಹತ್ತು ಬಗೆಯಲ್ಲಿ ನಿಖರಗೊಳಿಸುತ್ತಾನೆ.

**ಪ್ರಮುದಿತ– ಲೋಕದೆಲ್ಲ ಸುಖ ದುಃಖಗಳಿಂದಾಚೆ ನಿಂತ ಚಿತ್ತ**
**ವಿಮಲ– ಎಲ್ಲ ರೀತಿಯ ಕೆಡುಕಗಳಿಂದ ಮುಕ್ತನಾಗಿ ನಿಲ್ಲುವ ಹಂತ**
**ಪ್ರಭಾಕರಿ– ಅನವರತ ಜಾಗೃತರಾಗಿರುವ ನಿಸರ್ಗ ವಿವೇಕ**
**ಅರ್ಚಿಸ್ಮತಿ– ಬದುಕಿನೆಲ್ಲ ಅಡ್ಡಿಗಳನ್ನು ನಿಗೂಢದ ಆಲಂಬನವಿಲ್ಲದೆ ಬಿಡಿಸಿಕೊಳ್ಳುವ ತಾಕ್ಷಣಿಕ ನಡೆ**
**ಸುರ್ದುಜಯ–ಬೌದ್ಧ ಮಧ್ಯಮ ಮಾರ್ಗದಲ್ಲಿಯೇ ಲೋಕವನ್ನು ಇದಿರುಗೊಳ್ಳುವ ಪರಿ**
**ಅಭಿಮುಖ–ಪ್ರಜ್ಞಾಪಾರಮಿತದ ಅನುಸಂಧಾನ**
**ದೂರಾಗಮ–ಎಲ್ಲ ಪ್ರಾಪಂಚಿಕ ವೈರುದ್ಧಗಳನ್ನು ಮೀರಿ ನಿಲ್ಲುವ ಸಮಸ್ಥಿತಿ**
**ಅಚಲ–ಮನಸ್ಸಿನಲ್ಲಿ ಸಂಗ್ರಹಗೊಂಡಿರುವ ಎಲ್ಲ ಮನೋರಚನೆಗಳನ್ನು ಖಾಲಿಯಾಗಿಸುವ ಸಾಧನೆ**
**ಸಾಧುಮತಿ–ತಾನು ಪಡೆದ ಅರಿವುವನ್ನು ಸಕಲ ಜೀವರೊಂದಿಗೆ ಹಂಚಿಕೊಳ್ಳುವ ದಾಸೋಹ.**
**ಧರ್ಮಮೇಘ—ಲೋಕ ಸಮಸ್ತವನ್ನು ಕರುಣಾ ಮೈತ್ರಿಯಿಂದ ಬಾಳಿಸುವ ಜೀವಕಾರುಣ್ಯ ಕಾಯಕ.**

ಈ ಎಲ್ಲ ತತ್ವಗಳ ಅನುಸಂಧಾನದೊಂದಿಗೆ ಎಂಟನೇ ತತ್ವವಾದ ಅಚಲವನ್ನು ಉತ್ಕಟವಾಗಿ ಅನುಭೂತಿಗೊಳಿಸುವವರು ಅಚಲಿಗರು. ಕರ್ನಾಟಕದಲ್ಲಿ  ಕೋಲಾರ, ತುಮಕೂರು, ರಾಯಚೂರು, ಕೊಪ್ಪಳ, ಬಳ್ಳಾರಿ ಮುಂತಾದೆಡೆ ಈ ಅಚಲಿಗರು ಮತ್ತು ಅವರ ಆರಾಧನಾ ಕೇಂದ್ರಗಳಿವೆ.

ಬುದ್ಧಗುರುವಿನ ತರುವಾಯದಲ್ಲಿ ಬೌದ್ಧ ತಾತ್ವಿಕತೆಯನ್ನು ಅಭಿವೃದ್ಧಿ ಪಡಿಸಿದ ನಾಗಾರ್ಜುನನ ಕಾರ್ಯಕ್ಷೇತ್ರವಾಗಿರುವ ನಾಗಾರ್ಜುನಕೊಂಡ ಮತ್ತು ಶ್ರೀಶೈಲಗಳ ಸುತ್ತಮುತ್ತ ಅಚಲದ ದಟ್ಟ ಪ್ರಭಾವವಿದೆ. ಲೋಕದೆಲ್ಲ ಸಂರಚನೆಗಳಿಂದ ದೂರ ಉಳಿದ ಅಚಲಿಗರು ಮನಸ್ಸನ್ನು ಕೇಂದ್ರಿಕರಿಸಿಕೊಂಡು ಅಮನಸ್ಕರಾಗಿ ಇರುತ್ತಾರೆ. ಅಮನಸ್ಕ ಎಂದರೆ  ಮನಸ್ಸು ಗ್ರಹಿಸುವ, ಕಲ್ಪಿಸುವ, ಭಾವಿಸುವ ಎಲ್ಲ ಬಗೆಯ ಭಾವಗಳಿಂದ ಅತೀತವಾಗಿ ನಿಲ್ಲುವುದು. ನಿರಾಮಯವಾದ ಲೋಕವನ್ನು ನಿರಾಮಯವಾಗಿಯೇ ಇದಿರುಗೊಳ್ಳುವ, ಹೀಗೆ ಇದಿರುಗೊಂಡದ್ದನ್ನು ಲಯವಾಗಿಸುವ, ಲೋಕಕ್ಕೆ ಯಾವ ಕೇಡನ್ನು ಅಂಟಿಸದೆ ಬದುಕುವ ಬುದ್ಧ ಮಾರ್ಗವಿದು. ಅದಕ್ಕೆಂತಲೇ ಅವರು ಇದದ್ದು ಯಾರ ಗಮನಕ್ಕೂ ಬರದೆ ಸುಮ್ಮನೆ ಬಾಳುವ ಜನವದು. ತಮ್ಮ ಇರುವಿಕೆಯಿಂದಲೆ ಲೋಕದೆಲ್ಲ ಕೇಡುಗಳನ್ನು ನಿರ್ನಾಮಿಸುವ ತನ್ಮೂಲಕ ವಿಶ್ವವೇ ತಾನಾಗಿ ಅನುಭೂತಿಗಿಳಿಯುವ ಇವರಿಗೆ ಜಾತಿ-ಪಂಥಗಳಿಲ್ಲ. ಧರ್ಮ ದೇವರುಗಳಿಲ್ಲ. ಗಡಿಗಳೆಂಬ ಕಲ್ಪಿತ ವಾಸ್ತವಗಳೂ ಇಲ್ಲ. ಇಲ್ಲವೆಂಬುದು ಇಲ್ಲವಾದ ಹಂತವದು. ಹಾಗೇ ಸುಮ್ಮನೆ ಬದುಕುವ ಜೀವನಮಾರ್ಗವದು. ಯಾವ ಬಗೆಯ ಆಚರಣೆಗಳು, ಬಾಹ್ಯ ಪರಿಕರಗಳು, ಮಿತಿಗಳು ಇಲ್ಲದ ಕೇವಲ ಇರುವಿಕೆಗೆ ಇರುವಿಕೆಯೇ ಸಾಕ್ಷಿಯಾದ ನಿಶ್ಚಲ ಸ್ಥಿತಿಯಲ್ಲಿ ಅವರು ವಿರಮಿಸಿರುತ್ತಾರೆ. ಇಂಥದೊಂದು ಬೌದ್ಧಾನುಸಂಧಾನ ಮಾರ್ಗವು ಕನ್ನಡ ನಾಡಿನಲ್ಲಿ ಆಲಾಯಿದವಾಗಿ ನಡೆದುಕೊಂಡು ಬಂದಿದೆ. ಆದರೆ ಅವರ ನಿಶ್ಚಲ ಮತ್ತು ನಿರ್ವಿಕಲ್ಪ ಸ್ಥಿತಿಯಿಂದಾಗಿ ಯಾರಿಗೂ ಗಮನಕ್ಕೆ ಬರದಂತೆ ಇದ್ದುಕೊಂಡು ಬಂದಿದ್ದಾರೆ. ಅಚಲಿಗರು ಎಂದೂ ತಮ್ಮನ್ನು ಪ್ರದರ್ಶನಕ್ಕಿಟ್ಟವರೆ ಅಲ್ಲ. ಹಾಗೇ ಇಡಬೇಕಾದ ದರ್ದುಗಳು ಅವರಿಗೆ ಇಲ್ಲವಾಗಿ ಚರಿತ್ರೆಯಲ್ಲಿ ಎಲ್ಲೂ ದಾಖಲಾಗಿಲ್ಲ. ಬೌದ್ಧಾನುಸಂಧಾನದ ಬಾಹ್ಯ ಆಚರಣೆಗಳ ಹಂಗಿಗೆ ಬಿದ್ದ ಚರಿತ್ರೆಕಾರರು ಭಾರತದಿಂದ ಬೌದ್ಧಾನುಸಂಧಾನವು ಲುಪ್ತವಾಯಿತು ಎಂದೆ ಭಾವಿಸಿದರು ಮತ್ತು ಬರೆದರು. ಆದರೆ ಬೌದ್ಧಾನುಸಂಧಾನವೂ ಆ ಹೊತ್ತಿಗಾಗಲೇ ಅನೇಕ ಕವಲುಗಳಾಗಿ ಸ್ಥಳೀಯ ಆನುಭಾವಿಕ ಪಂಥಗಳೊಂದಿಗೆ ಮೇಳೈಸಿಕೊಂಡು ತನ್ನದೆ ಗತಿಯಲ್ಲಿ ಅಸ್ತಿತ್ವದಲ್ಲಿ ಇತ್ತು. ಸಾಕ್ಷಿಯೆಂಬಂತೆ ಇಂದು ನಾಥ, ಆರೂಢ, ಅವಧೂತ, ಸಿದ್ಧ, ಅಚಲ ಪಂಥಗಳ ರೂಪದಲ್ಲಿ ಅದು ಅನುಸಂಧಾನಗೊಳ್ಳುತ್ತಿದೆಯಷ್ಟೆ.

ಈ ಮೇಲೆ ಉಲ್ಲೇಖಿತವಾದ ತತ್ವಪದದಲ್ಲಿ ನಿಖರವಾಗಿ ಬೌದ್ಧ ತಾತ್ವಿಕತೆಯೇ ಅನುರಣನಗೊಂಡಿದೆ ಅಲ್ಲವೆ?.ವೈದಿಕ ತತ್ವದಲ್ಲಿ ಬ್ರಹ್ಮ ಎಂಬುದು ನಿರ್ವಿಕಲ್ಪವಾದರೂ ಅದು ಶಬ್ದ ಪ್ರಮಾಣವನ್ನು ಅವಲಂಬಿಸಿದೆ. ಬಹ್ರ್ಮವು ಬಯಲೇ ಆದರೂ ಬಯಲು ಗಟ್ಟಿಗೊಳ್ಳುವ ಬಯಲೂ ಮನೋರಚನೆಯಾಗುವ ಅಪಾಯವಿದೆ. ಅಚಲಿಗರಲ್ಲಿ ಬಯಲನ್ನು ಬಹ್ರ್ಮವೆಂದು ಪರಿಭಾವಿಸುವುದು ಭ್ರಾಂತಿಯೇ ಆಗಿದೆ. ಬ್ರಹ್ಮವೆಂಬುದೆ ಮನೋರಚನೆ.  ಇಲ್ಲದ ಬ್ರಹ್ಮವು ಆಗುವದೆಲ್ಲಿ? ನಯನದೊಳು ಅರಿವನ್ನು ಕಂಡು ಕಂಡೆನೆಂಬ ಭಾವ ಲಯವಾಗಬೇಕು. ಅತ್ತದೀಪೊಭವ ಎಂದ ಬೌದ್ಧ ದಾರ್ಶನಿಕತೆಯ ಕನ್ನಡ ತಿಳಿವು ಇದು. ಮರೆವು ಮೀರಿ ಅರಿವಾಗುವುದೂ ಅಲ್ಲವೇ. ಮರೆದೆನೆಂಬುದು ಮಾಯೆಯ ವ್ಯಕ್ತರೂಪವಾದರೆ ಅರಿದೆನೆಂಬುದು ಅದೇ ಮಾಯೆಯ ಅವ್ಯಕ್ತ ರೂಪವೆನ್ನುತ್ತಾರೆ ಬಸವಾದಿ ಶರಣರು. ಅಲ್ಲಮ ಇದನ್ನು

**ಅರಿವನರಿದಿಹೆನೆಂಬುದು ಮರವೆ,**
**ಮರಹ ಮರೆದಹೆನೆಂಬುದು ಮರವೆ.**

ಸಾಕಾರ ನಷ್ಟ ನಿರಾಕಾರ ದೃಷ್ಟವೆಂಬುದು ಭಾವದ ಬಳಲಿಕೆ ಎನ್ನುತ್ತಾನೆ.

ಆದ್ದರಿಂದಲೆ ಅರಿವು ಮರೆವುಗಳ ಮೀರಿದ್ದು ಅಚಲತ್ವ. ನಿರಾಕಾರವೆಂಬುದು ಕೂಡ ಭಾವದ ಬಳಲಿಕೆಯೆ ಆಗಿದೆ. ಭಾವದ ಬಳಲಿಕೆ ಶರೀರದ ಬಳಲಿಕೆಗಿಂತ ಘೋರ.  ಎರಡು ಬಗೆಯ ಘೋರಗಳಿಂದ ತನ್ನನ್ನು ತಾನು ದಕ್ಕಿಸಿಕೊಳ್ಳುವುದೆ ಆತ್ಯಂತಿಕ. ಇದು ಮಾತ್ರ ತನ್ನ ಗುರುತ ತೋರಬಲ್ಲುದು. ಇದನ್ನು ತನ್ನೊಳಗೆ ಸಾಧ್ಯವಾಗಿಸಬೇಕಲ್ಲದೆ ಹೊರಗೆ ಏನೂ ಇಲ್ಲ. ಇಲ್ಲದನ್ನು ಇದೆ ಎಂದು ಭ್ರಮಿಸಿಕೊಂಡೆ ಹಾಳಾಯಿತು ಈ ಲೋಕ.  ಹುಟ್ಟು ಸಾವುಗಳಿಲ್ಲದ ಈ ಅರಿವು ಅರಿವ ಮನಸ್ಸು ಇದೆಯಲ್ಲಾ ? ಇದನ್ನು ಲಯವಾಗಿಸದೆ ಲೋಕದ ಮಾಯೆ ನೀಗದು. ಕನಸು-ನನಸುಗಳಾಚೆ

ವಿಸ್ತರಿಸಿಕೊಂಡಿರುವ ಅರಿವಿನ ಸ್ವರೂಪವಾದರೂ ನಿರೂಪವೆಂದರೆ ಅದೂ ಕೂಡಾ ಒಂದು ಆಲಂಬನೆಯಾದೀತು. ಆದ್ದರಿಂದ ಕನಸು, ನನಸು ಮತ್ತು ಅರಿವು ಮೂರನು ಬಿಟ್ಟೆ ಬಯಲು ಬೆರೆಯಬೇಕು. ಬಯಲು ಬೆರೆಯುವುದು ಏನು ಹಗುರೆ? ಹಗುರು ಅಲ್ಲವೆಂದರೆ ಬಿರಿಯೂ ಅಲ್ಲ. ಹಗುರುದಲ್ಲಿನ "ಹ" ಕಳೆಯಲು ಉಳಿಯುವುದು "ಗುರು" ಮಾತ್ರ. ಚಂಚಲವಾದುದನ್ನು ಅಚಲವಾಗಿಸಲು ಗುರುಮಾರ್ಗವಿದೆ. ಎಂತಿದ್ದರೂ ಅಚಲವು ಗುರುಪಂಥಿ ಮಾರ್ಗ. ಇಂಥ ಗುರುಪಂಥದಲ್ಲಿ ನಿರತನಾದ ಲಕ್ಷ್ಮಣ ದೇಸಿಕನನ್ನು ವೆಂಕಟೇಶ್ವರ ಗುರುವೇ ಅರಸಿಕೊಂಡು ಬಂದಿದ್ದಾನೆ ಎನ್ನುತ್ತಾನೆ. ಅಲ್ಲಿಗೆ ಗುರು ಮುಟ್ಟಿ ಮುಟ್ಟಿ ಗುರುವಾಗುವ ಅಚಲದ ಬೋಧೆ ದಕ್ಕುತ್ತದೆ ಎನ್ನುತ್ತಾನೆ.

ಹೀಗೆ ಬೌದ್ಧ ಮಾಧ್ಯಮಿಕ ಮಾರ್ಗವನ್ನು ಅನುಸರಿಸಿದ ಅಚಲ ತತ್ವಾನುಸಂಧಾನಿಗಳು ಅದೆಷ್ಟು ಕಾಲದಿಂದಲೂ ಇಲ್ಲಿ ಎಲೆ ಮರೆಯ ಕಾಯಿಗಳಂತೆ ಬಾಳು ಹೂಡಿದ್ದರೂ ಹೊರಗಿನವರಿಗೆ ಗೊತ್ತಿರಲಿಲ್ಲ. ಅವರು ಸಾಮಾನ್ಯರಲ್ಲಿ ತೀರ ಸಾಮಾನ್ಯರಂತೆ ಬದುಕಿದ್ದರಾದ್ದರಿಂದ ಯಾರ ಗಮನಕ್ಕು ಬರಲಿಲ್ಲ. ಹೀಗೆ ಬರಬಾರದು ಎಂಬುದು ಅವರ ಉದ್ದೇಶವು ಆಗಿತ್ತು. ಅಂದರೆ ಬೌದ್ಧ ತಾತ್ವಿಕತೆ ಭಾರತದಿಂದ ಮರೆಯಾದದ್ದೆ ಇಲ್ಲ. ವೈದಿಕರು ಬೌದ್ಧರ ಭೌತಿಕ ನೆಲೆಗಳಾದ ವಿಹಾರಗಳು, ಚೈತ್ಯಾಲಯಗಳು, ಕೃತಿಗಳಿಂದ ಇಡುಕಿರಿದ ಗ್ರಂಥಾಲಯಗಳು ಮತ್ತು ಬೌದ್ದ ತತ್ವಗಳ ಉಪಾಸಕರಾಗಿದ್ದ ಭಿಕ್ಕಗಳನ್ನು ನಾಶಗೈದರು. ಆದರೆ ಇಲ್ಲಿನವರ ಉಸಿರಲ್ಲಿ ಬೆರೆತು ಹೋಗಿದ್ದ ತಾತ್ವಿಕತೆಯನ್ನು ಇಲ್ಲವಾಗಿಸಲು ಸಾಧ್ಯವಾಗಲಿಲ್ಲ. ಬೌದ್ಧತ್ವ ಎನ್ನುವುದು ಇಲ್ಲಿ ಗಾಳಿ,ನೀರು, ನೆಲ,ಬೆಳಕು, ಆಕಾಶದಷ್ಟು ಸಹಜವಾಗಿದೆ. ಹೊರಗು ಹಾಕುವಂಥದ್ದು ಆಗಿರಲಿಲ್ಲ. ಹೊರಗಿನಿಂದ ಆಮದು ಮಾಡಿಕೊಳ್ಳಬೇಕಾದದ್ದು ಇರಲಿಲ್ಲ. ಸಾಂಸ್ಥಿಕ ಧರ್ಮ ರೂಪದಲ್ಲಿ ಇದ್ದ ಬೌದ್ಧ ನೆಲೆಗಳನ್ನು ನಾಶ ಮಾಡಿದಷ್ಟು ಸುಲಭವಾಗಿರಲಿಲ್ಲ ಬೌದ್ಧ ತಾತ್ವಿಕತೆಯನ್ನು ಇಲ್ಲವಾಗಿಸುವುದು. ಅದಕ್ಕೊಂದು ಉದಹರಣೆಯನ್ನು ಇಲ್ಲಿ ಕೊಡಬಹುದೆಂದು ತೋರುತ್ತದೆ. ಹೀಗೆ ತತ್ವಪದಗಳ ಸಂಗ್ರಹ ಕಾರ್ಯದಲ್ಲಿ ತೊಡಗಿದ್ದ ಹಿರಿಯ ವಿದ್ವಾಂಸರಾದ ನಟರಾಜ ಬೂದಾಳು ಸರ್ ಅವರು ಒಂದೊಮ್ಮೆ ಅಚಲ ಸಾಧಕಿಯೊಬ್ಬಳನ್ನು ಕಂಡಾಗ ಅವಳು ಅವರಿಗೆ ಏನ ಮಗಾ ದಿನಾ ಬಂದು ಪದ ಕೇಳಿ ಬರಕೊಂಡು ಹೋಗತಿಯಲಾ ಅದರಿಂದೇನು ಬಂತು. ಸುಮ್ಮನೆ ಯಾರನ್ನಾದರೂ ಗುರು ಮಾಡ್ಕಂಡು ಸಾಧನಾ ಮಾಡಬಾರದಾ ಎಂದಳಂತೆ. ಅದಕ್ಕೆ "ಇಲ್ಲ ಕಣವ್ವಾ ಈ ಪದಗಳು ಬೇಕು. ಇವನ್ನೆಲ್ಲಾ ಪುಸ್ತಕಾ ಮಾಡಿ ಕಳೀದಂಗೆ ಉಳಸ್ಬೇಕು ಅಂದರಂತೆ. ಅದಕ್ಕೆ ಅವಳು ಕಳ್ದೋದ್ರೆ ಹೋಗ್ಲಿ ಬಿಡು ಮಾಗಾ, ಇನ್ನೆರಡು ಕಟ್ಕಂಡ್ರಾತು" ಎಂದವಳೆ ಮುಂದೆ ನಡೆದಳಂತೆ"

ಈ ಲೇಖಕಿ ಕೂಡಾ ಒಮ್ಮೆ ಹೀಗೆ ಪ್ರಸಂಗ ಎದುರಿಸಬೇಕಾಯಿತು. ಸಂಶೋಧನಾ ಅಧ್ಯಯನ ಮಾಡುವಾಗ ಕಡಕೋಳ ಮಡಿವಾಳಪ್ಪನ ಶಿಷ್ಯನಾಗಿದ್ದ ಕಡ್ಲೆವಾಡ ಸಿದ್ದಪ್ಪನ ಒಂದು ಪದದ ಪಲ್ಲವಿಯೇನೋ ಸ್ವಲ್ಪ ಕೈಗೆ ಹತ್ತಿತ್ತು. ಆದರೆ ಪೂರ್ತಿ ಪದಾ ಸಿಗುತ್ತಲೆ ಇರಲಿಲ್ಲ. ಅದಕ್ಕಾಗಿ ನಮ್ಮಪ್ಪನೊಂದಿಗೆ ತಿಂಗಾಳುನುಗಟ್ಲೆ ತಿರುಗಾಡಿದ್ದಾಯ್ತು. ಗೋಲಗೇರಿಯ ತೀರ ಸಾಮಾನ್ಯ ಮನುಷ್ಯನೊಬ್ಬನಲ್ಲಿ ಆ ಪದದ ಪೂರ್ತಿ ಪಾಠ ಇದೆ ಎಂಬ ಮಾಹಿತಿ ಸಿಕ್ಕೊಡನೆ ಅಲ್ಲಿಗೆ ಹೋದೆ. ಹಿರಿಯ ಜೀವ. ಮುಪ್ಪು ಮೈ ಮುಚ್ಚಿದರೂ ಅನುಭಾವದ ಪಕ್ವತೆ ನಿಖರವಾಗಿಯೇ ಇತ್ತು. ಧೋತ್ರ, ಅಂಗಿ, ಉಂಡಿ ರುಮಾಲು, ಕ್ವಾರಿ ಮೀಸಿ, ಲಟ್ಟ್ ಆಳು. ಎತ್ತರದ ನಿಲುವು. ಒಟ್ಟಾರೆ ಏನೋ ವಿಶೇಷವೆಂಬ ಮೂರ್ತಿ. ಏನೆಂದರೆ ಹೇಳಲಾಗದ ಒಂದು ಸುಖಾಸುಮ್ಮನೆ ದುಡಿದು ದುಡಿದು ಗಟ್ಟಿ ಮುಟ್ಟಾದ ನೀಟ ಮನುಷ್ಯ. ನಾನದರೂ ಹೋಗಿ "ಅಜ್ಜಾರ ನಿಮ ಹಂತ್ಯಾಕ ಕಡ್ಲೆವಾಡ ಸಿದ್ದಪ್ಪ ಮುತ್ಯಾನ ಎಮ್ಮಿ ಪದಾ ಐತೆಂತ ನಾ ಪಿಎಚ್ಡಿ ಮಾಡಾಕತೀನಿ ಕೊಡ್ರೆಲಾ " ಎಂದೆ. ಆತ ನನ್ನನ್ನೊಮ್ಮೆ ಆಯೋಮಯವಾಗಿ ನೋಡಿ " ತಂಗಿ ನಿನಗ್ ಎಮ್ಮಿ ಕಾಯಾಕ ಬರತ್ಯೆತೇನು? ಅಂದ. ನಾ ಗಾಬರಾಗಿ ಇಲ್ ಅಜ್ಜಾ ಆದ್ರ ಸಣ್ಣಾಂಕಿದ್ದಾಗ ಹೊಳ್ಯಾಗ ಹೋಗಿ ಎಮ್ಮಿ ಮೈ ತೊಳಸಕೊಂಡ ಬಂದ್ಯಾನ್ರಿ" ಅಂದೆ. ಅಂವ ಖೊಕ್ ಖೊಕ್ಕ್ ಅಂತ ನಗತಾ ನಕ್ಕು " ತಂಗೀ ನಿನಗ್ಯಾಕ ಎಮ್ಮಿ ಪದದ ಉಸಾಬರಿ ಸುಮ್ಮ ಹೋಗಲಾ. ಮನಿ ತಂಕಾ ಬಂದಿ ಒಂದ ರೊಟ್ಟಿ ತಿಂದ$ ಹೋಗು" ಅಂದ. ಖರೇ ಹಕಿಕತ್ ಏನಂದರೆ ಆ ಪದ ಅಕ್ಷರಶಃ ಎಮ್ಮೆ ಕಾಯುವ ಧಾಟಿಯಲ್ಲಿ ಬರೆಯಲಾಗಿತ್ತು. ಸಿದ್ದಪ್ಪ ಸ್ವಯಂ ಎಮ್ಮಿ ಕಾಯುತಿದ್ದ.

ಎಮ್ಮೆಗಳನ್ನು ಮೇಯಿಸುವಾಗ ಅವುಗಳಿಗೆ ಮಾತನಾಡಿಸಿ ಎಚ್ಚರಿಸುವ ಧಾಟಿಯಲ್ಲಿ ಅದು ಇತ್ತು. ಆ ಧ್ವನಿ ಕಾಕನ್ನು ಲಿಪಿಬದ್ಧಗೊಳಿಸುವುದು ಕಷ್ಟವಿತ್ತು. ಆದ್ದರಿಂದಲೇ ಅದು ಬಾಯಿಂದ ಬಾಯಿಗೆ ಹಳ್ಳಿಗರ ಮಸ್ತಕದಲ್ಲಿ ಮಾತ್ರ ದಾಖಲಾಗಿತ್ತು. ಇಡೀ ಪದವಾದರೂ ಎಮ್ಮೆಯನ್ನು ಸಾಂಕೇತಿಕವಾಗಿ ಮನಸ್ಸು-ಶರೀರಕ್ಕೆ ಹೋಲಿಸಿ ಬರೆಯಲಾಗಿತ್ತು. ಎಲ್ಲಕ್ಕಿಂತ ಅದರ ಧ್ವನಿಕಾಕು ದನಗಾಹಿಗಳಿಗಲ್ಲದೆ ಉಳಿದವರಿಗೆ ಕಷ್ಟಸಾಧ್ಯವೆ ಆಗಿತ್ತು. ಹೀಗಾಗಿ ಆ ಯಜಮಾನ ನನ್ನನ್ನು ನಿರಾಕರಿಸಿದ್ದು ಸಹಜವೇ ಆಗಿತ್ತು. ನಾನು ಮಾತ್ರ ಪಟ್ಟು ಬಿಡದೆ ಅಜ್ಜನ ಬಳಿ ಎಂಟಾನೆಂಟು ದಿನ ಕುಳಿತು ದುಂಬಾಲು ಬಿದ್ದು ಪದ ಏನೋ ದೊರಕಿಸಿಕೊಂಡೆ. ಆದರೆ ಆ ಅಜ್ಜ ಮಾತ್ರ ನನಗೆ ಎಂಟು ದಿನ ಎಮ್ಮೆ ಕಾಯುವ ಪರಿ, ಎಮ್ಮೆಗಳ ಸ್ವಭಾವ, ಗುಣ-ಲಕ್ಷಣ ಇತ್ಯಾದಿಗಳನ್ನು ಹೇಳುವುದಲ್ಲದೆ ಆ ಧಾಟಿಯನ್ನು ನನಗೆ ಕಲಿಸಿ ತನಗೆ ಅದು ತೃಪ್ತಿ ಅನಿಸಿದಾಗಲೇ ಪದ ನೀಡಿದ.

ಈ ಎರಡೂ ಅನುಭವಗಳು ಹೇಳುವುದೇನೆಂದರೆ ತತ್ವಪದಾನುಸಂಧಾನಿಗಳು ಸುಮ್ಮನೆ ಖಯಾಲಿ ಹಾಡುಗಾರರಲ್ಲ. ಮತ್ತು ಅವರು ತಾವು ನಂಬಿದ ಸಿದ್ಧಾಂತದಿಂದ ಒಂದಿಂಚೂ ದೂರ ಸರಿಯದವರು ಆಗಿರುತ್ತಾರೆ. ಅವರಿಗೆ ಯಾವುದೇ ಅಕೆಡೆಮಿಕ್ ಭ್ರಮೆಗಳಾಗಲಿ. ಅಜರಾಮರವಾಗಬೇಕೆಂಬ ಹುಚ್ಚಾಗಲಿ ಇರುವುದಿಲ್ಲ. ಅಚಲ ಸಾಧಕಿ ಹೇಳಿದ್ದು ಪದ ಕಳೆದರೆ ಕಳೀಲಿ. ಎಷ್ಟು ಸಲೀಸಾಗಿ ಹೇಳಿದಳಲ್ಲ. ಕಾರಣ ಇಷ್ಟೆ! ನನ್ನಂಥವರಿಗೆ ಆ ಪದಗಳು ಅಧ್ಯಯನಕ್ಕೆ ಆಕರ ಮಾತ್ರ. ಆದರೆ ಅವರಿಗೆ ಅವು ನಿತ್ಯ ಬಾಳಬೇಕಾದ ಕೈಪಿಡಿಗಳು. ಇವತ್ತಿಗೂ ನೂರಾರು ಸಾಧಕರು ಜಾತಿ, ಮತಗಳ ಹಂಗಿಲ್ಲದೆ, ಮನೆಗಳಲ್ಲಿ ಒಂದೂ ಚಿಕ್ಕ ಧಾರ್ಮಿಕ ಸಂಕೇತಗಳಿಲ್ಲದೆ, ದೈವದ ಗುರುತುಗಳಿಲ್ಲದೆ, ಹಬ್ಬ ಹರಿದಿನಗಳ ಗೋಜಿಲ್ಲದೆ ಬಾಳುತ್ತಿರುವುದು ಬಲು ಸೋಜಿಗವಾಗಿದೆ. ಅವರ ಬಳಿ ಕ್ಷಣ ಕುಳಿತರೆ ಬುದ್ಧನ ಕರುಣೆ ವಿನಃ ಮತ್ಯಾವುದೂ ಧ್ಯಾಸಕ್ಕೆ ಬರದು. ಸಪ್ಪಳಿಲ್ಲದೆ ಬುದ್ಧ ಬೆಳಕಿನಲ್ಲಿ ಬದುಕುತ್ತಿರುವ ಇವರಿಗೆ ಗುರುಬೋಧೆಯೊಂದೆ ಆಸರೆ. ಗುರುಬೋಧೆಯಂದರೆ ತತ್ವಪದಗಳ ಅನುಸಂಧಾನ. ಅಲ್ಲಿ ಪದಗಳ ಪರಿಷೆ ಇರುತ್ತದೆ. ಪದಗಳ ಮೂಲಕ ನಡೆಯುವ ಸಂಭಾಷಣೆ ಅದರಲ್ಲಿ ಗತಿ ಇದ್ದವರಿಗಲ್ಲದೆ ಉಳಿದವರಿಗೆ ಹತ್ತುವುದು ಕಷ್ಟವೆ ಸರಿ.

**ತಾರಕದ ತಳವ ಕಾಣಣ್ಣಾ**
**ತಾರತಮ್ಯವ ತೊರೆದು ನೋಡಣ್ಣಾ**
**ಸೋಮಾರಿಯಾಗಿ ಕೆಡದೆ**
**ಆತ್ಮರಾಮರ ಸೇವೆ ಮಾಡಣ್ಣಾ**
**ದಶರಥ ಪುತ್ರ ರಾಮನೆಂದು ನಂಬಬೇಡಣ್ಣಾ**

ಎನ್ನುತ್ತಾನೆ. ಅವರಿಗೆ ಯಾವುದೇ ಪೌರಾಣಿಕ ವ್ಯಕ್ತಿಗಳ ಹಂಗಿಲ್ಲ. ಎಲ್ಲಕ್ಕಿಂತ ಯಾವುದೇ ಕುರುಹುಗಳಿಲ್ಲ. ಅದು ಕೇವಲ ಪ್ರಜ್ಞಾವಲಯ. ಲೋಕ ಕಾರುಣ್ಯವು ಸಾಧನೆಯಲ್ಲಿನ ಉತ್ತುಂಗ ಸ್ಥಿತಿ. ಅದು ಲೋಕದ ಮೋಹವು ಅಲ್ಲ, ಮಾಯಾವಾದವಂತೂ ಮೊದಲೆ ಅಲ್ಲ. ಕೈವಾರ ತಾತಯ್ಯನು ಅದನ್ನು ಹೀಗೆ ದರ್ಶಿಸುತ್ತಾನೆ.

**ಸರ್ವವೂ ತಾನೆಂದು ತನ್ನೊಳಗೆ ತಾನೇ ತನ್ನನ್ನು**
**ನೋಡುವ ಜಾಣನಾದರೆ ಇಳೆ ಮಾಯೆಯೊಳಗೆ**
**ತಗುಲೀ ತಗಲದಂತೆ ತನ್ನ ಮರ್ಮವನ್ನು ಬಿಡದವನು**
**ತಾರಕಯೋಗಿ ನಾದಬ್ರಹ್ಮಾನಂದ ನಾರೇಯಣ.**

ಹೌದು ಈ ಕರ್ಮಭೂಮಿಯಲ್ಲಿ ಎಲ್ಲವೂ ಪರಿಗ್ರಹಿಸಿಯೂ ಯಾವುದನ್ನು ಅಂಟಿಸಿಕೊಳ್ಳದಂತೆ ಬದುಕ ನಡೆಸಬೇಕಿದೆ. ಅವಿಚ್ಛಿನ್ನ ಕರುಣೆಯೇ ಜಗತ್ತನ್ನು ಅರಿಯಲು ಇರುವ ಏಕೈಕ ಮಾರ್ಗ ಎನ್ನುತ್ತಾನೆ ಬುದ್ಧಗುರು. ಆದರೆ ಈ ಕರುಣೆ ಎಂಬುದು ಕೂಡ ಮೋಹವನ್ನು ಅಂಟಿಸಿಕೊಳ್ಳದ ಶುದ್ಧ ಪ್ರೀತಿ ಆಗಬೇಕು. ಕಿಂಚತೂನವಿಲ್ಲದ ಕೇವಲ ದಿವ್ಯ ಪ್ರೇಮ. ಅಲ್ಲಿ ಸ್ವಾರ್ಥಕ್ಕೆ, ದ್ವೇಷಕ್ಕೆ ಎಡೆ ಇಲ್ಲ. ಪ್ರೀತಿಗೆ ಪ್ರೀತಿಯೇ ಕಾರಣ, ಗುರಿ, ಗಂತವ್ಯ ಎಲ್ಲವೂ ಆಗಬೇಕು. ಇಂಥದೊಂದು ಮುಕ್ಕಾಗದ ಪ್ರೀತಿಮಯ

ವ್ಯಕ್ತಿತ್ವವು ತನ್ನಷ್ಟಕ್ಕೆ ಶೀಲವಾಗಿರುತ್ತದೆ. ಅಲ್ಲಿಗೆ ಪ್ರಜ್ಞೆ, ಕರುಣೆ, ಶೀಲಗಳು ಬುದ್ಧ ತಾತ್ವಿಕತೆಯನ್ನು ಪೂರ್ಣಗೊಳಿಸುತ್ತವೆ. ಲೋಕ ಸಮಸ್ತವನ್ನು ಅಪ್ಪಿಕೊಂಡೂ ಲೋಕದ ಯಾವುದೇ ಕೆಡಕು, ಮಿತಿಗಳನ್ನು ಅಂಟಿಸಿಕೊಳ್ಳದ ಬಯಲ ಭಾವದಲ್ಲಿ ವಿರಮಿಸುವುದನ್ನು ಈ ತತ್ವಪದಕಾರರು ರೂಢಿಸಿದರು. ತಮ್ಮದೆ ಗ್ರಾಮ್ಯ ಭಾಷೆಯಲ್ಲಿ, ರೂಢಿಯಲ್ಲಿರುವ ಲೋಕ ಭಾಷೆಯನ್ನು ಬಳಸಿಕೊಂಡು ಶಬ್ದ ಸೂತಕಕ್ಕೆ ಬೀಳದೆ ಪಾರಾದರು. ಅದನ್ನೆ ಕಡಕೋಳ ಮಡಿವಾಳಪ್ಪ ಹೇಳಿದ್ದು ಹೀಗಿದೆ.

**ಬಯಕೆ ತುಂಬಿದ ಭಾವ ನೀ**
**ಬರಕಿ ಖಾಲಿ ಮಾಡೋ॥**
**ಸ್ವಯ ವಿನೋದ ಸಾಕು ಮಾಡಿ।**
**ಸಕಲ ನಿಷ್ಕಲಗೂಡೋ ॥ ಪ ॥**

**ನಿನ್ನ ನೀನೇ ಅರಿಯೋ \ ಮತ್ತೆ**
**ನಿನ್ನ ನೀನೇ ಮರಿಯೋ ॥**
**ನಿನ್ನ ನೀನೆ ಬೆರಿಯೋ \ ಎಲೊ**
**ನಿನ್ನ ನೀನೇ ಮರಿಯೋ ॥ ೧ ॥**

**ಬಯಲ ಬಯಲಾಗೋ \ ಆ**
**ಬಯಲ ಬಯಲು ನೀಗೋ ॥**
**ಬಯಲು ಮಹಾಬೈಲಾಗೋ \ ನೀ**
**ವರ್ಯಾಲ ಮಹಾಂತನ ಯೋಗೋ ॥ ೨ ॥**

ಇದು ಕೂಡ ಬುದ್ಧನ ಶೂನ್ಯ ತತ್ವವನ್ನು ಕನ್ನಡಿಕರಿಸಿದ ಪದವೇ ಆಗಿದೆ. ಇದೇ ಮಾರ್ಗದಲ್ಲಿಯೇ ಕ್ರಮಿಸಿದ ಮಡಿವಾಳಪ್ಪ ಮತ್ತು ಆತನ ದೊಡ್ಡ ಶಿಷ್ಯ ಪರಂಪರೆಯೆ ಇದೆ. ನಾವು ಈವರೆಗೂ ಆ ಪದಗಳನ್ನು ಬೌದ್ಧ ತಾತ್ವಿಕತೆಯ ಬೆಳಕಿನಲ್ಲಿ ಅನುಸಂಧಾನ ಮಾಡಿಯೇ ಇಲ್ಲ. ತತ್ಪರಿಣಾಮವಾಗಿ ಅವುಗಳನ್ನು ವೀರಶೈವ ಷಟ್ಸ್ಥಲ ಪರಂಪರೆಯಲ್ಲಿ ಇಲ್ಲವೆ ಶೈವ ಅದ್ವೈತ ಪರಂಪರೆಯಲ್ಲಿ ಮಾತ್ರ ಅಭ್ಯಸಿಸಿದ್ದೇವೆ. ಆದ್ದರಿಂದ ಅವುಗಳ ಪೂರ್ಣ ಹೊಳಹು ನಮಗಾಗಿಯೇ ಇಲ್ಲ ಎನ್ನಬಹುದು. ಈಗ ನಾವು ಅವುಗಳನ್ನು  ಬೌದ್ಧ ತಾತ್ವಿಕತೆಯೊಂದಿಗೆ ಬೆರೆಸಿ ನೋಡಬೇಕಿದೆ. ಅಂದಾಗಲೆ ನಮ್ಮ ಬಹುಶ್ರುತ ಅನುಸಂಧಾನದ ನೆಲೆಗಳು ತೆರೆದುಕೊಂಡು ಪ್ರಜಾಸತ್ತ್ಯಾತ್ಮಕ ಬಹುತ್ವದ ಭಾರತವೊಂದು ತೆರೆದುಕೊಳ್ಳುತ್ತದೆ. ಇದು ಹೀಗೆ ಏಕೆ ಆಯಿತು ಎಂಬ ಪ್ರಶ್ನೆಯೊಂದು ಏಳದೆ ಇರದು. ಆದದ್ದು ಏನು ಎಂದರೆ ವೈದಿಕರ ದಾಳಿಯಲ್ಲಿ ಬೌದ್ಧ ದಾರ್ಶನಿಕತೆಯೂ ಭಾರತದಿಂದ ಪೂರ್ಣ ತೊಲಗಿದೆ ಎಂದು ನಂಬಿಸಿದ ಮಿಥ್ಯಗಳಲ್ಲಿಯೇ ನಾವು ಹಳಹಳಿಕೆಗೆ ಬಿದ್ದು ವಿಸ್ಮೃತಿಗೆ ತಳಲ್ಪಟ್ಟೆವು. ಅಖಂಡ ಸಾವಿರ ವರ್ಷಕ್ಕೂ ಮೇಲ್ಪಟ್ಟು ದಿನಮಾನಗಳಲ್ಲಿ ಬೌದ್ಧ ಪರಂಪರೆಯನ್ನು ಹೊರಗಿಟ್ಟೆ ಮಾತನಾಡಿದೇವು. ಆಶ್ಚರ್ಯವೆಂದರೆ ಹೀಗೆ ಹೊರಗೆ ಮಾತನಾಡದ ಲೋಕವೊಂದು ತನ್ನ ಪಾಡಿಗೆ ಬೌದ್ಧ ಗುರುವಿನ ಮಾರ್ಗದಲ್ಲಿ ಮುಂದುವರೆಯುತ್ತಲೆ ಇತ್ತು. ಸಾಂಸ್ಥಿಕ ಧರ್ಮದ ಹಂಗಿಲ್ಲದ ತಾತ್ವಿಕ ಉಪಾಸನಾ ಮಾರ್ಗವು ಹಲವು ದೇಶಿ ಧಾರೆಗಳಲ್ಲಿ ಗುರು–ಶಿಷ್ಯ ಪರಂಪರೆಯಾಗಿ ನಡೆದುಕೊಂಡೆ ಬಂದಿತು.

ತೀರ ಆಧುನಿಕ ಸಂದರ್ಭದಲ್ಲಿ ಮತ್ತೆ ದೇಸಿ ವಿದ್ವಾಂಸರಾಗಿದ್ದ ರಾಹುಲ ಸಾಂಕೃತಾಯನ, ಡಿ ಡಿ ಕೋಸಾಂಬಿ, ದೇವಿಪ್ರಸಾದ ಚಟ್ಟೋಪಾಧ್ಯಾಯ ಮುಂತಾದವರು ಬೌದ್ಧ ತಾತ್ವಿಕತೆಯನ್ನು ವೈಶ್ವಿಕ ನೆಲೆಯಲ್ಲಿ ಅಧ್ಯಯನ ಮಾಡಿದರು. ಅಷ್ಟೇ ಅಲ್ಲ ಅವರು ವಿಶ್ವದುದ್ದಕ್ಕೂ ಹರಡಿಕೊಂಡಿದ್ದ ಬೌದ್ಧ ಸಾಹಿತ್ಯವನ್ನು ಅದರ ಆಚರಣಾ ವಿಧಾನಗಳನ್ನು ಮತ್ತೆ ಭಾರತದೊಳಗೆ ಹರಿದು ತರುವ ಮಹಾಮಣಿಹಕ್ಕೆ ಇಳಿದರು. ಮರಳಿ ಮನೆಗೆ ಎಂಬಂತೆ ಡಾ ಬಾಬಾಸಾಹೇಬರು ಬೌದ್ಧ ಚಿಂತನೆಗಳನ್ನು ತೀರ ನಿಖರವಾಗಿ ಗ್ರಹಿಸಿದರು. ಸಾವಿರಾರು ಅನುಯಾಯಿಗಳೊಂದಿಗೆ ಧಮ್ಮಕ್ಕೆ ಸೇರುವುದರೊಂದಿಗೆ ಭಾರತದಲ್ಲಿ

ಉತ್ಕ್ರಾಂತಿಯನ್ನೆ ಮಾಡಿದರು. ಪರಿಣಾಮತಃ ದೇಶದಲ್ಲಿ ಎಲ್ಲೆಲ್ಲೂ ಬೌದ್ಧಮಾರ್ಗಕ್ಕೆ ರಹದಾರಿ ಸೃಷ್ಟಿಯಾಗಿ ತಳಸಮುದಾಯಗಳು ತಮ್ಮ ಅಸ್ತಿತ್ವ ಕಂಡುಕೊಂಡವು. ವೈದಿಕ ವರ್ಣಾಶ್ರಮ ಪದ್ಧತಿಯ ವಿರುದ್ಧ ದಂಗೆಗಿಳಿದು ಹಿಂದೂ ಧರ್ಮವೆಂಬ ಶೋಷಣಾ ಪದ್ಧತಿಯಿಂದ ಸಿಡಿಯತೊಡಗಿದರು. ಕರ್ನಾಟಕದಲ್ಲಿಯಂತೂ ದಲಿತ ಚಳುವಳಿಗಳು ಶೋಷಿತರಲ್ಲಿ ದೊಡ್ಡ ಮಟ್ಟದ ಬಿಡುಗಡೆಯ ಭಾವ ಮೂಡಿಸಿದವು. ಆಧುನಿಕ ಶಿಕ್ಷಣದ ಸೌಲಭ್ಯಗಳು, ಪ್ರಜಾತಾಂತ್ರಿಕ ಮೌಲ್ಯಗಳ ಸ್ಪರ್ಶ ಎಲ್ಲಕ್ಕಿಂತ ಹೆಚ್ಚಾಗಿ ಬಾಬಾಸಾಹೇಬರ ಸಂಘರ್ಷದ ಗಾಥೆಗಳು ತುಳಿತಕ್ಕೊಳಗಾದವರಲ್ಲಿ ಸ್ವಾಭಿಮಾನದ ಜ್ವಾಲೆಯನ್ನೆ ಹೊತ್ತಿಸಿದವು. ಬುದ್ಧ ಧಮ್ಮದ ತತ್ವಗಳು ಸಂಪೂರ್ಣ ತಾತ್ವಿಕವಾಗಿ ಅನುಷ್ಠಾನಕ್ಕೆ ಬರದಿದ್ದರೂ ಹಿಂದೂ ಕರ್ಮಠತೆಯಿಂದ ಹೊರಬರಲು ಹೆದ್ದಾರಿಯನ್ನಾದರೂ ನಿರ್ಮಿಸಿದವು. ಭಾರತದ ಗ್ರಾಮೀಣ ಭಾಗದಲ್ಲಿ ಈವರೆಗೂ ಸ್ಥಳೀಯ ದೈವ-ಧರ್ಮಗಳೊಂದಿಗೆ ಗುರುತಿಸಿಕೊಂಡಿದ್ದ ತಳ ಸಮುದಾಯಗಳು ಮೊದಲ ಬಾರಿಗೆ ಬೌದ್ಧತತ್ವದೊಂದಿಗೆ ಗುರುತಿಸಿಕೊಳ್ಳತೊಡಗಿದವು. ಬಾಬಾ ಸಾಹೇಬರ ಜಯಂತಿ, ಪರಿನಿರ್ವಾಣ ದಿನ, ಬುದ್ಧಪೂರ್ಣಿಮೆಗಳು ತಳಸಮುದಾಯಗಳಲ್ಲಿ ಇನ್ನಿಲ್ಲದ ಎಚ್ಚರವನ್ನು ಮೂಡಿಸುವಲ್ಲಿ ಸಕ್ರೀಯವಾದವು. ಶಿವಭಜನೆ, ಸ್ಥಳೀಯ ಜಾತ್ರೆ, ಉತ್ಸವ, ಖಾಂಡ, ಪಲ್ಲಕ್ಕಿ ಮೆರವಣಿಗೆಗಳಲ್ಲಿ ಮೇಲ್ಜಾತಿಗಳವರ ಸೇವೆಗಳಲ್ಲಿ ಭಾಗವಹಿಸುತ್ತಿದ್ದ ತಳಸಮುದಾಯದ ಮುಗ್ಧ ಜನತೆ ಅವುಗಳಿಂದ ಹಂತ ಹಂತವಾಗಿ ಅಂತರ್ ಕಾಯ್ದುಕೊಳ್ಳತೊಡಗಿದವು. ಅದರೊಂದಿಗೆ ತಮ್ಮ ಪ್ರತಿಭೆಯನ್ನು ಶಿವಭಜನೆಯಿಂದ ಭೀಮಭಜನೆಯತ್ತ ಪಲ್ಲಟಗೊಳಿಸಿದವು. ಮಂದಿರ, ಗುಡಿ-ಗುಂಡಾರ, ಮಠ, ಆಶ್ರಮಗಳಿಂದ ತಮ್ಮ ನೆಲೆಗಳನ್ನು ಸಮುದಾಯಭವನ, ಬೌದ್ಧ ವಿಹಾರಗಳಿಗೆ ಸ್ಥಾನಾಂತರಗೊಳಿಸಿದರು. ಹಾಡುಗಾರಿಕೆಯ ಲಯ, ಧಾಟಿ,ಧರತಿಗಳನ್ನು ಮಾತ್ರ ಮೂಲರೂಪದಲ್ಲಿ ಉಳಿಸಿಕೊಂಡು ಅವುಗಳಲ್ಲಿ ಬುದ್ಧ-ಬಾಬಾ ಕುರಿತು ಬರೆದ ಪದಗಳನ್ನು ಕಸಿ ಮಾಡಿದರು. ಕರ್ಮ ಸಿದ್ಧಾಂತ ಬಿಂಬಿಸುತ್ತಿದ್ದ ದಾಸರ ಪದಗಳಿಂದ ಹೊರಬಂದು ಕಾಯ ಸಿದ್ಧಾಂತದ ಬುದ್ಧತತ್ವಗಳ ಪದಗಳನ್ನು ಸ್ವತಃ ಬರೆದು ಹಾಡತೊಡಗಿದರು.

ಕನ್ನಡದಲ್ಲಿ ಇಂಥದೊಂದು ಭೀಮ ಭಜನೆಯ ಹಂತಕ್ಕೆ ತೆರೆದುಕೊಳ್ಳುವಲ್ಲಿ ಕಲಬುರಗಿ, ಬೀದರ ಜಿಲ್ಲೆಯ ತತ್ವಪದಕಾರರು ಮೊದಲಿಗರಾಗಿ ನಿಲ್ಲುತ್ತಾರೆ. ಬೀದರನ ಕಾಶಿನಾಥ ಪಂಚಶೀಲ ಗವಾಯಿ, ಮಾಣಿಕರಾವ ಜ್ಯೋತಿ, ಜಂಬಗಿ ಶರಣ, ಚಂದ್ರಶಾ ಸುಲ್ತಾನಪೂರ, ಕ್ವಾನಳ್ಳಿ ಹೊನ್ನಪ್ಪ ಮಹಾರಾಜ ಮುಂತಾದವರನ್ನು ಗಮನಿಸಬಹುದು. ಅದರಂತೆ ರಾಯಚೂರಿನ ತಿಪ್ಪಣ್ಣತಾತಾ, ಕಲ್ಮಲಾ ತಿಪ್ಪಣ್ಣ, ಯರಮಾರೆಪ್ಪ, ಹೊಸೂರು ತಿಪ್ಪಣ್ಣ, ಮಾದರ ಹನುಮೇಶಪ್ಪ ಇವರೆಲ್ಲಾ ಆರೂಢ, ಅವಧೂತ ಮಾರ್ಗದಲ್ಲಿ ಮುಂದುವರೆದು ಪದ ಬರೆದವರು. ದೇವಣಗಾಂವದ ಸಿದ್ದಪ್ಪನಾದರೋ ಶಿವಾದ್ವೈತ ಮಾರ್ಗದಲ್ಲಿ ಅನುಸಂಧಾನಗೈದು ತತ್ವಪದಕಾರನಾಗಿ ಅರಳಿದ್ದಾನೆ.ಈ ಪಟ್ಟಿ ಇನ್ನೂ ಬೆಳೆಯುತ್ತದೆ. ಆಧುನಿಕ ತತ್ವಪದ ಪರಂಪರೆಯಲ್ಲಿ ದಲಿತ ಭಜನಾ ಪರಂಪರೆಯು ದೊಡ್ಡ ಪಲ್ಲಟವಾಗಿಯೆ ನಿಲ್ಲುತ್ತದೆ.

ಬೀದರ ತಾಲೂಕಿನ ಖಾಶೆಂಪೂರದವರಾದ ಮಾಣಿಕರಾವ ಜ್ಯೋತಿಯವರು ೧೯೩೩ ರಲ್ಲಿ ಜನಿಸಿದ್ದರು. ಅವರು ಮೊದಲಿನಿಂದಲೂ ಸಾಧು-ಸಂತರ ಆರೂಢ ಪರಂಪರೆಯಲ್ಲಿ ಪಳಗಿದವರು. ಆರೂಢ ಎಂಬುದು ಜಾತ್ಯಾತೀತ ಪರಂಪರೆ. ಅಲ್ಲಿ ಯಾವುದೇ ಮಡಿವಂತಿಕೆ ಇರುವುದಿಲ್ಲ. ಗುರು-ಶಿಷ್ಯ ಮಾರ್ಗವದು. ಗುರುಬೋಧೆ ಪಡೆದುಕೊಂಡ ಯಾರಾದರೂ ಅಲ್ಲಿ ಅನುಸಂಧಾನ ಗೈಯಬಹುದು. ಈ ಮಾರ್ಗದಲ್ಲಿ ಮುಂದುವರೆದ ಮಾಣಿಕರಾವ ಅವರು ಶಿವಾರಾಧನೆಯ ಭಜನೆ ಪದಗಳನ್ನು ಬರೆದು ರಾಗ ಸಂಯೋಜಿಸಿ ಸ್ವಂತ ಹಾಡುತ್ತಿದ್ದರು. ನಂತರ ಬಾಬಾ ಸಾಹೇಬರ ಬರಹ ಮತ್ತು ಸಂಘರ್ಷಗಳಿಂದ ಪ್ರಭಾವಿತರಾಗಿ ಬೌದ್ಧ ದೀಕ್ಷೆ ಪಡೆದುಕೊಂಡರು. ಬೌದ್ಧ ತತ್ವಗಳನ್ನು ಕರಗತ ಮಾಡಿಕೊಂಡ ಮೇಲೆ ಅವರ ಬರವಣಿಗೆಯ ದಿಕ್ಕೆ ಬದಲಾಯಿತು. ಪದಗಳ ಧಾಟಿ-ಧರತಿ ಮೂಲದ್ದೇ ಆದರೂ ವಸ್ತು ಮತ್ತು ದಾರ್ಶನಿಕತೆಯಲ್ಲಿ ಪಲ್ಲಟವಾಯಿತು. ಉದಾಹರಣೆಗಾಗಿ ಈ ಪದ ನೋಡಬಹುದು.

**ಎಂಥಾದೋ ಗುರುವಿನ ಲೀಲಾ**
**ಅಂತ್ರದೊಳು ಮಹಾಮಂತ್ರದ ಮೂಲ ॥ ಪ ॥**

**ರಜ,ತಮ,ಸತ್ವ ಮೂರು ಮೊದಲ**
**ಅರಿತುಕೋ ನಾದ ಬಿಂದು ಕಲಾ**
**ತೀತ ಸುಖ ಆರೂಢನೇ ಬಲ್ಲ**
**ಸಂಸಾರಿಗಿ ಇದು ಸಲ್ಲ ॥ ೧ ॥**

**ನಾಸಿಕಾಗ್ರದಿ ಕೊನೆಯ ಮೇಲ**
**ದೃಷ್ಟಿ ಇಟ್ಟು ನೋಡೋ ರತ್ನಲಾಲ**
**ತಿರುಗುವುದು ಜಂತ್ರ ಹಗಲು ಇರುಳ**
**ಸಕಲ ಮತಕ್ಕೆಲ್ಲ ಒಂದೇ ಕೀಲ ॥ ೨ ॥**

**ಅನಾದಿ ಶೂನ್ಯವೇ ಶಬ್ದ**
**ಶಬ್ದದಲಿ ಅವಧೂತನೇ ಲುಬ್ಧ**
**ಕ್ರಿಯಮಣ ಸಂಚಿತ ಪ್ರಾರಬ್ಧ**
**ಮೂರು ವಿಧಗಳ ಕರ್ಮ ದುಡಿದ ॥ ೩ ॥**

**ಭಗವಾನ ಬುದ್ಧ ಎಂಥ ಭೋಲಾ**
**ಶಿಷ್ಯನಿಗಿ ಬೋಧಿಸಿ ಬುದ್ಧ ಲೀಲಾ**
**ಗುರುವೇ ನಿಮ್ಮ ಪಾದ ತೀರ್ಥ ಹಾಲಾ**
**ಮಾಣಿಕಗ ಅಮೃತದ ಪ್ಯಾಲಾ ॥ ೩ ॥**

ಇದೊಂದು ಸರಳವಾದ ಪದ. ಶಿವಾದ್ವೈತ ತತ್ವಗಳೊಂದಿಗೆ ಬೌದ್ಧತ್ವವನ್ನು ಕಸಿ ಮಾಡಿದ ರಚನೆ. ಪದದ ಪಲ್ಲ, ನುಡಿಗಳಲ್ಲಿ ಪರಂಪರಾಗತ ಭಜನೆಯ ಝೋಕು ಇದ್ದರೆ ಕೊನೆಯ ನುಡಿಯಲ್ಲಿ ಮಾತ್ರ ಬುದ್ಧನ ಪ್ರಸ್ತಾಪ ಮಾಡುತ್ತಾರೆ. ತಾತ್ವಿಕವಾಗಿ ಶುದ್ಧ ಬೌದ್ಧ ತತ್ವದ ಅನುಸಂಧಾನ ಇಲ್ಲಿಲ್ಲವಾದರೂ ಬುದ್ಧ ಮತ್ತು ಆತನ ಧಮ್ಮ ಸಂದೇಶಗಳೆ ತಮ್ಮ ಮುಂದಿನ ಬಿಡುಗಡೆಯ ಮಾರ್ಗ ಎಂಬ ಸೂಚನೆ ಇಲ್ಲಿದೆ. ಬಾಬಾ ಸಾಹೇಬರ ಮೂಲಕ ಬುದ್ಧಮಾರ್ಗಕ್ಕೆ ತೆರೆದುಕೊಂಡ ಭಾರತದ ದಲಿತ ಲೋಕ ಹಿಂದೂ ಕರ್ಮ ಸಿದ್ಧಾಂತದ ಕರ್ಮಠತೆಯಿಂದ ಬಿಡುಗಡೆ ಹೊಂದಿತು. ದೈವವಾದದಿಂದ ಕಾಯವಾದಕ್ಕೆ ಕ್ರಮೇಣ ಸರಿಯತೊಡಗಿತು. ಮೊದಲ ಭಾರಿಗೆ ತಮ್ಮ ಮನೆಯಲ್ಲಿದ್ದ ತರಹೆವಾರಿ ದೇವರು–ದಿಂಡರುಗಳನ್ನು ಕಿತ್ತೆಸೆದು ಬುದ್ಧ–ಬಾಬಾರ ಭಾವಚಿತ್ರಗಳನ್ನು ಸ್ಥಾಪಿಸಿಕೊಂಡರು. ಸ್ಥಳೀಯ ದೈವಗಳ ಮಂದಿರಗಳಿಗೆ ಹೋಗಿ ಅಲ್ಲಿ ದೂರವೇ ನಿಂತು ಕಾಯಿ–ಕರ್ಪೂರ ಮಾಡಿಕೊಂಡು ಎತ್ತರಿಸಿ ಬಿಸಾಕುವ ಪ್ರಸಾದ ತಿನ್ನುವುದನ್ನು ನಿಲ್ಲಿಸಿ ಬೌದ್ಧ ವಿಹಾರಗಳನ್ನು ಕಟ್ಟಿಕೊಂಡು ಬುದ್ಧ ವಂದನೆಗೆ ಇಳಿದರು. ಹಿಂದೂ ಪುರೋಹಿತರ ಕಪಿ ಮುಷ್ಠಿಯಿಂದ ಬಿಡಿಸಿಕೊಂಡು ಭಿಕ್ಕುಗಳು ಹೇಳುವ ಪಂಚಶೀಲಗಳ ಅಧ್ಯಯನಕ್ಕೆ ಮುಂದಾದರು. ಈ ನಿಟ್ಟಿನಲ್ಲಿಯೇ ಪದಗಳನ್ನು ರಚಿಸಿ ಹಾಡಿದರು. ಹೀಗೆ ಕಟ್ಟಿದ ಪದಗಳಲ್ಲಿ ಪ್ರಖರ ವೈಚಾರಿಕತೆಯು ಹಿಂದೂ ಕರ್ಮಠತೆಯ ಟೀಕೆಯಲ್ಲಿ ಪರ್ಯಾವಸಾನಗೊಂಡಿತು. ಕಾಶಿನಾಥ ಗವಾಯಿಗಳ ಪದವೊಂದನ್ನು ಇಲ್ಲಿ ಗಮನಿಸಬಹುದು.

**ಭೀಮ ಗರ್ಜನಾ ಬುದ್ಧ ದರುಶನಾ**
**ಕೋಟಿ ಕೋಟಿ ಮಾನವರನ್ನು ಮಾಡಿ ಪಾವನಾ ॥ ಪ ॥**

**ಎಲ್ಲರ ಹಣೆಬಾರ ಬರದಾನ ಅಂತೀರಿ ಬ್ರಹ್ಮಾ**
**ಅದೇ ಬ್ರಹ್ಮನ ಹಣೆಬಾರ ಯಾರು ಬರದಾರ ಹೇಳೊ ತಮ್ಮಾ**
**ಭಾರತ ಜನಾಂಗ ಹಣೆಬಾರ ಬರದ ಅಂಬೇಡ್ಕರ್ ಭೀಮಾ**

ಮಾಡಿ ಸರಿಸಮಾ ಹಿಂದೂಸ್ಥಾನ ವಂದೇ ಮಾತರಮಾ ॥ ೧ ॥

ರುದ್ರಾವತಾರ ದೇವರಂತಿರಿ ಕೈಯಲ್ಲಿ ಹಿಡಿದಾ ತ್ರಿಶೂಲಾ
ಎಷ್ಟೋ ಮಾನವ ಪ್ರಾಣಿಗಳಿಗೆ ಕೊಲೆ ಮಾಡಿದನಲ್ಲಾ
ಜೀವ ಹಿಂಸೆ ಮಾಡಿದವರು ದೇವರಾಗೊದಿಲ್ಲಾ
ಅಹಿಂಸಾ ನೇಮ ಬೌದ್ಧ ಧರ್ಮ ತಿಳಿದ ಬಾಬಾ ಭೀಮ ॥ ೨ ॥

ರಘುಪತಿ ರಾಮನ ಕೈಯಲ್ಲಿ ಧನುಶ ಬಾಣಾ
ಎಷ್ಟೋ ಜೀವ ಜಂತುಗಳಿಗೆ ಕೊಂದು ಹಾಕಿದ ಪ್ರಾಣಾ
ಶಂಭೂಕ ಮಹರ್ಷಿಗೆ ಶಿರ ಹಾರಿಸಿದನಾ
ಹಿಂಸೆ ರಾಮಚಂದ್ರ ಅವನೇ ದೇವರಾ ಅಂದ್ರೂ ಹಿಂದೂ ಜನರಾ ॥ ೩ ॥

ಕೃಷ್ಣ ಸುದರ್ಶನ ಚಕ್ರಾದಿ ಎಷ್ಟೊ ಹೊಡೆದ ಶಿರಾ
ರೂಪವತಿ ನಾರೆರಿಗಿಟ್ಟಾ ಸಹಸ್ರಾರು ಗೋಪಿಯರನಾ
ಹರಿಹರ ಬ್ರಹ್ಮರೆಲ್ಲಾ ಅಲ್ಲೊ ದೇವರಾ ಅಲ್ಲೊ ದೇವರಾ
ಕೋಶವೇದ ಶಾಸ್ತ್ರ ಸಾರ ತಿಳಿಯಲಿಲ್ಲೊ ಮರ್ಮಾ ॥ ೪ ॥

ಭಗವಾನ ಬುದ್ಧ ಧರ್ಮ ತಿಳಕೊಂಡವ ಮಹಾತ್ಮಾ
ಅಶೋಕಪತಿ ಅಂಗುಲಿಮಾಲಾ ಸಿದ್ಧಾರ್ಥ ಪ್ರಭು ಗೌತಮಾ
ಸತ್ಯ ಮುಕ್ತಿ ಮಾರ್ಗವ ತೋರಿದಾ ಆಧುನಿಕ ಭೀಮಾ
ಗಾಂಧೀಗಿ ಉಳಿಸಿದ ಪ್ರಾಣಾ, ಸ್ವರಾಜ ಪೂರ್ಣ ಮಾಡಿದ ರಕ್ಷಣಾ ॥ ೪ ॥

ಹಿಂದಿನ ಜನ್ಮದ ಪುಣ್ಯಾ ಅದ ಅಂತಾರ ಹಿಂದುಸ್ಥಾನ ಸಾಹುಕಾರ
ಇಂದ್ರಾಜಿ ಭೂಮಿ ಹಂಚಲಿಕ್ಕೆ ಬೇಕೊ ಅಂತಾರೊ
ಕಾಯ್ದೆ ಮಾಡ್ಯಾರ ಸರಕಾರ
ಪ್ರಜಾಪ್ರಭುತ್ವ ಸಮಾನ ಸಮತಾ ಈ ಪಂಚಮಹಾಭೂತ ॥ ೫ ॥

ಋಗ್ವೇದ, ಸಾಮವೇದ, ಯರ್ಜುವೇದ, ಅಥರ್ವಣವೇದಾ
ರಾಮಾಯಣ ಭಗವತ್ಗೀತಾ ಬೈಬಲ ಕುರಾನ್ ಭೇದ
ಭೀಮ ಬಾಬಾನ ಕೈಯಾ ಧರ್ಮ ಸಿಪಾಯಿಯೋ
ಪಂಚಶೀಲ ಕಾಶಿನಾಥ ಗವಾಯಿಯೋ ॥ ೬ ॥

ಇದು ತೀರ ವಾಚ್ಯವೆನಿಸಿದರೂ ಕ್ರಾಂತಿಕಾರಿ ವಿಚಾರಗಳು ಇಡುಕಿರಿದಿವೆ. ಈವರೆಗೂ ಹಿಂದೂ ಮಿಥಾಲಜಿಯನ್ನೆ ತಮ್ಮ ಆದರ್ಶವೆಂದುಕೊಂಡಿದ್ದ ಜನಾಂಗಗಳು ಸಂಪೂರ್ಣ ಎಚ್ಚರಗೊಂಡು ಅವುಗಳ ಪೊಳ್ಳುತನವನ್ನು ಟೀಕಿಸುವ ಹಂತಕ್ಕೆ ಬಂದು ನಿಂತದ್ದು ಅದ್ಭುತ ಕ್ರಾಂತಿಕಾರಿ ನಡೆಗಳೆ ಹೌದು. ಭಯಗ್ರಸ್ಥ ಧರ್ಮಾಂಧತೆಯಿಂದ ಹೊರ ಬಂದು ಜನಸಮುದಾಯಗಳು ಬೌದ್ಧ ಧರ್ಮದಲ್ಲಿ ಆಸ್ಥೆ ಬೆಳೆಸಿಕೊಳ್ಳುವುದಲ್ಲದೆ ತಮ್ಮ ಅಸ್ತಿತ್ವ ಕಂಡುಕೊಂಡದ್ದು ಬಹುಮುಖ್ಯ ಸಂಗತಿಯಾಗಿದೆ. ಸಹಸ್ರಮಾನದ ಮೌಢ್ಯಗಳಿಂದ ಕಂದಾಚಾರಗಳಿಂದ ವಿಮೋಚನೆ ಪಡೆದುಕೊಳ್ಳಲು ಜನಸಾಮಾನ್ಯರನ್ನು ಅಣಿಗೊಳಿಸಿದ ದಲಿತ ಚಳುವಳಿ ಕರ್ನಾಟಕ ಒಳಗೊಂಡಂತೆ ಇಡೀ ಭಾರತದಲ್ಲಿಯೇ ಸಂಚಲನವನ್ನು ಮಾಡಿತು. ಪದದ ಬಂಧದಲ್ಲಿ ಸಡಿಲತೆ ಇದೆ. ತಾತ್ವಿಕತೆ ತುಂಬಾ ತೆಳುವಾಗಿದೆ ಎನ್ನುವಾಗಲೂ ಪದದ ಭಾವ ಮತ್ತು

ಅರ್ಥಸ್ಪಷ್ಟತೆ ಮಾತ್ರ ಪ್ರಖರವಾಗಿದೆ. ವೇದಾದಿಗಳನ್ನು, ಪೌರಾಣಿಕ ದೈವಗಳನ್ನು ನೇರಾ ನೇರ ಟೀಕಿಸಿದ್ದು ಕನ್ನಡದಲ್ಲಿ ೧೨ ನೇ ಶತಮಾನದ ವಚನ ಚಳುವಳಿಯ ನಂತರ  ದಲಿತ–ಬಂಡಾಯ ಚಳುವಳಿಯ ಸಂದರ್ಭದಲ್ಲಿ ಮಾತ್ರ ಎಂಬುದನ್ನು ಗಮನಿಸಬೇಕು. ಹಾಗೇ ನೋಡಿದರೆ ದಲಿತ–ಬಂಡಾಯವೆಂಬ ಸಾಹಿತ್ಯಕ ಚಳವಳಿಯು ಶಿಷ್ಟ ಲೋಕದೊಳಗಡೆ ಹೆಚ್ಚು ಪ್ರಚಲಿತವಾಗಿದ್ದು ಜನಪದ ಗ್ರಾಮೀಣ ಲೋಕ ಅದರಿಂದ ತುಸು ದೂರವೇ ಎಂಬಂತೆ ಇತ್ತು.

ಆಧುನಿಕ ಕನ್ನಡ ಸಾಹಿತ್ಯದ ಈ ಚಳುವಳಿಗಳು ಅಕ್ಷರಸ್ಥ ಮಂದಿಯ ಅದರಲ್ಲೂ ಶಾಲಾ–ಕಾಲೇಜುಗಳ ವಿದ್ಯಾವಂತ ಲೋಕದ ನಡುವೆ ಅಥವಾ ಕ್ರಾಂತಿಕಾರಿ ಹೋರಾಟಗಾರರ ನಡುವೆ ಕ್ರೀಯಾಶೀಲವಾಗಿದ್ದವು. ಜನಪದರು ಮಾತ್ರ ಎಂದಿನಂತೆ ತಮ್ಮ ದೇವರು–ಧರ್ಮ, ಸಂಪ್ರದಾಯ, ಆಚರಣೆಗಳಲ್ಲಿಯೇ ಇದ್ದಾರೆ ಎಂಬುದು ನಮ್ಮೆಲ್ಲರ ಸಾಮಾನ್ಯ ಗ್ರಹಿಕೆಯಾಗಿತ್ತು. ಅದರಲ್ಲಿಯೂ ಹಿಂದೂ ಪುರಾಣ ಪ್ರತಿಭೆಗಳ ಗುತ್ತಿಗೆಯಲ್ಲಿರುವ ಭಜನೆ, ಖಾಂಡ, ಜಾತ್ರೆ, ಉತ್ಸವ ಇತ್ಯಾದಿ ಧಾರ್ಮಿಕ ಆಚರಣೆಗಳು ಸಂಪ್ರದಾಯಶೀಲರ ಅನುಸಂಧಾನಗಳು. ಅಲ್ಲಿ ವೈಚಾರಿಕತೆಗೆ ಆಸ್ಪದವಿರಲಾರದು ಎಂಬುದು ಅಕೆಡೆಮಿಕ್ ಮಂದಿಯ ಗ್ರಹಿಕೆಯಾಗಿತ್ತು. ಅಂತೆಯೇ ಅವರು ಭಜನೆ ಎಂಬ ಅವೈದಿಕ ಸಾಂಸ್ಕೃತಿಕ ರಾಜಕಾರಣದ ಪಲಕನ್ನು ಗುಮಾನಿಯಿಂದಲೇ ನೋಡಿದರು. ಅದರಲ್ಲಿಯೂ ದಕ್ಷಿಣ ಕರ್ನಾಟಕದಲ್ಲಿ ಭಜನೆ ಎಂಬುದನ್ನು ಸಾಮಾನ್ಯವಾಗಿ ಹರಿಕಥೆ, ಕೀರ್ತನೆ ಎಂದೇ ಭಾವಿಸಲಾಗುತ್ತಿತ್ತು. ಆದರೆ ಉತ್ತರ ಕರ್ನಾಟಕದ ಭಜನಾ ಪರಂಪರೆಯ ಜನಪರ ಆಧ್ಯಾತ್ಮದ ನಡೆಗಳು ಬೇರೆಯ ಬಗೆಯಲ್ಲಿ ಅಸ್ತಿತ್ವಗೊಂಡಿದ್ದವು. ದಕ್ಷಿಣ ಕರ್ನಾಟಕದ ದಾಸಪದ ಶೈಲಿಗೂ ಉತ್ತರ ಕರ್ನಾಟಕದ ಅದರಲ್ಲಿಯೂ ಕಲ್ಯಾಣ ಕರ್ನಾಟಕದ ಆರೂಢ, ಅವಧೂತ, ಸೂಫಿ ಭಜನಾ ಪರಂಪರೆಗೂ ತಾತ್ವಿಕವಾಗಿ ಮತ್ತು ಹಾಡುಗಾರಿಕೆಯ ದೃಷ್ಟಿಯಿಂದಲೂ ಅನೇಕ ಭಿನ್ನತೆಗಳು ಇವೆ. ಉತ್ತರದ ಶಿವಭಜನೆಯನ್ನು ದಕ್ಷಿಣದ ಹರಿಭಜನೆಯೊಂದಿಗೆ ಸಮೀಕರಿಸಲಾಗದು. ಮೈಸೂರು ಸೀಮೆಯ ಭಜನೆಯಲ್ಲಿ ಕೀರ್ತನೆಗಳು ಮಾತ್ರ ಹಾಡಲ್ಪಡುತ್ತವೆ. ಕೀರ್ತನೆಗಳಲ್ಲಿ  ಹರಿಭಕ್ತಿ , ಪಂಚವಿಧ ಭಕ್ತಿ, ಸ್ತುತಿ ಮಾತ್ರವಿರುತ್ತದೆ. ಭಕ್ತಿಯ ಅತ್ಯಂತ ಪ್ರಭಾವಿ ಪಲಕ್ಕೊಂದು ಅಲ್ಲಿ ಓತಪ್ರೋತವಾಗಿ ತುಂಬಿಕೊಂಡಿರುತ್ತದೆ . ಆದರೆ ಕಲ್ಯಾಣ ಕರ್ನಾಟಕದ ಭಜನೆಯಲ್ಲಿ ಸ್ತುತಿಗಿಂತ ಅನುಭಾವ, ದಾಸ್ಯಕ್ಕಿಂತಲೂ ದಾಸೋಹಂ ಭಾವ ತುಂಬಿರುತ್ತದೆ. ಅಷ್ಟೇ ಅಲ್ಲ ಇಲ್ಲಿ ಭಜನೆಯು ಸಮುದಾಯ ಪಾಲ್ಗೊಳ್ಳುವಿಕೆಯಾಗಿರುತ್ತದೆ. ಹಾಡುಗಾರಿಕೆಯೂ ಇಲ್ಲಿ ಧಾರ್ಮಿಕ ಆಚರಣೆ ಮಾತ್ರವಲ್ಲ. ಅದು ಇಲ್ಲಿ ಆಧ್ಯಾತ್ಮಿಕ ಹುಡುಕಾಟವೂ ತನ್ನ ತಾನರಿವ ಬೆಡಗು ಆಗಿರುತ್ತದೆ. ಆದ್ದರಿಂದ ಉತ್ತರ ಕರ್ನಾಟಕದ ಭಜನೆಯನ್ನು ಭಾರತದ ಬಹುಮುಖಿ ಆಧ್ಯಾತ್ಮದ ಚಿಂತನಾ ಪ್ರಸ್ಥಾನಗಳ ಬೆಳಕಿನಲ್ಲಿ ಇದಿರುಗೊಳ್ಳಬೇಕಾಗುತ್ತದೆ. ಹಾಗೇ ಹೊರಟಾಗಲೇ ಈ ಭಜನಾ ಪರಂಪರೆಯು ಉಳ್ಳಾಗಡ್ಡಿ ಪರಿ ಬಿಚ್ಚಿದಂತೆ  ಒಂದೊಂದೆ ಪಲಕು ತೆರೆದುಕೊಳ್ಳುತ್ತ ತನ್ನ ಸ್ವರೂಪ ದರ್ಶನ ಮಾಡಿಸುತ್ತದೆ.

ದಕ್ಷಿಣ ಕರ್ನಾಟಕದ ಸ್ತುತಿಗೀತೆಗಳನ್ನು ಪಠಿಸಿದ್ದ ಶಿಷ್ಟಲೋಕಕ್ಕೆ ಕಲ್ಯಾಣ ಕರ್ನಾಟಕದ ಅನುಭಾವ ಪದಗಳು ಅಪರಿಚಿತವಾಗಿದ್ದವು. ಆದ್ದರಿಂದಲೇ ಆಧುನಿಕ ವೈಚಾರಿಕ ಲೋಕವೂ ಸಂಪ್ರದಾಯಶೀಲತೆಯನ್ನು ನಿರಾಕರಿಸುವ ಸಂದರ್ಭದಲ್ಲಿ ನಮಗೀಗ "ಭಜನೆ ಮಾಡುವ ಬಾಯಿಗಳಿಗಿಂತ ವಿಚಾರ ಮಾಡುವ ತಲೆಗಳು ಬೇಕಿವೆ" ಎಂದು ಉವಾಚಿಸುತ್ತ ಭಜನೆ ಎಂಬ ಪರಂಪರೆಯನ್ನು ಕೀಳಿಕರಿಸಿದ್ದವು. ಕಾರಣ ಭಜನೆ ಎಂಬ ಸಮುದಾಯ ಕೇಂದ್ರಿತ ಸಂಕಥನಗಳಾಗಲಿ ಅಲ್ಲಿರುವ ತತ್ವಪದಗಳ ಪ್ರಚ್ಛನ್ನ ಅವೈದಿಕ ಚಿಂತನಾ ಪ್ರಸ್ಥಾನಗಳನ್ನಾಗಲಿ ಅವರು ಮುಖಾಮುಖಿಯಾಗಿರಲೆ ಇಲ್ಲ. ಅಲ್ಲಿ ಬೆಳ್ಳಂಬೆಳಗಿನವರೆಗೂ ನಡೆಯುತ್ತಿದ್ದ ಪರ್ಯಾಯ ಆಧ್ಯಾತ್ಮಿಕ ಸಾಧನಾ ಮಾರ್ಗಗಳ ಜೀವ ಸಂವೇದಿ ನೆಲೆಗಳನ್ನು ವಿದ್ವತ್ ಲೋಕ ಅವಜ್ಞೆಗೆ ಈಡು ಮಾಡಿತ್ತು. ಭಜನಾ ಲೋಕದ ಮಂದಿಯ ಸಕಲಜೀವಪರ ಅನುಸಂಧಾನಗಳನ್ನು ಕಂಡೂ ಕಾಣದಂತೆ ಜಾಣ ಕುರುಡು ತೋರಲಾಗಿತ್ತು. ಊರ ಮುಂದಿನ ಬಯಲು,  ಗುಡಿ ಪೌಳಿಗಳಲ್ಲಿ, ಜಾತ್ರೆ, ಯಾತ್ರೆಗಳ ಬಯಲಿನಲ್ಲಿ, ನಿಗಿನಿಗಿ ಕೆಂಡದ ಧುನಿಗಳ ಮುಂದೆ ನೆರಯುತ್ತಿದ್ದ ಹಳ್ಳಿಯ ದುಡಿಯುವ ಜನರನ್ನು ವಿದ್ಯಾವಂತ ಲೋಕ ಗಾಂಪರೆಂದೆ ಭಾವಿಸಿದ್ದರು. ಇವತ್ತಿಗೂ ಹಾಗೆಂದೇ ಭಾವಿಸಿಕೊಂಡು ಬರಲಾಗುತ್ತಿದೆಯಷ್ಟೆ?.ಅವರ ಅನೌಪಚಾರಿಕ ಹಾಡುಗಾರಿಕೆ,

ಕಲುಷಿತವಲ್ಲದ ಶುದ್ಧ ಜವಾರಿ ಧ್ವನಿಯ ಉಚ್ಛೃಂಖಲತೆಯನ್ನು ನಾವು ಗಮನಿಸಲೆ ಇಲ್ಲ. ಗ್ರಾಮೀಣ ಭಜನಾ ಮಂದಿಯ ಸರಳತೆ, ಅವರ ಅಶಿಸ್ತು, ಸ್ವಚ್ಛಂದ ನಡೆಗಳು ಶಿಷ್ಟರಿಗೆ ರೂಕ್ಷವೆನಿಸಿದವು. ಅವೆಲ್ಲವೂ ಹೊತ್ತು ಹೋಗದ ಪುಂಡರಾಲಿಪ ಮತ್ತ ಮತಿಗಳ ಗೋಷ್ಠಿ ಎನಿಸಿದವು.

ಪರಿಣಾಮವೆಂದರೆ ದೇಶಿಯ ಬದುಕಿನ ದಟ್ಟ ಪಲಕುಗಳಾಗಿದ್ದ ಅವುಗಳನ್ನು ನಾವು ದಾಖಲಿಸಲಿಲ್ಲ. ಅಲ್ಲಿರುವ ಪಠ್ಯ ಮತ್ತು ಭಜನಾ ಕಲೆಯ ಸೊಗಸುಗಾರಿಕೆಗಳು ಆಧುನಿಕ ಮಾಧ್ಯಮಗಳ ಹಾವಳಿಯಲ್ಲಿ ಮರೆಗೆ ಸಂದವು. ಮೂಲದ ಧಾಟಿಗಳು, ಹಾಡುಗಾರಿಕೆಯ ವಿವಿಧ ಪ್ರಕಾರಗಳು ಇಂದು ಕಳೆದು ಹೋಗಿವೆ. ಶಿವಭಜನೆಯ ಒಳಗೆ ಹೊರಳು ಹಾದಿ ಹಿಡಿದಿದ್ದ ಬೌದ್ಧ ಭಜನಾ ಪರಂಪರೆಯನ್ನು ನಾವು ಸಾಹಿತ್ಯ ಪ್ರಕಾರವೆಂದು ಈ ಕ್ಷಣಕ್ಕೂ ಪರಿಗಣಿಸಿಲ್ಲ. ವೈಚಾರಿಕ ಲೋಕ ಇವರನ್ನು ಎಷ್ಟೇ ಅವಜ್ಞೆ ಮಾಡಲಿ. ಈ ತತ್ವಪದಕಾರರು ಮಾತ್ರ ಯಾರ ಮರ್ಜಿಗೂ ಕಾಯದೆ ತಮ್ಮ ಪಾಡಿಗೆ ತಾವು ಬುದ್ಧ–ಬಾಬಾರನ್ನು ಅಂತಸ್ಥಗೊಳಿಸಿಕೊಂಡು ನವಬೌದ್ಧರಾಗಿ ಬಾಳುತ್ತಿದ್ದಾರೆ. ಬೌದ್ಧ ತತ್ವ ಪ್ರತಿಪಾದಿಸುವ ನೂರಾರು ಪದಗಳನ್ನು ಬರೆದು ವಿವಿಧ ಸಂದರ್ಭಗಳಲ್ಲಿ ಹಾಡುತ್ತಿದ್ದಾರೆ. ಹಳ್ಳಿಗಳಲ್ಲಿ ವಿದ್ವಾಂಸರ ಮಾತುಗಳಿಗಿಂತ ಜನಪದರ ಈ ಹಾಡುಗಳು ಗಾಢ ಪ್ರಭಾವ ಬೀರುತ್ತವೆ. ಗ್ರಾಮೀಣ ಭಾಗಗಳಲ್ಲಿ ಜನರು ಇಂದು ಬುದ್ಧನ ಮಾರ್ಗದತ್ತ ಹರಿದು ಬರುತ್ತಿದ್ದರೆ ಅದಕ್ಕೆ ಈ ಭಜನಾ ಪರಂಪರೆಯು ಪ್ರಮುಖ ಕಾರಣವಾಗಿದೆ. ಈ ಮೊದಲು ಜಾತ್ರೆ, ಖಾಂಡ, ಉತ್ಸವ ಮುಂತಾದೆಡೆ ಪರಂಪರಾಗತ ತತ್ವಪದಗಳನ್ನು ಹಾಡುತ್ತಿದ್ದರಷ್ಟೆ. ಅಲ್ಲಿಯೇ ಇಂದು ಬುದ್ಧ–ಬಾಬಾರ ಪದಗಳು ಹಾಡಲ್ಪಡುತ್ತಿವೆ. ಈ ಹಾಡುಗಾರಿಕೆಯು ಅವರ ಜೀವನಾಡಿ. ಅನೂಚಾನಾಗಿ ಅವರೊಂದಿಗೆ ಹರಿದುಕೊಂಡು ಬಂದಿರುವ ಸೃಜನ ಕಲೆ. ಅದರಲ್ಲಿ ಅವರ ಜೀವ ಭಾವಗಳು ಅವಿನಾಭಾವ ಸಂಬಂಧ ಹೊಂದಿವೆ. ಆಧುನಿಕ ಕ್ರಾಂತಿ ಗೀತೆಗಳಿಗಿಂತ ಈ ಭಜನಾ ಪದಗಳು ಅವರನ್ನು ಹೆಚ್ಚು ಪ್ರಭಾವಿಸಿವೆ. ಯಾವ ವಿಚಾರಗಳನ್ನಾದರೂ ಅವರು ಭಜನೆ ಪದಗಳೆಂಬ ಸೃಜನ ಪ್ರಕಾರದಲ್ಲಿ ಬರ ಮಾಡಿಕೊಳ್ಳಬಲ್ಲರು. ಅಂತೆಯೇ ತಮ್ಮೆಲ್ಲ ಅನುಭವಗಳನ್ನು ಅವರು ಈ ಸೃಜನ ಪ್ರಕಾರದಲ್ಲಿ ಸಲೀಸಾಗಿ ಬಸಿಯಬಲ್ಲರು. ಇದಕ್ಕೆ ಉಪಷ್ಟಂಬಕವಾಗಿ ಮುಕುಂದರಾವ ಖಾನಾಪೂರ ಎಂಬ ತತ್ವಪದಕಾರರ ಒಂದು ಪದವನ್ನು ಇಲ್ಲಿ ನೋಡೋಣ.

**ಭಾರತಕ್ಕೆ ಬಡತಾನ ಬಂದಿತೊ ಯಾಕಾ।**
**ದೇಶಕ್ಕೆ ಬಡತಾನ ಬಂದಿತೊ ಯಾಕಾ**
**ಕುಳಿತು ಮನಸಿನೊಳಗೆ ಮಾಡಿರಿ ತೂಕಾ ॥ ಪ ॥**

**ಬಡವರ ಬೆವರಿನ ರಕ್ತದ ರೊಕ್ಕಾ**
**ಸೌಕಾರ ಸೆಳೆದೊಯ್ದು ತುಂಬುವರೊ ಬ್ಯಾಂಕಾ**
**ದುಡ್ಡಿಗೆ ದುಡಿ ದುಡಿದು ಪಡಿವರೊ ದುಃಖಾ**
**ಹಾಂವ ಹೊಡದದ್ದು ಹದ್ದಿಗಾಯಿತೊ ಸುಖಾ ॥ ೧ ॥**

**ಗಾಡಿ ಮೋಟಾರದಲ್ಲಿ ಕೂಡುವದೊ ಷೋಕಾ**
**ಲಕ್ಷ ಲಕ್ಷದ ಹರಿತಾರೊ ಚೆಕ್ಕಾ**
**ಸಿನೇಮಾ ಸಭೆಗಳಲ್ಲಿ ಹೊಡೆಯುವರೊ ಝೋಕಾ**
**ಭಾರತ ಬಡವೆಂದು ಕೇಳುವರೋ ಭಿಕ್ಷಾ ॥ ೨ ॥**

**ಲೋಕ ರಾಜ್ಯ ಅನುವಿರೊ ಒಂದೆ ಸಿಕ್ಕಾ**
**ಎಲ್ಲರಿಗಿ ಭೂಮಿ ಭಾಗ ಸಿಗುವಲ್ದೊ ಯಾಕಾ**
**ಆನೆಯ ಹಲ್ಲು ತೋರೊದೊಂದು ಬೇರೆ ತಿಲ್ಲಾಕಾ**
**ಬಹಳಾಯಿತೊ ತಿಳಿದ್ದೊಯ್ತು ಇವರ ಸಂಗತಿ ಸಾಕಾ ॥ ೩ ॥**

**ಹಿಂದೆ ಬಿದ್ದ ಜನರೆಲ್ಲಾ ಒಂದಾಗಬೇಕಾ**
**ಬಂಧುಗಳೆ ಹೇಳತೀನಿ ಭಾರಿಸಿ ಡಂಕಾ**
**ಝಾಡಿಸಿ ಏಳ್ರಿ ಗುಲಾಮಿಯ ಸುಂಕಾ**
**ಖರೆ ಮಾತು ತಿಳಿಯಿರಿ ಮುಕುಂದನ ಟೆಂಕಾ ॥ ೪ ॥**

೧೯೩೫ ರಲ್ಲಿ ಬೀದರಿನ ಹಳ್ಳಿಯೊಂದರಲ್ಲಿ ಜನಸಿದ ಈ ಕವಿ ಹತ್ತಾರು ಇಂಥ ವಿಡಂಬನಾತ್ಮಕ ಪದಗಳನ್ನು ರಚಿಸಿದ್ದಾರೆ. ತಮ್ಮ ಈ ಪದದಲ್ಲಿ ಅವರು ನೇರವಾಗಿಯೇ ವ್ಯವಸ್ಥೆಯಲ್ಲಿನ ದೋಷ ದೌರ್ಬಲ್ಯಗಳನ್ನು ಎತ್ತಿ ತೋರಿಸುತ್ತಾರೆ. ಭೂಹಂಚಿಕೆ ಕುರಿತು ಗಂಭೀರವಾದ ಪ್ರಶ್ನೆ ಎತ್ತುತ್ತಾರೆ. ವರ್ತಮಾನದ ರಾಜಕೀಯ ಸೋಗಲಾಡಿತನವನ್ನು ಕುರಿತು ನಿಮ್ಮ ಸಂಗತಿ ಸಾಕು. ಶತಮಾನಗಳಿಂದಲೂ ನಿಮ್ಮನ್ನು ನಂಬಿದ್ದು ಸಾಕು. ನಿಮ್ಮ ಆಶಾಢಭೂತಿತನವನ್ನು ಇಂದು ನಾವು ಅರಿಯುವಷ್ಟು ಎಚ್ಚರವಾಗಿದ್ದೇವೆ ಎಂದು ಹೇಳುವ ಪದದ ಧಾಟಿ ತುಂಬಾ ಪರಿಣಾಮಕಾರಿ ಎನಿಸುತ್ತದೆ. ಹೀಗೆ ಜಾಗೃತಗೊಂಡ ಪ್ರಜ್ಞೆಯೊಂದು ವರ್ತಮಾನವನ್ನು ಕೆಣಕುವುದು ಇದೆಯಲ್ಲಾ ಇದು ಬಾಬಾಸಾಹೇಬರ ಸ್ವಾಭಿಮಾನ ಹೋರಾಟದ ಫಲವೇ ಆಗಿದೆ. ಇಡೀ ಪದವು ಭಜನೆಯ ಧಾಟಿಯಲ್ಲಿದ್ದು ಹಾಡುಗಾರಿಕೆಯ ಗತ್ತು-ಲಯಗಳಿಂದಾಗಿ ಕೇಳುಗರಿಗೆ ಥಟ್ಟನೆ ಮುಟ್ಟುತ್ತದೆ. ಹೀಗೆ ತತ್ವಪದವೆಂಬ ಸಾಹಿತ್ಯ ಪ್ರಕಾರದಲ್ಲಿ ಬೌದ್ಧ ಮಾರ್ಗವೊಂದು ಅವಿಚ್ಛಿನ್ನವಾಗಿ ಹರಿದುಕೊಂಡು ಬರುತ್ತಿರುವುದನ್ನು ಕಾಣಬಹುದು. ಬೌದ್ಧತ್ವ ಕುರಿತು ತೀರ ಮಾಹಿತಿ ಪ್ರಧಾನ ಪದಗಳು ರಚನೆಯಾಗಿರುವಂತೆ ಅದರ ತಾತ್ವಿಕತೆಯನ್ನು ಒಳಗೊಂಡ ಗಂಭೀರ ಪದಗಳು ರಚನೆಯಾಗಿರುವುದೇ ಇದರ ವೈಶಿಷ್ಟ್ಯವಾಗಿದೆ. ತತ್ವಪದ ಪ್ರಕಾರದಲ್ಲಿ ಅಚಲಿಗರಂಥ ಗಂಭೀರ ಅನುಸಂಧಾನಿಗಳು ಇರುವಂತೆ ಸರಳ ಮಾಹಿತಿ ನೀಡುವ ಸ್ವಾಭಿಮಾನಿ ಚಿಂತಕರು ಇದ್ದಾರೆ. ಇಂಥ ಎಲ್ಲ ರಚನೆಗಳನ್ನು ಇಟ್ಟುಕೊಂಡು ಗಂಭೀರ ಅಧ್ಯಯನವಾಗಬೇಕಿದೆ. ಈ ದಿಸೆಯಲ್ಲಿ ಇದೊಂದು ಪುಟ್ಟ ಹೆಜ್ಜೆ ಅಷ್ಟೆ.



# ಸಮಾಜೋನ್ಮುಖಿ ಡಾ.ಚನ್ನಬಸವ ಪಟ್ಟದ್ದೇವರು.

**–ಡಾ. ಇಂದುಮತಿ ಪಿ. ಪಾಟೀಲ,**
ಮುಖ್ಯಸ್ಥರು,
ಇತಿಹಾಸ ಸ್ನಾತಕೋತ್ತರ ಅಧ್ಯಯನ ಕೇಂದ್ರ,
ಸರ್ಕಾರಿ ಮಹಾವಿದ್ಯಾಲಯ (ಸ್ವಾಯತ್ತ),
ಸೇಡಂ ರಸ್ತೆ, ಕಲಬುರಗಿ.

**ಪೀಠಿಕೆ.**

ಕರ್ನಾಟಕದ ಐತಿಹಾಸಿಕ ಹಿರಿಮೆಯನ್ನು ಎತ್ತಿ ಹಿಡಿಯುವಲ್ಲಿ ಪುಣ್ಯ ಕ್ಷೇತ್ರವಾದ ಕಲ್ಯಾಣ ನಾಡು ತನ್ನದೇ ಆದ ಮಹತ್ವವನ್ನು ಹೊಂದಿದೆ. ಕರ್ನಾಟಕದ ಕೀರ್ತಿ ಕಳಸದಂತಿರುವ ಬೀದರ ಜಿಲ್ಲೆಯು ಐತಿಹಾಸಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ದೃಷ್ಟಿಯಿಂದ ಮಹತ್ವ ಪೂರ್ಣವಾದ ಸ್ಥಳವಾಗಿದೆ.

ಸಮಾಜದ ಪರಿವರ್ತನೆಯ ಹಾದಿಯಲ್ಲಿ ಧರ್ಮವು ಮಹತ್ವದ ಪಾತ್ರವಹಿಸುತ್ತದೆ. ಧರ್ಮ ಸಮಾಜದಲ್ಲಿ ತನ್ನ ಹಿರಿಮೆಯನ್ನು ಸ್ಥಾಪಿಸಲು ಧಾರ್ಮಿಕ ಮುಖಂಡರು ಮತ್ತು ಮಠಗಳ ಪಾತ್ರ ಅತಿಮುಖ್ಯವಾಗಿರುತ್ತದೆ. ಸಾಮಾಜಿಕ ಸುಖ ಸಂತೋಷಗಳಿಗೆ ಮತ್ತು ಸಾಮಾಜಿಕ ಪ್ರಗತಿಗೆ ಧರ್ಮವು ಅನಿವಾರ್ಯವಲ್ಲದಿದ್ದರೂ ಸಹ ಅದು ಸಾಮಾಜಿಕ ಗೊತ್ತುಗುರಿಗಳು ಮತ್ತು ಧ್ಯೇಯಧೋರಣೆಗಳನ್ನು ಬಿಂಬಿಸುವಲ್ಲಿ ಧರ್ಮ ಪ್ರಮುಖ ಪಾತ್ರ ವಹಿಸುವುದರಲ್ಲಿ ಅನುಮಾನವಿಲ್ಲ. ಆದಾಗ್ಯೂ ನಮ್ಮ ಸಮಾಜದಲ್ಲಿ ಧರ್ಮದ ಹೆಸರಿನಲ್ಲಿ ಪರಂಪರಾಗತವಾಗಿ ಬೆಳೆದು ಬಂದ ಅಂಧಶ್ರದ್ಧೆ, ಅನಾಚಾರಗಳನ್ನು ತೊಡೆದು ಅವುಗಳನ್ನು ಸಮರ್ಥವಾಗಿ ವಿರೋಧಿಸಿ ಸಮಾಜವನ್ನು ಸುಧಾರಣೆಯತ್ತ ಕೊಂಡೊಯ್ಯಬೇಕಾದರೆ ಧರ್ಮ ಮತ್ತು ಧರ್ಮ ಕ್ಷೇತ್ರಗಳು ಅವಶ್ಯಕವಾಗಿವೆ. ಅಸಮಾನತೆ ಮತ್ತು ಅನಿಷ್ಟಗಳಿಂದ ಕೂಡಿದ ಸಮಾಜದ ವ್ಯವಸ್ಥೆಯಲ್ಲಿ ಜಾತಿ–ಭೇದ, ಬಡವ–ಬಲ್ಲಿದ, ಮೇಲು–ಕೀಳು ಎಂಬ ಬೇರುಗಳನ್ನು ಕಿತ್ತೆಸೆದು ಸಮಾನತೆಯ ಮತ್ತು ಆದರ್ಶ ಸಮಾಜವನ್ನು ನಿರ್ಮಾಣ ಮಾಡುವಲ್ಲಿ ಧರ್ಮದ ನೆಲೆಗಟ್ಟಿನ ಮೇಲೆ ಸ್ಥಾಪಿತವಾದ ಮಠಗಳ ಪಾತ್ರ ಪ್ರಮುಖವಾಗಿದೆ.

ಈ ನಿಟ್ಟಿನಲ್ಲಿ ನಡೆದು ಬಂದ ಕರ್ನಾಟಕದ ಮಠಗಳಲ್ಲಿ ಬೀದರ ಜಿಲ್ಲೆಯ ಭಾಲ್ಕಿ ಪಟ್ಟಣದ ಹಿರೇಮಠವು ತನ್ನದೇ ಆದ ವಿಶಿಷ್ಟ ಸ್ಥಾನ ಹೊಂದಿದೆ. ಬೀದರ ಜಿಲ್ಲೆಯ ಲಿಂಗಾಯತ ಮಠಗಳಲ್ಲಿ ಕೇಂದ್ರ ಬಿಂದುವಾಗಿ ನಿಂತ ಭಾಲ್ಕಿಯ ಹಿರೇಮಠ ಸಂಸ್ಥಾನವು ಎಂಟುನೂರು ವರ್ಷಗಳಷ್ಟು ಪ್ರಾಚೀನ ಇತಿಹಾಸ ಹೊಂದಿದೆ. ಈ ಮಠವು ತನ್ನ ಸ್ವಚ್ಛ, ಶುದ್ಧ, ನಡೆ, ನುಡಿ, ಸೇವೆಗಳ ಮೂಲಕ ನಾಡಿನ ಗಮನ ಸೆಳೆದಿರುವ ಶತಾಯುಷಿ, ಡಾ.ಚೆನ್ನಬಸವ ಪಟ್ಟದ್ದೇವರುಗಳು ಮಠದ ಗುರುವಾಗಿ ಕ್ರಿ.ಶ.೧೯೨೪ ರಲ್ಲಿ ಆ ಸ್ಥಾನವನ್ನು ಅಲಂಕರಿಸಿದಾಗಿನಿಂದ ಸಮಾಜೋನ್ಮುಖರಾಗಿ ನಿರಂತರವಾಗಿ ಜನತೆಯ ಕಲ್ಯಾಣ ಕಾರ್ಯಗಳನ್ನು ಮಾಡಿದ್ದಾರೆ. ಇದನ್ನು ಜಿಲ್ಲೆಯ ಎಲ್ಲಾ ಸಮಾಜ ವರ್ಗದವರು, ವಿಚಾರವಂತರು ಒಪ್ಪಿಕೊಳ್ಳುವಂತಹ ಮಾತಾಗಿದೆ.

ಮಠಗಳ ಬಗ್ಗೆ ವ್ಯಾಖ್ಯೆಯನ್ನು ಅವಲೋಕಿಸಿದಾಗ ಮಠ ಎಂದರೆ, ಧರ್ಮಛತ್ರ ಪರೋಪಕಾರದ ಆಗರ ಎಂದು ಅಮರಕೋಶದ ಕವಿ ವ್ಯಾಖ್ಯಾನಿಸಿದ್ದಾನೆ. ಮ್ಯಾಕ್ ಡೊನೆಲ್ ಅವರ ಸಂಸ್ಕೃತದ ಶಬ್ದಕೋಶವು ಒಬ್ಬ ಸನ್ಯಾಸಿ ಅಥವಾ ವಿದ್ಯಾರ್ಥಿಗಳ ಕುಟೀರ, ಒಂದು ಧಾರ್ಮಿಕ ಪಾಠಶಾಲೆ ಮತ್ತು ಮಹಾವಿದ್ಯಾಲಯವೆಂದು ಅರ್ಥೈಸಿದ್ದಾರೆ. ಆಪ್ಟೆಯವರ (ಸಮಾಜಶಾಸ್ತ್ರಜ್ಞ) ಪ್ರಕಾರ ಮಠವೆಂದರೆ "ವಿದ್ಯಾರ್ಥಿಗಳು ವಾಸಿಸುವ ತಾಣ" ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಇಂದಿನ ಪ್ರಜಾಸತ್ತಾತ್ಮಕ ಯುಗದಲ್ಲಿ ಬದಲಾದ ಸಂದರ್ಭಕ್ಕೆ ತಕ್ಕಂತೆ ಲಿಂಗಾಯತ ಮಠಗಳು ತಮ್ಮ ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ಧೋರಣೆಯನ್ನು ಪ್ರಜಾಸತ್ತಾತ್ಮಕವಾಗಿ ಪರಿವರ್ತಿಸಿಕೊಳ್ಳುವುದು ಇಂದಿನ ಬಹುಮುಖ್ಯ ಅಗತ್ಯವೆನಿಸಿದೆ. ಲಿಂಗವಂತ ಮಠಗಳ ಸಂಖ್ಯೆಯನ್ನು ಪ್ರಾಚೀನ ಕಾಲದಿಂದ ನೋಡುತ್ತಾ ಬಂದಾಗ ಅವುಗಳಲ್ಲಿ ಹಲವಾರು ಕಾರಣಗಳಿಂದ ಅಸ್ತಿತ್ವಗಳನ್ನು ಕಳೆದುಕೊಂಡು ಕೆಲವೇ ಮಠಗಳು ಈಗ ಕಾರ್ಯ ನಿರ್ವಹಿಸುತ್ತಿವೆ. ಜೊತೆಗೆ ಇನ್ನೂ ಹಲವಾರು ಹೊಸ ಮಠಗಳು ಮತ್ತು ಪೀಠಗಳು ಸ್ಥಾಪಿತವಾಗುತ್ತಿವೆ. ಇನ್ನು ಹಳೆಯ ಭಾವನೆಗಳ ಸ್ಥಾನದಲ್ಲಿ ಹೊಸ ಭಾವನೆಗಳನ್ನು ಸ್ಥಾಪಿಸಿಕೊಳ್ಳಬೇಕಿದೆ. ಲಿಂಗವಂತ ಮಠಗಳನ್ನು ಸಂಘಟಿಸಿ ನವನಿರ್ಮಾಣ ಚಳುವಳಿಯನ್ನು ಮುಂದುವರೆಯಿಸಬೇಕಾಗಿದೆ. ನವಸಮಾಜ ಹಾಗೂ ಸಮೃದ್ಧಸಮಾಜಕ್ಕೆ ನಾಂದಿ ಹಾಡಬೇಕಾಗಿದೆ. ಕರ್ನಾಟಕದಲ್ಲಿ ಹಲವಾರು ಮಠಗಳು ಸಮಾಜ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಿವೆ. ಧರ್ಮದ ಮೂಲಧನ ನೈತಿಕತೆ. ನೈತಿಕತೆಯಿಂದ ಜೀವನ ವಿಮುಖವಾದರೆ ಅಂಥ ಜೀವನಕ್ಕೆ ಅರ್ಥವಿಲ್ಲ. ಆದ್ದರಿಂದ ಕೆಡಕನ್ನು ಬಿಟ್ಟು ಒಳ್ಳೆಯದನ್ನು ಸ್ವೀಕರಿಸಬೇಕು. ನಮ್ಮ ಮಾತು, ಮನ, ಕೃತಿಗಳಲ್ಲಿ ಒಳಿತನ್ನು ತುಂಬಿಕೊಳ್ಳಬೇಕು, ಒಳಿತನ್ನೇ ಆಚರಿಸಬೇಕು. ನಮ್ಮ ಬದುಕು ಸಮಾಜದ ಒಳಿತಿಗೆ ಸಹಾಯಕವಾಗಬೇಕು. ಪ್ರೀತಿ, ಸಹಬಾಳ್ವೆ, ದುಡಿಮೆಯಂಥ ಮಹತ್ವಪೂರ್ಣವಾದ ಹಿರಿಯರ ಪರಂಪರೆಯನ್ನು ಮಠಗಳು ಜನತೆಯಲ್ಲಿ ಬೆಳೆಯಿಸಬೇಕು.

**ಭಾಲ್ಕಿಯ ಹಿರೇಮಠ.**

ಸಂಸ್ಕೃತಿಯ ನಾಡು, ಕಲ್ಯಾಣ ಕ್ರಾಂತಿಯ ನೆಲೆಯಾಗಿರುವ ಬೀದರ ಜಿಲ್ಲೆಯ ಪ್ರಮುಖ ಪಟ್ಟಣವೆಂದರೆ ಭಾಲ್ಕಿ. ಈ ಪಟ್ಟಣದಲ್ಲಿ ಹಿರೇಮಠವು ತನ್ನ ಕಾರ್ಯ ವೈಖರಿ ಹಾಗೂ ಶರಣರ ನಿಜವಾದ ತತ್ವಗಳನ್ನು ಅಳವಡಿಸಿಕೊಂಡು ಬರುವಲ್ಲಿ ಜಿಲ್ಲೆಯಲ್ಲಿಯೇ ಅತ್ಯಂತ ಮಹತ್ವದ ಪಟ್ಟಣ ಇದಾಗಿದೆ. ಇಲ್ಲಿ ಹಿರೇಮಠವು ತನ್ನ ಕಾರ್ಯ, ಸಾಧನೆಯಲ್ಲಿ ಧರ್ಮ, ಜಾತಿ, ಲಿಂಗಧಾರಣೆ, ವಚನ ಸಾಹಿತ್ಯ ರಕ್ಷಣೆ, ಅನಾಥರ ರಕ್ಷಣೆ, ಬಸವತತ್ವ ಪ್ರಚಾರ, ಅಂತರ್ಜಾತಿ ವಿವಾಹ, ಜನಸೇವೆ, ಅನ್ಯಧರ್ಮ ಸಹಿಷ್ಣುತೆ ಮುಂತಾದ ಕ್ಷೇತ್ರಗಳಲ್ಲಿ ತನ್ನ ಕಾರ್ಯ ವ್ಯಾಪ್ತಿ ವ್ಯಾಪಿಸಿಕೊಂಡಿದೆ. ಅಲ್ಲದೆ ಈ ಮಠವೂ ಜಿಲ್ಲೆಯಲ್ಲಿಯೇ ಐತಿಹಾಸಿಕ ಪರಂಪರೆಯನ್ನು ಉಳಿಸಿಕೊಂಡು ಶ್ರೇಷ್ಠಸ್ಥಾನವನ್ನು ಇವತ್ತಿಗೂ ಹೊಂದಿದೆ ಎಂದು ಹೇಳಬಹುದು. ಈ ಮಠವು ತನ್ನದೇ ಆದಂತಹ ಸಮಾಜ ಸುಧಾರಣೆ ಮಾಡುತ್ತ ಸಮಾಜದಲ್ಲಿ ಒಂದು ಮಾದರಿ ಮಠವಾಗಿದೆ.

ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮ (೧೮೫೭)ಕ್ಕೂ ಬೀದರ ಜಿಲ್ಲೆಯ ಭಾಲ್ಕಿಗೂ ಸಂಬಂಧವಿದೆ. ಇದನ್ನು ವಿದೇಶಿ ವಿದ್ವಾಂಸರು "ಸಿಪಾಯಿದಂಗೆ" ಎಂದು ಭಾಲ್ಕಿಯಲ್ಲಿ ನಡೆದ ಘಟನೆಯನ್ನು "ಭಾಲ್ಕಿ ಪಿತೂರಿ" ಎಂದು ಗುರುತಿಸಿದ್ದಾರೆ. ನಾನಾಸಾಹೇಬರ ಅಣ್ಣನ ಮಗ ರಾವಸಾಹೇಬ ೧೮೬೧ರಲ್ಲಿ ತನ್ನ ಸಹಚರರೊಡನೆ ಹೈದ್ರಾಬಾದಕ್ಕೆ ಹೋಗುತ್ತಾನೆ. ಈ ರಾವಸಾಹೇಬನ ಬೆಂಬಲಿಗ ರಾಮರಾವ ತನ್ನ ಸಹಚರರೊಂದಿಗೆ ೧೮೬೭ರಲ್ಲಿ ಬೀದರಗೆ ಬರುತ್ತಾನೆ. ಬೀದರ ತಾಲ್ಲೂಕಿನ ಅಷ್ಟಿ ಗ್ರಾಮದಲ್ಲಿ "ಭಗವಾಧ್ವಜ" ಆರೋಹಣ ಮಾಡುತ್ತಾನೆ. ಆಗ ದೇಶಮುಖರು, ಪಟೇಲರು ಬ್ರಿಟಿಷರ ವಿರುದ್ಧ ಒಂದಾಗುವಂತೆ ಸತಾರಾದ ಅರಸ ನೀಡಿದ ಪತ್ರ ಅವನ ಜೊತೆಗಿರುತ್ತದೆ.

ನಂತರ ಮರಾಠ ಮತ್ತು ನಿಜಾಮ ಆಡಳಿತದ ಅಂಚಿನಲ್ಲಿರುವ ಭಾಲ್ಕಿಯಲ್ಲಿ ಯೋಜನೆ ರೂಪಿಸುವುದಕ್ಕಾಗಿ ಸಭೆ ಸೇರುತ್ತಾರೆ. ಅವರಲ್ಲಿ ಭೀಮರಾವ, ಬಾಲಕೃಷ್ಣ ಮತ್ತು ವಿಠೋಬಾ ಪ್ರಮುಖರು. ಅದರ ಸುಳಿವು ದೊರೆತ ಬ್ರಿಟಿಷ ಅಧಿಕಾರಿಗಳು ಪಿತೂರಿಯನ್ನು ಭೇದಿಸಿ, ಎಲ್ಲರನ್ನು ಬಂಧಿಸಿ ಜೈಲಿಗೆ ಕಳಿಹಿಸುತ್ತಾರೆ. ಈ ಘಟನೆಯನ್ನು "ಭಾಲ್ಕಿ ಪಿತೂರಿ" ಎಂದು ದಾಖಲಿಸಲಾಗಿದೆ. ಈ ಘಟನೆಯೇ ೧೮೫೭ ರ ಸಿಪಾಯಿ ದಂಗೆಯ ಕೊನೆಯ ಪಿತೂರಿಯೆಂದು ಕರ್ನಾಟಕ ಸರಕಾರ ೧೯೭೭ ರಲ್ಲಿಯ ಪ್ರಕಟಿಸಿರುವ ಬೀದರ ಜಿಲ್ಲಾ ಗೆಜೆಟೀಯರ್‌ನಲ್ಲಿ ದಾಖಲಿಸಲಾಗಿದೆ.

ಶಾಸನಗಳಲ್ಲಿ ಭಾಲ್ಕಿಯನ್ನು 'ಭಲ್ಲುವಿಕೆ, ಭಲ್ಲುಂಕೆ, ಭಾಲಿಕಿ ಮತ್ತು ಭಾಲಿಕೆ' ಎಂಬ ಉಲ್ಲೇಖವಿದೆ. ನಿಜಾಮನ ಕಾಲಕ್ಕೆ ಈ ಪಟ್ಟಣ ಒಂದು ಪೈಗಾ ತಾಲೂಕಿನ ಮುಖ್ಯಸ್ಥಳವಾಗಿತ್ತು. ೧೨ನೇ ಶತಮಾನದ ಶಿವಶರಣ ಕುಂಬಾರ ಗುಂಡಯ್ಯ ಇದೇ ಸ್ಥಳದಲ್ಲಿದ್ದವೆಂದು ಹೇಳಲಾಗಿದೆ. ಆತನ ಹೆಂಡತಿ ಕೇತಲಾದೇವಿಯ ಸ್ಮಾರಕವಾಗಿ ಇಲ್ಲಿ ಕುಂಭೇಶ್ವರ ದೇವಾಲಯ ಇದೆ ಎಂದು ತಿಳಿದುಬಂದಿದೆ. ೧೨ನೇ ಶತಮಾನದ ನಾಂದೇಡದ ಉರಿಲಿಂಗದೇವರ ಹರಿಜನ ಭಕ್ತನಾದ ಉರಿಲಿಂಗ ಪೆದ್ದಿಯ ಮಠವು ಸಹ ಭಾಲ್ಕಿಯಲ್ಲಿದೆ. ಹೀಗೆ ಈ ಪಟ್ಟಣವು ಹಿಂದಿನಿಂದಲೂ ಗುರುಸ್ಥಲ ಸಮಾಜದ ಹಲವು ಕ್ಷೇತ್ರಗಳಲ್ಲಿ ತನ್ನ ಕೊಡುಗೆಯನ್ನು ನೀಡುತ್ತಾ ಬಂದಿದೆ.

**ಮಠದ ಐತಿಹಾಸಿಕ ಹಿನ್ನೆಲೆ.**

ಐತಿಹಾಸಿಕ ಮಹತ್ವ ಪಡೆದ ಈ ಮಠವು ಹಿಂದಿನಿಂದಲೂ ತನ್ನ ಘನತೆ ಗೌರವ ಮತ್ತು ಮಹತ್ತರ ಹೆಜ್ಜೆಗಳನ್ನು ಇಡುತ್ತ ಬಂದಿದೆ. ನೂರಾರು ವರ್ಷಗಳಷ್ಟು ಪ್ರಾಚೀನವಾಗಿರುವ ಹಲವಾರು ವೀರಶೈವ ಮಠಗಳು ನಾವು ನೋಡುತ್ತೇವೆ. ಅವುಗಳು ಆದಿಕಾಲದಿಂದಲೂ ಧಾರ್ಮಿಕ, ಸಂಸ್ಕೃತಿ, ಸಾಹಿತ್ಯ ಚಟುವಟಿಕೆಗಳ ಕೇಂದ್ರಗಳಾಗಿ ನಿಂತು ತಮ್ಮ ಬಹುಮುಖ್ಯ ಕೊಡುಗೆಯನ್ನು ಸಮಾಜಕ್ಕೆ ನೀಡುತ್ತಾ ಬಂದಿವೆ. ಅಂತಹ ಮಠಗಳ ಸಾಲಿನಲ್ಲಿ ಬರುವ ಭಾಲ್ಕಿ ಮಠವು ತನ್ನ ಹಿರಿಮೆಯನ್ನು ಸಾಧನೆಯನ್ನು ಎತ್ತಿ ಹಿಡಿದಿದೆ. ಈ ಮಠದ ಮೂಲ ವ್ಯಕ್ತಿಯೆಂದರೆ ಶ್ರೀ ಚನ್ನಬಸವೇಶ್ವರರು. ಇವರ ನಂತರ ಈ ಮಠದ ಪರಂಪರೆಯಲ್ಲಿ ಹಲವು ಪೀಠಾಧಿಪತಿಗಳು ಆಗಿ ಹೋಗಿದ್ದಾರೆ. ಅವರೆಂದರೆ,

೧. ಶ್ರೀ ಮ.ಘ.ಚ. ಚನ್ನಬಸವೇಶ್ವರ ಪಟ್ಟದ್ದೇವರು
೨. ಶ್ರೀ ಮ.ಘ.ಚ. ದೇಶಮುಖ ಪಟ್ಟದ್ದೇವರು
೩. ಶ್ರೀ ಮ.ಘ.ಚ. ಸಿದ್ಧಬಸವ ಪಟ್ಟದ್ದೇವರು
೪. ಶ್ರೀ ಮ.ಘ.ಚ. ಷಣ್ಮುಖಯ್ಯ ದೇಶಿಕರು
೫. ಶ್ರೀ ಮ.ಘ.ಚ. ನೀಲಕಂಠಯ್ಯ ದೇಶಿಕರು
೬. ಶ್ರೀ ಮ.ಘ.ಚ. ಗುರುಲಿಂಗ ದೇಶಿಕರು
೭. ಶ್ರೀ ಮ.ಘ.ಚ. ಡಾ.ಚನ್ನಬಸವ ಪಟ್ಟದ್ದೇವರು
೮. ಶ್ರೀ ಮ.ಘ.ಚ. ಬಸವಲಿಂಗ ಪಟ್ಟದ್ದೇವರು

ಭಾಲ್ಕಿ ಹಿರೇಮಠವು ೮೦೦ ವರ್ಷಗಳ ಇತಿಹಾಸ ಹೊಂದಿದೆ. ಈ ಮಠದ ಗುರುಗಳ ಪರಂಪರೆಯಲ್ಲಿ ಡಾ.ಚನ್ನಬಸವ ಪಟ್ಟದ್ದೇವರು ಪ್ರಮುಖರಾಗಿದ್ದಾರೆ. ಇವರು ಮಠದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ಇವರು ಸಮಾಜಸೇವೆ, ಶೈಕ್ಷಣಿಕಸೇವೆ ಮಾಡುತ್ತಾ ಜನಮನದಲ್ಲಿ ಕಾಯಕ ಪ್ರೇಮವನ್ನು ಬೆಳೆಯಿಸಿದ್ದಾರೆ. ಮೂಢನಂಬಿಕೆಗಳನ್ನು ದೂರಮಾಡಲು ಶ್ರಮಿಸಿದ್ದಾರೆ. ದುಶ್ಚಟ ನಿವಾರಣೆಗಾಗಿ ಊರೂರುಗಳನ್ನು ಸಂಚರಿಸಿ ಜನತೆಯನ್ನು ಎಚ್ಚರಿಸಿದ್ದಾರೆ. ಚನ್ನಬಸವ ಪಟ್ಟದ್ದೇವರು ಬೀದರ ಜಿಲ್ಲೆಯ ಔರಾದ ತಾಲೂಕಿನ ಕಮಲನಗರ ಲಿಂಗವಂತ ಧರ್ಮೀಯ ಬುಳ್ಳಾ ಮನೆತನದಲ್ಲಿ ರಾಚಪ್ಪ ಮತ್ತು ಸಂಗಮ್ಮನವರ ಪುತ್ರನಾಗಿ ದಿನಾಂಕ: ೨೨-೧೨-೧೮೯೦ ರಂದು ಜನಿಸಿದರು. ಐದು ವರ್ಷದವರಿರುವಾಗಲೇ ಇವರು ತಮ್ಮ ತಂದೆ-ತಾಯಿಯನ್ನು ಕಳೆದುಕೊಂಡರು. ಮುಂದೆ ೧೯೨೪ ರಲ್ಲಿ ಭಾಲ್ಕಿ ಮಠದ ಅಧಿಕಾರ ವಹಿಸಿಕೊಂಡರು. ನಂತರ ಸಮಾಜದ ಎಲ್ಲಾ ಮುಖಗಳನ್ನು ತಮ್ಮ ಬುದ್ಧಿ ಶಕ್ತಿಯಿಂದ ಸಮಾಜವನ್ನು ಧಾರ್ಮಿಕ ತಳಹದಿಯ ಮೇಲೆ ಮುನ್ನಡೆಸಬೇಕು ಎಂಬ ಕನಸು ಕಂಡರು. ಅದರಂತೆ ಮಠ ರಜಾಕಾರ ಚಳುವಳಿ ಮತ್ತು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಇಡೀ ನಾಡಿನ ಜನತೆ ತನ್ನ ಕಡೆ ನೋಡುವ ಹಾಗೆ ಇವರು ತಮ್ಮ ಸಾಧನೆಗೈದರು. ನಿಜಾಮನ ಆಳ್ವಿಕೆಯ ವಿಷಮ ವಾತಾವರಣದಲ್ಲಿ ಹೊರಗೆ ಉರ್ದು ಬೋರ್ಡು ಹಾಕಿ ಒಳಗೆ ಕನ್ನಡ ಕಲಿಸಿದ ಕೀರ್ತಿ ಈ ಮಠದ್ದಾಗಿದೆ. ಚನ್ನಬಸವ ಪಟ್ಟದ್ದೇವರು ಅವರಿಗೆ ಕನ್ನಡದ ಬಗ್ಗೆ ಅಪಾರ ಪ್ರೀತಿ ಇತ್ತು. ಅವರಿಗೆ ಕನ್ನಡ ಸ್ವಾಮಿ ಎಂದು,

ಅವರ ಮಠವನ್ನು ಕನ್ನಡದ ಮಠವೆಂದು ಹೆಮ್ಮೆಯಿಂದ ಕರ್ನಾಟಕದ ಘನಸರಕಾರ ಹಾಗೂ ಹಿರಿಯ ಸಾಹಿತಿಗಳು ಗುರುತಿಸಿದ್ದಾರೆ. ಅವರು ಕರ್ನಾಟಕ ಏಕೀಕರಣಕ್ಕಾಗಿ ದುಡಿದ್ದಾರೆ. ಧರ್ಮದ ಪ್ರಗತಿಗೆ ಮತ್ತು ಸಮಾಜದಲ್ಲಿ ಸಮಾನತೆ, ಸತ್ಯ ಅಹಿಂಸೆ ಮುಂತಾದ ಉತ್ತಮ ಗುಣಗಳ ಬೀಜಗಳನ್ನು ಬಿತ್ತುವಲ್ಲಿ ಭಾಲ್ಕಿ ಮಠ ಮತ್ತು ಅಲ್ಲಿನ ಶ್ರೀಗಳ ಕಾರ್ಯ ಶ್ಲಾಘನೀಯವಾಗಿದೆ.

ಇವರ ನಂತರದಲ್ಲಿ ಪೀಠಾಧಿಪತಿಗಳಾಗಿರುವ ಇಂದಿನ ಗುರುಗಳಾದ ಬಸವಲಿಂಗ ಪಟ್ಟದ್ದೇವರು ಹಿಂದಿನ ಗುರುಗಳು ಹಾಕಿಕೊಟ್ಟ ವಿಚಾರಧಾರೆಗಳನ್ನು ಮತ್ತು ಅವರ ಸಮಾಜ ಸುಧಾರಣೆಗಳನ್ನು ಮುಂದುವರಿಸಿದ್ದಾರೆ. ಈ ಗುರುಗಳು ಮಠದ ಎಲ್ಲಾ ಕ್ರಿಯೆಗಳನ್ನು ಹಿಂದಿನ ಗುರುಗಳಂತೆ ನಡೆಸಿಕೊಂಡು ಇವರು ಕೂಡ ಒಬ್ಬ ಕ್ರಿಯಾಶೀಲ ಗುರುಗಳಾಗಿದ್ದಾರೆ. ಪೂಜ್ಯ ಶ್ರೀ ಬಸವಲಿಂಗ ಪಟ್ಟದ್ದೇವರು ಅತ್ಯಂತ ಹಿಂದುಳಿದ ಗ್ರಾಮವಾದ ನಾಗೂರ(ಬಿ) ಎಂಬಲ್ಲಿ ಸದ್ಗುಣ ಸಂಪನ್ನರಾದ ರಾಚಪ್ಪ ಮತ್ತು ಭಾಗೀರಥಿಯೆಂಬ ದಂಪತಿಗಳ ಉದರದಲ್ಲಿ ೨೫-೦೮-೧೯೫೦ ರಲ್ಲಿ ಜನಿಸಿದರು.

ಶ್ರೀಗಳು ಚನ್ನಬಸವ ಪಟ್ಟದ್ದೇವರ ಮೆಚ್ಚಿನ ವಿದ್ಯಾರ್ಥಿಯಾಗಿ ಮಠದಲ್ಲಿ ಯಾವುದೇ ಕಾರ್ಯದಲ್ಲಿ ಮುಂಚೂಣಿ ವಿದ್ಯಾರ್ಥಿಯಾಗಿದ್ದರಿಂದ ದೊಡ್ಡ ಅಪ್ಪನವರಿಗೆ ನಿಕಟವರ್ತಿ ವಿದ್ಯಾರ್ಥಿಯಾಗಿದ್ದರು. ತದನಂತರದಲ್ಲಿ ೧೯೮೫ ರಲ್ಲಿ ಭಾಲ್ಕಿ ಹಿರೇಮಠ ಸಂಸ್ಥಾನದ ಪೀಠಾಧಿಪತಿಗಳಾಗಿ ಅಧಿಕಾರ ವಹಿಸಿಕೊಂಡರು, ಉರಿಲಿಂಗಪೆದ್ದಿಗಳು ಹೇಗೆ ತಮ್ಮ ಜೀವನದಲ್ಲಿ ಉರಿಲಿಂಗದೇವರ ಸೇವೆ ಮಾಡಿ ಅವರ ಮಠದಲ್ಲಿ ಪೀಠಾಧ್ಯಕ್ಷರಾಗಿದ್ದರೊ ಅದೇ ರೀತಿ ಶ್ರೀಯುತ ಶಿವರಾಜ ಕಾಡೋದೆಯವರು (ಭಾಲ್ಕಿ ಮಠದಲ್ಲಿ ಪೀಠಾಧ್ಯಕ್ಷರಾಗಿ) ಬಸವಣ್ಣನವರ ವಿಚಾರಗಳನ್ನೇ ಹಾಸಿ, ಹೊದ್ದು, ಮಿಂದು ಬದುಕುತ್ತಿರುವ ಪ್ರತ್ಯಕ್ಷ ಬಸವ ಶಿಶುವಾಗಿದ್ದಾರೆ. ಅಂತೆಯೇ ಈ ಗುರುಗಳು ತಮ್ಮ ಮಠದ ಪರಂಪರೆಯಲ್ಲಿ ಹಲವಾರು ಸಮಾಜೋದ್ಧಾರ ಕಾರ್ಯಗಳನ್ನು ನೆರವೇರಿಸಿಕೊಂಡು ಬರುತ್ತಿದ್ದಾರೆ. ಇವರು ಪೀಠಾರೋಹಣವಾದ ನಂತರ ಇವರ ಪ್ರಮುಖ ಕಾರ್ಯಗಳೆಂದರೆ 'ಶಾಂತಿ ಕಿರಣ' ಪತ್ರಿಕೆ ಪ್ರಾರಂಭಿಸಿದ್ದು, ಮತ್ತು ಮಠದಲ್ಲಿ ಪ್ರತಿ ಹುಣ್ಣಿಮೆಗೆ ಮಾಸಿಕ ಶಿವಾನುಭವಗೋಷ್ಠಿ ನಡೆಸುತ್ತಾ ಬಂದಿದ್ದಾರೆ. ಈ ಗೋಷ್ಠಿಗಳಲ್ಲಿ ಅನೇಕ ಜ್ಞಾನಿಗಳು, ಆಧ್ಯಾತ್ಮ ವಾದಿಗಳು, ವಾಗ್ಮಿಗಳಿಂದ ಉಪನ್ಯಾಸ ಏರ್ಪಡಿಸಿ ಸಾಮಾಜಿಕ ಪ್ರಜ್ಞೆ ಬೆಳೆಸುವಲ್ಲಿ ಕಾರಣೀಭೂತ ಗುರುಗಳಾಗಿದ್ದಾರೆ. ಧರ್ಮ ಸಮಾಜ ಮತ್ತು ಸಾಹಿತ್ಯ ಸೇವೆಯನ್ನು ನಿರಂತರವಾಗಿ ಇವತ್ತಿಗೂ ನಡೆಸಿಕೊಂಡು ಬರುತ್ತಿದ್ದಾರೆ. ಇದರ ಜೊತೆಗೆ ಶ್ರಾವಣ ಮಾಸದಲ್ಲಿ (ಪ್ರತಿವರ್ಷ) ವಿಶೇಷ ಕಾರ್ಯಕ್ರಮವೇರ್ಪಡಿಸಿ ವಚನ ಕಂಠಪಾಠ ವಚನಗಾಯನ, ನಿಬಂಧ,ನಾಟಕ, ಚಿತ್ರಕಲೆ, ರಂಗೋಲಿ, ಇತ್ಯಾದಿ ಸ್ಪರ್ಧೆಗಳ ಮೂಲಕ ಸಮಾಜದ ಎಲ್ಲಾ ಜನರು ಭಾಗಿಯಾಗಲಿಕ್ಕೆ ಅವಕಾಶ ಮಾಡಿಕೊಡುತ್ತಾರೆ. ಇವರು ಪ್ರತ್ಯಕ್ಷ ಪರೋಕ್ಷವಾಗಿ ಭಾರತೀಯ ಸಂಸ್ಕೃತಿಯನ್ನು ಪೋಷಿಸುತ್ತಿದ್ದಾರೆ. ಚನ್ನಬಸವ ಪಟ್ಟದ್ದೇವರು ಶಿಕ್ಷಣದಿಂದ ವಂಚಿತರಾದ ಈ ಪ್ರದೇಶದಲ್ಲಿ ಶಿಕ್ಷಣವನ್ನು ನೀಡುವ ಕಾರ್ಯವನ್ನು ಕೈಕೊಂಡಿದ್ದಾರೆ. ಅನಾಥ ಬಾಲಕರಿಗೆ ಉಚಿತ ವಸತಿ ಹಾಗೂ ಪ್ರಸಾದ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟಿದ್ದಾರೆ. ಶಿಕ್ಷಣದೊಂದಿಗೆ ವಿದ್ಯಾರ್ಥಿಗಳು ನೀತಿವಂತರಾಗಿ ಬೆಳೆಯುವಂತೆ ಪ್ರೇರಣೆ ನೀಡಿದ್ದಾರೆ. ಅಲ್ಲದೆ ಮಠದಲ್ಲಿ ಎಲ್ಲಾ ಶಿವಶರಣರ ಜಯಂತಿ ಜೊತೆ ಭಗವಾನ ಬುದ್ಧರ ಜಯಂತಿ, ಅಂಬೇಡ್ಕರ ಜಯಂತಿ, ಶಿವಾಜಿ ಜಯಂತಿ ಮುಂತಾದವರ ಜಯಂತಿಗಳನ್ನು ಆಚರಿಸುವುದರ ಜೊತೆಗೆ ಜನಮನದಲ್ಲಿ ಸ್ವಾತಂತ್ರ್ಯದ ಕಲ್ಪನೆ ಮತ್ತು ರಾಷ್ಟ್ರಪ್ರೇಮ ಮೂಡಿಸಲಿಕ್ಕೆ ಪ್ರಯತ್ನಿಸುತ್ತಿದ್ದಾರೆ.

**ಸಾಮಾಜಿಕ ಕೊಡುಗೆ.**

ಡಾ.ಚನ್ನಬಸವ ಪಟ್ಟದ್ದೇವರು ಅಧಿಕಾರಕ್ಕೆ ಬಂದ ಮೇಲೆ ಮಠದ ಮುಖಾಂತರ ಸಾಮಾಜಿಕ ನ್ಯೂನ್ಯತೆಗಳನ್ನು ತೊಡಗಿಸಲು ಪ್ರಯತ್ನಿಸಿದರು. ಬಸವತತ್ವ ಪ್ರಚಾರಗೊಳಿಸಲು ಮನೆಮನೆಗೆ ಹೋಗಿ ಉಪದೇಶವನ್ನು ನೀಡಿ ಶರಣರು ಕಂಡ ಕನಸಿನಂತೆ ಸಮಾಜವನ್ನು ಬೆಳೆಸತೊಡಗಿದ್ದರು. ಎಲ್ಲರೂ ಸರಿಸಮಾನರು ಎಂಬ ತತ್ವವನ್ನು ಚನ್ನಬಸವ ಪಟ್ಟದ್ದೇವರು ಅನುಷ್ಠಾನಗೊಳಿಸಿಕೊಂಡು ಸಮಾಜದಲ್ಲಿ

ಇರುವ ನ್ಯೂನ್ಯತೆಗಳನ್ನು ತೊಡೆದು ಹಾಕಲು ಪ್ರಯತ್ನಿಸಿ, ಬಸವತತ್ವದ ಸಿದ್ಧಾಂತವನ್ನು ಮನೆಮನೆಗೂ ತಲುಪಿಸಿದರು. ಸಾಮಾಜಿಕ ಪರಿವರ್ತನೆ ಮತ್ತು ಬದಲಾವಣೆ ತರುವ ನಿಟ್ಟಿನಲ್ಲಿ ಈ ಮಠವು ದಲಿತ ಜನಾಂಗದವರಿಗೆ ತಮ್ಮ ಹತ್ತಿರ ಕರೆಸಿ ಲಿಂಗದೀಕ್ಷೆಯನ್ನು ಕೊಟ್ಟು, ಲಿಂಗಧರಿಸಿದರೆ ಜಾತಿಭೇಧವಿಲ್ಲ ಮತ್ತು ಸೂತಕಗಳಿಲ್ಲ ಎಂಬ ಸಾರವನ್ನು ಸಮಾಜಕ್ಕೆ ತಿಳಿಸಿದರು.

ಈ ಮಠ ಶೋಷಣೆ ರಹಿತ ಸಮಾಜದ ಜಾತ್ಯಾತೀತ ಸಮಾಜ ನಿರ್ಮಾಣ ಮಾಡುವ ಸಲುವಾಗಿ ೧೯೭೯ರಲ್ಲಿ ಅಂತರ ಜಾತಿಯ ವಿವಾಹ ಮಾಡಿಸಿ ಜಾತಿಯ ವ್ಯವಸ್ಥೆಯನ್ನು ಹೋಗಲಾಡಿಸಲಿಕ್ಕೆ ಪ್ರಯತ್ನಿಸಿದ ಕೀರ್ತಿ ಈ ಮಠ ಮತ್ತು ಶ್ರೀಗಳಿಗೆ ಸಲ್ಲುತ್ತದೆ. ಇವರು ಹಿಂದು ಮುಸ್ಲಿಂರ ಮಧ್ಯೆ ಮತೀಯ ಬಾಂಧವ್ಯ ಬೆಳೆಸಿದ್ದರು. "ಎಮ್ಮವರು ಬೆಸಗೊಂದರೆ ಶುಭ ಲಗ್ನವೆನ್ನಿರಯ್ಯಾ" ಎಂಬ ಮೌಲ್ಯವನ್ನು ಜಗತ್ತಿಗೆ ಸಾರಿದ್ದರು. ಮೇಲು ಕೀಳೆಂಬುದು ಯಾವುದು ಇಲ್ಲ. ಅವರವರ ಸದ್ಗುಣಗಳೇ ಆ ವ್ಯಕ್ತಿಯ ಯೋಗ್ಯತೆಯನ್ನು ನಿರ್ಧರಿಸುತ್ತದೆಂದು ಹೇಳಿದ್ದರು. ಬುದ್ಧ, ಬಸವ, ಅಂಬೇಡ್ಕರರ ಸಾಲಿನಲ್ಲಿ ನಡೆದ ಈ ಮಠದ ಗುರುಗಳು ಬೆಲ್ದಾಳ ಶರಣರಿಗೆ ಲಿಂಗದೀಕ್ಷೆಯನ್ನು ಕೊಟ್ಟಿದ್ದು ಬೀದರ ಜಿಲ್ಲೆಯಲ್ಲಿ ಮತ್ತೊಂದು ಸಾಮಾಜಿಕ ಕ್ರಾಂತಿಯನ್ನೇ ಎಬ್ಬಿಸಿತ್ತು. ಬೆಲ್ದಾಳ ಶರಣರು ೧೨ನೆಯ ಶತಮಾನದ ಕಲ್ಯಾಣ ಶರಣ–ಶರಣೆಯರ ವಚನಗಳನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ. ಅವರಿಗೆ ಚಿತ್ರದುರ್ಗದ ಬೃಹನ್ಮಠದ ಶ್ರೀಗಳು "ಬಸವಶ್ರೀ" ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದ್ದಾರೆ. ಇಂದು ಶರಣ ಸಾಹಿತ್ಯವನ್ನು ಕುರಿತು ಬೋಧನೆ ಮಾಡುವವರಲ್ಲಿ ಬೆಲ್ದಾಳ ಶ್ರೀಗಳು ಅಗ್ರಗಣ್ಯರಾಗಿದ್ದಾರೆ. ಅಲ್ಲದೆ ದಲಿತ ಜನಾಂಗದವರಿಗೆ ಊರಿನ ಭಾಲ್ಕೇಶ್ವರ ದೇವಾಲಯದಲ್ಲಿ ಪ್ರವೇಶ, ಸಾರ್ವಜನಿಕ ಬಾವಿಗೆ ಪ್ರವೇಶ, ಮುಂತಾದ ಕಾರ್ಯಗಳು ಶ್ರೀಗಳು ನಡೆಸಿದ್ದಾರೆ. ಈ ಕಾರಣದಿಂದ ಗುರುಗಳು ಅನೇಕ ರೀತಿಯ ಕಷ್ಟ ನಷ್ಟಗಳನ್ನು ಅನುಭವಿಸಿದ್ದರು. ನಿನ್ನ ಧರ್ಮವನ್ನು ಪ್ರೀತಿಸು ಅನ್ಯ ಧರ್ಮವನ್ನು ಗೌರವಿಸು ಎಂತಲು ಮತ್ತು "ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಾಣವಕ್ಕು" ಎಂಬ ತತ್ವವನ್ನು ತಮ್ಮ ನಿಜಜೀವನದಲ್ಲಿ ಈ ಮಠದ ಶ್ರೀಗಳು ಪಾಲಿಸಿದ್ದರು. ಸ್ತ್ರೀ ಸ್ವಾತಂತ್ರ್ಯ ಕಾಯಕ, ದಾಸೋಹದಂಥ ತತ್ವಗಳನ್ನು ಕಟ್ಟುನಿಟ್ಟಾಗಿ ಪರಿಪಾಲಿಸಿಕೊಂಡು ಅವುಗಳ ಮೂಲಕ ಅನಾಥ ರಕ್ಷಣೆ, ಸಹಭೋಜನ ಏರ್ಪಡಿಸಿ ಸಮಾನತೆಯನ್ನು ತರಲು ಪ್ರಯತ್ನಿಸಿದ್ದಾರೆ. ಚನ್ನಬಸವ ಪಟ್ಟದ್ದೇವರು ಪರರ ವಿಚಾರಗಳನ್ನು ಗೌರವದಿಂದ ಕೇಳುತ್ತಿದ್ದರು. ಪರಧರ್ಮ ಸಹಿಷ್ಣುಗಳು ಆಗಿದ್ದರು.

**ಧಾರ್ಮಿಕ ಕೊಡುಗೆ.**

ಮಠಗಳು ಧಾರ್ಮಿಕ ಕೇಂದ್ರಗಳಾಗಿದ್ದರೂ ಸಹ ಕೇವಲ ಪೂಜೆಗಷ್ಟೇ ಸೀಮಿತವಲ್ಲ ಎಂಬುದನ್ನು ಅರಿತ ಲಿಂಗೈಕ್ಯ ಗುರುಗಳಾದ ಚನ್ನಬಸವ ಪಟ್ಟದ್ದೇವರು ಮಠದಲ್ಲಿ ನಿತ್ಯ ಪೂಜಾ ಕಾರ್ಯಕ್ರಮವನ್ನು ಹಾಕಿಕೊಂಡು ಸಮಾನ ಅವಕಾಶ, ಕಾಯಕ ತತ್ವ, ಅಂತರಂಗ ಸುದ್ದಿಯ ಮಹತ್ವ, ಸದಾಚಾರ, ಸದ್ಭಕ್ತಿ, ನಡೆ–ನುಡಿ, ಸಮರ್ಪಣಾಭಾವ, ಸಮರಸಜೀವನ ಮುಂತಾದ ವಿಚಾರ ಪ್ರಣಾಲಿಕೆಯು ಈ ಮಠದ ಸಾಧನೆಗಳಾಗಿವೆ. ಸಕಲ ಜೀವಾತ್ಮರ ಲೇಸನ್ನು ಬಯಸುವುದೇ ಈ ಮಠದ ಧಾರ್ಮಿಕ ನಿಲುವು. ಇಲ್ಲಿಯ ಧಾರ್ಮಿಕ ಕಾರ್ಯಗಳಲ್ಲಿ ಶಿವಾನುಭವ ಗೋಷ್ಠಿಯು ೧೯೮೫ ರಿಂದ ನಿರಂತರವಾಗಿ ನಡೆಯುತ್ತಲಿದೆ. ಈ ಗೋಷ್ಠಿಯಲ್ಲಿ ವೀರಶೈವ ಸಾಹಿತ್ಯ, ಧರ್ಮ, ಜನಾಂಗ ಕುರಿತು ಉಪನ್ಯಾಸ ಮಾಡಲಾಗುತ್ತದೆ. ಮಠದಲ್ಲಿ ಕಾಯಕ ಮತ್ತು ದಾಸೋಹ ತತ್ವಕ್ಕೆ ಹೆಚ್ಚಿನ ಮಹತ್ವವಿದ್ದು ಪ್ರತಿದಿನ ದಾಸೋಹ ನಡೆಯುತ್ತದೆ.

ದೇವನೊಬ್ಬ ನಾಮ ಹಲವು ಎಂದು ಬೋಧಿಸಿ ಧರ್ಮದ ಸಮಾನತೆಯ ತಳಹದಿಯುಳ್ಳ ಸಮಾಜವನ್ನು ರೂಪಿಸುವಲ್ಲಿ ಭಾಲ್ಕಿ ಮಠವು ಬಸವ ಸಿದ್ಧಾಂತ ಮತ್ತು ಧರ್ಮವನ್ನು ಕಾಪಾಡಿದ ಪವಿತ್ರ ಕೀರ್ತಿಗೆ ಪಾತ್ರವಾಗಿದೆ. ಧರ್ಮವನ್ನು ಉಳಿಸಿ ಬೆಳೆಸಲು ಬಸವ ಜಯಂತಿ ಕಾರ್ಯಕ್ರಮ ಮಾಡಿ

ಪಾದಯಾತ್ರೆಯ ಮೂಲಕ ಧರ್ಮದ ಅರಿವು ಮೂಡಿಸಲು ಪ್ರಯತ್ನಿಸುತ್ತಿದ್ದಾರೆ. ಅಲ್ಲದೆ, ಇಂಥ ಕಾರ್ಯಗಳನ್ನು ಇವತ್ತಿನವರೆಗೂ ಮುಂದುವರೆಸಿಕೊಂಡು ಬರುತ್ತಿದೆ.

**ಶೈಕ್ಷಣಿಕ ಕೊಡುಗೆ.**

ಹೈದರಾಬಾದ ನಿಜಾಮರ ಗುಲಾಮಗಿರಿಯಲ್ಲಿ ತಮ್ಮ ಜೀವನದ ಮೌಲ್ಯಗಳನ್ನು ಕಳೆದುಕೊಂಡು ಪರತಂತ್ರಿಯಾಗಿ ಬಾಳಬೇಕಾಗಿತ್ತು. ಇಂಥ ಗಂಭೀರ ಸ್ಥಿತಿಯಲ್ಲಿ ಕನ್ನಡದ ಶಿಕ್ಷಣವು ಹದಗೆಟ್ಟು ಹೋಗುವ ಸಂದರ್ಭದಲ್ಲಿ ಸಿಡಿಲಿನಂತೆ ಸಿಡಿದದ್ದು ಒಂದು ನಾಡಿನ ಜನತೆಗೆ ಬೇಕಾಗುವ ಮಾತೃಭಾಷೆಯನ್ನು ಉಳಿಸಿ ಬೆಳೆಸಿದ ಕೀರ್ತಿ ಈ ಮಠಕ್ಕೆ ಮತ್ತು ಮಠಾಧೀಶರುಗಳಿಗೆ ಸಲ್ಲುತ್ತದೆ.

ಈ ಮಠವು ಅನ್ನದಾಸೋಹದ ಜೊತೆಗೆ ಜ್ಞಾನದಾಸೋಹವನ್ನು ನೀಡಿ ಶೈಕ್ಷಣಿಕ ಸೇವೆಯನ್ನು ಮಾಡಿ ಕನ್ನಡ ಭಾಷೆಯ ಮೇಲೆ ತುಂಬಾ ಅಭಿಮಾನ ಆಸಕ್ತಿಯನ್ನು ಹೊಂದಿದ ಈ ಮಠ ಹೈದ್ರಾಬಾದ ಕರ್ನಾಟಕದ ನಿಜಾಮರ ಕಾಲದಲ್ಲಿ ಕೇವಲ ಉರ್ದು ಮತ್ತು ಇಂಗ್ಲೀಷ ಭಾಷೆಗಳನ್ನು ಬಿಟ್ಟರೆ ಬೇರೆ ಯಾವ ಭಾಷೆಯ ಶಿಕ್ಷಣ ಇದ್ದಿರಲಿಲ್ಲ. ಹಿಂದುಳಿದ ಭಾಗದ ಹೈದ್ರಾಬಾದ ಕರ್ನಾಟಕದ ಭಾಗದಲ್ಲಿ ಕನ್ನಡ ಜನರು ಕನ್ನಡ ಕಲಿಯಬೇಕು ಎಂದು ಪಣತೊಟ್ಟು. ಕೋಣೆಯ ಹೊರಗೆ ಉರ್ದು ಬೋರ್ಡನ್ನು ಹಾಕಿ ಒಳಗೆ ಕನ್ನಡ ಕಲಿಸಿದ ಶ್ರೇಯಸ್ಸು ಮಠಕ್ಕೆ ಸಲ್ಲುತ್ತದೆ.

೧೯೩೧ರಲ್ಲಿ ನಾರಾಯಣಖೇಡ ತಾಲ್ಲೂಕಿನ ಮೋರ್ಗಿ ಗ್ರಾಮದಲ್ಲಿ ಕನ್ನಡ ಶಾಲೆಯನ್ನು ಪ್ರಾರಂಭಿಸಿ ಮಕ್ಕಳನ್ನು ಕನ್ನಡ ಶಾಲೆಗೆ ಕಳಿಸಬೇಕೆಂದು ಭಿನ್ನವಿಸಿಕೊಂಡು ಕನ್ನಡ ಶಾಲೆಗಳು ನಡೆಯುವಂತೆ ಮಾಡಿದ್ದರು. ಬಡಮಕ್ಕಳಿಗೆ ಅನುಕೂಲವಾಗಲೆಂದು ಉಚಿತ ವಿದ್ಯಾರ್ಥಿನಿಲಯದ ವಸತಿ ಪ್ರಸಾದಕ್ಕೆ ವ್ಯವಸ್ಥೆ ಮಾಡಿದ್ದರು. ಅಲ್ಲದೆ ೧೯೪೦ರಲ್ಲಿ ದೇವಣಿ ಮತ್ತು ಮಾಂಜರಾದಲ್ಲಿ ಕೂಡಾ ಸಂಸ್ಥೆಗಳು ಪ್ರಾರಂಭಿಸಿದರು. ಈ ಸಂಸ್ಥೆ ಇಂದು ಹೆಮ್ಮರವಾಗಿ ಬೆಳೆದು ನಿಂತಿದೆ.

**ಈ ಮಠದ ಅಧೀನದಲ್ಲಿ ಬೆಳೆದಿರುವ ಶಿಕ್ಷಣ ಸಂಸ್ಥೆಗಳ ವಿವರ ಹೀಗಿದೆ.**

| | |
|---|---|
| ೧. ಶಾಂತಿವರ್ಧಕ ಪ್ರೌಢ ಶಾಲೆ ಕಮಲನಗರ | ೧೯೬೩ |
| ೨. ಚೆನ್ನಬಸವೇಶ್ವರ ಮಹಾವಿದ್ಯಾಲಯ ಭಾಲ್ಕಿ | ೧೯೬೮ |
| ೩. ಅಕ್ಕಮಹಾದೇವಿ ಸಂಯುಕ್ತ ಪದವಿಪೂರ್ವ ಕಾಲೇಜು ಭಾಲ್ಕಿ | ೧೯೬೩ |
| ೪. ಅಕ್ಕಮಹಾದೇವಿ ಮಹಿಳಾ ಮಹಾವಿದ್ಯಾಲಯ ಬೀದರ | ೧೯೭೧ |
| ೫. ಶಾಂತಿವರ್ಧಕ ಪದವಿಪೂರ್ವ ಮಹಾವಿದ್ಯಾಲಯ ಕಮಲನಗರ | ೧೯೭೩ |
| ೬. ಗ್ರಾಮೀಣ ತಾಂತ್ರಿಕ ಮಹಾವಿದ್ಯಾಲಯ ಭಾಲ್ಕಿ | ೧೯೮೩ |
| ೭. ಸಿದ್ಧರಾಮೇಶ್ವರ ಪದವಿ ಮಹಾವಿದ್ಯಾಲಯ ಕಮಲನಗರ | ೧೯೮೪ |
| ೮. ಕೈಗಾರಿಕಾ ತರಬೇತಿ ಕೇಂದ್ರ ಭಾಲ್ಕಿ | ೧೯೮೪ |
| ೯. ಅಕ್ಕಮಹಾದೇವಿ ಮಹಿಳಾ ಪ್ರೌಢ ಶಾಲೆ ಬೀದರ | |
| ೧೦. ಹರಳಯ್ಯ ಪಾಲಿಟೆಕ್ನಿಕ ಕಾಲೇಜು ಭಾಲ್ಕಿ | ೧೯೯೭ |
| ೧೧. ಚನ್ನಬಸವೇಶ್ವರ ಪ್ರಾಥಮಿಕ ಶಾಲೆ ಕಮಲನಗರ | ೧೯೯೫ |
| ೧೨. ಅಕ್ಕಮಹಾದೇವಿ ಪ್ರಾಥಮಿಕ ಶಾಲೆ ಕಮಲನಗರ | ೧೯೯೫ |
| ೧೩. ಅಕ್ಕಮಹಾದೇವಿ ಪ್ರಾಥಮಿಕ ಶಾಲೆ ಬೀದರ | ೧೯೯೫ |

ಈ ಶಿಕ್ಷಣ ಸಂಸ್ಥೆಗಳ ಜೊತೆಗೆ ಇತ್ತೀಚೆಗೆ ಈ ಮಠವು ಹಿರೇಮಠ ಸಂಸ್ಥಾನ ವಿದ್ಯಾಪೀಠ ಎಂಬ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ ಅದರ ಕೆಳಗೆ ಇನ್ನೂ ಹಲವಾರು ಶಿಕ್ಷಣ ಕೇಂದ್ರಗಳನ್ನು ನಡೆಸುತ್ತಿದೆ. ಇಂದಿನ ಶ್ರೀಗಳು ಹಿರಿಯ ಅಪ್ಪನವರ ಹೆಜ್ಜೆಯಲ್ಲಿಯೇ ಹೆಜ್ಜೆಯಿಡುತ್ತಾ ಶೈಕ್ಷಣಿಕ ಸಾಧನೆಯ ಹಾದಿಯಲ್ಲಿ

ಈ ಮಠ ಸಾಗುತ್ತಿದ್ದು, ಈಗ ಈ ಮಠವು "ಹಿರೇಮಠ ಸಂಸ್ಥಾನ ವಿದ್ಯಾಪೀಠ ಟ್ರಸ್ಟ" ಸ್ಥಾಪಿಸಿ, ಅದರ ಅಡಿಯಲ್ಲಿ ಚನ್ನಬಸವ ಗುರುಕುಲ(ವಸತಿ ಶಾಲೆ) ಭಾಲ್ಕಿಯಲ್ಲಿ ಗುರುಪ್ರಸಾದ ಪ್ರಾಥಮಿಕ ಶಾಲೆ ಕಮಲನಗರ, ಎಸ್.ಎಸ್.ಬಿರಾದಾರ ಪ್ರೌಢ ಶಾಲೆ ಕಾಳಸರತೂಗಾಂವ ಮೊದಲಾದ ಶಿಕ್ಷಣ ಸಂಸ್ಥೆ ಪ್ರಾರಂಭಿಸಿದ್ದಾರೆ. ಇದರ ಜೊತೆಯಲ್ಲಿಯೇ ಭಾಲ್ಕಿಯಲ್ಲಿ ಚನ್ನಬಸವ ಗುರುಕುಲ ವಸತಿ ಶಾಲೆಯನ್ನು ತೆರೆದಿದ್ದಾರೆ. ಇಲ್ಲಿ ಎಲ್ಲಾ ಪಂಥ, ಧರ್ಮದವರಿಗೆ ಶಿಕ್ಷಣ ಪಡೆಯುವ ಅವಕಾಶವಿದೆ. ಈ ಮಠವು ಸರ್ವ ಧರ್ಮ ಸಮನ್ವಯದ ಕೇಂದ್ರವಾಗಿ ತನ್ನ (ಶೈಕ್ಷಣಿಕ)ಅಭಿವೃದ್ಧಿಯನ್ನು ಮಾಡುತ್ತಿದೆ. ಇದು ಅಲ್ಲದೆ ಈ ಮಠವು ಆಂಧ್ರದ ಕಾರಾಮುಂಗಿಯಲ್ಲಿನ ಕನ್ನಡ ಪ್ರೌಢ ಶಾಲೆಯನ್ನು ಮಹಾರಾಷ್ಟ್ರದಲ್ಲಿನ ದೇಗಲೂರದಲ್ಲಿ ಶರಣ ಶಾಂತಿವರ್ಧಕ ಶಿಕ್ಷಣ ಸಂಸ್ಥೆ ಹಾಗೂ ಹಾನಗಲ್ಲ ಕುಮಾರೇಶ್ವರ ಉಚಿತ ಪ್ರಸಾದ ನಿಲಯ ಅಭಿವೃದ್ಧಿಪಡಿಸಿ ೩೦೦ ಬಡ ವಿದ್ಯಾರ್ಥಿಗಳು ಶಿಕ್ಷಣ ಪಡೆಯುವಂತೆ ಅವಕಾಶ ಒದಗಿಸಿಕೊಡಲಾಗಿದೆ. ಹೀಗೆ ಈ ಮಠವು ತಮ್ಮ ಅಧೀನದ ಶಾಖಾಮಠಗಳನ್ನು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳಾಗುವಂತೆ ಪೂಜ್ಯರು ಶ್ರಮಿಸಿದ್ದಾರೆ.

**ಸಾಹಿತ್ಯಿಕ ಕೊಡುಗೆ.**

ಎಲ್ಲಾ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದಂತೆಯೇ ಸಾಹಿತ್ಯ ಕ್ಷೇತ್ರದಲ್ಲಿಯೂ ಸಹ ಗಣನೀಯವಾದ ಸೇವೆಯನ್ನು ಸಲ್ಲಿಸಿದೆ. ಮಠದ 'ಶಾಂತಿಕಿರಣ' ಎಂಬ ಪತ್ರಿಕೆಯನ್ನು ೧೯೭೨ರ ಡಿಸೆಂಬರ ೧ರಂದು ಪ್ರಾರಂಭಿಸಿದ್ದರು. 'ಬಸವಧರ್ಮಪ್ರಸಾರ' ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿ 'ವೈರಾಗ್ಯ ನಿಧಿ ಅಕ್ಕಮಹಾದೇವಿ' 'ಇಷ್ಟ ಲಿಂಗ ಪೂಜಾ ವಿಧಾನ' 'ಬಸವೇಶ್ವರ ಮತ್ತು ಅಂಬೇಡ್ಕರ' 'ಬಸವಣ್ಣನವರ ವಚನಗಳಲ್ಲಿ ದಲಿತ ದರ್ಶನ' 'ಶ್ರೀ ಚನ್ನಬಸವ ಪಟ್ಟದ್ದೇವರ ಜೀವನ ಚರಿತ್ರೆ' 'ಕಾಯಕ ಪರಿಣಾಮಿ' 'ವಚನ ಸಾಹಿತ್ಯ' ಹಾಗೂ 'ಚಿಂತನ ಮತ್ತು ಸಂಶೋಧನೆ' ಮುಂತಾದ ಮೂವತ್ಮೂರಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದೆ. ಬಸವೇಶ್ವರ ಮತ್ತು ಅಂಬೇಡ್ಕರ ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ.

**ಆರ್ಥಿಕ ಕೊಡುಗೆ.**

ಮಠದ ಹಲವು ಕೊಡುಗೆಗಳಲ್ಲಿ ಆರ್ಥಿಕ ಕೊಡುಗೆಯೂ ಸಹ ಒಂದಾಗಿದೆ. ಈ ಮಠದ ಸ್ವಾಮ್ಯದಲ್ಲಿರುವ ಹೊಲಗಳಲ್ಲಿ ಕ್ರಮವಾಗಿ ವ್ಯವಸಾಯ ಮಾಡಿ ದವಸ–ಧಾನ್ಯಗಳನ್ನು ಬೆಳೆಸಲಾಗುತ್ತಿದೆ. ವ್ಯವಸಾಯದಿಂದ ಬಂದ ಆರ್ಥಿಕ ಸಂಪನ್ಮೂಲಗಳು ಮಠದ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗಾಗಿ ವಿನಿಯೋಗಿಸಲಾಗುತ್ತಿದೆ. ಶ್ರೀಮಠದ ಅಸಂಖ್ಯಾತ ಸದ್ಭಕ್ತರು ನಿರಂತರ ಭಕ್ತಿಯಿಂದ ಸಲ್ಲಿಸುವ ದಾಸೋಹನಿಧಿ ವಿಧಾಯಕ ಕಾರ್ಯಗಳಿಗೆ ಸದ್ಬಳಕೆಯಾಗುತ್ತಿದೆ. ಆರ್ಥಿಕವಾಗಿ ಶ್ರೀಮಠವು ಸ್ವಾವಲಂಬಿಯಾಗುವ ನಿಟ್ಟಿನಲ್ಲಿ ಸಾಗುತ್ತಲಿರುವ ಆರೋಗ್ಯಕರ ಬೆಳವಣಿಗೆ ಕಂಡು ಬರುತ್ತಿದೆ.

**ಸ್ವಾತಂತ್ರ್ಯ ಹೋರಾಟದಲ್ಲಿ ಮಠದ ಪಾತ್ರ.**

ಹೈದ್ರಾಬಾದ ಸಂಸ್ಥಾನ ಸ್ವಾತಂತ್ರ್ಯದ ಬೆಳಕನ್ನು ಕಾಣುವ ಸಲುವಾಗಿ ನಡೆಸಿದ ಹೋರಾಟಗಳು ಅನೇಕ ರಜಾಕರರ ಹಾವಳಿ ಹೆಚ್ಚಾಗಿತ್ತು. ರಜಾಕರರ ಹಾವಳಿಯಿಂದ ತತ್ತರಿಸಿದ ಭಾಲ್ಕಿ ಪ್ರದೇಶವನ್ನು ರಕ್ಷಿಸಲು ಮಠದ ಶ್ರೀಗಳು ಶಿಕ್ಷಕರು ಇತರ ಸೇವಕ ಸಿಬ್ಬಂದಿಗಳು ಹಲವು ವಿದ್ಯಾರ್ಥಿಗಳು ಈ ಸ್ವಾತಂತ್ರ್ಯ ಹೋರಾಟದಲ್ಲಿ ತನ್ನದೇ ಆದಂಥ ಮಹತ್ವದ ಪಾತ್ರವಹಿಸಿದೆ. ಅಲ್ಲದೆ ಈ ಮಠವು ಕನ್ನಡ ನಾಡು ನುಡಿ ಮತ್ತು ಜನತೆಯ ರಕ್ಷಣೆಯ ಸಲುವಾಗಿ ಅನೇಕ ರೀತಿಯ ಹೋರಾಟಗಳನ್ನು ಮಾಡುತ್ತ ಬಂದಿದೆ.

ಆ ಅವಧಿಯಲ್ಲಿ ನಿಜಾಮ ರಾಜ್ಯದಿಂದ ಹಲವು ಕ್ರಾಂತಿವೀರರು, ಸ್ವಾತಂತ್ರ್ಯ ಹೋರಾಟಗಾರರು, ನಾಡಿನಿಂದ ಹೊರಗೆ ಪಾರಾಗಿ ಹೋದರು. ಅಲ್ಲಿ ಅವರು ರಜಾಕಾರರ ದೌರ್ಜನ್ಯವನ್ನು ಎದುರಿಸಲು ಸಂಘ ಕಟ್ಟಿಕೊಂಡರು. ಸಂಘದ ಮೂಲಕ ರಜಾಕಾರರ ದೌರ್ಜನ್ಯಗಳನ್ನು ಪರಿಹರಿಸಲು ಮಠದ ರಕ್ಷಣೆಯ ಜೊತೆಗೆ ಜನತೆ ಮತ್ತು ನಾಡಿನ ರಕ್ಷಣೆಯು ಮಾಡಲು ಮಠವು ಸ್ವಾತಂತ್ರ್ಯ ಹೋರಾಟದಲ್ಲಿ ತನ್ನದೇ ಆದ ಸ್ಥಾನಗಳನ್ನು ಉಳಿಸಿಕೊಂಡು ಬಂದಿದೆ.

**ಕರ್ನಾಟಕ ಏಕೀಕರಣದಲ್ಲಿ ಮಠದ ಪಾತ್ರ.**

ಕರ್ನಾಟಕ ಏಕೀಕಣಕ್ಕಾಗಿ ಹಾಗೂ ಗಡಿನಾಡಿನ ರಕ್ಷಣೆಗಾಗಿ ಭಾಲ್ಕಿ ಮಠವು ಕನ್ನಡ ಹೋರಾಟಗಾರರ ಪಡೆಯನ್ನೇ ನಿರ್ಮಿಸಿದ್ದರು ಅದರಲ್ಲಿ ಮೀನಕೇರಿಯ ಶ್ರೀ ವಿ.ಎಸ್.ಪಾಟೀಲ, ಶ್ರೀ ಭೀಮಣ್ಣಾ ಖಂಡ್ರೆ, ಶ್ರೀ ಆರ್.ವಿ.ಬಿಡಪ್ಪ, ಶ್ರೀ ಶಂಕರಾವ ಕಪ್ಪಿಕೇರಿ, ಗಣಪತರಾವ, ಖೂಬಾ, ಜಿ.ಬಿ.ಸಿದಬಟ್ಟೆ, ಭಾತಂಬ್ರಾದ ಇನ್ನಿತರ ಅನೇಕ ಜನರು ಭಾಗವಹಿಸಿದರು. ಇವರು ಕರ್ನಾಟಕಕ್ಕಾಗಿ ಹೋರಾಡಿದ ವೀರ ಸೇನಾನಿಗಳು ಮತ್ತು ಆ ಸಂದರ್ಭದಲ್ಲಿ ಕನ್ನಡ ಮಾತನಾಡುವ ಈ ಪ್ರದೇಶಗಳನ್ನು ಮತ್ತು ಹಳ್ಳಿಗಳನ್ನು ಕನ್ನಡ ನಾಡಿನಲ್ಲಿ ಕೂಡಿಸಬೇಕಾಗಿತ್ತು. ವಿಶೇಷವಾಗಿ ಭಾಲ್ಕಿ, ಔರಾದ, ಪ್ರದೇಶವನ್ನು ಕರ್ನಾಟಕಕ್ಕೆ ಸೇರುವಂತೆ ಬಹಳ ಪ್ರಯತ್ನ ಪಡಬೇಕಾಯಿತು. ಆ ಸಂದರ್ಭದಲ್ಲಿ ಮಹಾರಾಷ್ಟ್ರ ವರ್ಗೀಕರಣ ಸಮಿತಿಯವರು ಔರಾದ ಮತ್ತು ಭಾಲ್ಕಿಯನ್ನು ಕೂಡಿಸಬೇಕೆಂದು ಶತಪ್ರಯತ್ನ ಪಟ್ಟರು. ಆದರೆ ಪಟ್ಟದ್ದೇವರು ಹಾಗೂ ಅವರ ಶಿಷ್ಯರಿಂದ ಕನ್ನಡ ಭಾಷೆಯ ಅಭಿಮಾನ ಬೆಳೆಸಿ ಕೇಂದ್ರ ಸರಕಾರಕ್ಕೆ ಕನ್ನಡಿಗರ ಬಹುಮತವನ್ನು ತೋರಿಸಿದರು. ಇದಕ್ಕಾಗಿ ಅನೇಕ ಸಭೆ ಮತ್ತು ಸಮ್ಮೇಳನಗಳನ್ನು ಏರ್ಪಡಿಸಿದರು ಭಾಲ್ಕಿ ಮತ್ತು ಮೋರ್ಗಿಯಲ್ಲಿ ಕರ್ನಾಟಕ ಏಕೀಕರಣದ ಸಲುವಾಗಿ ಸಮ್ಮೇಳನಗಳಾದವು.

ಕರ್ನಾಟಕ ಕ್ರಿಯಾ ಸಮಿತಿ ರಚಿಸಿ ಹೋರಾಟ ಮಾಡಿದರು. ಅದರ ಅಧ್ಯಕ್ಷರಾದ ಆರ್.ವಿ. ಬಿಡಪ್ಪನವರು, ಉಪಾಧ್ಯಕ್ಷರಾದ ಭೀಮಣ್ಣ ಖಂಡ್ರೆ, ಕಾರ್ಯದರ್ಶಿ ವಿ.ಎನ್.ಪಾಟೀಲರು ಕರ್ನಾಟಕ ಯುವ ಸಂಘಗಳು ಅಲ್ಲಲ್ಲಿ ತಲೆಯೆತ್ತಿದ್ದವು ಅನೇಕ ಹಬ್ಬಗಳು, ನಾಡ ಹಬ್ಬಗಳನ್ನು ಸಂಯೋಜಿಸಿದ ಹಿರಿಮೆ ದಿ.ಪ್ರಭುರಾವ ವಕೀಲರಿಗೆ ಸಲ್ಲುತ್ತದೆ. ದಿಲ್ಲಿಯವರೆಗೆ ಈ ಏಕೀಕರಣದ ಸಲುವಾಗಿ ಭಾರತದ ಪ್ರಧಾನ ಮಂತ್ರಿ ನೆಹರು ಅವರನ್ನು ಭೇಟಿಯಾಗಿ ಚರ್ಚಿಸಿ ಬಂದರು.

ಫಝಲ್ ಅಲಿ ಕಮೀಷನ್ ಪ್ರಕಾರ ಬೀದರ ಜಿಲ್ಲೆಯು ಸಂಪೂರ್ಣ ಆಂಧ್ರಪ್ರದೇಶದಲ್ಲಿ ಸೇರಿಸಲಾಗಿತ್ತು. ಇದರ ವಿರೋಧವಾಗಿ ಭಾಲ್ಕಿ ಪಟ್ಟದ್ದೇವರು ಬಹಳ ಪರಿಶ್ರಮಪಟ್ಟರು. ಆ ಸಂದರ್ಭದಲ್ಲಿ ಭಾಲ್ಕಿ ಪೂಜ್ಯರು ಉಗ್ರ ಕನ್ನಡ ಹೋರಾಟಗಾರರಾದ ಬಳ್ಳಾರಿ ವೀರಭದ್ರಪ್ಪ ಅವರನ್ನು ಕರೆಸಿ ಜಿಲ್ಲಾದ್ಯಂತ ತಿರುಗಾಡಿಸಿ ಪ್ರತಿಭಟನಾ ಚಳುವಳಿಯನ್ನು ಹೂಡಿದರು. ಹೈದ್ರಾಬಾದ ಸರ್ಕಾರಕ್ಕೆ ಕನ್ನಡ ಮಾತನಾಡುವ ಪ್ರದೇಶಗಳನ್ನು ಕರ್ನಾಟಕದಲ್ಲಿ ಸೇರಿಸಬೇಕೆಂದು ನಿವೇದಿಸಿಕೊಂಡರು.

ಕರ್ನಾಟಕದ ಏಕೀಕರಣ ಕನ್ನಡ ಭಾಷೆಯ ಪುನರ್ ಉದಯಕ್ಕಾಗಿ ತಮ್ಮ ಜೀವನವನ್ನೇ ಮುಡುಪಿಟ್ಟು ಸ್ವಾಮಿಗಳು ಹಾಗೂ ಅವರ ಶಿಷ್ಯರು ಕರ್ನಾಟಕದಲ್ಲಿ ವಿಶೇಷವಾಗಿ ಬೀದರ ಜಿಲ್ಲೆಯಾದ್ಯಂತ ಕನ್ನಡ ಭಾಷೆ ಪ್ರಚಾರ ಗೈದರು. ಇವರು ಪರಿಶ್ರಮಿಸದೆ ಇದ್ದರೆ, ಬೀದರ ಜಿಲ್ಲೆಯ ಬಹುತೇಕ ಭಾಗಗಳು ಮಹಾರಾಷ್ಟ್ರದಲ್ಲಿ ಸೇರುತ್ತಿದ್ದವು. ಬೀದರ ಜಿಲ್ಲೆಯಲ್ಲಿ ಕನ್ನಡ ಬಾವುಟವನ್ನು ಹಾರಿಸಿದ ಕೀರ್ತಿ ಇವರಿಗೆ ಹಾಗೂ ಇವರ ಶಿಷ್ಯರ ಪಡೆಗೆ ಸೇರುತ್ತದೆ. ಈ ಮಠವು ಭಾಲ್ಕಿ ಪ್ರದೇಶದಲ್ಲಿ ಸ್ವಾತಂತ್ರ ್ಯಯ ಮತ್ತು ರಾಷ್ಟ್ರೀಯ ಭಾವನೆ ಬೆಳೆಸುವಲ್ಲಿ ಅತ್ಯಮೂಲ್ಯವಾದ ಪಾತ್ರ ವಹಿಸಿದೆ. ಅಲ್ಲದೇ ಕರ್ನಾಟಕ ಏಕೀಕರಣದಲ್ಲಿ ತನ್ನದೇ ಆದ ನಿಟ್ಟಿನಲ್ಲಿ ವಿಶೇಷ ರೀತಿಯ ಕೊಡುಗೆ ಕೊಡುವಲ್ಲಿ ಈ ಮಠದ ಸಾಧನೆಯು ಗಣನೀಯವಾಗಿದೆ.

**ಕಲೆ ಮತ್ತು ಸಂಗೀತ ಕ್ಷೇತ್ರದಲ್ಲಿ ಈ ಮಠದ ಕೊಡುಗೆ.**

ಕಲೆ ವಾಸ್ತುಶಿಲ್ಪ ಮತ್ತು ಸಂಗೀತಕ್ಕೆ ಮಠವು ತನ್ನದೇ ಆದ ಕೊಡುಗೆ ಸಲ್ಲಿಸುತ್ತ ಬಂದಿದೆ. ಈ ಮಠದ ಭವ್ಯ ಕಟ್ಟಡವನ್ನು ನೋಡಿದಾಗ ಇಲ್ಲಿ ಕಲಾತ್ಮಕ ದೃಷ್ಟಿ ಮತ್ತು ಒಲವು ಎತ್ತಿ ತೋರಿಸುತ್ತದೆ ಈ ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಇದು ತನ್ನದೇ ಆದ ಮೆರುಗು ಎತ್ತಿ ಹಿಡಿಯುತ್ತದೆ. ಈ ಮಠದ ವಿನ್ಯಾಸವನ್ನು ನೋಡಿದಾಗ ಷಟಸ್ಥಲಾಕಾರವಾಗಿದ್ದು ಈ ಮಠದ ಮೇಲೆ ಲಿಂಗಕೃತಿಯಿದ್ದು ಭವ್ಯವಾದ ದ್ವಾರಬಾಗಿಲು ಹೊಂದಿದೆ ಸುತ್ತುವರೆದ ಕೋಟೆ ಈ ಮಠದ ಭವ್ಯತೆಗೆ ಇನ್ನಷ್ಟು ಮೆರಗು ತಂದುಕೊಡುತ್ತದೆ. ಭಾಲ್ಕಿ ಮಠವಲ್ಲದೆ ಇದರ ಶಾಖಾ ಮಠಗಳ ಕಲೆ ಮತ್ತು ವಾಸ್ತುಶಿಲ್ಪಗಳನ್ನು ವಿವರವಾಗಿ ಅಭ್ಯಸಿಸಿ ನನ್ನ ಮಹಾಪ್ರಬಂಧದಲ್ಲಿ ಮಂಡಿಸುತ್ತೇನೆ.

ಕಲೆ ಮತ್ತು ವಾಸ್ತುಶಿಲ್ಪದ ಜೊತೆಗೆ ಸಂಗೀತ ಆಸಕ್ತಿಯು ಸಹ ಇಲ್ಲಿಯ ಒಂದು ಮೇರು ಸಾಧನೆಯಾಗಿದೆ. ಅನೇಕ ಶಾಖಾ ಮಠಗಳಲ್ಲಿ ಸಂಗೀತ ಕಛೇರಿಗಳು ನಡೆಸಿದ ಉದಾಹರಣೆಗಳು ನಮಗೆ ಸಿಗುತ್ತವೆ. ಜೊತೆಗೆ ಮಠದ ಅಧೀನ ವಿದ್ಯಾಸಂಸ್ಥೆಗಳಲ್ಲಿಯು ಸಹ ಸಂಗೀತ ಅಭ್ಯಾಸ ರೂಢಿಯಲ್ಲಿದೆ. ಮಠದ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಅನೇಕ ಸುಪ್ರಸಿದ್ಧ ಸಂಗೀತಗಾರರಿಂದ ಸಂಗೀತ ಕಛೇರಿಗಳನ್ನು ನಡೆಸುತ್ತಾರೆ. ಬೀದರ ಜಿಲ್ಲೆ ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ತುಂಬ ಶ್ರೀಮಂತ ಜಿಲ್ಲೆಯಾಗಿದ್ದು, ಆರ್ಥಿಕ, ಸಾಮಾಜಿಕ ದೃಷ್ಟಿಯಿಂದ ಕರ್ನಾಟಕದಲ್ಲಿಯೇ ಹಿಂದುಳಿದ ಈ ಜಿಲ್ಲೆಯ ಆಧ್ಯಾತ್ಮಿಕ ರಂಗದಲ್ಲಿ ಅತ್ಯಂತ ಮುಂದುವರೆದುದ್ದಾಗಿದೆ. ೧೨ನೇ ಶತಮಾನದ ಅಭೂತ ಪೂರ್ವವಾದ ರಾಜಕೀಯ, ಸಾಮಾಜಿಕ, ಆಧ್ಯಾತ್ಮಿಕ ಕ್ರಾಂತಿಯೆಸಗಿದ ಬಸವಾದಿ ಶರಣರ ಕಾರ್ಯಕ್ಷೇತ್ರ ಬೀದರ ಜಿಲ್ಲೆಯ ಬಸವಕಲ್ಯಾಣವಾಗಿದೆ.

**ಉಪಸಂಹಾರ.**

೧೨ನೇ ಶತಮಾನದಲ್ಲಿ ಪುನರುಜ್ಜೀವನ ಪಡೆದು ನಾಡಿನಾದ್ಯಂತ ಹರಡಿ, ಶರಣ–ಶರಣೆಯರು ಗತಿಸಿದ ಪುಣ್ಯ ಸ್ಥಳಗಳೇ ಮುಂದೇ ಮಠಗಳಾಗಿ ಧಾರ್ಮಿಕ ಸಂಸ್ಥೆಗಳಾಗಿ ಬೆಳೆಯ ತೊಡಗಿದವು. ಕಾಯಕವೇ ಕೈಲಾಸ ಎಂಬ ಉದಾತ್ತ ತತ್ವವನ್ನು ಕಲ್ಯಾಣ ನಾಡಿನ ಅಣು ಅಣುವಿನಲ್ಲಿಯೂ ಬಿತ್ತಿದ ಏಕತೆಯ ಬೀಜದ ಅಂದಿನ ಮೊಳಕೆಯನ್ನು ಕನಸು ಮಾಡಿ ಹೆಮ್ಮೆರವಾಗಿಸಿ, ಉಳಿಸಿ, ಬೆಳೆಸಿದ ಕೀರ್ತಿ ಈ ಮಠದ್ದಾಗಿದೆ. ಈ ಮಠವು ೨೦ನೇ ಶತಮಾನದಲ್ಲಿ ಇಡೀ ಜನ ಜೀವಿಗಳು ಅಮೂಲ್ಯ ರತ್ನದ ಬೆಳಗಿನಲ್ಲಿ ಮಿಂದು ಮಡಿಯುಟ್ಟು ಧನ್ಯರಾಗುತ್ತಿದ್ದಾರೆ.

ಇಂಥಹ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಬದಲಾವಣೆಯನ್ನು ಪ್ರಗತಿಯ ಮಾರ್ಗದತ್ತ ಕೊಂಡೋಯ್ಯುವಲ್ಲಿ ಈ ಮಠ ತನ್ನದೇ ಆದ ವೈಶಿಷ್ಟ್ಯತೆಯನ್ನು ತೋರಿಸಿದೆ. ಅಲ್ಲದೆ ೧೨ನೇ ಶತಮಾನದ ಭಕ್ತಿ ಭಂಡಾರಿ ಬಸವಣ್ಣ ಜಗದೊಡೆಯನಾದರೆ ೨೦ನೇ ಶತಮಾನದ ಬಸವಣ್ಣನೆನಿಸಿಕೊಂಡ ಚನ್ನಬಸವ ಪಟ್ಟದ್ದೇವರು ವಿನಯ ಭಂಡಾರಿಗಳಾಗಿದ್ದಾರೆ. ಅಲ್ಲದೆ ಇವರು ಕಲ್ಯಾಣ ನಾಡಿನ ಭಕ್ತರ ಮನದ ಒಡೆಯರಾಗಿದ್ದಾರೆ. ಇವರ ಸೇವೆಯಿಂದಾಗಿ ಕಲ್ಯಾಣ ನಾಡಿನ ಎಲ್ಲಾ ದಿಕ್ಕುಗಳಿಗೂ ದೀವಿಗೆಯನ್ನು ಹಿಡಿದು ಅಜ್ಞಾನದ ಅಂಧಕಾರವನ್ನು ಹೊಡೆದೋಡಿಸಿದರು ಅದಕ್ಕಂತಲೇ "ಚೆನ್ನನು ನಡೆದಾಡಿದ ಈ ಕಲ್ಯಾಣ ನಾಡೇ ಕೈಲಾಸವಯ್ಯ" ಆದ್ದರಿಂದ ಇಂತಹ ಸಾಮಾಜಿಕ ಪರಿವರ್ತನೆಯನ್ನು ಮಾಡಿಕೊಂಡು ಬಂದ ಈ ಮಠವು ಶ್ರೇಷ್ಠ ಸ್ಥಾನ ಹೊಂದಿದೆ. ಮಠಗಳು ಜೀವಂತವಾಗಿದ್ದರೆ ಬಸವ ಸಂಸ್ಕೃತಿ ಜೀವಂತವಾಗಿರುತ್ತದೆ ಮತ್ತು ನಿಷ್ಠಾವಂತ ಸಮಾಜ ಉಳಿಯುತ್ತದೆ.



# ಬೀದರ : ಶೈಕ್ಷಣಿಕ ಕೇಂದ್ರಗಳಾಗಿ ಖಾನ್‌ಕಾ.

**–ಡಾ. ರಘುಶಂಖ ಭಾತಂಬ್ರಾ,**
'ಬಸವಾಶ್ರಯ' ಪ್ಲಾಟ್ ಸಂಖ್ಯೆ ೧೪–೧೫
ಮುಕ್ತಿಧಾಮ ರಸ್ತೆ, ಮಾಧವನಗರ, ಬೀದರ.

ಜ್ಞಾನವನ್ನು ಪಡೆದುಕೊಳ್ಳುವುದು ಮತ್ತು ಜ್ಞಾನದ ಬೆಳಕನ್ನು ಹರಡುವುದು ಇಸ್ಲಾಮಿಕ್ ಶಿಕ್ಷಣದ ಗುರಿ, ಉದ್ದೇಶವಾಗಿತ್ತು. ಮುಹಮ್ಮದ್‌ರ ಪ್ರಕಾರ "ಜ್ಞಾನವು ಮಕರಂದ. ಅದನ್ನು ಆಘ್ರಾಣಿಸುವುದು. ಶಿಕ್ಷಣವಿಲ್ಲದೆ ಮೋಕ್ಷ ಅಸಾಧ್ಯ. ವಿದ್ವಾಂಸನ ಶಾಯಿ ಹುತಾತ್ಮರ ರಕ್ತಕ್ಕಿಂತಲೂ ಹೆಚ್ಚು ಪವಿತ್ರ"ವಾಗಿದೆ. ಈ ಹಿನ್ನೆಲೆಯಲ್ಲಿ ಮುಸ್ಲಿಮ್‌ರ ಶಿಕ್ಷಣದ ಉದ್ದೇಶಗಳು ಸಂಪೂರ್ಣವಾಗಿ ಬೌದ್ಧಿಕವಾಗಿದ್ದವು. ಇದು ಜ್ಞಾನವೃದ್ಧಿಗೆ, ಮಾನಸಿಕ ಪರಿವರ್ತನೆಗೆ, ಆಧ್ಯಾತ್ಮಿಕ ತರಬೇತಿಗೆ ಪೂರಕ. ಮುಹಮ್ಮದ್ ಪೈಗಂಬರ್‌ರಂಥ ಶ್ರೇಷ್ಠ ವ್ಯಕ್ತಿಗಳ ಆಜ್ಞೆಗಳನ್ನು ಅನುಸರಿಸಿ, ಇಸ್ಲಾಮ್ ಧರ್ಮವನ್ನು ಪ್ರಚಾರ ಮಾಡುವುದು. ಇಸ್ಲಾಮ್ ಪ್ರಸಾರಕ್ಕೆ ಸಹಕರಿಸುವುದು ತಮ್ಮ ಆದ್ಯ ಕರ್ತವ್ಯವೆಂದು ಧಾರ್ಮಿಕ ಮುಖಂಡರು ಭಾವಿಸಿದ್ದರು. ಇಸ್ಲಾಮಿಕ್ ಶಿಕ್ಷಣವನ್ನು ಮಕ್ತಾಬ್, ಖಾನ್‌ಕಾ, ಮದರಸಾ ಮತ್ತು ಮಸೀದಿಗಳ ಮೂಲಕ ನೀಡಲಾಗುತ್ತಿತ್ತು. ಮಕ್ತಾಬ್‌ಗಳು ಮಸೀದಿಗಳಿಗೆ ಅಧೀನವಾಗಿದ್ದವು. ಶಿಕ್ಷಣದ ಬಗ್ಗೆ ಕಾಳಜಿ ಉಳ್ಳವರು ನೀಡುತ್ತಿದ್ದ ಅನುದಾನದಿಂದ ಮಕ್ತಾಬ್‌ಗಳು ಶೈಕ್ಷಣಿಕ ಪ್ರಸಾರದ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಸಾಮಾನ್ಯ ವರ್ಗದ ಮಕ್ಕಳ ಕಲಿಕೆಗೆ ಮಕ್ತಾಬ್‌ಗಳು ತೆರೆದ ಬಾಗಿಲುಗಳಾಗಿದ್ದವು. ಮಗುವಿಗೆ ನಾಲ್ಕು, ನಾಲ್ಕು ತಿಂಗಳು, ನಾಲ್ಕು ದಿನ ತುಂಬಿದಾಗ ಅಕ್ಷರಾಭ್ಯಾಸ ಪ್ರಾರಂಭಿಸುವ 'ಬಿಸ್ಮಿಲ್ಲಾಹ ವಿಧಿ' ರೂಢಿಯಲ್ಲಿತ್ತು.

ಮಕ್ತಾಬ್‌ಗಳ ನಂತರದಲ್ಲಿ ಶಿಕ್ಷಣ ನೀಡುವ ಜವಾಬ್ದಾರಿಯನ್ನು ಖಾನ್‌ಕಾಗಳು ನಿಭಾಯಿಸುತ್ತಿದ್ದವು. ಖಾನ್‌ಕಾ ಎಂದರೆ ಧರ್ಮಶಾಲೆಗಳು, ಸೂಫಿಗಳು ವಾಸ ಮಾಡುತ್ತಿದ್ದ ಸ್ಥಳಗಳು ಎಂದರ್ಥ. ಇವು ಸೂಫಿಸಂತರಿಂದ ಮನ್ನಣೆಗೆ ಪಾತ್ರವಾದವು. ವಿವಿಧ ಧರ್ಮಗಳಿಗೆ ಸೇರಿದ, ವಿವಿಧ ಭಾಷೆಗಳನ್ನಾಡುತ್ತಿದ್ದ ಜನರು ಸಂಧಿಸುವ ಸ್ಥಳಗಳಾದವು. ಖಾನ್‌ಕಾಗಳಲ್ಲಿ ಸೇರುತ್ತಿದ್ದ ಅನುಭಾವಿಗಳು ಸಾಮಾಜಿಕ ಸಾಮರಸ್ಯ ಮತ್ತು ಮಾನವೀಯ ಸಂವೇದನೆಗಳಿಗೆ ಮಾದರಿಯಾದರು.

ಬಹಮನಿ ರಾಜ್ಯದ ಸ್ಥಾಪಕನಾದ ಅಲ್ಲಾವುದ್ದೀನ್ ಬಹಮನ್ ಶಾಹ ಸೂಫಿತತ್ವ ಮತ್ತು ಸೂಫಿಗಳಿಗೆ ಬಹಳಷ್ಟು ಮನ್ನಣೆ ನೀಡಿದನು. ಅವನಿಂದಾಗಿಯೇ ಸೂಫಿಪಂಥವು ದಕ್ಷಿಣ ಭಾರತದಲ್ಲಿ ಭದ್ರವಾದ ನೆಲೆಯೂರಿತು. ಶಾಹನಿಗೆ ಶೇಖ್ ಆಲ್ ಇಜಾಮುದ್ದೀನ್ ಔಲಿಯಾ, ಶೇಖ್ ಬರ್ಹಾನುದ್ದೀನ್ ಘಾರಿಬ್, ಶೇಖ್ ಐನುದ್ದೀನ್ ಬಿಜಾಪುರಿ, ಮತ್ತು ಶೇಖ್ ಸಿರಾಜುದ್ದೀನ್ ಜುನ್ನೈದಿ ಇವರ ಬಗೆಗೆ ಅಪಾರ ಗೌರವವಿತ್ತು. ಅದೇ ರೀತಿ ೧ನೆಯ ಸುಲ್ತಾನ್ ಮುಹಮ್ಮದ್ (೧೩೫೮–೭೫), ಅಹಮದ್ ಶಾಹವಲಿ (೧೪೨೨–೩೬), ೨ನೇ ಅಲ್ಲಾವುದ್ದೀನ್ ಅಹಮದ್ (೧೪೩೬–೫೮), ಅಲ್ಲಾವುದ್ದೀನ್ ಹುಮಾಯೂನ್ ಶಾಹ (೧೪೫೮–೬೧) ಮೊದಲಾದ ಸುಲ್ತಾನ್‌ರು ಸೂಫಿಗಳಿಗೂ ಅವರ ಖಾನ್‌ಕಾಗಳಿಗೆ ಮನ್ನಣೆ ನೀಡಿದ್ದರು. ಮುಖ್ಯವಾಗಿ ಸುಲ್ತಾನರು ಖಾನ್‌ಕಾ ಸ್ಥಾಪನೆಗೆ ಜಹಗೀರಿ (ಭೂಮಿ) ನೀಡುತ್ತಿದ್ದರು. ಶ್ರೀಮಂತ ವ್ಯಾಪಾರಿಗಳು, ಪ್ರವಾಸಿಗಳು ನೀಡುತ್ತಿದ್ದ ಅನುದಾನದಿಂದ ಖಾನ್‌ಕಾಗಳು ಶಿಕ್ಷಣ ನೀಡುವ ದಿಶೆಯಲ್ಲಿ ತಮ್ಮ ಕರ್ತವ್ಯ ನಿರ್ವಹಿಸುತ್ತಿದ್ದವು.

ಬಹಮನಿ ಸುಲ್ತಾನರ ಕಾಲದಲ್ಲಿದ್ದ ಎಂಟು ಖಾನ್‌ಕಾಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ ೧. ಹಜರತ್ ಶೇಖ್ ನೂರ್ ಸಮ್ನಾನಿ ಖಾನ್‌ಕಾ ೨. ಹಜರತ್ ಶಾಹ ಅಬುಲ್ ಫಯಾಜ್ ಖಾನ್‌ಕಾ ೩. ಹಜರತ್ ಶಾಹ ವಲಿಯುಲ್ಲಾ ಅಲ್ ಹುಸೇನಿ ಖಾನ್‌ಕಾ ೪. ಶಾಹ ಅಲಿ ಹುಸೇನಿ ಕುತುಬ್ ಖಾನ್‌ಕಾ ೫. ಮಹಬೂಬ್ ಸುಭಾನಿ ಬಡಿ ಖಾನ್‌ಕಾ ೬. ಮಹಬೂಬ್ ಸುಭಾನಿ ಚೋಟಿ ಖಾನ್‌ಕಾ ೭. ಮಕ್ದುಮ್ ಖಾದರಿ ಖಾನ್‌ಕಾ ೮. ಮಿನ್ನತ್ ಉಲ್ಲಾಹ್ ಬಿ ಸಾಹಿಬಾ ಖಾನ್‌ಕಾ.

**ಹಜರತ್ ನೂರ್ ಸಮ್ನಾನಿ ಖಾನ್‌ಕಾ.**

ಪರ್ಷಿಯಾದ ಸಮ್ನಾನ್ ಪ್ರದೇಶದಿಂದ ಬೀದರಗೆ ಆಗಮಿಸಿದ್ದ ಹಜರತ್ ನೂರ್ ಸಮ್ನಾನಿ ಅವರು ಆರಂಭಿಸಿದ್ದ ಖಾನ್‌ಕಾವು ಚೌಬಾರ ರಸ್ತೆಯಲ್ಲಿರುವ ಸಿದ್ಧಿಕ್ ತಾಲೀಮ್ ಸಮೀಪದಲ್ಲಿದೆ. ಈ ಕಟ್ಟಡವು ಸಭಾಂಗಣ, ಕೆಲವು ಕೊಠಡಿಗಳನ್ನೊಳಗೊಂಡಿದೆ. ಇದು ಕಾಲಕಾಲಕ್ಕೆ ಇದು ಬದಲಾವಣೆ ಹೊಂದಿದ್ದು ಬಹಮನಿ ವಾಸ್ತುಶಿಲ್ಪ ಪರಂಪರೆಗೆ ಸೇರಿದ್ದಾಗಿದೆ. ಇದರ ಆವರಣದಲ್ಲಿರುವ ಅಲವಿ ಮಸೀದಿಯನ್ನು ಕ್ರಿ.ಶ. ೧೬೬೨ರಲ್ಲಿ ಮಿಯಾನ್ ಯಾದ್ಗಾರ್ ನಿರ್ಮಿಸಿದ್ದಾನೆ. ಹಜರತ್ ನೂರ್ ಸಮ್ನಾನಿಯವರು ಮದರಸಾದಲ್ಲಿ ಪರ್ಶಿಯನ್ ಭಾಷೆಯ ಉಪಾಧ್ಯಾಯರಾಗಿದ್ದರು. ಹಜರತ್ ನೂರ್ ಸಮ್ನಾನಿ ಹಾಗೂ ಅವರ ಜೊತೆಯಲ್ಲಿ ಬೀದರಗೆ ಆಗಮಿಸಿದವರಿಂದ ಮೊದಲ ಬಾರಿಗೆ ಬೀದರನಲ್ಲಿ ಬಿರಯಾನಿ ತಯಾರಿಸುವ ಪದ್ಧತಿ ಚಾಲ್ತಿಗೆ ಬಂದಿತ್ತೆಂದು ಹಿರಿಯರಾದ ಸಮದ್ ಭಾರತಿ ತಿಳಿಸಿದ್ದಾರೆ.

**ಹಜರತ್ ಶಾಹ ಅಬುಲ್ ಫಯಾಜ್‌ರ ಖಾನ್‌ಕಾ.**

ಖ್ವಾಜಾ ಬಂದೇ ನವಾಜ್ ಅವರ ಮೊಮ್ಮಗನಾದ ಹಜರತ್ ಶಾಹ ಅಬುಲ್ ಫಯಾಜ್‌ರು ಪ್ರಾರಂಭಿಸಿದ ಖಾನ್‌ಕಾವು ಚೌಬಾರದಿಂದ ಮಂಗಲಪೇಟ್ ದರ್ವಾಜ್‌ಗೆ ಹೋಗುವ ಮಾರ್ಗದಲ್ಲಿದೆ. ಬಹಮನಿ ಶೈಲಿಯ ಈ ಕಟ್ಟಡವು ಹಲವಾರು ಕೋಣೆಗಳನ್ನು, ವಿಶಾಲವಾದ ಸಭಾಂಗಣ ಹೊಂದಿದೆ. ಕಾಲಕಾಲಕ್ಕೆ ಇದು ಬದಲಾವಣೆಯನ್ನು, ನವೀಕರಣಕ್ಕೊಳಗಾಗಿದೆ. ಈ ಖಾನ್‌ಕಾದಲ್ಲಿ ಹಜರತ್ ಫರಿದುದ್ದೀನ್ ಶಕಾರಗಂಜ್ ಅವರ ಪೋಷಾಕು, ಖ್ವಾಜಾ ಬಂದೇ ನವಾಜ್‌ರು ಧರಿಸುತ್ತಿದ್ದರು ಎನ್ನಲಾದ ಟೊಪ್ಪಿಗೆಯನ್ನು ಸಂರಕ್ಷಿಸಿಡಲಾಗಿದೆ.

**ಹಜರತ್ ಶಾಹ ವಲಿಯುಲ್ಲಾ ಅಲ್ ಹುಸೇನಿ ಖಾನ್‌ಕಾ.**

ಅಬುಲ್ ಫಯಾಜ್ ಖಾನ್‌ಕಾ ಎದುರುಗಡೆಯಿರುವ 'ಹಜರತ್ ಶಾಹ ವಲಿಯುಲ್ಲಾ ಅಲ್ ಹುಸೇನಿ ಖಾನ್‌ಕಾ' ಬಹಮನಿಗಳ ಕಾಲದಲ್ಲಿ ಪ್ರಸಿದ್ಧವಾಗಿತ್ತು. ಈ ಖಾನ್‌ಕಾದಲ್ಲಿ ಪ್ರವಾದಿ ಮಹಮ್ಮದರ ಅಳಿಯ ಹಜರತ್ ಅಲಿಯವರ ಹಸ್ತಾಕ್ಷರ ಎಂದು ನಂಬಲಾಗಿರುವ ಜಿಂಕೆಯ ಚರ್ಮದ ಮೇಲೆ ಬರೆಯಲ್ಪಟ್ಟ ಕುರಾನ್‌ನ ಹಸ್ತಪ್ರತಿ ಇದೆ.

**ಶಹಾ ಅಲಿ ಹುಸೇನಿ ಕುತುಬ್ ಖಾನ್‌ಕಾ.**

ಖ್ವಾಜಾ ಅಬುಲ್ ಫೈಜ್‌ರ ಮೊಮ್ಮಗ ಸ್ಥಾಪಿಸಿದ 'ಶಹಾ ಅಲಿ ಹುಸೇನಿ ಕುತುಬ್ ಖಾನ್‌ಕಾ'ವು ಹಜರತ್ ಶಾಹ ವಲಿಯುಲ್ಲಾ ಅಲ್ ಹುಸೇನಿ ಖಾನ್‌ಕಾದ ಸಮೀಪದಲ್ಲಿದೆ. ಬಹಮನಿ ಮತ್ತು ಬರೀದಶಾಹಿ ಅರಸರ ವಾಸ್ತುಶೈಲಿಯ ಈ ಖಾನ್‌ಕಾವು ಗಮನ ಸೆಳೆಯುತ್ತದೆ. ಮಹಮ್ಮದ್ ಪೈಗಂಬರ್‌ರ ಕೂದಲು ಹಾಗೂ ಮಗಳು ಫಾತಿಮಾ ಧರಿಸುತ್ತಿದ್ದ ಘುಂಗಟ್‌ನ ಅವಶೇಷಗಳು ಮತ್ತು ಹಜರತ್

ಅಲಿಯವರ ಹಸ್ತಾಕ್ಷರದ ಖುರಾನಿನ ಕೆಲವು ಭಾಗಗಳು ಈ ಖಾನ್‌ಕಾದಲ್ಲಿವೆ ಎಂದು ಸಮದ್ ಭಾರತಿ ತಿಳಿಸಿದ್ದಾರೆ. ನಿರ್ವಹಣೆಯಿಂದ ವಂಚಿತವಾಗಿರುವ ಈ ಖಾನ್‌ಕಾ ದುಸ್ಥಿತಿಯಲ್ಲಿದೆ.

**ಮಹಬೂಬ್ ಸುಭಾನಿ ಬಡಿ ಖಾನ್‌ಕಾ.**

ಖಾದರಿಯಾ ಸೂಫಿ ಪರಂಪರೆಗೆ ಸೇರಿದ 'ಮಹಬೂಬ್ ಸುಭಾನಿ ಬಡಿ ಖಾನ್‌ಕಾ'ವು ಬಹಮನಿ ಸುಲ್ತಾನರ ಕಾಲದಲ್ಲಿ ಧಾರ್ಮಿಕ ಶಿಕ್ಷಣ ನೀಡುವ ಪ್ರಸಿದ್ಧ ಕೇಂದ್ರವಾಗಿತ್ತು. ಇದು ಗವಾನ್ ಚೌಕ್‌ದ ಪೂರ್ವ ದಿಕ್ಕಿನಲ್ಲಿದೆ. ಭವ್ಯವಾದ ಕಮಾನಿನ ದ್ವಾರ ಹೊಂದಿರುವ ಈ ಕಟ್ಟಡವನ್ನು ಫಿರೋಜ್ ಖಾನ್ ನಿರ್ಮಿಸಿದನೆಂದು ಗೊತ್ತಾಗುತ್ತದೆ. ಈ ಖಾನ್‌ಕಾ ಆವರಣದಲ್ಲಿ ಸಣ್ಣ ಕೋಣೆಗಳು, ಸಭಾಂಗಣ, ಮಸೀದಿ ಇದೆ. ಈ ಖಾನ್‌ಕಾದ ಆವರಣದಲ್ಲಿರುವ ಮಸೀದಿಯನ್ನು ಕ್ರಿ.ಶ. ೧೬೪೫ರಲ್ಲಿ ಅಹ್ಮದ್ ಖಾನ್ ಕಸಗಿ ನಿರ್ಮಿಸಿದ್ದಾನೆಂದು ಮಸೀದಿಯಲ್ಲಿರುವ ಶಾಸನ ತಿಳಿಸುತ್ತದೆ. ಮಸೀದಿಯಲ್ಲಿ ಹಾಲ್, ಕೋಣೆಗಳಿವೆ.

**ಮಹಬೂಬ್ ಸುಭಾನಿ ಚೋಟಿ ಖಾನ್‌ಕಾ.**

ಅಕ್ಮಲ್ ಪಾಶಾ ಖಾನ್‌ಕಾದ ನೈರುತ್ಯ ದಿಕ್ಕಿನಲ್ಲಿ; ಬಡಿ ಖಾನ್‌ಕಾ ಸಮೀಪದಲ್ಲಿ 'ಮಹಬೂಬ್ ಸುಭಾನಿ ಚೋಟಿ ಖಾನ್‌ಕಾ' ಇದೆ. ಖಾನ್‌ಕಾದ ಮುಖ್ಯ ಸಭಾಂಗಣವು ೨೦x೨೦ ಅಡಿಗಳಷ್ಟು ವಿಸ್ತೀರ್ಣವಾಗಿದೆ. ಸಭಾಂಗಣದ ಎರಡೂ ಬದಿಯಲ್ಲಿ ಒಂದೊಂದು ಕೋಣೆ ಇದೆ. ಈ ಖಾನ್‌ಕಾದಲ್ಲಿರುವ ಪರ್ಶಿಯನ್, ಅರೇಬಿಕ್ ಭಾಷೆಯ ಶಾಸನದ ಪ್ರಕಾರ ಇದರ ಸ್ಥಾಪಕ ಫಿರೋಜ್‌ಖಾನ್.

**ಮಖ್ದುಮ್ ಖಾದರಿ ಖಾನ್‌ಕಾ.**

'ಮಖ್ದುಮ್ ಖಾದರಿ ಖಾನ್‌ಕಾ'ವು ಮದರಸಾ ಮತ್ತು ದುಲ್ಹನ್ ದರ್ವಾಜ್ ರಸ್ತೆಯಲ್ಲಿದೆ. ಖಾದರಿಯಾ ಪರಂಪರೆಗೆ ಸೇರಿದೆ. ಐದು ಕಮಾನುಗಳ ಪ್ರವೇಶದ್ವಾರ ಹೊಂದಿರುವ ಈ ಖಾನ್‌ಕಾ ಮುಲ್ತಾನಿ ಬಾದಶಾಹನ ಪುತ್ರನಿಗೆ ಸೇರಿದ್ದಾಗಿದೆ. ಮಖ್ದುಮ್ ಖಾದರಿಯವರು ಸ್ವತಃ ಬರೆದಿರುವ ಚೌಕಾಕಾರದಲ್ಲಿರುವ ಖುರಾನ್ ಪ್ರತಿಯಿದೆ. ಇದರ ಜೊತೆಗೆ ಸೂಫಿಸಂತ ಖಾಜಾ ಉಸ್ಮಾನ್ ಹಾರೂನಿಯವರು ಅರೇಬಿಕ್ ಭಾಷೆಯಲ್ಲಿರುವ ಖುರಾನ್‌ಅನ್ನು ಪರ್ಶಿಯನ್ ಭಾಷೆಯಲ್ಲಿ ಭಾಷಾಂತರ ಮಾಡಿರುವ ಸಂಪೂರ್ಣ ಹಸ್ತಪ್ರತಿ ಇದರದೆ.

**ಮಿನ್ನತ್ ಉಲ್ಲಾಹ್ ಬೀಬಿ ಸಾಹಿಬಾ ಖಾನ್‌ಕಾ.**

ಸುಲ್ತಾನ್ ಅಲ್ಲಾವುದ್ದೀನ್ ಅಹ್ಮದ್ ಶಾಹನಿಗೆ ಮಾರ್ಗದರ್ಶಕನಾಗಿದ್ದ ಹಜರತ್ ಶಾಹ ಯಾದುಲ್ಲಾ ಈ ಕಟ್ಟಡವನ್ನು ಮೊದಲಿಗೆ ನಿರ್ಮಿಸಿದ್ದುಂಟು. ಆರಂಭಿಸಿದ್ದ 'ಮಿನ್ನತ್ ಉಲ್ಲಾಹ್ ಬೀಬಿ ಸಾಹಿಬಾ ಖಾನ್‌ಕಾ'ವು ಮಣಿಯಾರ್ ತಾಲೀಮ್‌ನ ಕಾಲಿ ಮಸೀದಿಯ ಆಗ್ನೇಯ ದಿಕ್ಕಿನಲ್ಲಿರುವ ದುಲ್ಹನ್ ದರ್ವಾಜ್ ಸಮೀಪದಲ್ಲಿದೆ. ಈ ಹಿಂದೆ ಇದ್ದ ಕಟ್ಟಡವನ್ನು ಕ್ರಿ.ಶ. ೧೬೬೬ರಲ್ಲಿ ಶಾಹ ವಲಿಯುಲ್ಲಾರವರ ಮಗ ಮಿನ್ನತ್ ಉಲ್ಲಾಹ್ ನವೀಕರಿಸಿದ್ದರಿಂದ ಇದಕ್ಕೆ ಅವರ ಹೆಸರೇ ಬಂದಿದೆ. ಹಜರತ್ ಅಬುಲ್ ಫಯಾಜ್‌ರ ಸಹೋದರಿಯಾಗಿದ್ದ ಮಿನ್ನತ್ ಉಲ್ಲಾಹ್ ಬೀಬಿಯವರು ಮಹಿಳೆಯರ ಶಿಕ್ಷಣಕ್ಕಾಗಿ ಶ್ರಮಿಸುತ್ತಿದ್ದರು.

ಬಹಮನಿ ಅರಸರ ಕಾಲದವು ಎಂದು ಗುರುತಿಸಲ್ಪಡುವ ಈ ಎಂಟು ಖಾನ್‌ಕಾಗಳ ಸ್ಥಾಪನೆಗೆ ಬಹಮನಿ ಸುಲ್ತಾನರೇ ಕಾರಣರಾಗಿದ್ದರೂ ಯಾವೊಂದು ಖಾನ್‌ಕಾ ಸಹ ಸುಲ್ತಾನರ ಹೆಸರಿನಲ್ಲಿಲ್ಲ. ಅದರ ಸ್ಥಾಪಕರು ಅಥವಾ ಅಲ್ಲಿ ಕಲಿಸುತ್ತಿದ್ದ ಸೂಫಿ ಸಂತರ ಹೆಸರಿನಲ್ಲಿಯೇ ಅವುಗಳನ್ನು ಗುರುತಿಸಲ್ಪಡುವುದು ವಿಶೇಷವಾಗಿದೆ. ಬಹಮನ್ ಶಾಹ ಚಿಸ್ತಿ ಪಂಥಕ್ಕೆ ಮನ್ನಣೆ ನೀಡಿದರೆ ನಂತರದವರು ಖಾದ್ರಿ ಪಂಥದ ಖಾನ್‌ಕಾಗಳಿಗೆ ಆದ್ಯತೆ ನೀಡಿದರು. ಖಾದ್ರಿ ಸಂತ ಸೈಯದ್ ಶಾಹ ಇಸ್ಮೈಲ್ (ಮ.೧೪೬೬)ರು ಮೊತ್ತಮೊದಲನೆಯ ಬಾರಿಗೆ ಖಾದ್ರಿ ಪಂಥದ ಖಾನ್‌ಕಾವನ್ನು ಬೀದರನಲ್ಲಿ ಸ್ಥಾಪಿಸಿದರು. ನಂತರದಲ್ಲಿ ಬಂದವರೆಂದರೆ ಶೇಖ್ ಇಬ್ರಾಹಿಮ್ (ಮ.೧೫೫೨), ಶಾಹ ಮೂಸಾ ಖಾದ್ರಿ, ಸೈಯದ್ ಶಾಹ ಅಬು ಮುಹಮ್ಮದ್ ಹುಸೇನ್ (ಮ.೧೪೮೨) ಮತ್ತು ಸೈಯದ್ ಶಾಹ ಜಮಾಲ್ (ಮ.೧೫೯೦) ಇವರೆಲ್ಲ ಬಗ್ದಾದನಿಂದ ಬಂದವರು. ಮಹಮೂದ್ ಗವಾನನು ಸುಪ್ರಸಿದ್ಧ ನಕ್ಷಬಂದಿ ಸೂಫಿ ಪರಂಪರೆಯ ಅನುಯಾಯಿ. ಗವಾನನು ಖ್ವಾಜಾ ಉಬೈದುಲ್ಲಾ ಅಹ್ರಾರ್‌ನಿಂದ ಮಾರ್ಗದರ್ಶನ ಪಡೆಯುತ್ತಿದ್ದರು ಎಂದು ಗೊತ್ತಾಗುತ್ತದೆ. ಎಲ್ಲ ಸೂಫಿ ಸಂತರು ಧಾರ್ಮಿಕ ಶಿಕ್ಷಣ ನೀಡುವುದರ ಜೊತೆಗೆ ಸಾಮಾಜಿಕ ಹೊಣೆಗಾರಿಕೆಯನ್ನು ನಿಭಾಯಿಸುತ್ತಿದ್ದರು. ಸುಲ್ತಾನ್‌ರಿಗಿಂತ ಸೂಫಿ ಸಂತರು ಜನಸಾಮಾನ್ಯರಿಗೆ ಹತ್ತಿರವಾಗಿದ್ದರಿಂದಲೇ ಅವರ ಹೆಸರೂ ಇವತ್ತಿಗೂ ಉಳಿದು ಕೊಂಡುಬಂದಿದೆ.

ಖಾನ್‌ಕಾಗಳಲ್ಲಿ ಮೊದಲು ಶೇಖ್‌ರು(ಅರಬ್ಬಿ ಭಾಷೆಯ ಖುರಾನ್ ಪಠಿಸುವಲ್ಲಿ ನಿಪುಣರು), ಮೌಲ್ವಿಗಳು, ಪೀರ್‌ರು, ಅಮೀರ್‌ರು ಹಾಗೂ ದೊರೆಗಳು ಧಾರ್ಮಿಕ ವಿಚಾರ ವಿನಿಮಯ ಮಾಡುತ್ತಿದ್ದರು. ನಂತರದಲ್ಲಿ ಕುರಾನ್ ಪಠಣ, ವಿಚಾರ ವಿನಿಮಯ, ಓದುವ, ಬರೆಯುವ ಮತ್ತು ಜ್ಞಾಪಕಶಕ್ತಿ ವರ್ಧನೆಗೆ ಆದ್ಯತೆ ನೀಡಲಾಯಿತು. "ವಿದ್ಯಾರ್ಥಿಗಳಿಗೆ ಪಠ್ಯವನ್ನು ಸಾಮಾನ್ಯವಾಗಿ ಮೌಖಿಕವಾಗಿ ಹೇಳಿಕೊಡಲಾಗುತ್ತಿತ್ತು. ಆ ನಂತರ ಪರ್ಷಿಯಾ ಭಾಷೆಯ ಆಯ್ದ ಪಠ್ಯಗಳನ್ನು ಕಲಿಸಲಾಗುತ್ತಿತ್ತು. ಖಾನ್‌ಕಾಗಳಲ್ಲಿ ಕಲಿಸುತ್ತಿದ್ದ ಗುರುವಿಗೆ ತೃಪ್ತಿಯಾಗುವ ವರೆಗೆ ಅಂದರೆ ವಿದ್ಯಾರ್ಥಿಗೆ ಪೂರ್ಣಪ್ರಮಾಣದ ಶಿಕ್ಷಣ ದೊರೆತಿದೆ ಎಂದು ಗುರುವಿಗೆ ಖಚಿತವಾಗಿ ಅನ್ನಿಸುವ ವರೆಗೆ ಶಿಕ್ಷಣ ಮುಂದುವರೆಸಲಾಗುತ್ತಿತ್ತು. ನಂತರ ಅವಧಿಯನ್ನು ನಾಲ್ಕು ವರ್ಷ, ನಾಲ್ಕು ತಿಂಗಳು ಮತ್ತು ನಾಲ್ಕು ದಿನಗಳವರೆಗೆ ಮಿತಿಗೊಳಿಸಲಾಯಿತು" (ಬಹಮನಿ ಸಾಮ್ರಾಜ್ಯ ಮತ್ತು ಪರ್ಷಿಯಾದ ಪ್ರಭಾವ-ಪ್ರೇರಣೆ. ಪು-೧೭೬) ಎಂದು ದೇವು ಪತ್ತಾರ ಸ್ಪಷ್ಟಪಡಿಸಿದ್ದಾರೆ.

ಬಹಮನಿ ಸುಲ್ತಾನರ ಕಾಲಾವಧಿಯಲ್ಲಿ ಪ್ರಸಿದ್ಧಿಗೆ ಬಂದಿರುವ ಖಾನ್‌ಕಾಗಳು ಧಾರ್ಮಿಕ ಶಿಕ್ಷಣ ನೀಡುವ ಅದರಲ್ಲೂ ಮುಖ್ಯವಾಗಿ ಸೂಫಿ ಚಟುವಟಿಕೆಗಳ ಕೇಂದ್ರಗಳಾದವು. ಆರಂಭದ ದಿನಗಳಲ್ಲಿ ಕೇವಲ ಇಸ್ಲಾಮ್‌ದ ಬಗೆಗೆ ಅರಿವು ಮೂಡಿಸುವ ಕಾರ್ಯದಲ್ಲಿ ಸಕ್ರಿಯವಾಗಿದ್ದ ಖಾನ್‌ಕಾಗಳು ನಂತರದಲ್ಲಿ ಕ್ರಿಶ್ಚಿಯನ್, ಬೌದ್ಧ-ಜೈನ ಧರ್ಮಿಯರ ಶೈಕ್ಷಣಿಕ ಒಲವು ನಿಲುವುಗಳನ್ನು ಅಳವಡಿಸಿಕೊಂಡವು. ಇದಕ್ಕೆ ಸೂಫಿಸಂತರ ವಿಶಾಲ ದೃಷ್ಟಿಕೋನವೇ ಕಾರಣವಾಗಿತ್ತು. ಇಸ್ಲಾಮೇತರ ಧರ್ಮಗಳ ಬಗೆಗಿನ ಮುಕ್ತ ಒಡನಾಟದಿಂದಾಗಿಯೇ ಸೂಫಿಪಂಥವು ಅನುಭಾವ, ಆಧ್ಯಾತ್ಮಿಕ ಸಂಗತಿಗಳನ್ನು ಅರಿತುಕೊಳ್ಳಲು ಸಾಧ್ಯವಾಯಿತು.

**ಆಕರಸೂಚಿ.**

೧. ಬೀದರ ಜಿಲ್ಲೆಯ ಇತಿಹಾಸ : ಕಲೆ-ಸಾಹಿತ್ಯ-ಸಂಸ್ಕೃತಿ. ಡಾ. ರಘುಶಂಖ ಭಾತಂಬ್ರಾ (ಅಪ್ರಕಟಿತ ಹಸ್ತಪ್ರತಿ)

೨. ದೇವು ಪತ್ತಾರ ಬಹಮನಿ ಸಾಮ್ರಾಜ್ಯ ಮತ್ತು ಪರ್ಷಿಯಾದ ಪ್ರಭಾವ–ಪ್ರೇರಣೆ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೨೦೧೫

3. Bidar Its History and Monuments, Yazdani Ghulam, Motilal Banarasidas Publishers Pvt. Ltd, Dellhi, 1995

೪. ಕರ್ನಾಟಕದ ಪರ್ಶಿಯನ್ ಅರೇಬಿಕ್ ಮತ್ತು ಉರ್ದು ಶಾಸನಗಳು. ಸಂಪಾದಕರು: ಎಂ.ಯಾಸೀನ್ ಖುದ್ದೂಸಿ, ಸೀತಾರಾಮ ಜಾಗೀರ್‌ದಾರ್. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೧.

೫. ಚಿತ್ರಕೃಪೆ : ಶ್ರೀ ಗೋಪಿಚಂದ ತಾಂದಳೆ, ಬೀದರ.

**ಚಿತ್ರ ಶೀರ್ಷಿಕೆಗಳು.**

೧. ಖಾನ್‌ಕಾ ಅಬ್ದುಲ್ ಫೈಜ್.
೨. ಖಾನ್‌ಕಾ ಅಬ್ದುಲ್ ಫೈಜ್.
೩. ಖಾನ್‌ಕಾ ಶೇಕ್ ನೂರ್ ಸಮನಾನಿ.
೪. ಖಾನ್‌ಕಾ ಬಂದಗಿ ಹುಸ್ಸೈನಿ.
೫. ಮಹೆಬೂಬ್ ಸುಬ್ಹೈನಿ ಬಡಿ ಖಾನ್‌ಕಾ.
೬. ಮಹೆಬೂಬ್ ಸುಬ್ಹೈನಿ ಛೋಟಿ ಖಾನ್‌ಕಾ.
೭. ಮಿನ್ನತ್ ಉಲ್ಲಾಹ್ ಬೀಬಿ ಸಾಹಿಬಾ ಖಾನ್‌ಕಾ:, ಚಿದ್ರಿ ರಸ್ತೆ.
೮. ಶೇಕ್ ಸಿರಾಜುದ್ದೀನ್ ಜುನೈದಿ ಖಾನ್‌ಕಾ.

# ಶರಣರ ಅಜ್ಞಾತ ಸ್ಮಾರಕಗಳು : ಬೀದರ ಜಿಲ್ಲೆ.

**-ಡಾ. ವೀರಶೆಟ್ಟಿ ಬಿ. ಗಾರಂಪಳ್ಳಿ,**
ಹಿರಿಯ ಸಹಾಯಕ ನಿರ್ದೇಶಕರು,
ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ,
ವಿಕಾಸಸೌಧ, ಬೆಂಗಳೂರು.

## ೧. ಬಾಹೂರ ಬೊಮ್ಮಯ್ಯ, ಬೇಲೂರು.

ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಬೇಲೂರು ಗ್ರಾಮ ಶರಣರ, ಸತ್ಪುರುಷರ ಪಾದಸ್ಪರ್ಷದಿಂದ ಪಾವನವಾದ ಪುಣ್ಯಭೂಮಿ. ಮತೀಯ ಸಾಮರಸ್ಯಕ್ಕೆ ಹೆಸರಾದ ಸ್ಥಳ. ಇಲ್ಲಿರುವ ಹಳೆಯ ಕಾಲದ ಭಿಲ್ಲೂರಿನ ಬೀಲ್ಲೇಶ ಬೊಮ್ಮಯ್ಯ ಶರಣನ ಗುಡಿಯಿಂದಾಗಿ ಈ ಗ್ರಾಮಕ್ಕೆ ಐತಿಹಾಸಿಕ ಮೆರುಗು ಪ್ರಾಪ್ತವಾಗಿದೆ. ಬೇಲೂರನ್ನು ಮೊದಲು ಭಿಲ್ಲೂರು, ಬಾಹೂರು ಎಂದು ಕರೆಯುತ್ತಿದ್ದರೆಂದು ಕೆಲವರ ಅಭಿಪ್ರಾಯವಾಗಿದೆ[೧].

ಶರಣರ ಚರಿತ್ರೆಯಲ್ಲಿ ಬಾಹೂರು ಬೊಮ್ಮಯ್ಯನವರ ಹೆಸರು ಬರುತ್ತದೆ. ಆದರೆ ಅವರ ಜನ್ಮಸ್ಥಳ ಯಾವುದು ಎಂಬುದು ಮಾತ್ರ ಇದುವರೆಗೆ ಖಚಿತವಾಗಿಲ್ಲ. ಶಿವಶರಣ ಕಥಾ ರತ್ನಕೋಶದಲ್ಲಿ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಬಾಹೂರನಲ್ಲಿ ಇವರು ಹುಟ್ಟಿದರು ಎಂಬ ಉಲ್ಲೇಖವಿದೆ. ಆದರೂ ಪ್ರೊ.ಎಂ.ಎಂ.ಕಲ್ಬುರ್ಗಿ ಅವರ ಮಾರ್ಗ ಸಂಪುಟ-೧ರಲ್ಲಿ ಹಾಗೂ ಸಮಗ್ರ ವಚನ ಸಂಪುಟ-೮ರಲ್ಲಿ ಇವರು ಕಲ್ಯಾಣ ಹತ್ತಿರದ ಬಾಹೂರು ಗ್ರಾಮದವರು ಎಂದು ಹೇಳಲಾಗಿದೆ[೨]. ಕಲ್ಯಾಣದ ಹತ್ತಿರದ ಆ ಬಾಹೂರು ಯಾವುದು ಎಂಬುದೇ ಈಗಿರುವ ಯಕ್ಷ ಪ್ರಶ್ನೆ. ಬಾಹೂರು ಬೊಮ್ಮಯ್ಯ ಇವನ ಕುರಿತು ಈವರೆಗೂ ಸಿಕ್ಕಿರುವ ಸಾಹಿತ್ಯಿಕ ಆಧಾರಗಳಲ್ಲಿ ಹಾಗೂ ಜನಪದರ ಕಥೆಗಳಲ್ಲಿ ಇವರು ಪ್ರತಿ ಸೋಮವಾರ ಕಲ್ಯಾಣದ ತ್ರಿಪುರಾಂತಕೇಶ್ವರ ದೇವರ ದರ್ಶನ ಪಡೆಯಲು ಹೋಗುತ್ತಿದ್ದರು ಎಂಬ ಉಲ್ಲೇಖ ಬರುತ್ತದೆ. ಬಸವೇಶ್ವರರ ಸಮಕಾಲೀನರು ಎಂಬ ಗ್ರಂಥದಲ್ಲಿ ಡಾ.ಜಯಶ್ರೀ ದಂಡೆ ಅವರು ತಮ್ಮ ಲೇಖನದಲ್ಲಿಯೂ ಸಹ ಈ ಬಗ್ಗೆ ದಾಖಲಿಸಿದ್ದಾರೆ[೩].

ಆದರೆ ಪ್ರಸ್ತುತ ಕಲ್ಯಾಣದ (ಇಂದಿನ ಬಸವಕಲ್ಯಾಣ) ಸಮೀಪ ಬಾಹೂರು ಎಂಬ ಗ್ರಾಮವಿಲ್ಲ. ಅಲ್ಲದೇ ಬೇಲೂರನ್ನು ಬಿಟ್ಟರೆ ಈ ಹೆಸರಿಗೆ ಹೋಲುವಂತಹ ಬೇರೆ ಯಾವುದೇ ಗ್ರಾಮಸೂಚಿ ಪದಗಳು ಕೂಡ ಕಂಡು ಬರುವುದಿಲ್ಲ[೪]. ಆದ್ದರಿಂದ ಬೇಲೂರನ್ನೇ ಅಂದಿನ ಬಾಹೂರು ಎನ್ನಬಹುದೇ? ಗೊತ್ತಿಲ್ಲ. ಇದಕ್ಕೆ ತಕ್ಕ ಆಧಾರಗಳ ಕೊರತೆ ಇದೆ. ಇಲ್ಲಿ ಭಿಲ್ಲೇಶ ಬೊಮ್ಮಯ್ಯ ಹಾಗೂ ಬಾಹೂರು ಬೊಮ್ಮಯ್ಯ ಎನ್ನುವ ಇಬ್ಬರು ಶರಣರು ಇದ್ದರೋ ಅಥವಾ ಒಬ್ಬರನ್ನೇ ಈ ಎರಡು ಹೆಸರುಗಳಿಂದ ಕರೆಯಲಾಗುತ್ತಿತ್ತೋ ಎಂಬ ಸಂಶಯವು ಕೂಡ ಕಾಡುತ್ತದೆ. ಹಾಗೆ ನೋಡಿದರೆ ಶರಣರಲ್ಲಿ ಬೊಮ್ಮಯ್ಯ, ಬೊಮ್ಮಣ್ಣ ಎನ್ನುವ ಹೆಸರುಳ್ಳವರು ಅನೇಕರಿದ್ದಾರೆ. ಹಾಗಾಗಿ ಇಲ್ಲಿ ಈ ಹೆಸರಿನವರು ಇಬ್ಬರು ಇದ್ದಿರಬಹುದು ಎನ್ನಲಡ್ಡಿಯಿಲ್ಲ. ಅದಕ್ಕೆ ಕಾರಣವೆಂದರೆ ಬೇಲೂರಿನಲ್ಲಿ ಅನಾಥವಾಗಿ ಬಿದ್ದಿರುವ 'ಭಿಲ್ಲೇಶ ಬೊಮ್ಮಯ್ಯ' ಎಂಬ ಶಿಲ್ಪವಿದೆ[೫]. ಈ ಭಿಲ್ಲೇಶ ಬೊಮ್ಮಯ್ಯನೆ ಬಾಹೂರು ಬೊಮ್ಮಯ್ಯನೋ ಅಥವಾ ಅವಿರಿಬ್ಬರು ಬೇರೆ ಬೇರೆಯೋ ತಿಳಿಯುವುದಿಲ್ಲ. ಸೂಕ್ತ ಆಧಾರಗಳು ಸಿಗದ ಕಾರಣ ಎಲ್ಲವೂ ಗೊಂದಲಮಯವಾಗಿ ಹೋಗಿದೆ. ಹಾಗಾಗಿ ಈ ಸಂಬಂಧ ಹೆಚ್ಚಿನ ಸಂಶೋಧನೆಯ ಅವಶ್ಯಕತೆ ಇದೆ.

ಬೊಮ್ಮಯ್ಯನ ಪವಾಡಗಳು ಅನೇಕ. ಮಹಾನ ಶಿವಭಕ್ತ ಅಲ್ಲದೆ ವೀರ, ಧೀರನಾಗಿದ್ದ ಬಾಹೂರು ಬೊಮ್ಮಯ್ಯ (ಬೊಮ್ಮಣ್ಣ) ಪವಾಡ ಪುರುಷನೂ ಆಗಿದ್ದನೆಂದು ತಿಳಿದು ಬರುತ್ತದೆ. **'ಸಂಗನಬಸವಣ್ಣನ ಸಾಕ್ಷಿಯಾಗಿ ಬ್ರಹ್ಮೇಶ್ವರಲಿಂಗ'** ಎಂಬ ಅಂಕಿತದಲ್ಲಿ ಸು.೪೧ ವಚನಗಳನ್ನು ರಚಿಸಿದ್ದಾನೆ. ಫ.ಗು.ಹಳಕಟ್ಟಿಯವರ ಶಿವಶರಣರ ಚರಿತ್ರೆಗಳು-೧, ಹರಿಹರನ ಬಾಹೂರು ಬೊಮ್ಮಯ್ಯನ ರಗಳೆ,

ಬಸವಲಿಂಗ ದೇವರ ಕಥಾಸಾಗರ, ಬಸವಪುರಾಣ, ಶಾಂತಲಿಂಗ ದೇಶಿಕನ ಭೈರವೇಶ್ವರ ಕಥಾಸೂತ್ರ ರತ್ನಾಕರ, ಮರಿತೊಂಟದಾರ್ಯನ ಸಿದ್ಧೇಶ್ವರ ಪುರಾಣದಲ್ಲಿ ಬೊಮ್ಮಯ್ಯನ ಉಲ್ಲೇಖವಿದೆ.

ಜೋಳ ಖರೀದಿಸಲು ಬಾಹೂರು ಬೊಮ್ಮಯ್ಯ ಕಲ್ಯಾಣಕ್ಕೆ ಬಂದಾಗ ಜೈನ ವ್ಯಾಪಾರಿಯೊಬ್ಬ ಜೋಳದ ರಾಶಿ ತೋರಿಸುತ್ತ 'ಇದರಲ್ಲಿ ಶಂಕರಲಿಂಗ ಇದ್ದಾನೆ ಕೊಳ್ಳಿರಿ' ಎಂದು ಕೂಗುತ್ತಿದ್ದನಂತೆ, ಅದನ್ನು ನೋಡಿದ ಬೊಮ್ಮಣ್ಣ ಶಿವನು ಚೈತನ್ಯಮಯನಾಗಿದ್ದಾನೆ. ಆತ ಎಂದಿಗೂ ಮಾರಾಟದ ವಸ್ತುವಲ್ಲ ಎನ್ನುತ್ತಾನೆ. ಅದಕ್ಕೆ ವ್ಯಾಪಾರಿಯು ಹಾಗಾದರೆ ನೀನು ಕೂಗಿ ಕರೆದು ಆತನನ್ನು ತೋರಿಸು ಎಂದು ಸವಾಲು ಹಾಕುತ್ತಾನೆ. ಭಕ್ತಿಯಿಂದ 'ಶಿವನೇ' ಎಂದು ಬೊಮ್ಮಯ್ಯ ಕೂಗಿದಾಗ ಜೋಳದ ರಾಶಿಯಿಂದ 'ಓ' ಎಂಬ ಧ್ವನಿ ಕೇಳಿ ಬರುತ್ತದೆ. ಇದನ್ನು ಕೇಳಿದ ವ್ಯಾಪಾರಿ ಹಾಗೂ ಅಲ್ಲಿದ್ದ ರೈತರು ದಂಗಾಗುತ್ತಾರೆ.[೬]

ಇವರು ನಡೆಸಿದ ಪವಾಡದ ಇನ್ನೊಂದು ಘಟನೆ ಹೀಗಿದೆ. ಬೊಮ್ಮಯ್ಯನವರು ಪ್ರತಿ ಸೋಮವಾರ ತ್ರಿಪುರಾಂತಕ ದೇವಾಲಯಕ್ಕೆ ಹೋಗಿ ಪೂಜೆ ಸಲ್ಲಿಸುವುದು ಕೆಲವರಿಗೆ ಸಹಿಸಲಾಗಲಿಲ್ಲ. ಅಂಥವರು ಅಲ್ಲಿ ಹೋಗಿ ಇವನೇನು ಕಲ್ಲುಬಸವನಿಗೆ ಕಬ್ಬು ಮೇಯಿಸುವನೇ? ಎಂದು ಲೇವಡಿ ಮಾಡುತ್ತಾರೆ. ಆಗ ಬೊಮ್ಮಯ್ಯನವರು ನಂದಿ ಮೂರ್ತಿಯಲ್ಲಿ ಪ್ರಾಣವನ್ನು ಪ್ರತಿಷ್ಠಾಪಿಸಿ ಅದಕ್ಕೆ ಕಬ್ಬನ್ನು ತಿನ್ನಿಸುತ್ತಾರೆ. ಹೀಗೆ ಕಬ್ಬು ತಿಂದ ನಂದಿ ನಂತರ ತ್ರಿಪುರಾಂತ ಕೆರೆಯ ಅರ್ಧ ನೀರನ್ನು ಒಂದೇ ಗುಟುಕಿಗೆ ಕುಡಿಯುತ್ತದೆ ಎನ್ನಲಾಗುತ್ತದೆ.[೭] ಈ ಪವಾಡದಲ್ಲಿ ಲಿಂಗಾಯತ ಧರ್ಮದ ವಿಚಾರಗಳ ಕುರಿತು ಕೆಲ ವಿರೋಧಾಭಾಸಗಳಿರುವುದನ್ನು ನಾವು ಗಮನಿಸಬೇಕು.

## ೨. ಮೌಲಾಬಾಬಾ ಗವಿ ಸ್ಮಾರಕ, ಬೇಲೂರು.

ಬೇಲೂರು ಶರಣರ ಬಹುದೊಡ್ಡ ನೆಲೆಯಾಗಿತ್ತು ಎಂದು ಹೇಳಲಾಗುತ್ತದೆ. ಬಸವಕಲ್ಯಾಣದಿಂದ ಹುಲಸೂರು ಮಾರ್ಗದಲ್ಲಿ ಈ ಗ್ರಾಮ ಬರುತ್ತದೆ. ತಾಲೂಕು ಕೇಂದ್ರದಿಂದ ಸು.೧೦ ಕಿ.ಮೀ. ದೂರದಲ್ಲಿರುವ ಗ್ರಾಮವಿದು. ಗ್ರಾಮದ ಹೊರ ಪ್ರದೇಶದಲ್ಲಿ 'ಸಿದ್ದೇಶ್ವರ' ಎಂಬ ಕೆರೆ ಇದೆ. ಕೆರೆಯ ದಂಡೆಯ ಮೇಲೆ 'ಸಿದ್ದೇಶ್ವರ ಗುಡಿ' ಸ್ಮಾರಕವೂ ಇದೆ.[೮] ಈ ಸ್ಮಾರಕದ ಮುಂದಿನ ರಸ್ತೆಯಲ್ಲಿ ಹಾಗೇಯೇ ಕೆರೆಯ ದಂಡೆಯಗೊಂಟ ಸ್ವಲ್ಪ ದೂರ ಕ್ರಮಿಸಿದರೆ ಅಲ್ಲೊಂದು **'ಮೌಲಾಬಾಬಾ'** ಎಂಬ ಹೆಸರಿನ ಧಾರ್ಮಿಕ ಸ್ಥಳ ಕಂಡು ಬರುತ್ತದೆ.[೯] ಮೇಲಿಂದ ನೋಡಲು ಬಹಳ ಇತ್ತೀಚಿನ ಅಂದರೆ ೨೦೦-೩೦೦ ವರ್ಷಗಳ ಸ್ಥಳವೆಂದು ಅದು ಅನಿಸಿದರೆ ಆಶ್ಚರ್ಯವಿಲ್ಲ. ಆದರೆ ಅಲ್ಲಿ ಸ್ಥಾವರ ಲಿಂಗದಾಕಾರದ ಒಂದು ಗವಿ ಇದೆ. ಅದರ ಮೇಲೆ ಆಧುನಿಕ ಕಟ್ಟಡವನ್ನು ಕಟ್ಟಲಾಗಿದೆ. ಅಲ್ಲೆಲ್ಲಾ ಕೆಲವು ಸಮಾಧಿಗಳು ಕಂಡುಬರುತ್ತವೆ. ಗವಿಯ ಗರ್ಭಗೃಹದಲ್ಲಿಯು ಸಹ ಸಮಾಧಿಗಳಿವೆ. ಗರ್ಭಗೃಹವು ೬.೨ ಅಡಿ ಅಗಲ, ೩.೫ ಅಡಿ ಉದ್ದ ಮತ್ತು ೮ ಅಡಿ ಎತ್ತರದಿಂದ ಕೂಡಿದೆ. ಗರ್ಭಗೃಹದಿಂದ ಹೊರ ಪ್ರಾಂಗಣಕ್ಕೆ ಬರಲು ೧೨ ಸೇ.ಮೀ.ನ ಉದ್ದವಾದ ದಾರಿಯಿದೆ. ಗವಿಯ ಒಳಭಾಗವನ್ನು ಸೂಕ್ಷ್ಮವಾಗಿ ಗಮನಿಸಿದರೆ ಅದು ಬಹಳ ಪುರಾತನ ಕಾಲದ್ದು ಎನ್ನಬಹುದು.[೧೦] ಬಹುಶಃ ನಾರಾಯಣಪುರ, ಚಿಟಗುಪ್ಪ, ಅಷ್ಟೂರು ಮುಂತಾದ ಕಡೆಗಳಂತೆ ಇದು ಕೂಡ ಕಾಲಾಂತರದಲ್ಲಿ ಮುಸ್ಲಿಂ ಸಮುದಾಯದ ಹಿಡಿತಕ್ಕೆ ಹೋಗಿರಬಹುದು. ಅಲ್ಲದೇ ಶರಣರ ಬಹುತೇಕ ಗವಿಗಳು ಷಟಸ್ಥಲಾಕಾರದಲ್ಲಿವೆ. ಈ ಪರಿಕಲ್ಪನೆ ಶುದ್ಧವಾಗಿ ಲಿಂಗಾಯತ ಧರ್ಮದ್ದು. ಮೇಲಾಗಿ ಶರಣರ ಇನ್ನಿತರ ಗವಿಗಳು ಕೂಡ ಇದೇ ಆಕಾರದಲ್ಲಿರುವುದರಿಂದ ಈ ಗವಿಯು ಸಹ ಯಾವುದೋ ಶರಣನಿಗೆ ಸಂಬಂಧಿಸಿದ್ದಾಗಿರಬಹುದು. ಊರ ಈ ಕಡೆ ಗವಿಯಿದ್ದು, ಊರ ಆ ಕಡೆ ಎಂದರೆ ಉರಿಲಿಂಗಪೆದ್ದಿ ಮಠದ ಹಾದಿಯಲ್ಲಿ ಭೀಲ್ಲೇಶ ಬೊಮ್ಮಯ್ಯ ಶರಣನ ಶಿಲ್ಪ ಬಯಲು ಪ್ರದೇಶದಲ್ಲಿ ಬಿದ್ದಿರುವುದು ಕಂಡು ಬರುತ್ತದೆ.[೧೧] ಕೆಲವರು ಬಾಹೂರ ಬೊಮ್ಮಯ್ಯ ಎಂಬ ಶರಣ ಇದೇ ಗ್ರಾಮದವನು ಎನ್ನುತ್ತಾರೆ. ಆದರೆ ಇದಕ್ಕಿನ್ನು ತಕ್ಕ ಪುರಾವೆಗಳು ದಕ್ಕಿಲ್ಲ. ಬಹುಶಃ ಈ ಗವಿ ಇವರ ವಾಸಸ್ಥಳವಾಗಿರಬಹುದೇ? ತಿಳಿದು ಬಂದಿಲ್ಲ. ಹೆಚ್ಚಿನ ಮಾಹಿತಿಗಳ ಹುಡುಕಾಟದ ಅವಶ್ಯಕತೆ ಇದೆ.

### ೩. ಭಿಲ್ಲೇಶ ಬೊಮ್ಮಯ್ಯ, ಬೇಲೂರು.

ಬೇಲೂರು ಗ್ರಾಮದ ಹೊರ ಭಾಗದಲ್ಲಿರುವ ಉರಿಲಿಂಗ ಪೆದ್ದಿ ಗದ್ದುಗೆಗೆ ಹೋಗುವಾಗ ಊರನ್ನು ದಾಟಿದ ಕೂಡಲೇ ಬಲಗಡೆ ನಿಂಜಪ್ಪ ಎಂಬ ಗೌಡರ ಹೊಲದಲ್ಲಿ ಒಂದು ಹಾಳು ಬಾವಿಯಿದೆ. ಅದರ ಪಕ್ಕದಲ್ಲಿ ಅನಾಥವಾಗಿ ಒಂದು ಶಿಲ್ಪ ಬಿದ್ದಿದೆ. ಬಿಲ್ಲುಧಾರಿ ವ್ಯಕ್ತಿಯನ್ನು ಅದರಲ್ಲಿ ಕಾಣಬಹುದು. ಕೊರಳಲ್ಲಿ ಲಿಂಗವಿದ್ದು, ವಿಭೂತಿಯಿಂದ ಅದನ್ನು ದಿನಾಲು ಗ್ರಾಮಸ್ಥರು ಪೂಜಿಸುತ್ತಾರೆ. ಇದನ್ನು ಗ್ರಾಮಸ್ಥರು **'ಭಿಲ್ಲೇಶ ಬೊಮ್ಮಯ್ಯ'** ಎಂದು ಕರೆದುಕೊಂಡು ಬರುತ್ತಿದ್ದಾರೆ.[೧೨] ಈ ಶರಣನ ಚರಿತ್ರೆಯ ಬಗ್ಗೆ ಅಷ್ಟಾಗಿ ತಿಳಿದು ಬಂದಿಲ್ಲ. ಆತ ರಚಿಸಿರಬಹುದಾದ ಯಾವ ವಚನಗಳು ಲಭ್ಯವಿಲ್ಲ. ಅವನ ಹೆಂಡತಿಯದೆಂದು ಹೇಳಲಾಗುತ್ತಿರುವ ಮತ್ತೊಂದು ಶಿಲ್ಪ ಗ್ರಾಮದ ಮಂಜಪ್ಪ ಶೆಟಗಾರ ಎಂಬುವವರು ಹೊಲದಲ್ಲಿದೆ.[೧೩]

ಸ್ಥಳೀಯ ಚರಿತ್ರೆಯ ಪ್ರಕಾರ ಈತ ಸಾಲ ಮಾಡಿಕೊಂಡು ತೀರಿಸಲಾಗದೆ ಸೊನ್ನಲಿಗೆಯ ಸಿದ್ಧರಾಮನ ಹತ್ತಿರ ಹೋಗಿದ್ದನಂತೆ.[೧೪] ಬಹುಶಃ ಸಿದ್ಧರಾಮನು ಇವನಿಗೆ ಲಿಂಗದೀಕ್ಷೆ ನೀಡಿರಬಹುದು. ಸಿದ್ಧರಾಮರು ಬಹಳಷ್ಟು ಶರಣರಿಗೆ ಲಿಂಗದೀಕ್ಷೆ ನೀಡಿರುವ ಉದಾಹರಣೆಗಳು ಚರಿತ್ರೆಯಲ್ಲಿ ಕಂಡು ಬರುತ್ತವೆ. ಈ ಎಲ್ಲಾ ಹಿನ್ನೆಲೆಯಲ್ಲಿ ಈತ ಮೂಲತಃ ಬೇಲೂರು ಗ್ರಾಮದ ನಿವಾಸಿಯೇ ಆಗಿರಬೇಕು ಎನಿಸುತ್ತದೆ.

### ೪. ಸಿದ್ದೇಶ್ವರ ಕಟ್ಟೆ, ತೊಗಲೂರು.

ಬಸವಕಲ್ಯಾಣ ಮತ್ತು ಭಾಲ್ಕಿ ಮಾರ್ಗದಲ್ಲಿ ಮುಖ್ಯ ರಸ್ತೆಯಿಂದ ಮೂರು ಕಿ.ಮೀ. ಒಳಗಡೆ ಇರುವ ಗ್ರಾಮವೇ ತೊಗಲೂರು. ಇದು ಬಸವಕಲ್ಯಾಣದಿಂದ ಸುಮಾರು ೧೫ ಕಿ.ಮೀ. ದೂರದಲ್ಲಿದೆ. ತೊಗಲು ಹದ ಮಾಡುವ ಕಾಯಕ ಮಾಡುತ್ತಿದ್ದ ಶರಣರಾದ ಡೋಹರ ಕಕ್ಕಯ್ಯರಿಂದಾಗಿ ಈ ಗ್ರಾಮಕ್ಕೆ **'ತೊಗಲೂರು'** ಎಂಬ ಹೆಸರು ಬಂದಿದೆ.

ತೊಗಲೂರಿನ ಸೀಮೆಯಲ್ಲಿ **'ಸಿದ್ಧೇವರ, ಸಿದ್ಧೇಶ್ವರ'** ಎಂಬ ಹೆಸರಿನ ಒಂದು ಕಟ್ಟೆಯಿದೆ. ಇದು ಸುಮಾರು ೧೨.೧ ಅಡಿ ಅಗಲ, ೧೨.೭ ಅಡಿ ಉದ್ದ ಮತ್ತು ೨ ಅಡಿ ಎತ್ತಿರದಿಂದ ಕೂಡಿರುವ ಆಧುನಿಕ ಕಟ್ಟೆಯಾಗಿದೆ.[೧೫] ಇದೊಂದು ಬಯಲು ಅನುಭವ ಮಂಟಪವಾಗಿದ್ದಿತ್ತೆಂದು ಹೇಳಲಾಗುತ್ತದೆ.[೧೬] ಈ ರೀತಿಯ ಕಟ್ಟೆಗಳ (ಚರ್ಚಾ ಸ್ಥಳಗಳ) ಉಲ್ಲೇಖ, ಮೊರಂಬಿ, ಚಿಟಗುಪ್ಪ, ಹುಲಿಕುಂಟಿ ಮತ್ತಿತರ ಕಡೆಯೂ ಕಂಡು ಬರುವುದನ್ನು ನಾವು ಗಮನಿಸಬೇಕು. ಬಹುಶಃ ಚಿಟುಗುಪ್ಪದ ವಿಶಾಲ ಗವಿಗಳು ಸಹ ಈ ಪರಿಕಲ್ಪನೆಯಲ್ಲಿಯೇ ನಿರ್ಮಾಣಗೊಂಡಿರುವಂತೆ ಕಾಣುತ್ತದೆ. ತಲೆ–ತಲೆಮಾರಿನಿಂದ ಉಳಿದುಕೊಂಡು ಬಂದಿರುವ ಐತಿಹ್ಯಗಳ ಪ್ರಕಾರ ಈ ಕಟ್ಟೆಯ ಮೇಲೆ ಸೊನ್ನಲಿಗೆ ಸಿದ್ಧರಾಮ, ಲಾಧಾ ಸೋಮಣ್ಣ ಮತ್ತು ಸ್ಥಳೀಯ ಶರಣನಾದ ಡೋಹರ ಕಕ್ಕಯ್ಯರು ಕುಳಿತು ಚರ್ಚೆ ಮಾಡುತ್ತಿದ್ದರು ಎನ್ನಲಾಗುತ್ತದೆ.[೧೭] ಕಟ್ಟೆಯ ಮೇಲೆ ಮೂರ್ನಾಲ್ಕು ಒರಟು ಒರಟಾದ ಬಹಳ ಪ್ರಾಚೀನ ಕಾಲದ್ದು ಎನ್ನಬಹುದಾದ ನಂದಿ ಶಿಲ್ಪಗಳಿವೆ. ಶ್ರಾವಣದ ಯಾವುದಾದರೊಂದು ಸೋಮವಾರ ಅಲ್ಲಿ ಬುಟ್ಟಿ ಜಾತ್ರೆ ಮಾಡಲಾಗುತ್ತದೆ.

### ೫. ಮಲ್ಲಿಕಾರ್ಜುನ ಪಿಂಡ, ಬಸವಕಲ್ಯಾಣ.

ಬಸವಕಲ್ಯಾಣದ ಮಲ್ಲಿಕಾರ್ಜುನ ಓಣಿಯಲ್ಲಿ ಒಂದು ಹಳೆಯ ಕಾಲದ ಸ್ಮಾರಕವಿದೆ. ಅದರ ಸುತ್ತಲೂ ಬಿದ್ದಿರುವ ಶಿಲ್ಪಗಳನ್ನು ಗಮನಿಸಿದರೆ ಅಲ್ಲೊಂದು ಪ್ರಾಚೀನ ಸ್ಮಾರಕವಿತ್ತು ಎಂದು ಸಹಜವಾಗಿಯೇ ಊಹಿಸಬಹುದು. ಈಗ ಈ ಸ್ಥಳವನ್ನು **'ಮಲ್ಲಿಕಾರ್ಜುನ ಪಿಂಡ'** ಎಂದು ಕರೆಯಲಾಗುತ್ತದೆ.[೧೮] ಒಂದು ಹಾಳಾದ ಕಟ್ಟಡದ ಆವರಣದಲ್ಲಿ ನಾಲ್ಕು ಅಡಿ ಎತ್ತರದ ಕಟ್ಟೆಯಿದ್ದು, ಅದರ ಮೇಲೆ ನಂದಿ, ಸ್ಥಾವರ ಲಿಂಗ ಮತ್ತು ಎರಡು ಪ್ರಾಚೀನ ಶಿಲ್ಪಗಳಿವೆ. ಅವುಗಳ ಮಧ್ಯದಲ್ಲಿ ಕಪ್ಪು ಶಿಲೆ

ಇದ್ದು, ಅದನ್ನು ಪಿಂಡ ಎಂಬ ಹೆಸರಿನಿಂದ ಪೂಜಿಸಲಾಗುತ್ತದೆ.[೧೯] ಇದನ್ನು ಮಲ್ಲಿಕಾರ್ಜುನ ಪಿಂಡ ಎಂಬ ಹೆಸರಿನಿಂದ ಕರೆಯುತ್ತಿರುವುದನ್ನು ನೋಡಿದರೆ, ಬಹುಶಃ ಇದು ಅಕ್ಕಮಹಾದೇವಿಯ ಜೀವನಕ್ಕೆ ಸಂಬಂಧಿಸಿದ ಕಟ್ಟಡವಾಗಿರಬಹುದು. ಅವಳು ಧ್ಯಾನ ಮಾಡಿರುವ ಸ್ಥಳವೂ ಅಥವಾ ಪೂಜೆ ಮಾಡಿಕೊಂಡ ಸ್ಥಳವೋ ಅಥವಾ ಜನರಿಗೆ ಅಲ್ಲಿ ಕುಳಿತು ಭೋದಿಸಿದ ಸ್ಥಳವಾಗಿಯೋ ಇದನ್ನು ನೋಡಬಹುದು. ಆದರೆ ಈ ಬಗ್ಗೆ ಯಾವ ಖಚಿತ ಪುರಾವೆಗಳು ಸದ್ಯಕ್ಕೆ ದೊರಕಿಲ್ಲ. ಈ ಬಗ್ಗೆ ಖಚಿತವಾದ ತೀರ್ಮಾನಕ್ಕೆ ಬರಲು ಹೆಚ್ಚಿನ ಸಂಶೋಧನೆಯ ಅವಶ್ಯಕತೆಯಿದೆ.

**ಕಾಯವೆಂಬ ಪಟ್ಟಣಕ್ಕೆ ಸತ್ಯವೆಂಬ ಕೋಟೆಯನಿಕ್ಕಿ,**
**ಧರ್ಮಾರ್ಥಕಾಮಮೋಕ್ಷಂಗಳೆಂಬ ಉಕ್ಕಡದವರೆಚ್ಚತ್ತಿರಿ!**
**ಎಚ್ಚತ್ತಿರಿ! ಭಯ ಘನ! ಭಯ ಘನ!**
**ಅಜ್ಞಾನವೆಂಬ ತೀವ್ರ ಕತ್ತಲೆ ಕರ ಘನ! ಕರ ಘನ!**
**ಒಂಬತ್ತು ಬಾಗಿಲ ಜತನವ ಮಾಡಿ! ಜತನವ ಮಾಡಿ!**
**ಜ್ಞಾನಜ್ಯೋತಿಯ ಪ್ರಬಲವ ಮಾಡಿ! ಪ್ರಬಲವ ಮಾಡಿ!**
**ಐವರು ಕಳ್ಳರು ಕನ್ನವ ಕೊರೆವುತೈದಾರೆ, ಸುವಿಧಾನವಾಗಿರಿ! ಸುವಿಧಾನವಾಗಿರಿ!**
**ಜೀವಧನವ ಜತನವ ಮಾಡಿ! ಜತನವ ಮಾಡಿ!**
**ಭಳಿರೆಲಾ! ಭಳಿರೆಲಾ! ಆ ಪಟ್ಟಣದ ಮೂಲಸ್ಥಾನದ ಶಿಖರದ ಮೇಲಣ ಬಾಗಿಲ ತೆರೆದು,**
**ನಡೆವುದೆ ಸುಪಥ ಸ್ವಯಂಭುನಾಥನಲ್ಲಿಗೆ,**
**ಇದನರಿತು ಮಹಾಮಹಿಮ ಮಾಗುಡದ**
**ಮಲ್ಲಿಕಾರ್ಜುನದೇವರಲ್ಲಿ ಎಚ್ಚರಿಕೆಗುಂದದಿರಿ! ಎಚ್ಚರಿಕೆಗುಂದದಿರಿ!**

ಇದು 'ಅಮರಗುಂಡದ ಮಲ್ಲಿಕಾರ್ಜುನ' ಎಂಬ ಶರಣರ ವಚನ. ಇವರು ಮೂಲತಃ ಆಂಧ್ರಪ್ರದೇಶದ ಅಮರಗುಂಡದವರು. ಆನಂತರ ಕರ್ನಾಟಕಕ್ಕೆ ಬಂದಿರಬಹುದೆಂದು ಕೆಲವರು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈಗಿನ ತುಮಕೂರು ಜಿಲ್ಲೆಯ ಗುಬ್ಬಿ ಇವರ ಊರು. ಮರಗುಂಡವು ಗುಬ್ಬಿ ಹೆಸರನ್ನು ಪಡೆದ ಬಗ್ಗೆ ಕಥೆ ಇದೆ. ಕಥಾಸಾಗರ, ಚತುರಾಚಾರ್ಯ ಪುರಾಣ, ಅಮರಗಣಾಧೀಶ್ವರ ಚರಿತ್ರೆಗಳಲ್ಲಿ ಈ ಶರಣರ ಪವಾಡದ ಕಥೆಗಳ ವಿವರಗಳು ಬರುತ್ತವೆ. ಶರಣರ ಕಾವ್ಯಗಳಲ್ಲಿ ಇವರ ಶಿಷ್ಯ ಗುರುಭಕ್ತನೆಂಬವರ ಹೆಸರು ಬರುತ್ತದೆ. ಮಲ್ಲಿಕಾರ್ಜುನನವರು ತನ್ನ ಶಿಷ್ಯನನ್ನು ಪರೀಕ್ಷಿಸಲು ಶೂಲವೇರು ಎನ್ನುತ್ತಾನೆ. ಅದರಂತೆ ಗುರುಭಕ್ತ ಶೂಲವನ್ನು ಏರುತ್ತಾರೆ. ಹಾಗೇ ಶಿವಪದವನ್ನು ಪಡೆಯುತ್ತಾರೆ, ಎನ್ನುವುದು ಕಾವ್ಯಗಳಿಂದ ತಿಳಿದುಬರುತ್ತದೆ.[೨೦] ಈವರೆಗೂ ಇವರ ಕೇವಲ ಎರಡು ವಚನಗಳು ಮಾತ್ರ ನಮಗೆ ಲಭ್ಯವಾಗಿವೆ. ಬಸವಧರ್ಮದ ಪುರಾಣಗಳಲ್ಲಿ, ಕಥೆಗಳಲ್ಲಿ, ಕಾವ್ಯಗಳಲ್ಲಿ ಉಲ್ಲೇಖವಾಗಿರುವ ಇವರು, ಭವಿತನದಲ್ಲಿ ಶಿವನ ಪರಮಭಕ್ತರಾಗಿದ್ದು, ಕಲ್ಯಾಣದ ಶರಣರ ಸಮೂಹದಲ್ಲಿ ಸೇರಿ ಲಿಂಗವಂತಧರ್ಮದ ಸಂಸ್ಕಾರವನ್ನು ಪಡೆದು, ನಿರಾಕಾರ ಶಿವನನ್ನು ತಮ್ಮ ಹೃದಯದಲ್ಲಿ ಪ್ರತಿಷ್ಠಾಪಿಸಿಕೊಳ್ಳುತ್ತಾರೆ. 'ಮಾಗುಡದ ಮಲ್ಲಿಕಾರ್ಜುನ' ಇವರ ವಚನದ ಅಂಕಿತವಾಗಿದೆ. ಇಷ್ಟಲಿಂಗದ ಮೂಲಕವಾಗಿ ಸಾಧಕನು ತನ್ನ ಆತ್ಮದಲ್ಲಿನ ಮಹಾಲಿಂಗದ ದರ್ಶನ ಪಡೆದು 'ಮಹಾಲಿಂಗ'ವೇ ಆಗುತ್ತಾನೆ ಎಂದು ಇವರು ವಚನದಲ್ಲಿ ಉಲ್ಲೇಖಿಸಿದ್ದಾರೆ.

ಸ್ಥಳೀಯವಾಗಿ ಕ್ಷೇತ್ರಕಾರ್ಯದಲ್ಲಿ ನೋಡಿರುವಂತೆ ಸ್ಥಳದಲ್ಲಿರುವ 'ಪಿಂಡ' ಹೆಸರಿನ ಸ್ಥಾವರಲಿಂಗವೂ ಇದೇ ಧಾಟಿಯಲ್ಲಿ ಜನಪದರಲ್ಲಿ ಬಳಕೆಯಾಗುತ್ತಿರುವ ಕಾರಣ, ಅದನ್ನು ಈ ಶರಣನಿಗೆ ಸಂಬಂಧಿಸಿದ ಸ್ಮಾರಕವಾಗಿಯೂ ಊಹಿಸಬಹುದು. ಆದರೆ ಈ ಊಹೆಗೆ ಪೂರಕವಾದ ಇನ್ನೂ ಹೆಚ್ಚಿನ ಆಧಾರಗಳನ್ನು ಹುಡುಕಬೇಕಿದೆ. ಅಲ್ಲಿಯವರೆಗೂ ಇದನ್ನು ಶರಣ ಸ್ಮಾರಕವಾಗಿಟ್ಟುಕೊಂಡು ಕಾಪಾಡಿಕೊಳ್ಳಬೇಕಿದೆ.

### ೬. ಅನಾಮಧೇಯ ಗವಿಗಳು: ಬಸವಕಲ್ಯಾಣ.

ಬಸವಕಲ್ಯಾಣದ **'ರೇಣಾ'**ಗಲ್ಲಿಯಲ್ಲಿ ಯಾವುದೇ ಹೆಸರನಿಂದಲೂ ಗುರುತಿಸದ ಸಾಲು ಸಾಲು ಗವಿಗಳ ಒಂದು ದಿನ್ನೆಯೇ ಇದೆ. ಸುಮಾರು ಹತ್ತಾರು ಗವಿಗಳನ್ನು ಗುಡ್ಡದ ಮಡಿಲಲ್ಲಿ ಸಾಲು ಸಾಲಾಗಿ ಕೊರೆಯಲಾಗಿದೆ. ಕಾಲನ ಕೈಗೆ ಸಿಕ್ಕು ಬಹುತೇಕ ಗವಿಗಳು ಹಾಳಾಗಿದ್ದು, ಅದಕ್ಕಿಂತಲೂ ಹೆಚ್ಚಾಗಿ ಅವುಗಳ ಮಹತ್ವ ಅರಿಯದ ಸುತ್ತಲಿನ ಜನ ಅವುಗಳನ್ನು ಸಂರಕ್ಷಣೆ ಮಾಡುವ ಪ್ರಯತ್ನಕ್ಕೆ ಕೈ ಹಾಕಿಲ್ಲ ಎನಿಸುತ್ತದೆ.

ಪ್ರಸ್ತುತವಾಗಿ ಗವಿಗಳ ಹತ್ತಿರ ಕುರುಬ ಸಮುದಾಯದ ಬಸವರಾಜ ವೈಜಪ್ಪಾ ಮೇತ್ರೆ ಎಂಬ ಕುಟುಂಬ ಮನೆ ಮಾಡಿಕೊಂಡು ವಾಸ ಮಾಡುತ್ತಿದೆ. ಎಫ್.ಟಿ ಹಳಕಟ್ಟಿ ಅವರ ಸಂಪಾದಿತ 'ಸಿದ್ಧ ಪರಂಪರೆ'ಯಲ್ಲಿ ಈ ಗವಿಗಳು ಕುರುಬ ಸಮಾಜದ **'ರೇವಣಸಿದ್ಧ'**ನಿಗೆ ಸಂಬಂಧಿಸಿದ್ದವು ಎಂದು ಹೇಳಲಾಗಿರುವುದನ್ನು ನಾವು ಗಮನಿಸಬೇಕು. ಒಂದೆರಡು ಸುರಕ್ಷಿತವಾಗಿರುವ ಗವಿಗಳನ್ನು ಈ ಕುಟುಂಬ ಬಳಕೆ ಮಾಡಿಕೊಂಡು ಬರುತ್ತಿದೆ. ೨-೩ ತಲೆಮಾರುಗಳಿಂದಲೂ ಆ ಕುಟುಂಬ ಅಲ್ಲಿಯೇ ವಾಸ ಮಾಡುತ್ತಿದೆ. ಮೊದಲೆಲ್ಲ ಸ್ಥಾವರಲಿಂಗದ ಪೂಜೆ ಮಾಡಲಾಗುತ್ತಿತ್ತಂತೆ. ಆದರೆ ಇತ್ತೀಚಿಗೆ ಆ ರೀತಿಯ ಯಾವ ಪೂಜೆಯನ್ನು ಅಲ್ಲಿ ಮಾಡಲಾಗುತ್ತಿಲ್ಲ.[೨೧]

ನಗರದ ಮಹಾತ್ಮ ಗಾಂಧಿ ಪ್ರತಿಮೆಯ ಹತ್ತಿರ ಇರುವ ಆರಕ್ಷಕ ಠಾಣೆಯ ಹಿಂದುಗಡೆಯಲ್ಲಿ ಅನತಿ ದೂರದಲ್ಲಿಯೇ ಈ ಗವಿಗಳ ಬೆಟ್ಟದ ದಿನ್ನೆಯನ್ನು ನೋಡಬಹುದು. ಅಲ್ಲಿರುವ ಒಂದು ಗವಿಯು(ಆ ಕಡೆಯಲ್ಲಿರುವ ಕೊನೆ ಗವಿ) ೧೪ ಬೃಹತ್ ಕಂಬಗಳನ್ನು ಹೊಂದಿದೆ. ಅದರಲ್ಲಿಗ ನಾಲ್ಕು ಕಂಬಗಳು ಬಿದ್ದಿವೆ. ಈ ಗವಿಯು ಸು.೫೬ ಅಡಿ ಉದ್ದ, ೩೬ ಅಡಿ ಅಗಲ ಮತ್ತು ೧೨ ಅಡಿಗಳಷ್ಟು ಎತ್ತರದಿಂದ ಕೂಡಿದೆ. ವಿಶೇಷವೆಂದರೆ ಇಲ್ಲಿರುವ ಎಲ್ಲ ಗವಿಗಳು ಎರಡು ಅಂತಸ್ತಿನಿಂದ ಕೂಡಿವೆ.[೨೨] ಈ ರೀತಿಯ ಗವಿಯು ಇಡೀ ಜಿಲ್ಲೆಯಲ್ಲಿಯೇ ಹುಲಕುಂಟಿ ಮಠದ (ಹುಮನಾಬಾದ ತಾಲೂಕು) ಹತ್ತಿರ ಬಿಟ್ಟರೆ ಬೇರೆಲ್ಲೂ ಕಂಡುಬರುವುದಿಲ್ಲ. ಈಗ ಮೇತ್ರೆ ಕುಟುಂಬ ಬಳಸುತ್ತಿರುವ ಗವಿ ಕೋಣೆಯ ಮೇಲಂತಸ್ತಿನ ಗವಿ ಕೋಣೆಯಲ್ಲಿ ಮೊದಲೆಲ್ಲಾ ಅವರು ಕುರಿಗಳನ್ನು ಹಾಕುತ್ತಿದ್ದರಂತೆ. ಬಹುಶಃ ರಸ್ತೆಯ ಅಗಲಿಕರಣದ ಸಂದರ್ಭದಲ್ಲಿ ಗವಿಗಳ ಮುಂಭಾಗದಲ್ಲಿದ್ದ ಇನ್ನಷ್ಟು ಗವಿ ಕೋಣೆಗಳನ್ನು ಕೆಡವಿದಂತೆ ಕಂಡುಬರುತ್ತದೆ. ಅಲ್ಲಿರುವ ಬಾಗಿಲನ್ನು ಹೊಂದಿರುವ ಗವಿಯ ಈ ಕಡೆ ಮತ್ತೆ ನಾಲ್ಕು ಗವಿಗಳಿದ್ದು, ಅವು ಬಹುತೇಕ ಹಾಳಾಗಿವೆ. ಎಷ್ಟೆಂದರೆ ಅವುಗಳನ್ನು ಈಗ ಜೀರ್ಣೋದ್ಧಾರಗೊಳಿಸಿ ಮೊದಲಿನ ಸ್ಥಿತಿಗೆ ತರಲೂ ಕೂಡ ಸಾಧ್ಯವಿಲ್ಲ.[೨೩] ಬಸವಕಲ್ಯಾಣ ಅಭಿವೃದ್ಧಿ ಪ್ರಾಧಿಕಾರದವರು ಹೆಸರಲ್ಲಿ ಜನಪದರು ಗುರುತಿಟ್ಟುಕೊಂಡ ಗವಿ ಸ್ಮಾರಕಗಳನ್ನು ಮಾತ್ರ ಈವರೆಗೂ ಸಂರಕ್ಷಿಸಿಕೊಂಡು ಬಂದಿದೆ. ಹೆಸರಿರದ ಗವಿಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಲಾಗಿದೆ. ಮುಂದೊಂದು ದಿನ ಆ ಬಗ್ಗೆ ದಾಖಲೆಗಳು ಸಿಗುವುದಿಲ್ಲ ಎನ್ನಲಾದಿತೇ? ಹಾಗಾಗಿ ಕಾಲಮಿಂಚುವ ಮೊದಲು ಅಷ್ಟಿಷ್ಟೂ ಉಳಿದಿರುವ ಗವಿಗಳನ್ನಾದರೂ ಉಳಿಕೊಳ್ಳುವ ಪ್ರಯತ್ನ ತುರ್ತಾಗಿ ಆಗಬೇಕಿದೆ.

### ೭. ಅನಾಮಧೇಯ ಗವಿಗಳು: ಬಸವಕಲ್ಯಾಣ.

ಬಸವಕಲ್ಯಾಣ ನಗರದ ಅನೇಕ ಬಡಾವಣೆಗಳಲ್ಲಿ ಯಾವುದೇ ಹೆಸರಿನಿಂದ ಗುರುತಿಸಲಾಗದ ಸುಮಾರು ಗವಿಗಳು ನಮಗೆ ನೋಡಲು ಸಿಗುತ್ತವೆ. ಅವುಗಳಲ್ಲಿ ಪ್ರಮುಖವಾಗಿ ಪುಣ್ಯಕೋಟೆ ಪದವಿ ಪೂರ್ವ ಮಹಾವಿದ್ಯಾಲಯದ ಹತ್ತಿರದ ಬೆಟ್ಟದ ದಿನ್ನೆಯಲ್ಲಿ ಸಾಲು-ಸಾಲು ಗವಿಗಳಿರುವ ಕುರುಹುಗಳಿವೆ. ಈಗ ಸ್ವಲ್ಪ ಸುರಕ್ಷಿತವಾಗಿರುವ ಒಂದು ಗವಿಯು ಸು.ಎರಡು ಕೋಣೆಗಳಿಂದ ಕೂಡಿದ್ದು, ಪಾಳು ಬಿದ್ದಿದೆ. ಗವಿ ಎದುರಿಗೆ ಪ್ರಾಚೀನ ಕಾಲದ ಹೂವಿನ ಚಿತ್ರದ ಕಲ್ಲು ಕಂಡು ಬರುತ್ತದೆ.[೨೪] ಈ ಗವಿಯ ಬೆಟ್ಟದ ಸಾಲಿನಲ್ಲಿ ಅನೇಕ ಗವಿಗಳಿದ್ದವೆಂದು ಪ್ರತ್ಯಕ್ಷದರ್ಶಿಗಳು ಹೇಳುತ್ತಾರೆ. ಆದರೆ ಭೂ ಕಬಳಿಕೆದಾರರಿಂದಾಗಿ ಅವೆಲ್ಲವು ಈಗ ನೆಲಸಮವಾಗಿದ್ದು, ಮಹತ್ವದ ಚಾರಿತ್ರಿಕ ನೆಲೆಗಳು ಮಾಯವಾಗಿವೆ. ನಾನು

ಕ್ಷೇತ್ರಕಾರ್ಯಕ್ಕೆ ಹೋದಾಗಲೂ ಅಲ್ಲಿ ಜೆ.ಸಿ.ಬಿ.ಯಿಂದ ನೆಲ ಅಗೆದು ಮನೆ ಕಟ್ಟುತ್ತಿರುವ ದೃಶ್ಯ ಕಂಡು ಬಂದಿತು.

ನಗರದ ಹೊರವಲಯದಲ್ಲಿರುವ ಶ್ರೀ ಮಲ್ಲಿಕಾರ್ಜುನ ಖೂಬಾ ಅವರ ಮನೆಯ ಎದುರಿನ ತಗ್ಗು ಪ್ರದೇಶದ ಬೆಟ್ಟದಡಿ ಬಿಳಿ ಸುಣ್ಣ ಬಡಿದ ಗವಿಯೊಂದಿಗೆ ಒಳಗಡೆ ಸಣ್ಣದಾದ ಶಿವಲಿಂಗವಿದ್ದು, ಅಲ್ಲಿನ ಹೊಲದವರು ಅದನ್ನು ದಿನಾಲು ಪೂಜಿಸುತ್ತಾರೆ.[೨೫] ಇದರಿಂದ ಸ್ವಲ್ಪ ಮುಂದೆ ಹೋದರೆ ಅಲ್ಲಿ ಅಂಬಿಗರ ಚೌಡಯ್ಯನ ಗವಿಯಿದ್ದು, ಅದರ ಮತ್ತೊಂದು ಮಗ್ಗಲಲ್ಲಿ ನೂಲಿ ಚಂದಯ್ಯನ ಗವಿ ಇರುತ್ತದೆ. ಹೀಗೆ ಈ ಸ್ಥಳದ ಸುತ್ತಲೂ ಶರಣರ ಹೆಸರಿನ ಸ್ಮಾರಕ ಗವಿಗಳಿರುವುದರಿಂದ ಇದು ಕೂಡ ಶರಣರು ವಾಸ ಮಾಡಿದ ಗವಿಯೇ ಆಗಿರಬೇಕು ಎಂದು ಊಹಿಸಲು ಸಾಧ್ಯವಿದೆ. ಆದರೆ ಇದು ಯಾವ ಶರಣನಿಗೆ ಸಂಬಂಧಿಸಿದ್ದು ಎಂದು ಖಚಿತವಾಗಿ ಹೇಳಲಾಗುತ್ತಿಲ್ಲ.

ನಗರದ ಎಸ್.ಬಿ.ಐ. ಬ್ಯಾಂಕಿನ ಎದುರಿಗಿರುವ ರೇಷ್ಮೆ ಇಲಾಖೆಯ ಕಛೇರಿಯ ಹಿಂದಿನ ಬೆಟ್ಟದ ದಿನ್ನೆಯಲ್ಲಿಯೂ ಗವಿಗಳಿರುವ ಕುರುಹುಗಳಿವೆ. ಆದರೆ ಅವುಗಳಿಗ ಗುರುತು ಸಿಗಲಾರದಷ್ಟು ಹಾಳಾಗಿದ್ದು, ಅಲ್ಲಿಯೂ ಭೂ ಕಬಳಿಕೆದಾರರಿಂದಾಗಿ ಅವು ನಾಶವಾಗಿವೆ.[೨೬]

### ೮. ಹುಲಕುಂಟಿ ಮಠದ ಗವಿಗಳು.

ಹುಮನಾಬಾದ-ಭಾಲ್ಕಿ ಮಧ್ಯದ ಮುಖ್ಯ ರಸ್ತೆಯಿಂದ ದುಬಲಗುಂಡಿ ಗ್ರಾಮ ದಾಟಿದ ನಂತರ ಬಲಭಾಗದಲ್ಲಿ ಒಂದೆರಡು ಕಿ.ಮೀ. ಒಳ ಪ್ರವೇಶ ಮಾಡಿದರೆ ಅತ್ಯಂತ ರಮಣೀಯವಾದ **'ಹುಲಕುಂಟಿ'** ಎಂಬ ಸ್ಥಳವಿದೆ. ಅಲ್ಲೊಂದು ಹುಲಸೂರು ಮಠದ ಶಾಖಾ ಮಠವಿದೆ. ಮಠದ ಹತ್ತಿರ ಕುಂಟೆ(ಕೆರೆ) ಇರುವುದರಿಂದ ಮತ್ತು ಪ್ರಾಚೀನ ಕಾಲದಲ್ಲಿ ಕುಂಟೆಯ ಸುತ್ತಲ ಪರಿಸರಲ್ಲಿ ಹೆಚ್ಚಾಗಿ ಹುಲಿಗಳಿರುತ್ತಿದ್ದವು ಎಂಬ ಪ್ರತೀತಿಯಿಂದಾಗಿ ಆ ಸ್ಥಳಕ್ಕೆ 'ಹುಲಕುಂಟಿ' ಎಂಬ ಸ್ಥಳನಾಮ ಬಂದಿದೆ ಎನ್ನುತ್ತಾರೆ ಸ್ಥಳೀಯರು.[೨೭] ಕುಂಟೆಯ ಆ ಬದಿಯ ಗುಡ್ಡದ ಮಡಿಲಲ್ಲಿ ಮತ್ತು ಈ ಬದಿಯ ಗುಡ್ಡದ ಮಡಿಲಲ್ಲಿ ಒಟ್ಟು ಐದು ಗವಿಗಳು ಕಂಡು ಬರುತ್ತವೆ.[೨೮] ೧೨ನೇ ಶತಮಾನದಲ್ಲಿ ಕಲ್ಯಾಣದ ಶರಣರು ರಚಿಸುತ್ತಿದ್ದ ತಾಡೋಲೆಗಳ ಮೇಲಿನ ವಚನಗಳನ್ನು ಇಲ್ಲಿ ತಂದು ಸಂಗ್ರಹಿಸಿಡುತ್ತಿದ್ದರು ಎನ್ನಲಾಗುತ್ತದೆ.[೨೯]

ಶಾಖಾ ಮಠದ ಎಡಗುಡ್ಡದ ಮಡಿಲಲ್ಲಿ ಮೂರು ಗವಿಗಳಿದ್ದು, ಇನ್ನೂ ಸದೃಢವಾಗಿವೆ. ಅದರಲ್ಲಿನ ಮೊದಲನೆಯ ಗವಿಯು(ಎದುರಿನ) ೨೬ ಅಡಿ ಅಗಲ, ೨೪ ಅಡಿ ಉದ್ದ ಮತ್ತು ೫.೭ ಅಡಿ ಎತ್ತರದಿಂದ ಕೂಡಿದೆ. ಒಳಗಡೆ ಐದು ಧ್ಯಾನ ಮಾಡಗಳು, ನಾಲ್ಕು ಕಂಬಗಳು ಕಂಡುಬರುತ್ತಿದ್ದು, ಎದುರಿನ ಒಂದು ಧ್ಯಾನ ಮಾಡದಲ್ಲಿ ಚಿಕ್ಕ ನಂದಿಯನ್ನು ಕೂಡಿಸಲಾಗಿದೆ. ಇದರ ಬಲಭಾಗದ ಗವಿಯು ೧೬ ಅಡಿ ಅಗಲ, ೨೩ ಅಡಿ ಉದ್ದ ಮತ್ತು ೫.೮ ಅಡಿ ಎತ್ತರದಿಂದ ಕೂಡಿದೆ. ಇದರ ಒಳಗಡೆ ಮೂರು ಧ್ಯಾನ ಮಾಡುಗಳು ಮತ್ತು ಒಂದು ಕಂಬ ಕಂಡುಬರುತ್ತದೆ. ಅದರ ಎದರಿನ ಗವಿಯು ಹಾಳಾದ ಸ್ಥಿತಿಯಲ್ಲಿದ್ದು, ಅಡುಗೆ ಮಾಡಲು ಬಳಸುತ್ತಿರುವಂತಿತ್ತು. ಇದು ೯ ಅಡಿ ಅಗಲ, ೬ ಅಡಿ ಉದ್ದ ಮತ್ತು ೬ ಅಡಿ ಎತ್ತರದಿಂದ ಕೂಡಿರುವ ಚಿಕ್ಕ ಗವಿಯಾಗಿದೆ.[೩೦]

ಕುಂಟೆಯ ಆ ಬದಿಯ ಬೆಟ್ಟದಲ್ಲಿ ಮಠದಿಂದ ಖಟಕ್ ಚಿಂಚೋಳಿ ಗ್ರಾಮಕ್ಕೆ ಹೋಗುವ ರಸ್ತೆಯ ಎಡಕ್ಕೆ ಒಂದು ವಿಶಾಲವಾದ ಎರಡಂತಸ್ತಿನ ಗವಿ ಕಂಡುಬರುತ್ತದೆ. ಇದು ೨೨.೫ ಅಡಿ ಅಗಲ, ೨೪ ಅಡಿ ಉದ್ದ ಮತ್ತು ೫.೭ ಅಡಿ ಎತ್ತರದಿಂದ ಕೂಡಿದೆ. ಒಳಗಡೆ ೬ ಧ್ಯಾನ ಮಾಡಗಳು ಮತ್ತು ನಾಲ್ಕು ಕಂಬಗಳು ಕಂಡುಬರುತ್ತವೆ.[೩೧] ಈ ಗವಿಯನ್ನು ನಾನು ನೋಡಿದಾಗ ಬಹುಶಃ ಯಾರೋ ಬಳಸಲಾರದ ಸ್ಥಳವಿದ್ದಂತೆ ಕಂಡಿತು. ಇದರ ಪರಿಸರದ ಬೆಟ್ಟದ ಶೋಧ ಕಾರ್ಯ ಮಾಡಿದರೆ ಮತ್ತಷ್ಟು ಗವಿಗಳು ಕಂಡು ಬರಬಹುದು.

## ೯. ಚಿಟಗುಪ್ಪ ಗವಿಗಳು:

ಚಿಟಗುಪ್ಪ ಹುಮನಾಬಾದ ತಾಲೂಕಿನ ಒಂದು ದೊಡ್ಡ ಗ್ರಾಮ. ಇದು ಹುಮನಾಬಾದನಿಂದ ೧೫ ಕಿ.ಮೀ. ದೂರದಲ್ಲಿದೆ. ನಿಜಾಮನ ಕಾಲದಲ್ಲಿ ಅದೊಂದು ಪೈಗಾ(ಆಡಳಿತ ಕೇಂದ್ರ)ವಾಗಿತ್ತು. ಅಲ್ಲದೇ ಆರ್ಯ ಸಮಾಜದ ಚಟುವಟಿಕೆಗಳ ಕೇಂದ್ರವೂ ಆಗಿತ್ತು. ಶರಣರ ಚರಿತ್ರೆಯ ಹಲವು ಕಡೆ ಕಲ್ಯಾಣದ ಅನುಭವ ಮಂಟಪದ ಮಾದರಿಯಲ್ಲಿ ಆಯ್ದ ಬೇರೆ ಬೇರೆ ಕೆಲವು ಸ್ಥಳಗಳಲ್ಲಿ **'ಬಯಲು ಅನುಭವ ಮಂಟಪ'**ಗಳಿದ್ದವೆಂಬ ಹೇಳಲಾಗುತ್ತದೆ. ಇದಕ್ಕೆ ಉದಾಹರಣೆಯಾಗಿ ಹುಲಸೂರಿನ ಸಿದ್ದೇಶ್ವರ ಕಟ್ಟೆ, ಮೊರಂಬಿಯ ಹಡಪದ ರೇಚಯ್ಯನ ಕಟ್ಟೆ ಮುಂತಾದವುಗಳನ್ನು ನೋಡಬಹುದು. ಅಂತೆಯೇ ಚಿಟಗುಪ್ಪ ಕೂಡ ಶರಣರ ಬಹುದೊಡ್ಡ(ಬಹುಶಃ ಕಲ್ಯಾಣ ಪರಿಸರದ ನಂತರ) ನೆಲೆಯಾಗಿತ್ತೇನೋ? ಎನಿಸುತ್ತದೆ. ಇದಕ್ಕೆ ಕಾರಣ ಅಲ್ಲಿ ಐದಾರು ಕಡೆ ಇರುವ ಗವಿಗಳು ಮತ್ತು ಶರಣರ ಹೆಸರಿನ ಸ್ಮಾರಕಗಳು ಎನ್ನಬಹುದು. ಚಿಟಗುಪ್ಪದಲ್ಲಿನ ಗವಿಗಳ ವೈಶಿಷ್ಟ್ಯತೆ ಎಂದರೆ ಬಹುಶಃ ಇಡೀ ಬೀದರ ಜಿಲ್ಲೆಯ ಯಾವ ಊರಿನಲ್ಲಿಯು ಇರಲಾರದಷ್ಟು ವಿಶಾಲವಾದ ಗವಿಗಳಿರುವುದು. ಈ ರೀತಿಯ ಬೃಹತ್ ಗವಿ ನಮಗೆ ಗಡವಂತಿಯಲ್ಲಿ ಮಾತ್ರ ಕಂಡುಬರುತ್ತದೆ. ಆದರೆ ಇಲ್ಲಿಯ ಕೆಲವು ಗವಿಗಳು ಮುಸ್ಲಿಂ ಸಮಾಜದ ಹಿಡಿತದಲ್ಲಿವೆ.[೩೨]

## ೧೦. ಇಸ್ತಾರ ಅಲಿ ಷಾ ದರ್ಗಾ: ಚಿಟಗುಪ್ಪ.

ಚಿಟಗುಪ್ಪ ಗ್ರಾಮದ ಪ್ರಮುಖ ಬಸ್ಸು ತಂಗುದಾಣದ ಹಿಂದೆ ಅನತಿ ದೂರದಲ್ಲಿಯೇ, ಬಸ್ ತಂಗುದಾಣಕ್ಕೆ ಹೊಂದಿಕೊಂಡಂತೆಯೇ ಗುಡ್ಡ ಪ್ರದೇಶವಿದ್ದು, ಅಲ್ಲಿ **'ಇಸ್ತಾರ ಆಲಿ ಷಾ ದರ್ಗಾ'** ಹೆಸರಿನ ಒಂದು ಗವಿ ಇದೆ. ಗವಿಯು ಸು.೧೨ ಅಡಿ ಅಗಲ, ೧೭ ಅಡಿ ಉದ್ದ ಮತ್ತು ೫.೫ ಅಡಿ ಎತ್ತರದಿಂದ ಕೂಡಿದೆ.[೩೩] ಬಹುಶಃ ಶರಣರ ನೆಲೆಯಾಗಿದ್ದ ಇದು ಕಾಲಾಂತರದಲ್ಲಿ ದರ್ಗಾವಾಗಿ ಪರಿವರ್ತನೆಯಾಗಿದೆಯೇ? ತಿಳಿದು ಬರುವುದಿಲ್ಲ. ಸ್ಥಳೀಯ ಲಿಂಗಾಯತರು ಸ್ಥಳ ಮತಾಂತರದ ಬಗ್ಗೆ ನಂಬಿಕೆ ವ್ಯಕ್ತಪಡಿಸಿದರೆ, ಮುಸ್ಲಿಂ ಮತಬಾಂಧವರು ಇದು ಮೂಲತಃ ದರ್ಗಾ ಎಂದು ನಂಬುತ್ತಾರೆ. ಇದನ್ನು ಇಥಂಮಿತ್ಥಂ ಎಂದು ಸಾಧಿಸಲು ದಾಖಲೆಗಳ ಕೊರತೆಯಿದೆ. ಗವಿಯ ಒಳಗಡೆ ಈಗ ಮುಸ್ಲಿಂ ಸಂತನ ಸಮಾಧಿಯಿದೆ. ಈಗದನ್ನು ಇಸ್ತಾರ ಅಲಿ ಷಾ ದರ್ಗಾ ಎಂದು ಕರೆಯಲಾಗುತ್ತಿದೆ.

## ೧೧. ಥಂಡೆ ಪೀರ್ ಗವಿ: ಚಿಟಗುಪ್ಪ.

ಚಿಟಗುಪ್ಪ ಗ್ರಾಮದ ಹೊಸ ಸರ್ಕಾರಿ ಆಸ್ಪತ್ರೆಯ ಹತ್ತಿರವಿರುವ ಚಿಕ್ಕ ಗುಡ್ಡದಲ್ಲಿ **'ಥಂಡೆ ಪೀರ್'** ಎಂಬ ಹೆಸರಿನ ಗವಿ ಇದೆ. ಇದು ೧೮ ಅಡಿ ಅಗಲ, ೧೮ ಅಡಿ ಉದ್ದ ಮತ್ತು ೫.೮ ಅಡಿ ಎತ್ತರದಿಂದ ಕೂಡಿದೆ. ಗವಿಯಲ್ಲಿ ಯಾರದೋ ಮುಸ್ಲಿಂ ಸಂತನ ಸಮಾಧಿ ಕಂಡುಬರುತ್ತಿದ್ದು, ಅದರ ಹಿಂದೆಯು ಸಹ ಇನ್ನೂ ಚಿಕ್ಕ ಚಿಕ್ಕ ಕೋಣೆಗಳಿರುವಂತೆ ಕಂಡಿತು. ಮಧ್ಯದಲ್ಲಿ ಗವಿಯು ದೊಡ್ಡದಾಗಿದ್ದರೆ, ಹಿಂದಕ್ಕೆ ಹೋದಂತೆ ಮತ್ತು ಬಾಗಿಲಿನ ಕಡೆ ಬಂದಂತೆ ಚಿಕ್ಕದಾಗುತ್ತಾ ಹೋಗುತ್ತದೆ.[೩೪] ಬಹುಶಃ ಈ ಗವಿಯು ಸಹ ಯಾರದ್ದೋ ಶರಣನ ಗವಿಯೇ ಅಥವಾ ಮೂಲತಃ ಮುಸ್ಲಿಂ ಸಂತರ ಸ್ಥಳವೇ ಎಂಬುದನ್ನು ಖಚಿತವಾಗಿ ಹೇಳಲು ಪುರಾವೆಗಳ ಕೊರತೆ ಇದೆ. ಈಗದನ್ನು ಥಂಡೇ ಪೀರ ಎಂದು ಕರೆಯಲಾಗುತ್ತಿದೆ. ಬೀದರ ಜಿಲ್ಲೆಯ ತುಂಬೆಲ್ಲ ಶರಣರ ಹೆಸರಿನ ಮೇಲೆ ಸಿಕ್ಕಿರುವ ಗವಿ ಸ್ಮಾರಕಗಳೆಲ್ಲವೂ ಹೀಗೆ ಬೆಟ್ಟ–ಗುಡ್ಡಗಳ ಮೇಲೆಯೇ ಸಿಕ್ಕಿರುವುದರಿಂದ ಇವುಗಳ ಸಹ ಶರಣರಿಗೆ ಸಂಬಂಧಿಸಿದ ಸ್ಮಾರಕಗಳಾಗಿ ಊಹಿಸಬಹುದಷ್ಟೇ; ಖಚಿತತೆ ಕೊಡಲಾಗದು.

## ೧೨. ಭಂಡಾರ ಗುತ್ತಿ, ಮೋಳಕೇರಾ.

ಮೋಳಕೇರಾ ಗ್ರಾಮದಲ್ಲಿ ಮಾರಯ್ಯನವರ ಗುಹೆಗೆ ಸಮೀಪದಲ್ಲಿಯೇ 'ಭಂಡಾರಗುತ್ತಿ' ಎನ್ನುವ ಐತಿಹಾಸಿಕ ಸ್ಥಳವಿದೆ. ಒಂದು ಸಲ ಬಸವಣ್ಣನವರು ಮೋಳಿಗೆ ಮಾರಯ್ಯನವರು ಕಾಯಕಕ್ಕೆ ಕಾಡಿಗೆ ಹೋದಾಗ ಅವರ ಮನೆಗೆ ಬಂದರಂತೆ. ಮಹಾದೇವಿಯಮ್ಮನವರು ಮಾರು ವೇಷದಲ್ಲಿದ್ದ ಬಸವಣ್ಣನವರಿಗೆ ಗುರುತಿಸದೆ ಯಾರೋ ಜಂಗಮರಿರಬಹುದೆಂದು ಊಹಿಸಿ ಪೂಜೆ ಪ್ರಸಾದಕ್ಕೆ ವ್ಯವಸ್ಥೆಗೊಳಸಿದರಂತೆ. ಪ್ರಸಾದ ಸೇವಿಸಿದ ಬಸವಣ್ಣನವರು ಹೋಗುವಾಗ ಹೊನ್ನ ಜಾಳಿಗೆಗಳನ್ನು ಬಿಟ್ಟು ಹೋದರಂತೆ. ಮಾರಯ್ಯನವರು ಕಾಯಕದಿಂದ ಮರಳಿ ಮನೆಗೆ ಬಂದಾಗ ವಿಷಯವೆಲ್ಲಾ ಗೊತ್ತಾಯಿತು. ಇದು ಬಸವಣ್ಣನವರಿಂದಲೇ ನಡೆದಿರಬಹುದು ಎಂದು ಊಹಿಸಿದ ಮಾರಯ್ಯನವರು ಆ ಹೊನ್ನ ಜಾಳಿಗೆಗಳನ್ನು ತಮ್ಮ ಕಾಯಕದ ಕಟ್ಟಿಗೆಯಿಂದ ಚಿಮ್ಮಿ ಹಾಕಿದರಂತೆ. ಆ ಜಾಳಿಗೆಗಳು ಬಿದ್ದ ಸ್ಥಳವೇ 'ಭಂಡಾರಗುತ್ತಿ' ಎಂದು ಕರೆಯುತ್ತಾರೆ. ಭಂಡಾರಗುತ್ತಿಯ ವಿಷಯ ಅಲ್ಲಿಯ ಜಾನಪದರಲ್ಲಿ ಮನೆಮಾತಾಗಿದೆ. ಈ ವಿಷಯವನ್ನು ಲಿಂಗಾಯತ ಗ್ರಂಥಗಳು ಕೂಡ ಉಲ್ಲೇಖಿಸಿವೆ. ಮಾರಯ್ಯನವರು ಹೊನ್ನ ಜಾಳಿಗೆಗಳನ್ನು ಕಸಕ್ಕೆ ಸಮನಾಗಿ ತಿಳಿದು ಅಂಗಳಕ್ಕೆ ಎಸೆದಾಗ ಅವುಗಳು ಎಷ್ಟೋ ದಿವಸಗಳು ಅಲ್ಲಿಯೇ ಬಿದ್ದಿದ್ದವೆಂದು ಗ್ರಂಥಗಳು ತಿಳಿಸುತ್ತವೆ. ಆ ಸ್ಥಳವು ಶ್ರೀ ಚೆನ್ನಬಸಪ್ಪ ವಡ್ಡನಕೇರಿ ಎಂಬುವವರ ಹೊಲದಲ್ಲಿದೆ.[೩]

## ೧೩. ಪತ್ರಿವನದ ಗವಿಗಳು, ಬಸವಕಲ್ಯಾಣ:

ರುದ್ರಮುನಿ ಶರಣರ ಗವಿಯ ಬಲಕ್ಕೆ ತ್ರಿಪುರಾಂತ ಕೆರೆಗೆ ಹತ್ತಿಕೊಂಡು **'ಪತ್ರಿವನ'** ಎಂಬ ಸ್ಥಳವಿದೆ. ಇಲ್ಲಿ ಈಗಲೂ ಹತ್ತಾರು ದೊಡ್ಡ ದೊಡ್ಡ ಪತ್ರಿಗಿಡಗಳನ್ನು ನೋಡಬಹುದು. ಈ ಪರಿಸರದಲ್ಲಿ ಸಾಲು ಸಾಲಾಗಿ ಐದಾರು ಗವಿಗಳಿರುವ ಕುರುಹುಗಳು ದೊರಕುತ್ತವೆ. ಅವುಗಳಲ್ಲಿ ಬಹಳಷ್ಟು ಸಂಪೂರ್ಣ ಹಾಳಾದ ಸ್ಥಿತಿಯಲ್ಲಿದ್ದವು. ಪತ್ರಿವನ ಪ್ರವೇಶಿಸುವಾಗ ಬಲಗಡೆ ಕಾಣಸಿಗುವ ಇವುಗಳ ಮೊದಲ ಗವಿಯಲ್ಲಿ ಒಂದು ಶಿವಲಿಂಗವಿದೆ. ಮುಂದಿನ ಗವಿಯಲ್ಲಿ ಶರಣ ಕಲ್ಲಪ್ಪರನ್ನು ಸಮಾಧಿ ಮಾಡಿರುವಂತಿದೆ. **(ದಿನಾಂಕ; ೨೧.೦೮.೧೯೭೫; ಗುರುವಾರ ಎಂಬ ನಾಮಫಲಕ ಅಂಟಿಸಿದೆ)** ಎರಡು ಸಮಾಧಿ ಗದ್ದುಗೆಗಳಿಂದ ಕೂಡಿರುವ ಇನ್ನೊಂದು ಗವಿ ನಂತರವಿದೆ. ಮುಂದೆ ಇನ್ನೊಂದು ಹಾಳು ಬಿದ್ದಗವಿ ಇದ್ದು, ಅದರ ಎದುರಿಗೆ ಕಿರಿದಾದ ಹಾದಿ ಕಂಡುಬರುತ್ತದೆ. ಹೀಗೆ ಇಲ್ಲಿರುವ ಯಾವುದೋ ಒಂದು ಗವಿಯಲ್ಲಿ ಶರಣ **'ಹೂಗಾರ ಮಾದಯ್ಯ'**ನವರು ವಾಸವಾಗಿದ್ದರಂತೆ. ಜನಪದರ ನಂಬಿಕೆಯ ಪ್ರಕಾರ ಇಲ್ಲಿನ ಗವಿಗಳಲ್ಲಿ ಲಿಂಗಪೂಜೆ ಮಾಡುವಾಗ ಶರಣರಿಗೆ ಬೇಕಾದ ಪತ್ರಿಗಳನ್ನು, ಹೂಗಳನ್ನು ನೀಡುವ ಕಾಯಕದವರು ವಾಸಿಸುತ್ತಿದ್ದರು ಎನ್ನಲಾಗುತ್ತದೆ.[೩೬]

**"ಬೂದನಿಗೆ ಭಾಸಿಂಗ ಭೂಮಿತಾಯಿಗೆ ದಂಡೆ**
**ಸಾಲ ಶರಣರಿಗೆ ಸರಮಾಲೆ! ಕಟಿಗೊಂಡು**
**ಮಾದಯ್ಯ ಗೆದ್ದ ಕೈಲಾಸ"**

ಎಂದು ಜನಪದರು ಇಂದಿಗೂ ಶರಣ ಹೂಗಾರ ಮಾದಯ್ಯನನ್ನು ಅವನ ಕಾಯಕದೊಂದಿಗೆ ಗುರುತಿಸಿ ಭಕ್ತಿಯಿಂದ ಹಾಡುತ್ತಾರೆ. ಜಗತ್ತಿನ ಚರ–ಅಚರಗಳೆರಡರಲ್ಲೂ ದೇವನನ್ನು ಕಂಡ ಶರಣ ದಸರಯ್ಯ ತನ್ನ ಪತ್ನಿ ವೀರಮ್ಮಳ ಜೊತೆ ಪತ್ರಿವನದ ಪರಿಸರದಲ್ಲಿಯೇ ವಾಸವಾಗಿದ್ದರೆಂದು ಹೇಳಲಾಗುತ್ತದೆ.[೩೭] ಸಿಂಗಿರಾಜ ತನ್ನ **'ಸಿಂಗಿರಾಜ ಪುರಾಣ'**ದಲ್ಲಿ ಬಸವಣ್ಣನವರ ಮಹಾಕಾರ್ಯದಲ್ಲಿ ಪಾಲ್ಗೊಂಡಿದ್ದವನ ಹೆಸರುಗಳನ್ನು ಹೇಳುವಾಗ '....ವರಶಾಂತ ಕೋಲ ಚೌಡಣ್ಣ ದಸರಯ್ಯ.....' ಎಂದು ಈ ಶರಣನ ಹೆಸರನ್ನು ಉಲ್ಲೇಖಿಸಿದ್ದಾನೆ. ಲಕ್ಕಣ್ಣ ದಂಡೇಶ ತನ್ನ **'ಶಿವತತ್ವ ಚಿಂತಾಮಣಿ'** (ಅಸಂಖ್ಯಾತರ ಕಥೆಗಳಲ್ಲಿ), ಭೀಮಕವಿ ತನ್ನ **'ಬಸವ ಪುರಾಣ'**ದಲ್ಲಿ, ಷಡಕ್ಷರ ಕವಿ ತನ್ನ **'ವೃಷಭೇಂದ್ರ ವಿಜಯ'**ದಲ್ಲಿ ದಸರಯ್ಯನವರ ಬಗ್ಗೆ ವಿವರಿಸಿದ್ದಾರೆ. ದಸರಯ್ಯ ಒಬ್ಬ ಮಹಾ ಅಹಿಂಸಾ ಯೋಗಿ, **ಭೀಮಕವಿ** ಅವನ ದಯಾಗುಣವನ್ನು **"ನುಡಿಯಲೇತಕೆ ಫಲವನ್ನೀ ಒಡೆಯನ್ ಅರಳ್ಗಳೆಯ್ದಿ ಹೂವಿನ ಗಿಡುವಿನಲಿ ಕೊಯ್ಯಲ್ಕೆ ನೊಂದಿತು ನೊಂದೆನೆಂದೆನುತ್ತ, ಆವ ಗಿಡುವಂ ನೋಯಿಸಿದೊಡಂ ಭಾವಿಸುವೊಡಿದು ಹಿಂಸೆಯೆನುತುಂ"** ಹೂ ಕೊಯ್ಯುವುದನ್ನೇ ಬಿಟ್ಟನೆಂದು ವಿವರಿಸಿದ್ದಾನೆ. ಇದರಿಂದ ಆತ ಹೂಗಾರ ಕಾಯಕ ಮಾಡುತ್ತಿದ್ದನು

ಎಂಬುದು ಸಾಬೀತಾಗುತ್ತದೆ. ಅಲ್ಲದೇ ಸಿಂಗಿರಾಜ, ಬಸವಣ್ಣನವರ ಸಮಕಾಲೀನರ ಜೊತೆಗೆ ಇವನ ಹೆಸರನ್ನು ಉಲ್ಲೇಖಿಸಿರುವುದರಿಂದ ದಸರಯ್ಯ ಪತ್ರಿವನದಲ್ಲಿದ್ದ ಎನ್ನಲು ಬಹುದೊಡ್ಡ ಪುರಾವೆ ಸಿಕ್ಕಿದಂತಾಗುತ್ತದೆ. ಷಡಕ್ಷರ ಕವಿ ಕೂಡ **"ನೆಗದಡ್ಡಂಬಾರುವ ಕೀಟಗಣಕ್ಕಳಿವಪ್ಪುದೆಂದು ಬೀಸದೆ ತೋಳಂ"** ಎನ್ನುತ್ತಾ ಎಲ್ಲಿ ತೋಳುಗಳನ್ನು ಜೋರಾಗಿ ಬೀಸಿದರೆ ಗಾಳಿಯಲ್ಲಿ ಹಾರಾಡುವ ಕ್ರಿಮಿಗಳಿಗೆ ನೋವಾದಿತೆಂದು ದಸರಯ್ಯ ಭಾವಿಸುವ ದಯಾಪರತೆಯನ್ನು ಹೊಂದಿದ್ದನೆಂದು ವಿವರಿಸುತ್ತಾನೆ.

ಶರಣ ದಸರಯ್ಯನವರು **"ದಸರೇಶ್ವರ ಲಿಂಗ"** ಎಂಬ ವಚನಾಂಕಿತದಲ್ಲಿ ವಚನಗಳನ್ನು ರಚಿಸಿದ್ದಾರೆ. ಈವರೆಗೂ ಇವರ ೧೧ ವಚನಗಳು ಸಿಕ್ಕಿವೆ. ವೀರಮ್ಮ ದಸರಯ್ಯಗಳ ಪುಣ್ಯಸ್ತ್ರೀ. ಈಕೆ **"ಗುರು ಶಾಂತೇಶ್ವರ"** ಎಂಬ ವಚನಾಂಕಿತದಲ್ಲಿ ವಚನಗಳನ್ನು ರಚಿಸಿದ್ದಾಳೆ. ಈವರೆಗೂ ಈಕೆಯ ಐದು ವಚನಗಳು ಸಿಕ್ಕಿವೆ.[೩೮]

## ೧೪. ಅನಾಮಧ್ಯೇಯ ಗವಿ: ಹುಮನಾಬಾದ.

ಹುಮನಾಬಾದ ನಗರದ ಪೊಲೀಸ್ ಠಾಣೆಯ ಎದುರಿನ ಹಾಗೂ ಪ್ರಸ್ತುತ ಇರುವ ಎಪಿಎಂಸಿಯ ಪಕ್ಕದ ರಸ್ತೆಯಲ್ಲಿ ಮುಖ್ಯರಸ್ತೆಯಿಂದ ಸ್ವಲ್ಪ ಹೆಜ್ಜೆಗಳಷ್ಟು ನಡೆದು ಹೋದರೆ ಅಲ್ಲೊಂದು ಗವಿ ಇತ್ತು.[೩೯] ಈಗದನ್ನು ಸಂಪೂರ್ಣವಾಗಿ ಹಾಳು ಮಾಡಲಾಗಿದೆ. ಇತಿಹಾಸದ ಓದು ಮತ್ತು ಬರವಣಿಗೆಯಲ್ಲಿ ಅಪಾರ ಆಸಕ್ತಿ ಹೊಂದಿರುವ ಚೀನಕೇರಾ ಗ್ರಾಮದ ನನ್ನ ಸ್ನೇಹಿತ ಶ್ರೀ ದಯಾನಂದರೆಡ್ಡಿ ಮತ್ತು ನಾನು ಆ ಗವಿಗೆ ಭೇಟಿ ನೀಡಿ ಪರಿಶೀಲಿಸಿದ್ದೇವು. ಒಳಗಡೆ ಸ್ಥಾವರಲಿಂಗವನ್ನಿಟ್ಟು ಪೂಜಿಸಲಾಗುತ್ತಿತ್ತು. ಆದರೆ ಈಗ ರಸ್ತೆ ಅಗಲೀಕರಣದ ಹೆಸರಲ್ಲಿ ಅದನ್ನು ಮುಚ್ಚಿ ಹಾಕಲಾಗಿದೆ. ಅದರ ಮೇಲೆಲ್ಲ ಈಗ ವಾಹನಗಳನ್ನು ರಿಪೇರಿ ಮಾಡುವ ಅಂಗಡಿಗಳು ಬಂದಿವೆ.[೪೦] ಇಂತಹದ್ದೇ ಮಾದರಿಯ ಗವಿಯೊಂದು ಚೀನಕೇರಾ ಗ್ರಾಮದಲ್ಲೂ ಇದೆ. ನೋಡಲು ತುಂಬಾ ಚಿಕ್ಕದು. ಈಗದನ್ನು ಏಕನಾಥ ಮಂದಿರ ಎಂದು ಕರೆಯಲಾಗುತ್ತದೆ.[೪೧] ಈ 'ಏಕನಾಥ' ಪಕ್ಕದ ಮಹಾರಾಷ್ಟ್ರದ ಜನರ ಆರಾಧ್ಯ ದೈವ; ಸಮಸ್ಯೆ ಇದಲ್ಲ. ಜಿಲ್ಲೆಯ ಅನೇಕ ಊರುಗಳಲ್ಲಿ ಏಕನಾಥ ಮಂದಿರಗಳಿವೆ. ಅಲ್ಲೆಲ್ಲೂ ಗವಿಗಳಿಲ್ಲ. ಹಾಗಾಗಿ ಚೀನಕೇರಾ ಗ್ರಾಮದ ಗವಿ ಮೂಲತಃ ಏಕನಾಥನದೋ ಅಥವಾ ಯಾವುದಾದರು ಶರಣನಿಗೆ ಸಂಬಂಧಿಸಿದ್ದೋ ಗೊತ್ತಿಲ್ಲ.

## ೧೫. ಮೋಳಕೇರಾದಲ್ಲಿರುವ ವೀರಭದ್ರ ಗವಿ ಮಡಿವಾಳ ಮಾಚಯ್ಯನದೇ?

ಇದೇ ಮಾದರಿಯ ಸಮಸ್ಯೆಯೊಂದು ಮೋಳಕೇರಾದಲ್ಲೂ ಇದೆ. ಊರ ಮಧ್ಯೆ ವೀರಭದ್ರನ ದೇವಾಲಯವಿದೆ. ಈ ದೇವಾಲಯ ಚೀನಕೇರಾ ಗ್ರಾಮದ ಏಕನಾಥ ಮಂದಿರದಂತೆ, ಗವಿಯ ಮೇಲೆ ನಿರ್ಮಾಣಗೊಂಡಿದೆ.[೪೨]ಶರಣ ಪರಂಪರೆಯಲ್ಲಿ 'ಮಡಿವಾಳ ಮಾಚಿದೇವ'ರನ್ನು ವೀರಭದ್ರನ ಅವತಾರವೆಂದು ಕರೆಯುವ ಒಂದು ಪರಿಪಾಠವಿದೆ. ಹಾಗಾಗಿ ಮೋಳಕೇರಾ ಗ್ರಾಮದ ಗವಿಯಲ್ಲಿರುವ ವೀರಭದ್ರ ಮೂಲತಃ ಮಡಿವಾಳ ಮಾಚಿದೇವನಾಗಿ ಪೂಜೆಗೊಳ್ಳುತ್ತಿದ್ದನೇ? ಗೊತ್ತಿಲ್ಲ. ಕಾಲಾನಂತರದಲ್ಲಿ ಊರವರು ಅದನ್ನು ವೀರಭದ್ರ ದೇವಾಲಯವೆಂದು ಕರೆದರೆ? ಈ ಬಗ್ಗೆ ವಿಚಾರಿಸಬೇಕಿದೆ. ಏಕೆಂದರೆ ಮೋಳಕೇರಾ ವಚನಗಳಲ್ಲಿ ಉಲ್ಲೇಖಗೊಳ್ಳುವ ಊರು. ಅಲ್ಲಿ ಶರಣ ಮೋಳಿಗೆ ಮಾರಯ್ಯ ಮತ್ತು ಅವನ ಹೆಂಡತಿ ಮಹಾದೇವಿಯ ಗವಿ ಸ್ಮಾರಕಗಳಿವೆ. ಭಂಡಾರಗುತ್ತಿ ಎಂಬ ಶರಣರಿಗೆ ಸಂಬಂಧಿಸಿದ ಸ್ಥಳ ಇರುವುದು ಇಲ್ಲಿಯೇ. ಹಾಗಾಗಿ ಈ ವೀರಭದ್ರ ಗವಿ ದೇವಾಲಯದ ಬಗ್ಗೆ ಹೊಸ ಮಾಹಿತಿಗಳನ್ನು ಹುಡುಕಬೇಕಿದೆ.

## ೧೬. ಲಿಂಗದಹಳ್ಳಿ.

ಹುಮನಾಬಾದ–ಬಸವಕಲ್ಯಾಣ ಮಾರ್ಗದಲ್ಲಿ ರಾಜೇಶ್ವರ ಎಂಬ ಗ್ರಾಮವಿದೆ. ರಾಜೇಶ್ವರ ಮೂಲತಃ **'ಬಚ್ಚಿಕಾಯಕದ ಬಸವಣ್ಣನ'**ವರ ಊರು ಎಂದು ಹೇಳಲಾಗುತ್ತದೆ. ಬಸವಣ್ಣನವರು ಅನೇಕ ಶಿವಶರಣರೊಡನೆ ಕಲ್ಯಾಣ ಕ್ರಾಂತಿಯ ನಂತರ ಕೂಡಲ ಸಂಗಮಕ್ಕೆ ಹೋಗುವಾಗ ಲಿಂಗಪೂಜೆ ಮಾಡಿಕೊಂಡು ಗ್ರಾಮ 'ಲಿಂಗದ ಹಳ್ಳಿ'ಯಿಂದ ಇದು ಕೇವಲ ಮೂರು ಕಿ.ಮೀ ಅಂತರದಲ್ಲಿದೆ. ಮತ್ತೆ ಇಲ್ಲಿ ಬಚ್ಚಿಕಾಯಕದ ಬಸವಣ್ಣನವರಿಗೆ ಸಂಬಂಧಿಸಿದ ಸ್ಮಾರಕಗಳು ಇಲ್ಲಿವೆ. ಜೊತೆಗೆ ಚಿಟಗುಪ್ಪ ಮಾದರಿಯ ಹಾಳಾದ ಸ್ಥಿತಿಯಲ್ಲಿರುವ ಗವಿಗಳು ಇಲ್ಲಿದ್ದು, ಅವುಗಳ ರಕ್ಷಣೆಯಾಗುತ್ತಿಲ್ಲ. ಆದರೆ ಪೂಜೆ ಮಾತ್ರ ದಿನಾಲು ನಡೆಯುತ್ತದೆ. ರಾಜೇಶ್ವರದಲ್ಲಿ ಎರಡು ಮೂರು ಗವಿಗಳಿದ್ದವೆಂದು ಅಲ್ಲಿನ ಜನ ಹೇಳುತ್ತಾರಾದರೂ, ಈಗಲ್ಲಿ ಕೇವಲ ಒಂದು ವಿಶಾಲವಾದ ಗವಿ ಮಾತ್ರ ಊರ ಹೊರಗಡೆ ನೋಡಲು ಸಿಗುತ್ತದೆ.[೪೩]

ರಾಜೇಶ್ವರ ಗ್ರಾಮದಿಂದ ಒಳಹೋದರೆ **'ಲಿಂಗದಹಳ್ಳಿ'** ಎಂಬ ಊರು ಸಿಗುತ್ತದೆ. ಲಿಂಗದಹಳ್ಳಿ ಎಂಬ ಪದವೇ ಥಟ್ಟನೇ ಶರಣರ ಇಷ್ಟಲಿಂಗದ ನೆನಪನ್ನು ತರುವುದರಿಂದಾಗಿ ನಾನು ಆ ಗ್ರಾಮಕ್ಕೆ ಕ್ಷೇತ್ರಕಾರ್ಯ ಮಾಡಲು ಹೋಗಿದ್ದೆ. ಲಿಂಗದಹಳ್ಳಿಯಲ್ಲಿ ಕೆರೆಯೊಂದು ಇದ್ದು, ಕಲ್ಯಾಣ ಕ್ರಾಂತಿಯ ನಂತರ ಶರಣರು ದೇಶಾಂತರ ಹೋಗುವಾಗ ಅಲ್ಲಿ ಕುಳಿತು ಲಿಂಗಪೂಜೆ ಮಾಡಿಕೊಂಡರು ಎಂದು ಊರವರು ನಂಬುತ್ತಾರೆ. ಆ ಕಾರಣಕ್ಕಾಗಿಯೇ ನಮ್ಮ ಊರಿಗೆ 'ಲಿಂಗದಹಳ್ಳಿ' ಎಂಬ ಹೆಸರು ಬಂದಿತು ಎಂಬುದು ಅವರ ನಂಬಿಕೆ.[೪೪] ಕೆರೆಯ ಜೊತೆಗೆ ಊರಲ್ಲಿ ಬಸವಣ್ಣನವರ ಹೆಸರಿನ ಸ್ಮಾರಕವಿದ್ದು, ದಿನಾಲೂ ಪೂಜೆಗೊಳ್ಳುತ್ತದೆ. ಹೆಚ್ಚಿನ ವಿವರಗಳು ಲಭ್ಯವಿಲ್ಲ.

## ೧೭. ತುಗಾಂವ>ತುರುಗಾಹಿ ರಾಮಣ್ಣನ ಊರೇ?.

ಹುಮನಾಬಾದ ನಗರದಿಂದ ಹಳ್ಳಿಖೇಡ (ಬಿ) ಮಾರ್ಗವಾಗಿ ಬೀದರಗೆ ಹೋಗುವ ಮಾರ್ಗ ಮಧ್ಯದಲ್ಲಿ ಕಾರಂಜಾ ಸೇತುವೆ ಇದುರು ಭಾಗದಲ್ಲಿ ಮುಖ್ಯರಸ್ತೆಯಿಂದ ೨–೩ ಕಿ.ಮೀ ಒಳಹೋದರೆ 'ತುಗಾಂವ' 'ಕಟ್ಟಿತುಗಾಂವ' ಎಂಬ ಹೆಸರಿನ ಊರಿದೆ. ಕೆಲವರ ಪ್ರಕಾರ 'ತುರುಗಾಹಿ ರಾಮಣ್ಣ' ಈ ಊರಿನವನು. ಇದಕ್ಕೆ ಖಚಿತ ದಾಖಲೆಗಳಿಲ್ಲವಾದರೂ ಅವರು ಗ್ರಾಮಸೂಚಿ ಆಧಾರದ ಮೇಲೆ ತುಗಾಂವ>ತುರುಗಾಹಿ ಎಂಬುದನ್ನು ಜೋಡಿಸುತ್ತಾರೆ. ತುರುಗಾಹಿ ರಾಮಣ್ಣನ ಸಂಸಾರಿಕ ಜೀವನದ ಬಗ್ಗೆಯಾಗಲಿ, ಅವನು ಎಲ್ಲಿಂದ ಕಲ್ಯಾಣಕ್ಕೆ ಬಂದನೆಂದಾಗಲಿ ತಿಳಿದು ಬಂದಿಲ್ಲ. ಆದರೂ ಲಕ್ಕಣ್ಣ ದಂಡೇಶನು ತನ್ನ **'ಶಿವತತ್ವ ಚಿಂತಾಮಣಿ'**ಯಲ್ಲಿ ಇವನ ಭಾವ ನಿರ್ಭಾವತೆಯನ್ನು ಸ್ಮರಿಸಿದ್ದಾನೆ.[೪೫] **'ಗೋಪಿನಾಥ ವಿಶ್ವೇಶ್ವರ ಲಿಂಗ'** ಇವನ ವಚನಗಳ ಅಂಕಿತನಾಮವಾಗಿದೆ. ಈವರೆಗೂ ಇವನ ೪೬ ವಚನಗಳು ಲಭ್ಯವಾಗಿವೆ. ಈಗ ಲಭ್ಯವಿರುವ ಇವನ ವಚನಗಳಲ್ಲಿ ಒಂದು ವಚನ ಕಲ್ಯಾಣ ಕ್ರಾಂತಿಯ ಸುಳಿವಿನ ಜೊತೆಗೆ, ಶರಣರೆಲ್ಲರೂ ಕ್ರಾಂತಿಯ ನಂತರ ಹೋದ ಸ್ಥಳಗಳನ್ನು ಅವರ ಹೆಸರಿನೊಂದಿಗೆ ಉಲ್ಲೇಖಿಸುತ್ತದೆ. ಬಹುಶಃ ತುರುಗಾಹಿ ರಾಮಣ್ಣ ಕ್ರಾಂತಿಯ ನಂತರವೂ ಇಲ್ಲಿಯೇ ಬಹಳಷ್ಟು ದಿನ ಉಳಿದಂತೆ ಕಂಡುಬರುತ್ತದೆ. ಆ ವಚನ ಹೀಗಿದೆ. **"ಬಂದಿತ್ತು ದಿನ ಬಸವಣ್ಣ ಕಲ್ಲಿಗೆ ಚೆನ್ನಬಸವಣ್ಣ ಉಳುವೆಯಲ್ಲಿಗೆ ಪ್ರಭು ಅಕ್ಕ ಕದಳಿದ್ವಾರಕ್ಕೆ ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ಲಕ್ಷ್ಯಕ್ಕೆ ನಾ ತುರುವಿನ ಬೆಂಬಳಿಯಲ್ಲಿ ಹೋದ ಮರೆಯಲ್ಲಿ ಅಡಗಿಹರೆಲ್ಲರು ಅಡಗಿದುದ ಕೇಳಿ ನಾ ಗೋಪಿನಾಥ ವಿಶ್ವೇಶ್ವರಲಿಂಗದಲ್ಲಿಯ ಉಡುಗುವೆನು"**.[೪೬]

ಈ ವಚನದಲ್ಲಿರುವ **"ಅಡಗಿಹರೆಲ್ಲರು ಅಡಗಿದುದ ಕೇಳಿ ನಾ ಗೋಪಿನಾಥ ವಿಶ್ವೇಶ್ವರಲಿಂಗದಲ್ಲಿ ಉಡುಗುವೆನು"** ಎಂಬ ಮಾತನ್ನು ನಾವು ಗಮನಿಸಬೇಕು. ವಚನದಲ್ಲಿ ಹೆಸರಿಸಿರುವ ಶರಣರೆಲ್ಲರೂ ಲಿಂಗೈಕ್ಯರಾದ್ದುದನ್ನು ಖಚಿತಪಡಿಸುತ್ತಾ, ಆ ನಂತರ ನಾನು ಉಡುಗುವೆನು ಎಂದಿದ್ದಾನೆ.

## ೧೮. ಇತರೆ ಸ್ಮಾರಕಗಳು.

ಬಸವಕಲ್ಯಾಣ ತಾಲೂಕಿನ **'ಖಂಡಾಳ'** ಗ್ರಾಮದಲ್ಲಿರುವ ಬಸವಣ್ಣನವರ ಹೆಸರಿನ ಸ್ಮಾರಕ, ರಾಜೇಶ್ವರ ಗ್ರಾಮದ ಹತ್ತಿರ ಬರುವ **'ಘೊಗ್ಗ'** ಗ್ರಾಮದಲ್ಲಿರುವ ಶರಣೆ ಗೊಗ್ಗವ್ವೆಯ ಸ್ಮಾರಕ, **'ಮಂಗಳೂರಿ'**ನ ಹೊರವಲಯದಲ್ಲಿರುವ ದೇವಸ್ಥಾನ, ಹುಮನಾಬಾದ ತಾಲೂಕಿನ **'ಮದರಗಾಂವ'** ಗ್ರಾಮದಲ್ಲಿರುವ ಮಲ್ಲಿಕಾರ್ಜುನ ದೇವಾಲಯ, **'ಸದಲಾಪುರ'**ದ ಮಠ, **'ಖೇಳಗಿ'** ಮಠ, **'ನಿರ್ಣಾ'** ಗ್ರಾಮದ ಹೊರವಲಯದಲ್ಲಿರುವ ಬಸವೇಶ್ವರ ಗುಡಿ ಸ್ಮಾರಕ, **'ಹಾಲಹಳ್ಳಿ'**ಯಲ್ಲಿರುವ ಸಂಗಮೇಶ್ವರ ಕೊಳ, ದೊಡ್ಡ **'ಹಳ್ಳಿಖೇಡ'**ದಲ್ಲಿರುವ ಸಂಗಮೇಶ್ವರ ಮಠ, **'ನೀಲಮ್ಮನಹಳ್ಳಿ'**ಯ ನೀಲಮ್ಮನ ಕೊಳ, **'ತಾಳಮಡಗಿ'**ಯ ಅಲ್ಲಮಪ್ರಭುವಿನ ಗುಡಿ, **'ಬೇನ್ ಚಿಂಚೋಳಿ'**ಯಲ್ಲಿರುವ ಶುಭಂಜಪ್ಪ ನಿರಂಜನಪ್ಪನವರ ಗುಡಿ, **'ಕುರುಬಖೇಳಗಿ'**ಯಲ್ಲಿರುವ ಬಸವಣ್ಣನವರ ಗುಡಿ[೨೫] ಹಾಗೂ ಬೀದರ ಜಿಲ್ಲೆಯ ಗಡಿಯುದ್ದಕ್ಕೂ ಹೊರರಾಜ್ಯಗಳ ಗ್ರಾಮಗಳಲ್ಲಿ ಶರಣರಿಗೆ ಸಂಬಂಧಿಸಿದ ನೂರಾರು ಸ್ಮಾರಕಗಳಿದ್ದು ಅವುಗಳನ್ನು ರಕ್ಷಿಸುವ ಕೆಲಸವಾಗಬೇಕಿದೆ. ಜೊತೆಗೆ ಇವುಗಳ ಬಗ್ಗೆ ಹೆಚ್ಚಿನ ಅಧ್ಯಯನಗಳ ಅಗತ್ಯವಿದ್ದು, ಅವುಗಳ ಸಂಬಂಧಿತ ಇತರೆ ಮಾಹಿತಿಗಳನ್ನು ಹೊರಹಾಕುವ ಅವಶ್ಯಕತೆ ಇದೆ.

**ಅಡಿ ಟಿಪ್ಪಣಿಗಳು.**

೧. ಕ್ಷೇತ್ರಕಾರ್ಯ.
೨. ಡಾ. ಎಂ.ಎಂ.ಕಲ್ಬುರ್ಗಿ; ಮಾರ್ಗ ಸಂಪುಟ–೨ ಮತ್ತು ೮.
೩. ಡಾ. ಜಯಶ್ರೀ ದಂಡೆ (ಲೇಖನ); ಬಸವೇಶ್ವರರ ಸಮಕಾಲೀನರು; ಬಸವ ಸಮಿತಿ, ಬೆಂಗಳೂರು.
೪. ಕ್ಷೇತ್ರಕಾರ್ಯ.
೫. ಅದೇ;
೬. ಅದೇ;
೭. ಅದೇ;
೮. ಅದೇ;
೯. ಅದೇ;
೧೦. ಅದೇ;
೧೧. ಅದೇ;
೧೨. ಅದೇ;
೧೩. ಅದೇ;
೧೪. ಸ್ಥಳೀಯ ಜನಪದರ ನಂಬಿಕೆ.
೧೫. ಕ್ಷೇತ್ರಕಾರ್ಯ.
೧೬. ಶ್ರೀ ಹಣಮಂತ ಚಾಕೋರೆ, ತೊಗಲೂರು; ಸಂದರ್ಶನ–೨೦೧೪.
೧೭. ಅದೇ;
೧೮. ಕ್ಷೇತ್ರಕಾರ್ಯ.
೧೯. ಕ್ಷೇತ್ರಕಾರ್ಯ.
೨೦. ಸ್ಥಳೀಯ ಜನಪದರ ನಂಬಿಕೆ.
೨೧. ಶ್ರೀ ಬಸವರಾಜ ವೈಜಪ್ಪಾ ಮೇತ್ರೆ; ಗವಿಯಲ್ಲಿ ವಾಸಿಸುತ್ತಿರುವ ನಿವಾಸಿ; ಸಂದರ್ಶನ; ಆಕ್ಟೋಬರ್–೨೦೧೪.
೨೨. ಕ್ಷೇತ್ರಕಾರ್ಯ.
೨೩. ಅದೇ;
೨೪. ಅದೇ;
೨೫. ಅದೇ;

೨೬.	ಅದೇ;
೨೭.	ಶ್ರೀ ಶಿವಸ್ವಾಮಿ ಚೀನಕೇರಿ; ಸಾಹಿತಿಗಳು; ಸಂದರ್ಶನ–೨೦೧೫.
೨೮.	ಕ್ಷೇತ್ರಕಾರ್ಯ.
೨೯.	ಶ್ರೀ ಶಿವಸ್ವಾಮಿ ಚೀನಕೇರಿ; ಸಾಹಿತಿಗಳು; ಸಂದರ್ಶನ–೨೦೧೫.
೩೦.	ಕ್ಷೇತ್ರಕಾರ್ಯ.
೩೧.	ಅದೇ;
೩೨.	ಅದೇ;
೩೩.	ಅದೇ;
೩೪.	ಅದೇ;
೩೫.	ಶ್ರೀ ಕಲ್ಯಾಣಪ್ಪ ನಾವದಗಿ; ಇತಿಹಾಸ ಪ್ರಾಧ್ಯಾಪಕರು ಮತ್ತು ಸ್ಥಳೀಯ ನಿವಾಸಿ; ಸಂದರ್ಶನ–೨೦೧೫.
೩೬.	ಸ್ಥಳೀಯ ಜನಪದರ ನಂಬಿಕೆ.
೩೭.	ಡಾ.ಜಯಶ್ರೀ ದಂಡೆ ಮತ್ತು ಡಾ.ವೀರಣ್ಣ ದಂಡೆ; ಶರಣರ ಸ್ಮಾರಕಗಳು; ಪು–೬೯.
೩೮.	ಬಸವೇಶ್ವರರ ಸಮಕಾಲೀನರು; ಬಸವ ಸಮಿತಿ, ಬೆಂಗಳೂರು; ಪು–೨೯೫–೨೯೬.
೩೯.	ಕ್ಷೇತ್ರಕಾರ್ಯ.
೪೦.	ಅದೇ;
೪೧.	ಅದೇ;
೪೨.	ಅದೇ;
೪೩.	ಅದೇ;
೪೪.	ಅದೇ;
೪೫.	ಗುಂಬೀಶಂ; ತುರುಗಾಹಿ ರಾಮಣ್ಣನ ವಚನಗಳ ಭಾವ–ನಿರ್ಭಾವ; ಪು–೧೮.
೪೬.	ಬಸವ ಸಮಿತಿ, ಬೆಂಗಳೂರು; ಬಸವೇಶ್ವರ ಸಮಕಾಲೀನರು; ಪು–೨೯೧.
೪೭.	ಶ್ರೀ ಶಿವಸ್ವಾಮಿ ಚೀನಕೇರಿ; ಸಾಹಿತಿಗಳು; ಸಂದರ್ಶನ–೧೮ನೇ ನವೆಂಬರ್ ೨೦೨೧.





ಮೌಲಾಬಾಬಾ ಗವಿ, ಬೇಲೂರು.




ಬಯಲು ಅನುಭವ ಮಂಟಪ, ತೊಗಲೂರು ಸೀಮೆ.



ಭಿಲ್ಲೇಶ ಬೊಮ್ಮಯ್ಯನ ಶಿಲ್ಪ, ಬೇಲೂರು.



ಇಸ್ತಾರ ಅಲಿ ಷಾ ದರ್ಗಾ ಗವಿ, ಚಿಟಗುಪ್ಪ.



ಇಸ್ತಾರ ಅಲಿ ಷಾ ದರ್ಗಾ ಗವಿ, ಚಿಟಗುಪ್ಪ.



ಪುಣ್ಯಕೋಟಿ ಪ.ಪೂ ಕಾಲೇಜು ಹತ್ತಿರದ ಅನಾಮಧ್ಯೇಯ ಗವಿ.



ರೀಣ್ಯಾ ಗಲ್ಲಿಯಲ್ಲಿರುವ ಅನಾಮಧ್ಯೇಯ ಗವಿ, ಬಸವಕಲ್ಯಾಣ.



ಧಂಡೇಪೀರ ಗವಿಗಳು, ಚಿಟಗುಪ್ಪ.



# ಬೇಡರ ನಡತೆ ಮತ್ತು ಸಂಪ್ರದಾಯ.

**–ಶ್ರೀ ರಂಗನಗೌಡ ಹೆಚ್. ಪಾಟೀಲ,**
ಶ್ರೀ ಸಪ್ತಗಿರಿ ಪ್ರಕಾಶನ ಅಂಜಳ,
ತಾ. ದೇವದುರ್ಗ–೫೮೪೧೧೧, ಜಿ. ರಾಯಚೂರ.

ಬೇಡರು ಅಥವಾ ಬೇಡರಸ್ ಜಿಲ್ಲೆಯ ಎಲ್ಲಾ ಸ್ಥಳಗಳಲ್ಲಿ ವಾಸವಾಗಿದ್ದರು. ವಿಶೇಷವಾಗಿ ಅವರು ಸುರಪುರ, ಶಹಾಪೂರ ಮತ್ತು ದೇವದುರ್ಗ ತಾಲೂಕುಗಳಲ್ಲಿ ಇದ್ದರು. ಅವರದೇ ಕಥೆಯ ಅನುಸಾರ **ಕನ್ನಯ್ಯನು ಗಿರಿಜನ** ಜಾತಿಯನ್ನು ಸ್ಥಾಪಿಸಿದನು. ಒಬ್ಬ ಧಾರ್ಮಿಕನಾಗಿ ಹೂ ಹಾಗೂ ಬೇಟೆಯಿಂದ ಶಿವನ ಆರಾಧಕ ನಾಗಿದ್ದನು. ಕನ್ನಯ್ಯನು ಶಿವನನ್ನು ಆರಾಧಿಸಲಾಗಿ, ಸಂತುಷ್ಟನಾದ ಶಿವನು ಮತ್ತು ಅವನ ಹೆಂಡತಿಯ ಭಕ್ತಿಗೆ ಮೆಚ್ಚಿ ಶಿವನು ಪ್ರತ್ಯಕ್ಷವಾಗಿ ವರವನ್ನು ಬೇಡಲು ಕೇಳಿದನು. ಆಗ ಕನ್ನಯ್ಯನು ಶಿವನನ್ನು ಪ್ರಾರ್ಥಿಸಿ, **ತಾನು ಮತ್ತು ತನ್ನ ವಂಶದವರು ಇಟ್ಟ ಗುರಿ ತಪ್ಪದಂತೆ ಮತ್ತು ಕಡಿಮೆ ನೀರಿನಲ್ಲಿ ಹೆಚ್ಚು ಶ್ರಮ ಪಡದೆ ಹೊಲಗಳಲ್ಲಿ ದವಸ ಧಾನ್ಯ ಬೆಳೆಯಲಿ ಎಂದು ವರವನ್ನು** ಬೇಡಿದನು. ದೇವರು ಅವನಿಗೆ ವರವನ್ನು ದಯಪಾಲಿಸಿದನು. ಎಲ್ಲಾ ಬೇಡರು ಗುರಿಯಿಟ್ಟು ಹೊಡೆದು ಬೇಟೆಯಾಡುತ್ತಾ ಜೀವನ ಮತ್ತು ಮುಂಗಾರಿ ಬೆಳೆ ಬೆಳೆಯಲು ಅವುಗಳಿಗೆ ಹೆಚ್ಚಿನ ನೀರು ಹಾಗೂ ಕಾಳಜಿ ವಹಿಸಬೇಕಾಗಿರಲಿಲ್ಲ. ಸಾಮಾನ್ಯವಾಗಿ ಈ ಜನಾಂಗದವರು ಪುರುಷರ ಹೆಸರುಗಳು; ಭೀಮಪ್ಪ, ವೆಂಕಟೇಶ ಕನಕಣ್ಣ, ರಾಮಪ್ಪ, ದಾಸಪ್ಪ, ದುರಗಪ್ಪ ಮಹಿಳೆಯರ ಹೆಸರುಗಳೆಂದರೆ, ಭೀಮವ್ವ, ದುರಗವ್ವ, ಹನಮವ್ವ, ರಾಮವ್ವ, ರಂಗವ್ವ ಮತ್ತು ಯಲ್ಲವ್ವ ಕನ್ನಡ (ಕ್ಯಾನರೀಸ) ಭಾಷೆಯಲ್ಲಿ ಅಪ್ಪಾ ಅಥವಾ ತಂದೆ ಎಂದು ಪುರುಷರಿಗೆ ಹೆಚ್ಚಾಗಿ ಉಪಯೋಗಿಸುತ್ತಾರೆ. ಮಹಿಳೆಯರಿಗೆ ಅವ್ವ ಅಥವಾ ತಾಯಿ ಎಂದು ಉಪಯೋಗಿಸುತ್ತಾರೆ. ಹೆಚ್ಚಾಗಿ ಅವರ ಅಡ್ಡ ಹೆಸರುಗಳು ಊರಿನ ಹೆಸರುಗಳಾ ಗಿರುತ್ತವೆ. ಅಡಗಿಲನವರು, ಚಿಮ್ಮಲಗಿಕರ್, ಖಾನಾಪೂರಕರ್ ಮತ್ತು ಸುಳಿಕಿರಿಕರ್ ಎಂದು. ಒಂದು ಕುಟುಂಬಕ್ಕೆ ತನ್ನದೇ ಆದ ಅಸಾಧಾರಣವಾದ ಹೆಸರು ಮತ್ತು ಅದೇ ಹೆಸರಿನ ಹೆಸರುಳ್ಳವರೊಂದಿಗೆ ಸಂಬಂಧ ಬೆಳೆಸಲು ಅನುಮತಿಸುತ್ತಾರೆ.

ಬೇಡರು ಬೇರೆ ಬೇರೆ ವಿಭಾಗವಾಗಿ ಅವರು ದುರಗಮುರಗವ್ವನ ಮೂರ್ತಿಯ ಪೆಟ್ಟಿಗೆಯನ್ನು ತಮ್ಮ ತಲೆಯ ಮೇಲೆ ಹೊತ್ತುಕೊಂಡು ತಮ್ಮ ಕುಲನಾಯಕ ಮಾಕುಲಾಸ್, ನಾಯಕ ಮಕ್ಕಳು ಮತ್ತು **ರಾಮೋಶಿ** ಬೇಡರು ಎಂದು ಹೇಳುತ್ತಿದ್ದರು. ಅವರು ಮದುವೆಯಲ್ಲಿ ಒಟ್ಟಿಗೆ ಊಟ ಮಾಡುತ್ತಿರಲಿಲ್ಲ. ಆದರೆ ಸುರುಪುರದಲ್ಲಿ ಮಾತ್ರ ವಿಶೇಷ ವರ್ಗದ ನಾಯಕ ಮಕ್ಕಳು ಮಾತ್ರ ಕಂಡುಬರುತ್ತಿದ್ದರು. ಎಲ್ಲರೂ ಕಪ್ಪು ವರ್ಣದವರಿದ್ದು, ಬಲಿಷ್ಠವಾದ ತೋಳುಗಳು ಇದ್ದು, ಅವರ ಎತ್ತರ ಮಧ್ಯಮ ವಾಗಿ, ದುಂಡಾದ ಮುಖಗಳು, ದಪ್ಪನೆಯ ಗಲ್ಲಗಳು, ತೆಳ್ಳನೆಯ ತುಟಿಗಳು ಹಾಗೂ ಉದ್ದವಾದ ಗುಂಗುರು ಕೂದಲು ಉಳ್ಳವರಾಗಿದ್ದರು. ಅವರ ಮಾತು ಅಶುದ್ಧವಾದ ಕನ್ನಡ (ಕ್ಯಾನರೀಸ್) ಭಾಷೆ. ಮನೆಯ ಹೊರಗಡೆ ಕೆಲವರು ಅಪೂರ್ಣವಾದ ಮರಾಠಿ ಮಾತನಾಡುತ್ತಿದ್ದರು. ಸ್ಥಿತಿವಂತರು ಒಂದು ಅಂತಸ್ಥಿನ ಮನೆಯಲ್ಲಿ ವಾಸವಾಗಿದ್ದರೆ  ಅವು ಕಲ್ಲಿನಿಂದ ಇಲ್ಲವೆ ಮಣ್ಣಿನಿಂದ ಗೋಡೆಗಳನ್ನು ಕಟ್ಟುತ್ತಿದ್ದರು. ಮೇಲಮಾಳಿಗೆ ಅವುಗಳ ಬೆಲೆ ರೂ. ೬೦ ರಿಂದ ೨೦೦ ಆಗಿರುತ್ತಿತ್ತು. ಬಡವರು ಸ್ವಲ್ಪ ವೆಚ್ಚದ ಗುಡಿಸಲುಗಳಲ್ಲಿ ಸಾಮಾನ್ಯ ಜನರು ವಾಸ ಮಾಡುತ್ತಿದ್ದರು. ಅವರು ವಾಸಿಸುವ ಮನೆಗಳು ಹೊಲಸಾಗಿದ್ದು, ಅಶುದ್ಧವಾದ ಮತ್ತು ಹಸುಗಳು ವಾಸಿಸುವ ಮನೆಗಳು ಸಹ ಇದ್ದವು. ಅವರ ಮನೆಗಳಲ್ಲಿ ಉತ್ತಮವಾದ ಸ್ವಚ್ಛವಾದ ಅಡಿಗೆ ಮಾಡುವ ಮಣ್ಣಿನ ಗಡಿಗೆ, ಲೋಹದ ಪಾತ್ರೆ, ಇತರೆ ಪಾತ್ರೆಗಳಿದ್ದು, ಅವುಗಳ ಮೌಲ್ಯ  ರೂ. ೧೦ರಿಂದ ೧೦೦ ರೂ. ಇದ್ದವು. ಅನುಕೂಲವುಳ್ಳವರು ತಮ್ಮ ಮನೆಗಳಲ್ಲಿ ತಮ್ಮದೇ ಜಾತಿಯ ಸೇವಕರನ್ನು ಊಟ, ತೊಡಿಗೆ ಹೊರತುಪಡಿಸಿ, ಒಂದು ವರ್ಷಕ್ಕೆ ೧೦ ರೂ.ಯಿಂದ ೨೫ ರೂ. ಕೊಟ್ಟು ಕೆಲಸಕ್ಕೆ ಇಟ್ಟುಕೊಳ್ಳುತ್ತಿದ್ದರು. ಅವರು ದನ ಮತ್ತು ಬೇಟೆಯ ನಾಯಿಗಳನ್ನು ಸಾಕುತ್ತಿದ್ದರು. ಊಟ ಸಹ ಬಹಳವಾಗಿ ಮಾಡುತ್ತಿದ್ದರು. ಆದರೆ ಅವರಿಗೆ ಸರಿಯಾಗಿ ಅಡುಗೆ ಮಾಡಲು ಬರುತ್ತಿರಲಿಲ್ಲ. ಅವರಿಗೆ

ಅತಿಯಾದ ಪ್ರೀತಿಯ ಆಹಾರವೆಂದರೆ ಹೋಳು ಮಾಡಿದ ಬೇಳೆ, ನವಣೆ, ಜೋಳದರೊಟ್ಟಿ, ತರಕಾರಿಗಳನ್ನು ದಿನಕ್ಕೆ ಮೂರು ಸಲ ಊಟ ಮಾಡುತ್ತಿದ್ದರು. ಅವರು ರಜಾ ದಿನಗಳಲ್ಲಿ ಸಕ್ಕರೆಯಿಂದ ಸಿದ್ಧಪಡಿಸಿದ ಹೋಳಿಗೆ (ಪೋಲೀಸ್ ಗ್ರೀಕ್) ಸುರಳಿ ಸುತ್ತಿದ್ದ ಕಡಬು, ಬೇಯಿಸಿದ ಕಣಕದ ಕಡಬು ಇವುಗಳನ್ನು ನಾಗರಪಂಚಮಿಯ ಇಲ್ಲವೆ ಶ್ರಾವಣ ಅಥವಾ ಜುಲೈ ಅಗಷ್ಟ ತಿಂಗಳಲ್ಲಿ ಸಿದ್ಧಪಡಿಸುತ್ತಿದ್ದರು. ಹಂದಿ ಮಾಂಸವನ್ನು ಹೊರತುಪಡಿಸಿ ಅವರು ಎಲ್ಲಾ ತರಹದ ಮಾಂಸ ಸೇವಿಸುತ್ತಿದ್ದರು. ಶನಿವಾರ ಹೊರತುಪಡಿಸಿ ಯಾವಾಗ ಬೇಕೆಂದಾಗ ಮಾಂಸವನ್ನು ಸೇವಿಸುತ್ತಿದ್ದರು. ಏಕೆಂದರೆ ಅದು ಮಾರುತಿವಾರ, ಮಂಗಳವಾರ, ಯಲ್ಲಮ್ಮನ ಈ ಎರಡು ವಾರಗಳು ಅವರಿಗೆ ಪವಿತ್ರವಾದ ದಿನಗಳಾಗಿದ್ದವು.

ಅಕ್ಟೋಬರ್ ತಿಂಗಳಲ್ಲಿ ಬರುವ ದಸರೆಯ ದಿವಸ  ಒಂದು ದಿವಸ ಮುಂಚೆ ಅವರು ಮಾಂಸವನ್ನು ದೇವರಿಗೆ ನೈವೇದ್ಯವಾಗಿ ಅರ್ಪಿಸುತ್ತಿದ್ದರು. ಕೆಲವರು ದಿನಾಲೂ ಮದ್ಯ ಕುಡಿಯುತ್ತಿದ್ದರು. ಹೆಚ್ಚಿನ ಜನರು ಮೋಹರಂ ಸಮಯದಲ್ಲಿ, ಕೆಲವರು ಸುಧಾರಿಸಿದ ಮದ್ಯ ಕುಡಿಯುವವರಾಗಿದ್ದರು. ಕೆಲವರು ಪುಂಡಿನಾರಿನ ನೀರು ಸೇವಿಸಿದರೆ, ಇನ್ನೂ ಕೆಲವರು ಭಂಗ ಸೇವಿಸುವುದು. ನಾರು ಹೂವುಗಳಿಂದ ಮದ್ಯ ಸಿದ್ಧಪಡಿಸಿ ಕುಡಿದರೆ, ಕೆಲವರು ಗಾಂಜಾ ಅಥವಾ ಅಫೀಮು ತಿನ್ನುತ್ತಿದ್ದರು. ಆನಂತರ ತಡವಾಗಿ ನಿದ್ದೆ ಭರಿಸುವ ಮಧ್ಯ ಪಸರಿಸಿತು. ಗಂಡಸರು ತಲೆಯ ಮೇಲೆ ಶಿಖಾ (ಜುಟ್ಟು) ಬಿಟ್ಟು ತಲೆ ಮತ್ತು ಮೀಸೆ ಬಿಟ್ಟು ಮುಖವನ್ನು ಕ್ಷೌರ ಮಾಡಿಸಿಕೊಳ್ಳುತ್ತಿದ್ದರು. ಪುರುಷರು ತಲೆಯ ಮೇಲೆ ವಸ್ತ್ರವನ್ನು, ಟೊಂಕದವರೆಗೆ ಬಟ್ಟೆಯನ್ನು ಅಥವಾ ಚಲ್ಲಣ (ಪೈಜಾಮ, ಚಡ್ಡಿ) ಒಂದು ಅಂಗಿ ಭುಜ ಮತ್ತು ಪಾದರಕ್ಷೆ ಅಥವಾ ಮೆಟ್ಟು, ಅವುಗಳ ಮೌಲ್ಯ ರೂ. ೪ ರಿಂದ ೧೫ ಧರಿಸುತ್ತಿದ್ದರು.

ಅವರ ಆಭರಣಗಳು ಕಿವಿ ಸುರುಳಿ (ಉಂಗುರು) ಬೆಳ್ಳಿಯ ಬಳೆಗಳು, ಬೆಳ್ಳಿ ಉಡದಾರ ಅವುಗಳ ಒಟ್ಟು ಬೆಲೆ ೨೦ ರಿಂದ ೫೦ ರೂಪಾಯಿಗಳು. ಮಹಿಳೆಯರು ತಮ್ಮ ಕೂದಲುಗಳ ಕೊನೆಯನ್ನು ತಲೆಯ ಹಿಂದೆ ಗಂಟು ಹಾಕುತ್ತಿದ್ದರು. ಉಡುಪುಗಳ ಹಿಂದೆ ರವಿಕೆ, ಚಿಕ್ಕ ತೋಳುಗಳು, ಉದ್ದ ಅಂಗಿ (ಗೌನು) ಹೆಂಗಸಿನ ಉಡುಪಿನ ಕೆಳಭಾಗ ಲಂಗ, ಬೆನ್ನಿನ ಹಿಂಭಾಗ ಮತ್ತು ಕಾಲಿನ ಮೇಲಿನ ಭಾಗದವರೆಗೆ ತಲೆಯವರೆಗೆ ಸರಿಸಮಾನವಾಗಿ ಧರಿಸುತ್ತಿದ್ದರು. ಮಹಿಳೆಯರ ಉಡುಪಿನ ಬೆಲೆ ರೂ. ೬ ರಿಂದ ೧೫ ರೂಪಾಯಿ ವರ್ಷಕ್ಕೆ. ಅವರು ಕಿವಿಯಲ್ಲಿ ಧರಿಸುವ ಆಭರಣಗಳಲ್ಲಿ ಮೂಗುಬಟ್ಟು, ಕೈಗೆ ಧರಿಸುವ ಹಿತ್ತಾಳೆಯ ತೋಳುಬಂಧಿ, ಕೊರಳಿಗೆ ಧರಿಸುವ ಸರ ಅವುಗಳ ಬೆಲೆ ರೂ.೧೦ರಿಂದ ೫೦; ಬಡವರು ಕೇವಲ ಒಂದೇ ಆಭರಣ ಧರಿಸುತ್ತಿದ್ದರು. ಅದೃಷ್ಟ ಕೊಡುವ ಸರದ ಬೆಲೆ ರೂ. ೧ ಮಾತ್ರ. ಇದರ ಹೊರತಾಗಿ ಕೆಲವು ಅನುಕೂಲಸ್ಥರು, ದೂತ (ಸುದ್ದಿ ಒಯ್ಯುವವ), ಪೋಲೀಸರು, ಪುರುಷ ಮತ್ತು ಮಹಿಳೆಯರು ತಮ್ಮ ಉಡುಪುಗಳನ್ನು ಧರಿಸುವುದರಲ್ಲಿ ಅಶಿಸ್ತಿನವರಾಗಿದ್ದರು. ಇತರೆ ಉನ್ನತದರ್ಜೆಯ ಹಿಂದುಗಳಿಗಿಂತ 'ಬೇಡರು' ಸಾಮಾನ್ಯರಿಗೆ ಶಿಸ್ತುಬದ್ಧರಾಗಿ ಕಾಣುತ್ತಿರಲಿಲ್ಲ. ಬಹಳಷ್ಟು ಜನರು ರಜಾದಿನಗಳಲ್ಲಿ ಸಂಗ್ರಹಿಸಿಟ್ಟ ಬಟ್ಟೆಗಳನ್ನು ಉಪಯೋಗಿಸುತ್ತಿದ್ದರು. ಮಹಿಳೆಯರು ಮದುವೆಯ ಉಡುಪುಗಳನ್ನು ಕಾಳಜಿ ಪೂರ್ವಕವಾಗಿ ಇಟ್ಟು ವಿಶೇಷ ಸಂದರ್ಭಗಳಲ್ಲಿ ಧರಿಸುತ್ತಿದ್ದರು. ಬೇಡರು ಈ ಹಿಂದೆ ಯುದ್ಧ ಮಾಡುವ ಯೋಧರಂತೆ, ಅಪಾಯಕಾರಿ ವರ್ಗ, ಭಯಂಕರವಾದ ದರೋಡೆಕೋರರು ಮತ್ತು ಹೆದ್ದಾರಿ ದರೋಡೆಕೋರರು ಆಗಿದ್ದರು. ಈಗ ಸದ್ಯ ಅವರು ಶಿಸ್ತುಬದ್ಧವಾದ ಶ್ರಮಜೀವಿಗಳು ಮಿತವ್ಯಯಿಯಾದ, ಅತಿಥಿಸತ್ಕಾರ ಮಾಡುವ ಹಾಗೂ ಅಪರಾಧದಿಂದ ಮುಕ್ತರಾಗಿದ್ದರು.

ಕೆಲವರು ಬೇಸಾಯಗಾರರು, ಗ್ರಾಮದ ತಳವಾರರು, ಉಚಿತ ಇನಾಮ ಭೂಮಿಯನ್ನು ಪಡೆದು ಕೆಲವರು ಕಾರ್ಮಿಕರಾಗಿದ್ದರೆ, ಕೆಲವರು ರೈತರಾಗಿ ತಮ್ಮ ಸ್ವಂತ ಜಮೀನುಗಳನ್ನು ಉಳುಮೆ ಮಾಡುತ್ತಾರೆ. ಬರುವ ಉತ್ಪನ್ನದಲ್ಲಿ ಅವರು ಸಂತಸವಾಗಿದ್ದಾರೆ. ಕೆಲವರು ಇತರರಿಗೆ ಸಂಬಂಧಿಸಿದ ಜಮೀನುಗಳನ್ನು ಮೂರನೆಯ ಭಾಗ ಇಲ್ಲವೆ ಅರ್ಧಉತ್ಪನ್ನವನ್ನು ಕೊಟ್ಟು ಕೃಷಿ ಮಾಡುತ್ತಾರೆ. ಅವರ ಮಹಿಳೆಯರು ಮತ್ತು ಮಕ್ಕಳು ಹೊಲದಲ್ಲಿ ಸಹಾಯ ಮಾಡುತ್ತಾರೆ. ಪುರುಷರಿಗೆ ೪ ಆಣೆ ಮತ್ತು ಸ್ತ್ರೀಯರಿಗೆ ೨ ಆಣೆ ಕೂಲಿ ಇಲ್ಲವೆ ಧಾನ್ಯಗಳನ್ನು ಕೂಲಿಯ ರೂಪದಲ್ಲಿ ಕೊಡುತ್ತಿದ್ದರು ಮತ್ತು ಕೆಲವರು ತಮ್ಮ

ಆದಾಯವನ್ನು ಹಾಲು ಮತ್ತು ತುಪ್ಪ ಮಾರುವುದರ ಮೂಲಕ ಹೆಚ್ಚಿಸಿಕೊಳ್ಳುತ್ತಿದ್ದರು. ಕ್ರಿ. ಶ. ೧೮೭೬ ರಲ್ಲಿ ಸಂಭವಿಸಿದ ತೀವ್ರ ಬರಗಾಲದಿಂದಾಗಿ ಅವರು ಬಹಳಷ್ಟು ನಷ್ಟ ಅನುಭವಿಸಿದರೂ ಇಂದಿಗೂ ಕೂಡ ಅಂದು ತಾವು ಒತ್ತೆ ಇಟ್ಟ ಜಮೀನುಗಳನ್ನು ಬಿಡಿಸಿಕೊಳ್ಳಲು ಆಗಿಲ್ಲ. ಅವರು ಬಡ್ಡಿ ವ್ಯವಹಾರ ಮಾಡುವವರಿಂದ ವರ್ಷಕ್ಕೆ ಶೇ. ಹನ್ನೆರಡರಿಂದ ಇಪ್ಪತ್ನಾಲ್ಕರಂತೆ ಬಡ್ಡಿ ಕೊಟ್ಟು ಸಾಲ ಪಡೆಯುತ್ತಿದ್ದರು. ಅವರು ತಮ್ಮನ್ನು **ನಾಯಕ ಮಕ್ಕಳು (ರಾಜನ ಮಕ್ಕಳು)** ಎಂದು ಕರೆದುಕೊಳ್ಳುತ್ತಿದ್ದರು. ಆದರೆ ಇತರರು ಅವರನ್ನು ಬೇಡರ್ ಅಥವಾ ಬೇಡರು ಎಂದು ಕರೆಯುತ್ತಿದ್ದರು. ಮೇಲವರ್ಗದ ಹಿಂದೂಗಳು, ಮುಸಲ್ಮಾನರನ್ನು ತಮಗಿಂತಲೂ ಕೆಳ ಅಂತಸ್ಥಿನವರನ್ನಾಗಿ ಕಾಣುತ್ತಿದ್ದರು. ಬೇಡರು ತಮ್ಮ ಅಂತಸ್ತನ್ನು ಮರಾಠಾ ಕಣಬಿಗಳ ಸಮಾನಾಂತರವಾಗಿ ಮತ್ತು ಹೊಲದಲ್ಲಿ ಕೃಷಿ ಮಾಡುವ ವರ್ಗದವರನ್ನು, ಹೊಲೆಯ, ಮಾದಿಗ, ವಡ್ಡರು ಲಂಬಾಣಿಗಳನ್ನು ಇತರೆ ಜಾತಿಯವರನ್ನು ಕೆಳಅಂತಸ್ತಿನಲ್ಲಿ ಕಾಣುತ್ತಿದ್ದರು. ಇವರನ್ನು ತಮ್ಮ ಹೊಲದಲ್ಲಿ ರಾಬಿ ಅಥವಾ ಹಗುರ ಬೆಳೆಗಳ ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರು. ಸೋಮವಾರ ಪವಿತ್ರವಾದ ದಿನವಾಗಿರುವದರಿಂದ ಬಸವಣ್ಣನವರ ವಾರವೆಂದು ತಮ್ಮ ಎತ್ತುಗಳಿಗೆ ಕೆಲಸ ಇರುತ್ತಿರಲಿಲ್ಲ. ಒಂದು ಕುಟುಂಬವು ಒಂದು ತಿಂಗಳಿಗೆ ಊಟಕ್ಕೆ ೬ ರಿಂದ ೧೦ ರೂಪಾಯಿ ಒಟ್ಟಿಗೆ ಒಂದು ವರ್ಷಕ್ಕೆ ೪ ರಿಂದ ೧೫ ರೂಪಾಯಿ ಬಟ್ಟೆಗೆ ಖರ್ಚು ಮಾಡುತ್ತಿದ್ದರು. ಶ್ರೀಮಂತ ಬೇಡರು ಒಂದು ಹುಟ್ಟಿದ ಮಗುವಿಗೆ ೭ ರಿಂದ ೧೦ ರೂಪಾಯಿ, ಸಾಮಾನ್ಯ ವರ್ಗದವರು ೧೦೦ ರಿಂದ ೨೦೦ ರೂಪಾಯಿ ತನ್ನ ಮಗನ ಮದುವೆಗೆ ಮತ್ತು ೧೦ ರಿಂದ ೩೦ ರೂಪಾಯಿ ತನ್ನ ಮಗಳ ಮದುವೆಗೆ ವೆಚ್ಚ ಮಾಡುತ್ತಿದ್ದರು. ಒಬ್ಬ ಶ್ರೀಮಂತರ ಮನೆಯಲ್ಲಿ ಮರಣ ಸಂಭವಿಸಿದರೆ ೨೦ ರಿಂದ ೩೦ ರೂಪಾಯಿ, ಮಧ್ಯಮ ವರ್ಗದ ಕುಟುಂಬದಲ್ಲಿ ೧೦ ರಿಂದ ೧೫ ಮತ್ತು ಬಡವರ ಕುಟುಂಬದಲ್ಲಿ ೫ ರಿಂದ ೧೦ ರೂಪಾಯಿ ವೆಚ್ಚ ಮಾಡುತ್ತಿದ್ದರು.

ಒಂದು ವರ್ಗವಾಗಿ ಬೇಡರು ಧಾರ್ಮಿಕವಂತರು, ಮನೆದೇವರುಗಳೆಂದರೆ, ದುರಗವ್ವ, ಮಲ್ಲಿಕಾರ್ಜುನ, ಮಾರುತಿ, ವೆಂಕಟೇಶ ಮತ್ತು ಯಲ್ಲಮ್ಮ ಅವರ ಮೂರ್ತಿಗಳ ತಾಮ್ರ, ಹಿತ್ತಾಳೆ ಮತ್ತು ಬೆಳ್ಳಿಯಿಂದ ಮಾಡಿ ಅವುಗಳನ್ನು ತಮ್ಮ ಮನೆಯಲ್ಲಿ ಇಟ್ಟು ಪೂಜಿಸುತ್ತಿದ್ದರು. ಅವರು ತಮ್ಮ ಮನೆದೇವರುಗಳನ್ನು ಸಾಮಾನ್ಯವಾಗಿ ಸ್ನಾನ ಮಾಡಿದ ನಂತರ ಮಂಗಳವಾರ ಮತ್ತು ಶನಿವಾರಗಳಂದು, ಪೂರ್ತಿಹುಣ್ಣಿಮೆ ದಿನಗಳಂದು ಮತ್ತು ಇತರೆ ರಜೆದಿಗಳಂದು ಪೂಜಿಸುತ್ತಿದ್ದರು. ಸ್ನಾನ ಮಾಡಿ ನಂತರ ದೇವರಿಗೆ ನೈವೇದ್ಯವನ್ನು ಅರ್ಪಿಸುತ್ತಿದ್ದರು. ತಮ್ಮ ಮನೆದೇವರುಗಳನ್ನಲ್ಲದೆ, ತಮ್ಮ ನೆಚ್ಚಿನ ದೇವರುಗಳಾದ ಮಾರುತಿ ಮತ್ತು ವೆಂಕಟೇಶನನ್ನು ಸಹ ಪೂಜಿಸುತ್ತಿದ್ದರು. ಅಂದು ಸಾಯಂಕಾಲ ಒಂದೇ ಊಟವನ್ನು ಮಾಡಿ ಉಪವಾಸ ಆಚರಿಸುತ್ತಿದ್ದರು. ಬಹಳಷ್ಟು ಹಿಂದುಗಳು ವಿಶೇಷವಾಗಿ, ಮುಖ್ಯವಾಗಿ ದಸರಾ ರಜೆಗಳಲ್ಲಿ ಸೆಪ್ಟಂಬರ್-ಅಕ್ಟೋಬರ್, ದೀಪಾವಳಿ ಅಕ್ಟೋಬರ್-ನವ್ಹಂಬರ್ ತಿಂಗಳಿನಲ್ಲಿ ಪೂರ್ತಿ ಹುಣ್ಣಿಮೆಯ ದಿನ ಮತ್ತು ಮಾರ್ಗಶಿರ ಮಾಸ ಅಥವಾ ಡಿಸೆಂಬರ್-ಜನೇವರಿ ಹುಣ್ಣಿಮೆಯಂದು ತಮ್ಮ ಹೊಲಗಳಲ್ಲಿ ರಡ್ಡಿಗಳು **ಡೊಂಗರಾ** ಹಬ್ಬವನ್ನು ಆಚರಿಸಿ **ಲಕ್ಷ್ಮೀಯನ್ನು** ಪೂಜಿಸಿ ಗೌರವಿಸುತ್ತಿದ್ದರು. ಅವರು ಶ್ರಾವಣದಲ್ಲಿ ಅಥವಾ ಜುಲೈ-ಅಗಷ್ಟ ತಿಂಗಳಲ್ಲಿ ಮತ್ತು ಸಾಮಾನ್ಯವಾಗಿ ಸೋಮವಾರ, ಮಂಗಳವಾರ ಮತ್ತು ಶನಿವಾರದಂದು ಸಾಯಂಕಾಲ ಒಂದೇ ಊಟ ಮಾಡಿ ಉಪವಾಸ ಆಚರಿಸುತ್ತಿದ್ದರು. ದೇವರಿಗೆ ನೈವೇದ್ಯ, ತೆಂಗಿನಕಾಯಿ ಒಣ ಉತ್ತತ್ತಿ, ಸಕ್ಕರೆ, ಕಾಕಂಬಿ, ಕರಪೂರ, ಊದಿನಕಡ್ಡಿ ಅರ್ಪಿಸುತ್ತಿದ್ದರು. **ರಾಮಾಯಣವನ್ನು ಬರೆದ ವಾಲ್ಮೀಕಿ ಋಷಿಯನ್ನು ತಮ್ಮ ಕುಲದೇವನೆಂದು ಪೂಜಿಸುತ್ತಾರೆ**. ವಾಲ್ಮೀಕಿಯು ರಾಮನಲ್ಲಿ ಭಕ್ತಿಯುಳ್ಳವನಾಗಿದ್ದು, ವಿಷ್ಣುವಿನ ಏಳನೆಯ ಅವತಾರ. ಬೇಡರು ಪ್ರತಿಯೊಂದು ದೇವರಲ್ಲಿ ರಾಮನನ್ನು ಕಾಣುತ್ತಾರೆ. ರಾಮ ಎಂದು ಉಚ್ಚರಿಸುವ ಮೂಲಕ ಪ್ರಾರ್ಥನೆ ಆರಂಭಿಸುತ್ತಿದ್ದರು. ಅವರು ಬ್ರಾಹ್ಮಣರಿಗೆ ಗೌರವವನ್ನು ಕೊಟ್ಟು, ತಮ್ಮ ಮದುವೆಯ ಕಾರ್ಯಕ್ಕೆ ಕರೆಯುತ್ತಿದ್ದರು. ಅವರು ಭವಿಷ್ಯ, ಕಣಿ ಕೇಳುವುದರಲ್ಲಿ, ಮಾಟ-ಮಂತ್ರಗಳಲ್ಲಿಯೂ ಸಹ ನಂಬಿಕೆ ಉಳ್ಳವರಾಗಿದ್ದರು.

ಬೇಡರು ತಮ್ಮ ಧಾರ್ಮಿಕ ಗುರುವನ್ನು ಮದುವೆ ಮತ್ತು ಧಾರ್ಮಿಕ ಕಾರ್ಯಗಳಿಗೆ ಆಮಂತ್ರಿಸುತ್ತಿದ್ದರು. ತಮ್ಮ ಜಾತಿಯವರೆ ಸಮಾಜದ ಮುಖ್ಯಸ್ಥ ರಾಗಿದ್ದು, ಎಲ್ಲಾ ಸಾಮಾಜಿಕ ಒಳ–ಜಗಳಗಳನ್ನು ಅವರಿಂದಲೇ ತೀರ್ಮಾನಿಸಲಾಗು ತ್ತಿತ್ತು. ಅವರನ್ನು ಸಮಾಜದ ಮುಖ್ಯಸ್ಥ ಅಥವಾ ಕಟ್ಟಿಮನೆಯವರೆಂದು ಕರೆಯುತ್ತಿದ್ದರು. ಯಾರು ಜಾತಿಯ ನಿಯಮ ಮತ್ತು ಕಟ್ಟಳೆಗಳನ್ನು ಮುರಿಯು ವರೋ ಅಂತಹವರನ್ನು ಹೊರಗಿಡುವ ಮತ್ತು ಪ್ರಾಯಶ್ಚಿತದ ನಂತರ ಮರಳಿ ಹಿಂದಕ್ಕೆ ಪಡೆಯುವ ಅಧಿಕಾರಿಯಾಗುತ್ತಿದ್ದರು. ಒಂದು ವೇಳೆ ಮಹಿಳೆಯನ್ನು ಜಾತಿಯಿಂದ ಹೊರಗಿಟ್ಟರೆ, ವ್ಯಭಿಚಾರ ಮಾಡಿದರೆ ಅಥವಾ ಕೆಳಜಾತಿಯವ ರೊಂದಿಗೆ ಊಟಮಾಡಿದರೆ ಮರಳಿ ಜಾತಿಯಲ್ಲಿ ಸೇರಿಸಿಕೊಳ್ಳಲು, ತಲೆಯನ್ನು ಕಟ್ಟಿಮನೆಯ ಮುಂದೆ ಕ್ಷೌರ ಮಾಡಬೇಕು. ಈಗ ಸದ್ಯದ ಸಂಪ್ರದಾಯದ ಪ್ರಕಾರ ಐದು ಕೂದಲುಗಳನ್ನು ಅವಳ ತಲೆಯಿಂದ ರೇಜರ್‌ನಿಂದ ಕತ್ತರಿಸಿ, ಇದಾದ ನಂತರ ಜಾತಿಯ ಅಧಿಕಾರ ಹೊಂದಿದ **"ಮಲ್ಲವ್ವ"** ಅವಳ ನಾಲಿಗೆ ಸುಟ್ಟು, ಒಂದು ಎಲೆಯನ್ನು ಅವಳು ತಟ್ಟಿಸುತ್ತಿದ್ದಳು. ಸ್ವಲ್ಪ ಮಧ್ಯವನ್ನು ಸಹ ಕುಡಿಯಲು ಕೊಡುತ್ತಿದ್ದರು. ಇದರ ಉದ್ದೇಶ ಅವಳ ಶರೀರ ಪವಿತ್ರ ಮಾಡುವುದು ಒಬ್ಬ ಮನುಷ್ಯನು ತನ್ನ ಸ್ವಗೋತ್ರದವರೊಂದಿಗೆ ಲೈಂಗಿಕ ಸಂಪರ್ಕ ಮಾಡಿದರೆ ಅವನೂ ಕೂಡ ತನ್ನಷ್ಟಕ್ಕೆ ತಾನು ಪವಿತ್ರನಾಗಬೇಕಾದರೆ, ಮೀಸೆಗಡ್ಡ ಮತ್ತು ತಲೆಯ ಮೇಲಿನ ಜುಟ್ಟು ಕ್ಷೌರ ಮಾಡಿಸಿಕೊಂಡು ತಣ್ಣೀರಿನಲ್ಲಿ ಸ್ನಾನ ಮಾಡಿ, ಸ್ವಲ್ಪ ಪ್ರಮಾಣದ ಮದ್ಯ ಕುಡಿದು ಪವಿತ್ರನಾಗಿ, ತನ್ನ ಜಾತಿಯ ಜನರ ಸಮ್ಮುಖದಲ್ಲಿ ಇದೆಲ್ಲವನ್ನು ಮಾಡಬೇಕಾಗಿತ್ತು.

ಒಂದು ಮಗು ಜನಿಸಿದ ನಂತರ ಸೂಲಗಿತ್ತಿ ಹೊಕ್ಕಳು ಬಳ್ಳಿಯನ್ನು ಕತ್ತರಿಸಿ ಮಗುವಿಗೆ ಮತ್ತು ತಾಯಿಗೆ ಬಿಸಿನೀರಿನಿಂದ ಸ್ನಾನ ಮಾಡಿಸಿ, ನಂತರ ಅವರನ್ನು ಮಂಚದ ಮೇಲೆ ವಿಶ್ರಾಂತಿ ಪಡೆಯಲು ಮನೆಯ ಭಾಗದ ವಿಶ್ರಾಂತಿ ಕೊಠಡಿಯಲ್ಲಿ ಮಲಗಿಸುತ್ತಾರೆ. ನಂತರ ತಾಯಿಗೆ ಮಿಶ್ರ ಮಾಡಿದ ಬೆಲ್ಲ, ಒಣಕೊಬ್ಬರಿ, ಉತ್ತತ್ತಿ, ಶುಂಠಿ ಮತ್ತು ಕರಿಮೆಣಸು, ಕುದಿಯುವ ಅನ್ನ, ಗೋಧಿ ಸಜ್ಜಕ ಮತ್ತು ಕುದಿಸಿದ ನವಣಿ ಬೆಲ್ಲದೊಂದಿಗೆ ಮಿಶ್ರಣ ಮಾಡಿ ತುಪ್ಪದಲ್ಲಿ ತಿನ್ನಲು ಕೊಡುತ್ತಾರೆ. ಐದು ದಿನಗಳು ಬಾಣಂತಿಯ ತಲೆಗೆ ಎಣ್ಣೆಹಚ್ಚಿ ಅವಳ ಮೈಗೆ ಅರಿಷಿಣದ ಪುಡಿ ಎಣ್ಣೆಯಲ್ಲಿ ಕಲಿಸಿ ಬೆಚ್ಚಗಿನ ನೀರಿನಿಂದ ಸ್ನಾನ ಮಾಡಿಸಿ, ಮಣ್ಣಿನ ಮಡಿಕೆಯಲ್ಲಿ ಆಕಳ ಕುಳ್ಳನ್ನು ಹಾಕಿ ಅವಳ ಮಂಚದ ಕೆಳಗೆ ಇಡುತ್ತಿದ್ದರು. ಮಗುವನ್ನು ಎಣ್ಣೆಯಿಂದ ಉಜ್ಜಿ ಬಿಸಿನೀರಿನೊಂದಿಗೆ ಸ್ನಾನ ಮಾಡಿಸುತ್ತಿದ್ದರು. ಹದಿಮೂರನೆಯ ದಿನಕ್ಕೆ ತೊಟ್ಟಿಲಲ್ಲಿ ಹಾಕಿ ನಾಮಕರಣ ಮಾಡಿ, ಅಲ್ಲಿದ್ದವರಿಗೆಲ್ಲ ಸಿಹಿಯಾದ ಊಟ ಮಾಡಿಸುತ್ತಿದ್ದರು. ಮಗು ಗಂಡಾಗಿರಲಿ ಅಥವಾ ಹೆಣ್ಣಾಗಿರಲಿ ಮೊದಲ ಕೂದಲನ್ನು ಜನಿಸಿದ ಒಂದನೇ ತಿಂಗಳು ಇಲ್ಲವೆ ಮೂರನೆಯ ತಿಂಗಳಲ್ಲಿ ಕೂದಲು (ಜವಳ) ಕತ್ತರಿಸುತ್ತಾರೆ. ಒಬ್ಬ ಬಾಲಕಿ ಆರು ವರ್ಷದಿಂದ ಹನ್ನೆರಡು ವರ್ಷದೊಳಗೆ ಮದುವೆ ಆಗಲೇಬೇಕು. ಮದುವೆಯ ಬೇಡಿಕೆ ಬರುವುದು ಬಾಲಕನ ತಂದೆಯು ತನ್ನ ಸಂಬಂಧ ಮತ್ತು ಗೆಳೆಯರೊಂದಿಗೆ ಹುಡುಗಿ (ಕನ್ಯಾ) ಮನೆಗೆ ಹೋಗಿ, ಕನ್ಯೆಯ ತಾಯಿಗೆ ೨ ರೂಪಾಯಿ ಕೊಟ್ಟು ಮೂರು–ಮುಕ್ಕಾಲು ಪಾಲು ಸಕ್ಕರೆ, ಆ ಪುಟ್ಟ ಬಾಲಕಿಯ ಬಾಯಿಯಲ್ಲಿ ಹಾಕುತ್ತಾರೆ. ಅವನು ಅಲ್ಲಿ ಹಾಜರಿದ್ದ ತನ್ನ ಜನರ ಮುಂದೆ ಆ ಬಾಲಕಿಯನ್ನು ತನ್ನ ಮಗನಿಗೆ ಮದುವೆ ನಿಶ್ಚಯ ಮಾಡಲಾಗಿದೆ ಎಂದು ಸಾರುತ್ತಾರೆ. ನಂತರ ಎರಡು ಹೊತ್ತಿನ ಊಟದ ಸತ್ಕಾರ ಮಾಡುತ್ತಾರೆ. ಒಂದು ಊಟ ಮೊದಲ ದಿನ ಮತ್ತು ಇನ್ನೊಂದು ಊಟ ಮರುದಿನ ಮಾಡುತ್ತಾರೆ. ಬ್ರಾಹ್ಮಣ ಜ್ಯೋತಿಷ್ಯಗಳಿಂದ ಶುಭ ಮುಹೂರ್ತ ನಿಶ್ಚಯಿಸಿಕೊಂಡು ಮನೆಗೆ ಹಿಂದಿರುಗುತ್ತಾರೆ. ಹುಡುಗನ ತಂದೆ ಕನ್ಯೆಯ ಮನೆಗೆ ಹೋಗಿ ಭಾಷ್ಟಿಗೆ ಅಥವಾ ಮಧುವೆಯ ನಿಶ್ಚಯ ದಿನ ನಿರ್ಧರಿಸಿಕೊಂಡು ಒಂದು ಗೌನು ಬೆಲೆ ೫ ರೂಪಾಯಿ ಜೊತೆ ಕುಪ್ಪಸ ಬಟ್ಟೆ ಒಂದಕ್ಕೆ ೧ ರೂಪಾಯಿ, ಅಡಿಕೆ, ಐದು ಅರಿಷಿಣ ಬೇರು ಮತ್ತು ಐದು ಬಾಳೆಗಿಡ ಕೆಲವು ಬೆಳ್ಳಿ ಅಥವಾ ಬಂಗಾರದ ಆಭರಣಗಳು ಈ ಎಲ್ಲಾ ವಸ್ತುಗಳನ್ನು ಬಾಲಕಿಯ ಮನೆಯ ದೇವರ ಮುಂದೆ ಇಡುತ್ತಾರೆ. ಮದುಮಗನ ತಂದೆ ಮದುಮಗಳಿಗೆ ಅವೆಲ್ಲವುಗಳನ್ನು ಗೌನಿನ ಮೇಲೆ ಆಭರಣಗಳು, ತೆಂಗಿನಕಾಯಿ ಇತರೆ ಸಾಮಾನುಗಳನ್ನು ಕಂಬಳಿಯ ಮೇಲೆ ಇಟ್ಟು, ತನ್ನ ತೊಡೆಯ ಮೇಲೆ ಕೈತುಂಬ ಅಕ್ಕಿಯನ್ನು ಇಟ್ಟುಕೊಳ್ಳಲು ಹೇಳುತ್ತಾನೆ. ಬಂದ ಅತಿಥಿಗಳಿಗೆ ವೀಳ್ಯದೆಲೆ, ಅಡಿಕೆ ಮತ್ತು

ಸಕ್ಕರೆ ಹಂಚುತ್ತಾರೆ. ಈ ಮದುವೆಯ ಸಮಾರಂಭಕ್ಕೆ ಗ್ರಾಮದ ಹಿರಿಯರನ್ನು ಲಿಂಗಾಯತ ಪೂಜಾರಿಗಳನ್ನು ಕರೆಯುತ್ತಾರೆ. ಹುಡುಗನ ತಂದೆ ಹಾಗೂ ಗೆಳೆಯರಿಗೆ ತುಪ್ಪದೊಂದಿಗೆ ಕಡಬಿನ ಊಟ ಮಾಡಿಸುತ್ತಾರೆ.

ಒಂದು ಶುಭದಿನದಂದು ಮದುವೆಯ ಗಳಿಗೆ ನಿರ್ಧರಿಸಿ ಮದು ಮಗಳು ಮತ್ತು ಅವಳ ಗೆಳತಿಯರೊಂದಿಗೆ ಮದುಮಗನ ಮನೆಗೆ ಬಂದು ಅಲ್ಲಿ ಮದುಮಗಳ ಮತ್ತು ಅವಳ ತಾಯಿ ಜೊತೆ ಒಟ್ಟಿಗೆ ಉಳಿಯುತ್ತಾರೆ. ಉಳಿದ ಇನ್ನಿತರರು ಬೇರೆ ಮನೆಯಲ್ಲಿ ವಸತಿ ಮಾಡುತ್ತಾರೆ. ಅವಳು ಬಂದ ತಕ್ಷಣವೇ ವಧು–ವರರನ್ನು ಅರಿಷಿಣ ಪುಡಿಯಿಂದ ಮೈಗೆ ಬಳಿಯುತ್ತಾರೆ. ನಂತರ ಸ್ನಾನ ಮಾಡಿಸುತ್ತಾರೆ. ನಾಲ್ಕು ಮೂಲೆಗಳಿಗೆ ಒಂದೊಂದು ಮಣ್ಣಿನ ಕೊಡ (ಮಡಿಕೆ) ಇಟ್ಟು ಹತ್ತಿಯದಾರದಿಂದ ಕೊಡದ ಕಂಠಗಳಿಗೆ ಸುತ್ತುತ್ತಾರೆ. ಎರಡು ಕೊಡಗಳಲ್ಲಿದ್ದ ನೀರಿನಿಂದ ವಧುವರರಿಗೆ ಸ್ನಾನ ಮಾಡಿಸುತ್ತಾರೆ. ಸ್ನಾನದ ನಂತರ ಮದುಮಗಳಿಗೆ ನಗು ಮುಖದಿಂದ ಬಟ್ಟೆಗಳನ್ನು ಮದುಮಗಳಿಗೆ ಬಿಳಿಯ ಬಣ್ಣದ ಮುಸುಕು ಮತ್ತು ಬಿಳಿಯ ಬಣ್ಣದ ರವಿಕೆ ಧರಿಸಲು ಕೊಡುತ್ತಾರೆ.

ಇಬ್ಬರೂ ಮನೆಯ ದೇವರಿಗೆ ವಂದಿಸುತ್ತಾರೆ. ಮರಳಿ ಬಂದ ಕೂಡಲೇ ಅವರಿಗೆ ಬೇಯಿಸಿದ ಸಿಹಿ ಅಡಿಗೆ ಬಡಿಸುತ್ತಾರೆ. ಮರುದಿವಸ ಮದುವೆಯಾದ ಐದು ಜನ ಊರ ಸೀಮೆಯವರೆಗೆ ಇಲ್ಲವೆ ಗ್ರಾಮದ ಮಾರುತಿಯ ಗುಡಿಗೆ ಬಂದು ಎಳೆಯ ಹಾಲಗಂಭ ಅಥವಾ ಹಾಲಿನ ಮರದ ಕಂಭ ಇನ್ನೊಂದು ಹಂಡಗಂಭಾ  ಅಥವಾ ಮದುವೆ ಚಪ್ಪರದ ಬಳಿ,  ನಂತರ ದೇವರಿಗೆ ದೀಪಹಚ್ಚಿ ಅವರ ತಲೆಯ ಸುತ್ತಲೂ ತಿರುಗಿಸುತ್ತಾರೆ. ನಂತರ ಅವರು ಮೆರವಣಿಗೆಯಲ್ಲಿ ಮದುಮಗನ ಮನೆಯ ಆವರಣದಲ್ಲಿರುವ ಹಂದರದಲ್ಲಿ ಎಳೆಯ ಗಿಡದ ಸಸಿಗಳನ್ನು ನೆಟ್ಟು ಆ ಮೇಲೆ ಅವರು ಕುಂಬಾರನ ಜಿಗಟು ಮಣ್ಣಿನಲ್ಲಿ ನೆಡುತ್ತಾರೆ. ಸಂಜೆಯ ಊಟಕ್ಕಾಗಿ ಅವರಿಗೆ ನವಣಿ ಅನ್ನ ಊಟಕ್ಕಾಗಿ ಕೊಡುತ್ತಾರೆ. ರಾತ್ರಿಯ  ಊಟದ ನಂತರ ದೇವತೆಗಳಾದ ಐರಾಣಿ ಅಥವಾ ಲಕ್ಷ್ಮೀಯನ್ನು ಪೂಜಿಸುತ್ತಾರೆ. ಕುಂಬಾರನ ಮನೆಯಿಂದ ಮುತ್ತೈದೆಯರು ಒಂದು ಜಾರ ಮತ್ತು ಒಂದು ಸಣ್ಣ ಗಡಿಗೆ ಮೆರವಣಿಗೆ ಯಲ್ಲಿ ತಂದು, ಅವನಿಗೆ ಊಟಕ್ಕಾಗಿ ಸಾಕಷ್ಟು ಒಣಪಡಿ ಕೊಡುತ್ತಾರೆ. ಸಣ್ಣ ಗಡಿಗೆಯೊಳಗೆ ಎರಡು ಸಣ್ಣ ಕಡ್ಡಿಗಳಿಗೆ ಎರಡು ವೀಳ್ಯದೆಲೆಯನ್ನು ಹತ್ತಿ ದಾರದಿಂದ ಕಟ್ಟುತ್ತಾರೆ. ಆ ಎರಡು ಕಡ್ಡಿಗಳಿಗೆ ರಾಮಬಾಣ ಎಂದು ಕರೆಯುತ್ತಾರೆ. ಹಂದರದಲ್ಲಿ ಕುಳಿತು ವಧು–ವರರು ಐದು ಜನ ಮುತ್ತೈದೆ ಮಹಿಳೆಯ ರೊಂದಿಗೆ ಸುರಗಿಯಲ್ಲಿ ಕುಳಿತು ಸ್ನಾನ ಮಾಡುತ್ತಾರೆ.

ಆ ನಂತರ ಅವಸರ ಅವಸರದಲ್ಲಿ ಉಡುಪುಗಳನ್ನು ಧರಿಸುತ್ತಾರೆ. ಅವರು ತಮ್ಮ ಮನೆಯ ದೇವರಿಗೆ ನಮಸ್ಕರಿಸಿ ನಂತರ ಶ್ಯಾವಿಗೆ, ಹೋಳಿಗೆ ಅತಿಥಿಗಳಿಗೆ ಊಟ ಮಾಡಿಸುತ್ತಾರೆ. ಮೂರನೆಯ ದಿನಕ್ಕೆ ಮತ್ತೆ ವಧು–ವರರು ಪುನಃ ಸ್ನಾನ ಮಾಡಿ, ಉಡುಪುಗಳನ್ನು ಧರಿಸಿಕೊಂಡು, ಕುಟುಂಬದ ಮನೆಯ ದೇವರ ಮುಂದೆ ನಮಸ್ಕರಿಸಲು ಕರೆದುಕೊಂಡು ಹೋಗುತ್ತಾರೆ. ಕೆಲವರು ಮದುಮಗಳ ಸಂಬಂಧಿಕರು ಹೊಸಬಟ್ಟೆ, ಹೊದಿಕೆ ಮಾಡಿಕೊಂಡು ಶ್ಯಾವಿಗೆಯನ್ನು ತೆಗೆದುಕೊಂಡು ಮದುಮಗನ ಮನೆಗೆ ಹೋಗುತ್ತಾರೆ.

ಇದನ್ನು ಸುರಗಿ ಭೂಮ ಎಂದು ಒಪ್ಪಿಸುತ್ತಾರೆ. ಇದನ್ನು ಮದುಮಗನು ಮುಟ್ಟಿದ ನಂತರ ಐದು ಜನ ಪುರುಷರು ಮೂರು ಜನ ಮದುಮಗನ ಪಕ್ಷದವರು ಮತ್ತು ಇಬ್ಬರು ವಧುವಿನ ಪಕ್ಷದವರು ಊಟ ಮಾಡುತ್ತಾರೆ. ನಂತರ ವಧುವರರು ಎತ್ತುಗಳ ಮೇಲೆ ಕುಳಿತು ಮದುವೆಯ ಉಡುಪುಗಳನ್ನು ಧರಿಸಿಕೊಂಡು ಕೊಂಬು–ಕಹಳೆಯೊಂದಿಗೆ ತಲೆಗೆ ಹೂ ಧರಿಸಿಕೊಂಡು ಹೋಗುತ್ತಾರೆ.

ಅವರು ಗ್ರಾಮದೇವರಾದ ಮಾರುತಿಗೆ ನಮಸ್ಕರಿಸಿ ತೆಂಗಿನಕಾಯಿ ಒಡೆದು, ಪ್ರತಿಯೊಬ್ಬರು ಪೂಜಾರಿಗೆ ಒಂದು ಆಣೆ ದಕ್ಷಿಣೆ ಕೊಟ್ಟು ಅವರು ತಮ್ಮ ಗೋತ್ರಗಳನ್ನು ಹೇಳುತ್ತಾರೆ. ಸ್ವಲ್ಪ ಸಮಯದ ನಂತರ ನಾಲ್ಕು ಜನ ನಿಂತು ಹತ್ತಿಯ ದಾರವನ್ನು ಒಬ್ಬರಿಂದ ಒಬ್ಬರಿಗೆ ಕೊಡುತ್ತಾ ಹಾಲು ಮತ್ತು

ತುಪ್ಪದಲ್ಲಿ ಅದ್ದಿ ಹೊಸೆಯುತ್ತಾರೆ. ಅದನ್ನು ಅರಿಶಿಣ ಪುಡಿಯಲ್ಲಿ ಮಿಶ್ರಣ ಮಾಡಿ, ತುಕಡಿಗಳನ್ನಾಗಿ ಮಾಡಿ ಅರಿಶಿಣ ಮದುಮಗನ ಕೈಗೆ ಕಂಕಣ ಧರಿಸುತ್ತಾರೆ. ತದನಂತರ ಒಬ್ಬ ಬ್ರಾಹ್ಮಣನು ಶುಭದಾಯಕವಾದ ಸ್ವಸ್ತಿಕ ಚಿನ್ಹೆಯನ್ನು ಕೆಂಪು ಬಣ್ಣದಿಂದ ಹೊಸದಾಗಿ ತೊಳೆದ ಬಿಳಿಯ ಬಟ್ಟೆಯ ಮಧ್ಯದಲ್ಲಿ ಬರೆಯುತ್ತಾರೆ.

ಅವರು ಮಾರುತಿಯ ಮಂದಿರದಿಂದ ಮರಳಿದ ಮೇಲೆ ವಧು-ವರರು ಎದುರು ಬದುರಾಗಿ ಕುಳಿತು, ಮದುಮಗನು ಕಲ್ಲಿನ ಮೇಲೆ ನಿಲ್ಲುತ್ತಾನೆ ಮತ್ತು ಮಧು-ಮಗಳು ಅಕ್ಕಿ ಹಾಕಿದ ಹೊಸಬುಟ್ಟಿಯಲ್ಲಿ ನಿಲ್ಲುತ್ತಾಳೆ. ಬ್ರಾಹ್ಮಣ ಪೂಜಾರಿಯು ಇಬ್ಬರ ಮಧ್ಯದಲ್ಲಿ ವಸ್ತ್ರವನ್ನು ಹಿಡಿದು ಮಂಗಳಾಷ್ಟಕವನ್ನು, ಶ್ಲೋಕವನ್ನು ಪಠಿಸುತ್ತಾನೆ. ಪ್ರತಿಯೊಂದು ಶ್ಲೋಕದ ಕೊನೆಗೆ ವಧು-ವರರ ಮೇಲೆ ಅಕ್ಕಿಕಾಳನ್ನು (ಅಕ್ಷತೆ) ಅವರ ತಲೆಯ ಮೇಲೆ ಹಾಕುತ್ತಾನೆ. ಬಂದಂಥಹ ಅತಿಥಿಗಳು ಸಹ ತಲೆಯ ಮೇಲೆ ಅಕ್ಷತೆ ಎಸೆಯುತ್ತಾರೆ. ಪೂಜಾರಿಯು ಮಧುಮಗಳಿಗೆ ಮಂಗಳಸೂತ್ರವನ್ನು ಮುಟ್ಟಲು ಹೇಳುತ್ತಾನೆ. ನಂತರ ವದುವಿನ ಕೊರಳಿಗೆ ಮಂಗಳಸೂತ್ರ ಕಟ್ಟಲು ವರನಿಗೆ ಹೇಳುತ್ತಾನೆ.

ಕಂಕಣಗಳನ್ನು ಮದುಮಗನ ಬಲಕೈಗೆ, ಮಧುಮಗಳ ಕೈಗೆ ಧರಿಸುತ್ತಾರೆ. ಬ್ರಾಹ್ಮಣ ಮತ್ತು ಲಿಂಗಾಯತ ಪೂಜಾರಿಗಳಿಗೆ ಕಾಣಿಕೆಯಾಗಿ ಹಣವನ್ನು, ಹಾಗೂ ಅಧಿಕೃತ ಪೂಜಾರಿಗೆ ಬ್ರಾಹ್ಮಣರಿಗೆ ಒಂದು ರೂಪಾಯಿ ಅಥವಾ ೨ ರೂಪಾಯಿ ನಗದು ಪಾವತಿ ಮಾಡುತ್ತಾರೆ. ವರನ ತಂದೆಯು ತನ್ನ ಸಮಾಜದ ಜನರಿಗೆ ಊಟದ ಆದರ ಸತ್ಕಾರ ಮಾಡುತ್ತಾನೆ. ಆನಂತರ ಮದುಮಗಳ ತಂದೆಯು ಸಹ ರಾತ್ರಿ ಅವರಿಗೆ ಊಟ ಮಾಡಿಸುತ್ತಾನೆ. ಇದಾದ ನಂತರ ಮಧುಮಗಳು ಮತ್ತು ಮಧುಮಗ ಐದುಸಲ ಅರಿಷಿಣದ ಪುಡಿಯನ್ನು ಒಬ್ಬರಿಗೊಬ್ಬರು ಹಚ್ಚುತ್ತಾರೆ.

ರಾತ್ರಿ ಒಂಭತ್ತು ಇಲ್ಲವೆ ಹನ್ನೆರಡು ಗಂಟೆಗೆ ಮದುಮಗಳು ಮತ್ತು ಮದುಮಗ ಇಬ್ಬರು ಎತ್ತಿನ ಮೇಲೆ ಕುಳಿತು ಸ್ಥಳೀಯ ಮಾರುತಿಯ ಮಂದಿರಕ್ಕೆ ಹೋಗಿ ದೇವರ ಮೂರ್ತಿಗೆ ನಮಸ್ಕರಿಸಿ ಅಲ್ಲಿ ಅವರು ತೆಂಗಿನಕಾಯಿಯನ್ನು ಒಡೆದು, ಮತ್ತು ಪ್ರತಿಯೊಬ್ಬರು ತಮ್ಮ ಗೋತ್ರಗಳನ್ನು ಹೇಳುತ್ತಾ ಪೂಜಾರಿಗೆ ಒಂದು ಆಣೆ ಕಾಣಿಕೆ ಕೊಡುತ್ತಾರೆ. ಯಾವಾಗ ಮೆರವಣಿಗೆಯು ಮದುಮಗನ ಮನೆಗೆ ತಲುಪುವುದೋ ಆಗ ಕೆಟ್ಟ ದೃಷ್ಟಿ ತಾಗದಿರಲೆಂದು ನವದಂಪತಿಗಳ ಮುಂದೆ ತೆಂಗಿನ ಕೊಬ್ಬರಿಯನ್ನು ಮುರಿದು ನಿವಾಳಿಸಿ ತೆಗೆಯುತ್ತಾರೆ. ನಂತರ ವಧು-ವರರು ತಮ್ಮ ಮನೆಯ ದೇವರಿಗೆ ನಮಸ್ಕರಿಸುತ್ತಾರೆ. ಅಲ್ಲಿ ಅವರು ಭೂಮವನ್ನು ಸ್ವೀಕರಿಸುತ್ತಾರೆ. ರಾತ್ರಿ ಮೂವರು ವಿವಾಹವಾದ ಮಹಿಳೆಯರು ಮತ್ತು ಇಬ್ಬರು ಗಂಡಸರು ರಾತ್ರಿ ಊಟದ ನಂತರ ವಧು-ವರರು ಕರಿಕಂಬಳಿಯ ಮೇಲೆ ಅಕ್ಕಿಯಿಂದ ಹಾಕಿದ ಶಾಸಿಯ ಮೇಲೆ ಕೂಡುತ್ತಾರೆ. ಕೊನೆಯದಾಗಿ ಅವರು ಪ್ರತಿಯೊಬ್ಬರು ತಮ್ಮ ಹೆಸರುಗಳನ್ನು ಹೇಳುತ್ತಾ, ವರನ ತಲೆಯ ಮೇಲಿಂದ ಬಾಸಿಂಗ ಮಾಲೆ ಹಾಗೂ ವಧುವಿನ ಹೂವಿನ ಅಲಂಕಾರವನ್ನು ತೆಗೆಯುತ್ತಾರೆ. ಅನಂತರ ವಧುವಿನ ಪಕ್ಷದವರು ಶ್ಯಾವಿಗೆಯ ಊಟ ಮಾಡಿಸುತ್ತಾರೆ.

ಮರುದಿನ ಸಂಜೆ ನಾಗೋಲಿ ಭೂಮ ಅಥವಾ ನಾಗಪೂಜೆ ಭೂಮಿ ಪೂಜೆ, ಕುಂಬಾರನ ಮನೆಯಿಂದ ಲಕ್ಷ್ಮೀಯನ್ನು ತಂದು ಐದು ಜನ ಮುತ್ತೈದೆಯಾದ ಮಹಿಳೆಯರಿಗೆ ಸಿಹಿಯಾದ ಊಟ ಮಾಡಿಸುತ್ತಾರೆ. ವಧುವಿನ ತಾಯಿಯು ತನ್ನ ಮಗಳ ಕೈಯನ್ನು ಅತ್ತಿಯ ಕೈಯಲ್ಲಿಟ್ಟು, ತನ್ನ ಮಗಳನ್ನು ತನ್ನ ಸ್ವಂತ ಮಗಳಂತೆ ನಡೆಸಿಕೊಳ್ಳಲು ಬೇಡುತ್ತಾಳೆ. ಮದುಮಗಳಿಗೆ ನಂತರ ಅಕ್ಕಿಯಿಂದ ಉಡಿತುಂಬಿ, ಮೆರವಣಿಗೆ ಮುಗಿದ ನಂತರ ಅಡಿಗೆ ಮಾಡಿ ಮನೆಯ ದೇವರಿಗೆ ನೈವೇದ್ಯ ಮಾಡಿ ಮನೆಯವರೊಂದಿಗೆ, ಗೆಳೆಯ ಮತ್ತು ಸಂಬಂಧಿಗಳೊಂದಿಗೆ ಊಟ ಮಾಡುತ್ತಾರೆ. ಇಲ್ಲಿಗೆ ವಿವಾಹ ಕಾರ್ಯಸಂಪನ್ನವಾಗುತ್ತದೆ. ಮರುದಿನ ವಿವಾಹಕ್ಕೆ ಬಂದ ಅತಿಥಿಗಳು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುತ್ತಾರೆ.

ಕೆಲವರು ವಧು–ವರರನ್ನು ತಮ್ಮ ಮನೆಗಳಿಗೆ ಊಟದ ನಂತರ ಕರೆದು ಕೊಂಡು ಹೋಗುವರು. ಇನ್ನು ಕೆಲವರು ಸ್ವಲ್ಪದಿನಗಳ ನಂತರ ಕರೆಯುವರು. ಹುಡುಗಿ ಅಲ್ಲಿ ಒಂದುದಿನ ಇಲ್ಲವೆ ಎರಡು ದಿನ ಉಳಿದುಬರುವರು. ವಧು ವಯಸ್ಸಿಗೆ ಬರುವವರೆಗೆ ತನ್ನ ಗಂಡನೊಂದಿಗೆ ವಾಸ ಮಾಡಲು ಹೋಗುವುದಿಲ್ಲ. ಹುಡುಗಿ ವಯಸ್ಸಿಗೆ ಬಂದನಂತರ ಯಾವುದೇ ವ್ರತಾಚರಣೆ ಮಾಡುವುದಿಲ್ಲ. ಅವರಲ್ಲಿ ವಿಧವಾ ವಿವಾಹಕ್ಕೆ ಒಪ್ಪಿಗೆ ಇದೆ. ಬಹುಪತ್ನಿತ್ವ ಮತ್ತು ವಿಚ್ಛೇದನಕ್ಕೆ ಅನುಮತಿ ಇತ್ತು. ಬಹುಪತಿತ್ವ ಪದ್ಧತಿ ಇಲ್ಲಿ ಆಚರಣೆಯಲ್ಲಿ ಇರಲಿಲ್ಲ.

ಕೆಲವರ ಹೊರತುಪಡಿಸಿ ಸತ್ತವರು ತಮ್ಮ ದೇಹವನ್ನು ಸುಡುತ್ತಾರೆ. ಸತ್ತವರ ಶರೀರವನ್ನು ತೊಳೆದು ಉಡುಪುಗಳನ್ನು ತೊಡಿಸಿ, ಸತ್ತವರ ಹಣೆಗೆ ಕುಂಕುಮ ಹಚ್ಚಿ, ಸತ್ತ ಮಹಿಳೆಯ ತಲೆಯನ್ನು ಹೂವಿನಿಂದ ಅಲಂಕರಿಸುತ್ತಾರೆ. ಶ್ರೀಮಂತರು ಸತ್ತವರನ್ನು ಶವ ವಾಹನದಲ್ಲಿ ಬಡವರು ಹಳೆ ಕಂಬಳಿಯಲ್ಲಿ ತರುತ್ತಾರೆ. ಶವ ದಹನ ಅಥವಾ ಶವ ಹೂಳಿದ ನಂತರ ಜನರು ಸ್ನಾನ ಮಾಡಿ ಮನೆಗೆ ಬಂದು ಸಂತಾಪ ಸೂಚಿಸುತ್ತಾರೆ. ಮೂರನೆಯ ದಿನದ ನಂತರ ದುಃಖಿತರು ಅಕ್ಕಿ ತೆಗೆದುಕೊಂಡು ಅಥವಾ ಸುರಳಿ ಸುತ್ತಿದ ಹೋಳಿಗೆ ಮತ್ತು ಸಣ್ಣ ಕೊಡದಲ್ಲಿ ನೀರು ತೆಗೆದುಕೊಂಡು ಸುಟ್ಟ ಸ್ಥಳಕ್ಕೆ ಒಯ್ದು ಅದನ್ನು ಸುಟ್ಟ ಸ್ಥಳದ ಸಮೀಪ ಇಟ್ಟು ಎಲ್ಲಿ ಗತಿಸಿದವನನ್ನು ಎಲ್ಲಿ ಸುಟ್ಟಿದ್ದರೋ ಅಥವಾ ಹೂಳಿದ್ದರೋ ಅಲ್ಲಿ ಇಡುತ್ತಿದ್ದರು. ಅವರು ಇಟ್ಟಂತಹ ವಸ್ತುಗಳನ್ನು ಕಾಗೆ ಮುಟ್ಟುವವರೆಗೆ ಅಲ್ಲಿ ಕಾಯುತ್ತಿದ್ದರು. ಒಂದು ವೇಳೆ ಕಾಗೆ ಬಂದು ತಿನ್ನದಿದ್ದರೆ, ದುಃಖಿತರ ಮುಖ್ಯಸ್ಥನು ಸತ್ತವರ ಮಕ್ಕಳ ಕಾಳಜಿ ವಹಿಸುವದಾಗಿ ಭರವಸೆ ಕೊಡುತ್ತಿದ್ದನು. ಒಂದು ವೇಳೆ ಕಾಗೆಗಳು ತಿನ್ನಲು ತಿರಸ್ಕರಿಸಿದರೆ ಆ ಆಹಾರವನ್ನು ಆಕಳಿಗೆ ಕೊಟ್ಟು ಮನೆಗೆ ಹೋಗುತ್ತಿದ್ದರು. ಏಳನೆಯ, ಒಂಬತ್ತನೆಯ ಅಥವಾ ಹನ್ನೊಂದನೆಯ ದಿನಕ್ಕೆ ಸತ್ತವರ ಬೂದಿ ಮತ್ತು ಎಲುಬುಗಳನ್ನು ಸಂಗ್ರಹಿಸಿ ನದಿಯಲ್ಲಿ ವಿಸರ್ಜಿಸಿ, ಗೆಳೆಯರು ಮತ್ತು ಸಂಬಂಧಿಗಳು ಊಟ ಮಾಡುತ್ತಾರೆ. ತಿಂಗಳ ಕೊನೆಗೆ ಗೆಳೆಯರು ಮತ್ತು ಬಂಧುಗಳು ಊಟ ಕೊಡುತ್ತಾರೆ. ಮೇಕೆ (ಹೋತಿನ) ಮಾಂಸದ ಊಟ ಕೊಡಲು ಕೇಳುತ್ತಾರೆ. ಕೆಲವರು ಕೇವಲ ಮೊದಲನೆಯ ವರ್ಷದ ಕೊನೆಗೆ ತಿಥಿ/ಸ್ಮರಣೆ–ಸಂಸ್ಕಾರವನ್ನು ನೆರವೇರಿಸುತ್ತಾರೆ.

ಬೇಡರ ಸಮಾಜ ಬಹು ದೊಡ್ಡದಾಗಿದೆ. ಅವರ ಸಾಮಾಜಿಕ ಜಗಳಗಳನ್ನು ವಿಚಾರಿಸಿ ನಿರ್ಧರಿಸಿ, ಸಮಾಜದ ಮುಖ್ಯಸ್ಥನಾದ ಕಟ್ಟಿಮನೆಯು ಬಗೆಹರಿಸುತ್ತಾರೆ. ಸಮಾಜದ ಮುಖ್ಯಸ್ಥನು ಪ್ರಕರಣ ಬಗೆಹರಿಸಲು ಕುಳಿತರೆ, ಅವನು ಕೆಲವು ಗೌರವಾನ್ವಿತ ವ್ಯಕ್ತಿಗಳನ್ನು ಜೊತೆಗೆ ಕುಳ್ಳರಿಸಿಕೊಂಡು ಅವರ ಒಪ್ಪಿಗೆ ಪಡೆದು ತೀರ್ಪು ಕೊಡುತ್ತಾನೆ. ಕೆಲವರು ತಮ್ಮ  ಮಕ್ಕಳನ್ನು ಕಳುಹಿಸುತ್ತಾರೆ.

ಹುಡುಗರು ಬರೆಯುವದನ್ನು, ಓದುವದನ್ನು ಮತ್ತು ಸರಳವಾಗಿ ಲೆಕ್ಕ ಮಾಡುವ ಕೆಲಸವನ್ನು ಕಲಿತಿದ್ದರು. ಬ್ರಿಟಿಷರ ಆಡಳಿತದವಳಗೆ ಬೇಡರ ನಡತೆ ಮತ್ತು ಪರಿಸ್ಥಿತಿ ದೊಡ್ಡ ಪ್ರಮಾಣದಲ್ಲಿ ಸುಧಾರಿಸಿತು. ಕ್ರಿ. ಶ. ೧೮೭೬ ರ ಬರಗಾಲದ ಹೊರತಾಗಿಯೂ ಅವರು ತೊಂದರೆಗೊಳಪಟ್ಟರೂ ಸಹ, ಅವರನ್ನು ಪ್ರಗತಿ ಹೊಂದಿದ ವರ್ಗದವರೆಂದು ಅಭಿಪ್ರಾಯ ಪಡಬಹುದು.



# ಬಿದ್ರಿ ಕಲೆ–ಬಹಮನಿ ಸುಲ್ತಾನರ ಕೊಡುಗೆ.

**–ಡಾ. ರೆಹಮಾನ್ ಪಟೇಲ್,**
ಪ್ಲಾಟ್ ನಂ. ೪೮, ೧ನೇ ಹಂತ, ೨ನೇ ಅಡ್ಡ ರಸ್ತೆ,
ಪಟೇಲ್ ಸ್ಟ್ರೀಟ್, ಗಣೇಶ ನಗರ,
ಬಾರೆ ಹಿಲ್ಸ ರಸ್ತೆ, ಕಲಬುರಗಿ.

ಶಿಲಾಯುಗದಿಂದಲೂ ಬಿದ್ರಿ ಕಲೆಯ ಪ್ರಕಾರ ಕಾಣಿಸುತ್ತದೆ. ಮುಂದಿನ ಯುಗಗಳಲ್ಲಿ ಕಲೆ ಹಂತಹಂತವಾಗಿ ಬದಲಾವಣೆ ಹೊಂದಿರುವುದು ಇತಿಹಾಸದ ಪುಟಗಳಿಂದ ವೇದ್ಯವಾಗುತ್ತದೆ. ಮಣ್ಣಿನ ಮಡಕೆಗಳ ಮೇಲೆ ಲೋಹದ ವಸ್ತುಗಳ ಮೇಲೆ ಚಿತ್ತಾರಗಳನ್ನು (ನಕ್ಷೆ) ಬಿಡಿಸುವ ಕಲೆಯನ್ನೂ ಮಾನವ ಬಹು ಹಿಂದೆಯೇ ಬೆಳಸಿಕೊಂಡಿದ್ದ. ಇದು ಮಾನವನ ವಿಕಾಸದ ಸಂಕೇತವಾಗಿ ರಾಜಾಶ್ರಯದಲ್ಲಿ ಈ ಕಲೆಗಳು ಹುಲುಸಾಗಿ ಬೆಳೆದು ಜನ ಮನ್ನಣೆಗಳಿಸಿವೆ. ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದ ಕಳಚೂರಿ ಅರಸರ ಕಾಲದಲ್ಲಿ ವಿವಿಧ ಪರಿಕರಗಳ ಮೇಲಲ್ಲದೇ ಕಬ್ಬಿಣದ ವಸ್ತುಗಳ ಮೇಲೆ ಬೆಳ್ಳಿ, ಬಂಗಾರ ಲೇಪಿಸುವ ಹಾಗೂ ಚಿತ್ತಾರ ಕೆತ್ತಿ ಅದರಲ್ಲಿ ಕೂಡಿಸುವ ಕಲೆ ಜಾರಿಯಲ್ಲಿದ್ದುದು ಕಂಡುಬರುತ್ತದೆ.

ಬಿದ್ರಿ ಕಲೆಯ ತಂತ್ರ, ಕೌಶಲ್ಯ ಮತ್ತು ನಿರ್ಮಾಣ ವಿಧಾನಗಳನ್ನು ಕುರಿತು ಚರ್ಚಿಸುವುದಕ್ಕಿಂತ ಮೊದಲು ಅದರ ಹೆಸರು ಮತ್ತು ಉತ್ಪತ್ತಿಯ ಬಗೆಗೆ ನಮಗೆ ದೊರೆವ ಆಕರಗಳನ್ನು ಗಮನಿಸಬಹುದು. ಸುಮಾರು ೮೦೦ ವರ್ಷಗಳಿಂದ ಬೆಳದು ಬಂದ ಸಂಪ್ರದಾಯದ ಪ್ರಕಾರ ದಕ್ಷಿಣದ ಬಹಮನಿ ಸುಲ್ತಾನರ ವಂಶದೊಂದಿಗೆ ಬಿದ್ರಿ ಕಲೆ ಸಂಬಂಧವಿದೆ. ಬಾಯಿಂದ ಬಾಯಿಗೆ ಹರಡುತ್ತ ಹೋದಂತೆ ಹೆಚ್ಚಿನ ಅಂಶಗಳು ಸೇರ್ಪಡೆಯಾಗುವುದೂ ಉಂಟು. ಈ ಬಗೆಗಿನ ವಿವರಣೆಯು ಸಾಕಷ್ಟು ಗೋಜಲಾಗಿದೆ.

ಒಂದು ಸಂಪ್ರದಾಯದ ಪ್ರಕಾರ ಬಿದ್ರಿಯ ಕಲಾತಂತ್ರವು ಇರಾನದಿಂದ ಇರಾಕಿನ ಮೂಲಕ ಬಹುಮನಿ ರಾಜ್ಯವನ್ನು ಬಂದು ಸೇರಿತು. ಇದನ್ನು ಭಾರತಕ್ಕೆ ತಂದವರು ಸಿಜಿಸ್ತಾನ್ (ಇರಾನ್) ದಿಂದ ಧರ್ಮ ಪ್ರಚಾರಕ್ಕೆ ಬಂದ ಸೂಫಿ ಖ್ವಾಜಾ ಮೊಯಿನುದ್ದೀನ್ ಹಸನ ಚಿಸ್ತಿ. ಕ್ರಿ.ಶ. ೧೧೯೨ (ಆ.ಹಿ. ೫೮೭)ನಲ್ಲಿ ಅವರ ಮೂಲಕ ಇದು ಮೊದಲಿಗೆ ಅಜಮೀರನ್ನು ಪ್ರವೇಶಿಸಿತು. ಅನಂತರ ಎರಡನೆಯ ಅಲ್ಲಾವುದ್ದೀನ ಬಹಮನಿಯು (ಕ್ರಿ.ಶ. ೧೪೩೬–೫೭) ಕರಕುಶಲ ವಸ್ತುಗಳನ್ನು ನಿರ್ಮಿಸುತ್ತಿದ್ದ ಕಲಾಕಾರರನ್ನು ವಿಜಾಪುರದಿಂದ ಕರೆತಂದು ಬೀದರಿನಲ್ಲಿ ನೆಲೆಗೊಳಿಸಿದ.

ಭಾರತದ ಬಿದ್ರಿ ಉತ್ಪನ್ನಗಳ ಬಗ್ಗೆ ಈ ಶತಮಾನದಲ್ಲಿ ಸ್ಪಷ್ಟವಾದ ಚಿತ್ರಣ ದೊರೆಯುತ್ತದೆ. ಶತಮಾನದ ಕೊನೆಯವರೆಗೆ ಸಾಂಪ್ರದಾಯಿಕ ಕೇಂದ್ರಗಳಾದ ಬೀದರ, ಪೂರ್ಣಿಯಾ, ಲಕ್ನೋ ಮತ್ತು ಮುರ್ಶಿದಾಬಾದಗಳು ತುಂಬ ಕ್ರಿಯಾಶೀಲವಾಗಿದ್ದವು. ೧೮೫೧ರ ಮಹಾ ಪ್ರದರ್ಶನಗಳಂಥ ಅಂತರ್‌ರಾಷ್ಟ್ರೀಯ ಪ್ರದರ್ಶನಗಳಿಂದಾಗಿ ದೊರೆತ ಉತ್ತೇಜನದ ಪರಿಣಾಮವಾಗಿ ಬಿದರಿ ಕೇಂದ್ರಗಳ ಬೆಳವಣಿಗೆಯಾಯಿತಾದರೂ ಅವುಗಳಲ್ಲಿ ಹೆಚ್ಚಿನವು ಬಹಳ ಕಾಲ ಬದುಕುಲಿಲ್ಲ.

ಶತಮಾನದ ಆರಂಭದ ದಶಕಗಳಲ್ಲಿ ಬೀದರವು ಕೂಡ ಅಂಥ ಪ್ರಗತಿಯನ್ನು ಸಾಧಿಸಲಿಲ್ಲ. ೧೮೫೧ರ ಪ್ರದರ್ಶನಕ್ಕೆ ಕಳುಹಿಸಿದ ಕಲಾಕೃತಿಗಳ “ಇನ್‌ಲೇ”ದಲ್ಲಿ ಕಂಡುಬರುವ ಉತ್ತಮ ಗುಣಮಟ್ಟವನ್ನು ಪರಿಶೀಲಿಸಿ ತೀರ್ಮಾನಕ್ಕೆ ಬರುವುದಾದರೆ ಅದು ಅವಸಾನದ ಅಂಚಿನಲ್ಲಿರುವ ಉದ್ದಿಮೆಯೆಂದು ಹೇಳುವಂತಿಲ್ಲ. ಲಂಡನ್ನಿನ ಕ್ರಿಸ್ಟಲ್ ಪ್ಯಾಲೇಸನಲ್ಲಿ ನಡೆದ ಮಹಾಪ್ರದರ್ಶನಕ್ಕೆ ಮೂಲವೆಂದರೆ, ೧೮೪೭ರಲ್ಲಿ ಸೋಸೈಟಿ ಫಾರ್ ದ ಎನ್‌ಕರೇಜಮೆಂಟ್ ಆಫ್ ಆರ್ಟ್ಸ್, ಮ್ಯಾನುಫ್ಯಾಕ್ಚರರ್ಸ್ ಎಂಡ್ ಕಾಮರ್ಸ್‌ನವರು ವಾರ್ಷಿಕವಾಗಿ ಏರ್ಪಡಿಸುತ್ತಿದ್ದ ಬ್ರಿಟಿಷ್ ನಿರ್ಮಾತೃಗಳ ಮತ್ತು ಅಲಂಕರಣ ಕಲೆಯ ಆಯ್ದು ಮಾದರಿಗಳ ಪ್ರದರ್ಶನಗಳು. ಇವು ಗಳಿಸಿದ ಜನಪ್ರಿತೆಯನ್ನು ಗಮನಿಸಿ ಮಹತ್ವಾಕಾಂಕ್ಷೆಯುಳ್ಳ ಯೋಜನೆಯೊಂದನ್ನು ಸಿದ್ಧಪಡಿಸಲಾಯಿತು. ಈ ಪ್ರದರ್ಶನದಲ್ಲಿ ಸಿದ್ಧಗೊಂಡ ಸಾಮಗ್ರಿಗಳು, ಅವುಗಳ ತಯಾರಿಕೆಗೆ ಬಳಸುವ ಕಚ್ಚಾ ವಸ್ತುಗಳು, ನಿರ್ಮಾಣದಲ್ಲಿ ಅವಶ್ಯವಾದ ಯಂತ್ರ

ಸಾಮಗ್ರಿಗಳು ಅಲ್ಲದೆ ಸುಂದರವಾದ ಮತ್ತು ಅಲಂಕರಣ ಕಲೆಗಳನ್ನು ಸೇರಿಸಿಕೊಳ್ಳಲಾಗಿತ್ತು. ಹಾಗಾಗಿ ಪ್ರಪ್ರಥಮವಾಗಿ ಭಾರತವನ್ನೂ ಸೇರಿಸಿಕೊಳ್ಳಬೇಕಾಗಿತ್ತು. ಅದಕ್ಕಾಗಿ ಈಸ್ಟ ಇಂಡಿಯಾ ಕಂಪನಿಯು ಅದರಲ್ಲಿ ತೊಡಗಿಕೊಳ್ಳಬೇಕಾದ ಅವಶ್ಯಕತೆಯುಂಟಾಯಿತು.

ಪ್ರಾರಂಭದಿಂದಲೂ ಬೀದರ ಇದರ ಮುಖ್ಯ ಕೇಂದ್ರವಾಗಿತ್ತು. ಇಂದಿಗೂ ಇಲ್ಲಿ ೪೦೦ಕ್ಕೂ ಹೆಚ್ಚಿನ ಕುಶಲ ಕರ್ಮಿಗಳು ಬಿದ್ರಿ ವಸ್ತುಗಳನ್ನು ತಯಾರಿಸುವಲ್ಲಿ ತೊಡಿಗಿಸಿಕೊಂಡಿದ್ದಾರೆ. ಇವರಲ್ಲಿ ಅನೇಕರು ಈ ಕಲೆಯನ್ನು ತಮ್ಮ ಪೂರ್ವಜರಿಂದ ಪಡೆದಿದ್ದಾರೆ. ಈ ಕಲೆಯ ನಿರ್ಮಾಣ ಪಾರಂಪರಿಕ ರೀತಿಯಲ್ಲಿಯೇ ನಡೆಯುತ್ತಿದೆ. ೧೯೫೬ರಲ್ಲಿ ಭಾಷಾವಾರು ರಾಜ್ಯಗಳ ಪುನರ್ ವಿಂಗಡನೆ ಆದ ನಂತರ ಬೀದರ ಕರ್ನಾಟಕ ರಾಜ್ಯಕ್ಕೆ ಸೇರಿತು. ಹೈದರಾಬಾದ ಆಂಧ್ರ ಪ್ರದೇಶದ ರಾಜಧಾನಿಯಾಯಿತು. ಬೀದರ ಚಿಕ್ಕನಗರವಾಗಿರುವುದು ಮತ್ತು ಸ್ಥಳೀಯ ವ್ಯಾಪಾರ ಕಡಿಮೆಯಾಗಿದ್ದರಿಂದ ಕುಶಲಕರ್ಮಿಗಳು ಹೈದರಾಬಾದಿಗೆ ವಲಸೆ ಹೋದರು. ಇದರ ಪರಿಣಾಮವಾಗಿ ಬೀದರಿನಲ್ಲಿ ಕೆಲವೇ ಕಾರ್ಮಿಕರು ಉಳಿದುಕೊಂಡರು. ೧೯೭೫ರಲ್ಲಿ ಬೀದರ ನಗರದಲ್ಲಿ ೨೫ ಸಂಘಟನೆಗಳಿದ್ದವು ಇದರಲ್ಲಿ ೧೧೦ ಜನ ಕುಶಲಕರ್ಮಿಗಳು ಕೆಲಸ ಮಾಡುತ್ತಿದ್ದರು. ೧೭೫ ನಮೂನೆಯ ಬಿದ್ರಿ ಕಲೆಯನ್ನು ಇಲ್ಲಿ ಕಾಣಬಹುದಾಗಿತ್ತು. ಕ್ರಿ.ಶ. ೧೯೫೦ರಲ್ಲಿ ಸರ್ಕಾರ ಇಲ್ಲಿ ಒಂದು ತರಬೇತಿ ಕೇಂದ್ರವನ್ನು ಆರಂಭಿಸಿತು. ಇದರಲ್ಲಿ ೨ ವರ್ಷಗಳ ಕಾಲ ಈ ಕಲೆಯಲ್ಲಿ ಶಿಕ್ಷಣ ನೀಡುವುದರ ಜೊತೆಗೆ ಇದಕ್ಕೆ ಬೇಕಾಗುವ ಅವಶ್ಯಕ ಕಚ್ಚಾ ವಸ್ತುಗಳ ಸರಬರಾಜು ಕೂಡ ಈ ಕೇಂದ್ರವೇ ಮಾಡುತ್ತದೆ.

ಶತಮಾನಗಳಿಂದ ನಡೆದು ಬಂದ ಈ ಬಿದ್ರಿ ಕಲೆಯ ಖ್ಯಾತಿಯನ್ನು ಉಳಿಸಿಕೊಳ್ಳುವ ಸಲುವಾಗಿ ೧೯೭೦ರಲ್ಲಿ ಮೈಸೂರ ರಾಜ್ಯ ಸರಕಾರ ಬೀದರದಲ್ಲಿಯೂ "ಆರ್ಟಿಸಾನ್ ಟ್ರೈನಿಂಗ್ ಸೆಂಟರ್‌ನ್ನು ಪ್ರಾರಂಭಿಸಿತು. ಇಲ್ಲಿಯೂ ಇತರ ಕರಕುಶಲ ಕಲೆಗಳಿಗಿಂತಲೂ ಬಿದ್ರಿ ಕಲೆಗೆ ಬಹಳ ಪ್ರಾಮುಖ್ಯತೆ ನೀಡಿದರು. ಶ್ರಮಕ್ಕೆ ತಕ್ಕ ಬೆಲೆ ದೊರೆಯದೇ ಇರುವುದರಿಂದ ಕೆಲವು ಕುಶಲಕರ್ಮಿಗಳು ಈ ವೃತ್ತಿಯನ್ನು ಬಿಡಲು ಯೋಚಿಸಿದ ಹಿನ್ನಲೆಯಲ್ಲಿ ಕರ್ನಾಟಕ ಸರಕಾರದ ಕರಕುಶಲ ಕಲೆ ವಿಭಾಗವು ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟು ಬಿದ್ರಿ ಕಲೆಗಳನ್ನು ಖರೀದಿಸಿ ಭಾರತದ ಇತರ ರಾಜ್ಯಗಳಿಗೆ ಹಾಗೂ ವಿಶ್ವ ಮಾರುಕಟ್ಟೆಗೆ ರಫ್ತು ಮಾಡಲಾರಂಭಿಸಿತು.

ಶತಮಾನಗಳಿಂದ ನಡೆದು ಬಂದ ಈ ಬಿದ್ರಿ ಕಲೆಯ ಖ್ಯಾತಿ ೧೯೮೦ರ ದಶಕದ ಆರಂಭದಲ್ಲಿ ಕುಗ್ಗುತ್ತಾ ಹೋಯಿತು. ಈ ಕಲೆಯ ಕಾರ್ಮಿಕರು ದಿನನಿತ್ಯದ ಜೀವನ ಸಾಗಿಸುವುದು ಕಷ್ಟದ ಕೆಲಸವಾಯಿತು. ಈ ಬಿದ್ರಿ ಕಲೆಯ ಬೆಲೆ ಹೆಚ್ಚಾಗಿರುವುದರಿಂದ ವ್ಯಾಪಾರ ಮಳಿಗೆಗಳು ಇರಲಿಲ್ಲ. ಬಿದ್ರಿ ಕಲೆಯ ಹೈದರಾಬಾದಿನಂತಹ ದೊಡ್ಡ ಪಟ್ಟಣಗಳಲ್ಲಿ ಒಳ್ಳೆಯ ಬೆಲೆಗೆ ಮಾರುತ್ತಿದ್ದರು. ಕಾರ್ಮಿಕರಿಗಿಂತ ಹೆಚ್ಚಿನ ಲಾಭ ವ್ಯಾಪಾರಿಗಳಿಗೆ ದೊರೆಯುತ್ತಿತ್ತು. ಇದರ ಪರಿಣಾಮವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಕಾರ್ಮಿಕರು ಬೇರೆ ಬೇರೆ ಉದ್ಯೋಗವನ್ನು ಪ್ರಾರಂಭಿಸಿದರು. ಅನಮೋಲ ಬಿದ್ರಿ ವೇರ್ ಕೋ ಆಫ್‌ರೇಟಿವ್ ಸೊಸೈಟಿ ಲಿಮಿಟೆಡ್ ಮತ್ತು ಬೀದರಿನ ಪ್ರೈಮರಿ ಕೋ–ಆಪರೇಟರ ಲ್ಯಾಂಡ್ ಡೆವಲೆಪ್‌ಮೆಂಟ್ ಬ್ಯಾಂಕ್ ಎಂಬ ನಿಗಮಗಳಿಂದ ಕಾರ್ಮಿಕರಿಗೆ ಬ್ಯಾಂಕಿನಿಂದ ಕಚ್ಚಾ ಸಾಮಗ್ರಿ ಕೊಡಲಾಗುತ್ತಿದೆ. ತಯಾರಾದ ವಸ್ತುಗಳನ್ನು ನಿಗಮಕ್ಕೆ ಕೊಡಬೇಕಾಗುತ್ತದೆ. ಪ್ರತಿಯೊಬ್ಬ ಕಾರ್ಮಿಕರಿಗೆ ಇದರಿಂದ ಬಂದ ಹಣದಲ್ಲಿ ನಿಗಮವು ಕಲಾಕಾರನಿಗೆ ಒಂದು ಪಾಲನ್ನು ಕೊಡುತ್ತದೆ. ಅಲ್ಲದೆ, ಪ್ರತಿಯೊಬ್ಬ ಕಾರ್ಮಿಕನಿಗೆ ೧೦೦೦ ದಿಂದ ೨೦೦೦ ರೂಪಾಯಿಗಳವರೆಗೆ ಆದಾಯ ಸಿಗುತ್ತದೆ. ಸ್ಥಳೀಯ ಕಾರ್ಮಿಕರಾದ ಸೈಯದ ಅಹ್ಮದ ಶಹಾ ಖಾದ್ರಿ ಕಲಾಕಾರರು ನಿಗಮದಿಂದ ದೊರೆಯುವ ಮೊತ್ತ ಬಹಳ ಕಡಿಮೆ ಇದರಿಂದ ಅವನ ಉಪಜೀವನ ಸಾಗಿಸುವುದು ಸಾಧ್ಯವಾಗುವುದಿಲ್ಲ ಎಂದು ಉದಾಸೀನತೆಯಿಂದ ನುಡಿಯುತ್ತಾರೆ.

೧೯೮೫ ರಿಂದ ಈಚೆಗೆ ಬಿದ್ರಿ ಕಲೆಯಲ್ಲಿ ಬದಲಾವಣೆಗಳನ್ನು ಕಾಣಬಹುದು ಪ್ರಮುಖವಾಗಿ ಈ ವಸ್ತುಗಳ ಆಕಾರ ಮತ್ತು ನಕ್ಷೆಯಲ್ಲಿ ಪ್ರಸ್ತುತ ಜನರ ಬೇಡಿಕೆಯನ್ನು ಪೂರೈಸಲೆಂಬಂತೆ, ದಿನನಿತ್ಯದ ಬಳಕೆಯ ಸಾಮಾನುಗಳ ರೂಪದಲ್ಲಿ ನೋಡಬಹುದು. ಇದರಲ್ಲಿ ಅನೇಕ ಪ್ರಕಾರದ ಉದಾಹರಣೆ ನೀಡಬಹುದು. ಬಳೆಗಳು, ಕಿವಿ ಓಲೆಗಳು, ಸಿಗರೇಟ್ ಪೆಟ್ಟಿಗೆ, ಬೂದಿತಟ್ಟೆ (ಆಸ್ಟ್ರೀ) ಉಂಗುರುಗಳು ಮುಂತಾದವು ಪ್ರಮುಖವಾಗಿವೆ.

ಬಿದ್ರಿ ಕಲೆಯ ಬೇಡಿಕೆ ಹೊರ ರಾಷ್ಟ್ರಗಳಾದ ಜಪಾನ, ಇಂಗ್ಲೆಂಡ, ಅಮೇರಿಕಾ ಇಟಲಿ ಮತ್ತು ಕೆನಡಾಗಳಲ್ಲಿ ಅಪಾರವಾಗಿದ್ದು, ಪ್ರತಿವರ್ಷ ಕನಿಷ್ಟ, ಆರರಿಂದ ಎಂಟು ಲಕ್ಷ ರೂಪಾಯಿ ಬೆಲೆಬಾಳುವ ವಸ್ತುಗಳು ಮಾರಾಟವಾಗುತ್ತವೆ. ಹಳೆಯ ಮಾದರಿಯ ಬಿದ್ರಿ ಕಲೆಯ ವಸ್ತುಗಳ ಬೇಡಿಕೆ ಕಡಿಮೆಯಾಗಿದ್ದು, ಅಂಥಹ ವಸ್ತುಗಳ ತಯಾರಿಕೆಯು ಕಡಿಮೆಯಾಗುತ್ತಲಿದೆ. ಆದರೆ ಆಸಕ್ತಿವುಳ್ಳವರಿಗೆ ಅಂಥ ವಸ್ತುಗಳೇ ಬೇಕು ಎಂದಾಗ ಮಾತ್ರ ಇಂದಿಗೂ ಅಂತಹ ವಸ್ತುಗಳನ್ನು ತಯಾರಿಸಿಕೊಡುತ್ತಾರೆ. ಮುಸ್ಲಿಂ ವಾಸ್ತುಶಿಲ್ಪದ ದಟ್ಟವಾದ ಪ್ರಭಾವ ಈ ಕುಶಲ ಕಲೆಯಲ್ಲಿ ಕಂಡು ಬಂದರೂ ಅಲ್ಲಿಯ 'ಕುಶಲಕರ್ಮಿಗಳು' ಚಾಣಾಕ್ಷರಾಗಿದ್ದರಿಂದ ಪರಿಸರದ ಹೊರಗಿನ ಜನರ ಅಭಿರುಚಿಗೆ ಅನುಗುಣವಾಗಿ ಇತರೇ ಧರ್ಮದವರ ಸಾಂಪ್ರದಾಯಿಕ ವಿನ್ಯಾಸಗಳನ್ನು ಬಿಡಿಸಿ ಜನಮನ್ನಣೆಗೆ ಪಾತ್ರರಾಗಿದ್ದಾರೆ. ಅಜಂತಾದ ವರ್ಣಚಿತ್ರಗಳ ವಿನ್ಯಾಸಗಳನ್ನು ಬಳಸುತ್ತಿದ್ದಾರೆ. ಪದ್ಮಪಾಣಿ, ಬುದ್ಧ, ವಾಘರಾಕೃತಿಗಳು ಬಹಳ ಜನಪ್ರಿಯವಾಗಿವೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡ ವಾಸ್ತುಶಿಲ್ಪದ ಶೈಲಿಯ ಕೆಲ ಮಾದರಿಗಳನ್ನು ಬಿದ್ರಿ ವಸ್ತುಗಳಲ್ಲಿ ನೋಡಬಹುದಾಗಿದೆ. ಶಿಲಾ ಬಾಲಕಿಯರು ಶಿವ-ಶಿವೆಯರ ಪ್ರತಿರೂಪುಗಳು ಕಾಣಿಸಿಗುತ್ತವೆ. ಕುರಾನಿನ ಶ್ಲೋಕಗಳ ಕೆತ್ತನೆಗಳು ಮನೋಹರವಾಗಿವೆ.

ಇಂಡೋ-ಇಸ್ಲಾಮಿಕ್ ಲೋಹವಿದ್ಯೆಯ ಕೆಲವು ಪ್ರಮುಖ ಕೇಂದ್ರಗಳು ಮುಸ್ಲಿಂರ ಪ್ರಾಬಲ್ಯವುಳ್ಳ ಪ್ರದೇಶಗಳಾಗಿದ್ದವು. ಅದರ ಪರಿಣಾಮವಾಗಿ ಪರ್ಶಿಯನ್ ಪ್ರಭಾವವನ್ನು ಆಕಾರ ಮತ್ತು ಅಲಂಕಾರಗಳಲ್ಲಿ ಕಾಣಬಹುದು. ಹಾಗಿದ್ದರೂ ಕೆಲವೊಮ್ಮೆ ಇಸ್ಲಾಮಿಕ್ ಆಕಾರವನ್ನು ಹೊಂದಿದ್ದು ಹಿಂದೂ ಆಶಯ ಮತ್ತು ವಿನ್ಯಾಸಗಳನ್ನು ಮೊಗಲ್ ಮತ್ತು ಮುಸ್ಲಿಂ ಅಲಂಕರಣಗಳ ಆಶಯಗಳ ಜೊತೆ-ಜೊತೆಗೆ ಕಾಣಬಹುದು.

ಡೆಕ್ಕನ್ನಿನ ಸುಲ್ತಾನ ಶಾಹಿಯ ಕಾಣಿಕೆಯ ಕುರಿತು ಕೂಡ ನಾವು ಗಮನ ಹರಿಸಬೇಕಾಗಿದೆ. ಮುಖ್ಯವಾಗಿ ಬಹಮನಿಗಳು (ಕ್ರಿ.ಶ. ೧೩೪೭-೧೫೩೮) ಮತ್ತು ಅವರ ಉತ್ತರಾಧಿಕಾರಿಗಳೆನಿಸಿದ ಅಹಮ್ಮದನಗರ, ಬಿಜಾಪುರ, ಗೋಲ್ಕೊಂಡ, ಬೀದರ ಮತ್ತು ಬೇರರಗಳ ಸುಲ್ತಾನ ಶಾಹಿಗಳು. ಅವು ಮೊಗಲರ ಆಳ್ವಿಕೆಯು ಪ್ರಾರಂಭವಾಗುವ ಹೊತ್ತಿಗೆ ಅಸ್ತಿತ್ವಕ್ಕೆ ಬಂದಿದ್ದವು. ಕ್ರಿ.ಶ. ೧೬೩೬ ಮತ್ತು ೧೬೮೭ರ ಹೊತ್ತಿಗೆ ಅವು ಮೊಗಲ ಸಾಮ್ರಾಜ್ಯಕ್ಕೆ ಸೇರಿ ಹೋದವು. ಮೊಗಲರ ಆಳ್ವಿಕೆಯ ನಂತರ, ಅಸಫ ಜಹಿ ವಂಶವು (ಕ್ರಿ.ಶ. ೧೭೨೪-೧೯೪೮) ಡೆಕ್ಕನ್ನನ್ನು ಆಳಿತು.

ಡೆಕ್ಕನ್ನಿನ ಸುಲ್ತಾನರ ಸಂಪನ್ಮೂಲಗಳು ಮೊಗಲರಿಗಿಂತ ಕಡಿಮೆಯಾಗಿತ್ತಾದರೂ ಅವರು ತುಂಬಾ ಸುಸಂಸ್ಕೃತರಾಗಿದ್ದರು ಮತ್ತು ಕಲಾತ್ಮಕ ಪ್ರಯತ್ನಗಳಿಗೆ ಉದಾರವಾದ ಆಶ್ರಯವನ್ನು ನೀಡಿದರು. ದುರ್ದೈವದಿಂದ ಈ ಕಾಲಕ್ಕೆ ಸೇರಿದ ಕೆಲವೇ ಲೋಹದ ವಸ್ತುಗಳು ತಿಳಿದು ಬಂದಿವೆ. ಅವುಗಳಲ್ಲಿ ಪ್ರಮುಖವಾದುದೆಂದರೆ 'ತಾಮ್ರದ ದೊಡ್ಡ ಹರಿವಾಣ'. ಇದು ಸುಮಾರು ಕ್ರಿ.ಶ. ೧೬೦೦ರದಾಗಿದ್ದು ಇದರಲ್ಲಿ ಯುದ್ಧ ಹಾಗೂ ಬೇಟೆಯ ದೃಶ್ಯಗಳಿವೆ. ಹಕ್ಕಿ ಹಾಗೂ ಪ್ರಾಣಿಗಳು ನಿಜವಾದವುಗಳೂ ಕಲ್ಲು ನಿಜವಾದವುಗಳೂ ಇವೆ. ಅವುಗಳನ್ನು ಅರಬ್ಬಿ ಶೈಲಿಯಲ್ಲಿ ಸಸ್ಯಗಳ ಆಶಯದೊಂದಿಗೆ ಕೊರೆಯಲಾಗಿದೆ. ಈ ಅಲಂಕರಣವು ನಕಾಶೆಯ ರಚನೆ ಹಾಗೂ ನಯಗಾರಿಕೆಗಳನ್ನು ಹೊಂದಿದ್ದು ತೈಮೂರ ಹಾಗೂ ಇರಾಣದ ಸಫಾವಿದ ಶೈಲಿಯದಾಗಿದೆ. ಅದರ ಚೈತನ್ಯಮಯತೆ ಹಾಗೂ ಶ್ರೀಮಂತವಾದ ಆಡಂಬರವು ಡೆಕ್ಕನ್ ಮೂಲವನ್ನು ದೃಢಪಡಿಸುತ್ತದೆ. ಅದಕ್ಕಿಂತಲೂ ಹೆಚ್ಚಿನ ಡೆಕ್ಕನ್ನಿನ ಕುರುಹೆಂದರೆ ಹಂಸಪಕ್ಷಿ. ಇದು

ದಕ್ಷಿಣ ಭಾರತದ ಹಿಂದೂ ಅಲಂಕರಣಗಳಲ್ಲಿ ಬಹುಮಟ್ಟಿಗೆ ಗೋಚರಿಸುವಂಥದ್ದು. ಸುಕುಮಾರ ಶಿ.ಶಾಸನವು ಸುತ್ತುವರಿದ ರೀತಿಯು ಕೂಡ ಅದನ್ನೇ ದೃಢಪಡಿಸುತ್ತದೆ.

ಈಚೆಗೆ ನಕಾಶೆಯುಳ್ಳ ಹಾಗೂ ನಯಗೊಳಿಸಿದ, ಬಹು ಮಟ್ಟಿಗೆ ಸಫಾವಿದ್ ಮಾದರಿಯ ಮತ್ತು ಅಂದವಾದ ಬರಹದ ತುಲ್ಧ ಲಿಪಿಯ ಶಾಸನವುಳ್ಳ ಕಲಾಯಿಯುಳ್ಳ ತಾಮ್ರದ ವಸ್ತುಗಳ ಗುಂಪು ಕೂಡ ಡೆಕ್ಕನ್ನಿಗೆ ಸೇರಿದ್ದಾಗಿರಬೇಕೆಂದು ತಜ್ಞರು ಒಪ್ಪಿಕೊಂಡಿದ್ದಾರೆ. ಅವು ಅತ್ಯಂತ ಪ್ರಮಾಣ ಬದ್ಧವಾಗಿದ್ದು, ಸೂಕ್ಷ್ಮವಾದ ವಿವರಗಳುಳ್ಳ ಅಲಂಕಾರವನ್ನು ಹೊಂದಿವೆ. ಅವು ಹದಿನಾರು ಮತ್ತು ಹದಿನೇಳನೇ ಶತಮಾನಗಳಲ್ಲಿ ನಿರ್ಮಿತವಾಗಿವೆ. ಬಹುಶಃ ಗೋಲ್ಕೊಂಡ ಮತ್ತು ಬಿಜಾಪುರಗಳಲ್ಲಿ ಸಿದ್ಧವಾಗಿರಬೇಕು. ಲೋಹಶಿಲ್ಪಕ್ಕೆ ಡೆಕ್ಕನ್ನಿನವರು ಸಲ್ಲಿಸಿದ ಅತ್ಯಂತ ಮಹತ್ವದ ಕಾಣಿಕೆಯೆಂದರೆ 'ಬಿದ್ರಿ'ಯೆಂದು ಹೇಳಬಹುದು.

**ಉಪಸಂಹಾರ.**

ಬಿದ್ರಿಯು ಡೆಕ್ಕನ್ ಸುಲ್ತಾನರ ಆಸ್ಥಾನದಲ್ಲಿ ಬೆಳೆದು ಬಂದ ಕುಶಲತೆ ಭಾರತದ ಲೋಹಶಿಲ್ಪಗಳಲ್ಲಿ ಮಹತ್ವದ ಪ್ರಕಾರವಾಗಿತ್ತು. ಅದನ್ನು ಬೇರೆ ಬೇರೆ ಮಾಧ್ಯಮಗಳಲ್ಲಿ ದುಡಿಸಿಕೊಳ್ಳಲಾಗುತ್ತಿತ್ತು. ಡೆಕ್ಕನ ಮತ್ತು ಮೊಗಲ ಸುಲ್ತಾನರ ಆಸ್ಥಾನಗಳಲ್ಲಿ ಬೇರೆ ಬೇರೆ ತಂತ್ರಗಳ ಮೂಲಕ ಅಲಂಕರಿಸಲಾಗುತ್ತಿತ್ತು. ರಾಜಸ್ಥಾನದ ಅರಮನೆ ಮತ್ತು ಪಂಜಾಬಿನ ಗುಡ್ಡಗಾಡು ರಾಜ್ಯಗಳಲ್ಲಿ ಬಿದ್ರಿ ಕಲೆಯ ಅಲಂಕರಣಗಳಿದ್ದವು.

ಇದು ಒಂದು ರೀತಿಯ ಪದರುಗಟ್ಟಿವಿಕೆಯ ಲೋಹಶಿಲ್ಪ. ಒಂದು ಲೋಹವನ್ನು ಇನ್ನೊಂದು ಲೋಹದ ಮೇಲೆ ಇನ್‌ಲೇ ಮಾಡುವುದು ಅಥವಾ ಹೊರ ಪದರವಾಗಿಸುವುದು ಇದರ ವೈಶಿಷ್ಟ್ಯ. ಇದು ಬಹು ಮಟ್ಟಿಗೆ ಬಂಗಾರ ಅಥವಾ ಬೆಳ್ಳಿಯೊಂದಿಗೆ ಮಾಡುವ ಡಮಾಸ್ಕೀನ್ (ಕೂಫ್ತಾಗರಿ) ಕಾಮಗಾರಿಯನ್ನು ಹೋಲುತ್ತದೆ. ಇದು ಡೆಕ್ಕನ್ನಿನ ಬೀದರಿನಲ್ಲಿ ಹುಟ್ಟಿ ಬಹುಮಟ್ಟಿಗೆ ಅಲ್ಲಿಯೇ ಬೆಳೆದು ಬಂದ ಕಾರಣ 'ಬಿದ್ರಿ'ಯೆಂದು ಕರೆಸಿಕೊಂಡಿದೆ.

ಬೀದರಿನ ಕರ್ಮಚಾರಿಗಳ ಪ್ರಕಾರ ಈ ಕುಶಲ ಕಲೆಯನ್ನು ಸುಮಾರು ೬೦೦ ವರ್ಷಗಳ ಹಿಂದೆ ಇರಾಕಿನಿಂದ ಇಂಡಿಯಕ್ಕೆ ವಲಸಿಗರ ಮೂಲಕ ತರಲ್ಪಟ್ಟಿತು. ಈ ಕುಶಲ ಕಲೆಯ ಮೂಲ ನೆಲೆಯು ಇರಾಣವಾಗಿರಬೇಕು. ಈ ಕಲೆಯ ಉತ್ಪತ್ತಿಯನ್ನು ಕುರಿತು ಇತರ ವೃತ್ತಾಂತಗಳೂ ಇವೆಯಾದರೂ ಅವೆಲ್ಲ ಕೇವಲ ಐತಿಹ್ಯಗಳಾಗಿವೆ. ಲೋಹವನ್ನು ಇನ್‌ಲೇ ಮಾಡುವ ಈ ತಂತ್ರ ಕೌಶಲವು ಪರ್ಶಿಯಾ ಅಥವಾ ಸಿರಿಯಾದಿಂದ ಬೀದರನ್ನು ತಲುಪಿರಬೇಕು. ಇದು ಆಶ್ಚರ್ಯಕರವಾದುದೇನೂ ಅಲ್ಲ. ಏಕೆಂದರೆ ಆ ಕಾಲದಲ್ಲಿ ಬೀದರವು ಮುಸ್ಲಿಂ ಭಾರತದ ಪ್ರಮುಖ ಪಟ್ಟಣವಾಗಿದ್ದು ಬಹಮನಿ ಸುಲ್ತಾನರು ವಿದ್ಯಾಪಿಚಕ್ಷಣರನ್ನು ಬೀದರಿಗೆ ಆದರದಿಂದ ಬರಮಾಡಿಕೊಳ್ಳುತ್ತಿದ್ದರು, ಪ್ರೋತ್ಸಾಹಿಸುತ್ತಿದ್ದರು. ಬಹುಶಃ ವಿದೇಶದ ಲೋಹದ ಇನ್‌ಲೇಯಲ್ಲಿ ನೈಪುಣ್ಯವನ್ನು ಪಡೆದ ಕುಶಲ ಕರ್ಮಿಗಳು ಬೀದರಿನತ್ತ ಆಕರ್ಷಿತರಾಗಿದ್ದಿರಬೇಕು. ಅವರ ಮೂಲಕ ಈ ಕಲೆಯು ಬೀದರಿನಲ್ಲಿ ಪ್ರಚುರವಾಗಿರಬೇಕು. ಈ ಸಮಯದಲ್ಲಿ ಗಮನಿಸಬೇಕಾದ ಇನ್ನೊಂದು ಸಂಗತಿಯೆಂದರೆ ಬೀದರಿನಿಂದ ಸುಮಾರು ೫೦ ಕಿ.ಮೀ. ದೂರದಲ್ಲಿರುವ ಕಲ್ಯಾಣಿಯು ಇತ್ತೀಚಿನವರೆಗೂ ಡಮಾಸ್ಕಿನ್ ಕಾಮಗಿರಿಯ ಪ್ರಮುಖ ಸ್ಥಳವಾಗಿತ್ತು.

ಬಿದ್ರಿಯಲ್ಲಿ ಗಸಗಸೆ ಗಿಡದ ಆಶಯಗಳನ್ನು ಕಾಣಬಹುದಾದರೂ ಅದು ಕ್ರಿ.ಶ. ೧೭೭೫ಕ್ಕಿಂತ ಮೊದಲು ಕಾಣುವುದಿಲ್ಲ. ಹದಿನೆಂಟನೇಯ ಶತಮಾನದ ಮಧ್ಯಭಾಗದ ನಂತರದಲ್ಲಿ ಹೈದರಾಬಾದಿನ ಅನೇಕ ವರ್ಣಚಿತ್ರಗಳಲ್ಲಿ ಗಸಗಸೆ ಹೂವಿನ ರಾಶಿಯನ್ನು ಸಾಮಾನ್ಯ ಲಕ್ಷಣವಾಗಿ ಗುರುತಿಸಬಹುದು.

ಹದಿನೆಂಟನೇ ಶತಮಾನದ ಮೊದಲ ಭಾಗಕ್ಕಿಂತ ಹಿಂದಿನ ಬಿದ್ರಿ ಕೃತಿಗಳಲ್ಲಿ ಬೆಳ್ಳಿ ಮತ್ತು ಹಿತ್ತಾಳೆಯನ್ನು ಮಿಶ್ರ ಮಾಡಿದ ಇನ್‌ಲೇಯನ್ನು ಗುರುತಿಸಬಹುದು.











# ಕಲ್ಯಾಣ ಕರ್ನಾಟಕದಲ್ಲಿ ಕಲ್ಯಾಣ ಚಾಳುಕ್ಯರ ಕಾಲದ ದೇವಾಲಯಗಳಿಗೆ ತೆರಿಗೆ ದಾನಗಳು: ಒಂದು ಅವಲೋಕನ

**–ಶ್ರೀ ಭರತ್ ಎ. ಸಿ.**
ಸಂಶೋಧನಾರ್ಥಿ,
ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ,
ಮಂಗಳ ಗಂಗೋತ್ರಿ, ಕೊಣಾಜೆ.

## ಲೇಖನದ ಸಾರಾಂಶ.

ಕಲ್ಯಾಣ ಚಾಳುಕ್ಯರ ಕಾಲದಲ್ಲಿ ದೇವಾಲಯಗಳು ಧಾರ್ಮಿಕ ಹಿನ್ನೆಲೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಕಾರಣವೆನೆಂದರೆ ಇವರ ಕಾಲದಲ್ಲಿ ದೇವಾಲಯಗಳು ಅಧಿಕ ಸಂಖ್ಯೆಯಲ್ಲಿ ನಿರ್ಮಾಣವಾದವು. ಶಾಸನಸ್ಥ ದಾಖಲೆಗಳ ಪ್ರಕಾರ ಕಲ್ಯಾಣ ಚಾಳುಕ್ಯರ ಆಳ್ವಿಕೆಯ ಸುಮಾರು ೨೫೦ ವರ್ಷಗಳ ಕಾಲದಲ್ಲಿ ಕನಿಷ್ಠ ೬೦೦ ದೇವಾಲಯಗಳು ನಿರ್ಮಾಣವಾಗಿವೆ. ದೇವಾಲಯಗಳ ನಿರ್ಮಾಣ ಹೆಚ್ಚಾದಂತೆ ದೇವಾಲಯಗಳಿಗೆ ನೀಡಿದ ತೆರಿಗೆ ದಾನಗಳು ಹೆಚ್ಚಾಗಿರುವುದನ್ನು ಶಾಸನಗಳು ಮಾಹಿತಿಯನ್ನು ಒದಗಿಸುತ್ತವೆ. ದೇವಾಲಯಗಳಿಗೆ ಸೇವಕ ವರ್ಗದ, ಸೇವೆಗಳ ವ್ಯವಸ್ಥೆಗೆ ಭೂಮಿ, ಧನ, ಧಾನ್ಯದ ರೂಪದಲ್ಲಿ ಮಾತ್ರವಲ್ಲದೇ ತೆರಿಗೆಗಳ ರೂಪದಲ್ಲಿಯೂ ನೆರವು ದೊರೆಯುತ್ತಿತ್ತು. ಅದ್ದರಿಂದ ಇವರ ಕಾಲದಲ್ಲಿ ದೇವಾಲಯಗಳು ಆರ್ಥಿಕವಾಗಿ ಪ್ರಬಲವಾಗಿದ್ದವು ಎಂದು ತಿಳಿದುಬರುತ್ತದೆ. ಹಾಗಾಗೀ ಕಲ್ಯಾಣ ಕರ್ನಾಟಕದ ಜಿಲ್ಲೆಗಳಾದ ರಾಯಚೂರು, ಬಳ್ಳಾರಿ, ಕಲಬುರುಗಿ, ಬೀದರ್, ಯಾದಗಿರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ದೊರೆತಿರುವ ಶಾಸನಗಳನ್ನು ಅವಲೋಕಿಸಿ ಕಲ್ಯಾಣ ಚಾಳುಕ್ಯರ ಕಾಲದ ಅನೇಕ ದೇವಾಲಯಗಳಿಗೆ ವಿವಿಧ ರೀತಿಯ ತೆರಿಗೆಗಳನ್ನು ದಾನ ಮಾಡಿರುವುದರ ವಿಚಾರಗಳ ಕುರಿತು ತಿಳಿದುಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ.

ಕಲ್ಯಾಣ ಚಾಳುಕ್ಯರ ಕಾಲದಲ್ಲಿ ದೇವಾಲಯಗಳು ಧಾರ್ಮಿಕ ಹಿನ್ನೆಲೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಕಾರಣವೆನೆಂದರೆ ಇವರ ಕಾಲದಲ್ಲಿ ದೇವಾಲಯಗಳು ಅಧಿಕ ಸಂಖ್ಯೆಯಲ್ಲಿ ನಿರ್ಮಾಣವಾದವು. ಶಾಸನಸ್ಥ ದಾಖಲೆಗಳ ಪ್ರಕಾರ ಕಲ್ಯಾಣ ಚಾಳುಕ್ಯರ ಆಳ್ವಿಕೆಯ ಸುಮಾರು ೨೫೦ ವರ್ಷಗಳ ಕಾಲದಲ್ಲಿ ಕನಿಷ್ಠ ೬೦೦ ದೇವಾಲಯಗಳು ನಿರ್ಮಾಣವಾಗಿವೆ.**(ಎಚ್ ಎಸ್ ಗೋಪಾಲರಾವ್,ಪು.ಸಂ.೭೮.)** ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಹೆಚ್ಚಾಗಿ ಶಿವ ದೇವಾಲಯಗಳು ನಿರ್ಮಾಣಗೊಂಡಿವೆ ಮತ್ತು ಅದಕ್ಕೆ ಕಾಳಾಮುಖ ಗುರುಗಳೆ ಕಾರಣರು ಎಂದರೆ ಉತ್ಪ್ರೇಕ್ಷೆಯಾಗಲಾರದು. ಶೈವ ಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ನಿರ್ಮಾಣವಾದ ಬಹುತೇಕ ಶೈವ ದೇವಾಲಯಗಳು ಜನತೆಯ ಸಾಂಸ್ಕೃತಿಕ ಬೆಳವಣಿಗೆಗೆ ಶ್ರಮಿಸಿರುವುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. **(ಎಚ್ ಎಸ್ ಗೋಪಾಲರಾವ್ ಪು.ಸಂ.೧೮೨.)** ದೇವಾಲಯಗಳ ನಿರ್ಮಾಣ ಹೆಚ್ಚಾದಂತೆ ದೇವಾಲಯಗಳಿಗೆ ನೀಡಿದ ತೆರಿಗೆ ದಾನಗಳು ಹೆಚ್ಚಾಗಿರುವುದನ್ನು ಶಾಸನಗಳು ಮಾಹಿತಿಯನ್ನು ಒದಗಿಸುತ್ತವೆ. ದೇವಾಲಯಗಳಿಗೆ ಸೇವಕ ವರ್ಗದ, ಸೇವೆಗಳ ವ್ಯವಸ್ಥೆಗೆ ಭೂಮಿ, ಧನ, ಧಾನ್ಯದ ರೂಪದಲ್ಲಿ ಮಾತ್ರವಲ್ಲದೇ ತೆರಿಗೆಗಳ ರೂಪದಲ್ಲಿಯೂ ನೆರವು ದೊರೆಯುತ್ತಿತ್ತು. ಅದ್ದರಿಂದ ಇವರ ಕಾಲದಲ್ಲಿ ದೇವಾಲಯಗಳು ಆರ್ಥಿಕವಾಗಿ ಪ್ರಬಲವಾಗಿದ್ದವು ಎಂದು ತಿಳಿದುಬರುತ್ತದೆ. ಹಾಗಾಗೀ ಕಲ್ಯಾಣ ಕರ್ನಾಟಕದ ಜಿಲ್ಲೆಗಳಾದ ರಾಯಚೂರು, ಬಳ್ಳಾರಿ, ಕಲಬುರುಗಿ, ಬೀದರ್, ಯಾದಗಿರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ದೊರೆತ್ತಿರುವ ಶಾಸನಗಳನ್ನು ಅವಲೋಕಿಸಿ ಕಲ್ಯಾಣ ಚಾಳುಕ್ಯರ ಕಾಲದ ಅನೇಕ ದೇವಾಲಯಗಳಿಗೆ ವಿವಿಧ ರೀತಿಯ ತೆರಿಗೆಗಳನ್ನು ದಾನ ಮಾಡಿರುವುದರ ವಿಚಾರಗಳ ಕುರಿತು ತಿಳಿದುಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ. ಕಲ್ಯಾಣ ಕರ್ನಾಟಕದ ಜಿಲ್ಲೆಗಳ ಶಾಸನೋಕ್ತ ವಿವರಣೆಗಳು ಮುಂದಿನಂತಿವೆ.

## ಬೀದರ್ ಜಿಲ್ಲೆಯಲ್ಲಿ ದೊರೆತ್ತಿರುವ ಶಾಸನಗಳು.

ಕ್ರಿ.ಶ.೧೦೮೨ರ ಬೀದರ್ ಜಿಲ್ಲೆ ಬಸವ ಕಲ್ಯಾಣ ತಾಲೂಕಿನ ಶಾಸನವು ಗಾಣವಾಯಿಲೆ ಮತ್ತು ಸರ್ವ್ವಮಾನ್ಯಗಳನ್ನು ರುದ್ರೇಶ್ವರ ದೇವರಿಗೆ ದಾನ ಬಿಟ್ಟ ಉಲ್ಲೇಖವಿದೆ.**(ಹನುಮಾಕ್ಷಿ ಗೋಗಿ(ಸಂ), ಕ.ವಿ.ವಿ.ಶಾ.ಸಂ.೦೮,ಬಸವ ಕಲ್ಯಾಣ ತಾ.೫೦.)** ಕ್ರಿ.ಶ.೧೯೯೯ರ ಬೀದರ್ ಜಿಲ್ಲೆ ಭಾಲ್ಕಿ ತಾಲೂಕಿನ ಶಾಸನವು ಸಿದ್ಧಾಯವನ್ನು ಉತ್ತರೇಶ್ವರ ದೇವರಿಗೆ ದಾನ ಬಿಟ್ಟ ಉಲ್ಲೇಖಿಸುತ್ತದೆ.**(ಹನುಮಾಕ್ಷಿ ಗೋಗಿ(ಸಂ), ಕ.ವಿ.ವಿ.ಶಾ.ಸಂ.೦೮,ಭಾಲ್ಕಿ ತಾ.೦೨.)** ಕ್ರಿ.ಶ.೧೧೧೫ರ ಬೀದರ್ ಜಿಲ್ಲೆ ಭಾಲ್ಕಿ ತಾಲೂಕಿನ ಶಾಸನವು ಕಿರುಕುಳವನ್ನು ಶಾಂತನಾತ ದೇವರಿಗೆ ದಾನ ಮಾಡಿದ ಉಲ್ಲೇಖಿಸುತ್ತದೆ.**(ಹನುಮಾಕ್ಷಿ ಗೋಗಿ(ಸಂ), ಕ.ವಿ.ವಿ.ಶಾ.ಸಂ.೦೮,ಭಾಲ್ಕಿ ತಾ.೭೦.),** ಕ್ರಿ.ಶ.೧೧೨೫ರ ಬೀದರ್ ಜಿಲ್ಲೆ ಬಸವಕಲ್ಯಾಣ ತಾಲೂಕಿನ ಶಾಸನವು ಅರುವಣ, ಆಯ ಮತ್ತು ಮಂಡವದೆರೆ(?)ಗಳನ್ನು ರಾಮೇಶ್ವರ ದೇವರಿಗೆ ದಾನ ಮಾಡಿದ ಉಲ್ಲೇಖಿಸುತ್ತದೆ.**(ಹನುಮಾಕ್ಷಿ ಗೋಗಿ(ಸಂ),ಕ.ವಿ.ವಿ.ಶಾ.ಸಂ.೦೮,ಬಸವ ಕಲ್ಯಾಣ ತಾ.೫೮.)** ಕ್ರಿ.ಶ.೧೧೩೭ರ ಬೀದರ್ ಜಿಲ್ಲೆ ಭಾಲ್ಕಿ ತಾಲೂಕಿನ ಶಾಸನವು ಗಾಣವಾಯಿಲಿಗೆಯನ್ನು ಉತ್ತರೇಶ್ವರ ದೇವರಿಗೆ ದಾನ ಮಾಡಿದನ್ನು ಉಲ್ಲೇಖಿಸುತ್ತದೆ.**(ಹನುಮಾಕ್ಷಿ ಗೋಗಿ(ಸಂ),ಕ.ವಿ.ವಿ.ಶಾ.ಸಂ.೦೮,ಭಾಲ್ಕಿ ತಾ.೧೫.)**

## ಕೊಪ್ಪಳ ಜಿಲ್ಲೆಯಲ್ಲಿ ದೊರೆತ್ತಿರುವ ಶಾಸನಗಳು.

ಕ್ರಿ.ಶ.೧೦೦೨ರ ಯಲಬುರ್ಗ ತಾಲೂಕಿನ ಶಾಸನವು ಶೋಬೇಶ್ವರ ದೇವಾಲಯಕ್ಕೆ ಅರುವಣವನ್ನು ಉಲ್ಲೇಖಿಸುತ್ತದೆ.**(ನಾಗಯ್ಯ ಜೆ.ಎಂ,ಕ.ಚಾ.ಶಾ.ಸಂ.೦೧,ಯಲಬುರ್ಗ ತಾ.೦೫.).** ಕ್ರಿ.ಶ.೧೦೦೫ರ ಯಲಬುರ್ಗ ತಾಲೂಕಿನ ಶಾಸನವು ದಂಡ–ದೋಷ ಮತ್ತು ಪಸುಂಬೆದೆರೆಗಳನ್ನು ಗವರೇಶ್ವರ ದೇವರಿಗೆ ದಾನದ ಬಗ್ಗೆ ಉಲ್ಲೇಖಿಸುತ್ತದೆ. **(ಡಾ.ದೇವರಾಕೊಂಡರೆಡ್ಡಿ.,ಕ.ವಿ.ವಿ.ಶಾ.ಸಂ–೦೨,ಯಲಬುರ್ಗ ತಾ.೫೦.),** ಕ್ರಿ.ಶ.೧೦೮೮ರ ಕೊಪ್ಪಳ ಜಿಲ್ಲೆ ಕೊಪ್ಪಳ ತಾಲೂಕಿನ ಶಾಸನವು ಸಿದ್ಧಾಯ ಮತ್ತು ದಸವಂಧಗಳನ್ನು ಸೋಮೇಶ್ವರ ದೇವರಿಗೆ ದಾನ ಮಾಡಿದನ್ನು ಉಲ್ಲೇಖಿಸುತ್ತದೆ.**(ಡಾ.ದೇವರಾ ಕೊಂಡರೆಡ್ಡಿ(ಸಂ), ಕ.ವಿ.ವಿ.ಶಾ.ಸಂ.೦೨,ಕೊಪ್ಪಳ ತಾ.೧೪೮.),** ಕ್ರಿ.ಶ.೧೧೦೪ರ ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲೂಕಿನ ಶಾಸನವು ಅರುವಣವನ್ನು ಆದಿತ್ಯ ದೇವರಿಗೆ ದಾನ ಬಿಟ್ಟ ಉಲ್ಲೇಖಿಸುತ್ತದೆ. **(ಡಾ.ದೇವರಾಕೊಂಡರೆಡ್ಡಿ(ಸಂ),ಕ.ವಿ.ವಿ.ಶಾ.ಸಂ.೦೨,ಕುಷ್ಟಗಿ ತಾ.೦೨.)** ಕ್ರಿ.ಶ.೧೧೨೩ರ ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲೂಕಿನ ಶಾಸನವು ಅರುವಣವನ್ನು ಮಲ್ಲೇಶ್ವರ ದೇವರಿಗೆ ದಾನ ಮಾಡಿದ ಉಲ್ಲೇಖಿಸುತ್ತದೆ. **(ಡಾ.ದೇವರಾಕೊಂಡರೆಡ್ಡಿ(ಸಂ), ಕ.ವಿ.ವಿ.ಶಾ.ಸಂ.೦೨,ಕುಷ್ಟಗಿ ತಾ.೦೧.)**

**ಕಲ್ಯಾಣ ಕರ್ನಾಟಕದ ಜಿಲ್ಲೆಗಳಲ್ಲಿ ದೇವಾಲಯಗಳಿಗೆ ತೆರಿಗೆ ದಾನ ನೀಡಿರುವ ಸ್ಥಳಗಳ ವಿವರ.**

| ಕ್ರ.ಸಂ. | ಸ್ಥಳದ ಹೆಸರು | ಕ್ರ.ಸಂ. | ಸ್ಥಳದ ಹೆಸರು |
|---|---|---|---|
| ೧ | ಗೋರ್ಟಾ | ೧೨ | ಭಾಲ್ಕಿ |
| ೨ | ಬರೂರು | ೧೩ | ಮುಚಳಂಬ |
| ೩ | ಗೋರ ಚಿಂಚೋಳಿ | ೧೪ | ಬಳಗೇರಿ |
| ೪ | ಕುಕ್ಕನೂರು | ೧೫ | ಹುಲಿಗಿ |
| ೫ | ಹೆಸರೂರು | ೧೬ | ಮಂಕಲ್ಕೇರಿ |

| | | | |
|---|---|---|---|
| ೭ | ನಾಗಾಯಿ | ೧೭ | ಭೀಮರಾಯನಗುಡಿ |
| ೭ | ದಿಗ್ಗಾಂವ | ೧೮ | ಗೋನಹಾಳು |
| ೮ | ನಂದಿಕಂಬ | ೧೯ | ರಂಗಪುರ |
| ೯ | ಹಿರೇಮ್ಯಾಗೇರಿ | ೨೦ | ಬಾಗಳಿ |
| ೧೦ | ಗಬ್ಬೂರು | ೨೧ | ಮುಕ್ಕುಂದಿ |
| ೧೧ | ಹಿರೇಬೇರಿಗೆ | ೨೨ | ಕಲ್ಲೂರು |

### ಕಲಬುರ್ಗಿ ಜಿಲ್ಲೆಯಲ್ಲಿ ದೊರೆತ್ತಿರುವ ಶಾಸನಗಳು.

ಕ್ರಿ.ಶ.ಕಾಲದ ಉಲ್ಲೇಖವಿಲ್ಲದ ತ್ರೈಲೋಕ್ಯಮಲ್ಲ(ಕ್ರಿ.ಶ.೧೦೪೪–೧೦೬೮)ನ ಕಾಲಕ್ಕೆ ಸೇರುವ ಕಲ್ಬುರ್ಗಿ ಜಿಲ್ಲೆ ಚಿತಾಪೂರ ತಾಲೂಕಿನ ಶಾಸನವು ದಶವಂಧವನ್ನು ಲೋಕೇಶ್ವರ ದೇವಾಲಯಕ್ಕೆ ದಾನ ಮಾಡಿರುವುದರ ಬಗ್ಗೆ ಉಲ್ಲೇಖಿಸುತ್ತದೆ.(**ಹನುಮಾಕ್ಷಿಗೋಗಿ.,ಕ. ಜಿ. ಶಾ,ಚಿತಾಪುರ ತಾ.೨೮.**) ಕ್ರಿ.ಶ.೧೦೫೧ರ ಕಲ್ಬುರ್ಗಿ ಜಿಲ್ಲೆ ಶಹಾಪುರ ತಾಲೂಕಿನ ಶಾಸನವು ಮಹಾಮಂಡಳೇಶ್ವರ ರೇವರಸರು ಸೋಮೇಶ್ವರ ದೇವರಿಗೆ ೩೨ ಗೇಣು ಕೋಲಲ್ಲಿ ದಸವಂದ ತೆರಿಗೆಯನ್ನು ಸರ್ವ್ವನಮಸ್ಯವಾಗಿ ದಾನ ಬಿಟ್ಟಿರುವುದನ್ನು ಉಲ್ಲೇಖಿಸುತ್ತದೆ.(**ಹನುಮಾಕ್ಷಿಗೋಗಿ.,ಕ. ಜಿ. ಶಾ, ಶಹಾಪುರ ತಾ. ಶಾ.ಸಂ.೧೭.**), ಕ್ರಿ.ಶ.೧೦೫೪ರ ಕಲ್ಬುರ್ಗಿ ಜಿಲ್ಲೆ ಚಿತಾಪೂರ ತಾಲೂಕಿನ ಶಾಸನವು ಮಹಾಮಂಡಳೇಶ್ವರ ಬಚ್ಚಯ್ಯರಸರು ಗಾಣವಾಯಿಲೆ ತೆರಿಗೆಯನ್ನು ಸರ್ವ್ವನಮಸ್ಯವಾಗಿ ದಾನ ಬಿಟ್ಟಿರುವುದನ್ನು ಉಲ್ಲೇಖಿಸುತ್ತದೆ. (**ಹನುಮಾಕ್ಷಿ ಗೋಗಿ.,ಕ. ಜಿ. ಶಾ,ಚಿತಾಪುರ ತಾ.೨೫.**)

### ಬಳ್ಳಾರಿ ಜಿಲ್ಲೆಯಲ್ಲಿ ದೊರೆತ್ತಿರುವ ಶಾಸನಗಳು.

ಕ್ರಿ.ಶ.೧೧೧೪ರ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕಿನ ಶಾಸನವು ಪನ್ನಸು(ಅರ್ಧ ತೆರಿಗೆಯ ಭೂಮಿ) ವನ್ನು ಮಹಾಕಾಳ ದೇವರಿಗೆ ದಾನ ಮಾಡಿರವುದರ ಬಗ್ಗೆ ಉಲ್ಲೇಖಿಸುತ್ತದೆ.(**ನಾಗಯ್ಯ ಜೆ.ಎಂ,ಕ.ಚಾ.ಶಾ.ಸಂ.೦೧, ಹೊಸಪೇಟೆ ತಾ.೧೪.**), ಕ್ರಿ.ಶ.೧೦೫೩ರ ಬಳ್ಳಾರಿ ಜಿಲ್ಲೆ ಹರಪನಹಳ್ಳಿ ತಾಲೂಕಿನ ಶಾಸನವು ಮನ್ನೆಯದೆರೆಯನ್ನು ಕದಂಬೇಶ್ವರ ದೇವರಿಗೆ ದಾನ ಮಾಡಿರುವುದರ ಬಗ್ಗೆ ಉಲ್ಲೇಖಿಸುತ್ತದೆ.(**ಖಿಖಿಖಿ.ಖಿಘಿ,ಹರಪನಹಳ್ಳಿ ತಾ.೧೨೨.**), ಕ್ರಿ.ಶ.೧೦೫೮ರ ಬಳ್ಳಾರಿ ಜಿಲ್ಲೆ ಹಡಗಲಿ ತಾಲೂಕಿನ ಶಾಸನವು ಮಾನ್ಯದೆರೆ, ಮತದೆರೆ(?) ಮತ್ತು ಅರುವಣಗಳನ್ನು ನರಸಿಂಹ ದೇವರಿಗೆ ದಾನ ಬಿಟ್ಟ ಉಲ್ಲೇಖಿಸುತ್ತದೆ.(**ಖಿಖಿಖಿ.ಖಿಘಿ,ಹಡಗಲಿ ತಾ.೧೨೦.**), ಕ್ರಿ.ಶ.೧೦೬೧ರ ಬಳ್ಳಾರಿ ಜಿಲ್ಲೆ ಹರಪನಹಳ್ಳಿ ತಾಲೂಕಿನ ಶಾಸನವು ಗಾಣದೆರೆ ಮತ್ತು ಸೂಳೆದೆರೆಗಳನ್ನು ಸ್ವಯಂಭು ಕಲಿದೇವರ ಸ್ವಾಮಿಗೆ ದಾನ ಮಾಡಿರುವ ಬಗ್ಗೆ ಉಲ್ಲೇಖಿಸುತ್ತದೆ.(**ಖಿಖಿಖಿ.ಖಿಘಿ,ಹರಪನಹಳ್ಳಿ ತಾ.೧೨೫.**), ಕ್ರಿ.ಶ.೧೦೭೯ರ ಬಳ್ಳಾರಿ ಜಿಲ್ಲೆ ಹರಪನಹಳ್ಳಿ ತಾಲೂಕಿನ ಶಾಸನವು ಮೂಲಿಗದೆರೆ(ಸಂಗ್ರಹಕಾರನ, ಸಗಟು ವ್ಯಾಪಾರಸ್ಥನ ಮೇಲಿನ ಕರ), ಆಯದಾಯ, ಗಾಣವಾರಿ, ಉಪ್ಪಿನ ಕಾವಲಿದೆರೆ(?) ಮತ್ತು ಹಾರಿಕಾಯ(?)ಗಳನ್ನು ಸ್ವಯಂಭು ಕಲಿದೇವರ ಸ್ವಾಮಿಗೆ ದಾನ ಮಾಡಿರುವ ಬಗ್ಗೆ ಉಲ್ಲೇಖಿಸುತ್ತದೆ.(**ದೇವರಾಕೊಂಡರೆಡ್ಡಿ(ಸಂ), ಕ.ವಿ.ವಿ.ಶಾ.ಸಂ.೦೧,ಹರಪನಹಳ್ಳಿ ತಾ.೧೦೦.**),

### ರಾಯಚೂರು ಜಿಲ್ಲೆಯಲ್ಲಿ ದೊರೆತ್ತಿರುವ ಶಾಸನಗಳು.

ಕ್ರಿ.ಶ.೧೧೮೪ರ ರಾಯಚೂರು ಜಿಲ್ಲೆ ದೇವದುರ್ಗ ತಾಲೂಕಿನ ಶಾಸನವು ಮಾನ್ಯದತೆರಿಗೆ, ಅರುವಣ, ದಾಯದ ತೆರೆ(?) ಮತ್ತು ಸರ್ವ್ವನಮಸ್ಯಗಳನ್ನು ಕಲಿದೇವರ ಸ್ವಾಮಿಗೆ ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.**(ಡಾ.ದೇವರಾಕೊಂಡರೆಡ್ಡಿ(ಸಂ), ಕ.ವಿ.ವಿ.ಶಾ.ಸಂ.೦೭,ದೇವದುರ್ಗ ತಾ.೨೬.)** ಕ್ರಿ.ಶ.೧೮೯೭ರ ರಾಯಚೂರು ಜಿಲ್ಲೆ ಸಿಂಧನೂರು ತಾಲೂಕಿನ ಶಾಸನವು ಸಿದ್ಧಾಯವನ್ನು ಬಾಚೇಶ್ವರ ದೇವರಿಗೆ ದಾನ ಮಾಡಿದ ಉಲ್ಲೇಖಿಸುತ್ತದೆ.**(ಡಾ.ದೇವರಾಕೊಂಡರೆಡ್ಡಿ(ಸಂ), ಕ.ವಿ.ವಿ.ಶಾ.ಸಂ.೦೭,ಸಿಂಧನೂರು ತಾ.೦೭.)** ಕ್ರಿ.ಶ.೧೧೨೭ರ ರಾಯಚೂರು ಜಿಲ್ಲೆ ಸಿಂಧನೂರು ತಾಲೂಕಿನ ಶಾಸನವು ಭತ್ತಾಯ(ಬತ್ತದ ಬೆಳೆಯಿಂದ ಬರುವ ಉತ್ಪನ್ನ ವರಮಾನ), ಸಾದ(?) ಮತ್ತು ಆಯಗಳನ್ನು ದೇವರಿಗೆ ದಾನ ಮಾಡಿದನ್ನು ಉಲ್ಲೇಖಿಸುತ್ತದೆ.**(ಡಾ.ದೇವರಾಕೊಂಡರೆಡ್ಡಿ (ಸಂ),ಕ.ವಿ.ವಿ.ಶಾ.ಸಂ.೦೭,ಲಿಂಗಸೂಗೂರು ತಾ.೨೪.)** ಕ್ರಿ.ಶ.೧೧೩೪ರ ರಾಯಚೂರು ಜಿಲ್ಲೆ ಮಾನ್ವಿ ತಾಲೂಕಿನ ಶಾಸನವು ದಶವಂದವನ್ನು ಶ್ರೀ ಸ್ವಯಂ ಭೂ ಮಾರಟೇಶ್ವರ ದೇವರಿಗೆ ದಾನ ಮಾಡಿದನ್ನು ಉಲ್ಲೇಖಿಸುತ್ತದೆ.**(ಡಾ.ದೇವರಾಕೊಂಡರೆಡ್ಡಿ(ಸಂ), ಕ.ವಿ.ವಿ.ಶಾ.ಸಂ.೦೭,ಮಾನ್ವಿ ತಾ.೬೭.)**

ಈ ಮೇಲಿನ ಶಾಸನಗಳ ವಿವರಣೆಗಳನ್ನು ಗಮನಿಸಿದರೆ ಕಲ್ಯಾಣ ಚಾಳುಕ್ಯರ ಕಾಲದ ಕಲ್ಯಾಣ ಕರ್ನಾಟಕದ ಜಿಲ್ಲೆಗಳಾದ ಬಳ್ಳಾರಿ, ಕಲಬುರುಗಿ, ಬೀದರ್, ಯಾದಗಿರಿ ಮತ್ತು ಕೊಪ್ಪಳಗಳಲ್ಲಿ ದೊರೆತ್ತಿರುವ ಶಾಸನಗಳು ಶೈವ ದೇವಾಲಯಗಳಾದ ಶ್ರೀ ಶಂಕರ, ಬಾಚೇಶ್ವರ ಶ್ರೀ ಸ್ವಯಂ ಭು ಕೋಟಿ ಶಂಕರ, ಲೋಕೇಶ್ವರ, ಮಹಾಕಾಳ, ಗವರೇಶ್ವರ, ಸ್ವಯಂ ಭೂ ಮಾರಟೇಶ್ವರ, ಸೋಮೇಶ್ವರ ಮುಂತಾದ ಶೈವ ದೇವಾಲಯಗಳಿಗೆ ವಿವಿಧ ರೀತಿಯ ತೆರಿಗೆಗಳನ್ನು ದಾನ ಮಾಡಿರುವುದನ್ನು ತಿಳಿಸುತ್ತವೆ. ಅದರ ಜೊತೆಗೆ ಶೈವ ಧರ್ಮದ ಧಾರ್ಮಿಕ ಆಚಾರ–ವಿಚಾರಗಳು, ರೂಢಿ ಸಂಪ್ರದಾಯ ಇತ್ಯಾದಿಗಳಿಗಾಗಿ ದೇವಾಲಯಗಳ ವ್ಯವಸ್ಥೆ ನೋಡಿಕೊಳ್ಳುತ್ತಿದ್ದ ಸ್ಥಾನಿಕರಿಗೆ, ಆಚಾರ್ಯರಿಗೆ, ಯತಿಗಳಿಗೆ ದೇವಾಲಯಗಳಲ್ಲಿ ಜನರ ಸಮ್ಮುಖದಲ್ಲಿ ತೆರಿಗೆಗಳನ್ನು ದಾನ ನೀಡಿರುವುದನ್ನು ಶಾಸನಗಳಲ್ಲಿ ಉಲ್ಲೇಖಿತವಾಗಿರುವುದನ್ನು ನೋಡಬಹುದು.

ಇವರ ಕಾಲದಲ್ಲಿ ಧರ್ಮದ ಪ್ರಬಾವ ಹೆಚ್ಚಾಗಿತ್ತು. ದೇವಾಲಯಗಳ ನಿರ್ಮಾಣದಂತಹ ಕಾರ್ಯಗಳಿಗೆ ನೀಡಿದ ಆಶ್ರಯವು ಇವರ ಕಾಲದಲ್ಲಿ ಧಾರ್ಮಿಕವಾಗಿ ಶೈವಧರ್ಮ ಪ್ರಬಲ ಧರ್ಮವಾಗಿ ಬೆಳೆಯಿತು. ನಂತರ ಶೈವ ದೇವಾಲಯಗಳ ನಿರ್ಮಾಣ ಹೆಚ್ಚಾದಂತೆ ಶೈವಧರ್ಮದಲ್ಲಿ ವಿವಿಧ ರೀತಿಯ ಶಾಖೆಗಳು ಉಗಮವಾದವು. ಅವುಗಳೆಂದರೆ ಕಾಳಾಮುಖ, ಪಾಶುಪತ, ಕಾಪಾಲಿಕರು ಮತ್ತು ಲಕುಲೀಶ ಶಾಖೆಗಳಾಗಿವೆ. ಈ ಶಾಖೆಗಳ ತಪೋಧನರ ನೈಷ್ಠಿಕರಿಗೆ, ಜೀರ್ಣ್ಣೋದ್ಧಾರಕ್ಕೆ, ವಿದ್ಯಾದಾನಕ್ಕೆ ಹಾಗೂ ಆಹಾರದಾನಕ್ಕೆ ಇತ್ಯಾದಿ ಕಾರ್ಯಗಳಿಗಾಗಿ ಪೆರ್ಗ್ಗಡೆಗಳು, ದಂಡನಾಯಕರು, ಪೆರ್ಜ್ಜುಂಕ ಸುಂಕವನ್ನು ಸಂಗ್ರಹಿಸುವ ಪೆರ್ಗ್ಗಡೆಗಳು, ಗಾವುಂಡರು, ತೆರಿಗೆ ಸಂಗ್ರಹಣೆಯ ಅಧಿಕಾರಿಗಳು ಮತ್ತು ವ್ಯಾಪಾರಸ್ಥರದ ಪಟ್ಟಣ ಸ್ವಾಮಿಗಳಿಂದ ಮತ್ತು ರಾಜರಿಂದ, ಅಧಿಕಾರಿಗಳಿಂದ ಮತ್ತು ಸಾಮಾನ್ಯರಿಂದ ವಿವಿದ ರೀತಿಯ ತೆರಿಗೆ ದಾನಗಳ ಜೊತೆಗೆ ಭೂದಾನ, ಹಣದಾನ ಮತ್ತು ದಾನ–ದತ್ತಿಗಳನ್ನು ಪಡೆದು ಈ ಶೈವ ಧರ್ಮದ ಶಾಖೆಗಳ ರಾಜಗುರುಗಳು ಮತ್ತು ಸ್ಥಾನಪತಿಗಳು ದೇವಾಲಯಗಳ ನಿರ್ವಹಣೆಯನ್ನು ಮಾಡುವುದಕ್ಕೆ ಅನೇಕ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಕಾರ್ಯಗಳನ್ನು ನಿರ್ವಹಿಸುತ್ತಿದ್ದರ ಬಗ್ಗೆ ಶಾಸನಗಳು ಮಾಹಿತಿ ಒದಗಿಸುತ್ತವೆ. ಇವರುಗಳು ದೇವಾಲಯಗಳ ಆರ್ಥಿಕ ವ್ಯವಸ್ಥೆಯನ್ನು ಕಾಪಾಡುವುದಕ್ಕೆ ವಿವಿಧ ರೀತಿಯ ಪ್ರಯತ್ನಗಳನ್ನು ಮಾಡುತ್ತಿದ್ದರು.

ಕಲ್ಯಾಣ ಚಾಳುಕ್ಯರ ಕಾಲದಲ್ಲಿ ತೆರಿಗೆಗಳನ್ನು ವಿಧಿಸುವ ಮತ್ತು ತೆಗೆದು ಹಾಕುತ್ತಿದ್ದ ಅಧಿಕಾರಿಗಳು ಸಾಮಾನ್ಯವಾಗಿ ದೇವಾಲಯಗಳಿಗೆ ದಾನ–ದತ್ತಿಗಳನ್ನು ನೀಡುವಾಗ ತಮ್ಮ ಅಧಿಕಾರದ ವ್ಯಾಪ್ತಿಯಲ್ಲಿದ್ದ ತೆರಿಗೆಗಳನ್ನು ರದ್ದು ಮಾಡುತ್ತಿದ್ದರು. ಇಲ್ಲವೇ ಸಂಬಂಧಿತ ತೆರಿಗೆಗಳನ್ನು ದೇವಾಲಯದ ನಿರ್ವಹಣೆಗಾಗಿಯೇ ಕೊಡುತ್ತಿದ್ದರು. ಅರುವಣ, ಸಿದ್ಧಾಯ, ದಸವಂಧ, ಆಯದಾಯ, ಗಾಣವಾರಿ, ಉಪ್ಪಿನ ಕಾವಲಿದೆರೆ ಹಾಗೂ ಮಾನ್ಯದೆರೆಗೆಳಂತಹ ತೆರಿಗೆಗಳನ್ನು ದಾನದ ರೂಪದಲ್ಲಿ ದೇವಾಲಯಗಳಿಗೆ

ಕೊಡುವುದು ರೂಢಿಯಾಗಿತ್ತು. ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಕಲ್ಯಾಣ ಕರ್ನಾಟಕದ ಜಿಲ್ಲೆಗಳಲ್ಲಿನ ಶೈವ ದೇವಾಲಯಗಳಿಗೆ ತೆರಿಗೆಗಳ ಜೊತೆಗೆ ಅನೇಕ ಮೂಲಗಳಿಂದ ಹಣಕಾಸು ದೊರೆಯುತ್ತಿತ್ತು. ಹಾಗೇಯೇ ದೇವಾಲಯಗಲ್ಲಿನ ಪ್ರತಿನಿತ್ಯದ ಸೇವೆ, ವಿಶೇಷ ಪರ್ವ, ಉತ್ಸವಗಳು, ರಂಗಭೋಗ, ಅಂಗಭೋಗ, ಪಾತ್ರ, ಪಾದ ಮೂಲ ಪರಿವಾರ, ಪೂಜಾರಿ ವರ್ಗದವರ ಜೀವಿತ, ಮಠಗಳ, ಅನ್ನ ಸತ್ರಗಳ ಮತ್ತು ವಿದ್ಯಾಕೇಂದ್ರಗಳ ನಿರ್ವಹಣೆ, ತಪೋಧನರ, ಛಾತ್ರರ ಅಶನಾಚ್ಛಾದನ ಇತ್ಯಾದಿಗಳಿಗೆ ಹೇರಳವಾದ ಸಂಪತ್ತಿನ ಅವಶ್ಯಕತೆ ಇತ್ತು. ಅಳುವ ಚಕ್ರವರ್ತಿ, ಮಾಂಡಲಿಕರು, ಅಧಿಕಾರಿಗಳು ದೇವಾಲಯಗಳ ಸುವ್ಯವಸ್ಥೆಗೆ ಸಮರ್ಪಕ ಏರ್ಪಾಡುಗಳನ್ನು ಮಾಡುತ್ತಿದ್ದರು.(**ಎಚ್. ಎಸ್. ಗೋಪಾಲರಾವ್,ಪು.ಸಂ.೧೧೧.**)

ಇವರ ಕಾಲದಲ್ಲಿ ದೇವಾಲಯಗಳನ್ನು ಕಟ್ಟಿದಾಗ ಅದರ ಸಂರಕ್ಷಣೆ, ಪೂಜಾ–ಕಾರ್ಯಗಳಿಗೆ ಮತ್ತು ಇತರ ಸಾಂದರ್ಭಿಕ ವೆಚ್ಚಗಳಿಗೆ ಕಟ್ಟಿಸಿದವರು ಮತ್ತು ಇತರರು ಅನೇಕ ರೀತಿಯ ತೆರಿಗೆಗಳನ್ನು ದಾನ ಮಾಡುತ್ತಿದ್ದರು. ಇದಲ್ಲದೆ ಕಾಲ–ಕಾಲಕ್ಕೆ ರಾಜರು, ಸುಂಕಧಿಕಾರಿಗಳು ಮತ್ತು ಧರ್ಮಿಷ್ಠರು ದಾನ–ದತ್ತಿಯನ್ನು ನೀಡುತ್ತಿದ್ದರು. ಹೀಗಾಗಿ ದೇವಾಲಯಗಳಿಗೆ ದಾನವಾಗಿ ಬರುತ್ತಿದ್ದ ತೆರಿಗೆಗಳನ್ನು ದೇವಾಲಯದ ಬೇರೆ ಬೇರೆ ಕಾರ್ಯಗಳಲ್ಲಿ ನಿರ್ವಹಿಸುತ್ತಿದ್ದ ಸಿಬ್ಬಂದಿ ವರ್ಗಕ್ಕೆ ಹೋಗುತ್ತಿತ್ತು. ದೊಡ್ಡ ದೊಡ್ಡ ದೇವಾಲಯಗಳ ಆರ್ಥಿಕ ನಿರ್ವಹಣೆ ದೊಡ್ಡ ಕೆಲಸವಾಗಿತ್ತು. ಏಕೆಂದರೆ ತೆರಿಗೆ ಹಣ ರೂಪದಲ್ಲಿ ಬರುತ್ತಿದ್ದ ಆದಾಯದಿಂದಾಗಿ ಸಿಬ್ಬಂದಿಯ ವೇತನ, ಪ್ರತಿನಿತ್ಯದ ಪೂಜೆ, ನೈವೇಧ್ಯದ ಆಹಾರ ಸಿದ್ಧತೆ ಮುಂತಾದ ವೆಚ್ಚಗಳು, ದೇವಾಲಯದ ಜೀರ್ಣೋದ್ಧಾರ, ಸುಣ್ಣ ಬಣ್ಣ ಮುಂತಾದ ಸಂರಕ್ಷಣೆಯ ಕಾರ್ಯಗಳು, ದೇವಾಯಲದ ಮಠಗಳಿಗೆ ಬರುತ್ತಿದ್ದ ಜನರಿಗೆ ಊಟ ವಸತಿ ವ್ಯವಸ್ಥೆ ಹೀಗೆ ದೇವಾಲಯದ ಬಹುದೊಡ್ಡ ಆರ್ಥಿಕ ವ್ಯವಸ್ಥೆಯನ್ನು ಸರಿದೂಗಿಸುವುದಕ್ಕಾಗಿ ತೆರಿಗೆಗಳನ್ನು ದಾನವಾಗಿ ಪಡೆದು ಧಾರ್ಮಿಕ ಕಾರ್ಯಗಳಿಗಾಗಿ ಬಳಸಿಕೊಳ್ಳಲಾಗುತ್ತಿತ್ತು.

**ಆಕರ ಸೂಚಿ:**


೧. ಭಟ್‌ಸೂರಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೦೯, ಬಾಗಲಕೋಟೆ ಜಿಲ್ಲೆ, ಪ್ರಸಾರಾಂಗ, ಹಂಪಿ, ೨೦೦೬.
೨. ನಾಗಯ್ಯ ಜೆ.ಎಂ. ಕಲ್ಯಾಣ ಚಾಲುಕ್ಯರ ಶಾಸನಗಳು ಸಂಪುಟ–೦೧, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೧೧.
೩. ಡಾ.ದೇವರಾಕೊಂಡರೆಡ್ಡಿ (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೦೨, ಕೊಪ್ಪಳ ಜಿಲ್ಲೆ, ಪ್ರಸಾರಾಂಗ, ಹಂಪಿ, ೧೯೯೯.
೪. ಹನುಮಾಕ್ಷಿ ಗೋಗಿ (ಸಂ), ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ಶಿವಚಂದ್ರ ಪ್ರಕಾಶನ, ನವನಗರ, ಹುಬ್ಬಳ್ಳಿ, ೧೯೯೬.
೫. ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ ಸಂಪುಟ–೦೯.
೬. ಶ್ರೀಮತಿ ಹನುಮಾಕ್ಷಿ ಗೋಗಿ (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೦೮, ಬೀದರ್ ಜಿಲ್ಲೆ, ಪ್ರಸಾರಾಂಗ, ಹಂಪಿ, ೨೦೦೬.
೭. ಡಾ.ದೇವರಾಕೊಂಡ ರೆಡ್ಡಿ (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೦೭, ರಾಯಚೂರು ಜಿಲ್ಲೆ, ಪ್ರಸಾರಾಂಗ, ಹಂಪಿ, ೨೦೦೩.
೮. ಎಚ್.ಎಸ್.ಗೋಪಾಲರಾವ್, ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಳುಕ್ಯರ ದೇವಾಲಯಗಳು–ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪು.ಸಂ.೭೮–೧೯೯೩.




# ಜಂಗಮಕ್ಷೇತ್ರ ಲಿಂಗನಾಯಕನಹಳ್ಳಿಯ ವಿರಕ್ತಮಠದ ಪರಂಪರೆ.

**–ಶ್ರೀ ರಾಘವೇಂದ್ರ ಎಸ್**
ಸಂಶೋಧನಾರ್ಥಿ,
ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ,
ಮಂಗಳ ಗಂಗೋತ್ರಿ, ಕೊಣಾಜೆ.

**ಲೇಖನ ಸಾರಾಂಶ.**

ಲಿಂಗನಾಯಕನಹಳ್ಳಿ ವಿರಕ್ತಮಠ ಬಳ್ಳಾರಿ ಜಿಲ್ಲಾ ಹೂವಿನಹಡಗಲಿ ತಾಲ್ಲೂಕಿನಲ್ಲಿರುವ ಲಿಂಗನಾಯಕನಹಳ್ಳಿ ವಿರಕ್ತ ಮಠದ ಚೆನ್ನವೀರ ಸ್ವಾಮಿಗಳು ಪ್ರಸಿದ್ಧರು. ಇವರು ಮೈಲಾರದ ಬಸವಲಿಂಗ ಕವಿಗಳ ಅನುಗ್ರಹ ಗುರುಗಳು. ಚೆನ್ನವೀರಸ್ವಾಮಿಗಳು ಮಠದಲ್ಲಿ ಪಾಠ ಹೇಳಿಕೊಡುತ್ತಿದ್ದರು. ಇವರಲ್ಲಿ ವಿದ್ಯಾಭ್ಯಾಸ ಮಾಡಲು ಹಾಗೂ ಶಿವಾನುಭವ ಗೋಷ್ಠಿಯಲ್ಲಿ ಆಧ್ಯಾತ್ಮಿಕ ಜೀವನ ಬೆಳೆಸಿಕೊಳ್ಳಲು ಮುಳುಗುಂದದ ಬಾಲಲೀಲ ಮಹಾಂತ ಶಿವಯೋಗಿಗಳು, ಮೈಸೂರು ಪ್ರಾಂತ್ಯದ ಶಿವಬಸವ ಸ್ವಾಮಿಗಳು ಹಾಗೂ ಬನ್ನಿಮೆಟ್ಟಿ ಚೆನ್ನಪ್ಪ ಮೊದಲಾದವರು ಆಗಮಿಸಿದ್ದರು. ಬಾಗುಳಿಯ ಅರಸ ಸೋಮಶೇಖರ ನಾಯಕ ಚನ್ನವೀರ ಸ್ವಾಮಿಗಳ ಪರಮಭಕ್ತನಾಗಿದ್ದನು. ಚೆನ್ನವೀರ ಸ್ವಾಮಿಗಳ ಶಿಷ್ಯನಾದ ಮೈಲಾರದ ಬಸವಲಿಂಗ ಶರಣರು 'ಷಟ್ಸ್ಥಲ ನಿರಾಭಾರ ವೀರಶೈವ ಸಿದ್ಧಾಂತ', 'ಗುರುಕರಣ ತ್ರಿವಿಧಿ', 'ಶಿವಾಣುಭವ ದರ್ಪಣ' ಹಾಗೂ 'ಲಿಂಗಾ ಪೂಜಾ ವಿಧಾನ' ಎಂಬ ನಾಲ್ಕು ಕೃತಿಗಳನ್ನು ರಚಿಸಿದ್ದಾನೆ. ವಿರಕ್ತಮಠಕ್ಕೆ ೨೫೦ ವರ್ಷಗಳ ಇತಿಹಾಸ ಮತ್ತು ಪರಂಪರೆಯಿದೆ. ಈ ಮಠದ ಕರ್ತೃ ಚನ್ನವೀರಸ್ವಾಮಿಗಳಿಂದ ಇಂದಿನ ಚನ್ನವೀರಸ್ವಾಮಿಗಳವರೆಗೂ ಶ್ರೀಮಠದ ಅಧಿಪತಿಗಳಾಗಿ ಕಾರ್ಯ ನಿರ್ವಹಿಸಿದ ಎಲ್ಲ ಸ್ವಾಮಿಗಳೂ ಲಿಂಗವ್ಯಸನಿಗಳೂ, ಜಂಗಮಪ್ರೇಮಿಗಳೂ ಆಗಿದ್ದಾರೆ. ಶಿವನಿಗಿಂತ ಶಿವಶರಣರೇ ಅಧಿಕವೆಂಬ ಮೈಲಾರ ಶರಣರ ವಾಣಿಯಂತೆ ಭಕ್ತರ ಸರ್ವಾಂಗೀಣ ಪ್ರಗತಿಗೆ ಕಂಕಣಬದ್ಧರಾಗಿ ಸೇವೆ ಸಲ್ಲಿಸಿದವರು. ಈ ರೀತಿಯಾಗಿ ಮಠದ ಪರಂಪರೆ ಬೆಳೆದು ಬಂದಿರುವುದನ್ನು ಇಂದಿಗೂ ಸಹ ನೋಡಬಹುದಾಗಿದೆ.

ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲ್ಲೂಕಿನ ಲಿಂಗನಾಯಕನಹಳ್ಳಿಯ ವಿರಕ್ತಮಠಕ್ಕೆ ೨೫೦ ವರ್ಷಗಳ ಇತಿಹಾಸ ಮತ್ತು ಪರಂಪರೆಯಿದೆ. ಈ ಮಠದ ಕರ್ತೃ ಚನ್ನವೀರಸ್ವಾಮಿಗಳಿಂದ ಇಂದಿನ ಚನ್ನವೀರಸ್ವಾಮಿಗಳವರೆಗೂ ಶ್ರೀಮಠದ ಅಧಿಪತಿಗಳಾಗಿ ಕಾರ್ಯ ನಿರ್ವಹಿಸಿದ ಎಲ್ಲ ಸ್ವಾಮಿಗಳೂ ಲಿಂಗವ್ಯಸನಿಗಳೂ, ಜಂಗಮಪ್ರೇಮಿಗಳೂ ಆಗಿದ್ದಾರೆ. ಶಿವನಿಗಿಂತ ಶಿವಶರಣರೇ ಅಧಿಕವೆಂಬ ಮೈಲಾರ ಶರಣರ ವಾಣಿಯಂತೆ ಭಕ್ತರ ಸರ್ವಾಂಗೀಣ ಪ್ರಗತಿಗೆ ಕಂಕಣಬದ್ಧರಾಗಿ ಸೇವೆ ಸಲ್ಲಿಸಿದವರು. ಅವರ ವಿರಕ್ತಮಠ ಪರಂಪರೆ ಹೀಗಿದೆ.

**ಹಾಲವರ್ತಿ ಶಿವಾನುಭವ ಆಚಾರವರ್ಯ ಲಿಂಗನಾಯಕನಹಳ್ಳಿ ಶ್ರೀ ಚನ್ನವೀರ ಶಿವಯೋಗಿಗಳು:** ಲಿಂಗನಾಯಕನಹಳ್ಳಿಯ ವಿರಕ್ತ ಮಠದ ಮೂಲ ಕರ್ತೃಗಳಾದ ಇವರ ಕಾಲ ನಿರ್ಣಯಕ್ಕೆ ಯವುದೇ ಖಚಿತ ಆಧಾರಗಳಿಲ್ಲ. ದೊರೆಯುವ ಆಧಾರಗಳಿಂದ ಕ್ರಿ.ಶ.೧೭೬೦ ರಿಂದ ೧೮೫೦ರ ಕಾಲಾವಧಿಯಲ್ಲಿ ಜೀವಿಸಿದ್ದರೆಂದು ಸ್ಥೂಲವಾಗಿ ಹೇಳಬಹುದಾಗಿದೆ. ಹರಪನಹಳ್ಳಿ ಸಮೀಪದ ಹಾಲವರ್ತಿಯಲ್ಲಿ ಲಿಂಗಾನುಸಂಧಾನದಲ್ಲಿ ನಿರತರಾಗಿದ್ದ ಪೂಜ್ಯರು ಅಲ್ಲಿನ ಪಾಳೆಯಗಾರ ಸೋಮಶೇಖರ ನಾಯಕ ಮತ್ತು ಆತನ ಪತ್ನಿ ಬಸಮ್ಮನಿಗೆ ಲಿಂಗದೀಕ್ಷೆ ನೀಡಿ ಹೋದಂತೆ ತಿಳಿದುಬರುತ್ತದೆ. ಅಲ್ಲಿಂದ ಕಲ್ಲಹಳ್ಳಿಗೆ, ಕಲ್ಲಹಳ್ಳಿಯಿಂದ ಕುರುವತ್ತಿ ಸಮೀಪದ ಗುಹೆಯಲ್ಲಿ ಅನುಷ್ಠಾನ ನಿರತರಾದರು.

ನಿರ್ಮಾಣವಾಯಿತು. ಅದು ವಟು ಸಾಧಕರ ಸಾಧನೆಗೆ ಅತ್ಯಂತ ಸೂಕ್ತ ಸ್ಥಳವಾಗಿತ್ತು. ಹೀಗಾಗಿ ಅಲ್ಲಿ ನಿತ್ಯ ಚಿಂತನ–ಮಂಥನಗಳು ಶಿವಾನುಭವ ಗೋಷ್ಠಿಗಳು ನಡೆಯತೊಡಗಿದವು. ಬಸವಕಲ್ಯಾನದ

ಅನುಭವ ಮಂಟಪದಂತೆ ಶರಣ ಸಂವಾದಗಳು ಜರುಗತೊಡಗಿದವು. ಈ ಕ್ಷೇತ್ರದ ಕೀರ್ತಿ ದಿನದಿನಕ್ಕೆ ಹಬ್ಬತೊಡಗಿತು. ನಾಡಿನ ಮೂಲೆ ಮೂಲೆಗಳಿಂದ ಶಿವಯೋಗ ಸಾಧಕರು ಲಿಂಗನಾಯಕನಹಳ್ಳಿಗೆ ನಿರಂತರವಾಗಿ ಬರತೊಡಗಿದರು. ಹಾಗೆ ಅಲ್ಲಿಗೆ ಬಂದು ಪ್ರಸಿದ್ಧರಾದವರೆಂದರೆ ಮುಳಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು, ಮೈಸೂರಿನ ಶಿವಬಸವಸ್ವಾಮಿಗಳು, ಚಿತ್ರದುರ್ಗದ ರಾಚೋಟಿಸ್ವಾಮಿಗಳು, ಶಾಂತವೀರ ಶಿವಯೋಗಿಗಳು, ಮೈಲಾರದ ಬಸವಲಿಂಗ ಶರಣರು, ಬನ್ನಿಮಟ್ಟಿ ಚೆನ್ನಪ್ಪ ಶರಣರು, ಹೊಳಲಿನ ಲಿಂಗಪ್ಪ ಶರಣರು, ಚಿಕ್ಕ ಕಬ್ಬೂರಿನ ಲಿಂಗಪ್ಪ ಶರಣರಂತಹವರು ಪ್ರಮುಖರಾಗಿದ್ದಾರೆ.

ಚನ್ನವೀರ ಶಿವಯೋಗಿಗಳು ಯಾವುದೇ ಕೃತಿ ರಚನೆ ಮಾಡಿದಂತೆ ತಿಳಿದು ಬರುವುದಿಲ್ಲ. ಆದರೆ ಇವರ ಪರಮಶಿಷ್ಯರಾದ ಮೈಲಾರದ ಬಸವಲಿಂಗ ಶರಣರು ಹಾಗೂ ಇನ್ನಿತರರು ಕೃತಿ ರಚನೆ ಮಾಡಿದ್ದರೆಂಬುದು ಗಮನಾರ್ಹ. ಈ ಕೃತಿಗಳೇ ಜಂಗಮ ಕ್ಷೇತ್ರ ಲಿಂಗನಾಯಕನಹಳ್ಳಿ ವಿರಕ್ತಮಠ ಮತ್ತು ಅದರ ಕರ್ತೃ ಚನ್ನವೀರ ಶಿವಯೋಗಿಗಳವರ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಮಹತ್ವದ ಪಾತ್ರ ನಿರ್ವಹಿಸಿವೆ.

ಬಳ್ಳಾರಿ ಜಿಲ್ಲಾ ಹೂವಿನಹಡಗಲಿ ತಾಲೂಕಿನಲ್ಲಿರುವ ಲಿಂಗನಾಯಕನಹಳ್ಳಿ ವಿರಕ್ತ ಮಠದ ಚೆನ್ನವೀರ ಸ್ವಾಮಿಗಳು ಪ್ರಸಿದ್ಧರು. ಇವರು ಮೈಲಾರದ ಬಸವಲಿಂಗ ಕವಿಗಳ ಅನುಗ್ರಹ ಗುರುಗಳು. ಚೆನ್ನವೀರಸ್ವಾಮಿಗಳು ಮಠದಲ್ಲಿ ಪಾಠ ಹೇಳಿಕೊಡುತ್ತಿದ್ದರು. ಇವರಲ್ಲಿ ವಿದ್ಯಾಭ್ಯಾಸ ಮಾಡಲು ಹಾಗೂ ಶಿವಾನುಭವ ಗೋಷ್ಠಿಯಲ್ಲಿ ಆಧ್ಯಾತ್ಮಿಕ ಜೀವನ ಬೆಳೆಸಿಕೊಳ್ಳಲು ಮುಳುಗುಂದದ ಬಾಲಲೀಲ ಮಹಾಂತ ಶಿವಯೋಗಿಗಳು, ಮೈಸೂರು ಪ್ರಾಂತ್ಯದ ಶಿವಬಸವ ಸ್ವಾಮಿಗಳು ಹಾಗೂ ಬನ್ನಿಮೆಟ್ಟಿ ಚೆನ್ನಪ್ಪ ಮೊದಲಾದವರು ಆಗಮಿಸಿದ್ದರು. ಬಾಗುಳಿಯ ಅರಸ ಸೋಮಶೇಖರ ನಾಯಕ ಚನ್ನವೀರ ಸ್ವಾಮಿಗಳ ಪರಮಭಕ್ತನಾಗಿದ್ದನು. ಚೆನ್ನವೀರ ಸ್ವಾಮಿಗಳ ಶಿಷ್ಯನಾದ ಮೈಲಾರದ ಬಸವಲಿಂಗ ಶರಣರು 'ಷಟ್ಸ್ಥಲ ನಿರಾಭಾರ ವೀರಶೈವ ಸಿದ್ಧಾಂತ', 'ಗುರುಕರಣ ತ್ರಿವಿಧಿ', 'ಶಿವಾಣುಭವ ದರ್ಪಣ' ಹಾಗೂ 'ಲಿಂಗಾ ಪೂಜಾ ವಿಧಾನ' ಎಂಬ ನಾಲ್ಕು ಕೃತಿಗಳನ್ನು ರಚಿಸಿದ್ದಾನೆ.

**ಪ್ರಸಾದ ಸ್ವಾಮಿಗಳು:** ಲಿಂಗನಾಯಕನಹಳ್ಳಿಯ ವಿರಕ್ತಮಠದ ಮೂಲ ಕರ್ತೃಗಳಾದ ಚನ್ನವೀರ ಶಿವಯೋಗಿಗಳ ಸೇವೆಯಲ್ಲಿದ್ದುಕೊಂಡು, ಅವರ ಕೃಪಾಶೀರ್ವಾದದಿಂದ ಉತ್ತರಾಧಿಕಾರಿಗಳಾಗಿ ಕಾರ್ಯ ನಿರ್ವಹಿಸಿದರು. ಇವರ ಕರಣಹಸಿಗೆ, ಏಕೋತ್ತರ ಶತಸ್ಥಲ, ಮಂತ್ರಗೋಪ್ಯಗಳಿಗೆ ಟಿಪ್ಪಣಿ ಬರೆದರೆಂದು ತಿಳಿದು ಬರುತ್ತದೆ.

**ನಂಜುಡ ಸ್ವಾಮಿಗಳು:** ಮೈಸೂರು ಪ್ರಾಂತದಿಂದ ಪ್ರಸಾದ ಸ್ವಾಮಿಗಳ ಬಳಿ ಶಿವಾನುಭವ ಸಾಧನೆಗೋಸ್ಕರ ಲಿಂಗನಾಯಕನಹಳ್ಳಿಗೆ ಬಂದವರು. ಲಿಂಗನಾಯಕನಹಳ್ಳಿಯ ವಿರಕ್ತಮಠದ ಮೂರನೆಯ ಪೀಠಾಧಿಪತಿಗಳಾಗಿ ಸೇವೆ ಸಲ್ಲಿಸಿದರೆಂದು ಹೇಳಲಾಗುತ್ತದೆ. ಇವರ ಕುರಿತು ಹೆಚ್ಚಿನ ವಿವರಗಳು ಲಭ್ಯವಿಲ್ಲ.

**ಗುರುಲಿಂಗ ಸ್ವಾಮಿಗಳು: (ಕ್ರಿ.ಶ.೧೮೬೦-೧೮೮೫)** ಗುರುಲಿಂಗ ಸ್ವಾಮಿಗಳು ಶಿವಪೂಜಾ ನಿಷ್ಠರೂ, ಶಿವಯೋಗ ಸಾಧಕರೂ, ಆಚಾರವಂತರೂ ಆಗಿದ್ದರು. ಇವರು ಶರಣ ಸಂಸ್ಕೃತಿಯನ್ನು ವೈಯಕ್ತಿಕ ನೆಲೆಯಲ್ಲಿ ಅನುಷ್ಠಾನ ಮಾಡಿದ ಮಹಾ ಸಾಧಕರೆಂದು ತಿಳಿದು ಬರುತ್ತದೆ. ಸಾಮಾಜಿಕವಾಗಿ, ಧಾರ್ಮಿಕವಾಗಿ, ಅಷ್ಟಾಗಿ ತೊಡಗಿಸಿಕೊಳ್ಳದ ಇವರ ಬಗೆಗೂ ಅಧಿಕ ಮಾಹಿತಿಗಳು ಲಭ್ಯವಾಗುವುದಿಲ್ಲ.

**ಬಸವಲಿಂಗ ಸ್ವಾಮಿಗಳು: (ಕ್ರಿ.ಶ.೧೮೮೫-೧೯೧೨)** ಇವರು ಹೂವಿನಹಡಗಲಿ ತಾಲೂಕಿನ ಬನ್ನಿಮಟ್ಟಿ ಗ್ರಾಮದವರು. ಶ್ರೀ ಮಠದ ಪ್ರಗತಿಗೆ ಶ್ರಮಿಸಿದವರು. ಇವರ ಕಾಲಾವಧಿಯಲ್ಲಿ ಅಂದರೆ ೧೯೦೮ರ ಸುಮಾರಿಗೆ ಹಾನಗಲ್ಲು ಕುಮಾರ ಶಿವಯೋಗಿಗಳು ಲಿಂಗನಾಯಕನಹಳ್ಳಿಗೆ ದಯಮಾಡಿಸಿದ್ದರು. ಶರಣ

ಸಂಸ್ಕೃತಿಯನ್ನು ಪುನರುಜ್ಜೀವನ ಗೊಳಿಸಿದ ಕರ್ತೃ ಚನ್ನವೀರ ಶಿವಯೋಗಿಗಳಿಂದ ಪಾವನವಾದ ಕ್ಷೇತ್ರವಿದು. ಶಿವಾನುಭವ ಕೇಂದ್ರವಿದು ಶರಣ ಸಂಸ್ಕೃತಿಯನ್ನು ಸಾರುವ ಶ್ರೇಷ್ಠ ಕೃತಿಗಳನ್ನು ನೀಡಿದ ಮೈಲಾರ ಬಸವಲಿಂಗ ಶರಣರ ಸಾಧನಾ ಸ್ಥಳವಿದು. ಹೀಗೆ ಲಿಂಗ ಸಂಸ್ಕೃತಿಯನ್ನು ಬೆಳೆಸಿದ ಈ ಹಳ್ಳಿ ಮಂಗನಾಯಕನ ಹಳ್ಳಿಯಲ್ಲ, ಲಿಂಗನಾಯಕನಹಳ್ಳಿ ಎಂದು ಹೇಳಿ ಮರು ನಾಮಕರಣ ಮಾಡಿದರಂತೆ. ಅಲ್ಲದೆ ಸರಕಾರಿ ಕಡತಗಳಲ್ಲಿ ಹೊಸ ಹೆಸರು ದಾಖಲಾಗುವಂತೆ ಮಾಡಿದರೆಂದು ತಿಳಿದು ಬರುತ್ತದೆ. ಶಿವಯೋಗ ಮಂದಿರ ಸ್ಥಾಪನೆಗೆ ಪ್ರೇರಣೆ ನೀಡಿದ ಪವಿತ್ರ ಕ್ಷೇತ್ರ ಲಿಂಗನಾಯಕನಹಳ್ಳಿಯ ಜಂಗಮಕ್ಷೇತ್ರವೆಂಬುದು ಅತ್ಯಂತ ಹೆಮ್ಮೆಯ ಸಂಗತಿ.

**ಚನ್ನವೀರ ಸ್ವಾಮಿಗಳು:** ಚನ್ನವೀರ ಸ್ವಾಮಿಗಳು ತಮ್ಮ ಉತ್ತರಾಧಿಕಾರಿಯನ್ನಾಗಿ, ಮನ್ನಿಮಟ್ಟಿ ಹಿರೇಮಠದ ಗಡ್ಡದ ಚನ್ನವೀರ ಸ್ವಾಮಿಗಳನ್ನು ನೇಮಿಸಿಕೊಂಡಿದ್ದರು. ಇವರು ಅಲ್ಪ ಕಾಲದಲ್ಲಿಯೇ ಲಿಂಗೈಕ್ಯರಾದರೆಂದು ಹೇಳಲಾಗುತ್ತದೆ. ಹೀಗಾಗಿ ಇವರನ್ನು ವಿರಕ್ತಮಠದ ಪರಂಪರೆಯಲ್ಲಿ ಆರನೆಯವರೆಂದು ಪರಿಗಣಿಸಬೇಕೋ ಬೇಡವೋ ಎಂಬ ಜಿಜ್ಞಾಸೆಯೂ ಇದೆ. ಇವರ ಕುರಿತು ಇದಕ್ಕಿಂತ ಹೆಚ್ಚಿನ ಮಾಹಿತಿದೊರೆಯುವುದಿಲ್ಲ.

**ತಿಪ್ಪಯ್ಯ ಸ್ವಾಮಿಗಳು: (ಕ್ರಿ.ಶ.೧೯೧೨–೧೯೩೫)** ಇವರು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ದೊಡ್ಡೇರಿಯವರು. ೧೯೧೨ರಲ್ಲಿ ಲಿಂಗನಾಯಕನಹಳ್ಳಿ ಮಠದ ಉತ್ತರಾಧಿಕಾರಿಯಾಗಿ ಅಧಿಕಾರ ಸ್ವೀಕರಿಸಿದಂತೆ ತಿಳಿದುಬರುತ್ತದೆ. ಲಿಂಗಪೂಜಾ ನಿಷ್ಠರೂ ಮಹಾನ್ ಶಿವಯೋಗಿಗಳೂ ಆಗಿದ್ದ ಇವರ ದರ್ಶನಕ್ಕೆ ಇಲಕಲ್ಲಿನ ಮಹಾಮಠ ಸ್ವಾಮಿಗಳಂತಹ ಅನೇಕ ಪ್ರಸಿದ್ಧ ಸ್ವಾಮಿಗಳು ಲಿಂಗನಾಯಕನಹಳ್ಳಿಗೆ ಆಗಮಿಸುತ್ತಿದ್ದರು. ತುಂಗಭದ್ರಾ ನದಿಯ ಕೊರೆತ ತಡೆಯಲು ಭದ್ರವಾದ ತಡೆಗೋಡೆ ನಿರ್ಮಾಣ, ನದಿಗೆ ಸ್ನಾನಕ್ಕೆ ಹೋಗಿ ಬರಲು ಅನುಕೂಲವಾಗುವಂತೆ ಮೆಟ್ಟಿಲುಗಳ ನಿರ್ಮಾಣದಂತಹ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡಿದರು. ಅದೆಲ್ಲಕ್ಕಿಂತ ಮಿಗಿಲಾಗಿ, ಕರ್ತೃ ಚನ್ನವೀರ ಶಿವಯೋಗಿಗಳ ಹಾಗೆ ಜಂಗಮ ತತ್ವವನ್ನು ಸಾರುವ ನಿಜ ಜಂಗಮರಾಗಿ ವೀರಶೈವ ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಶ್ರಮಿಸಿದರೆಂಬುದು ಗಮನಾರ್ಹ. ೧೯೩೫ರಲ್ಲಿ ಲಿಂಗೈಕ್ಯರಾದರು. ಆಗ ಕೆಲ ತಿಂಗಳುಗಳ ಕಾಲ ಪೀಠಾಧಿಪತಿಗಳ ಕೊರತೆಯಾಗಿತ್ತು.

**ಚನ್ನವೀರ ಮಹಾಸ್ವಾಮಿಗಳು: (ಕ್ರಿ.ಶ.೧೯೩೫–೧೯೯೬)** ಹಾವೇರಿ ಜಿಲ್ಲೆ, ಹಾವೇರಿ ತಾಲೂಕಿನ ಗುತ್ತಲದ ಚರಂತಿಗೆ ಮಠದ ಚನ್ನ ಬಸವಯ್ಯ ಮತ್ತು ಬಸವಲಿಂಗಮ್ಮ ಎಂಬ ಸದಾಚಾರ ಸಂಪನ್ನರಾದ ಶರಣ ದಂಪತಿಗಳಿಗೆ ಕ್ರಿ.ಶ.೧೯೦೪ರಲ್ಲಿ ಗಂಡು ಮಗುವಿನ ಜನನವಾಯಿತ್ತು. ಜಡಿಯಪ್ಪ ಎಂದು ನಾಮಕರಣ ಮಾಡಿದರು. ಬಾಲ್ಯದಿಂದಲೂ ವೈರಾಗ್ಯ ಪರನಾಗಿದ್ದ ಬಾಲಕನನ್ನು ಗುತ್ತಲ ಚರಂತಿಗೆ ಮಠದ ಸ್ವಾಮಿಯಾಗಿ ಮಾಡಬೇಕೆಂಬ ಬಯಕೆ ಚನ್ನಬಸವಯ್ಯನದು. ಹೀಗಾಗಿ ಹಾವೇರಿಯ ಹುಕ್ಕೇರಿ ಮಠದ ಶ್ರೀ ಮ.ನಿ.ಪ್ರ.ಶಿವಬಸವ ಮಹಾಸ್ವಾಮಿಗವರ ಸನ್ನಿಧಿಯಲ್ಲಿ ಜಡಿಯಪ್ಪನನ್ನು ಬಿಟ್ಟು ಬಂದರು. ಬಾಲಕನ ನಯ–ವಿನಯ, ಶ್ರದ್ಧಾ ಭಕ್ತಿಯನ್ನು ಕಂಡ ಶಿವಬಸವ ಸ್ವಾಮಿಗಳು ತಮ್ಮ ಸೇವೆಗೆ ತೆಗೆದುಕೊಂಡರು. ತನ್ನ ಸೇವೆಯ ಮೂಲಕ ಜಡಿಯಪ್ಪ ಶಿವಬಸವಶ್ರೀಗಳ ಪ್ರೀತಿಗೆ ಪಾತ್ರನಾದ. ಆಚಾರ–ವಿಚಾರ, ಲಿಂಗಪೂಜಾ ನಿಷ್ಠೆ, ಶಿವಯೋಗ ಸಾಧನೆಯನ್ನು ಬೆಳೆಸಿಕೊಂಡು ಎಲ್ಲರ ಗಮನವನ್ನು ತನ್ನತ್ತ ಸೆಳೆಯುವಂತಾದ ಜಡಿಯಪ್ಪ.

ಗುತ್ತಲದ ಚರಂತಿ ಮಠದ ಜಡಿಯಪ್ಪ ದೇವರು ಸಾಧನಾ ನಿರತರಾಗಿದ್ದಾಗ ೧೯೩೫ರಲ್ಲಿ ಲಿಂಗನಾಯಕನಹಳ್ಳಿಯ ತಿಪ್ಪಯ್ಯ ಸ್ವಾಮಿಗಳು ಲಿಂಗೈಕ್ಯರಾದರು. ಲಿಂಗನಾಯಕನಹಳ್ಳಿಯ ಭಕ್ತರು ಜಡಿಯಪ್ಪ ದೇವರೇ ತಮ್ಮ ಮಠದ ಉತ್ತರಾಧಿಕಾರಿಯಾಗಬೇಕೆಂದು ಅವರನ್ನು ಭಕ್ತಿಯಿಂದ ಶ್ರೀಮಠಕ್ಕೆ ಬರಮಾಡಿಕೊಂಡರು. ಮುಂಡರಗಿಯ ಜಗದ್ಗುರು ಶ್ರೀ ಮ.ನಿ.ಪ್ರ. ಅನ್ನದಾನ ಮಹಾಸ್ವಾಮಿಗಳು, ಹಾವೇರಿಯ ಹುಕ್ಕೇರಿ ಮಠದ ಶ್ರೀ ಮ.ನಿ.ಪ್ರ. ಶಿವಬಸವ ಮಹಾಸ್ವಾಮಿಗಳು, ಕುರುವತ್ತಿಯ ಶ್ರೀ

ಮ.ನಿ.ಪ್ರ. ಮಹಾದೇವ ಮಹಾಸ್ವಾಮಿಗಳು, ಗುತ್ತಲದ ಶ್ರೀ ಮ.ನಿ.ಪ್ರ. ರುದ್ರಮುನಿ ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಯಲ್ಲಿ, ಹರಗುರು ಚರ ಮೂರ್ತಿಗಳ ಸಮ್ಮುಖದಲ್ಲಿ ಸಮಸ್ತ ಭಕ್ತರ ಸಾಕ್ಷಿಯಲ್ಲಿ ಜಡಿಯಪ್ಪ ದೇವರಿಗೆ ಹಿರೇಮಲ್ಲನಕೇರಿಯ ಶ್ರೀ ಮ.ನಿ.ಪ್ರ ಹುರುಲಿಂಗ ಮಹಾಸ್ವಾಮಿಗಳವರು ಚಿನ್ಮಯಾನುಗ್ರಹ ಮಾಡಿದರು. ಹೀಗೆ ನಿರಂಜನ ಜಂಗಮಾಧಿಕಾರ ಪಡೆದ ಜಡೊಯಪ್ಪ ದೇವರು ಶ್ರೀ ಮ.ನಿ.ಪ್ರ. ಚನ್ನವೀರ ಮಹಾಸ್ವಾಮಿಗಳೆಂದು ಲಿಂಗನಾಯಕನಹಳ್ಳಿಯ ವಿರಕ್ತಮಠದ ೮ನೇಯ ಪೀಠಾಧಿಪತಿಗಳಾದರು.

ವೀರ ವಿರಾಗಿಗಳೂ, ಲಿಂಗಪೂಜಾ ನಿಷ್ಠರೂ, ಜಂಗಮ ತತ್ವ ಪ್ರತಿಪಾದಕರೂ ಭಕ್ತ ವತ್ಸಲರೂ ಆಗಿದ್ದ ಪೂಜ್ಯರು ಸ್ವಾಮಿಗಳಾಗಿ ಆರು ದಶಕಗಳ ಕಾಲ ನಮ್ಮ ನಾಡಿನ ಉದ್ದಗಲಕ್ಕೆ ಸಂಚರಿಸಿದರು. ಭಕ್ತರ ಮನೆ–ಮನಗಳನ್ನು ತಟ್ಟುತ್ತಾ ವೀರಶೈವ ಸಂಸ್ಕೃತಿಯನ್ನು ಉಳಿಸಿ, ಬೆಳೆಸುತ್ತಾ ಬಿಡುವಿಲ್ಲದಂತೆ ಸಾಗಿದರು. ಬಡವ–ಬಲ್ಲಿದ, ಮೇಲು–ಕೀಳು, ಗಂಡು–ಹೆಣ್ಣು ಎನ್ನುವ ಯಾವುದೇ ಭೇದವನ್ನೆಣಿಸದೆ ಭಕ್ತಿಯಿಂದ ಕರೆದ ಭಕ್ತರ ಮನೆಗೆ ತೆರಳೀದರು. ತಮ್ಮ ಕೃಪಾಶೀರ್ವಾದ ಮತ್ತು ಭೋಧನೆಯ ಮೂಲಕ ಅವರನ್ನು ಸುಸಂಸ್ಕೃತರನ್ನಾಗಿ ಮಾಡಿದರು. ಅವರ ಮುಖದ ಮೇಲೆ ಸದಾ ಕಾಲ ಮುಗ್ಧ ಮಗುವಿನ ಮಂದಹಾಸವಿರುತ್ತಿತ್ತು. ಅತ್ಯಂತ ಸರಳ, ಸಹಜ, ನಿರಾಡಂಬರವಾಗಿದ್ದ ಚನ್ನವೀರ ಸ್ವಾಮಿಗಳ ವ್ಯಕ್ತಿತ್ವಕ್ಕೆ ಮಾರು ಹೋಗದವರೇ ಇಲ್ಲವೆಂದರೆ ತಪ್ಪಾಗದು. ಸದ್ವಿನಯದ ಸಾಕಾರ ಮೂರ್ತಿಯೂ, ಮೃದು ಮಧುರ ಮಾತುಗಾರರೂ ಆಗಿದ್ದ ಅವರು ಸರ್ವರನ್ನೂ ತಮ್ಮವರೆಂದು ಅಪ್ಪಿಕೊಂಡವರು ಹಾಗೂ ಇಪ್ಪಿಕೊಂಡವರು.

ತುಂಗಭದ್ರಾ ನದಿಯಂತೆ ಚಲನಶೀಲಯನ್ನು ಮೈಗೂಡಿಸಿಕೊಂಡಿದ್ದ ಶ್ರೀಗಳು ನಿರಂತರ ಸಂಚಾರದಲ್ಲಿರುತ್ತಿದ್ದರು. ಭಕ್ತರ ಮೂಲಕ ಲಿಂಗನಾಯಕನಹಳ್ಳಿ, ಬನ್ನಿಹಟ್ಟಿ ಮುಂತಾದ ಗ್ರಾಮಗಳಲ್ಲಿನ ಮಠಗಳ ಜೀರ್ಣೋದ್ಧಾರ ಮಾಡಿಸಿದರು. ಸ್ಥಾವರ ಮಠ ಕಟ್ಟುವುದಕ್ಕಿಂತ ಜಂಗಮ ಮನಸ್ಸುಗಳನ್ನು ಕಟ್ಟುವತ್ತ ಕಾಳಜಿಯುಳ್ಳವರಾಗಿದ್ದರು. ಇವರು ಮಾಡಿದ್ದಾರೆ ಲಿಂಗನಾಯಕನಹಳ್ಳಿಯ ಮಠ ಕರ್ನಾಟಕಸ ಶ್ರೀಮಂತ ಮಠಗಳಲ್ಲಿ ಒಂದಾಗಿ ಮೆರೆಯುತ್ತಿತ್ತು. ಆದರೆ ಪರಮ ವಿರಾಗಿಗಳಾಗಿದ್ದ ಅವರು ಮಠವನ್ನು ಶ್ರೀಮಂತಗೊಳಿಸದೆ, ಭಕ್ತರ ಹೃದಯವನ್ನು, ಅವರ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದರು. ಹೀಗಾಗಿಯೇ ಅವರು ತಮ್ಮ ಸಮಕಾಲೀನ ಸ್ವಾಮಿಗಳಿಗಿಂತ ಭಿನ್ನವಾಗಿದ್ದರು. ಸ್ವಾಮಿಗಳಾಗಬೇಕೆನ್ನುವವರಿಗೆ ಅವರೊಂದು ಮಾಧರಿಯಾಗಿದ್ದರು. ೦೬–೧೧–೧೯೯೬ರಂದು ಲಿಂಗೈಕ್ಯರಾದ ಇವರ ಸಮಾಧಿ 'ಹರವಿ'ಗ್ರಾಮದಲ್ಲಿದೆ.

**ಶ್ರೀ ಮ.ನಿ.ಪ್ರ. ಚನ್ನವೀರ ಮಹಾಸ್ವಾಮಿ:** ಗುತ್ತಲದ ಚರಂತಿಗೆ ಮಠದ ಚಂದ್ರಯ್ಯ ಮತ್ತು ವೀರಮ್ಮ ಎಂಬ ಸಾತ್ವಿಕ ದಂಪತಿಗಳಿಗೆ ೨೪–೧೨–೧೯೬೮ರಂದು ಗಂಡು ಮಗುವಿನ ಜನನವಾಯಿತು ರೇವಣಸಿದ್ದಯ್ಯ ಎಂದು ಮಾನಕರಣ ಮಾಡಿದರು. ಪ್ರಾಥಮಿಕ ಶಿಕ್ಷಣ ಪೂರೈಸಿದ ನಂತರ, ಮುಂಡರಿಗಿಯ ಶ್ರೀ ಅನ್ನದಾನೀಶ್ವರ ಮದಲ್ಲಿ ಪ್ರೌಢಶಾಲೆಯ ವ್ಯಾಸಂಗಕ್ಕೆ ಕಳಿಸಿದರು. ಅಲ್ಲಿ ೯ನೇಯ ತರಗತಿಯಲ್ಲಿ ಓದುತ್ತಿರುವಾಗ, ೮ನೇಯ ಪೀಠಾಧಿಪತಿಗಳಾಗಿದ್ದ ಪೂಜ್ಯ ಚನ್ನವೀರ ಸ್ವಾಮಿಗಳು ರೇವಣಸಿದ್ದಯ್ಯನನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಬೇಕೆಂದು ಇತ್ತಾಯಪೂರ್ವಕವಾಗಿ ಲಿಂಗನಾಯಕನಹಳ್ಳಿ ಕರೆತಂದರು. ಬಾಲಕ ರೇವಣಸಿದ್ದಯ್ಯನರು ಸ್ವಾಮಿಯಾಗುವುದಕ್ಕೆ ಒಲ್ಲೆ, ನಾನು ಓದುಬೇಕು, ಪರೀಕ್ಷೆಗಳು ಸಮೀಪದಲ್ಲಿವೆ. ನನ್ನನ್ನು ಬಿಟ್ಟು ಬಿಡಿ ಎಂದು ಪರಿಪರಿಯಾಗಿ ಬೇಡಿಕೊಂಡರೂ ಆತನ ರೋದನವನ್ನು ಯಾರು ಕೇಳಬೇಕು? ವಿಧಿ ಇಲ್ಲದೆ ಬಾಲಕ ಎಲ್ಲದಕ್ಕೂ ತಲೆಬಾಗಬೇಕಾಯಿತ್ತು. ಆಗ್ರಹದ ಮೇರೆಗೆ ೧೧–೦೨–೧೯೮೩ರ ಶಿವರಾತ್ರಿಯ ಮಂಗಳ ಮುಹೂರ್ತದಲ್ಲಿ ರೇವಣಸಿದ್ದಯ್ಯ ಮರಿದೇವರಿಗೆ ತಾವೇ ವಿಧಿಪೂರ್ವಕವಾಗಿ ನಿರಂಜನ ದೀಕ್ಷೆ ನೀಡಿ ಅನುಗ್ರಹಿಸಿದರು. ಶ್ರೀ ಮ.ನಿ.ಪ್ರ. ಚನ್ನವೀರ ಮರಿಸ್ವಾಮಿಗಳೆಂದು ಕರೆದರು. ವಿದ್ಯೆ ನೈವೇದ್ಯವಾಯಿತು. ಪರಿಸ್ಥಿತಿಯ ಕೂಸಾದ ಮರಿಸ್ವಾಮಿಗಳು ನಿದಾನವಾಗಿ ಹೊಸ ಪರಿಸರಕ್ಕೆ ಒಗ್ಗಿಕೊಂಡರು. ಗುರುಗಳ ಸೇವೆಯಲ್ಲಿದ್ದುಕೊಂಡು ಅವರ ನೆರಳಿನಂತೆ ಹಿಂಬಾಲಿಸಿಕೊಂಡು ಜಂಗಮಾಚರಣೆಗಳನ್ನೆಲ್ಲ ಕರಗತ ಮಾಡಿಕೊಂಡರು. ಅಪಾರವಾದ

ಲೋಕಾನುಭವವನ್ನು ಗಳಿಸಿಕೊಂಡರು. ನಿರಂತರವಾಗಿ ಹೊಸತವನ್ನು ಕಲಿಯುವ ತುಡಿತವುಳ್ಳ ಇವರು 'ಸ್ವಾಧ್ಯಾಯ ಏವತಪಃ' ಎಂಬ ಮಾತಿಗೆ ಅನುಗುಣವಾಗಿ ಸ್ವಾಧ್ಯಾಯದ ಮೂಲಕ ಶಿವಯೋಗದಲ್ಲಿ ಇವರು ಮಾಡಿರುವ ಸಾಧನೆ ಅದ್ವಿತೀಯವಾದದ್ದು.

ಲಿಂಗನಾಯಕನಹಳ್ಳಿ ವಿರಕ್ತಮಠ ಬಳ್ಳಾರಿ ಜಿಲ್ಲಾ ಹೂವಿನಹಡಗಲಿ ತಾಲೂಕಿನಲ್ಲಿರುವ ಲಿಂಗನಾಯಕನಹಳ್ಳಿ ವಿರಕ್ತ ಮಠದ ಚೆನ್ನವೀರ ಸ್ವಾಮಿಗಳು ಪ್ರಸಿದ್ಧರು. ಇವರು ಮೈಲಾರದ ಬಸವಲಿಂಗ ಕವಿಗಳ ಅನುಗ್ರಹ ಗುರುಗಳು. ಚೆನ್ನವೀರಸ್ವಾಮಿಗಳು ಮಠದಲ್ಲಿ ಪಾಠ ಹೇಳಿಕೊಡುತ್ತಿದ್ದರು. ಇವರಲ್ಲಿ ವಿದ್ಯಾಭ್ಯಾಸ ಮಾಡಲು ಹಾಗೂ ಶಿವಾನುಭವ ಗೋಷ್ಠಿಯಲ್ಲಿ ಆಧ್ಯಾತ್ಮಿಕ ಜೀವನ ಬೆಳೆಸಿಕೊಳ್ಳಲು ಮುಳುಗುಂದದ ಬಾಲಲೀಲ ಮಹಾಂತ ಶಿವಯೋಗಿಗಳು, ಮೈಸೂರು ಪ್ರಾಂತ್ಯದ ಶಿವಬಸವ ಸ್ವಾಮಿಗಳು ಹಾಗೂ ಬನ್ನಿಮೆಟ್ಟಿ ಚೆನ್ನಪ್ಪ ಮೊದಲಾದವರು ಆಗಮಿಸಿದ್ದರು. ಬಾಗುಳಿಯ ಅರಸ ಸೋಮಶೇಖರ ನಾಯಕ ಚನ್ನವೀರ ಸ್ವಾಮಿಗಳ ಪರಮಭಕ್ತನಾಗಿದ್ದನು. ಚೆನ್ನವೀರ ಸ್ವಾಮಿಗಳ ಶಿಷ್ಯನಾದ ಮೈಲಾರದ ಬಸವಲಿಂಗ ಶರಣರು 'ಷಟ್ಸ್ಥಲ ನಿರಾಭಾರ ವೀರಶೈವ ಸಿದ್ಧಾಂತ', 'ಗುರುಕರಣ ತ್ರಿವಿಧಿ', 'ಶಿವಾಣುಭವ ದರ್ಪಣ' ಹಾಗೂ 'ಲಿಂಗಾ ಪೂಜಾ ವಿಧಾನ' ಎಂಬ ನಾಲ್ಕು ಕೃತಿಗಳನ್ನು ರಚಿಸಿದ್ದಾನೆ. ಈ ರೀತಿಯಾಗಿ ಮಠದ ಪರಂಪರೆ ಬೆಳೆದು ಬಂದಿರುವುದನ್ನು ಇಂದಿಗೂ ಸಹ ನೋಡಬಹುದಾಗಿದೆ.

**ಗ್ರಂಥ ಸೂಚಿ.**


೧. ಶಿ. ಶಿ. ಬಸವನಾಳ ಎಂ. ಎ, ಮೈಲಾರದ ಶ್ರೀ ಬಸವಲಿಂಗ ಶರಣರ ಕೃತಿಗಳು, ಪ್ರಕಾಶಕರು ಶ್ರೀಮ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು ಮುರುಘಾಮಠ, ಧಾರವಾಡ, ೧೯೫೫.

೨. ಶ್ರೀ ಮ.ನಿ.ಪ್ರ. ನಿರುಪಾಧಿ ಸ್ವಾಮಿಗಳು, 'ಚನ್ನವೀರ ವಿಲಾಸ ಪುರಾಣ', ಜಗದ್ಗುರು ಶ್ರೀ ಅನ್ನದಾನೇಶ್ವರ ಸಂಸ್ಥಾನ ಮಠ, ಮುಂಡರಿಗಿ, ೧೯೯೧.

೩. ಶ್ರೀ ಮ.ನಿ.ಪ್ರ. ಜಗದ್ಗುರು ಡಾ. ಅನ್ನದಾನ ಮಹಾಸ್ವಾಮಿಗಳು, 'ಹಾಲವರ್ತಿಯ ಶಿವಾನುಭವ ಚರವರ್ಯ', ಜಗದ್ಗುರು ಶ್ರೀ ಅನ್ನದಾನೇಶ್ವರ ಸಂಸ್ಥಾನ ಮಠ, ಮುಂಡರಿಗಿ, ೨೦೦೭.

೪. ಡಾ. ಕೆ.ರವೀಂದ್ರನಾಥರವರ 'ಕರ್ನಾಟಕ ಮಠಗಳು ಮತ್ತು ಕನ್ನಡ ಸಾಹಿತ್ಯ', ಸೊಂಡೂರು, ೨೦೦೭.

೫. ಡಾ. ಎಸ್.ಶಿವಾನಂದ, 'ಮೈಲಾರ ಬಸವಲಿಂಗ ಶರಣರ ಸಮಗ್ರ ಕೃತಿಗಳು', ಶ್ರೀ ಮ.ನಿ.ಪ್ರ. ಚನ್ನವೀರ ಮಹಾಸ್ವಾಮಿಗಳ ಜಂಗಮಕ್ಷೇತ್ರ, ಲಿಂಗನಾಯಕನಹಳ್ಳಿ, ೨೦೧೨.

೬. ಸಂದರ್ಶನ, ಡಾ. ಎಸ್.ಶಿವಾನಂದನವರು, ದಿನಾಂಕ: ೦೮:೦೩:೨೦೨೧.




# ಮೈಲಾರಲಿಂಗ ಪರಂಪರೆ : ಜಾನಪದೀಯ ಹಿನ್ನೆಲೆ.

–ಶ್ರೀ ಶ್ರೀಶೈಲ ನರಸಪ್ಪ,
ಸಂಶೋಧನಾ ವಿದ್ಯಾರ್ಥಿ, ಹಸ್ತಪ್ರತಿಶಾಸ್ತ್ರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಜನಪದ ಕಥೆ ಕಾವ್ಯಗಳಲ್ಲಿ ಮೈಲಾರಲಿಂಗ ಪರಂಪರೆಯ ಸಂಸ್ಕೃತಿಯ ಹಿನ್ನೆಲೆಯನ್ನು ನೋಡುವುದೆಂದರೆ, ಅದು ಏಕಕಾಲಕ್ಕೆ ಸಮುದಾಯಗಳ ಲೋಕ ದೃಷ್ಟಿಯನ್ನು ಹಾಗೂ ಭೂತವರ್ತಮಾನಗಳ ನಡುವಿನ ಪಲ್ಲಟಗಳನ್ನು ಅವಲೋಕಿಸುವುದೇ ಆಗಿರುತ್ತದೆ. ಈ ಬಗೆಯ ಕಥೆ ಕಾವ್ಯಗಳಲ್ಲಿ ವೈದಿಕೇತರ ಅಂಶಗಳು ಕಣ್ಣಮುಂದೆ ಹಾದುಹೋಗುತ್ತವೆ. ಆದರೆ ಈ ವಿಚಾರಗಳನ್ನು ನಾವು ಸಂಘರ್ಷದ ಚೌಕಟ್ಟಿನಲ್ಲಿ ಅಧಿಕೃತವಾಗಿ ನೋಡಬಯಸುತ್ತೇವೆ. ಅವು ಸ್ಥಾಪಿತಗೊಂಡಿರುವ ಲೋಕಗ್ರಹಿಕೆಗಳನ್ನು ವಿಸ್ತರಿಸಿಕೊಂಡಾಗ, ಜನಪದ ಕಥನ ಕಾವ್ಯಗಳು ದ್ರಾವಿಡತನಗಳನ್ನು ಅನಾವರಣಗೊಳಿಸಲು ಯತ್ನಿಸುತ್ತವೆ,[೧] ಎಂದು ಅನಿಸಿದರೂ ಅವುಗಳಲ್ಲಿನ ಲೋಕಭಿನ್ನತೆಯನ್ನು ಕಾಣಬೇಕಾಗುತ್ತದೆ. ಆದರೆ ಇವುಗಳು ಶೈವಕೇಂದ್ರಿತವಾದ ತಿಳುವಳಿಕೆಯ ಹಿನ್ನೆಲೆಯಿಂದಲೇ ಹೊರಡುತ್ತದೆ. ಹಾಗಾಗಿ ಕನ್ನಡ ನೆಲದಲ್ಲಿ ಮತ್ತು ಪ್ರಾದೇಶಿಕ ಹಿನ್ನೆಲೆಯಲ್ಲಿ ಕಾಣಿಸುವ ಈ ಕಥೆ ಕಾವ್ಯಗಳು ದ್ರಾವಿಡತನದ ಪ್ರಭಾವವನ್ನು ಒಳಗೊಂಡಿವೆ.

ಮಂಟೇಸ್ವಾಮಿ, ಮಲೆಮಾದೇಶ್ವರ ಮತ್ತು ಜುಂಜಪ್ಪನ ಹಾಗೆ ಮಲ್ಲಯ್ಯನ ಸಾಂಸ್ಕೃತಿಯ ಹಿನ್ನೆಲೆಯನ್ನು ನಿರ್ದಿಷ್ಟ ಸಮುದಾಯಗಳು ತಮ್ಮದೆ ಸಂಸ್ಕೃತಿ ಎಂದುಕೊಂಡರು ಸಹ ಬೇರೆ ಸಮುದಾಯಗಳು ತಮ್ಮ ಅಭಿವ್ಯಕ್ತಿಯ ವಿನ್ಯಾಸಗಳನ್ನು ತೋರಿಸಿದ್ದಾರೆ. ಮೈಲಾರಲಿಂಗನ ಕಥೆ ಕಾವ್ಯಗಳಲ್ಲಿ ಮೈಲಾರಲಿಂಗ ಪರಂಪರೆಯ ತತ್ವಗಳು ಪ್ರಧಾನವಾದರೂ, ಪ್ರಾದೇಶಿಕ ಬದುಕಿನ ತತ್ವಗಳು ಭಿನ್ನತೆಗಳನ್ನು ಉಳಿಸಿಕೊಂಡಿವೆ.

ತಮ್ಮ ಬದುಕಿಗೂ ಲೋಕದ ಚಲನಶೀಲತೆಗಳಿಗೂ ಒಗ್ಗುವ ರೀತಿಯಲ್ಲಿ ಕಥೆ ಕಾವ್ಯಗಳು ಹುಟ್ಟಿಕೊಂಡಿವೆ. ಜನಪದ ದೇಶಿಯ ಜ್ಞಾನಶಾಖೆಯಲ್ಲಿ ಹರಡಿಕೊಂಡಿರುವ ಭಾಷಿಕ ವಿಚಾರಗಳು ಶೈವದ ಅನೇಕ ಒಳಪಂಥಗಳಾದ ನಾಥಪರಂಪರೆ ಸಿದ್ದ ಕಪಾಲಿಕದ ಒಳಸುಳಿಗಳು, ಸೂಫಿ ಮುಂತಾದವುಗಳು ಸಾಂಸ್ಕೃತಿಕ ಮುಖಾಮುಖಿ ಹಾಗೂ ಇವುಗಳಾಚೆ ಸುಮುದಾಯದಗಳೊಂದಿಗೆ ಈ ಪಂಥಗಳ ಪ್ರಭಾವವೂ ಇದೆ. ಇಷ್ಟೆಲ್ಲಾ ಹೇಳಿದರೂ ಇವುಗಳು ಕಟ್ಟಿಕೊಂಡಿರುವ ಕಥನಗಳಲ್ಲಿ ಧಾರ್ಮಿಕ ಸ್ಥಾಪಿತ ವಿಚಾರಗಳ ಕುಲಮೂಲವಿಚಾರಗಳ ಚಲನತ್ವವೇ ಮುಖ್ಯವಾಗುತ್ತದೆ.

ಅವೈಧಿಕ ವಿಚಾರಗಳ ಪ್ರಧಾನ ಅಂಶಗಳಲ್ಲಿ ಮಾತೃಮೂಲ ವಿಚಾರಗಳು ಮಖ್ಯವಾಗಿವೆ.[೨] ಆದರೂ ಇವುಗಳ ಕೇಂದ್ರ ಪುರುಷನೇ ಆಗಿದ್ದಾನೆ. ಸಹಜವಾಗಿ ಸಾಮಾನ್ಯ ವ್ಯಕ್ತಿಗಳೇ ಅಸಮಾನ್ಯ ಕಾರ್ಯವೆಸಗಿ ಸಾಂಸ್ಕೃತಿಕ ನಾಯಕರನ್ನಾಗಿಸಿ ಜನಮನ್ನಣೆ ಪಡೆದು ಜನಾದರಣೆಗೆ ಪಾತ್ರವಾಗುತ್ತಾರೆ. ಮರಣನಂತರದಲ್ಲಿ ಜನತೆ ಅಂಥ ವ್ಯಕ್ತಿಯನ್ನು ದೈವತ್ವಕ್ಕೇರಿಸಿ ಆರಾಧನೆ ಮಾಡುತ್ತಾರೆ. ಕರ್ನಾಟಕದ ಮಧ್ಯಕಾಲಿನ ಸಮಾಜದ ಸಾಂಸ್ಕೃತಿಕ ನಾಯಕರ ಸಾಲಿನಲ್ಲಿ ಜನಪ್ರೀಯ ಆರಾಧ್ಯ ದೈವವಾದ ಮೈಲಾರಲಿಂಗನನ್ನು ಆತನ ಹಿನ್ನೆಲೆಯನ್ನು ಗುರುತಿಸಿಕೊಳ್ಳುವುದು ಅಷ್ಟೇನೂ ಸುಲಭದ ಮಾತಲ್ಲ. ಮಂಟೇಸ್ವಾಮಿ, ಮಲೆಮಾದೇಶ್ವರ, ಜುಂಜಪ್ಪ ಮೊದಲಾದವರು ಒಂದು ಪ್ರಾದೇಶಿಕ ಹಿನ್ನೆಲೆಯೊಳಗೆ ಒಂದು ಕುಲಸಂಸ್ಕೃತಿಯವರನ್ನು ತಮ್ಮ ಆರಾಧಕರಾಗಿ ರೂಪಿಸಿಕೊಂಡಿದೆ. ಮೈಲಾರ ಹೆಸರಿಗೆ ತಕ್ಕಂತೆ ಎಲ್ಲರ ಆರಾಧ್ಯದೇವನಾಗಿ ಗಡಿ–ರೇಖೆಗಳನ್ನು ಮೀರಿ ಅನೇಕ ಕುಲಸಮದಾಯಗಳ ಜನರನ್ನೇ ತನ್ನೆಡೆಗೆ ಸೆಳೆಯುವಲ್ಲಿ ಯಶಸ್ವಿಯಾಗಿದ್ದಾನೆ. ಮಲ್ಲಯ್ಯ ನಮಗೆ ಮಳೆ ಬೆಳೆಯನ್ನು ಕೊಟ್ಟು ನಮ್ಮನೆಲ್ಲ ಕಾಪಾಡುವ,

ಕಷ್ಟಗುಖಗಳನ್ನು ಪರಿಹರಿಸುವ ದೈವವೆಂದು ಭಕ್ತರು ನಂಬಿದ್ದಾರೆ. ಜನಪದ ಮನಸ್ಸುಗಳು ರೂಪಿಸಿಕೊಂಡ ಹಾಗೆ ಮಲ್ಲಯ್ಯನ ಸಾಂಸ್ಕೃತಿಕ ಹಿನ್ನೆಲೆಯ ವಿಚಾರಗಳು ಇಲ್ಲಿ ಚರ್ಚೆಗೆ ಒಳಪಟ್ಟಿವೆ.

ಪ್ರಕೃತಿ ಸಹಜವಾದ ಬದುಕನ್ನು ಬಯಸುವ ಜನರುಗಳಲ್ಲಿ ನಿಸರ್ಗದ ಬಗೆಗಿನ ಭಯ ಕೃತಜ್ಞತೆ ವಿಸ್ಮಯಗಳು ದೇವರುಗಳ ಸೃಷ್ಟಿಗೆ ಕಾರಣವಾದವು. ಕಾಡು-ಮೇಡುಗಳಲ್ಲಿ, ಕಲ್ಲುಗವಿಗಳಲ್ಲಿ ಮರದ ಪೊಟರೆಗಳಲ್ಲಿ ಏಕಾಂಗಿಯಾಗಿ ವಾಸಿಸುತ್ತಿದ್ದ ಆದಿ ಮಾನವನಿಗೆ ಬೀಸುವ ಗಾಳಿಯ ಸದ್ದು, ಕೂಗುವ ಕೋಗಿಲೆಯ ಇನಿದನಿ ಹರಿಯುವ ನೀರಿನ ಜುಳುಜುಳುನಾದ ಕುತುಹಲವನ್ನು ವಿಸ್ಮಯವನ್ನು ಉಂಟುಮಾಡುತ್ತಿದ್ದವು. ಹಸಿವಾದಾಗ ಹಣ್ಣುಗಳನ್ನೀಯುವ ಮರ-ಬಳ್ಳಿಗಳು, ನೆರಳನ್ನೀಯುವ ಗಿಡಮರಗಳು, ಬಾಯಾರಿದಾಗ ಸಹಿಯಾದ ತಿಳಿಗೊಳಗಳು ಅವನಲ್ಲಿ ಕೃತಜ್ಞತೆಯ ಭಾವನೆಗಳನ್ನು ಹುಟ್ಟಿಸುತ್ತಿದ್ದವು. ಕೃತಜ್ಞತೆ ವಿಸ್ಮಯಗಳಿಗೆ ಎಡೆಮಾಡಿ ಕೊಟ್ಟಂತ ನಿಸರ್ಗವೆ ಅವನಲ್ಲಿ ಅಪಾರವಾದ ಭೀತಿ ಭಯಗಳನ್ನು ಸಹ ಮೂಡಿಸಿದ್ದಿತು. ಗುಡುಗು ಸಿಡಿಲುಗಳು ಚಂಡಮಾರುತಗಳು ಕ್ರೂರ ವಿಷ ಜಂತುಗಳು ಇವೆಲ್ಲಕ್ಕೂ ಮೀರಿ ನಾವು ಅವನಲ್ಲಿ ಆತಂಕದ ಕ್ಷಣಗಳನ್ನು ವಿಚಿತ್ರತಲ್ಲಣಗಳನ್ನು ಎಬ್ಬಿಸಿದ್ದಿತು. ಇಂಥ ಆತಂಕ ತಲ್ಲಣಗಳಿಂದ ತಪ್ಪಿಸಿಕೊಳ್ಳಬೇಕಾದ ತುರ್ತು ಅಗತ್ಯ ಅವನಿಗಿದ್ದ ಕಾರಣದಿಂದಲೆ ತನ್ನನ್ನು ಮೀರಿದ ಅಗೋಚರ ಅನಿಯಂತ್ರಿತ ಶಕ್ತಿಯೊಂದಿದೆ, ಎಂಬುದರ ಅರಿವು ಅವನಲ್ಲಿ ಹುಟ್ಟಿ ಅಂಥ ಅಗೋಚರ ಶಕ್ತಿಯನ್ನು ಒಲಿಸಿಕೊಳ್ಳಲು ಇಷ್ಟ ಬಂದ ಆಕಾರದಲ್ಲಿ ಪೂಜಿಸಲಾರಂಭಿಸಿದ. ಅದಕ್ಕಾಗಿ ಪ್ರಾರ್ಥನೆ ಆರಾಧನೆಗಳನ್ನು ಮಾಧ್ಯಮವನ್ನಾಗಿಸಿಕೊಂಡನು. ಅಜ್ಞಾನದ ಅಂಧಕಾರ ಯುಗದಲ್ಲಿ ಬದುಕುತಿದ್ದ ಆದಿಮಾನವ ತನ್ನೆಲ್ಲಾ ಸಮಸ್ಯೆಗಳಿಗೆ ಸ್ವಯಂ ಕಂಡುಕೊಂಡ ಅನೇಕಾನೇಕ ಪರಿಹಾರಗಳಲ್ಲಿ ದೇವರುಗಳ ಸೃಷ್ಟಿಯ ಸಹ ಒಂದು.

ಇವತ್ತಿನ ಶಿಷ್ಟ ದೇವತೆಗಳು ಪುರಾಣಗಳಲ್ಲಿ ಶಾಸ್ತ್ರಗ್ರಂಥಗಳಲ್ಲಿ ಕಾವ್ಯಪರಂಪರೆಯಲ್ಲಿ ಅತ್ಯಅಮೋಘವಾದ ವರ್ಣನೆಗಳಿಗೆ ಹೊಗಳಿಕೆಗಳಿಗೆ ಪಾತ್ರವಾಗಿವೆ. ಆದರೆ ಜನಪದ ದೇವತೆಗಳ ಚರಿತ್ರೆ ಅಲಿಖಿತವಾದದ್ದು, ವಾಚಿಕ ಪರಂಪರೆಯಲ್ಲಿ ಉಳಿದು ಬಂದಿರುವ ಗೀತೆ ಕಥೆಗಳಷ್ಟೇ ಆಧಾರ, ಶಿಷ್ಟ ದೇವತೆಯ ಉಗಮ ಆರಾಧನೆ ಆಚರಣೆಗಳನ್ನು ತಿಳಿಸುವಷ್ಟು ಖಚಿತವಾಗಿ ಜನಪದ ದೇವತೆಯೆಂದರೆ ತೀರ್ಮಾನಕ್ಕೆ ಬರಲು ಸಾಧ್ಯವಿಲ್ಲ, ಜನಪದ ದೇವರುಗಳನ್ನು ಕುರಿತಾದ ಯಾವ ಚಾರಿತ್ರಿಕ ದಾಖಲೆಗಳು ಸಹ ನಮಗೆ ಇವತ್ತಿನವರೆಗೂ ಲಿಖಿತ ರೂಪದಲ್ಲಿ ಲಭ್ಯವಿಲ್ಲ, ತಲೆ ತಲೆಮಾರುಗಳಿಂದಲೂ ಬಾಯಿಂದ ಬಾಯಿಗೆ ಹರಿದು ಹಂಚಿಕೊಂಡು ಬಂದಿರುವ ಜಾನಪದವೇ ಆಧಾರ.

ಆಯಾ ದೇವತೆಗಳ ಆರಾಧನೆಗಳು, ಹಬ್ಬ-ಹರಿದಿನಗಳ ಸಂದರ್ಭದಲ್ಲಿ ಹಾಡುವ ದೇವರ ಸೇವೆ ಪದಗಳು, ಪುರಾಣ ಕಥೆಗಳು, ಐತಿಹ್ಯಗಳು, ಕಥನಗೀತೆಗಳು, ಮುಂತಾದವುಗಳಿಂದ ಆ ದೇವತೆಗೆ ಸಂಬಂಧಿಸಿದ ಚರಿತ್ರೆಯನ್ನು ಹೊರತೆಗೆದು ಜೋಡಿಸಬೇಕು, ಇತಿಹಾಸಕ್ಕಿಂತ ಹೆಚ್ಚು ವಸ್ತುನಿಷ್ಠವಾದದ್ದು ಪರಂಪರಾನುಗತವಾಗಿ ಬಂದಿರುವ ಜನಪದವೇ. ಆದುದರಿಂದ ಸಚಲಾಚರ ಜಗತ್ತಿನ ಸೂಕ್ಷ್ಮಾತಿಸೂಕ್ಷ್ಮ ವಸ್ತುವಿಷಯಗಳು ಸಹ ಇಲ್ಲಿ ದೇವರುಗಳಾಗಿ ರೂಪಗೊಳ್ಳಲು ಸಾಧ್ಯವಾಗಿದೆ. ಈ ದಿಕ್ಕಿನಲ್ಲಿ ವೀರರು ಪತಿವ್ರತೆಯರು, ಸಾಧು-ಸಂತರು, ಪಿತೃಗಳು, ಪ್ರಾಣಿಗಳು, ಭೂತ-ಪ್ರೇತಗಳು, ಗೃಹ ನಕ್ಷತ್ರಗಳು, ಮರಗಿಡಗಳು ಎಲ್ಲವೂ ದೇವತೆಗಳಾಗಿ ಪರಿಣಮಿಸಿದವು. ಅಲ್ಲದೆ ಒಂದು ಬಣಕ್ಕೂ ಮತ್ತೊಂದು ಬಣಕ್ಕೂ ನಡೆಯುತ್ತಿದ್ದಿರಬಹುದು ಆದ ಕಲಹಗಳಲ್ಲಿ ತನ್ನ ಜನಾಂಗದ ತನ್ನ ರಾಷ್ಟದ ತನ್ನ ಸಂಸ್ಕೃತಿಯ ಉಳಿವು ಉದ್ದಾರಗಳಿಗಾಗಿ ಶ್ರಮಿಸಿ, ವಿನಾಶಕಾರಿ ಶಕ್ತಿಗಳನ್ನು ದಮನ ಮಾಡಿ, ಸಮಷ್ಠಿ ಕಲ್ಯಾಣಕ್ಕಾಗಿ ಹೋರಾಡಿದ ವೀರರನ್ನು ಸಹ ದೇವತೆಗಳೆಂದು ಜನ ಪೂಜಿಸಲು ಆರಂಭಿಸಿದರು. ಈ ವೀರರ ಬದುಕು ಜನರ ಬಾಯಲ್ಲಿ ಪರಾಕ್ರಮದ ಕಥೆಯಾಯಿತು ಪುರಾಣಗಳು ಐತಿಹ್ಯಗಳು ಸ್ಥಳ ಕಥೆಗಳು ಹಿಡಿಕ್ಕಿರಿದು ವಸ್ತು ಸತ್ಯವನ್ನು ಉತ್ಪ್ರೇಕ್ಷಿಸಿ, ಅವತಾರ ಪುರುಷನೆಂದು ದೈವಾಂಸ ಸಂಭೂತನೆಂದು ಹಾಡಿ ಹೊಗಳಿದವು, ಐತಿಹಾಸಿಕವಾಗಿ ಜನಸಾಮಾನ್ಯರಲ್ಲಿ ಒಬ್ಬನಾಗಿದ್ದು ಮಿಗಿಲಾದ ಸಹವಾಸವನ್ನು ಮೆರೆದ ಸಾಹಸಿ ಸಾಮಾನ್ಯದಿಂದ ದೈವತ್ವಕ್ಕೇರಿದನು. ಜನಮನಸ್ಸಿನಲ್ಲಿ ದೇವತೆಯಾಗಿ ಪೂಜನೀಯವಾದನು.

ಇದೇ ರೀತಿಯಲ್ಲಿ ಜಗತ್ತಿನ ಆದಿಕುಲವಾದ, ಕುರುಬ ಜನಾಂಗದ ಆರಾಧ್ಯದೈವವಾದ ಮೈಲಾರಲಿಂಗನೂ ಸಹ, ಸತಮುನ್ನೂರು ಕಾಲ ಬೆಟ್ಟಗುಡ್ಡಗಳಲ್ಲಿ, ಕಾಡುಮೇಡುಗಳಲ್ಲಿ, ದನಕರು ಕುರಿ ಮಂದೆಗಳೊಂದಿಗೆ ಹುಲ್ಲು ನೀರನ್ನು ಅರಸುತ್ತಾ ತಿರುಗುವ, ತನ್ನ ಕುಲದ ಜನರನ್ನು ಕ್ರೂರ ಜಂತುಗಳಿಂದ ನರಭಕ್ಷಕರಿಂದ ಕಾಪಾಡಬೇಕಾದ ಅಗಾಧ ಜವಾಬ್ದಾರಿಯನ್ನು ಹೊತ್ತಿದ್ದನು. ಈ ಜವಾಬ್ದಾರಿಯ ನಿರ್ವಹಣೆಯ ಅವಧಿಯಲ್ಲಿ ಅವನು ಎಷ್ಟೋ ಅಡ್ಡಿ–ಆತಂಕಗಳನ್ನು ಎದುರಿಸಬೇಕಾಗಿದ್ದಿತು. ಇಂಥಲ್ಲೆಲ್ಲ ಅವನು ಮೆರೆದ ಸಾಹಸಗಳೆ ಮುಂದೆ ಜನ ಮನಸ್ಸಿನಲ್ಲಿ ಅಭೂತಪೂರ್ವ ಪವಾಡಗಳಾಗಿ ನೆಲಸಿ, ವೀರತ್ವವನ್ನು ದೈವತ್ವಕ್ಕೇರಿಸಿದವು ಎಂದು ಡಾ. ಚಕ್ಕೆರೆ ಶಿವಶಂಕರ್ ಜನಪದ ಸಾಹಿತ್ಯ ಮೈಲಾರಲಿಂಗನನ್ನು ಕುರಿತು ಹೇಳಿದ್ದಾರೆ.[1]

**೧.ಬೀದರ ಭಾಗದಲ್ಲಿ ಪ್ರಚಲಿತ ಜನಪದ ಕಥೆ[2] :** ಮಲಯ ಪರ್ವತದ ತಪ್ಪಲು ಭೂಮಿಯಲ್ಲಿ ಜನನಿಬಿಡವಾಗಿ ವಾಸವಾಗಿತ್ತು. ಗುಡ್ಡಗಾಡಿನ ಆದಿವಾಸಿಗಳು ಕುರಿ–ಮೇಕೆ ಸಾಕಿ–ಸಲಹಿಕೊಂಡು, ಫಲವತ್ತಾದ ಭೂಭಾಗವನ್ನು ಉತ್ತಿ–ಬಿತ್ತಿ ಕೃಷಿ ಕರ್ಮದಲ್ಲಿ ನಿರತರಾಗಿ ಹಾಯಾಗಿ ಜೀವನ ಮಾಡಿಕೊಂಡಿದ್ದರು. ಮಲಯ ಪರ್ವತದ ಇನ್ನೊಂದು ಭಾಗದಲ್ಲಿ ಮಣಿಮಲ್ಲರೆಂಬ ಬಲಿಷ್ಠರು ವಾಸವಾಗಿದ್ದರು. ಮಲ್ಲನು ತನ್ನ ತೋಳ್ಬಲದಿಂದ, ಸಾಮರ್ಥ್ಯದಿಂದ ದುರುಪಯೋಗ ಮಾಡಿಕೊಂಡು ದುಡಿದುಣ್ಣುವ ದುರ್ಬಲರ ಮೇಲೆ ಪ್ರಭಾವಬೀರಿ ದುಡಿಯದೇ ಸುಖಭೋಗ ಜೀವನ ಮಾಡಲು ತೊಡಗಿದನು. ದಿನದಿಂದ ದಿನಕ್ಕೆ ಈತನ ಉಪಟಳ ಹೆಚ್ಚಿತು. ಮೊದಲೇ ಬಲಿಷ್ಠ ಸ್ವೇಚ್ಛಾಚಾರಿಯಾಗಿ ತಿಂದುಂಡು ಮೆರೆಯಲಾರಂಭಿಸಿದ ಮಲ್ಲನಲ್ಲಿ ಅಸುರ ಶಕ್ತಿ ಮನೆಮಾಡಿತ್ತು. ಈತನ ದೈವಶಕ್ತಿಯ ಎದುರು ಮನುಷ್ಯ ಶಕ್ತಿ ಏನು ಮಾಡಲಾರದಾಯಿತು. ಈ ಜನರೆಲ್ಲ ಕಳವಳಕ್ಕೀಡಾದರು. ಈತನಿಗೆ ಮಲ್ಲಾಸುರನೆಂದು ಕರೆಯತೊಡಗಿದರು.

ಮಲ್ಲಾಸುರನ ಉಪಟಳಕ್ಕೆ ಬೇಸತ್ತ ಮಲಯ ಪರ್ವತದ ನಿವಾಸಿಗಳು ವಲಸೆ ಹೊರಡಲನುವಾದರು. ಆಗ ಶಿವಭಕ್ತನಾದ ಚಿಕ್ಕಯ್ಯ ಅವರನ್ನು ತಡೆದುಧೈರ್ಯ ಹೇಳಿದನು. ಮಕ್ಕಳಿಲ್ಲದ ಚಿಕ್ಕಯ್ಯನಿಗೆ ಮಹಾದೇವನು ಆದಿಶಕ್ತಿಯ ಪ್ರತಿರೂಪದಂತಿರುವ ಗಂಗಿಮಾಳಮ್ಮ ಎಂಬ ಹೆಣ್ಣು ಸಂತಾನವನ್ನು, ಮತ್ತು ಹೆಗ್ಗಯ್ಯ ಎಂಬ ಗಂಡು ಸಂತಾನವನ್ನು ಕರುಣಿಸಿದನು. ಗಂಗಿಮಾಳಮ್ಮ ರೂಪವತಿಯಾಗಿ ಬೆಳೆದಳು. ಹೆಗ್ಗಯ್ಯ ಅಪಾರ ಶಕ್ತಿ ಸಂಪನ್ನನಾಗಿದ್ದನು. ಆದರೆ ಅಕ್ಕನ ಅನುಮತಿ ಇಲ್ಲದೆ ಹೆಗ್ಗಯ್ಯ ಯಾರ ಮೇಲೂ ಕೈ ಮಾಡುತ್ತಿರಲಿಲ್ಲ. ಅಕ್ಕ–ತಮ್ಮ ಇಬ್ಬರೂ ತಮ್ಮ ಬಳಿ ಇರುವ ಅಪಾರ ಕುರಿ–ಮೇಕೆ ದನಕರುಗಳನ್ನು ಮೇಯಿಸಿಕೊಂಡು ಬರಲು ಕುದುರೆ ಸವಾರರಾಗಿ ಹೋಗುತ್ತಿದ್ದನು.

ಮಲ್ಲಾಸುರ ಮಾಳಮ್ಮನ ರೂಪಕ್ಕೆ ಮೋಹಿತನಾದನು. ಇದನ್ನು ಕೇಳಿದ ಚಿಕ್ಕಯ್ಯನ ಮನಸ್ಸು ವ್ಯಗ್ರವಾಯಿತು. ಮಾಳಮ್ಮನನ್ನು ಕುರಿ ಹಿಂಡಿ ನೋಡನೆ ಕಳುಹಿಸಬಾರದೆಂದು ನಿರ್ಧರಿಸಿದನು. ಆದರೆ ಮನೆಯಲ್ಲಿರಲು ಒಪ್ಪದ ಮಾಳಮ್ಮ ಪುರುಷವೇಷ ಧರಿಸಿಕೊಂಡು ಹೋಗುವುದಾಗಿ ತಿಳಿಸಿದಳು. ಮಗಳ ಮಾತಿಗೆ ಬಾಗಿದ ಚಿಕ್ಕಯ್ಯ ಹೆಗ್ಗಯ್ಯನಿಗೆ ರಕ್ಷಣಾಭಾರ ವಹಿಸಿದನು. ಉಣ್ಣೆಯ ಕವಚ, ಮೈತುಂಬ ಕಂಬಳಿಯ ಅಂಗಿ, ಕಾಲಿಗೆ ಎಕ್ಕಡ, ಕೈಗೊಂದು ಉದ್ದವಾದ ದಂಡ ಹೀಗೆ ಹೆಗ್ಗಯ್ಯ ಮತ್ತು ಮಾಳಮ್ಮ ವೇಷಮರೆಸಿಕೊಂಡು ಮಲಯ ಪರ್ವತದಲ್ಲಿ ವಿಹರಿಸುತ್ತಿದ್ದರು.

ಮಲ್ಲಾಸುರ ಕುರಿಕಾಯಲಿಕ್ಕೆ ಬರುವ ಎಲ್ಲರನ್ನೂ ಪರೀಕ್ಷಿಸುತ್ತಲೇ ಇದ್ದನು. ಆದರೆ ಅವನ ಕಣ್ಣಿಗೆ ಮಿಂಚಿನ ತೆನೆಯ ಹರೆಯದ ಮಾಳಮ್ಮ ಕಾಣದಾಗಿದ್ದಳು. ಸ್ತ್ರೀ ಉಡುಪುಗಳನ್ನೇ ಕಾಣದ ಅಸುರ ಸಿಡಿಮಿಡಿಗೊಂಡನು, ಎಲ್ಲಿ ಮಾಯವಾದಳಾಕೆ ಎಂದು ಅಬ್ಬರಿಸುತ್ತಿದ್ದನು. ಮಾಳಮ್ಮನನ್ನು ಕಾಣದೆ ಕಡುಕೋಪದಿಂದ ಮಲಯ ಪರ್ವತ ನಿವಾಸಿಗಳಿಗೆ ಅಸಹನೀಯತೊಂದರೆ ಕೊಡಲುಪಕ್ರಮಿಸಿದನು.[3] ದಿನವೊಂದಕ್ಕೆ ಒಂದೊಂದು ಕುರಿಮರಿಯನ್ನು ಸಂಹರಿಸಲು ಆರಂಭಿಸಿದನು. ಬಿಟ್ಟಿ ಊಟಕ್ಕಾಗಿ ಕಾದುನಿಂತ ಜನರಿಗೆಲ್ಲ ಕೊಳ್ಳೆಹೊಡೆದ ಮಾಂಸವನ್ನುಣಬಡಿಸಿ ತನ್ನ ಬಲವರ್ಧಿಸತೊಡಗಿದನು.

ಮಾಳಮ್ಮನನ್ನು ಪತ್ತೆಹಚ್ಚಲು ಗುಪ್ತಚರರನ್ನು ಅರಣ್ಯದ ನಾನಾ ಭಾಗಗಳಲ್ಲಿ ಬಿಟ್ಟನು. ಅವರು ಹೆಗ್ಗಯ್ಯನಂತೆ ವೇಷ ಧರಿಸುತ್ತಿದ್ದರು. ಇದರಿಂದ ಅಣ್ಣನನ್ನು ಗುರುತಿಸಲಾಗದ ಮಾಳಮ್ಮ ಅವನಿಗೆ ಚಾಂಗ್ ಬೋಲೋ ಎಂಬ ಸ್ವರ ಸಂಜ್ಞೆ ಮಾಡಲು ತಿಳಿಸಿದಳು. ಇದರಿಂದ ಅಕ್ಕ–ತಮ್ಮ ಸುರಕ್ಷಿತವಾಗಿ ಮನೆ ಸೇರುತ್ತಿದ್ದರು.

ಮಾಳಮ್ಮನನ್ನು ಕಾಣಲು ಮಲ್ಲಾಸುರ ನಾನಾರೀತಿಯ ಚೇಷ್ಟೆ ಚೆಲ್ಲಾಟ ಆರಂಭಿಸುತ್ತಾನೆ. ಪರ್ವತವಾಸಿ ಮುಗ್ಧ ಬಾಲೆಯರ ಮಾನ ಹರಣ ಗೈದು ಅವರ ರಕ್ತಹೀರುತ್ತಾನೆ. ಇದನ್ನು ಕಂಡ ಮಾಳಮ್ಮ ಸಹಿಸದಾದಳು. ಒಮ್ಮೆ ತಮ್ಮನೊಡನೆ ಕುದುರೆ ಏರಿ ಬರುವಾಗ ಮಲ್ಲಾಸುರ ಅವರನ್ನು ತಡೆದನು. ಹೆಗ್ಗಯ್ಯ ಆವೇಶದಿಂದ ಎಲೆ ರಕ್ಕಸನೇ ಹೆಜ್ಜೆ ಮುಂದಿಟ್ಟರೆ ನಿನ್ನನ್ನು ತುಂಡರಿಸಿ ಬಿಡುತ್ತೇನೆ ಎಂದು ಗದರಿಸಿದನು. ಅಸುರನು ಲಕ್ಷಿಸದೆ ಮುಂದುವರಿದಾಗ ಮಾಳವ್ವ ಚಾಟಿಯಿಂದ ಅಸುರನ ಬೆನ್ನಿಗೆ ಬಾರಿಸಿದಳು.

ಚಾಟಿಯ ತುದಿ ಹಿಡಿದು ಜಿಗಿದು ಬಂದ ಅಸುರ, ಮಾಳವ್ವನ ಮುಖಕ್ಕೆ ಮುಖ ತಾಗಿಸಿ ನೋಡಿ ಗುರುತಿಸಿದನು. ದಿಗಂತ ನಡುಗುವಂತೆ ನಕ್ಕನು ಮಾಳಮ್ಮನನ್ನು ಹಿಡಿಯಲು ಯತ್ನಿಸಿದಾಗ ಬಂಡೆಗಲ್ಲಿನ ಹಿಂದಿನಿಂದ ಬಿಳಿ ಕುದುರೆಯನ್ನೇರಿ ಕೈಯಲ್ಲಿ ಖಡ್ಗ (ತ್ರಿಶೂಲ) ಆಯುಧವನ್ನು ಹಿಡಿದು ಮೊನಚನ್ನು ಮುಂದೆ ಮಾಡಿ ಉಣ್ಣೆಯ ಕವಚ ತೊಟ್ಟು ಬೇಟೆಯ ನಾಯಿಗಳ ಹಿಂಡಿನೊಡಗೂಡಿ ಬಂದ ಪುರುಷ, ಮಾಳಮ್ಮನ ರಕ್ಷಣೆಗೆ ಧಾವಿಸಿದನು. ಹೆಗ್ಗಯ್ಯನಿಂದ ವಿಷಯ ತಿಳಿದ ಚಿಕ್ಕಯ್ಯ ದೀವಟಿಗೆಯೊಂದಿಗೆ ಮಲಯ ಪರ್ವತ ನಿವಾಸಿ ಗಳನ್ನೆಲ್ಲ ಕರೆತಂದನು. ಮಲ್ಲಾಸುರ ಕುದುರೆಯ ಲಗಾಮು ಹಿಡಿದು ತೇಜೋರಾಶಿಯ ಮೇಲೆ ಚಾವಟಿಯನ್ನು ಬೀಸಲೆತ್ನಿಸುವಾಗ, ಚಿಕ್ಕಯ್ಯನ ದಂಡದೇಟು ರಾಕ್ಷಸನ ಎದೆಯೇ ಮೇಲೆ ಬಿತ್ತು.  ಹಾ, ಎಂದು ಕೆಳಗುರುಳಿದ ಮಲ್ಲಾಸುರನ ಎದೆಯಮೇಲೆ ಅಶ್ವ ತನ್ನ ಕಾಲೂರಿತು. ನಾಯಿಗಳೆರಡೂ ಓಡಿಬಂದು ತೊಡೆ ಮತ್ತು ಮೀನಗಂಡ ಹಲ್ಲಿನಿಂದ ಕಚ್ಚಿ ಎಳೆದವು. ಪೂರಿಸಿ ನೋಡುವ ಮಲ್ಲಾಸುರನ ಎದೆಯಲ್ಲಿ ಮೇಘ ಪ್ರದಾಯಿನಿ ಅಸ್ತ್ರ ಖಂಡ ಮೊನಚಾದ ತ್ರಿಶೂಲ ಹೊಕ್ಕು ಗುಂಡಿಗೆಯ ರಕ್ತವನ್ನು ಹೊರಚಿಮ್ಮಿತು.

ಮಲ್ಲಾಸುರನ ಪ್ರಾಣಪಕ್ಷಿ ಹಾರಿಹೋಗುವ ಮುನ್ನ ತನ್ನ ತಪ್ಪಿಗೆ ಭಗವಂತನಲ್ಲಿ ಕ್ಷಮೆ ಕೇಳಿತು. ಮಲ್ಲಾಸುರನ ಸಂಹಾರವಾಯಿತು.[೬] ಮಲ್ಲಾರಿ ಗಂಗಿಮಾಳಮ್ಮನ ವಿವಾಹವಾಗಿ ಮಲಯ ಪರ್ವತದಲ್ಲಿ ನೆಲೆಸಿದರು. ಮಹಾದೇವನು ಮಲ್ಲಾಸುರನ ಸಂಹಾರಕ್ಕೆ ಮುಂದಾಗಲು ಚಿಕ್ಕಯ್ಯನೇ ಕಾರಣವಾಗಿದ್ದರಿಂದ ಮೊದಲು ಚಿಕ್ಕಯ್ಯನಿಗೆ ಪೂಜೆ ಸಲ್ಲಿಸುವ ಸಂಪ್ರದಾಯ ರೂಢಿಗೆ ಬಂದಿದೆ. ಅನಂತರ ಮಲ್ಲಾರಿಯ ಪೂಜೆ. ಆಮೇಲೆ ಗಂಗಿಮಾಳಮ್ಮನ ಮತ್ತು ಕೊನೆಯಲ್ಲಿ ಹೆಗ್ಗಯ್ಯನ ಪೂಜೆ ನಡೆಯಿತು. ಮಲಯ ಪರ್ವತಕ್ಕೆ ಮಂಗಳವನ್ನುಂಟು ಮಾಡಿದ ಮಲ್ಲಾರಿಯ ಪೂಜೆ ರಾತ್ರಿಯಲ್ಲಿ ನಡೆಯುತ್ತದೆ. ದೀವಟಿಗೆ ದೀಪಾರಾಧನೆ ಭಂಡಾರದ ಅರ್ಚನೆ ಹಾಲು ಹಣ್ಣು ತುಪ್ಪ ಕೆನೆಮೊಸರಿನ ನೈವೇದ್ಯ ಸಲ್ಲುತ್ತದೆ.

**೨.ಯಾದಗಿರ ಭಾಗದಲ್ಲಿ ಪ್ರಚಲಿತ ಜನಪದ ಕಥೆ[೭] :** ಗಂಗಿಮಾಳಮ್ಮ ಮಲ್ಲಯ್ಯ ಹೆಗ್ಗಣ ಪ್ರಧಾನಿ ಮೂರು ಜನ ಹಳಗೇರಿಯ ಸಮೀಪ ಬೆಟ್ಟದಲಿ ಬಂದು ಜನರ ಕಣ್ಣುತಪ್ಪಿಸಿ ವಾಸಿಸಿಸುತ್ತಿರುತಾರೆ. ಮಲ್ಲಯ್ಯ ತನ್ನ ಹೆಗ್ಗಣ ಪ್ರಧಾನಿಗೆ ಮುಂದೆ ಕಾಣುವ ಬೆಟ್ಟದಲಿ ಹೋಗಿ ಜಾಗ ನೋಡಿಕೊಂಡು ಬರಲು ಕಳಿಸುತ್ತಾನೆ. ಹೆಗ್ಗಣ ಪರಧಾನಿ ಹಳಗೇರಿಯ ಮುಂದಿರುವ ಮೈಲಾಪೂರ ಗ್ರಾಮದ ಬೆಟ್ಟಕ್ಕೆ ಬರಲು ಬೆಟ್ಟದಲ್ಲಿ ಗಿಡ–ಮರ ಬಳ್ಳಿಗಳಿಂದ ತುಂಬಿ ಮುಳ್ಳುಕಲ್ಲುಗಳ ದುರ್ಗಮಪ್ರದೇಶವಾಗಿರುವುದರಿಂದ ಅಲ್ಲಿ ನರಮನುಷ್ಯರ ಸುಳಿವೆ ಇರುವುದಿಲ್ಲ. ಬೆಟ್ಟದ ಮದ್ಯದಲ್ಲಿ ಇರುವ ಪ್ರಶಾಂತ ಸ್ಥಳಕ್ಕೆ ಬರುತ್ತಾನೆ. ಅಲ್ಲಿಯೇ ಬೃಹದಾಕಾರವಾದ ಬಂಡೆಗಲ್ಲುಗಳ ಮಧದ್ಯದಲ್ಲಿರುವ ಸ್ಥಳವನ್ನುನೋಡಿ ಅಲ್ಲಿಯೇ ಕುಳಿತುಬಿಡುತ್ತಾನೆ. ಇಲ್ಲಿ ಮಲ್ಲಯ್ಯ ಮತ್ತು ಗಂಗಿಮಾಳಮ್ಮ ಇಬ್ಬರು ಹೆಗ್ಗಣ ಪ್ರಧಾನಿ ಮರಳಿ ಬರದೆ ಇದ್ದ ಕಾರಣ,

ಕಾಡುಪ್ರಾಣಿಗಳ ಬಾಯಿಗೆ ತುತ್ತಾದನೋ ಎನೋ ಎಂದು, ಗಾಭರಿಗೊಂಡು, ಗಂಗಿಮಾಳಮ್ಮನ ಒತ್ತಡಕ್ಕೆ ಮಣಿದ ಹೆಗ್ಗಣ ಪ್ರಧಾನಿಯನ್ನು ಹುಡುಕಿಕೊಂಡು ಹೋಗುತ್ತಾರೆ.

ಮೈಲಾಪೂರ ಬೆಟ್ಟದ ತಪ್ಪಲಿನಲ್ಲಿ ಕಲ್ಲುಬಂಡೆಗಳ ಮದ್ಯದ ಸ್ಥಳದಲ್ಲಿ ಕುಂತರು. ಹೆಗ್ಗಣ ಪ್ರಧಾನಿ ಮಲ್ಲಯ್ಯನಿಗೆ ಆ ಸ್ಥಳವನ್ನು ಬಿಟ್ಟುಕೊಡಲು ಹೇಳುತ್ತಾನೆ. ಹೆಗ್ಗಣ ಪ್ರಧಾನಿ ಆ ಜಾಗವನ್ನು ಬಿಟ್ಟು ಕದಲುವುದಿಲ್ಲ. ಆಗ ಮಲ್ಲಯ್ಯ ಹೆಗ್ಗಣ ಪ್ರಧಾನಿಯ ಕಿವಿಯನ್ನು ಹಿಡಿದು ಮೇಲಕ್ಕೆತ್ತಲು ಪ್ರಯಿತ್ನಿಸುತ್ತಾನೆ. ಹೆಗ್ಗಣ ಪ್ರಧಾನಿಯ ಕಿವಿಯು ಕಿತ್ತಿಬರುತ್ತದೆಯೆ ವಿನಃ ಹೆಗ್ಗಣ ಪ್ರಧಾನಿ ಆ ಜಾಗಬಿಟ್ಟು ಮೇಲೆಳಲಿಲ್ಲ. ಆಗ ಸಿಟ್ಟಿಗೆದ್ದ ಮಲ್ಲಯ್ಯ ಉಗ್ರರೂಪತಾಳಿ ಹೆಗ್ಗಣ ಪ್ರಧಾನಿ ಕುಂತಿರುವ ಜಾಗದ ಪಕ್ಕದಲ್ಲಿರುವ ಗುಂಡು ಹೊಡೆದು ಏಳುತುಂಡು ಮಾಡುತ್ತಾನೆ. ಪಕ್ಕದಲ್ಲಿಯೆ ಮಲ್ಲಯ್ಯ ಗಂಗಿಮಾಳನ್ನನೊಂದಿಗೆ ಆ ಸ್ಥಳದಲ್ಲಿ ವಾಸಮಾಡುತ್ತಾನೆ. ಮಲ್ಲಯ್ಯ ಗಂಗಿಮಾಳಮ್ಮನೊಂದಿಗೆ ವಾಸವಾಗಿರುವ ಆ ಸ್ಥಳವೇ ಮಲ್ಲಯ್ಯನ ಪುಣ್ಯಕ್ಷೇತ್ರವಾಯಿತು. ಬದುಕಿನಲ್ಲಿ ನೊಂದುಬಂದವರಿಗೆ ಆಶ್ರಯದ ತಾಣವಾಯಿತು. ಆತನ ಕೀರ್ತಿ ಎಲ್ಲೆಡೆ ಹರಡಿ ಮೈಲಾಪೂರ ಮಲ್ಲಯ್ಯನೆಂದು ಹೆಸರುವಾಸಿಯಾಗಿದ್ದಾನೆ. ಹಾಲಗೇರಿಯ ಸೀಮೆಯಲ್ಲಿರುವ ಬೆಟ್ಟಕ್ಕೆ ಗಂಗಿಮಾಳಮ್ಮನ ಬೆಟ್ಟವೆಂದು ಈಗಲೂ ಕರೆಯುತ್ತಾರೆ. ಅದರ ನೆನಪಿಗಾಗಿ ಮಲ್ಲಯ್ಯ ಗಂಗಿಮಾಳಮ್ಮನ ಮದುವೆಯಾದ ದಿನ ಮಧ್ಯರಾತ್ರಿ. ಗಂಗಿಮಾಳಮ್ಮನ ಬೆಟ್ಟಕ್ಕೆ ಬೇಟೆಯಾಡಲು ಹೋಗಿಬರುತ್ತಾನೆ.

ಈ ಮೈಲಾಪೂರ ಮತ್ತು ಹಳಗೇರಿ ಗ್ರಾಮಗಳು ಬೆಟ್ಟಗುಡ್ಡಗಳ ಮಧ್ಯೆಯಿರುವುದರಿಂದ ಇಲ್ಲಿ ವಾಸಮಾಡುವ ಬಹುಪಾಲು ಜನರು ಪಶುಪಾಲಕರಾಗಿದ್ದಾರೆ. ಇತ್ತೀಚೆಗೆ ಕೆಲವರು ಕೃಷಿಯಾಧಾರ ಚಟುವಟಿಕೆಯಲ್ಲಿ ತೊಡಗಿಕೊಂಡಿರುವುದರಿಂದ ಮೈಲಾರಲಿಂಗ ಆದಿವಾಸಿ ಜನರ ಪಶುಪಾಲನ ದೇವರಾಗಿರುವುದಕ್ಕೆ ಪುಷ್ಠಿನೀಡುತ್ತದೆ. (ವಕ್ತೃ ಹಣಮಯ್ಯ ಹಳಗೇರಾ)

**೩.ಹೊನ್ನಕೇರಿ ಮಲ್ಲಯ್ಯ**[೮] : ಮಲ್ಲಯ್ಯನ ಬಳಿ ತಿರುಪತಿಯ ವೆಂಕಟರಮಣ ಬಂದು ಏಳುಕೋಟಿ ಸಾಲ ಬೇಡಲು ಮಲ್ಲಯ್ಯ ವೆಂಕಟರಮಣನಿಗೆ ಕೊಡಲು ಒಪ್ಪುತ್ತಾನೆ. ಆದರೆ ವೆಂಕಟರಮಣ ಸಾಲ ಮರಳಿ ಕೇಳಬೇಕಾದರೆ ಒಂದು ಷರತ್ತು ವಿದಿಸುತ್ತಾನೆ. ನೀನು ನನಗೆ ಸಾಲ ನೀಡಿದ ಮೇಲೆ ಸಾಲ ಮರಳಿ ಕೇಳಬೇಕಾದರೆ ಜನರು ಇಲ್ಲದಿರುವ ಸಮಯದಲ್ಲಿ ಬಂದು, ಸಾಲ ಕೊಟ್ಟ ಹಣವನ್ನು ಕೇಳಿ ಮರಳಿ ಪಡಿಯಬೇಕು ಎಂದು ಹೇಳಿದನು. ಆಯ್ತು ಎಂದು ವೆಂಕಟರಮಣಿಗೆ ಏಳುಕೋಟಿ ರೂಪಾಯಿಸಾಲ ಕೊಡುತ್ತಾನೆ. ಮಲ್ಲಯ್ಯ ತಾನು ನೀಡಿದ ಸಾಲವನ್ನು ಮರಳಿ ಕೇಳಲು ತಿರುಪತಿಗೆ ಹೋದಾಗಲೆಲ್ಲ ಜನರಿರುತ್ತಾರೆ. ಮಲ್ಲಯ್ಯನು ಕೋಪಗೊಂಡು ಒಂದು ದಿನ ಜನರಿರುವಾಗಲೆ ವೆಂಕಟರಮಣಿಗೆ ಏಳುಕೋಟಿ ಸಾಲವನ್ನು ವಾಪಸುಕೊಡುವಂತೆ ಕೇಳುತ್ತಾನೆ. ಆಗ ವೆಂಕಟರಮಣನಿಗೆ ಮಲ್ಲಯ್ಯನು ವಿಧಿಸಿದ್ದ ಷರತ್ತು ನೆನಪಿಸಿಕೊಂಡು ಲಕ್ಷಿರಮಣ ಗೋವಿಂದ ಗೋ ಎಂದು ಹೇಳುತ್ತಾನೆ. ನಾನು ನಿನ್ನಲ್ಲಿ ತಂದಿರುವ ಹಣವನ್ನು ನಾನು ತೆಗೆದುಕೊಂಡಿಲ್ಲ ಲಕ್ಷ್ಮಿಗೆ ಕೊಟ್ಟಿದ್ದೇನೆ. ಎಂದು ಹೇಳುತ್ತಾನೆ. ಸಿಟ್ಟಿಗೆದ್ದ ಮೈಲಾರಲಿಂಗ, 'ಮೈಲಾರಲಿಂಗ ಏಳುಕೋಟಿ ಏಳುಕೋಟಿಗೆ' ಅಂತ ಬಂದು ಮೈಲಾಪೂರ ಕೆರೆಯಲ್ಲಿ ಒಂದು ರೂಪಾಯಿ ಹಾಕಿ ಮುಳುಗುತ್ತಾನೆ. ಆಗ ಆ ಕೆರೆಯಲ್ಲಿ ಏಳುಕೋಟಿ ಹೊನ್ನನ್ನು ಪಡೆಯುತ್ತಾನೆ. ಮೈಲಾರಲಿಂಗನ ಭಕ್ತರೆಲ್ಲರೂ ಹೊನ್ನಕೆರೆಯಲ್ಲಿ ಹಣಹಾಕಿ ಮುಳುಗುತ್ತಾರೆ. ಇದರಿಂದ ತಮ್ಮ ಸಂಪತ್ತು ವೃದ್ದಿಯಾಗುತ್ತದೆ ಎಂಬ ನಂಬಿಕೆ ಭಕ್ತಿ ಜನರಲ್ಲಿದೆ. ಆ ಕಾರಣಕ್ಕಾಗಿ ಹೊನ್ನಕೇರಿ ಮಲ್ಲಯ್ಯನೆಂತಲೂ ಈ ಕ್ಷೇತ್ರಪ್ರಸಿದ್ದಿಯಾಗಿದೆ. (ಮಾಹಿತಿ ನೀಡಿದವರು ಮಲ್ಲಿಕಾರ್ಜುನ ತಂದೆ ಮಲ್ಲಪ್ಪ ಕಂಚವೀರ ಹಳಗೇರಿ)

**೪.ಮಲ್ಲಯ್ಯನ ಕುರಿತ ಜನಪದ ಕಥನ ಗೀತೆ:** ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ಮಲ್ಲಯ್ಯನನ್ನು ಕುರಿತು ಜನಪದ ಕಥನ ಗೋತೆಯೊಂದು ಪ್ರಚಲಿತದಲ್ಲಿದೆ.[೯]

ಸಿದ್ದನ ಪುರದಲಿ ಇದ್ದಾರೊ ಹೇಮರಡ್ಡಿ
ಭಗತಿಗೆ ಬಾಳೆ ಬಾಧ್ದೂರ ಕೋಲೆಣ್ಣ ಕೋಲೆ

ಸೋಮರಡ್ಡಿಯ ಮಗಳು ಹೇಮರೆಡ್ಡಿಯ ಸೊಸಿ
ಬ್ರಹ್ಮರೆಡ್ಡಿಯ ಸತಿಯಳೂ ಕೋಲೆಣ್ಣ ಕೋಲೆ
ಬ್ರಹ್ಮನರೆಡ್ಡಿಯ ಸತಿಯಳು ಮಲ್ಲಮ್ಮ
ನಡೆ ನುಡಿ ಎಂಬಲ್ಲಿ ಅತಿ ಶರಣೆ ಕೋಲೆಣ್ಣ ಕೋಲೆ
ಒಡೆಯ ಮಲ್ಲಯ್ಯ ಬಂದು ನಡುವ ಅಂಗಳದಾಗ
ನಿಂತು ಭಿಕ್ಷೆಂಬ ಶಬುದ ಭವ ಶುಬುದ ಕೋಲೆಣ್ಣ ಕೋಲೆ, ಹೀಗೆ ಮುಂದುವರಿದು

----------------

ಪರಿಮಾಣ ಕೋಲೆಣ್ಣ ಕೋಲೆ
ಬ್ರಹ್ಮರಡ್ಡಿ ಹೇಳುತ್ತಾರ ಮಡದಿ ಮಲ್ಲಯ್ಯಗ
ಇದ್ದಷ್ಟು ಮಹಲ ಸುಮ್ಮ ಹೊಯತ್ತೇನ ಕೋಲೆಣ್ಣ ಕೋಲೆ
ಮಾವ ಅನುಭದ ತಿಳಿದು ಹಿರಿ ಸೊಸಿ ಉಸುರು ಅಂದ
ಹೋಗಿ ಕರತರರೀ ಮಲ್ಲಮ್ಮಗ ಕೋಲೆಣ್ಣ ಕೋಲೆ
ಮಲ್ಲಮ್ಮನೆಂಬುದು ಕಲ್ಲಿನ ಗುಡಿ ಕಟ್ಟಿ
ಹೋಗಿ ಕರತರರಿ ಮಲ್ಲಮ್ಮಗ ಕೋಲೆಣ್ಣ ಕೋಲೆ,

ಎಂದು ಮುಕ್ತಾಯಗೊಳ್ಳುತ್ತದೆ. ಸಿದ್ದಾಪುರದಲ್ಲಿ ಸೋಮರೆಡ್ಡಿಯ ಮಗಳು ಹೇಮರಡ್ಡಿಯ ಸೊಸಿಯಾಗಿ ಬ್ರಹ್ಮರೆಡ್ಡಿಯ ಸತಿಯಾಗಿ ಮಲ್ಲಮ್ಮ ಇರುತ್ತಾಳೆ. ನಡೆ–ನುಡಿಯಲ್ಲಿ ಶುದ್ಧ ಮನಸ್ಸಿನಿಂದ ಇರುವ ಮಲ್ಲಮ್ಮಳಿಗೆ ಮನೆಯಲಿ ಅತ್ತಿಕಾಟ ಹೆಚ್ಚುಗುತ್ತದೆ. ಮಲ್ಲಯ್ಯನ ಭಕ್ತಿಗೆ ಮಾರುಹೋಗಿ ಭಕ್ತಿಯಿಂದ ನೆನೆಯುತ್ತಾಳೆ. ಭಿಕ್ಷಕ್ಕೆ ಬಂದಾಗ ಭಿಕ್ಷೆ ನೀಡುತ್ತಾಳೆ. ಇದನ್ನು ಕಂಡ ಅತ್ತಿ ಸೊಸೆಯ ಮೇಲೆ ಸಂಶಯ ಪಡಲು ಅಡವಿ ಆರಣ್ಯದಲಿ ದನಕಾಯಲು ಮಲ್ಲಮ್ಮನಿಗೆ ಕಳಿಸುತ್ತಾರೆ. ಮಲ್ಲಯ್ಯ ಜೊತೆಗೆ ಮಲ್ಲಮ್ಮ ಇರುವಳೆಂದು ತಿಳಿದಾಗ ಅವಳನ್ನು ಕೊಲೆ ಮಾಡಲು ಪತಿ ಬ್ರಹ್ಮರೆಡ್ಡಿ ಕೊಡಲಿ ಮಸೆದುಕೊಂಡು ಹೋಗುತ್ತಾನೆ. ಮಲ್ಲಮ್ಮನ ಕೊಲೆಮಾಡಲು ಕೊಡ್ಲಿ ಎತ್ತಿದ ಕೂಡಲೆ ಎರಡು ಕಣ್ಣುಗಳು ಹೋಗುತ್ತವೆ. ಮಲ್ಲಯ್ಯನ ಮೇಲೆ ಮತ್ತು ಮಲ್ಲಮ್ಮನ ಮೇಲೆ ಮಾಡಿದ ಅಪವಾದಕ್ಕೆ ಕ್ಷಮೆ ಕೇಳಲು ಮತ್ತೆ ಕಣ್ಣು ಬರುತ್ತವೆ. ಮಲ್ಲಮ್ಮನ ಭಕ್ತಿಗೆ ಮೆಚ್ಚಿ ಗುಡಿಯನ್ನು ಕಟ್ಟುತ್ತಾರೆ.

ಡಾ.ಬಿಳಿಮಲೆ ಪುರಷೋತ್ತಮ ಅವರು ಮೈಲಾರನ ಮದುವೆ ವಿಷಯವಾಗಿ ಹೇಳುವಾಗ ಮೈಲಾರನು ಕರಿಯಾಪುರದಲ್ಲಿ ಹುತ್ತದೊಳಗಡೆ ವಾಸವಾಗಿದ್ದ. ಆ ಊರಿನ ಪಕ್ಕದಲ್ಲಿ ಮಲ್ಲನಗೌಡ ಎಂಬುವನು ಊರಾಡಳಿತ ಮಾಡಿಕೊಂಡಿದ್ದ ಅವನ ತಂಗಿ ಮಲ್ಲವ್ವ ಎಂಬುವಳು ಇದ್ದಳು ಎಂದು ಹೇಳುತ್ತಾರೆ. ಆದರೆ ಮಲ್ಲಮ್ಮ ಇಲ್ಲಿ ಹೇಮರೆಡ್ಡಿಯ ಸೊಸಿಯಾಗಿ ಬ್ರಹ್ಮರೆಡ್ಡಿಯ ಮಡದಿಯಾಗಿ ಮಲ್ಲಯ್ಯನ ಭಕ್ತಳಾಗಿ ಆತನ ಮಹಿಮೆಯನ್ನು ಕೊಂಡಾಡಿದ್ದಾಳೆ.

**೫.ಹಾಲುಮತ ಕಾವ್ಯ**[೧೦] **:** ಹಾಲುಮತ ಕಾವ್ಯದಲ್ಲಿ ಬರುವ ಒಂದು ಪ್ರಸಂಗ ಹೀಗಿದೆ: ಮಲ್ಲಯ್ಯ ಮಣಿಮಲ್ಲಾಸುರರನ್ನು ಕೊಲ್ಲಲು ಬಂದಿರುತ್ತಾನೆ. ಬರುವಾಗ ಬಂಡಾರ ಮರೆತಿರುತ್ತಾನೆ. ಅದರ ಹುಡುಕಾಟದಲ್ಲಿರುವಾಗ ಅಣ್ಣಿಗೇರಿಯ ಗಂಗಿಮಾಳಮ್ಮನ ಬಳಿ ಬಂಡಾರವಿರುವುದಾಗಿ ತಿಳಿಯುತ್ತದೆ. ಹಾಲುಮತ ಕಾವ್ಯದ ಪ್ರಕಾರ ಮಲ್ಲಣ್ಣ ಕರ್ನಾಟಕದಲ್ಲಿ ಮದುವೆಯಾಗುವುದು ಗಂಗಿಮಾಳಮ್ಮನನ್ನು. ಆದರೆ ಕರ್ನಾಟಕದ ಮೈಲಾರಲಿಂಗನ ಕುರಿತು ವಿವರವಾಗಿ ಅಧ್ಯಯನ ಮಾಡಿರುವ ಡಾ.ಬಿಳಿಮಲೆ ಪುರುಷೋತ್ತಮ್ ಅವರು ಹೀಗೆ ದಾಖಲಿಸುತ್ತಾರೆ. ಮೈಲಾರನ ಮೂರನೆ ಮದುವೆಯು ಗಂಗಿಮಾಳಮ್ಮನೊಡನೆ ನಡೆಯುತ್ತದೆ. ಈಕೆ ಅತ್ಯಂತ ಶ್ರೀಮಂತನಾದ ತಿರುಪತಿ ತಿಮ್ಮಪ್ಪನ ಮಗಳು.

**ಮಹಾರಾಷ್ಟ್ರದ ಜನಪದ ನಿರೂಪಣೆಗಳ ಪ್ರಕಾರ.**[೧೧] ತಿಮ್ಮಶೆಟ್ಟಿ ಎಂಬ ಲಿಂಗಾಯತ ಬಣಜಿಗರ ಮಗಳು. ಅದೇನೆ ಇದ್ದರು ಒಟ್ಟು ಅರ್ಥದಲ್ಲಿ ಆಕೆ ಶ್ರೀಮಂತರ ಮಗಳು. ಆದರೆ ಹಾಲುಮತ ಕಾವ್ಯದಲ್ಲಿ ಗಂಗಿಮಾಳಮ್ಮ ಮತ್ತು ಮೈಲಾರದ ಮಲ್ಲಯ್ಯ ಸೇರುವುದು ಮೈಲಾಪೂರದ ಗುಡ್ಡದಲ್ಲಿ. ಹಾಗಾಗಿ

'ಗಂಗಿಮಾಳಮ್ಮ' ಮತ್ತು ಕುರಬತ್ತೆವ್ವ ಇಬ್ಬರೂ ಒಂದೇ ಎಂದು ಕಾಣುತ್ತದೆ. ಬಿಳಿಮಲೆಯವರು ಹೇಳುವ ಕಾರಿಮುನಿ ಕತೆಯ ಬೆನ್ನಲ್ಲಿ ನೋಡಿದರು ಇದು ತಿಳಿಯುತ್ತದೆ. ಬಂಡಾರ ಸಂಸ್ಕೃತಿಯ ಮಹತ್ವವನ್ನು ಮೈಲಾರಲಿಂಗನ ಹಿನ್ನಲೆಯಲ್ಲಿ ಹಾಲುಮತ ಕಾವ್ಯ ತಿಳಿಸುತ್ತದೆ. ವಾಸ್ತವವಾಗಿ ಈ ಬಂಡಾರ ಸಂಸ್ಕೃತಿ ಆಚರಣೆಯಲ್ಲಿರುವುದು ಶೈವ ಪರಂಪರೆಯ ಮೈಲಾರಲಿಂಗ, ಅಮೋಘಸಿದ್ದ, ಭೀರಪ್ಪ, ಯಲ್ಲಮ್ಮ ಹಾಗೂ ಮಾಳಿಂಗರಾಯ ಪರಂಪರೆಗಳಲ್ಲಿ, ಇವೆಲ್ಲವೂ ಬಹುಪಾಲು ಹಾಲುಮತ ಸಂಪ್ರದಾಯಕ್ಕೆ ಸೇರಿವೆ. ಈ ಬಂಡಾರ ಎನ್ನುವುದು ಶೈವಕೇಂದ್ರವಾದ ಕೈಲಾಸದ ಮುಖ್ಯವಾದ ವಸ್ತುವೆಂದು ಭಾವಿಸಬಹುದು. ಮಾತ್ರವಲ್ಲ ಇಂದಿಗೂ ಬಂಡಾರವಿಲ್ಲದೆ ಈ ಸಂಪ್ರದಾಯಗಳು ಜಾತ್ರೆ ಉತ್ಸವಗಳನ್ನು ನಡೆಸುವದಿಲ್ಲ. ಅದರಲ್ಲು ಶಾಕ್ತ ಪರಂಪರೆಗೆ ಹತ್ತಿರವಿರುವ ಯಲ್ಲಮ್ಮನ ಗುಡ್ಡದಲ್ಲಿ ಬಂಡಾರಕ್ಕೆ ಪ್ರಮುಖ ಆದ್ಯತೆ. ಶಿವಸಂಸ್ಕೃತಿಯ ಆಶಯವಾಗಿ ಇಂದು ಹಾಲುಮತದವರ ಜೀವನ ಕ್ರಮದ ಭಾಗವಾಗಿದೆ. ಮೈಲಾರಲಿಂಗನ ಕುರಿತು ಈ ಒಂದು ಸಣ್ಣ ಪ್ರಸಂಗ ಹಾಲುಮತ ಕಾವ್ಯದಲ್ಲಿ ಕಾಣಿಸುತ್ತದೆಯಾದರೂ ಪ್ರಮುಖ ಮಾಹಿತಿಗಳನ್ನು ನೀಡುತ್ತದೆ.

ಮಲ್ಲಯ್ಯನಿಗೆ ಒಲಿದ ಗಂಗಿಮಾಳಮ್ಮನನ್ನು ಆತನಿಗೆ ಕೊಟ್ಟು ಮದುವೆ ಮಾಡಲು ಅಣ್ಣಂದಿರಿಗೆ ಇಷ್ಟವಿರುವುದಿಲ್ಲ. ಇಲ್ಲಿಯೂ ಮೈಲಾರಲಿಂಗ ಬಳೆಗಾರನ ವೇಷದಲ್ಲಿ ಕಾಣಿಸಿದರೂ, ತಾಯಿಯ ಮಾತುಗಳನ್ನು ಕೇಳಿಸಿಕೊಂಡರೆ ಅವನೊಬ್ಬ ಸಾಮಾನ್ಯ ವ್ಯಕ್ತಿ ಅಲ್ಲವೆಂದು ತಿಳಿಯುತ್ತದೆ. ತಾಯಿ ಮಲ್ಲಯ್ಯನನ್ನು ಬೂದಿಬಡುಕ, ಸನ್ಯಾಸಿ, ಮುಂತಾಗಿ ನಿಂದಿಸುತ್ತಳೆ. ಇದಕ್ಕೂ ಮುಂಚೆ ಗಂಗಿ ಢೇರ್ಯಾದೊಳಗೆ ಮಲ್ಲಯ್ಯನನ್ನು ನೋಡಿದ ಕ್ಷಣದಲ್ಲಿ ಗಂಗಿಮಾಳಮ್ಮ ಹೇಗೆ ಮನ ಸೋತಳು ಎಂಬುದನ್ನು ಹಾಲುಮತ ಕಾವ್ಯ ಕಾವ್ಯಾತ್ಮಕವಾಗಿ ವರ್ಣಿಸುತ್ತದೆ.

ಗಂಗಿಮಾಳಮ್ಮನೆಂದರೆ ಗಂಗಿಢ್ಯೇರ್ಯಾದೊಳಗೇನಾ
ಹಣಿಮೇಲೆ ನಾಮ ಇಟ್ಟಿದ್ದ ಗಂಧ ಹಚ್ಚುತ್ತಾನೇನಾ
ಗಳಗಿ ರೂಪದವನೇನಾ ಗಳಗಿಗಂದಕದವನೇನಾ
ಒಳಗೆ ಕರಿಯುತಾನೇನಾ ಮಲ್ಲಯ್ಯಗ ನೋಡುತಾಳೆನಾ
ಮಲ್ಲಯ್ಯಗ ನೋಡುತಾಳೆನಾ ಮನಸ್ಸು ಹೊಗುತಾವೇನಾ
ಮನಸ್ಸು ಹೊಗುತಾವೇನಾ ಮೈಮರೆತ ಕುಂತಾರ
ಗಂಗಿ ಢೇರ್ಯಾದೊಳಗೇನ ಮಾಳಮ್ಮ ಕುಂದ್ರುತಾಳೇನಾ
ಮಾಳಮ್ಮ ಕುಂದ್ರುತಾಳೇನಾ ಮಾದೇವ ಕುಂದ್ರುತಾಳೇನಾ[೨]

ಇಲ್ಲಯೇ ಅವರಿಬ್ಬರೂ ಒಂದುಗೂಡುತ್ತಾರೆ. ಮುಖ್ಯವಾಗಿ ಮಾಳಮ್ಮ ನನ್ನಬಳಿ ಬಂಡಾರವಿದೆ ಆದರೆ ನನಗೆ ಲಗ್ನವಾಗಿಲ್ಲ ನೀನು ಲಗ್ನವಾದರೆ ಬಂಡಾರ ಸಮೇತ ಬರುತ್ತೇನೆ ಎನ್ನುತ್ತಾಳೆ. ಇದಕ್ಕೆ ಮಲ್ಲಯ್ಯ ಒಪ್ಪುತ್ತಾನೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಮಲ್ಲಯ್ಯ, ಮಲ್ಲಮ್ಮ, ಮಾದೇವ ಎಂಬ ಪದಗಳು ಮೂಲತಃ ಶೈವ ಸಂಪ್ರದಾಯಕ್ಕೆ ಸೇರುವುದು ಖಚಿತ. ಆದರೆ ಬರುಬರುತ್ತಾ ಕಾವ್ಯ ಗಂಗಿ ಎಂಬ ಪೂರ್ವಪದವನ್ನು ಮರೆಯುತ್ತದೆ. ಗಂಗಿಯನ್ನು ಸೇರಿಸಿಕೊಂಡರೂ ಶಿವನ ಮತ್ತೊಬ್ಬ ಹೆಂಡತಿ ಎಂದರೂ ನಡೆದಿತು. ಈ ಕಾವ್ಯದಲ್ಲಿ ಶಿವ ಅನೇಕ ಸಂದರ್ಭದಲ್ಲಿ ಹೆಣ್ಣುಗಳನ್ನು ಒಲಿಸಿಕೊಳ್ಳುವುದು ನಾನಾ ವೇಷಗಳಲ್ಲಿಯೇ.

ಮಲ್ಲಯ್ಯ ಮತ್ತು ಮೈಲಾರ ಎಂಬ ಪದ ಜನಪದರಲ್ಲಿ ಸೇರಿರುವುದು ಸಹಜವಾದರೂ, ಮೈಲಾರಲಿಂಗ ಎಂಬ ಪದ ಯಾವಾಗ ಸೇರಿತು ಎಂಬುದು ಸಂಧಿಗ್ದ ಬಹುಶಃ ಇದಕ್ಕೆ ಆಧುನಿಕ ಸಂದರ್ಭದಲ್ಲಿ ಲಿಂಗಾಯತ ಪ್ರಾಭಲ್ಯ (ಪ್ರಭಾವ)ವಿದ್ದರೂ ಇರಬಹುದು. ಆದರೆ ಇಂದಿಗೂ ಕುರುಬ, ಗೊಲ್ಲ, ಗೊರವರ ಮನೆಗಳಲ್ಲಿ ಮೈಲಾರಿ ಮಲ್ಲಪ್ಪ, ಮಲ್ಲಯ್ಯ, ಮಲ್ಲಣ್ಣ, ಮಾಲತೇಶ ಎಂಬ ಹೆಸರುಗಳು ಇರುವುದನ್ನು ನೋಡಿದರೆ ಮೂಲವನ್ನು ಮರೆಮಾಚಲು ಸಾಧ್ಯವಿಲ್ಲ ಎಂದೆನಿಸುತ್ತದೆ.

**ಇತರ ಪಾಠಗಳು:**

ಪ್ರೊ.ಎಂ.ಎಸ್. ಸುಂಕಾಪುರ ಅವರ ಜೀವನ ಜೋಕಾಲಿ ಡೊಳ್ಳಿನ ಹಾಡುಗಳ ಸಂಕಲನದಲ್ಲಿ ಗುಡ್ಡದ ಸ್ವಾಮಿ ಶಿರ್ಷಿಕೆಯಲ್ಲಿ ಕಥನಗೀತೆಯೊಂದು ಮೈಲಾರಲಿಂಗ ಮತ್ತು ಗಂಗೆಮಾಳಮ್ಮನ ಸಂಬಂಧದ ಬಗೆಗಿನ ಕತೆ ಇದೆ. ಇದು ಉತ್ತರ ಕರ್ನಾಟಕದ ಪಾಠ ಕಥೆ ಮತ್ತು ವಸ್ತುವಿನ ಸ್ವರೂಪದಲ್ಲಿ ದಕ್ಷಿಣ ಕರ್ನಾಟಕದ ಗೊರವ ಸಂಪ್ರದಾಯಿಕ ಕಥೆಗಿಂತ ಬಿನ್ನವಾಗಿದೆ.

ಮಲ್ಲಾಪುರಕ್ಕೆ ಬಂದ ಮೈಲಾರಲಿಂಗನಿಗೆ ವಸಂತಾಗಮನದ ನಿಮಿತ್ಯ ಕಾಮಾಸಕ್ತಿ ಉಂಟಾದಾಗ, ಎದುರಿಗೆ ಬಂದ ಗಂಗಿಮಾಳನಲ್ಲಿ ಅನುರುಕ್ತನಾಗುತ್ತಾನೆ. ಆದರೆ ಈ ಗಂಗಿಮಾಳಿಯಾದರೋ ಗಂಡುಳ್ಳ ಗರತಿ ಮೇಲಾಗಿ ಮಗುವಿನ ತಾಯಿ, ಮೈಲಾರಲಿಂಗನ ಇಚ್ಚೆಗೆ ಮಣಿಯದಿದ್ದಾಗ, ಮೈಲಾರಲಿಂಗ ಗಂಗಿಮಾಳಿಯ ಮಗುವನ್ನು ಕದ್ದೊಯ್ಯುತ್ತಾನೆ. ಮಾಳಿಯು ತನ್ನ ಮಗುವಿಗಾಗಿ ಗೊರವಯ್ಯನ ವಷದಲ್ಲಿರುವ ಮೈಲಾರಲಿಂಗನ ಬೆನ್ನು ಹತ್ತುತ್ತಾಳೆ. ಯುದ್ಧಕ್ಕೆ ಹೋಗಿದ್ದ ಮಾಳಿಯ ಗಂಡ ಮನೆಗೆ ಹಿಂತಿರುಗಿದಾಗ ಸುದ್ದಿ ತಿಳಿದು ಮೈಲಾರಲಿಂಗನನ್ನು ಕೊಲ್ಲುತ್ತೇನೆಂದು ಕತ್ತಿ ಹಿಡಿದು ಬರುತ್ತಾನೆ. ಆದರೆ ಇದನ್ನರಿತ ಮೈಲಾರ ಮಾಯಾದ ಭಂಡಾರ ಎರಚಿ ಅವನನ್ನು ಅವನ ಮನೆ ಮಠವನ್ನು ಭಸ್ಮಮಾಡಿ ಗಂಗಿಮಾಳಿಯ ಜತೆ ಗುಡ್ಡದಲ್ಲಿ ಕಲ್ಲಾಗಿ ನಿಲ್ಲುತ್ತಾನೆ.

ಮೈಲಾರಲಿಂಗ ಮತ್ತು ಮಾಳಮ್ಮನ ಪ್ರಣಯಕ್ಕೆ ಸಂಬಂಧಿಸಿದಂತೆ, ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದಲ್ಲಿ ಬೇರೆ ಬೇರೆ ಕಥಾರೂಪಗಳಿರುವುದು ಕಂಡುಬರುತ್ತದೆ. ದಕ್ಷಿಣ ಕರ್ನಾಟಕದಲ್ಲಿ ಪ್ರಚಲಿತವಿರುವ ಮೈಲಾರಲಿಂಗ ಮಾಳಮ್ಮನ ಪ್ರಣಯ, ವಿವಾಹ, ಪವಾಡಗಳಿಗೆ ಸಂಬಂದಿಸಿದ ಪಾಠವನ್ನು ದೊಡ್ಡಬಳ್ಳಾಪೂರ ತಾಲೂಕಿನ ಕೊಟಗೆರೆಯ ಗೊರವರಿಂದ ಸಂಗ್ರಹಿಸಿರುವ ಶ್ರೀ.ಜಿ.ಶಂ. ಪರಮಶಿವಯ್ಯನವರು ದಕ್ಷಿಣ ಕರ್ನಾಟಕದ ಜನಪದ ಕಾವ್ಯಪ್ರಕಾರಗಳು ಕೃತಿಯಲ್ಲಿ ಗದ್ಯರೂಪದಲ್ಲಿ ಕಂಡಿರಿಸಿದ್ದಾರೆ.

**ಕೊನೆ ಟಿಪ್ಪಣಿಗಳು:**

೧. ಡಾ.ಸುರೇಶ ನಾಗಲಮಡಿಕೆ. ಹಾಡು ಕಲಿಸಿದ ಹರ ಪುಟ–೫೯

೨. ಅದೇ ಪುಟ–೬೦

೩. ಮೈಲಾರಲಿಂಗ. ಚಕ್ಕೆರೆ ಶಿವಶಂಕರ ಪುಟ–೧೦೦

೪. ಡಾ.ಚಂದ್ರಕಲಾ ಬಿದರಿ. ಮೈಲಾರಲಿಂಗ ಪುಟ–೩೫

೫. ಅದೇ ಪುಟ–೩೬

೬. ಅದೇ ಪುಟ–೩೭

೭. ವಕ್ತೃ ಹಣಮಯ್ಯ ಹಳಿಗೇರಾ.

೮. ವಕ್ತೃ ಮಲ್ಲಿಕಾರ್ಜುನ ಪಂಚಾವೀರ.

೯. ಡಾ.ಜಯದೇವಿ ತೇಲಿ. ಜನಪದ ಕಥನಗೀತೆಗಳು ಪುಟ–೩೨

೧೦. ಡಾ.ಪುರುಷೋತ್ತಮ ಬಿಳಿಮಲೆ. ಕೂಡುಕಟ್ಟು ಪುಟ–೦೩

೧೧. ಅದೇ ಪುಟ–೦೪

೧೨. ಜನಪದ ಹಲುಮತ ಮಹಾಕಾವ್ಯ. ಸಂ.ವೀರಣ್ಣ ದಂಡೆ ಪುಟ–೪೩೫.



## ಧಾರ್ಮಿಕ ಕೇಂದ್ರ–ಬೀದರ ಜಿಲ್ಲೆಯ ನೆಲದಲ್ಲಿ ಜೈನ ಧರ್ಮ [ಶಾಸನಾತ್ಮಕ ಪಕ್ಷಿನೋಟ].

**–ಡಾ. ಅಂಬಿಕಾ ಸಿ. ಚಂದನಕೇರಿ**
ಅತಿಥಿ ಉಪನ್ಯಾಸಕರು, ಇತಿಹಾಸ ವಿಭಾಗ,
ಸರಕಾರಿ ಪ್ರಥಮ ದರ್ಜೆ ಪಿ.ಜಿ. ಕಾಲೇಜು, ಮಹಾಗಾಂವ,
ತಾ.ಕಮಲಾಪೂರ ಜಿ. ಕಲಬುರಗಿ.

ಜೈನ ಧರ್ಮ, ಬೌದ್ಧ ಮತ್ತು ವೈದಿಕ ಧರ್ಮಗಳಂತೆ ಭಾರತದ ಪ್ರಾಚೀನ ಧರ್ಮಗಳಲ್ಲಿ ಒಂದು. ವಿಶೇಷವಾಗಿ ದಕ್ಷಿಣ ಭಾರತದ ಇತಿಹಾಸದಲ್ಲಿ ಜೈನ ಧರ್ಮ ಒಂದು ಪ್ರಬಲವಾದ ಧರ್ಮವಾಗಿತ್ತು. ಇತಿಹಾಸ ದಾಖಲೆಗಳನ್ನು ನೋಡಿದರೆ ಮೌರ್ಯರ ದೊರೆ ಚಂದ್ರಗುಪ್ತ, ಭದ್ರಬಾಹು ಗುರುವಿನ ಮೂಲಕ ಶ್ರವಣಬೆಳಗೊಳಕ್ಕೆ ಬಂದು ಚಂದ್ರಗಿರಿ ಬೆಟ್ಟದಲ್ಲಿ ಸಲ್ಲೇಖನ ವೃತ್ತ ಕೈಗೊಂಡರು. ನಂತರ ಕದಂಬರು, ಗಂಗರು, ಬಾದಾಮಿ ಚಾಲುಕ್ಯರ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು ಮತ್ತು ವಿಜಯನಗರದ ಅರಸರ ಕಾಲದಲ್ಲಿ ಜೈನಧರ್ಮ ಹಿಂದೂ ಧರ್ಮದ ನಂತರದ ಸ್ಥಾನದಲ್ಲಿ ಪ್ರಮುಖ ಧರ್ಮವಾಗಿತ್ತು.

ರಾಜರು ಧರ್ಮದ ಆಸಕ್ತಿಗೆ ಮುಖ್ಯ ಸಾಕ್ಷಿಯಾಗಿದೆ. ಬಸದಿಗಳ ನಿರ್ಮಾಣ, ತೀರ್ಥಂಕರರ ಶಿಲ್ಪಗಳ ನಿರ್ಮಾಣ ಅವುಗಳಿಗೆ ದಾನದತ್ತಿಗಳು. ಹೀಗೆ ಹಲವಾರು ವಿಧದಲ್ಲಿ ಈ ಧರ್ಮದ ಅಭಿವೃದ್ಧಿಗೆ ಪೋಷಣೆ ನೀಡಿದರು. ಪ್ರಮುಖವಾಗಿ ದಿಗಂಬರ, ಶ್ವೇತಾಂಬರ ಪಂಥಗಳಲ್ಲಿ ಕರ್ನಾಟಕದಲ್ಲಿ ದಿಗಂಬರರೇ ಅಧಿಕವೆಂದು ಶಾಸನಗಳಿಂದ ಹೇಳಬಹುದು. ಆದರೆ ಇಲ್ಲಿ ಶ್ವೇತಾಂಬರರು ಕೂಡ ಇಲ್ಲಿ ಇದ್ದರೆಂದು ಶಾಸನಗಳು ಒತ್ತಿ ಹೇಳುತ್ತವೆ.

ಜೀವದಯೆ, ಅಹಿಂಸೆ, ದಾನಗುಣ, ಶಾಖಾಹಾರ, ಬ್ರಹ್ಮಚರ್ಯ, ಅಪರಿಗ್ರಹ, ತ್ಯಾಗ, ಮೊದಲಾದ ಲೋಕ ಹಿತಕಾರಿ ಮಾನವ ಕುಲಕ್ಕೆ ಬೋಧಿಸಿ ಸನ್ಮಾರ್ಗದ ದಾರಿ ತೋರಿಸಿರುವ ಜೈನಧರ್ಮವುಕನ್ನಡ ನಾಡಿನ ಇತಿಹಾಸ ಮತ್ತು ಸಂಸ್ಕೃತಿಯೊಂದಿಗೆ ಹಾಸುಹೊಕ್ಕಾಗಿದೆ. "ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸವೇ ಆಗಿದೆ". ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮ ಒಂದು ಪ್ರಬಲವಾದ ಧರ್ಮವಾಗಿತ್ತು.[೧]

ಹಲಸಿ, ಬೇಲೂರು, ಬೀದರ, ತಾಲೂಕಿನಅಲಿಯಂಬರ, ಕಾಡೆವಾಡ, ಕಮಠಾಣ, ಬರೂರು, ಬೀದರ, ಜೌರಾದ ತಾಲೂಕಿನ ಜೌರಾದ, ಹುಮನಾಬಾದ ತಾಲೂಕಿನ ಚಿಟಗುಪ್ಪ, ಬೋರಂಪಳ್ಳಿ, ಹಳ್ಳಿಖೇಡ ಮೊದಲಾದ ಗ್ರಾಮಗಳಲ್ಲಿ ಜೈನಧರ್ಮದ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳು ವಿಜೃಂಭಣೆಯಿಂದ ಜರುಗಿದವೆಂದು ಶಾಸನ ಮತ್ತು ಸಾಹಿತ್ಯಿಕ ಮೂಲಾಧಾರಗಳಿಂದ ತಿಳಿದುಬರುತ್ತದೆ.

**ಬೀದರಜಿಲ್ಲೆತಾಲೂಕವಾರುಜೈನ ಶಾಸನ ಕೋಷ್ಟಕ**

| **ಬಸವಕಲ್ಯಾಣ** | **ಭಾಲ್ಕಿ** | **ಬೀದರ** | **ಜೌರಾದ** |
|---|---|---|---|
| ಬಸವಕಲ್ಯಾಣ– ೦೨ | ಭಾಲ್ಕಿ– ೦೧ | ಕಮಠಾಣ – ೦೧ | ಜೌರಾದ– ೦೧ |
| ಗೋರಟಾ– ೦೭ | ಅಳವಾಯಿ – | ಬರೂರು– ೦೧ | |

[1]ಡಾ.ಎಂ.ಚಿದಾನಂದ ಮೂರ್ತಿಯವರು ; ಕ.ಶಾ.ಸಂ. ಅಧ್ಯಯನ – ಪು.ಸಂಖ್ಯೆ –73

| | | | |
|---|---|---|---|
| | ೦೧ | | |
| ಉಜ್ಜಳಂಬ – ೦೧ | ಹಲಸಿ – ೦೧ | | |
| | ದನ್ನುರಾ– ೦೧ | | |
| | ಆವಳಗಾ – ೦೧ | | |

* ದಾಖಲೆ ಒಟ್ಟು– ೧೮ ಶಾಸನಗಳು ಅಳವಾಯಿಯ ಶಾಸನವು ಅತೀ ಪ್ರಾಚೀನವಾಗಿದೆ. ಶಾಸನಗಳು ಕನ್ನಡ ಲಿಪಿ ಮತ್ತು ಸಂಸ್ಕೃತ ಭಾಷೆಯಲ್ಲಿದೆ.

ಬೀದರ ಜಿಲ್ಲೆಯ ಪ್ರದೇಶದಲ್ಲಿ ಕ್ರಿ.ಶ. ಆರಂಭದಿಂದಲೂ ಜೈನಧರ್ಮದ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳು ಸಾಗಿ ಬಂದಿವೆ. ದೇವಸೇನ ಸೂರಿಯು (ಕ್ರಿ.ಶ.೯೩೮) 'ದರ್ಶನಸಾರ' ಎಂಬ ಪ್ರಾಕೃತಕೃತಿಯಲ್ಲಿ,

**'ಕಲ್ಲಾಣೇ ವರಣಯರೇದುಣ್ಣಿಸವಿ ಪಂಚ ಉತ್ತರೇಜಾದೇ ।**
**ಜಾವಣಿಯ ಸಂಘ ಭಾವೋ ಸಿರಿಕಲಸಾದೋ ಹುಸೇವಡದೋ ॥**

ವಿಕ್ರಮ ಸಂವತ್ಸರ ೨೦೫ರಲ್ಲಿ ಅಂದರೆ ಕ್ರಿ.ಶ. ೧೪೮ರಲ್ಲೇ ಶ್ವೇತಾಂಬರ ಪಂಥದ ಶ್ರೀಕಲಶಮುನಿ 'ಕಲ್ಯಾಣ ಪಟ್ಟಣದಲ್ಲಿ ಜಾವಣಿಯ ಸಂಘವನ್ನು ಸ್ಥಾಪನೆ ಮಾಡಿದನೆಂದು ಯಾಪನೀಯ ಸಂಘದ ಆವಿಷ್ಕಾರತೇದಿಯನ್ನು ನಮೂದಿಸಿದ್ದಾನೆ.[2] ಈ ಪಟ್ಟಣವು ಕ್ರಿ.ಶ. ಸುಮಾರು ೨ನೆಯ ಶತಮಾನದಲ್ಲಿಯೇ ಪ್ರಸಿದ್ಧ ಜೈನಕೇಂದ್ರವಾಗಿದ್ದು, ಯಾಪನೀಯ ಸಂಘ ಪರಂಪರೆಯ ಮುನಿಗಳ ಬೀಡಾಗಿತ್ತೆಂಬ ವಿಚಾರ 'ದರ್ಶನಸಾರ' ಕೃತಿಯ ನಿರೂಪಣೆಯಿಂದ ಖಚಿತವಾಗುತ್ತದೆ. ಆರ್.ಎಂ.ಷಡಕ್ಷರಯ್ಯ ಅವರು ಕ್ರಿ.ಶ. ಸು.೨ನೇ ಶತಮಾನದಷ್ಟು ಪ್ರಾಚೀನ ಜನವಸತಿಯ ನೆಲೆಯನ್ನು ಬೆಳಕಿಗೆ ತಂದಿದ್ದಾರೆ.[3]

ಬೀದರ ಪ್ರದೇಶದಲ್ಲಿ ಕ್ರಿ.ಶ. ಸುಮಾರು ೨ನೆಯ ಶತಮಾನದಲ್ಲಾಗಲೇ ಜೈನ ಧರ್ಮೀಯರ ವಾಸ್ತವ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಗೋಚರಿಸಿದರೂ, ಅಂದಿನಿಂದ ಇನ್ನೂ ಶತಮಾನದವರೆಗಿನ ಕಾಲಾವಧಿಯಲ್ಲಿ ಜರುಗಿದ ಜೈನ ಚಟುವಟಿಕೆಗಳ ಕುರಿತು ಇನ್ನೂ ಇದುವರೆಗೂ ದಾಖಲೆಗಳು ಮರೆಮಾಚಿವೆ ಎಂಬುದು ಸ್ಪಷ್ಟವಾಗುತ್ತದೆ. ಕ್ಷೇತ್ರಕಾರ್ಯ ಅಧ್ಯಯನದಿಂದ ತಿಳಿದು ಬಂದಿರುವ ಮಾಹಿತಿ ಮೇರೆಗೆ ಈ ಜಿಲ್ಲೆಯ ಬಸವಕಲ್ಯಾಣ, ಉಜ್ಜಳಂಬ, ಉಮಾಪುರ, ಗೋರಟಾ(ಬಿ), ಘರತಾಪುರ, ನಾರಾಯಣಪುರ, ಮಿರಕಲ್ಲ ಹಳ್ಳಿ, ಸಸ್ತಾಪುರ, ಹುಲಸೂರ, ಶಿವಪುರ, ಮೋರಖಂಡಿ, ಭಾಲ್ಕಿ, ತಾಲೂಕಿನ ಅಳವಾಯಿ, ಧನ್ನುರಾ(ಎಚ್), ಭಾಲ್ಕಿ, ಜವಳಗಾ, ಲಖಣಗಾಂವು. ಮುಂತಾದ ಪ್ರದೇಶಗಳಲ್ಲಿ ಕಂಡುಬರುತ್ತದೆ.

ಕಮಠಾಣಗ್ರಾಮದಕ್ರಿ.ಶ ಸುಮಾರು ೧೨ನೆಯ ಶತಮಾನದ ಪಾದಪೀಠ ಶಾಸನದಲ್ಲಿ ಉಲ್ಲೇಖವಿದೆ.ಈ ಶಾಸನವು ಪಾರ್ಶ್ವನಾಥ ಜಿನಾಲಯದ ಗರ್ಭಗೃಹದಲ್ಲಿರುವ ಪಾರ್ಶ್ವನಾಥ ತೀರ್ಥಂಕರನ ಶಿಲ್ಪದ ಪಾದಪೀಠದ ಮೇಲಿದೆ. ಲಿಪಿ–ಕನ್ನಡ ಭಾಷೆಯಲ್ಲಿದೆ. ಶಾಸನದ ಸಾರಾಂಶ 'ಶ್ರೀ

---

[2]ಹಂಪ ನಾಗರಾಜಯ್ಯರವರ ;'ಯಾಪನೀಯ ಸಂಘ' – ಪು.ಸಂಖ್ಯೆ– 25–26

[3]ಷಡಕ್ಷರಯ್ಯಆರ್.ಎಂ ; 'ಶಿಲ್ಪಶಾಸನಗಳು' ಬೀದರಜಿಲ್ಲಾದರ್ಶನ' – ಪು.ಸಂಖ್ಯೆ – 41

ಮೂಲ ಸಂಘ ಪರಂಪರೆಯರೇಚಿ ಶೆಟ್ಟಿ ಎಂಬಾತನು ಈ ಶಿಲ್ಪವನ್ನು ಪ್ರತಿಷ್ಠಾಪಿಸಿದನು' [4] ಎಂದು ಉಲ್ಲೇಖವಿದೆ.

ಅಳವಾಯಿಯ ಗ್ರಾಮದಕ್ರಿ.ಶ. ೧೦೭೭ರ ಶಾಸನದಲ್ಲಿ ಮರೆಕಲ್ಲಿದ ಕಮಳ ಕಂತಿಯ ಪ್ರಸ್ತಾಪವಿದೆ. ಪುಲುಗೆರೆ –೬೦ ಆಡಳಿತ ವಿಭಾಗದಲ್ಲಿ ಮಹಾಸಾಮಂತಗೈಯುತ್ತಿದ್ದ ಎಡೆಯರನು ತೂವಗಾವೆಯಲ್ಲಿ ತನಗೆ ಸೇರಿದ್ದ ಕಮ್ಮತದಲ್ಲಿ ನಲವತ್ತು ಮತ್ತರು ಭೂಮಿಯನ್ನು ಜೈನಧರ್ಮದ ಯಾವುದೋ ಕಾರ್ಯಕ್ಕೆ ಕಮಳಸಿರಿ ಕಂತಿಯ ಪಾದಗಳನ್ನು ತೊಳೆದು ದಾನ ಮಾಡಿದ್ದಾನೆ[5] ಎಂದು ಶಾಸನ ತಿಳಿಸಿದೆ.

ಗೋರಟಾ ಗ್ರಾಮದ ಕ್ರಿ.ಶ. ೧೧೧೮ರ ಶಾಸನದಲ್ಲಿ ವೀರಸೇನನ ಸ್ತೋತ್ರವಿದ್ದು, ಸಿಂಗಶೆಟ್ಟಿ ಎಂಬುವವನು ದೀಕ್ಷೆಯನ್ನು ತೆಗೆದುಕೊಂಡಂತೆ ಶಾಸನದಲ್ಲಿ ಉಲ್ಲೇಖಗೊಂಡಿದೆ. [6] ಅದೇ ಗೋರ್ಟಾಗ್ರಾಮದ ಕ್ರಿ.ಶ. ೧೧೩೩ರ ಶಾಸನದಲ್ಲಿ ವೀರಸೇನನ ಶಾಸನವೆಂದು ಎರಡು ಬಾರಿ ಒತ್ತಿ ಹೇಳಿದ್ದರೂ ತ್ರಿಭುವನ ಸೇನನ ವರ್ಣನೆಯೊಂದಿಗೆ ಶಾಸನ ಮುಕ್ತಾಯವಾಗುತ್ತದೆ. ತ್ರಿಭುವನ ಸೇನನನ್ನುಗಣದರನಂತಿದ್ದನೆಂದು ಹೇಳಿದ್ದು, ಸಂಸಾರಗಳಿಗೆ ಅಂತ್ಯ ಹಾಡಲೆಂದೇ ಇವನು ಜನಿಸಿದನೆಂದು ಶುದ್ಧ ಚಾರಿತ್ರವುಳ್ಳವನೆಂದೂ ಹೇಳಿದೆ. ಶಾಸನದಉಲ್ಲೇಖದಲ್ಲಿ "ಶ್ರೀ ತ್ರಿಭುವನ ಸೇನಾಖ್ಯ ಸಿದ್ಧಾಂತ ದೇವರ ೧೧ ಅನ್ತಸ್ತತ್ವದ ಬಲ್ಸೆಯನಿನ್ತಿ ತ್ರಿಭುವಸೇನ ಮುನಿ ಸಂಸ್ಕಾರಸ್ತಂ ಮಾಡಲ್ಸಲೆ ಲೋಕಾಂತಿಕ ದೇವರೊಳ ಪುಟ್ಟಿದಂ ಹರುಷಿದರಿಂದ ॥ ಅಭಿನವರೂಪಯವ್ವನ ವಿಳಾಸ ಸಮನ್ವಿತದೇವ ಸುಂದರೀ ಪ್ರಭವ ಸುಖಾವಹಗಳ ಮದೊಂಬೆನ ಸೌಖ್ಯ ಮೆಲೆಯಮೆಂದು ಕೇಳ ಶುಭ ಮೆನಿಪಂ ತರಾತ್ಮನೊಳೆನಿಂದು ಸುಚಾಡದೊಳಗಿನ ಚಿತ್ತಮೀತ್ರಿಭುವನ ಸೇನ ದಿವ್ಯ ಮುನಿಪಂ ಪಡೆದ ಪರಮಾತ್ಮತತ್ವಮಂ॥[7] ತಿಳಿಸಿದೆ.

ಗೋರ್ಟಾ ಗ್ರಾಮದ ೧೨ನೆಯ ಶತಮಾನ ಶಾಸನದಲ್ಲಿ ಮುನಿಸುವ್ರತ ಸಿದ್ಧಾಂತ ದೇವರಗುಡ್ಡನಾದ ಬಸವಶೆಟ್ಟೆ ಮತ್ತು ಲೋಕಣಬ್ಬೆಯ ಮಕ್ಕಳು ರೇವಿಶೆಟ್ಟಿ ಮತ್ತುಜಿನ್ನೆಂಣನು ಪದ್ಮಾವತಿಯ ವಿಗ್ರಹವನ್ನು ಮಾಡಿಸಿದಂತೆ ತಿಳಿಯುತ್ತದೆ.[8] ಅದೇ ಗ್ರಾಮದ ಶಾಸನದಲ್ಲಿ ಇದೊಂದು ನಿಷಧಿಕಲ್ಲಾಗಿದ್ದು, ಕ್ರಿ.ಶ. ೧೭ನೇ ಶತಮಾನಕ್ಕೆ ಸೇರುತ್ತದೆ. ವೀರಸೇನ ಎಂಬ ಮುನಿಯ ಹೆಸರು ಒಂದೆರಡು ಬಾರಿ ಬಂದಿರುವುದು ಉಲ್ಲೇಖವಿದೆ.[9]

ಬಸವಕಲ್ಯಾಣದ ಪ್ರಾಚ್ಯವಸ್ತು ಸಂಗ್ರಹಾಲಯದದಲ್ಲಿರುವ ಸುಮಾರು ೧೨ನೆಯ ಶತಮಾನದ ನಿಷಧಿ ಶಾಸನದಲ್ಲಿ ಭದ್ರ ಸೇನಾ ಸಿದ್ಧಾಂತ ದೇವ ಮತ್ತು ಶಿಷ್ಯ ನಯಸೇನ ಮುನಿಯು ಪಾಂಡಿತ್ಯ, ತಪಸ್ಸು ಹೊಂದಿದ್ದನು.[10] ಚಾಕಾಕಾರದ ಸ್ತಂಭದಂತ್ತಿರುವ ಈ ನಿಷಧಿಗಲ್ಲಿನ ಮೇಲ್ಭಾಗದ ಒಂದು ಬದಿಯ ಶಿಲ್ಪ ಪಟ್ಟಿಕೆಯಲ್ಲಿ ಪರ್ಯಂಕಾಸೀನ ಜಿನನಿದ್ದಾನೆ. ಈತನ ಬಲಬದಿಯಲ್ಲಿ ಮುನಿಗಳು ಸಲ್ಲೇಖನ ವ್ರತವನ್ನು ಬೋಧಿಸುತ್ತಿರುವ ಮತ್ತು ಎಡಬದಿಯಲ್ಲಿ ಇಬ್ಬರು ಶ್ರಾವಕರು ಆ ವ್ರತವನ್ನು ಆಲಿಸುತ್ತಿರುವ ನಿರೂಪಣೆ ಸೊಗಸಾಗಿ ಚಿತ್ರಿತವಾಗಿದೆ.ಅದೇ ಸ್ಥಳದಲ್ಲಿರುವ ಕ್ರಿ.ಶ. ೧೧೦೦ರ ಶಾಸನದಲ್ಲಿ ಶಾಸನದ ಆರಂಭದಲ್ಲಿ ಚಂದ್ರಪ್ರಭ ಜಿನಾಲಯವನ್ನು ಕಟ್ಟಿಸಿದ ಕಲ್ಯಾಣದ ಗೋಷ್ಠಿ ಶಾಶ್ವತವಾಗಿರಲಿ ಎಂದಿದೆ. ಹಿಂದೆ ಅನೇಕರು ಬಸದಿಗಳನ್ನು ಕಟ್ಟಿಸಿದ್ದರು. ಕಾಲಾಂತರದಲ್ಲಿ ದಾನಚಿಂತಾಮಣಿ, ಈಗ ರಚ್ಚಮಲ್ಲ ಪೆರ್ಮಾಡಿ ಮತ್ತು ರವಿಯಣ ಎಂಬುವರು ಭಕ್ತಿಯಿಂದಚಂದ್ರ (ನಾಥ) ಬಸದಿಯನ್ನು ಮಾಡಿಸಿದರು. ದೇವಪಾರ್ಯ್ಯ

---

[4]ಡಾ.ಅಪ್ಪಣ್ಣ.ಎನ್. ಹಂಜೆರವರ ; 'ಬೀದರಜಿಲ್ಲೆಯ ಶಾಸನಗಳು' – ಪು.ಸಂಖ್ಯೆ– 74

[5]ಕ.ವಿ.ಶಾ.ಸಂ.– 8 ಭಾಲ್ಕಿ ಶಾ. ಸಂ – 13

[6]ಕ.ವಿ.ಶಾ.ಸಂ.– 8 ಬಸವಕಲ್ಯಾಣ – 53

[7]ಕ.ವಿ.ಶಾ.ಸಂ.– 8 ಬಸವಕಲ್ಯಾಣ – 55

[8]ಕ.ವಿ.ಶಾ.ಸಂ – ಬಸವಕಲ್ಯಾಣ – 56

[9]ಕ.ವಿ.ಶಾ.ಸಂ – ಬಸವಕಲ್ಯಾಣ – 57

[10]ಕ.ವಿ.ಶಾ.ಸಂ.– 8 ಬಸವಕಲ್ಯಾಣ – 16

ಮತ್ತುಚಟ್ಟಪ, ಭರತ, ಶ್ರೀಪತಿ ಮತ್ತು ರಾವದೇವನೆಂಬುವವರು ಈ ಗೋಷ್ಠಿಯಲ್ಲಿದ್ದಂತೆಯೂ, ಇವರೆಲ್ಲರೂ ಈ ಬಸದಿಯ ನಿರ್ಮಾಣಕ್ಕೆ ಸಹಾಯ ಮಾಡಿದಂತೆಯೂ ತಿಳಿಯುತ್ತದೆ. ಜಕ್ಕಣಬೆ ಎಂಬುವವಳು ಈ ಕಾರ್ಯದಲ್ಲಿ ಭಾಗವಹಿಸಿ ಮುನಿಗಣಕ್ಕೆ ಆಹಾರದಾನದ ವ್ಯವಸ್ಥೆಯನ್ನು ಮಾಡಿಸಿದಳು. ಬಸದಿಯ ಸಹಸ್ರಕೂಟ ಬಿಂಬವನ್ನು ವೈಜಪಯ್ಯನ ಹಿರಿಯ ಮಗನಾದ ಹೀರ ಪಾಂಕ ಎಂಬುವವನು ಮಾಡಿಸಿದ ಈಶ್ವರಶೆಟ್ಟಿ ಎಂಬುವವನು ಮಾನಸ್ತಂಭವನ್ನು ಮಾಡಿಸಿದ. ಶಾಸನದಲ್ಲಿ ಮುಂದೆ ಈಶರಾಂಕ, ಪೆರ್ಮಾಡಿ, ರಚ್ಚಮಲ್ಲರ ವಿಯಣ ಮುಂತಾದವರ ಹೊಗಳಿಕೆಯ ಪದ್ಯಗಳಿವೆ.[೧೧]

ಬರೂರದ ಕ್ರಿ.ಶ. ೧೧೧೫ರ ಶಾಸನದಲ್ಲಿ ಮುನಿಗಳು ಮತ್ತುಕಂತಿಯರ (ಅಜ್ಜಿಯರ) ಆಹಾರದಾನಕ್ಕೆ ಪ್ರಭುಗಾವುಂಡರು, ವ್ಯಾಪಾರಿಗಳು, ಪೆರ್ಗ್ಗಡೆಗಳು ಮೊದಲಾದವರುತಾವು ಖರೀದಿಸಿದ ಮತ್ತು ಮಾರಾಟ ಮಾಡಿದ ಸರಕುಗಳ ಮೇಲಿನ ತೆರಿಗೆಗಳನ್ನು ದಾನ ಮಾಡಿದ ನಿರೂಪಣೆಯಿದೆ. [೧೨] ಧನ್ನುರುಗ್ರಾಮದಕ್ರಿ.ಶ. ೧೧೩೨ರ ಶಾಸನದಲ್ಲಿ ಮುನಿಗಳ ಆಹಾರದಾನಕ್ಕೆ ದಂಡನಾಯಕ ಮಹೇಶ್ವರನ ಪುತ್ರ ಮಲ್ಲದೇವ, ಈತನ ಪುತ್ರರಾದ ಗೋಪದೇವ ಮತ್ತು ಪ್ರಧಾನಿ ಕಾಳಿಮಯ್ಯ ಭೂದಾನ ಮಾಡಿದ ಉಲ್ಲೇಖವಿದೆ.[೧೩] ಜೌರಾದ್ ಶಾಸನದಲ್ಲಿ ನಾಗಾಂಬಿಕೆ ಎಂಬುವವಳು ಅಮರವಾಡಿಕೆಯಲ್ಲಿ ಪಾರ್ಶ್ವನಾಥನ ಬಸದಿಯನ್ನು ಕಟ್ಟಿಸಿದಂತೆ ತಿಳಿಸುತ್ತದೆ.[೧೪]

**ಜಿನಾಲಯಗಳು :**

ಬೀದರ ಜಿಲ್ಲೆಯಲ್ಲಿ ಜಿನಾಲಯಗಳ ನಿರ್ಮಾಣ ಪರಂಪರೆ ಪ್ರಾಚೀನ ಕಾಲದಿಂದಲೂ ಕಂಡು ಬರುತ್ತದೆ. ಭಾಲ್ಕಿಯಕ್ರಿ.ಶ. ೧೦೪೯ರ ಶಾಸನದಲ್ಲಿ ಕಲ್ಯಾಣದ ಚಾಲುಕ್ಯ ಮನೆತನದ ಆರನೆಯ ವಿಕ್ರಮಾದಿತ್ಯನ ಮೊಮ್ಮಗ ಮಹಾಮಂಡಳೇಶ್ವರ ಹೆಮ್ಮಾಡಿದೇವನು (ಇಮ್ಮಡಿಜಗದೇಕಮಲ್ಲ) ರಾಜಧಾನಿ ಪಟ್ಟಣ ಭಲ್ಲುಂಕೇಶ್ವರ ದೇವಾಲಯಗಳಿಗೆ ದೀಪದಎಣ್ಣೆಗಾಗಿ ಗಾಣಗಳು ಹಾಗೂ ಗದ್ಯಾಣಗಳನ್ನು ದಾನ ಮಾಡಿದ ಪ್ರಸ್ತಾಪವಿದೆ.[೧೫]

ಈ ಭಾಲ್ಕಿ ಜಿನಾಲಯದ ಕುರಿತು ತಿಳಿಸಬೇಕಾದ ಸ್ಥಳೀಯ ಮಹಾಜನರು ಜೈನಧರ್ಮಿಯರ ಮೇಲೆ ಪರೋಕ್ಷವಾಗಿತಮ್ಮ ಪ್ರಭುತ್ವವನ್ನು ಸಾಧಿಸುವ ಉದ್ದೇಶದಿಂದ ಈ ಜಿನಾಲಯವನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡು ಇದರ ಸಂರಕ್ಷಣೆಯ ಹೊಣೆಹೊತ್ತು.'ಆ ಜಿನನಿಗೂತಮ್ಮ ಬ್ರಹ್ಮನಿಗೂ ಭೇದವಿಲ್ಲ'ವೆಂದು ಬಗೆದು (ಬ್ರಹ್ಮ ಮತ್ತುಜೀನ ಬೇರೆ ಅಲ್ಲ. ಇಬ್ಬರೂ ಒಂದೇ ಎನ್ನುವ ಸಮನ್ವಯತಂತ್ರ).[೧೬]

ಇದಕ್ಕೆ 'ಬ್ರಹ್ಮಜಿನಾಲಯ' ಎಂದು ಹೆಸರಿಟ್ಟರು ಜೊತೆಗೆ ಈ ಜಿನಾಲಯದ ನವರಂಗದಲ್ಲಿ ಚತುರ್ಮುಖ ಬ್ರಹ್ಮನ ಶಿಲ್ಪವನ್ನೂ ಪ್ರತಿಷ್ಠಾಪಿಸಿದರು. [೧೭] ಅಂತಹ ಜಿನಾಲಯಗಳಲ್ಲಿ ಭಾಲ್ಕಿಯ ಬ್ರಹ್ಮಜಿನಾಲಯವೂ ಒಂದಾಗಿದೆ. ಇದು ತೀರ್ಥಕರನ ಜಿನಾಲಯವೆಂಬ ಶಾಸನದಲ್ಲಿ ಸ್ಪಷ್ಟವಿಲ್ಲ. ಆದರೆ ಈ ನಗರದ ಪಶ್ಚಿಮಕ್ಕೆ ದಾಡಿಗಿ ಬೇಸದಲ್ಲಿರುವ (ಅಗಸಿ) ಹನುಮಾನ ದೇವಾಲಯದ ಮುಂಭಾಗದಲ್ಲಿ

---

**[11] ಕ.ವಿ.ಶಾ.ಸಂ.– 8 ಬಸವಕಲ್ಯಾಣ –01**

**[12] ಕ.ವಿ.ಶಾ.ಸಂ.– 8 ಬೀದರ (ಬರೂರ) – 70**

**[13] ಕ.ವಿ.ಶಾ.ಸಂ.– 8 ಬಸವಕಲ್ಯಾಣ (ದನ್ನೂರು) – 49**

**[14] ಕ.ವಿ.ಶಾ.ಸಂ.– 8 ಔರಾದ್ –2**

**[15] ಹಂಪ ನಾಗರಾಜಯ್ಯ 'ಪೂರ್ವೋಕ್ತ' – ಪು.ಸಂಖ್ಯೆ – 69**

**[16] ಕಲಬುರ್ಗಿ ಎಂ.ಎಂ. ಮಾರ್ಗ ಸಂ – 03 –ಪು.ಸಂಖ್ಯೆ– 31–38**

**[17] ಕ.ವಿ.ಶಾ.ಸಂ.– 8 ಭಾಲ್ಕಿ – 02**

ಕ್ರಿ.ಶ. ಸು.೧೧ನೇ ಶತಮಾನದ ಪರ್ಯಂಕಾಸಿನ ತೀರ್ಥಂಕರ ಮತ್ತು ಅಂಬಿಕಾ ಯಕ್ಷಿಯ ಶಿಲ್ಪಗಳಿವೆ. ಇವು ಈ ನಗರದಲ್ಲಿದ್ದ ಬ್ರಹ್ಮಜಿನಾಲಯದಲ್ಲಿ ಪ್ರತಿಷ್ಠಾಪಿತವಾಗಿದ್ದ ಶಿಲ್ಪಗಳಾಗಿವೆ.[೧೮]

ಬಸವಕಲ್ಯಾಣದ ಕ್ರಿ.ಶ. ೧೧೯೨ರ ಶಾಸನದಲ್ಲಿಕಲ್ಯಾಣ ನಗರದಲ್ಲಿ ನಿರ್ಮಿಸಿದ ಜಿನಾಲಯವುಚಂದ್ರ ಪ್ರಭನಾಥನ ಜಿನಾಲಯವನ್ನು 'ಕಲ್ಯಾಣದ ಗೋಷ್ಠಿ'ಯ ಸದಸ್ಯರಾಗಿದ್ದರಚ್ಚಮಲ್ಲ, ರವಿಯಣ್ಣ, ದೇವಪಾರ್ಯ, ಚಟ್ಟಪ್ಪ, ಭರತ, ಶ್ರೀಪತಿ, ರಾಜದೇವ ಮೊದಲಾದವರು ಕೂಡಿಗೊಂಡು ಜೀರ್ಣೋದ್ಧಾರ ಮಾಡಿಸಿ ದಾನದತ್ತಿಗಳನ್ನು ಕೊಡಮಾಡಿದ ಪ್ರಸ್ತಾಪವಿದೆ. [೧೯] ಆದರೆ ಈ ಜಿನಾಲಯಗಳೆಲ್ಲವೂ ಕಾಲಾಂತರದಲ್ಲಿ ನಾಶವಾಗಿದೆ.ಆ ಜಿನಾಲಯಗಳ ಅಳಿದುಳಿದ ವಾಸ್ತುಶಿಲ್ಪ ಅವಶೇಷಗಳನ್ನು ಸ್ಥಳೀಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಸಂಗ್ರಹಿಸಲಾಗಿದೆ.

ಬರೂರದ ಗ್ರಾಮದ ಕ್ರಿ.ಶ ೧೧೧೩ರ ಶಾಸನದಲ್ಲಿ ಬರೂರ ನಗರದ ಶಾಂತಿನಾಥ ಜಿನಾಲಯವು ನಿರ್ಮಿಸಿದರು ಮತ್ತುಕಾಲಾಂತರದಲ್ಲಿ ಜೀರ್ಣೋದ್ದಾರವಾಗುತ್ತದೆ. ಆದರೆ ಹಿಂದೂ-ಮುಸ್ಲಿಂ ವಾಸ್ತು ಸ್ವರೂಪವನ್ನು ಪಡೆದು ಇಂದಿಗೂ ಉಳಿದು ಬಂದಿದೆ, ಆದರೆ ಪ್ರಸ್ತುತ ತುಂಬಾ ಶಿಥಿಲಾವಸ್ಥೆಯಲ್ಲಿದೆ.

ಉಜ್ಜಳಂಬ ಗ್ರಾಮದಕ್ರಿ.ಶ. ೧೧೨೦ರ ಶಾಸನದಲ್ಲಿ ಬಸದಿಯಕಟ್ಟಡದತೊಲೆಯ ಮೇಲೆ ಉಲ್ಲೇಖಗೊಂಡಿದೆ. ತ್ರಿಭುವನಮಲ್ಲನ ಆಳ್ವಿಕೆಯಲ್ಲಿ ಭತ್ತಗ್ರಾಮವಾದ ಉಜ್ಜಳದಲ್ಲಿ ಶ್ರೀಯಮರಸ, ದೇವಣಶೆಟ್ಟಿ, ಬೆನಕಿಶೆಟ್ಟಿ, ಶಂಕರಶೆಟ್ಟಿ, ವರ್ಧಮಾನಶೆಟ್ಟಿ, ಬೀಚಿಶೆಟ್ಟಿ ಮುಂತಾದ ಸಮಸ್ತನಿಖರಗಳು ಉಜ್ಜಳದ ಬಸದಿಗೆ ಜಿನಾಲಯದ ಪೂಜೆ, ಪುನಸ್ಕಾರ, ಸ್ನಾನ, (ಅಭಿಷೇಕ), ನೈವೇದ್ಯಕ್ಕೆ ಕೆಲವು ಸುಂಕಗಳನ್ನು ದಾನ ಮಾಡಿದ ಉಲ್ಲೇಖವಿದೆ. [೨೦] ಆದರೆ ಪ್ರಸ್ತುತ ಈ ಜಿನಾಲಯ ಹಾಳು-ಪಾಳು ಮಾಡಿದ್ದಾರೆ.

ಗೋಟ್ರಾ ಗ್ರಾಮದ ಈ ಎರಡೂ ಶಾಸನಗಳು ಗ್ರಾಮದ ಮಧ್ಯದಲ್ಲಿರುವ ಮಹಾದೇವ ದೇವಾಲಯದ ನವರಂಗದ ದೇವಕೋಷ್ಠಿಗಳ ಕೆಳ ಪೆಟ್ಟಿಕೆಗಳ ಮೇಲಿವೆ. ಈ ದೇವಾಲಯವೇ ಮುನಿಸುವ್ರತ ಸಿದ್ಧಾಂತ ದೇವನ ಶಿಷ್ಯೆ ಪದ್ಮಾವತಿ ಮಾಡಿಸಿದ ಜಿನಾಲಯವಾಗಿದೆ.ಆದರೆ ಇದು ಯಾವ ತೀರ್ಥಂಕರನ ಜಿನಾಲಯವಾಗಿತ್ತೆಂದು ಸ್ಪಷ್ಟವಾಗಿಲ್ಲ.[೨೧]

**ಜೈನಧರ್ಮದಮತ್ತು ಜಿನಾಲಯಗಳ ಅವನತಿ :**

ಬೀದರ ಜಿಲ್ಲೆಯಲ್ಲಿ ಕ್ರಿ.ಶ. ೯-೧೦ನೆಯ ಶತಮಾನದಲ್ಲಿ ರಾಷ್ಟ್ರಕೂಟರು ಜೈನಧರ್ಮಕ್ಕೆ ಹೆಚ್ಚಿನ ಮನ್ನಣೆ ನೀಡಿದ್ದರು.ಈ ಧರ್ಮ ವ್ಯಾಪಕವಾಗಿ ಹರಡಲು ಕಾರಣರಾದರು. ಆದರೆಇದು ಬಹುಕಾಲ ಮುಂದುವರಿಯಲಿಲ್ಲ. ಇವರ ನಂತರ ಅಧಿಕಾರಕ್ಕೆ ಬಂದ ಕಲ್ಯಾಣ ಚಾಲುಕ್ಯರು ಹಿಂದಿನಿಂದ ಬಂದ ಧರ್ಮಸಹಿಷ್ಣುತೆ ತತ್ವವನ್ನು ಪಾಲಿಸಿಕೊಂಡು ಬಂದರು. ಇವರ ಬಳಿಕ ಅಧಿಕಾರಕ್ಕೆ ಬಂದ ಕಲಚೂರಿಗಳು, ಸೇವುಣರು, ವಾರಂಗಲ್ಲಿನ ಕಾಕತೀಯರ ಕಾಲದಲ್ಲಿ ಜೈನಧರ್ಮದ ಹಿನ್ನಡೆಯಾಯಿತು. ಕ್ರಿ.ಶ. ೧೨ನೇ ಶತಮಾನದಲ್ಲಿ ಕಲಚೂರಿಗಳು ಕೆಲವೇ ವರ್ಷ ಸ್ವತಂತ್ರವಾಗಿ ರಾಜ್ಯಭಾರ ಮಾಡಿದವರಾದರು, ಇವರ ಬಳಿಕ ಅಧಿಕಾರಕ್ಕೆ ಬಂದ ಕಲಚೂರಿಗಳು, ಸೇವುಣರು, ವಾರಂಗಲ್ಲಿನ ಕಾಕತೀಯರ ಕಾಲದಲ್ಲಿ ಜೈನಧರ್ಮದ ಹಿನ್ನಡೆಯಾಗುತ್ತಾ ನಡೆಯಿತು. ಕ್ರಿ.ಶ. ೧೨ನೇ ಶತಮಾನದಲ್ಲಿ ಕಲಚೂರಿಗಳು ಕೆಲವೇ ವರ್ಷ ಸ್ವತಂತ್ರವಾಗಿ ರಾಜ್ಯಭಾರ ಮಾಡಿದರಾದರು, ಇವರ ಅವಧಿಯಲ್ಲಿ ವೀರಶೈವ ಧರ್ಮದ ಅಭಿವೃದ್ಧಿಗೆ ಕಾರಣರಾದ ಅನೇಕ ಶರಣರಿಂದ ಜೈನಧರ್ಮ ಆಘಾತಕ್ಕಿಡಾಯಿತು. ಇದರಿಂದ ಬೀದರ

[18]ಕ್ಷೇತ್ರಕಾರ್ಯಅಧ್ಯಾಯನ ಫಲಕೃತಿ

[19]ಕ.ವಿ.ಶಾ.ಸಂ.– 8 ಬಸವಕಲ್ಯಾಣ – 01

[20] ಕ.ವಿ.ಶಾ.ಸಂ.– 8, ಬಸವಕಲ್ಯಾಣ – 58

[21]ಕ.ವಿ.ಶಾ.ಸಂ – 8; ಬಸವಕಲ್ಯಾಣ –56–57

ಜಿಲ್ಲೆ ಪರಿಸರದಲ್ಲಿ ಹಲವು ಬಸದಿಗಳಲ್ಲೆ ಈಶ್ವರ ದೇಗುಲುಗಳಾಗಿ ಪರಿವರ್ತಿತಗೊಂಡು, ಅಲ್ಲಿದ್ದ ಜೈನ ಮೂರ್ತಿಗಳು ಬಸದಿಗಳಿಂದ ಹೊರದೂಡಲ್ಪಟ್ಟವು. ಕ್ರಿ.ಶ. ೧೪–೧೬ನೇ ಶತಮಾನದಲ್ಲಿ ದೆಹಲಿ ಸುಲ್ತಾನರು, ಬಹುಮನಿ, ನಿಜಾಮರು ಈ ಪ್ರದೇಶದಲ್ಲಿ ಆಧಿಪತ್ಯಕ್ಕಾಗಿ ಅನೇಕ ಕಲಹಗಳು ಜರುಗಿದವು. ಈ ಹೊತ್ತಿಗೆ ಬೀದರ ಜಿಲ್ಲೆಯಲಿ ಜೈನಧರ್ಮೀಯರ ಸಂಖ್ಯೆ ಇಳಿಮುಖವಾಗುವುದರೊಂದಿಗೆ, ಜಿನ ಬಸದಿಗಳು ರಕ್ಷಣೆಯಿಲ್ಲದೆ ಕ್ರೂರಕೃತ್ಯಕ್ಕೆ ಅಣಿಯಾದವು. ಇದಾದ ಹಲವು ವರ್ಷಗಳ ತರುವಾಯ ಈ ಜಿಲ್ಲೆಯಲ್ಲಿ ನಿಧಿ ಶೋಧಕ ಗುಂಪು ಮೂರ್ತಿ ಶಿಲ್ಪಗಳಲ್ಲಿ ಹಣ ಬಂಗಾರವಿರುತ್ತದೆಯೆಂಬ ತಪ್ಪುಕಲ್ಪನೆಯಿಂದ ಹೊರಬಿದ್ದ ಜಿನ ಶಿಲ್ಪಗಳನ್ನು ಒಡೆದು ತುಂಡರಿಸಿದರು. ಆದುದರಿಂದ ಇಂದು ಬೀದರಜಿಲ್ಲೆಯ ಯಾವುದೇ ಸ್ಥಳದಲ್ಲಿ ಉತ್ತಮ ಸ್ಥಿತಿಯಲ್ಲಿರುವ ಬಸದಿಗಳು ಕಂಡುಬರದೇ ಕೇವಲ ಭಗ್ನಗೊಂಡಜಿನ ಶಿಲ್ಪ ಮತ್ತು ಶಾಸನಗಳನ್ನು ಕಾಣಬಹುದಾಗಿದೆ.[೨೨]

ಬೀದರನಲ್ಲಿ ಜಿನಾಲಯಗಳನ್ನು ನಿರ್ಮಿಸುವುದರೊಂದಿಗೆ ನಾಡಿನಾದ್ಯಂತ ಶಿಥಿಲಾವಸ್ಥೆಯಲ್ಲಿದ್ದ ಅನೇಕ ಜಿನಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿದ ಸಂಗತಿ ಮನದಟ್ಟಾಗುತ್ತದೆ. ಈ ಪ್ರದೇಶದ ಉಜ್ಜಳಂಬ, ಉಮಾಪುರ, ಘರತಾಪುರ, ಗೋರಟಾ(ಬಿ), ಬಸವಕಲ್ಯಾಣ, ಮೀರಕಲ್ಲು, ಸಸ್ತಾಪುರ, ಹುಲಸೂರು, ಶಿವಪುರ, ಮೋರಖಂಡಿ, ಅಳವಾಯಿ, ಧನ್ನುರಾ (ಎಚ್), ಭಾಲ್ಕಿ, ಲಖಣಗಾಂವ, ಹಲಸಿ, ಬೇಲೂರು, ಅಲಿಯಂಬರ, ಕಮಠಾಣ, ಕಾಡವಾದ, ಬರೂರು, ಬೀದರ, ಜೌರಾದ, ಜವಳಗಾ, ಚಿಟಗುಪ್ಪ, ಬೋರಂಪಳ್ಳಿ, ಹಳ್ಳಿಖೇಡ ಮೊದಲಾದ ಗ್ರಾಮಗಳಲ್ಲಿ ಜಿನಾಲಯಗಳ ನಿರ್ಮಾಣ ಮತ್ತುಜೀರ್ಣೋದ್ಧಾರ, ಚಟುವಟಿಕೆಗಳು ಜರುಗಿವೆ. ಅವುಗಳಲ್ಲಿ ಕೆಲವು ಜಿನಾಲಯಗಳು ನಾಶವಾಗಿವೆ. ಮತ್ತೆ ಕೆಲವು ಪರಿವರ್ತಿತವಾಗಿದೆ. ಪ್ರಸ್ತುತ ಉಳಿದು ಬಂದಿರುವ ಬಹುತೇಕ ಜಿನಾಲಯಗಳು ಕ್ರಿ.ಶ.ಸು ೧೭ನೆಯ ಶತಮಾನದಿಂದೀಚೆಗೆಜೀರ್ಣೋದ್ಧಾರವಾಗಿವೆ. ಆ ಸಂದರ್ಭದಲ್ಲಿ ಈ ಪ್ರದೇಶವು ಮುಸ್ಲಿಂ ಅರಸು ಮನೆತನಗಳ ಪ್ರಭಾವದಲ್ಲಿತ್ತು.ಹಾಗಾಗಿ ಜಿನಾಲಯಗಳ ಜೀರ್ಣೋದ್ಧಾರದ ಸಂದರ್ಭದಲ್ಲಿ ಹಿಂದೂ ಮುಸ್ಲಿಂ ವಾಸ್ತು ಲಕ್ಷಣಗಳನ್ನು ಅಳವಡಿಸಲಾಗಿರುವುದು ಗೋಚರಿಸುತ್ತದೆ.

ಇವುಗಳ ಭಿತ್ತಿಗಳ ರಚನೆಯಲ್ಲಿಗಾರೆ ಮತ್ತು ಗಚ್ಚನ್ನು ಯಥೇಚ್ಛವಾಗಿ ಉಪಯೊಗಿಸಲಾಗಿದೆ. ಕಟ್ಟಡಗಳಲ್ಲಿ ಆದ ಬದಲಾವಣೆಗಳು ಇದಕ್ಕೆ ಭಾಲ್ಕಿಯ ಬ್ರಹ್ಮಜಿನಾಲಯ, ಕಮಠಾಣದ ಪಾರ್ಶ್ವನಾಥಜಿನಾಲಯ, ಹುಮನಾಬಾದ ಶಾಂತಿನಾಥ ಮತ್ತು ಆದಿನಾಥ ಜಿನಾಲಯಗಳು ಬೀದರ ನಗರದಚಂದ್ರಪ್ರಭನಾಥಜಿನಾಲಯಉತ್ತಮ ನಿದರ್ಶನಗಳಾಗಿವೆ.

ಇತ್ತೀಚಿಗೆ ನಿರ್ಮಾಣವಾಗಿರುವ ಜಿನಾಲಯಗಳ ವಾಸ್ತು ರಚನೆಯಲ್ಲಿಯೂ ಮುಸ್ಲಿಂ ವಾಸ್ತು ಲಕ್ಷಣಗಳ ಪ್ರಭಾವ ವ್ಯಾಪಕವಾಗಿದೆ.ಈ ಪ್ರಭಾವಇತರೆಧರ್ಮದ ದೇವಾಲಯಗಳ ವಸ್ತು ರಚನೆಗಳಲ್ಲಿಯೂ ಗೋಚರಿಸುತ್ತದೆ.



[22]ಕ್ಷೇತ್ರಕಾರ್ಯದ ಫಲಶೃತಿ ಮತ್ತು ಬೀದರಜಿಲ್ಲೆಯಧಾರ್ಮಿಕ ಹಿನ್ನಲೆ

## ಕಲ್ಯಾಣ ಕ್ರಾಂತಿಯ ಫಲಿತಗಳು–ಒಂದು ಅವಲೋಕನ.

**–ಡಾ. ಆನಂದ ಮಾಣಿಕರಾವ,**
ಮು॥ ಪೋ॥ ರಾಜೇಶ್ವರ,
ಬಸವಕಲ್ಯಾಣ ತಾಲೂಕು, ಬೀದರ ಜಿಲ್ಲೆ.

ಪ್ರಪಂಚದಲ್ಲಿ ನಡೆದು ಹೋಗಿರುವ ಅನೇಕ ಕ್ರಾಂತಿಗಳಲ್ಲಿ ಅದ್ವಿತೀಯವಾದದ್ದು. ಹನ್ನೆರಡನೆಯ ಶತಮಾನದ ಕಲ್ಯಾಣ ಕ್ರಾಂತಿ. ಈ ಕ್ರಾಂತಿಯ ನೇತಾರ ಯುಗಪುರುಷ ಬಸವಣ್ಣನವರು. ಈ ಕ್ರಾಂತಿ ಹೆಣ್ಣು, ಹೊನ್ನು, ಮಣ್ಣಿಗಾಗಿ ನಡೆದ ಕ್ರಾಂತಿಯಲ್ಲ. ಅದು ಸರ್ವಸಮಾನತೆಗಾಗಿ, ಸಾಮಾಜಿಕ ನ್ಯಾಯಕ್ಕಾಗಿ, ನೈತಿಕ ಮಾಲ್ಯಗಳ ಸ್ಥಾಪನೆಗಾಗಿ ಮತ್ತು ಸತ್ಯಧರ್ಮದ ಸ್ಥಾಪನೆಗಾಗಿ ನಡೆದ ಸಮಗ್ರ ಕ್ರಾಂತಿ. ಅಂತೆಯೇ ವಿಶ್ವದ ಇತರ ಕ್ರಾಂತಿಗಳಿಗಿಂತ ಕಲ್ಯಾಣ ಕ್ರಾಂತಿ ವಿಭಿನ್ನವಾದದ್ದು ಮತ್ತು ವಿಶಿಷ್ಟವಾದದ್ದು.

ಈ ಕ್ರಾಂತಿಯಲ್ಲಿ ವಿಶ್ವಗುರು ಬಸವಣ್ಣನವರ ಹೆಗಲಿಗೆ ಹೆಗಲಾಗಿ ಹೋರಾಡಿದವರು ಏಳೂನುರಾ ಎಪ್ಪತ್ತು (೭೭೦) ಅಮರಗಣಂಗಳೂ, ಲಕ್ಷದ ಮೇಲೆ ತೊಂಭತ್ತಾರು ಸಾವಿರ (೧,೯೬,೦೦೦) ಚರ ಜಂಗಮರು. ಅಂದಿನ ಸಮಾಜ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ತರದ ಅಸ್ಪೃಶ್ಯರಿಂದ ಉತ್ತಮ ಕುಲದವರವರೆಗೆ ಎಲ್ಲಾ ಸ್ತರದ ಜನರು ಪಾಲ್ಗೊಂಡಿದ್ದು ಈ ಕ್ರಾಂತಿಯ ವಿಶೇಷ. ವ್ಯಕ್ತಿ ಕಲ್ಯಾಣ, ಸಮಾಜ ಕಲ್ಯಾಣ, ರಾಷ್ಟ್ರ ಕಲ್ಯಾಣ, ಮತ್ತು ವಿಶ್ವ ಕಲ್ಯಾಣಕ್ಕಾಗಿ ನಡೆದ ಕ್ರಾಂತಿ ಇದು. ಕಲ್ಯಾಣವೆಂದರೆ ಅದೊಂದು ಭೌತಿಕ ಪ್ರದೇಶ ಮಾತ್ರವಲ್ಲ. ಲೇಸು, ಒಳಿತು ಅಭ್ಯುದಯ ಎಂಬುದು ಕಲ್ಯಾಣ ಪದದ ಅರ್ಥಗಳು. ಲೋಕದ ಜನರ ಒಳಿತನ್ನು ಬಯಸುವದೇ ಕಲ್ಯಾಣ ಕ್ರಾಂತಿಯ ಬದಲಾವಣೆಯ ಉದ್ದೇಶವಾಗಿತ್ತು. ದೈವೀ ರಾಜ್ಯವನ್ನೇ ಕಲ್ಯಾಣ ರಾಜ್ಯವೆಂದು ಕರೆಯಬಹುದು. ಕ್ರಾಂತಿಯೆಂದರೆ ಕೇವಲ ಸುಧಾರಣೆ ಅಥವಾ ಬದಲಾವಣೆ ಅಲ್ಲ. ಶತ ಶತಮಾನಗಳಲ್ಲಿ ಕಾಣಾಲಾಗದ, ಆದರೆ ಕೇಲವೇ ವರ್ಷಗಳಲ್ಲಿ ಊಹೆಗೂ ನಿಲುಕದ ಅಮೂಲಾಗ್ರ ಬದಲಾವಣೆಯೇ ಕ್ರಾಂತಿಯೆನಿಸಿಕೊಳ್ಳುವದು. ಅವ್ಯವಸ್ಥೆಯನ್ನು ಹೊಡೆದೊಡಿಸಿ ಸುವ್ಯವಸ್ಥೆಯನ್ನು ಸ್ಥಾಪಿಸುವದೇ ಕ್ರಾಂತಿಯ ಗುರಿ.

ಬಸವಣ್ಣನವರ ನವಸಮಾಜ ನಿರ್ಮಾಣದ ಕಲ್ಯಾಣ ಕ್ರಾಂತಿಯ ಗ್ರೀಕ ದೇಶದ ಪ್ಲೆಟೋನ ಕನಸಿನ ರಾಜ್ಯಕ್ಕಿಂತ ಭಿನ್ನವಾದದ್ದು. ಪ್ಲೆಟೋನದು ಸುಖಿ ರಾಜ್ಯವಾದರೆ, ಬಸವಣ್ಣನವರ ಗುರಿ ಕಲ್ಯಾಣ ರಾಜ್ಯ. ಸುಖ ಕೇವಲ ವ್ಯಕ್ತಿಗೆ ಸಂಬಂಧಿಸಿದ್ದಾಗಿದೆ. ಆದರೆ ಕಲ್ಯಾಣ ಎಂಬುದು ವ್ಯಕ್ತಿ ಮತ್ತು ಸಮಾಜದ ಅಭ್ಯುದಯಕ್ಕೆ ಸಂಬಂಧಿಸಿದೆ. ಅನೇಕರು ಕಷ್ಟಪಟ್ಟರು ಚಿಂತೆಯಿಲ್ಲ, ತಾನೊಬ್ಬ ಸುಖಿಯಾದರೆ ಸಾಕು ಎನ್ನುತ್ತಾನೆ. ಸುಖ ಬಯಸುವಾತ. ಅನೇಕರಿಗೆ ಸುಖವಾಗುವಾದಾದರೆ, ಹಿತವಾಗುವದಾದರೆ ಸ್ವತಃ ಕಷ್ಟಪಡಲು ಸಿದ್ಧವಾಗುತ್ತಾನೆ ಕಲ್ಯಾಣ ಬಯಸುವವ ಸುಖ ಬಯಸುವವರು ನದಿ ನೀರನ್ನು ಬೊಗಸೆಯಲ್ಲಿ ಹಿಡಿದವರಂತೆ ಸ್ವಲ್ಪ ಕಷ್ಟ ಬಂದರೂ ಸಾಕು ಸಹಿಸಲಾರರು. ಕಲ್ಯಾಣ ಬಯಸುವವರು ಕಷ್ಟವನ್ನು ಗಂಡಾಂತರಗಳನ್ನು ಅಪ್ಪಿಕೊಳ್ಳಲು ಸಿದ್ಧರಾಗಿರುತ್ತಾರೆ. ಸಕಲ ಜೀವಾತ್ಮರಿಗೆ ಲೇಸಾಗುವ ಕಾರ್ಯದಲ್ಲಿ ಮರಣವನ್ನು ಮಹಾನವಮಿಯಾಗಿ ಸ್ವೀಕರಿಸುವ ಎದೆಗಾರಿಕೆಯುಳ್ಳವರಾಗಿರುತ್ತಾರೆ.

ಬಸವ ಪೂರ್ವದ ಸಮಾಜದಲ್ಲಿ ಮೂಢ ನಂಬಿಕೆಯಿಂದ ಕಂದಾಚಾರಗಳು ತುಂಬಿ ತುಳುಕುತ್ತಿದ್ದವು. ಧರ್ಮದ ಹೆಸರಿನಲ್ಲಿ ಗುಡಿ ಗುಂಡಾರಗಳು ಶೋಷಣೆಯ ಕೇಂದ್ರಗಳಾಗಿದ್ದವು. ಸನಾತನ ಧರ್ಮದ ಆಚರಣೆ ಹೇರಲ್ಪಟ್ಟಿತ್ತು. ಇದರ ಪ್ರಕಾರ ವರ್ಣಾಶ್ರಮ ಪದ್ಧತಿ ಜಾರಿಯಲ್ಲಿದ್ದು ಸಮಾಜವನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ವಿಂಗಡಿಸಲಾಗಿತ್ತು. ಬಹು ಸಂಖ್ಯಾತ ದುಡಿಯುವ ವರ್ಗದವರನ್ನು ಶೂದ್ರ ವರ್ಗಕ್ಕೆ ಸೇರಿಸಲಾಗಿತ್ತು. ಅವರಲ್ಲಿ ಪಂಚಮರು ಎಂದು ಕರೆಯಲ್ಪಟ್ಟ ಅಸ್ಪೃಶ್ಯರೂ ಇದ್ದರು ಶೂದ್ರರು ಅಕ್ಷರ ಕಲಿಯುವಂತಿರಲಿಲ್ಲ. ವೇದಶಾಸ್ತ್ರ ಓದಬಾರದು ಕೇಳಬಾರದು. ಇವರ ನೆರಳು ಸಹ ಉತ್ತಮರ ಮೇಲೆ ಬೀಳಬಾರದು. ಉತ್ತಮರ ಕೇರಿ ಪ್ರವೇಶಿಸಬೇಕಾದರೆ ಕೊರಳಿಗೆ ಗಡಿಗೆ ಮತ್ತು ಬೆನ್ನಿಗೆ ಕಸಬಾರಿಗೆ ಕಟ್ಟಿಕೊಂಡು ನಡು ಮಧ್ಯಾಹ್ನ ಸಂಬೋಳಿ ಸಂಬೋಳಿ ಎನ್ನುತ್ತ ಊರ

ಪ್ರವೇಶಿಸತಕ್ಕದೆಂಬ ಕಟ್ಟಳೆ ಪ್ರಾಣಗಳಂತೆ ಬದುಕುತ್ತಾ ಮೇಲ್ವರ್ಗದವರ ಸೇವೆಗಾಗಿ ದುಡಿಯುವದೇ ತಮ್ಮ ಭಾಗ್ಯ ಎಂದುಕೊಳ್ಳಬೇಕಾದ ಚಿಂತಾಜನಕ ಸ್ಥಿತಿ. ಇದಕ್ಕೆ ಕರ್ಮಸಿದ್ಧಾಂತದ ಬೆಂಬಲ. ಹೀಗೆ ತಾನು ಕಾರಣವಲ್ಲದ ತಪ್ಪಿಗೆ ನರಕಯಾತನೆ ಅನುಭವಿಸಬೇಕಾದ ಸ್ಥಿತಿ ಎಲ್ಲೆಡೆ ತುಂಬಿತ್ತು. ದೇವರು ಮತ್ತು ಧರ್ಮದ ಹೆಸರಿನಲ್ಲಿ ಶೋಷಣೆ, ಅನ್ಯಾಯ, ಅತ್ಯಾಚಾರ, ಮೋಸ, ವಂಚನೆಗಳು ವಿಜೃಂಭಿಸುತ್ತಿದ್ದವು.

ಸನಾತನ ಧರ್ಮ ವ್ಯವಸ್ಥೆಯಲ್ಲಿ ಸಮಾಜದ ಅರ್ಧ ಭಾಗವಾದ ಸ್ತ್ರೀಯರನ್ನು ಶೂದ್ರವರ್ಗಕ್ಕೆ ಸೇರಿಸಲಾಗಿತ್ತು. ಆಕೆಯನ್ನು ಮಾಯೆ ಎಂದು ಕರೆದು ಕೇವಲ ಭೋಗರ ವಸ್ತುವನ್ನಾಗಿ ನೋಡುತ್ತಿದ್ದರು. ಹೆಣ್ಣು ಮೋಕ್ಷಕ್ಕೆ ಅರ್ಹಳಲ್ಲ. ದೇವರ ಪೂಜೆ ಮಾಡುವ ಹಾಗಿಲ್ಲ. ಅವಳಿಗೆ ಓದುವ ಮತ್ತು ಬರೆಯುವ ಹಕ್ಕಿರಲಿಲ್ಲ. ಹೀಗೆ ಹೆಣ್ಣಿನ ಬಾಳು ಗೋಳಾಗಿತ್ತು. ಆಕೆ ಕಣ್ಣೀರಿನಿಂದ ಕೈತೊಳೆಯಬೇಕಾಗಿತ್ತು.

ವರ್ಣಾಶ್ರಮ ಪದ್ಧತಿಯ ಪಾಲನೆಯೇ ರಾಜಧರ್ಮವಾಗಿತ್ತು. ಇಂಥ ಅಂಧಕಾರಮಯವಾದ ಸನ್ನಿವೇಶದಲ್ಲಿ ಬಸವ ಭಾಸ್ಕರನ ಉದಯವಾಯಿತು.

**"ಕಾರ್ತಿಕದ ಕತ್ತಲಲ್ಲಿ ಆಕಾಶ ದೀಪವಾಗಿ ನೀ ಬಂದೆ**
**ಬಟ್ಟೆಗೆಟ್ಟವರಿಗೊಂದು ದೊಂದಿದಕ್ಕಾಗಿ**
**ಎಂಟು ಶತಮಾನಗಳ ಹಿಂದೆ**
**ಅಗ್ನಿಖಡ್ಗವನಾಂತ ಓ ಅಧ್ಯಾತ್ಮ ಕ್ರಾಂತಿವೀರ**
**ದೇವ ದಯೆಯೊಂದು ಹೇ ದೀರಾವತಾರ**
**ಶ್ರೀ ಬಸವೇಶ್ವರ!"**[೧]

ಮರ್ತ್ಯಲೋಕದಲ್ಲಿ ತುಂಬಿದ್ದ ಅಜ್ಞಾನದ ಕತ್ತಲೆಯನ್ನು ಕಳೆಯಲು ಆಕಾಶ ದೀಪವಾಗಿ ಬಂದ ಆಧ್ಯಾತ್ಮ ಕ್ರಾಂತಿವೀರ ಬಸವಣ್ಣನೆಂದು ರಾಷ್ಟ್ರಕವಿ ಕುವೆಂಪು ಬಣ್ಣಿಸಿದ್ದಾರೆ. ಬಾಗೇವಾಡಿಯಲ್ಲಿ ಜನಿಸಿ, ಕಲ್ಯಾಣಕ್ಕೆ ಬಂದ ಬಸವಣ್ಣನವರು ಸರ್ವ ರೀತಿಯ ಶೋಷಣೆಗಳಿಂದ ಮಾನವ ಕುಲವನ್ನು ಮುಕ್ತಗೊಳಿಸಿ, ಶರಣರ ಕಲ್ಯಾಣವನ್ನು ಭೂಲೋಕದ ಕೈಲಾಸವನ್ನಾಗಿ ಮಾಡಿದರು.

ಸಮಾಜದಲ್ಲಿಯ ಜಾತಿಭೇದ, ವರ್ಗಭೇದ, ವರ್ಣಭೇದ ಮತ್ತು ಲಿಂಗಬೇದಗಳನ್ನು ಸೂಕ್ಷ್ಮವಾಗಿ ಗಮನಿಸಿದ ಬಸವಣ್ಣನವರು ಅವುಗಳನ್ನು ತೊಲಗಿಸಲು ಕಂಕಣಬದ್ಧರಾದರು. ಎಲ್ಲಾ ಬಗೆಯ ಶೋಷಣೆಗಳಿಂದ ಬಿಡುಗಡೆಗೊಳಿಸಿ, ಹೊಸ ಕಲ್ಯಾಣ ರಾಜ್ಯ ಕಟ್ಟಲು ಹೋರಾಟಕ್ಕಿಳಿದರು.

ವೇದ ಶಾಸ್ತ್ರಗಳನ್ನು ಸಾಕ್ಷಿಯಾಗಿಸಿಕೊಂಡು ಪಂಡಿತ ಪುರೋಹಿತರು ಜನರನ್ನು ಅಜ್ಞಾನದ ಕೋಪಕ್ಕೆ ತಳ್ಳಿದ್ದಾರೆಂಬುದನ್ನು ಅರಿತ ಬಸವಣ್ಣನವರು ಮೊದಲಿಗೆ ವೇದ ಶಾಸ್ತ್ರಗಳನ್ನು ದಿಕ್ಕರಿಸಿದರು.

**"ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ।**
**ವೇದ ಘನವೆಂಬೆನೆ? ಪ್ರಾಣವಧೆಯ ಹೇಳುತ್ತಿದೆ!**
**ಶ್ರುತಿ ಘನವೆಂಬೆನೆ? ಮುಂದಿಟ್ಟು ಅರಸುತ್ತಿದೆ!**
**ಅಲ್ಲೆಲ್ಲಿಯೂ ನೀವಿಲ್ಲದ ಕಾರಣ,**
**ತ್ರಿವಿಧ ದಾಸೋಹದಲ್ಲಲ್ಲದೆ ಕಾಣಬಾರದು,**
**ಕೂಡಲಸಂಗಮದೇವನ!"**[೨]

ಅವುಗಳಲ್ಲಿನ ಹುಳುಕುಗಳನ್ನೆಲ್ಲವನ್ನು ಎಳೆ ಎಳೆಯಾಗಿ ಬಿಚ್ಚಿಟ್ಟು, ಇವೆಲ್ಲಕ್ಕಿಂತ ಆತ್ಮಸಾಕ್ಷಿ ಮುಖ್ಯವೆಂದರು. ಇಂದಿಗೂ ಬಹುದೊಡ್ಡ ಪಿಡುಗಾಗಿರುವ ಬಹುದೇವೋಪಾಸನೆಯನ್ನು ಮತ್ತು ಕ್ಷುತ್ರ ದೇವತೆಗಳ ಪೂಜೆಯನ್ನು ಉಗ್ರವಾಗಿ ಅಲ್ಲಗಳೆದು, ಏಕದೇವೋಪಾಸನೆಯನ್ನು ಬೋಧಿಸಿದರು.

**"ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ,**
**ಒಬ್ಬನೆ ಕಾಣಿರೆ, ಇಬ್ಬರೆಂಬುದು ಹುಸಿ ನೋಡಾ,**
**ಕೂಡಲ ಸಂಗಮದೇವನಲ್ಲದೆ ಇಲ್ಲವೆಂದಿತ್ತು ವೇದ"**[೩]

ದೇವರ ನಿಜವಾದ ಸ್ವರೂಪದ ಅರಿವಿಲ್ಲದೆ ಬಳಲುತ್ತಿದ್ದ ಮಾನವ ಕುಲಕ್ಕೆ ಸರಿಯಾದ ನಿರಾಕಾರ ದೇವರ ಸ್ವರೂಪ ತಿಳಿಸಿಕೊಟ್ಟರು.

**"ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ,**
**ಪಾತಾಳದಿಂದ ಅತ್ತತ್ತ ನಿಮ್ಮ ಶ್ರೀ ಚರಣ,**
**ಬ್ರಹ್ಮಾಂಡದಿಂದ ಅತ್ತತ್ತ ನಿಮ್ಮ ಶ್ರೀಮುಕಟ,**
**ಅಗಮ್ಯ, ಅಗೋಚರ ಅಪ್ರತಿಮ ಲಿಂಗವೆ,**
**ಕೂಡಲಸಂಗಮದವಯ್ಯಾ,**
**ನಿವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ!"[೮]**

ದೇವ ಮತ್ತು ಭಕ್ತನ ನಡುವೆ ಮಧ್ಯವರ್ತಿಗಳ ಅವಶ್ಯಕತೆ ಇಲ್ಲವೆಂದು ಪ್ರತಿವಾದಿಸಿ ಪೂಜಾರಿ ಪದ್ಧತಿಗೆ ತಿಲಾಂಜಲಿ ಇಟ್ಟರು. ಯಾರು ಬೇಕಾದರೂ ದೇವರನ್ನು ನೇರವಾಗಿ ಭಕ್ತಿಯಿಂದ ಪೂಜಿಸಬಹುದು ಆರಾಧಿಸಬಹುದು ಮನದಟ್ಟು ಮಾಡಿದರು. ತಮ್ಮ ಆಡುಭಾಷೆಯ ಮೂಲಕವೇ ದೇವನನ್ನು ಒಲಿಸಲು ಸಾಧ್ಯವೆಂದು ಸಾರಿದರು. ಜಾತಿ ವರ್ಣ ವರ್ಗ ಲಿಂಗ ಬೇಧಗಳ ಹಿಂದಿರುವ ಪುರೋಹಿತಶಾಹಿಗಳ ಕುತಂತ್ರ ಬಯಲು ಮಾಡಿದರು. ಹುಟ್ಟಿನಿಂದ ಕೆಲವರು ಶ್ರೇಷ್ಠ ಇನ್ನು ಕೆಲವರು ಕನಿಷ್ಠ ಆಗಲಿ ಹೇಗೆ ಸಾಧ್ಯವೆಂದು ಪ್ರಶ್ನಿಸಿದರು? ಎಲ್ಲರೂ ಹುಟ್ಟುವುದು ಒಂದೇ ಬಗೆಯಾಗಿರುವಾಗ, ಎಲ್ಲರಲ್ಲಿ ಹರಿಯುವ ರಕ್ತ ಒಂದೇ ಬಣ್ಣದ್ದಾಗಿರುವಾಗ ಈ ಮೇಲು ಕೀಳುಗಳು ದೇವ ದೇವ ನಿರ್ಮಿತವಾಗಿರದೆ ಮಾನವ ಕಲ್ಪಿತವೆಂದು ಆಧಾರ ಸಹಿತ ಸಾಬೀತು ಪಡಿಸಿದರು. ತನಗೆ ದೊರೆತ ಸಕಲ ಸೌಲಭ್ಯಗಳು ಕಟ್ಟಕಡೆಯ ವ್ಯಕ್ತಿಗೂ ದೊರೆಯುವಂತಾಗಲು ಹಗಲಿರಳು ದುಡಿದರು.

"ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ,
ಹಾಸನಿಕ್ಕಿ ಸಾಲಿಗನಾದ ವೇದವನೋದಿ ಹಾರುವನಾದ,
ಕರ್ಣದಲ್ಲಿ ಜನಿಸಿದವರುಂಟೆ? ಜಗದೊಳಗೆ"[೨]

ಎಂದು ಖಾರವಾಗಿ ಪ್ರಶ್ನಿಸಿ, ಹುಟ್ಟನ್ನು ಮೂಲವಾಗಿರಿಸಿಕೊಂಡು, ಮಾನವ ಮಾನವರಲ್ಲಿ ಭೇದ ಮಾಡುವರು ಅವೈಜ್ಞಾನಿಕ ಮತ್ತು ಅಮಾನುಷವಾದದು ಎಂದರು. ಶ್ರೇಷ್ಠ ಕುಲದವರೆನಿಸಿಕೊಂಡವರ ಮೇಲರಿಮೆಯನ್ನು ಮತ್ತು ಕೀಳು ಕುಲದವರೆನಿಸಿಕೊಂಡವರ ಕೀಳರಿಮೆಯನ್ನು ಏಕ ಕಾಲಕ್ಕೆ ಕಿತ್ತೆಸೆದರು. ದೇವನೊಬ್ಬನೆ ತಂದೆ ಮನುಜರೆಲ್ಲರೂ ಒಂದೇ. ಎಲ್ಲರೂ ದೇವನ ಮಕ್ಕಳು. ದೇವ ಸ್ಮರಣೆಯಲ್ಲಿರುವವರು. ಉತ್ತಮ ನಡತೆಯುವಳ್ಳವರೇ ಶ್ರೇಷ್ಠರು ಎಂದು ಸಾರಿದರು. ಅಂಧಶ್ರದ್ಧೆ ಮತ್ತು ಮೂಢನಂಬಿಕೆಗಳ ಮೋಲೋತ್ಪಾಟನಕ್ಕೆ ಕೈಯಿಟ್ಟರು. ಶೋಷಣೆಯ ಕೇಂದ್ರಗಳಾಗಿದ್ದ ಗುಡಿ ಗುಂಡಾರಗಳನ್ನು ತಿರಸ್ಕರಿಸಿ, ದೇಹವೇ ದೇವಾಲಯವಾಗಬೇಕೆಂದರು.

ದೇವನ ಕುರುಹಾಗಿ ಇಷ್ಟಲಿಂಗವನ್ನು ನೀಡಿ ಹೆಣ್ಣು, ಗಂಡು ಮೇಲು ಕೀಳೆನ್ನದೆ ಸರ್ವರಿಗೂ ಇಷ್ಟಲಿಂಗಧರಿಸಿ ಪೂಜಿಸುವ ಅವಕಾಶ ಕಲ್ಪಿಸಿದರು. ಎಲ್ಲಾ ವರ್ಗದ ಜನ ಇಷ್ಟಲಿಂಗ ಧರಿಸಿ ನಡೆದಾಡುವ ದೇವಾಲಯವಾಗಿ ಸಂಭ್ರಮಿಸಿದರು. ಬದುಕಿನಲ್ಲಿ ಹೊಸ ಬೆಳಕು ಕಾಣತೊಡಗಿದರು.

ಪ್ರಪಂಚದ ಮೊದಲ ಪ್ರಜಾತಂತ್ರ ಸಂಸ್ಥೆಯೆನಿಸಿದ "ಅನುಭವ ಮಂಟಪ" ಸ್ಥಾಪಿಸಿ, ಮನುಸ್ಮೃತಿಯ ಪ್ರಕಾರ ಕೀಳು ಕುಲದವರೆನಿಸಿದ "ನಟವರ ಜಾತಿಯ" ಅಲ್ಲಮಪ್ರಭುಗಳನ್ನು ಅಧ್ಯಕ್ಷರನ್ನಾಗಿ ನೇಮಿಸಿದ್ದು ಒಂದು ಅಭೂತಪೂರ್ವ ಘಟನೆ. ಅಲ್ಲಿ ಸರ್ವರೂ ಸಮಾನವಾಗಿ ಕುಳಿತು ಚರ್ಚೆಯಲ್ಲಿ ಪಾಲ್ಗೊಂಡು ಅಭಿಪ್ರಾಯ ಮಂಡಿಸಲು ಅವಕಾಶವಿತ್ತು. ಮೊದಲ ಬಾರಿಗೆ ಶಕ್ತಿ ಸ್ವಾತಂತ್ರ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಲಭಿಸಿದಂತಾಯಿತು.

ಗುರುಬಸವ ತಂದೆಯ ಕರುಳ ಕರೆಗೆ ಓಗೊಟ್ಟು ಕಲ್ಯಾಣದತ್ತ ಜನ ತಂಡೋಪತಂಡವಾಗಿ ಹರಿದು ಬಂದರು. ಸರ್ವ ಭೇದಗಳನ್ನು ಮರೆತು ಸರ್ವಾಂಗ ಸುಂದರ ಬಾಳಿನಿಂದ ಕೂಡಿದ ಸಮಾಜ

ಬೆಳಗತೊಡಗಿದರು. ಮಡಿವಾಳ ಮಾಚಿದೇವರು. ಅಂಬಿಂಗರ ಚೌಡಯ್ಯ, ನುಲಿಯ ಚಂದಯ್ಯ, ಢಕ್ಕೆಯ ಮಾರಯ್ಯ ಸಮಗಾರ ಹರಳಯ್ಯ, ಡೋಹಾರ ಕಕ್ಕಯ್ಯ ಕಿನ್ನರಿ ಬ್ರಹ್ಮಯ್ಯ, ಕಂಬಳಿ ನಾಗಿದೇವ, ಹಡಪದ ಅಪ್ಪಣ್ಣ ಉರಿಲಿಂಗ ಪೆದ್ದಿ, ಲಿಂಗಮ್ಮ, ಕಾಳವ್ವ, ಸತ್ಯಕ್ಕ, ಲಕ್ಕಮ್ಮ, ಅಕ್ಕಮ್ಮ, ಸಂಕವ್ವ ಮುಂತಾದ ಅಸಂಖ್ಯರು ಕೀಳರಿಮೆಯ ಧೂಳೂ ಕೊಡವಿಕೊಂಡು ಮೇಲೆದ್ದರು. ಮಾನವತ್ವದಿಂದ ದೇವತ್ವಕೇರಿ ಶರಣರೆನಿಸಿದರು.

ರಾಜ್ಯ ಕೋಶಗಳನ್ನು ತೊರೆದು ಹನ್ನೊಂದಕ್ಕೂ ಅಧಿಕ ಅರಸರು ಮತ್ತು ಅರಸುಮನೆತನದವರು ಕಲ್ಯಾಣ ಕ್ರಾಂತಿಗೆ ಮನಸೋತು ಕಲ್ಯಾಣ ದತ್ತ ಬಂದು ಸಾಮಾನ್ಯ ಪ್ರಜೆಗಳಾಗಿ, ಬದುಕಿಗೊಂಡು ಕಾಯಕ ಕೈಗೊಂಡು ಬಾಳಿದರು. ಅವರಲ್ಲಿ ಬಹುದೂರದ ಕಾಶ್ಮಿರದ ಅರಸು ಮಹಾದೇವ ಭೂಪಾಲ, ರಾಣಿ ಮಹಾದೇವಿ ಸಹಿತ ರಾಜ್ಯ ತೊರೆದು ಕಲ್ಯಾಣಕ್ಕೆ ಬಂದು ಕಟ್ಟಿಗೆ ಮಾರುವ ಕಾಯಕ ಕೈಗೊಂಡು ಮೋಳಿಗೆಯ ಮಾರಯ್ಯನಾದುದು ಇಲ್ಲಿ ಉಲ್ಲೇಖನೀಯ.

ಅತ್ಯಂತ ಹೀನಾಯ ಸ್ಥಿತಿಯಲ್ಲಿದ್ದ ಮಹಿಳೆಯರ ವಿಮೋಚನೆಗೆ ಮುಂದಾದ ಬಸವಣ್ಣನವರು, ಜನಿತಕ್ಕೆ ತಾಯಾಗಿ, ಮೋಹಕ್ಕೆ ಮಗಳಾಗಿ, ಕೂಟಕ್ಕೆ ಸ್ತ್ರೀಯಾಗಿ, ದಾರಿ ತಪ್ಪುವ ಪುರುಷರ ಮಾರ್ಗದರ್ಶಕವಾಗಿರುವ ಸ್ತ್ರಿ ಸಾಮರ್ಥ್ಯವನ್ನು ಎತ್ತಿ ಹಿಡಿದರು. ಹೆಣ್ಣು ಮಾಯೆಯಲ್ಲ ಮನದ ಮುಂದಣ ಆಸೆಯೇ ಮಾಯೇ ಎಂದರು. ಸ್ತ್ರೀ ಕುಲೋದ್ಧಾರವೇ ಬಸವ ಕ್ರಾಂತಿಯ ಮೂಲಮಂತ್ರವಾಯಿತು.

**“ಮೊಲೆ ಮುಡಿಯಿದ್ದರೆ ಹೆಣ್ಣೆಂಬರು,**
**ಗಡ್ಡ ಮೀಸೆ ಮೂಡಿ ಬಂದರೆ ಗಂಡೆಂಬರು,**
**ಒಳಗೆ ಸುಳಿವಾತ್ಮ ಹೆಣ್ಣು ಅಲ್ಲ ಗಂಡೂ ಅಲ್ಲ”**[೬]

“ಹೆಣ್ಣು ಹೆಣ್ಣಲ್ಲ ಹೆಣ್ಣು ರಕ್ಕಸಿಯಲ್ಲ, ಹೆಣ್ಣು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ” ಎಂಬ ಶರಣ ವಾಣಿಯಂತೆ ಹೆಣ್ಣು ಸಕಲ ಗೌರವಕ್ಕೂ ಪಾತ್ರಳಾದಳು. ಅನುಭವ ಮಂಟಪದಲ್ಲ ಎಲ್ಲರ ಸಮಾನ ಕುಳಿತು ತನ್ನ ಅಭಿಪ್ರಾಯ ಮಂಡಿಸತೊಡಗಿದಳು. ಅಕ್ಷರ ಕಲಿತು ವಚನಗಳನ್ನು ಬರೆಯ ತೊಡಗಿದಳು. ಆಕೆಯ ಆತ್ಮವಿಶ್ವಾಸ ನೂರ್ಮಡಿಗೊಂಡಿತು. ಬಸವವಾಣಿಯ ಭರವಸೆಯ ಬೆಳಕಿನಿಂತ ಶತ ಶತಮಾನಗಳ ಸಂಕೋಲೆ ಕಳಚಿಕೊಂಡು ಎದ್ದು ನಿಂತಳು. ಏಕ ಕಾಲದಲ್ಲಿ ೩೫ ವಚನಕಾರ್ತಿಯರು ಮೂಡಿ ಬಂದದ್ದು ಇತಿಹಾಸದಲ್ಲಿ ಬಹುದೊಡ್ಡ ಬದಲಾವಣೆ ಹಾಗೂ ಅಪರೂಪದ ಪ್ರಸಂಗವೇ ಸರಿ. ಅಷ್ಟೇ ಅಲ್ಲ ನಿಜ ಧರ್ಮದ ವ್ಯಾಖ್ಯಾನ ಗೈಯುವ ಮಟ್ಟಕ್ಕೇರಿದರು ಈ ವಚನಕಾರ್ತಿಯರು.

**“ಅರ್ಚನೆ ಪೂಜನೆ ನೇಮವಲ್ಲ,**
**ಮಂತ್ರ ತಂತ್ರ ನೇಮವಲ್ಲ,**
**ಧೂಪ ದೀಪಾರತಿ ನೇಮವಲ್ಲ,**
**ಪರಧನ ಪರಸ್ತ್ರಿ ಪರದೈವಗಳಿಗೆರಗದಿಪ್ಪುದೇ,**
**ನೇಮ ಕಾಣಿರಣ್ಣಾ”**[೭]ಎನ್ನುತ್ತಾಳೆ ಕಸಗುಡಿಸುವ ಕಾಯಕದ ಶರಣಿ ಸತ್ಯಕ್ಕ

**“ಎನ್ನ ಕಣ್ಣೊಳಗೂ ಕಟ್ಟಿಗೆಯ ನಾವೆ ಮುರಿಯಬೇಕು,**
**ಎನ್ನ ಕಾಲೊಳಗೂ ಮುಳ್ಳು ನಾವೆ ತೆಗೆಯಬೇಕು,**
**ಎನ್ನ ಅಂಗದಲಿಪ್ಪ ಅಹಂಕಾರವ ನಾನೆ ಸುಡಬೇಕು,**
**ಎನ್ನ ಮನದಲಿಪ್ಪ ಮಾಯಾ ಪ್ರಪಂಚವ,**
**ನಾನೆ ಕಳೆಯಬೇಕು,**
**ಅಮುಗೇಶ್ವರಲಿಂಗನ ನಾನೆ ಅರಿಯಬೇಕು”**[೮]

ಹೀಗೆ ವ್ಯಕ್ತಿ ಸ್ವಾತಂತ್ರ್ಯ ಹಾಗೂ ಸ್ವಸಾಮರ್ಥ್ಯದ ಮಾತುಗಳು ಅಮುಗೆ ರಾಯಮ್ಮನಂಥ ಶರಣೆಯರಿಂದ ಕೇಳಿ ಬರತೊಡಗಿದವು.

ತಾನು ವಿವೇಕಿಯಾದುದ್ದಲ್ಲದ ಜ್ಯೋತಿಯ ಬೆಳಗು ಕಾಣಬಾರದೆಂದು ಶರಣೆಯರು ಪ್ರತಿಪಾದಿಸತೊಡಗಿದರು. ಕಾವಿ ಕಾಷಾಯಾಂಬರದ ವೇಷ ದಾರಿಗಳ ಅಧೀನತೆಯ ಹಂಗು ಬೇಡವೆಂಬ ದಿಟ್ಟತನದೊಂದಿಗೆ, ಆಚಾರವಿಲ್ಲದೆ ಗಡ್ಡದಂತೆ ಗಡ್ಡದ ಹಿರಿಯರು ಹಿರಿಯರಲ್ಲವೆಂಬ ನಿಷ್ಠುರ ನುಡಿಗಳು ಮೊಳಗತೊಡಗಿದವು. ಅಯೋಗ್ಯನಿಗೆ ಅನುಗ್ರಹಿಸುವದಾದರೆ ನೀನೆನಗೆ ಬೇಡವೆಂದು ದೇವರಿಗೂ ಎಚ್ಚರಿಸುವ ಎದೆಗಾರಿಕೆಯನ್ನು ಅಂದಿನ ಶರಣೆಯರು ಮೈಗೂಡಿಸಿಕೊಂಡರು. ಕೃತ್ಯ ಕಾಯಕವಿಲ್ಲದವರು ಭಕ್ತರೆ ಅಲ್ಲ, ಸತ್ಯ ಶುದ್ಧವಲ್ಲದುದು ಕಾಯಕವೇ ಅಲ್ಲ. ಚಿತ್ತ ಶುದ್ಧದಲ್ಲಿ ಕಾಯಕ ಮಾಡುವ ಸದ್ಭಕ್ತರಿಗೆ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು. ಕಾಯಕವೆಂಬುದೇ ಕಣಜ. ಪರಧನವೆಂಬುದೇ ಪಾಪ. ಪರದ್ರವ್ಯಕ್ಕೆ ಆಸೆ ಮಾಡಿದೆನಾದರೆ ನೀನಾಗಲೇ ಎನ್ನ ನರಕದಲ್ಲಿ ಅದಿ ನಿನೆದ್ದ ಹೋಗಾ ಎಂಬ ಸವಾಲನ ಬದುಕು. ಅನ್ಯಾಯ ಅನಾಚಾರದೊಂದಿಗೆ ರಾಜಿಯಾಗಾದ ಸತ್ಯ ಸಂಪನ್ನತೆ ಶರಣೆಯರದಾಯಿತು. ಇದು ಸುಲಭವಾಗಿ ನಂಬಲಾಗದ ಆದರೆ ನಂಬಲೇಬೇಕಾದ ಅಂಶ.

೯೦೦ ವರ್ಷಗಳ ಹಿಂದೆ ಆಗಿ ಹೋಗಿರುವ ಶರಣೆಯರ ಆತ್ಮ ವಿಶ್ವಾಸ ಹೇಗಿದ್ದಿರಬೇಕು? ಹೆಣ್ಣು ಗಂಡಿನ ಬೇಧ ಕಲ್ಪಿತ ಒಳಗಿನ ಆತ್ಮ ಚೈತನ್ಯವೇ ಸತ್ಯ ಅದು ಎರಡರಲ್ಲಿಯೂ ಒಂದೇ ಎನ್ನುತ್ತಾಳೆ. ಸತ್ಯಕ್ಕೆ ಭಾರತೀಯ ಸಾಂಸ್ಕೃತಿಕ ಇತಿಹಾಸದಲ್ಲಿ ಮಹಿಳೆಯರು ಮೊದಲ ಬಾರಿಗೆ ಪ್ರಶ್ನಿಸಿದ ದಾಖಲೆಗಳನ್ನು ವಚನಕಾರ್ತಿಯರ ವಚನಗಳು ಹೊಂದಿದೆ. ಆಶ್ಚರ್ಯವೆಂದರೆ ನಮ್ಮ ಶರಣೆಯರು ಕನ್ನಡದಲ್ಲಿ ಇಂಥ ಅನುಭಾವ ಪೂರ್ಣ ವಚನಗಳನ್ನು ಬರೆಯುತ್ತಿರುವಾಗ ಇಂಗ್ಲೀಷ ಭಾಷೆಯಲ್ಲಿ ಒಂದು ಸಾಲಿನ ಸಾಹಿತ್ಯವೂ ಹುಟ್ಟಿರಲಿಲ್ಲ. ಬಸವಣ್ಣನವರ ಕ್ರಾಂತಿಕಾರ ಹೆಜ್ಜೆಯಿಂದಾಗಿ ಎಲ್ಲ ನೋಡಿದಲ್ಲ ಜನ ಓದು ಕಲಿಯಿತು. ಹೋದ ಹೋದಲ್ಲಿ ಹೊಸ ಮಾತುಗಳು ಕೇಳಿ ಬಂದವು. ಮೇದಿನಿಯಲ್ಲ ಹೊಸ ಬೆಳಕು ಮೂಡಿತು. ಜಗತ್ತಿನಲ್ಲಿ ಮಹಿಳೆಯರ, ದಲಿತರ ಮತ್ತು ವಯಸ್ಕರ ಮೂಡಿತು. ಜಗತ್ತಿನಲ್ಲಿ ಮಹಿಳೆಯರ, ದಲಿತರ ಮತ್ತು ವಯ್ಸಕರ ಶಿಕ್ಷಣ ಮೊದಲಿಗೆ ಪ್ರಾರಂಭಿಸಿದ ಶ್ರೇಯಸ್ಸು ಬಸವಣ್ಣನವರಿಗೆ ಸಂದಿತು. ಸಮಾಜದ ಇನ್ನೊಂದು ಪಿಡುಗಾದ ವೇಶ್ಯಾವಾಟಿಕೆಯನ್ನು ನಿರ್ಮೂಲಗೊಳಿಸಿದ ಬಸವಣ್ಣನವರು ಹದಿನಾರು ಸಾವಿರ ಪಣ್ಯಾಂಗನೆ (ವೇಶ್ಯೆ) ಯರನ್ನು ಪುಣ್ಯಾಂಗನೇ (ಗೃಹಿಣಿ) ಯಾಗಿ ಪರಿವರ್ತಿಸಿದರು. ಮಾತೃಹೃದಯಿ ಬಸವಣ್ಣನವರ ಕರೆಗೆ ಓಗೊಟ್ಟು ಸಾವಿರಾರು ತರಣರು ವೆಶ್ಯಯರನ್ನು ವಿವಾಹವಾಗುವದರ ಮೂಲಕ ವೇಶ್ಯವೃತ್ತಿಯ ನಿರ್ಮೂಲನ ಮಾಡಿದರು.ಸಮಾಜದಲ್ಲಿ ಬಹುದೊಡ್ಡದಾದ ಇಂತಹ ಬದಲಾವಣೆಯನ್ನು ಮಾಡಿದರು ಶರಣರಾಗಿದ್ದರು. ಬಸವಣ್ಣನವರ ಕಾಯಕ ಪ್ರಸಾದ ದಾಸೋಹ ತತ್ವಗಳನ್ನು ಅಳವಡಿಸಿಕೊಂಡು ಕಲ್ಯಾಣ ನಾಡು ಎಂದೂ ಕಾಣದ ಸುಖ ಸಮೃದ್ಧಿಗಳಿಂದ ತುಂಬಿತ್ತು. ಚಮ್ಮಾರನಿಂದ ಮಂತ್ರಿಯವರೆಗೆ ಎಲ್ಲಾ ಕಾಯಕಗಳನ್ನು ಸಮಾನವಾಗಿ ಕಾಣುವಂತಾಯಿತು. ಕಾಯಕದ ಘನತೆಯಿಂದಾಗಿ ಶರಣ ಸಮುದಾಯ ಗೌರವದಿಂದ ಬದುಕುವಂತಾಯಿತು. ಕಾಯಕದಿಂದ ಗಳಿಸಿರುವದನ್ನು ದಾಸೋಹದ ಮೂಲಕ ಸಮಾಜಕ್ಕೆ ನೀಡಿ ಉಳಿದುದನ್ನು ಪ್ರಸಾದವಾಗಿ ಸ್ವೀಕರಿಸುವ ಸಮುದಾಯ ನಿರ್ಮಾಣವಾಯಿತು. ಇದರಿಂದಾಗಿ "ಕಲ್ಯಾಣದಲ್ಲಿ ನೀಡುವವರುಂಟು ಬೇಡುವವರಿಲ್ಲ" ಎಂಬುದಾಯಿತು.

ಬಸವಣ್ಣನವರ ಈ ಶೋಷತರ ಉದ್ದಾರದ ಕಾರ್ಯ ರಾಜ್ಯಶಾಷಿ, ಪುರೋಹಿತಶಾಷಿ ಸಂಪ್ರದಾಯವಾದಿಗಳಿಗೆ ಹಿಡಿಸದೆ ಒಳಗೊಳಗೆ ಕುದಿಯುತ್ತಿದ್ದರು. ಸಮಯ ಸಿಕ್ಕಾಗಲೆಲ್ಲ ಬಿಜ್ಜಳನಲ್ಲಿ ಚಾಡಿ ಮಾತುಗನ್ನಾಡಿ ಬಸವಾದಿ ಶರಣರ ಬಗ್ಗೆ ವಿಷಬೀಜ ಬಿತ್ತುತ್ತಲೇ ಇದ್ದರು. ೯ ಇವುಗಳನ್ನೆಲ್ಲ ಸಮರ್ಥವಾಗಿ ಎದುರಿಸುತ್ತಾ ಬಸವಣ್ಣವರು ಚಾಡಿ ಮಾತುಗಳಿಗೆ ಸಮಂಜಸವಾಗಿ ಉತ್ತರಿಸುತ್ತಾ ಶರಣ ಸಂಕುಲದ ಮನೋಸ್ಥೈರ್ಯ ಹೆಚ್ಚಿಸುತ್ತಾ ಮುನ್ನಡೆದಿದ್ದರು. "ಶರಣು ಎಂದ ಹರಳಯ್ಯನವರಿಗೆ ಶರಣು ಶರಣಾರ್ಥಿ" ಎಂದು ವಿನಯದಿಂದ ಬಾಗಿದ ಬಸವ ಗುರುವಿನ ಶರಣು ಭಾರ ಹೆಚ್ಚಾಯಿತೆಂದು ಭಾವಪರ ವಶರಾದ ಕಲ್ಯಾಣಮ್ಮ ಹರಳಯ್ಯನವರು ಅವರ ಋಣ ತೀರಿಸಲೆಂದು ಗುರುಭಕ್ತಿಯಾಗಹಿ ತಮ್ಮ ತೊಡೆಯ ಚರ್ಮದ ಚಮ್ಮಾವುಗೆಗಳನ್ನು ಗುರು ಬಸವರಿಗೆ ಅರ್ಪಿಸಿದ್ದು ಇದೇ ಸಂದರ್ಭದಲ್ಲಿ

ನಡೆದು ಹೋಯಿತು. ಜಗತ್ತು ಕೇಳರಿಯದ ಪ್ರಸಂಗವಿದು. ಬಸವ ಗುರುವಿನ ಬಗ್ಗೆ ಹೊಂದಿರುವ ಪ್ರೀತಿ ಎದ್ದು ಕಾಣುತ್ತದೆ. ಇಂತಹ ಬಹುದೊಡ್ಡ ಬದಲಾವಣೆ ಕಂಡಿರುವದು ಹನ್ನೆರಡನೆಯ ಶತಮಾನ.[೧೦]

ಕಲ್ಯಾಣ ಕ್ರಾಂತಿಯಿಂದ ಬದಲಾವಣೆಯಾಗಲು ಮಹಾತ್ಮಮ ಬಸವೇಶ್ವರರು ಅನೇಕ ಸುಧಾರಣಾ ಕಾರ್ಯವನ್ನು ಮಾಡಿದರು. ಭಾರತದ ಇತಿಹಾಸದಲ್ಲಿ ಬಸವಯುಗ ಒಂದು  ಸುವರ್ಣಯುಗವೇ ಸರಿ. ನೂರಾರು ವರ್ಷಗಳಿಂದ ಆಚರಿಸುತ್ತಾ ಬರುತ್ತಿರುವ ಕಂದಾಚಾರಗಳು ಅರ್ಥರಹಿತವೆಂದು ತಿಳಿ ಹೇಳಿದರು. ಸ್ತ್ರಿ ಸಮಸ್ಯೆಗಳನ್ನು ನಿವಾರಿಸಿ. ಎಲ್ಲಾ ಜಾತಿ ವರ್ಗಗಳು ಸಮಾನವೆಂದು ಸಾರಿದರು. ಅಲ್ಲದೆ ಬಸವಣ್ಣನವರು ಅನೇಕ ಸಂದೇಶಗಳನ್ನು ನೀಡಿದರು.

1) ಕಾಯಕವೇ ಕೈಲಾಸ
2) ದೇವನೊಬ್ಬ ನಾಮ ಹಲವು
3) ನುಡಿದಂತೆ ನಡೆ
4) ದಯವೇ ಧರ್ಮದ ಮೂಲ
5) ಸಕಲರಿಗೆ ಲೇಸನ್ನು ಬಯಸುವವನೇ ಕುಲಜ
6) ಕಳಬೇಡ, ಕೊಲಬೇಡ, ಹುಸಿಯನು ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಯ್ಯ ಪಡಬೇಡ
7) ಸಂಗ್ರಹ ಬುದ್ದಿಯಿಂದ ಬದುಕು ಅಸಹನೀಯವಾಗುತ್ತದೆ
8) ಅಂತರಂಗ ಶುದ್ಧಿ, ಬಹಿರಂಗ ಶುದ್ಧಿ
9) ಮಾನವರೆಲ್ಲರು ಸಮಾನರು
10) ಪರಸ್ತ್ರಿಯರನ್ನು ಮಹಾದೇವಿಯಂತೆ ಕಾಣಬೇಕು
11) ಕಾಯಕದಂತ ದಾಸೋಹ ತತ್ವವು ಮುಖವಾದುದು
12) ಆಚಾರವೇ ಸ್ವರ್ಗ ಅನಾಚಾರವೇ ನರಕ
13) ಸಾರ ಸಜ್ಜನರ ಸಂಗವ ಮಾಡು
14) ಜ್ಞಾನದ ಬಲದಿಂದ ಅಜ್ಞಾನ ಕೇಡು
15) ಮೃದು ವಚನವೇ ಸಕಲ ಜಪಂಗಳಯ್ಯ[೧೧]

ಈ ಸಂದೇಶಗಳನ್ನು ಮಾನವರೆಲ್ಲರು ಪಾಲಿಸಿದರೆ ಪ್ರಪಂಚವೆ ಭ್ರಾತೃತ್ವ ಸಮಾನತೆಯಿಂದ ಮುಂದೆ ಸಾಗುತ್ತದೆ. ಅಲ್ಲದೆ ಜಾತಿ ಲಿಂಗ ವರ್ಗ ಸಮಾನತೆನ್ನೆದರಿಸಿದ ಹಾಗೂ ಸರ್ವರ ಏಳಿಗೆಯನ್ನು ಸಾದಿಸುವ ಆದರ್ಶ ಹೊಂದಿದ ಸುಖಿ ರಾಜ್ಯದ ಮತ್ತು ಕಲ್ಯಾಣ ರಾಜ್ಯದ ಅದ್ಬುತ ಕಲ್ಪನೆಯನ್ನು ಶರಣರು ಕಂಡರು.

ಅಲ್ಲದೆ ಮದ್ಯಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳು ಅದೋಗತ್ತಿಗಳಿದ್ದವು. ಸ್ತ್ರೀಯರ ಹೀನತೆ ಪುರುಷನ ಶ್ರೇಷ್ಠತೆ ಒಪ್ಪಿಕೊಂಡ ಸಮಾಜಜ ವ್ಯವಸ್ಥೆ ಇತ್ತು ಸ್ತ್ರಿಯರು ಸ್ವತಂತ್ರಕ್ಕೆ ಅರ್ಹರಲ್ಲ ಎಂಬನಾದ ಕೇಳಿಬರುತ್ತಿತ್ತು ಇಂದಿನ ಸ್ತ್ರೀ ಸ್ವತಂತ್ರ ಅಥವಾ ವಿಮೋಚನೆ ಬಸವೇಶ್ವರರು ಅಂದೇ ನಾಂದಿ ಹಾಡಿದರು. ಸ್ತ್ರೀ ಸಮಾನತೆಗಾಗಿ ಕೆಲವು ಅಂಶಗಳು ತಂದರು.

1) ಪುರುಷರಂತೆ ಸ್ತ್ರಿಯರಿಗೂ ಲಿಂಗಧರಿಸುವ ಮತ್ತು ಶಿವಾರಾಧನೆ ಮಾಡುವ ಹಕ್ಕು ನೀಡಿದರು.
2) ವಿಧವಾ ಪುನರ ವಿವಾಹಕ್ಕೆ ಅವಕಾಶವಿರಬೇಕು ಎಂದರು.
3) ಸ್ತ್ರೀಯರಿಗೆ ಪುರುಷರಂತೆ ಧಾರ್ಮಿಕ ವಿಚಾರಣೆಗಳಲ್ಲಿ ಚರ್ಚೆಗೆ ಮುಕ್ತ ಅವಕಾಶ ನೀಡಿದರು.
4) ಅನುಭವ ಮಂಟಪದಲ್ಲಿ ಸ್ತ್ರೀಯರಿಗೆ ಸಮಾನ ಅವಕಾಶ ನೀಡಿದರು.

5) ಸ್ತ್ರೀಯರಿಗೆ ವಚನಗಳನ್ನು ರಚಿಸಲು ಅವಕಾಶ ಕಲ್ಪಿಸಿದವರು ಕಲ್ಯಾಣರ ಶರಣರು.

6) ೩೫ ಕ್ಕೂ ಹೆಚ್ಚು ಶರಣೆಯರು ವಚನಗಳನ್ನು ರಚಿಸುವ ಮೂಲಕ ಸಮಾಜದ ಮೌಢ್ಯ ತೊಲಗಿಸಿದರು.

ಹೀಗೆ ಮಹಾತ್ಮಮ ಬಸವೇಶ್ವರರು ಲಿಂಗ ಸಮಾನತೆ, ಧಾರ್ಮಿಕ ಆಧ್ಯಾತ್ಮಿಕ ಸ್ವಾತಂತ್ರ್ಯ, ಲಿಂಗದೀಕ್ಷೆ ಇತ್ಯಾದಿಗಳು ಮಹಿಳೆಯರಿಗೆ ಸಂವಾದಗಳಲ್ಲಿ ತೊಡಗಲು, ಸಾಹಿತ್ಯ ಪ್ರತಿಭೆಯನ್ನು ಹೊರಹಾಕಲು, ಸ್ವಾತಂತ್ರದ ಪರಿಣಾಮವಾಗಿ ವಚನಗಳ ರಚನೆಗೆ ಸ್ಫೂರ್ಥಿಯಾಗಿ ವಚನ ಕಾರ್ತಿಯರು ಬೆಳಕಿಗೆ ಬಂದರು. ಅವರಲ್ಲಿ ಆಯ್ದಕ್ಕಿ ಲಕ್ಕಮ್ಮ, ರಾಯಮ್ಮ, ಕಾಳವ್ವ, ವೀರಮ್ಮ, ಸೊಮಮ್ಮ, ಅಕ್ಕನಾಗಮ್ಮ, ಕಾಳವ್ವ ಉರಿಲಿಂಗಪೆದ್ದಿ, ಪುಣ್ಯಶ್ರೀ, ಕೇತಲದೇವಿ, ಗಂಗಮ್ಮ, ಗಂಗಾಂಬಿಕೆ, ದುಗ್ಗಳೆ,ನೀಲಾಂಬಿಕೆ, ಮುಕ್ತಾಯಕೆಕ ಮೊಳೀಗೆ ಮಹಾದೇವಿ ಮುಂತಾದ ಶಿವಶರಣೆಯರು ವಚನಗಳನ್ನು ರಚಿಸುವ ಮಾಲಕ ಬಹುದೊಡ್ಡ ಸಾಮಾಜಿಕ ವಚನ ಕ್ರಾಂತಿಯನ್ನು ಮಾಡಿದರು.

ಬಸವಣ್ಣನವರು ಕಲ್ಯಾಣ ರಾಜ್ಯದ ಪ್ರಧಾನಿಯಾಗಿದ್ದ ಅವಧಿಯಲ್ಲಿ ಒಂದು ಯುದ್ದವ್ರೂ ನಡೆಯಲಿಲ್ಲ. ಕಲ್ಯಾಣದಲ್ಲಿ ಕೊಡುವವರುಂಟು ಬೇಡುವವರಿಲ್ಲ" ಎಂದು ಬಸವಣ್ಣನವರೇ ಹೇಳಿದ್ದಾರೆ.[೧೩] ಬಸವ ರಾಜ್ಯದ ಸಿರಿಯು, ಬಸವ ಬಡವರ ನಿಧಿಯು ಎಂದು ಆ ಕಾಲದ ಬಸಪದ ಕವಿಯೊಬ್ಬ ಹಾಡಿದ್ದಾನೆ. ಬಸವಣ್ಣನವರು ಪ್ರಧಾನಿಯಾಗಿದ್ದಾಗ ಕಾಯಕಕ್ಕೆ ಬಹಳಷ್ಟು ಮಹತ್ವ ನೀಡಿದರು. ಜನರು ಕಾಯಕದಲ್ಲಿ ತಲ್ಲೀನರಾಗಿ ಬಹಳಷ್ಟು ಮಹತ್ವ ನೀಡಿದರು. ಯಾರಿಗೂ ಬೇಡದೆ ಬದುಕುವ ಸಾಮರ್ಥ್ಯವನ್ನು ಪಡೆದರು. ಜನರೆಲ್ಲ ಚೆನ್ನಾಗಿ ಉತ್ಪಾದನೆಯಲ್ಲಿ ತೊಡಗಿದ್ದರಿಂದ ರಾಜ್ಯದ ಭಂಡಾರವು ತುಂಬಿತು. ಹೀಗೆ ಬಸವಣ್ಣನವರು ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳ ಸದ್ಬಳಕೆಯೊಂದಿಗೆ ಸಮಾನತೆಯಿಂದ ಕೂಡಿದ ಸುಂದರ ಸಮಾಜವನ್ನು ನಿರ್ಮಿಸಿದರು. ಇಂಥ ಒಂದು ಸಮಾಜ ಮಧ್ಯಯುಗದ ಅದ್ವೀತಿಯ ಸಮಾಜವಾಗಿತ್ತು.

ಜಗಜ್ಯೋತಿ ಬಸವಣ್ಣನವರು ಮಹಾನ ಮಾನವತಾವಾದಿಗಳಾಗಿದ್ದರು. ಮಹಾನ ಆಡಳತಗಾರರಾಗಿದ್ದರು. ಮಹಾನ ಸಾಮಾಜಿಕ ಮನೋವಿಜ್ಞಾನಿಗಳಾಗಿದ್ದರು. ಮಹಾನ ಅರ್ಥಶಾಸ್ತ್ರಜ್ಞರಾಗಿದ್ದರು. ಮಹಾನ ಸಾಹಿತಿಗಳಾಗಿದ್ದರು. ಮಹಾನ ಭಾಷಾ ಪಂಡಿತರಾಗಿದ್ದರು. ಬದುಕಿನ ಎಲ್ಲ ರಂಗಗಳಲ್ಲಿ ಮಹಾಜ್ಞಾನಿಗಳಾಗಿದ್ದರು. ಮಹಾನ ದಾರ್ಶನಿಕರಾಗಿದ್ದರು. ಅವರಿಗೆ ಇಡೀ ಸಮಾಜ ವ್ಯವಸ್ಥೆಯ ಕಲ್ಪನೆ ಇತ್ತು ಒಂದು ಹೊಸ ಸಮಾಜ ಹೇಗೆ ಇರಬೇಕು ಎಂಬುದರ ಪ್ರಜ್ಞೆ ಇತ್ತು. ಅವರು ಧರ್ಮ ಸಮಾಜ ಸಂಸ್ಕೃತಿ ಮತ್ತು ಅರ್ಥಶಾಸ್ತ್ರವನ್ನು ಬೇರೆ ಬೇರೆಯಾಗಿ ನೋಡಲಿಲ್ಲ. ಕುಟುಂಬ ಸಮಾಜ, ದೇಶ ಮತ್ತು ಜಗತ್ತನ್ನು ಬೇರೆ ಬೇರೆಯಾಗಿ ನೋಡಲಿಲ್ಲ. ಇವೆಲ್ಲವುಗಳ ಮಧ್ಯದ ಘನವಾದ ಸಂಬಂಧವನ್ನು ಗುರುತಿಸಿದರು. ಇವೆಲ್ಲವುಗಳ ಒಟ್ಟು ಅಭಿವೃದ್ಧಿಯಿಂದ ಮಾತ್ರ ಮಾನವರನ್ನು ಎಲ್ಲ ಬಂಧನಗಳಿಂದ ವಿಮೋಚನೆಗೊಳಿಸಬಹುದು ಎಂಬುದನ್ನು ಅವರು ಬಹುಬೇಗ ಕಂಡುಕೊಂಡರು.[೧೪]

ಅಲ್ಲದೆ ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರು ಮಹಿಳೆಯರಿಗೆ ಸಾಮಾಜಿಕ ಆರ್ಥಿಕ ಧಾರ್ಮಿಕ, ವೈಚಾರಿಕ ಹಾಗೂ ಅಭಿವೃದ್ಧಿ ಸ್ವಾತಂತ್ರವನ್ನು ಕೊಟ್ಟು ಅವರಲ್ಲಿ ಆತ್ಮ ಬಲವನ್ನು ತುಂಬಿದರು. ಇದರಿಂದ ಎಲ್ಲರೂ ಸ್ವತಂತ್ರರು, ಸಮಾನರು ಮತ್ತು ಸಹೋದರರೆಂಬ ತತ್ವ ಹರಡಿತು ಎಲ್ಲರೂ ದುಡಿಯಬೇಕೆಂಬ ಕಾಯಕತತ್ವ ಹಂಚಿಕೊಂಡ ಉಣ್ಣಬೇಕೆಂಬ ದಾಸೋಹತತ್ವ ಹಾಗೂ ಅನ್ನ ಹಾಳು ಮಾಡಬಾರದೆಂಬ ಪ್ರಸಾದ ತತ್ವಗಳು ಎಲ್ಲರೂ ಅಳವಡಿಸಿಕೊಂಡರು. ಇದರಿಂದಾಗಿ ಕೆಲಸವು ಕಾಯಕವಾಗಿ, ದಾನವು ದಾಸೋಹವಾಗಿ ಮತ್ತು ಪಧಾರ್ಥವು ಪ್ರಸಾರವಾಗಿ ಪರಿವರ್ತನೆಯಾಗಿ ಹೊಸ ಸಮಾಜವೊಂದು ಸೃಷ್ಟಿಯಾಯಿತು.[೧೫]

ಆ ಸಮಾಜದ ೭೭೦ ಅಮರಗಣಂಗಳಲ್ಲಿ ಸುಮಾರು ೩೭ ಜನ ಮಹಿಳಾ ಶರಣೆಯರು ವಚನಕಾರ್ತಿಯರಾಗಿ ಹೊರಹೊಮ್ಮಿದರು. ಈ ಎಲ್ಲಾ ಶರಣೆಯರಲ್ಲಿ ವೈರಾಗ್ಯ ನಿಧಿಯೆನಿಸಿದ ಅಕ್ಕ

ಮಹಾದೇವಿಯ ಅತಿ ಹೆಚ್ಚು ಅಂದರೆ ೪೩೪ ವಚನಗಳು ಲಭ್ಯವಾಗಿದೆ. ಜೊತೆಗೆ ನೀಲಾಂಬಿಕೆ (೨೮೮), ಅಕ್ಕಮ್ಮ (೧೫೪), ಅಮುಗೆ ರಾಯಮ್ಮ (೧೧೬), ಹಡಪದ ಲಿಂಗಮ್ಮ(೧೧೪) ಇವರ ನೂರಕ್ಕೂ ಹೆಚ್ಚು ವಚನಗಳು ಲಭ್ಯವಾಗಿವೆ. ಮೊಳಿಗೆ ಮಾಹಾದೇವಿ(೭೦), ಮುಕ್ತಾಯಕ್ಕ (೩೭), ಸತ್ಯಕ್ಕೆ (೨೭), ಆಯ್ದಕ್ಕಿ ಲಕ್ಕಮ್ಮ (೨೫), ರೆಮ್ಮವ್ವೆ (೨೩) ಇವರು ೨೦ ಕ್ಕಿಂತ ಹೆಚ್ಚು ವಚನ ಲಭ್ಯವಾದ ಶರಣಿಯರಾಗಿದ್ದಾರೆ. ಅಕ್ಕನಾಗಮ್ಮ (೧೪), ಕಾಳವ್ವೆ (೧೨), ಮಸೂಮ್ಮ (೧೦) ಇವರ ಹತ್ತಿರಕ್ಕಿಂತ ಹೆಚ್ಚು ವಚನ ಲಭ್ಯವಾಗಿವೆ. ಎರಡಕ್ಕಿಂತ ಹೆಚ್ಚು ವಚನ ಲಭ್ಯವಾದ ಶರಣಿಯರೆಂದರೆ ಗಂಗಾಂಬಿಕೆ (೦೯), ಬೋಂತಾದೇವಿ (೦೬), ಗೊಗ್ಗವ್ವೆ (೦೨), ವೀರಮ್ಮ (೦೫), ಕದಿರ ರೆಮ್ಮವ್ವೆ (೦೪), ಕಾಳವ್ವೆ(೦೨), ಕೇತಲದೇವಿ (೦೨), ದುಗ್ಗಳೆ (೦೨) ಹೀಗೆ ೩೭ ಶರಣಿಯರ ಒಟ್ಟು ೧೩೭೬ ವಚನಗಳು ಇದುವರೆಗೆ ಲಭ್ಯವಾಗಿರುವುದನ್ನು ನೋಡುತ್ತೇವೆ.[೧೬]

ಈ ಎಲ್ಲಾ ಶರಣಿಯರು ವಚನಗಳು ರಚನೆಯ ಮೂಲಕ ಸಮಾಜದಲ್ಲಿ ಪರಂಪರಾಗತವಾಗಿ ಬೇರುಬಿಟ್ಟಿದ್ದ ಮೇಲು–ಕೀಳು, ಸ್ಪೃಶ್ಯ–ಅಸ್ಪೃಶ್ಯ, ಗಂಡು ಹೆಣ್ಣು ಇವುಗಳನ್ನು ಟೀಕಿಸುವ ಜೊತೆಗೆ ಧರ್ಮದ ಹೆಸರಿನಲ್ಲಿ ನಡೆದು ಬಂದ ಮೂಢನಂಬಿಕೆ ಡಾಂಬಿಕ ವ್ರತಾಚರಣೆಗಳು, ಯಜ್ಞ ಯಾಗಗಳು ಜೀವ ಹಿಂಸೆ ಶೋಷಣೆ, ಮುಂತಾದವುಗಳನ್ನು ವಿರೋಧಿಸಿ ಅವುಗಳಿಗೆ ಪರ್ಯಾಯ ಮಾರ್ಗವನ್ನು ಕಂಡು ಕೊಂಡಿದ್ದಾರೆ. ಶರಣೆ ಅಕ್ಕಮ್ಮನ ವಚನದಲ್ಲಿ

**"ವೃತವಿಲ್ಲದ ಗುರುವ ಪೂಜಿಸಲಾಗದು,**
**ವ್ರತವಿಲ್ಲದ ಜಂಗಮದ ಪ್ರಸಾರದ ಕೊಳಲಾರದು,**
**ವ್ರತವಿಲ್ಲದವರ ಅಂಗಳದ ಮೆಟ್ಟಿಲಾಗದು"**[೧೭]

ಎಂದ ಗುರು ಲಿಂಗ ಜಂಗಮ ಯರೆ ಆಗಿರಲಿ ವ್ರತ ಮತ್ತು ಅಭಾರ ಹೀನರಾಗಲಾರದು ಎಂದು ಹೇಳುತ್ತಾಳೆ ಲಕ್ಕಮ್ಮನ ಬಂದು ವಚನದಲ್ಲಿ–

**"ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯ,**
**ಬೈಬಿಟ್ಟು, ಸಕಲ ಸಂಕದ ಪ್ರಮಥರು ಮುಂತಾಗಿ,**
**ಅಮರೇಶ್ವರಲಿಂಗದ ಆಶ್ರಯಕ್ಕೆ ಪ್ರಸಾದ ಕೊಂಬುದಕ್ಕೆ,**
**ಬಾ ಬಸವಣ್ಣ."**[೧೮]

ಎಂದು ಜಂಗಮರಿಗೆ ಪ್ರಸಾದವನ್ನು ಮಾಡಿ ಊಣಬಡಿಸಿದರು ತಟ್ಟೆ ಕಾಲಿಯಾಗಲಿಲ್ಲ ಶರಣರು ಸಂತೃಪ್ತರಾದರು. ಕಾರಣ ಅವಳ ನಿಸ್ವಾರ್ಥ ಸೇವೆಯೇ ಕಾರಣ ಎಂದು ಶರಣರು ಅಂತಿದ್ದರು. ಅಲ್ಲದೆ ಸ್ವತ ಬಸವಣ್ಣನೆ ಹೇಳುವಂತೆ ಮನೆ ನೋಡಾ ಬಡವರು; ಮನನೋಡಾ ಘನಮನ ಸಂಪನ್ನರು" ಎಂದು ಹೋಗಳುತ್ತಾರೆ.

**"ಜೇಡರ ದಾಸಿಮಯ್ಯನ ಪೂಣ್ಯಶ್ರೀ ದುಗ್ಗಳೆ ತನ್ನ ವಚನದಲ್ಲಿ,**
**ಭಕ್ತನಾದಡೆ ಬಸವಣ್ಣನಂತಾಗಬೇಕು,**
**ಜಂಗಮನಾದಡೆ ಪ್ರಭುದೇವರಂತಾಗಬೇಕು,**
**ಯೋಗಿಯಾದಡೆ ಸಿದ್ಧರಾಮಯ್ಯನಂತಗಬೇಕು,**
**ಭೋಗಿಯಾದಡೆ ಚನ್ನಬಸವಣ್ಣನಂತಾಗಬೇಕು,**
**ಐಕ್ಯನಾದಡೆ ಅಜಗಣ್ಣನಂತಗಬೇಕು,**
**ಇಂತಿವರ ಕಾರುಣ್ಯ ಪ್ರಸಾರದ ಕೊಂಡು,**
**ಸತ್ಯಹಾಗಿರಬೇಕಲ್ಲದೆ ತತ್ವದ ಮಾತು ಎನಗೇಕಯ್ಯ,**
**ದಾಸಯ್ಯಪ್ರೀಯ ರಾಮನಾಥಾ?"**[೧೯]

ಈ ರೀತಿಯಾಗಿ ಗುರುಲಿಂಗ, ಜಂಗಮ, ದಾಸೋಹ ಯೋಗ, ಐಕ್ಯ ಮುಂತಾದ ತತ್ವಗಳ ಬಗ್ಗೆ ಆಳವಾದ ಜ್ಞಾನವನ್ನು ಹೊಂದಿದ್ದ ದುಗ್ಗಳೆಯು ಸಂಯಮತೆ ಸಹನಶೀಲತೆ, ಪತಿಭಕ್ತಿ, ಪ್ರಸಾರಿಸ್ಥಳದ ಸಾಧಕಿಯಾಗಿ ಇಂದಿಗೂ ಪ್ರಸ್ತುತಳಾಗಿದ್ದಾಳೆ ಮತ್ತು ಇಂದಿನ ಸ್ತ್ರೀ ಸಮಾಜಕ್ಕೆ ಆದರ್ಶಳಾಗಿ ಕಾಣುತ್ತಾಳೆ.

**"ಕಲ್ಯಾಣವಿಲ್ಲ ಕೈಲಾಸವಿಲ್ಲ ಬಸವಾ,**
**ಕಲ್ಯಾಣವಿಲ್ಲದ ಕಾರಣ ಕೈಲಾಸವಿಲ್ಲವೆನಗೆ, ಬಸವ,**
**ಆ ಕಲ್ಯಾಣ ಕೈಲಾಸವಾಯಿತು ಬಸವಾ,**
**ಆ ಕಲ್ಯಾಣವಳಿದು ಕೈಲಾಸವಾದ ಬಳಿಕ ಬಸವನ ಮೂರ್ತಿಯಿಲ್ಲ,**
**ಬಸವನ ಮೂರ್ತಿಯನರಿಯ ಕಾರಣ,**
**ಕೈಲಾಸವಿಲ್ಲ ಕಲ್ಯಾಣವಿಲ್ಲವಯ್ಯಾ ಸಂಗಯ್ಯಾ"**[೨೦]

ಬಸವಣ್ಣನ ಪುಣ್ಯಶ್ರೀ ನೀಲಾಂಬಿಕೆ ಈ ವಚನದಲ್ಲಿ ಕಲ್ಯಾಣ ಮತ್ತು ಬಸವಣ್ಣನವರು ಹೇಗೆ ಅನ್ಯೋನ್ಯವಾಗಿದ್ದರೆಂದು ತಿಳಿಯುತ್ತದೆ. ಪ್ರಾಣಕ್ಕೆ ಪ್ರಾಣವಾಗಿ, ಬದುಕಿಗೆ ಅರ್ಥವಾಗಿ ಆತ್ಮಕ್ಕೆ ಮುಕ್ತಿಯಾಗಿದ್ದ ಪತಿ ಬಸವಣ್ಣನ ಕುರಿತು ವಿವರಿಸಿದ್ದಾಳೆ. ಹೀಗೆ ಸಾಮಾಜಿಕ ಧಾರ್ಮಿಕ, ಆರ್ಥಿಕ, ಸಾಹಿತ್ಯಿಕ ಸ್ತ್ರೀಪರ ಕಾಳಜಿಯನ್ನು ಹೊಂದಿರುವ ಕನ್ನೆರಡನೆಯ ಶತಮಾನದ ಶಿವಶರಣರು ಅನೇಕ ಬದಲಾವಣೆಗಳನ್ನು ಮಾಡಿದರು.[೨೧]

ಕರ್ಮಸಿದ್ದಂತದ ಬರಲು ಕಾಯಕ ಸಿದ್ಧಾಂತ ದಾನದ ಬದಲು ದಾಸೋಹ, ದೇವಾಲಯದ ಬದಲು ದೇವಾಲಯ, ಸ್ಥಾವರ ಲಿಂಗದ ಬದಲು ಇಷ್ಟಲಿಂಗ, ಜಡದ ಬದಲು ಚೈತನ್ಯ, ದೈತ್ಯರ ಬದಲು ಅದ್ವೈತ, ಸುಖದ ಬದಲು ಕಲ್ಯಾಣ, ಕಲ್ಲುಮೂರ್ತಿ ಪೂಜೆಯ ಬದಲು ತಮ್ಮೊಳಗಿನ ಘನದ ಪೂಜೆ. ಸ್ಥಾವರಗಳ ಬದಲು ಜಂಗಮ, ಮಂದಿರಗಳ ಬದಲು ಅನುಭವ ಮಂಟಪ, ಉಳ್ಳವರ ಬದಲು ದುಡಿಯುವ ವರ್ಗ, ದೈವವಾಣಿಯ ಬದಲು ಜನವಾಣಿ, ಸೋಹಂ ಬದಲು ದಾಸೋಹಂ ಈಗ ಅನೇಕ ವಿಶಿಷ್ಟ ವಿನೂತನ, ನಿತ್ಯನೂತನ ಸುಧಾರಣೆಗಳನ್ನು ತರುವ ಮೂಲಕ ಕಲ್ಯಾಣದಲ್ಲಿ ಸಮಾಜಿಕ ರಾಜಕೀಯ ಧಾರ್ಮಿಕ, ಆರ್ಥಿಕ ಸಾಹಿತ್ಯಕ ಸ್ತ್ರೀಪರ ಬದಲಾವಣೆಗಳನ್ನು ತಂದವರು ಹನ್ನೆರಡನೆಯ ಶತಮಾನದ ಶಿವಶರಣರು.[೨೨]

## ಅಡಿ ಟಿಪ್ಪಣಿಗಳ

| | | |
|---|---|---|
| 1. ಡಿ.ಎಸ್. ನಾಗಭೂಷಣ(ಸಂ) | : | ಕುವೆಂಪು ಒಂದು ಪುನರನ್ವೇಷಣೆ ಪುಟ ಸಂ. ೫೨ |
| 2. ಡಾ.ಎಂ. ಎಂ ಕಲಬುರರ್ಗಿ(ಸಂ) | : | ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ ೨೦೮ ಪುಟ ಸಂ. ೫೨ |
| 3. ಡಾ.ಎಂ. ಎಂ ಕಲಬುರರ್ಗಿ(ಸಂ) | : | – ಅದೇ – ವಚನ ಸಂ. ೫೪೬ |
| 4. ಹೆಚ್. ತಿಪ್ಪೆರುದ್ರಸ್ವಾಮಿ | : | ವಚನ ಚಳುವಳಿ ಪುಟ ಸಂ. ೯೨ |
| 5. ಡಾ.ಎಂ.ಎಂ. ಕಲಬುರಗಿ (ಸಂ) | : | ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ ೫೯೦ ಪುಟ ೧೪೭ |
| 6. ಪಿ.ಎ. ನಾರಾಯಣ | : | ಸಮಗ್ರ ವಚನ ಪುಟಸಂ. ೨೨೬ |
| 7. ಡಾ. ವೀರಣ್ಣ ರಾಜೂರು (ಸಂ) | : | ಶಿವಶರಣರ ವಚನ ಸಂಪುಟ ವಚನ ಸಂ. ೧೨೦೬, ಪುಟ ಸಂ. ೩೬೪ |
| 8. ಡಾ. ವೀರಣ್ಣ ರಾಜೂರು (ಸಂ) | : | – ಅದೇ – ವಚನ ಸಂ. ೬೧೪, ಪುಟ ಸಂ. ೧೯೩ |

9. ರಂಜಾನ ದರ್ಗಾ : ಬಸವಣ್ಣನವರ ದೇವರು ಪು.ಸಂ. ೨೫
10. ಎಸ್. ಕೆ. ಕೊಪ್ಪಾ ಮತ್ತು ಎಂ.ಎಂ. ಪಡಶೆಟ್ಟಿ : ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ ಪುಟ. ಸ ೬೩೭
11. Chalukya Journal of Social Sciences - ಪುಟ. 47
12. ಸಂ. ೬೧೪, – ಪುಟ. ೦೬
13. ಡಾ. ಗುರುಲಿಂಗಪ್ಪ ಧಬಾಲೆ : ಶರಣ ಶ್ರಾವಣ ೨೦೧೪ ಪು ಸಂ. ೦೬–೦೭
14. ಡಾ. ಗುರುಲಿಂಗಪ್ಪ ಧಬಾಲೆ : ಸಂ. ೬೧೪, ಪು ಸಂ. ೦೬–೦೭
15. ಡಾ. ಗುರುಲಿಂಗಪ್ಪ ಧಬಾಲೆ : ಸಂ. ೬೧೪, ಪು ಸಂ. ೦೮
16. ಸಂತೋಷಕುಮಾರ ಹೂಗಾರ : ಶರಣೆಯರ ಅನುಭಾವ ಸಂಪದ, ವಚನಶ್ರೀ ಪ್ರಕಾಶನ ಕಲಬುರಗಿ ಪು.ಸಂ. ೧೫
17. ಸಂತೋಷಕುಮಾರ ಹೂಗಾರ : ಸಂ. ೬೧೪, ಪು.ಸಂ. ೦೭
18. ಸಿದ್ದಯ್ಯ ಪುರಾಣಿಕ : ಶರಣ ಚರಿತಾಮೃತ ಪು.ಸಂ. ४೦೫
19. ಶರಣಕಥಾಮಾಲೆ : ಬಸವ ಸಮಿತಿ ಬೆಂಗಳೂರು ಪುಟ ಸಂ. ೨೫
20. ಡಾ.ಆರ್.ಸಿ. ಹೀರೇಮಠ : ಶಿವಶರಣಯರ ವಚನಗಳು ಪುಟ. ೧೮ ವಚನ ೫೧
21. ಯು.ಆರ್. ಅನಂತಮೂರ್ತಿ : ವೀರಶೈವ ಧರ್ಮದರ್ಶನ ಪು ೨೫೭
22. ಎಂ.ಎಂ. ಕಲಬುರ್ಗಿ : ಬಸವಣ್ಣನವರ ವಚನ ಸಂಪುಟ ಪು–೨೧೨.



# ಕಲ್ಯಾಣ ಕರ್ನಾಟಕದಲ್ಲಿ ಬೌದ್ಧ ಧರ್ಮದ ನೆಲೆಗಳು – ಚಾರಿತ್ರಿಕ ದಾಖಲೀಕರಣ.

**–ಡಾ. ವಿಶ್ವನಾಥರೆಡ್ಡಿ ಹೆಚ್. ಪಾಟೀಲ,**
ಮು॥ಪೋ॥ ಮಂಗಳೂರು,
ಶೊರಾಪುರ್ ತಾಲೂಕು, ಯಾದಗಿರಿ ಜಿಲ್ಲೆ.

ಕರ್ನಾಟಕ ಹಲವು ಧರ್ಮಗಳ ಸಮನ್ವಯ ನಾಡು ಬೌದ್ಧ, ಜೈನ, ವೈದಿಕ, ಶೈವ, ವೀರಶೈವ, ವೈಷ್ಣವ, ಇಸ್ಲಾಂ, ಕ್ರೈಸ್ತ ಮುಂತಾದ ಧರ್ಮಗಳು ಇಲ್ಲಿ ಸಮನ್ವಯಗೊಂಡು ಬದುಕಿ ಬಾಳಿವೆ. ಧಾರ್ಮಿಕ ಸಾಂಸ್ಕೃತಿಕ ಪರಂಪರೆಯನ್ನು ನಿರ್ಮಾಣ ಮಾಡಿಕೊಂಡಿವೆ. ತಮ್ಮದೇ ಆದ ವಲಯದಲ್ಲಿ ಧರ್ಮದ ಆಚರಣೆಗಳನ್ನು ಆಚರಿಸುತ್ತಾ ಅನುಸರಿಸುತ್ತಾ ಸಾಮಾಜಿಕ ಸ್ಥಿರತೆಯನ್ನು ಕಾಪಾಡಿಕೊಂಡು ಬಂದಿದೆ.

ಈ ನಿಟ್ಟಿನಲ್ಲಿ ಬಂದ ಬೌದ್ಧ ಧರ್ಮವು ಪ್ರಾಚೀನವು ಹೌದು. ಅಹಿಂಸಾ ಮಾರ್ಗವನ್ನೊಳಗೊಂಡ ಇದು ಪ್ರಬುದ್ಧವೂ ಹೌದು "ಕ್ರಿ.ಪೂ.೬ನೇ ಶತಮಾನದಲ್ಲಿ ಗೌತಮ ಬುದ್ಧನಿಂದ ಬೌದ್ಧ ಧರ್ಮ ಸ್ಥಾಪನೆಗೊಂಡು ಭಾರತ ಅಷ್ಟೇ ಅಲ್ಲದೆ ಇಡೀ ವಿಶ್ವದಲ್ಲಿ ಪ್ರಚಾರಗೊಂಡಿದ್ದು, ಅಲ್ಲಿರುವ ನೆಲೆಗಳು ಸಾರಿ ಹೇಳುತ್ತವೆ. ಹಾಗೆ ಅಶೋಕನಿಂದ ಕರ್ನಾಟಕದಲ್ಲಿ ಪ್ರಚಾರಕ್ಕೆ ಬಂದು ಬೌದ್ಧ ಧರ್ಮವೂ ಕರ್ನಾಟಕವನ್ನಾಳಿದ ಹಲವು ಅರಸರ ಆಳ್ವಿಕೆಯ ಕಾಲದಲ್ಲಿ ರಾಜಾಶ್ರಯ ಪಡೆದಿರುವ ಅಂಶ ಇಲ್ಲಿನ ಶಾಸನಗಳು ತಿಳಿಸುತ್ತವೆ.

ಕ್ರಿ.ಪೂ.ದಿಂದ ಮೊದಲ್ಗೊಂಡ ಬೌದ್ಧ ಧರ್ಮವು ಮೌರ್ಯರಿಂದ ಮೊದಲ್ಗೊಂಡು ವಿಜಯ ನಗರದ ಅರಸರವರೆಗೂ ರಾಜಾಶ್ರಯ ಪಡೆದು ಮುನ್ನೆಡೆದು ಬಂದಿತು. ಆ ಸಂದರ್ಭದಲ್ಲಿ ಬೌದ್ಧರಿಲ್ಲದ ಊರುಗಳಿರಲಿಲ್ಲ. ಬೌದ್ಧರಿಲ್ಲದ ಗೋಷ್ಠಿಗಳಿರಲಿಲ್ಲ. ಬೌದ್ಧರಂತರಹ ಕವಿಗಳಿರಲಿಲ್ಲ. ಒಟ್ಟಿನಲ್ಲಿ ಜನರಿಗಿಂತ ಮಿಗಿಲಾದುದಾವುದೇ ಇರಲಿಲ್ಲವೆಂದು ಹೇಳಿದರು ತಪ್ಪಾಗಲಾರದು. ಅಂತಹ ವೈಭವದಿಂದ ಬೌದ್ಧಧರ್ಮ ಮೆರೆಯುತ್ತಾ ಅನಂತರ ವೈದಿಕ ಧರ್ಮ ಪ್ರಸಾರಗೊಂಡರು, ಯಾವುದೇ ತೊಂದರೆಗೆ ಒಳಗಾಗಲಿಲ್ಲ. ಕ್ರಿ.ಶ.೧೦ನೇ ಶತಮಾನದವರೆಗೂ ಯಾವುದೇ ಹಿಂಜರಿತ ಕಾಣದೇ ಬೆಳೆದು ಬಂದುದ್ದನ್ನು ಇತಿಹಾಸದಲ್ಲಿ ಕಾಣುತ್ತೇವೆ. ೧೧ನೇ ಶತಮಾನದ ಪ್ರಾರಂಭದಲ್ಲಿ ತಲೆ ಎತ್ತಿದ್ದ ಶೈವಧರ್ಮ ಹಾಗೆಯೇ ೧೨ನೇ ಶತಮಾನದ ಪ್ರಾರಂಭದಲ್ಲಿ ಕರ್ನಾಟಕಕ್ಕೆ ಪ್ರವೇಶಿಸಿದ ವೈಷ್ಣವ ಧರ್ಮ ಬೌದ್ಧಧರ್ಮದ ಬೆಳವಣಿಗೆಗೆ ಕಡಿವಾಣ ಹಾಕಿದವು. ಕ್ರಿ.ಶ. ೧೨ನೇ ಶತಮಾನದ ಉತ್ತರಾರ್ಧದಲ್ಲಿ ವೀರಶೈವ ಧರ್ಮ ಬಿರುಗಾಳಿಯಂತೆ ಬಂದು ಬೌದ್ಧಧರ್ಮವನ್ನು ಬೇರು ಸಹಿತ ಅಲುಗಾಡಿಸಿ ಬಿಟ್ಟಿತ್ತು. ಸನ್ಯಾಸ ಪ್ರಧಾನವಾದ ಬೌದ್ಧಧರ್ಮಕ್ಕಿಂತ ಸಂಸಾರ ಪ್ರಧಾನವಾದ ವೀರಶೈವ ಧರ್ಮದದತ್ತ ಜನರು ಒಲವು ತೋರಿದರು ಪಂಡಿತ ಸಮ್ಮುಖ ಬೌದ್ಧ ಕಾವ್ಯಗಳಿಗಿಂತ ಜನ ಸಮ್ಮುಖ ವೀರಶೈವ ವಚನಗಳು ಸಮಾಜದಲ್ಲಿ ಹೆಚ್ಚು ಪ್ರಭಾವ ಬೀರಿದವು. ಈ ಸಂದರ್ಭದಲ್ಲಿ ಬೌದ್ಧಧರ್ಮ ಬೆಳವಣಿಗೆ ಕಾಣುವುದರಲ್ಲಿ ಅಸ್ತಿತ್ವ ಉಳಿಸಿಕೊಳ್ಳುವುದೇ ಕಠಿಣವಾಗತೊಡಗಿತ್ತು.

ಹೀಗೆ ಇಳಿಮುಖ ಕಂಡು ಅವನತಿಯ ಹಾದಿ ಹಿಡಿದ ಬೌದ್ಧಧರ್ಮದ ಕುರುಹುಗಳು (ನೆಲೆಗಳು) ಕರ್ನಾಟಕದ ಹಲವು ಪ್ರದೇಶದಲ್ಲಿ ಕಾಣಸಿಗುತ್ತವೆ. ಯಾವುದೇ ಹಳ್ಳಿ (ಊರು) ಐತಿಹಾಸಿಕ ಹಿನ್ನೆಲೆ ಹೊಂದಿದೆ ಎಂದಾದರೆ ಅಲ್ಲೊಂದು ಬೌದ್ಧ ನೆಲೆ ಇದ್ದೆ ಇರುತ್ತದೆ. ವಿಹಾರಗಳಾಗಲಿ ಸ್ತೂಪಗಳಾಗಲಿ, ಚೈತ್ಯಗಳಾಗಲಿ ಒಡೆದು ಹಾಕಿದರು. ಅಲ್ಲಿ ಅವುಗಳ ಅವಶೇಷಗಳಾದರೂ ಸಿಕ್ಕೆ ಸಿಗುತ್ತವೆ. ಹೀಗೆ ಅನೇಕ ಹಳ್ಳಿಗಳು ಬೌದ್ಧಧರ್ಮದ ಬೀಡಾಗಿವೆ. ಅಂತಹ ಅವಶೇಷಗಳನ್ನು ಹೊಂದಿದ ಪ್ರಮುಖ ಹಳ್ಳಿಗಳನ್ನು ಬೌದ್ಧಕೇಂದ್ರಗಳೆಂದು ಗುರುತಿಸಿ ಅವುಗಳ ವಿವರಗಳನ್ನು ಸಂಶೋಧನಾತ್ಮಕವಾಗಿ ಇಲ್ಲಿ ಪರಿಶೀಲಿಸಲಾಗಿದೆ. ಇವುಗಳು ಕರ್ನಾಟಕವನ್ನಾಳಿದ ಗಂಗರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸರ ಕಾಲದಲ್ಲಿ ಧಾರ್ಮಿಕ ಕೇಂದ್ರಗಳಾಗಿ

ಮೆರೆದಂತಹವುಗಳಾಗಿವೆ. ಅಲ್ಲದೆ ಇನ್ನು ವಿಹಾರಗಳನ್ನು ಸುಸ್ಥಿತಿಯಲ್ಲಿ ಕಾಪಾಡಿಕೊಂಡು ಬಂದು ಧರ್ಮದ ಜೀವಂತಿಕೆಯ ಪ್ರತೀಕವಾಗಿವೆ.

ಭಾರತದಲ್ಲಿ ಬೌದ್ಧಧರ್ಮದ ಹೆಚ್ಚಿನ ಪ್ರಸಾರ ಪ್ರಾರಂಭವಾದದ್ದು ಅಶೋಕನ ಕಾಲದಲ್ಲಿ, ಆದರೆ ಅದಕ್ಕೂ ಮುಂಚೆಯೇ ದಕ್ಷಿಣದಲ್ಲಿ ಬೌದ್ಧಧರ್ಮ ಹಬ್ಬಿರುವ ಸಾಧ್ಯತೆಗಳಿವೆ. ಇದಕ್ಕೆ ಪ್ರಾಚೀನ ಬೌದ್ಧ ಸಾಹಿತ್ಯದಲ್ಲಿ ಸಾಕ್ಷ್ಯಗಳು ಸಿಗುತ್ತವೆ. 'ಸುತ್ತನಿತಪಾತ' ದಲ್ಲಿ ದಕ್ಷಿಣ ಪಥದ[೧] ಉಲ್ಲೇಖವಿದೆ. ಬಾವರಿ ಎಂಬಾತನನ್ನು ಹೆಸರಿಸಿದ್ದು, ಅವನ ಆಶ್ರಮವು ಗೋದಾವರಿ ತೀರದಲ್ಲಿತ್ತೆಂದು ಉಲ್ಲೇಖವಿದೆ. ಬಾವರಿ ಎಂಬ ಯತಿಯು ಗೋದಾವರಿ ತೀರದ ಬಾವರಿ ಆಶ್ರಮದಿಂದ ದಕ್ಷಿಣದ (ನರ್ಮಾದ ನದಿ ತೀರದ ನಗರ) ಮಹಿಷ್ಮಾತಿ ಹೋಗಿ ಅಲ್ಲಿಂದ ಉಜ್ಜೈನಿ, ಗೋನದ್ದ, ವಿದಿಶಾ, ಕೌಸಾಂಬಿ, ಮಾರ್ಗವಾಗಿ ಸಾವತ್ತಿಗೆಗ ಹೋದರೆಂಬ ಉಲ್ಲೇಖ ತಿಳಿದುಬರುತ್ತದೆ.[೨] ಇದರ ಬಗ್ಗೆ ಅಧ್ಯಯನ ಮಾಡಿದ ವಿದ್ವಾಂಸರು ಕ್ರಿ.ಪೂ.೬ನೇ ಶತಮಾನದ ಹೊತ್ತಿಗೆ ದಕ್ಷಿಣ ಪಥಕ್ಕೆ ಬೌದ್ಧಾಗಮನ ಸ್ಪಷ್ಟವಾಗುತ್ತದೆ. ಮಹಾಗೋವಿಂದ ಸುತ್ತದ ಪ್ರಕಾರ ಅಸ್ಸರ ರಾಜ್ಯದ ಮುಖ್ಯಪಟ್ಟಣ ಪೋಲಿನ ಅಂಗುತ್ತರ ನಿಕಾಯದಲ್ಲೂ ಜಂಬುದ್ವೀಪದ ಹದಿನಾರು ಮಹಾ ಜನಪದಗಳಲ್ಲಿ ಅಸ್ಸಕವನ್ನು ಸೇರಿಸಿದೆ.[೩]

ಪ್ರಾಚೀನ ಭಾರತದಲ್ಲಿ ಉಜ್ಜೈನಿಯಿಂದ ದಕ್ಷಿಣದ ಭಾಗವನ್ನು 'ದಕ್ಷಿಣಾಪಥ' ಎಂದೇ ಕರೆಯಲಾಗುತ್ತಿತ್ತು. ಅನಂತರದ ಕಾಲದಲ್ಲಿ ಸುಮಾರಾಗಿ ಚಾಲುಕ್ಯರ ಅವಧಿಯಲ್ಲಿ ನರ್ಮದೆಯೇ 'ದಕ್ಷಿಣಾ ಪಥದ' ಉತ್ತರದ ಮೇರೆಯಾಗಿ ನಿಗದಿತವಾಯಿತು. ಬಾವರಿಯ ಆಶ್ರಮವಿದ್ದದ್ದು ದಕ್ಷಿಣ ಪಥದಲ್ಲಿಯ ಅಲ್ಲಿಯ ಪ್ರದೇಶಗಳ ಮೂಲಕ ಮತ್ತು ಆಸ್ಮಕ ಎರಡರ ಉಲ್ಲೇಖಗಳಿವೆ. [೪]

ಗೋದಾವರಿ ತೀರದುದ್ದಕ್ಕೂ ಇಂದಿನ ಮಹಾರಾಷ್ಟ್ರ–ಕರ್ನಾಟಕ, ಆಂದ್ರಗಳನ್ನೊಳಗೊಂಡ ಪ್ರದೇಶಗಳಲ್ಲಿ ಬೌದ್ಧಧರ್ಮದ ಪ್ರಭಾವ ಗಾಢವಾಗಿತ್ತು. ತೀರ ಈಚೆಗೆ ಈ ಭಾಗಗಳಲ್ಲಿ ಭೂ ಸರ್ವೇಕ್ಷಣೆ ಉತ್ಖನ್ನನಗಳು ಆರಂಭಗೊಂಡಿವೆ.[೫] ಇವುಗಳ ಫಲಿತಾಂಶಗಳಿಂದ ಬೌದ್ಧಧರ್ಮವು ಕನಾಟಕದ ಒಂದು ಪ್ರಮುಖ ಧರ್ಮಗಳಲ್ಲಿ ಒಂದಾಗಿತ್ತೆಂಬುದಕ್ಕೆ ಸಂಶಯವಿಲ್ಲ ಎಂದು ಹೇಳಬಹುದು.

ಇಷ್ಟಲ್ಲದೆ ಬೌದ್ಧ ಪಾಲಿಭಾಷೆ ಸಾಹಿತ್ಯದಲ್ಲಿ ಉಲ್ಲೇಖಗೊಂಡಿರುವ ತಗರಶಿಖಿನ' ಎಂಬ ಗುರುವಿನ ಮೂಲ 'ತಗರನಾಡು' ಅಥವಾ 'ಥೇರ (ಬೀದರ ಜಿಲ್ಲೆಯಾಚೆ, ಮಹಾರಾಷ್ಟ್ರದ ಉಸ್ಮಾನಾಬಾದ ಜಿಲ್ಲೆಯಲ್ಲಿದೆ.) ಇರಬಹುದೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೬] ಹಾಗೆ ಈ ತಗರ ಎಂಬ ಪ್ರದೇಶವು ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಗೋಕರ್ಣ ಬಳಿಯ 'ತೂರ್ಕೆ' ಎಂಬ ಪ್ರದೇಶವೆಂಬ ಅಭಿಪ್ರಾಯವಿದೆ.[೭] ಜಾತಕ ಕಥೆಗಳ ಉಲ್ಲೇಖವೂ ಬೌದ್ಧರಿಗೆ ದಕ್ಷಿಣ ಭಾರತದ ಪರಿಚಯವಿದ್ದದ್ದು ಸ್ಪಷ್ಟವಾಗುತ್ತದೆ. ಪಿ.ಟಿ.ಶ್ರೀನಿವಾಸ ಅಯ್ಯಂಗಾರ ಅವರು ಜಾತಕ ಕಥೆಗಳ ಬಗೆ, ಹೇಳುತ್ತಾ "These stories were written down about the 4th century B.C. but they must have existed as folk tales show that the cuter course between North and South India was a intimate as in previous and Later times"[8] ಎಂದಿರುವ ಅಂಶದಿಂದ ದಕ್ಷಿಣ ಭಾರತದಲ್ಲಿ ಬೌದ್ಧ ಧರ್ಮ ಕ್ರಿ.ಪೂ. ೬ನೇ ಶತಮಾನಕ್ಕೆ ಪೂರ್ವದತ್ತ ಪ್ರಚಾರಕ್ಕೆ ಬಂದಿತ್ತೆಂಬ ಅಂಶ ಬೆಳಕಿಗೆ ಬರುತ್ತದೆ.

ದಕ್ಷಿಣ ಭಾರತದ ಬೌದ್ಧ ಇತಿಹಾಸ ಅದರಲ್ಲಿ ಕರ್ನಾಟಕದಲ್ಲಿ ಬೌದ್ಧ ಧರ್ಮದ ಇತಿಹಾಸವನ್ನು ಅರಿಯಲು 'ಮಹಾವಂಶ' ಕೃತಿ ಪ್ರಮುಖ ಆಧಾರವೆಂದು ಹೇಳಬಹುದು. ಈ ಗ್ರಂಥವು ಕರ್ನಾಟಕ ಎರಡು ಪ್ರಮುಖ ನೆಲೆಗಳಾದ 'ಮಹಿಷ ಮಂಡಲ ಮತ್ತು ಬನವಾಸಿ'ಗಳ ಉಲ್ಲೇಖಗೊಂಡಿದ್ದು, ಕ್ರಿ.ಪೂ ೨೪೨ರಲ್ಲಿ ಸೇರಿದ್ದ ಬೌದ್ಧ ಸಂಗತಿಯ ಬಳಿಕ ಈ ಸ್ಥಳಗಳಿಗೆ ಧರ್ಮ ಗುರುಗಳು ಬಂದದು ಸ್ಪಷ್ಟವಿದೆ.[೯] ಇವುಗಳಲ್ಲಿ 'ಮಹಿಷಮಂಡಲ' ಬಗೆಗೆ ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆ ನಡೆದಿವೆ. ಖ್ಯಾತ ಇತಿಹಾಸ

ತಜ್ಞರಾದ ಬಿ.ಸಿ.ರೈಸರು ಮಹಿಷ>ಮೈಸ್ ಆಗೆ ಅದಕ್ಕೆ ಪರ ಪದವಾಗಿ ಕನ್ನಡದ ಊರು ಸೇರಿ ಮೈಸೂರು ಆಗಿರುವ ಸಾಧ್ಯತೆಯಿದೆ ಎಂದು ಅಭಿಪ್ರಾಯ ಪಡುತ್ತಾರೆ.[೧೦] ಆದರೆ ಫ್ಲೀಟ್‌ರವರು ಈ ಅಭಿಪ್ರಾಯವನ್ನು ಅಲ್ಲಗಳೆದು ನರ್ಮದಾ ತೀರದ ಮಹಿಷ್ಮತಿಯು ಮಹಿಷಮಂಡಲ[೧೧] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಕದಂಬರ ದೊರೆ ವಿಷ್ಣುವರ್ಧನ (ಕ್ರಿ.ಶ. ೫ನೇ ಶತಮಾನದ) ಶಾಸನವೊಂದು ತುಮಕೂರ ಜಿಲ್ಲೆಯ ತುಮಕೂರು ತಾಲೂಕಿನ ಹೆಬ್ಬತದಲ್ಲಿ ದೊರೆತಿದ್ದು, ಅದರಲ್ಲಿ ಮಹಿಷಮಂಡಲ ಅಗ್ರಹಾರವಾಗಿದ್ದು, ಅದಕ್ಕೆ ದಾನಕೊಟ್ಟ ವಿಷಯ ಪ್ರಸ್ತಾಪಿಸುತ್ತದೆ.[೧೨] ಅಶೋಕನ ಶಿಲಾಶಾಸನಗಳು ಕರ್ನಾಟಕದಲ್ಲೂ ಸೇರಿದಂತೆ ದಕ್ಷಿಣ ಭಾರತದ ಕೆಲವೆಡೆ ದೊರೆತಿವೆ. ಶಾಸನಗಳಿಂದ ಚೋಳ, ಪಾಂಡ್ಯ ಸತಿಯ ಪುತ್ರ ಮತ್ತು ಕೊರಳ ಪುತ್ರ ಮುಂತಾದ ಪ್ರದೇಶಗಳಿಗೆ ಧರ್ಮಪ್ರಸಾರ ಕ್ಕಾಗಿ ಬಿಕ್ಖುಗಳನ್ನು ಕಳುಹಿಸಿದ ವಿಷಯ ತಿಳಿದುಬರುತ್ತದೆ.[೧೩] ಕರ್ನಾಟಕದ ಬಹುಭಾಗ ಅಶೋಕನ ಸಾಮ್ರಾಜ್ಯದಲ್ಲಿ ಸೇರಿ ಹೋಗುತ್ತದೆ. ಕರಾವಳಿಯ ಮಟ್ಟಿಗೆ ಈ ಕಲ್ಯಾಣಪುರ ನದಿಯನ್ನು ಆತನ ಮೇರೆಯಂದು ಸ್ಮೀತ್ ಅವರು ಭಾವಿಸುತ್ತಾರೆ. ಅವರ ಪ್ರಕಾರ– "the Tamil States extending to the extremity of the peninsula and known as the chola and pandya kingdoms. Certainly were independent as were the Keralaputra and Satiaputra states on the western of Malabar coast, the southern frontier of the empire may be described approximately as a line drawn from the mouth of pennar rivers near Nellore on the Eastern coast through Cuddappaha and to the south of Chitaldoorg to the rivr kallyanpur on the west coast"**[14]** ಎಸ್.ಕೆ ಅಯ್ಯಂಗಾರರು ಕೇರಳದ ಈಗಿನ ಕೊಚ್ಚಿ ನಗರದಿಂದ ಉತ್ತರದ ಕರಾವಳಿಯ ಭಾಗದಲ್ಲಿ ಸತಿಯಪುತ್ರ ಎಂದು ಅಭಿಪ್ರಾಯ ಪಡುತ್ತಾರೆ.[೧೫]

ಈಗ ಈ ವಾದಗಳ ಹಿನ್ನೆಲೆಯಲ್ಲಿ ಸತಿಯಪುತ್ರದ ಬಗೆಗೆ ವಿವರಣೆ ಪರಿಶೀಲಿಸಬಹುದು. ಪ್ರಾಚೀನ ಕಾಲದ ಅದರಲ್ಲೂ ಕ್ರಿ.ಪೂ. ಅಥವಾ ಕ್ರಿ.ಶ.ದ ಆದಿಭಾಗದ ಇತಿಹಾಸಕ್ಕೆ ಸ್ಪಷ್ಟ ದಾಖಲೆಗಳು ಶಾಸನಗಳು ಸರಿ. ಅಶೋಕನ ಶಾಸನಗಳಲ್ಲಿ ದಕ್ಷಿಣ ಭಾರತ ಅದರಲ್ಲಿ ಕರ್ನಾಟಕದಲ್ಲಿ ಬೌದ್ಧ ಧರ್ಮದ ಪರಂಪರೆಯಲ್ಲಿ ಪ್ರಮುಖ ಆಧಾರಗಳಾಗಿವೆ. ತಮಿಳು ಸಂಗಮ ಸಾಹಿತ್ಯದಲ್ಲಿ ಪರಂಪರೆಯಲ್ಲಿ ಶಿಲಪ್ಪದಿಗಾರಂ. ಅಹನಾಗೂರು, ಕೃತಿಗಳು ಸಹ ಮಾಹಿತಿ ನೀಡುತ್ತವೆ.[೧೬] ಎಲ್ಲರೂ ತಿಳಿದಿರುವಂತೆ ಕರ್ನಾಟಕದಲ್ಲಿ ಬೌದ್ಧಧರ್ಮ ಪ್ರಚಾರ ಮಾಡಿದ ಕೀರ್ತಿ ಅಶೋಕನಿಗೆ ಸಲ್ಲುತ್ತದೆ. ಕರ್ನಾಟಕದ ಹಲವು ಪ್ರದೇಶಗಳಲ್ಲಿ ಸಿಕ್ಕ ಅಶೋಕನ ಶಾಸನಗಳು ಬೌದ್ಧಧರ್ಮದ ಪ್ರಚಾರ ಬೆಳವಣಿಗೆಯ ಬಗ್ಗೆ ತಿಳಿಸುವ ನೆಲೆಗಳಾಗಿವೆ. ಬ್ರಹ್ಮಗಿರಿ ಚಂದ್ರವಳ್ಳಿ ಉದಯಗೊಳಂ, ಮಸ್ಕಿ, ಸನ್ನತಿ ಮುಂತಾದ ಕಡೆ ಅಶೋಕನ ಶಾಸನಗಳು ದೊರೆತಿದ್ದು ಇವು ಕರ್ನಾಟಕದಲ್ಲಿ ಬೌದ್ಧಧರ್ಮದ ಇತಿಹಾಸ ತಿಳಿಯಲು ಸಹಾಯಕವಾಗಿವೆ.

ಶಾತವಾಹನರ ಕಾಲದಲ್ಲಿ ಗೋದಾವರಿ ತೀರದ ಪೈಠಾಣ ರಾಜಧಾನಿಯಾಗಿ ರಾಜಕೀಯ ಶಕ್ತಿಯಾಗಿ ಬೌದ್ಧಧರ್ಮಕ್ಕೆ ಉದಾರವಾದ ಪ್ರೋತ್ಸಾಹ ಕೊಟ್ಟಿತ್ತು. ಹೀಗಾಗಿ ಪೈಠಾನ ದಕ್ಷಿಣ ಭಾರತದ ಒಂದು ಪ್ರಮುಖ ಬೌದ್ಧಕೇಂದ್ರವೆಂದು ಹೇಳುಬಹುದು. ಮೆಗಸ್ತಾನೀಸ (ಕ್ರಿ.ಪೂ. ೩ನೇ ಶತಮಾನ) ಮತ್ತು ಪ್ಲೀನಿ (ಕ್ರಿ.ಶ ಪಾಕೃತ ಒಂದನೇ ಶತಮಾನ) ಮುಂತಾದ ಪ್ರವಾಸಿಗಳ ಬರಹಗಳು ಮತ್ತು ಆ ಕಾಲದ ಶಾಸನಗಳು ಹಾಗೂ ಬೌದ್ಧ ವಿನಯ ಪಿಟಕ ಉಲ್ಲೇಖಗಳಿಂದಾಗಿ ದಕ್ಷಿಣದಲ್ಲಿ ಬೌದ್ಧಧರ್ಮದ ಏಳಿಗೆ ಬಗ್ಗೆ ತಿಳಿದುಬರುತ್ತದೆ.[೧೭] ವಿದೇಶದಿಂದ ಬಂದು ಭಾರತದಲ್ಲಿ ನೆಲೆಸಿ ಭಾರತದ ಇತಿಹಾಸ ಬರೆದವರಲ್ಲಿ ಮೆಗಾಸ್ತಾನೀಸನ ಬರವಣಿಗೆ ನಂಬಲರ್ಹವಾದದು. ಚಂದ್ರಗುಪ್ತ ಮೌರ್ಯನ ಅಸ್ಥಾನದಲ್ಲಿ ರಾಯಭಾರಿಯಾಗಿ ನೆಲೆಸಿದ ಮೆಗಸ್ತಾನೀಸ ಮೌರ್ಯ ಸಾಮ್ರಾಜ್ಯ ದಕ್ಷಿಣ ಪಥದವರೆಗೆ ಹರಡಿದ ಬಗ್ಗೆ ಮಾಹಿತಿ ನೀಡಿದ್ದಾನೆ. ಈ ಅಂಶವು ಚಂದ್ರಗುಪ್ತನ ಆಳ್ವಿಕೆ ಅವಧಿಯಲ್ಲಿಯೇ ಕರ್ನಾಟಕವು ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ತಿಳಿದು ಬರುತ್ತದೆ.

ಫಾಹಿಯಾನ ಚೀನಿ ಯಾತ್ರಿಕನಾಗಿ ಭಾರತಕ್ಕೆ ಬಂದು ಕ್ರಿ.ಶ ೩೯೯ ರಿಂದ ೪೧೧ರವರೆಗೆ ಸಂಚರಿಸಿದವನು. ಇತನ ಪ್ರವಾಸದ ಉದ್ದೇಶ ಬೌದ್ಧಮತದ ತತ್ವಗಳನ್ನು ಅರಿಯುವುದೇ ಆಗಿತ್ತು. ಆದುದರಿಂದ ಇತನ ಕಥನಗಳಲಿ ಬೌದ್ಧ ನಿಸಂ ಸಂಘರಾಮಗಳ, ಬೌದ್ಧ ಬಿಕ್ಷುಗಳ ಬುದ್ಧನು ಕುಳಿತ ನಿಂತ ಜಾಗಗಳ ಅವನು ಬೋಧಿಸಿದ ಸ್ಥಳಗಳ ಅಲ್ಲಿ ನಿರ್ಮಿಸಿದ ಸ್ತೂಪಗಳ ವರ್ಣನೆಯೆ ಹೆಚ್ಚು. ಇತನು ದಕ್ಷಿಣ ಭಾರತಕ್ಕೆ ಪ್ರವಾಸ ಮಾಡದಿದ್ದರು. ಅಲ್ಲಿನ ಬಗೆಗೆ ಕೇಳಿದ ತಿಳಿದ ವಿವರಗಳನ್ನು ಸಂಗ್ರಹಿಸಿದ್ದಾನೆ.[೧೮] ಇನ್ನೊಬ್ಬ ಚೀನಿ ಯಾತ್ರಿಕನಾದ ಹ್ಯೂಯೆನ್‌ತ್ಸಾಂಗ್‌ನು ಕ್ರಿ.ಶ. ೬೩೦–೬೪೪ ರವರೆಗೆ ಭಾರತದ ತುಂಬೆಲ್ಲ ಸಂಚರಿಸಿದನು. ಅಲ್ಲದೆ ದಕ್ಷಿಣ ಭಾರತವನ್ನು ಸಂಚರಿಸಿದ ಇತನು ಪ್ರತ್ಯಕ್ಷದರ್ಶಿ ಕೂಡ. ಆತನ ವರದಿಗಳಿಂದಾಗಿ ಕ್ರಿ.ಶ. ೭ನೇ ಶತಮಾನದ ಬೌದ್ಧ ಧರ್ಮದ ಸ್ಥಿತಿ ಏನಿತ್ತು ಎಂಬುದರ ವಿವರಗಳು ಸಿಗುತ್ತವೆ. ಚಾಲುಕ್ಯ ೨ನೇ ಪುಲಕೇಶಿಯ ರಾಜಧಾನಿಯಾದ ಬಾದಾಮಿಯಲ್ಲಿ ಕೂಡಾ ಬೌದ್ಧಾಲಯಗಳಿದ್ದವು ಎಂಬುದಾಗಿ ಹ್ಯೂಯೆನತ್ಸಾಂಗ್ ತಿಳಿಸಿದ್ದಾನೆ. [೧೯] ಹೀಗೆ ದೇಶಿಯ ವಿದೇಶಿಯರ ಆಧಾರಗಳು ದಕ್ಷಿಣ ಭಾರತ ಅದರಲ್ಲಿ ಕರ್ನಾಟಕದಲ್ಲಿ ಬೌದ್ಧಧರ್ಮದ ಪರಂಪರೆಯನ್ನು ಅರಿಯಲು ಸಹಾಯಕವಾಗಿವೆ. ಆದರೂ ಕನಾಟಕದಲ್ಲಿ ಬೌದ್ಧ ಧರ್ಮದ ಪ್ರಸಾರದ ಸ್ಪಷ್ಟತೆ ಅರಿಯಲು ಮೌರ್ಯರ ಚಕ್ರವರ್ತಿ ಅಶೋಕನ ಶಾಸನಗಳು ದಕ್ಷಿಣ ಭಾರತದಲ್ಲಿ ಒಟ್ಟು ೧೨ ಅಶೋಕನ ಶಾಸನಗಳಲ್ಲಿ ಹತ್ತು ಕರ್ನಾಟಕದಲ್ಲಿವೆ. ಕರ್ನಾಟಕದಲ್ಲಿ ಈ ಶಾಸನಗಳು ದೊರೆತಿರುವುದು ರಾಯಚೂರ ಜಿಲ್ಲೆಯ ಮಸ್ಕಿ, ಕೊಪ್ಪಳ ಜಿಲ್ಲೆಯ ಗವಿಮಠ ಮತ್ತು ಪಾಲ್ಕಿಗುಂಡ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ದಾಪೂರ ಮತ್ತು ಜಟಿಂಗ ರಾಮೇಶ್ವರ, ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದಯಗೊಳಂ, ಗುಲಬರ್ಗಾ ಜಿಲ್ಲೆಯ ಸನ್ನತಿಯಲ್ಲಿ ಶಾಸನಗಳು ದೊರೆತಿದ್ದು ಕರ್ನಾಟಕದ ಇತಿಹಾಸಕ್ಕೆ ಪ್ರಮುಖ ಆಧಾರಗಳಾಗಿವೆ.[೨೦] ಇವುಗಳು ಶಾಸನ ಕೇಂದ್ರಗಳಾಗುವ ಜೊತೆಗೆ ಬೌದ್ಧಧರ್ಮದ ಪ್ರಮುಖ ಕೇಂದ್ರಗಳಾಗಿ ಮುಂದಿನ ಅರಸು ಮನೆತನಗಳಿಗೆ ಸ್ಫೂರ್ತಿಯ ನೆಲೆಗಳಾಗಿವೆ.

ಅಶೋಕನ ಆಳ್ವಿಕೆಯ ಕಾಲದಲ್ಲಿ ಪ್ರಚಾರಕ್ಕೆ ಬಂದ ಬೌದ್ಧಧರ್ಮವು. ಮುಂದೆ ಕರ್ನಾಟಕವನ್ನಾಳಿದ ಹಲವು ಅರಸ ಮನೆತನ ಆಳ್ವಿಕೆ ಕಾಲದಲ್ಲಿ ಪೋಷಣೆಗೊಂಡು ಪ್ರಮುಖ ಧರ್ಮವಾಗಿ ಬೆಳೆಯುತ್ತಾ, ಇವರ ಕಾಲದಲ್ಲಿ ಕರ್ನಾಟಕದಲ್ಲಿ ವಿಹಾರಗಳು, ಸಂಘರಾಮಗಳು, ಬೌದ್ಧಾಲಯಗಳು ಸ್ತೂಪಗಳು ಮುಂತಾದ ಬೌದ್ಧಧರ್ಮದ ಕೇಂದ್ರಗಳು ರೂಪಗೊಂಡ ಕರ್ನಾಟಕದ ಧಾರ್ಮಿಕ ಸಂಸ್ಕೃತಿಗೆ ಅಪಾರ ಕೊಡುಗೆಯನ್ನು ನೀಡಿದ್ದನ್ನು ನೋಡಬಹುದು. ಕರ್ನಾಟಕದ ತುಂಬೆಲ್ಲ ಹಲವು ಬೌದ್ಧ ಧರ್ಮದ ಕೇಂದ್ರಗಳಿದ್ದು ಅವುಗಳಲ್ಲಿ, ಕೆಲವೊಂದು ಮಾತ್ರ ಉಳಿದಿವೆ. ಮಾನವನ ವಿಕೃತಿಗೆ ನಾಶ ಹೊಂದಿರುವ ಜೊತೆಗೆ ಅವುಗಳನ್ನು ಸುಸ್ಥಿತಿಯಲ್ಲಿಡುವ ವ್ಯವಸ್ಥೆ ಇಲ್ಲದೆ ಹಲವು ನೆಲೆಗಳು ಹೇಳಿ ಹೆಸರಿಲ್ಲದೆ ಮಾಮರದ ಹಣ್ಣಿನಂತೆ ನೆಲೆಗೊಂಡಿವೆ. ಸರ್ಕಾರ ನಿರ್ಲಕ್ಷ್ಯ, ಸಂಶೋಧಕರ, ಪಂಡಿತರ ಆಸಕ್ತಿ ಇಲ್ಲದೆ ಹಲವು ಕೇಂದ್ರಗಳು ನಿರ್ಲಕ್ಷಕ್ಕೆ ಒಳಗಾಗಿ ನಾಶ ಹೊಂದುವ ಹಂತದಲ್ಲಿವೆ. ಪ್ರಾಚೀನ ದೇವಾಲಯಗಳು, ವಿಹಾರಗಳು, ಬಸದಿಗಳು, ಕರ್ನಾಟಕ ಇತಿಹಾಸದ ಸಾಂಸ್ಕೃತಿಕ ಪರಂಪರೆ ಅರಿಯಲು ಸಹಾಯಕವಾದ ಕೇಂದ್ರಗಳೆನ್ನಬಹುದು. ಆದರೆ ಇಂದು ಅವುಗಳ ನಿರ್ಲಕ್ಷ್ಯ ಅಧ್ಯಯನದ ನಿರಾಸಕ್ತಿ, ಧಾರ್ಮಿಕ ಭಾವನೆ, ವಿವಿಧ ಕಾರಣಗಳಿಂದ ಇಂದು ಮೂಕ ಸಾಕ್ಷಿಗಳಾಗಿ ನಿಂತಿವೆ. ಹೀಗಾಗಿ ಕರ್ನಾಟಕದಲ್ಲಿ ಬೌದ್ಧಧರ್ಮದ ಪರಂಪರೆಯನ್ನು ಹೊರತರುವು ದೃಷ್ಟಿಯಿಂದ ಈ ಸಂಶೋಧನಾ ಅಧ್ಯಯನದ ವಿಷಯವನ್ನು ಅಂದರೆ ಕರ್ನಾಟಕದಲ್ಲಿ ಬೌದ್ಧ ಧರ್ಮದ ಕೇಂದ್ರಗಳು ಎಂಬ ವಿಷಯವನ್ನು ಆಯ್ದುಕೊಂಡು ಇದ್ದಷ್ಟು ಅವಧಿಯಲ್ಲಿ ಹಲವು ಬೌದ್ಧಕೇಂದ್ರಗಳನ್ನು ಅಧ್ಯಯನಕ್ಕೆ ಒಳಪಡಿಸಿ ಬೆಳಕಿಗೆ ತರುವ ಪ್ರಯತ್ನ ಮಾಡಲಾಗಿದೆ. ಕರ್ನಾಟಕದಲ್ಲಿನ ಪ್ರಮುಖ ಬೌದ್ಧ ಕೇಂದ್ರಗಳಾದ ಬನವಾಸಿ, ಬಳ್ಳಿಗಾವೆ, ಸನ್ನತಿ, ಕದರಿ ಮಂಗಳೂರು, ತೂರ್ಕಿ, ಗೋಕರ್ಣ, ಕೋಳಿವಾಡ, ಡಂಬಳ, ಕೊಪ್ಪಳ, ಐಹೊಳೆ, ಬಾದಾಮಿ, ಬ್ರಹ್ಮಗಿರಿ, ಸಿದ್ದಾಪುರ, ಗವಿಮಠ ಶಿಕಾರಿಪುರ, ಸಗರನಾಡಿನ ನೆಲೆಗಳು, ಮುಂತಾದ ಕೇಂದ್ರಗಳನ್ನು ಅಧ್ಯಯನಿಸಲಾಗಿದೆ.

**ಸನ್ನತಿ:**

ಕರ್ನಾಟಕ ರಾಜ್ಯವು ಧಾರ್ಮಿಕ ಸಾಂಸ್ಕೃತಿಕ ನೆಲೆಯಿಂದ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಅಧ್ಯಯನಕಾರರಿಗೆ ತುಂಬ ಸಾಮಾಗ್ರಿಗಳನ್ನೊದಗಿಸುವ ಕಣಜವಾಗಿದೆ. ಪ್ರಾರಂಭ ಕಾಲದಿಂದ ಇಂದಿನ ತನಕ ತನ್ನ ಹತ್ತು ಮುಖಗಳನ್ನು ತೋರಿಸಿಕೊಂಡು ಬಂದ ಧರ್ಮಗಳು ಅನೇಕ. ಅದರ ಮೂಲಕ ಸಾಂಸ್ಕೃತಿಕ ಒಳನೋಟ ತೋರಿಸಿದ್ದು, ವೈಶಿಷ್ಟ್ಯ ಇಂತಹ ನೆಲೆಯಲ್ಲಿ ಬೌದ್ಧಧರ್ಮ ಉದಯಿಸಿ ತನ್ನ ಶ್ರೀಮಂತಿಕೆಯನ್ನು ಇಂದಿಗೂ ಉಳಿಸಿಕೊಂಡು ಹೋಗಿದೆ. ಇಲ್ಲಿ ಮುಖ್ಯವಾದದು ಗುಲಬರ್ಗಾ ಜಿಲ್ಲೆಯ ಸನ್ನತಿ, ಒಂದು ಬೌದ್ಧ ವಿದ್ಯಾಕೇಂದ್ರವಾದ ಸನ್ನತಿ ಧಾರ್ಮಿಕ ಸಂಶೋಧನೆಗೆ ಕನ್ನೆಯ ನೆಲವಾಗಿದೆ.

ಸನ್ನತಿಯು ಗುಲಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿನ ಒಂದು ಚಿಕ್ಕ ಗ್ರಾಮವಾಗಿದೆ. ತಾಲೂಕು ಕೇಂದ್ರವಾದ ಚಿತ್ತಾಪುರದಿಂದ ನೈಋತ್ಯಕ್ಕೆ ೪೮ ಕಿ.ಮೀ ಯಾದಗಿರಿಯಿಂದ ವಾಯುವ್ಯಕ್ಕೆ ೫೬ ಕಿ.ಮೀ ನಾಲ್ವಾರ ರೈಲು ನಿಲ್ದಾಣದಿಂದ ೧೯ ಕಿ.ಮೀ ದೂರದಲ್ಲಿರುವ ಒಂದು ಪ್ರಾಗೈತಿಹಾಸಿಕ ಹಿನ್ನೆಲೆಯುಳ್ಳ ಕೇಂದ್ರವಾಗಿದೆ. ಪ್ರಾದೇಶಿಕವಾಗಿ 'ಸೊಂಥಿ' ಎಂದೆ ಕರೆಯಲ್ಪಡುವ ಈ ಗ್ರಾಮವು ಭೀಮಾ ನದಿಯ ಎಡ ದಂಡೆಯ ಮೇಲಿರುವ ಪ್ರಾಗೈತಿಹಾಸಿಕ ಹಾಗೂ ಚಾರಿತ್ರಿಕ ಮಹತ್ವದ ಪ್ರಾಚೀನ ನೆಲೆಗಳಲ್ಲಿ ಒಂದಾಗಿದ್ದು, ಪ್ರಾಚೀನದಲ್ಲಿ ಬೌದ್ಧರ ವಿದ್ಯಾಕೇಂದ್ರವು ಆಗಿತ್ತೆಂಬುದಕ್ಕೆ ಸಾಕಷ್ಟು ಪುರಾವೆಗಳು ಲಭಿಸುತ್ತವೆ.[೨೧] ಹಳೆ ಶಿಲಾಯುಗದ ಆಯುಧಗಳು,ಮೌರ್ಯ ಚಕ್ರವರ್ತಿ ಅಶೋಕನ ಆಳ್ವಿಕೆಗೆ ಸೇರಿದ ಬೃಹತ್ ಶಿಲಾಶಾಸನಗಳು ಇಲ್ಲಿಂದ ಈಗಾಗಲೇ ವರದಿಯಾಗಿದ್ದು, ಶಾತವಾಹನರ ಕಾಲದ ಬೌದ್ಧ ಸ್ತೂಪಾವಶೇಷಗಳನ್ನು ಇತ್ತೀಚಿನ ಉತ್ಖನನಗಳಲಿ ಅಧಿಕ ಸಂಖ್ಯೆಯಲ್ಲಿ ಪತ್ತೆ ಹಚ್ಚಲಾಗಿದೆ. ಪ್ರಾಚೀನ ಬೌದ್ಧಕೇಂದ್ರವಾದ ಸನ್ನತಿಯನ್ನು ಮೊದಲ ಬಾರಿಗೆ ಕಪಟರಾಳ ಕೃಷ್ಣರಾಯರು ಕ್ರಿ.ಶ. ೧೯೫೪ರಲ್ಲಿ ಬೆಳಕಿಗೆ ತಂದರು.[೨೨]

ಸನ್ನತಿ ಇಂದು ಹಳೆಯ ಕೊಂಪೆ ಆಗಿದ್ದರೂ ಅದರ ಉತ್ಖನದಿಂದ ಅಧ್ಯಯನದ ಮೇಲೆ ಹೆಚ್ಚು ಬೆಳಕು ಚೆಲ್ಲುತ್ತದೆ. ಮೌರ್ಯರ ಕಾಲದಿಂದ ಅಂದರೆ ಕ್ರಿ.ಶ. ಪೂರ್ವ ೩೫೦ರಿಂದ ಕ್ರಿ.ಶ ೧೩ನೇ ಶತಮಾನದವರೆಗೆ ಅಂದರೆ ಸುಮಾರು ೧೬೫೦ ವರ್ಷಗಳ ಕಾಲ ಕರ್ನಾಟಕದಲ್ಲಿ ಬೌದ್ಧ ಧರ್ಮ ಬೆಳೆದಿತ್ತು. ಒಂದು ಧರ್ಮ ಅಧಃಪತನಕ್ಕಿಡಾದ ಮೇಲೆ ಅಲ್ಲಿ ಮತ್ತೊಂದು ಧರ್ಮ ಉದಯಿಸುತ್ತದೆ. ಕಾಲಗರ್ಭದಲ್ಲಿ ಹುದುಗಿಹೋದ ಧರ್ಮಗಳು ಆಯಾಕಾಲದ ಸಂದರ್ಭಕ್ಕೆ ತಮ್ಮ ಮಹತ್ವ ಪಡೆದುಕೊಂಡಿವೆ. ಒಂದು ಧರ್ಮದ ನಂತರ ಮತ್ತೊಂದು ಧರ್ಮ ಉದಯಿಸುತ್ತದೆ ಎಂಬುದಕ್ಕೆ ಕರ್ನಾಟಕದ ಧರ್ಮಗಳ ಚರಿತ್ರೆ ಕಂಡಾಗ ಅನಿಸದೇ ಇಂದು ಕರ್ನಾಟಕದಲ್ಲಿ ಧರ್ಮ ಸಮನ್ವಯ ಬೆಳೆಯಿತು. ಭಾಷೆ, ವೇಷ, ಕಾಲ ಬದಲಾದಂತೆ ಧರ್ಮಗಳು ಬದಲಾಗುತ್ತ ಬಂದಿರುವುದು ಸಹಜ. ಇಂತಹ ನೆಲದಲ್ಲಿ ಬೌದ್ಧಧರ್ಮ ಉದಯಿಸಿ ಧಮ್ಮ ಪ್ರಚಾರ ಕೈಗೊಂಡಿತ್ತು. ಕರ್ನಾಟಕದ ಅನೇಕ ಭಾಗಗಳಲ್ಲಿ ಬೌದ್ಧಕೇಂದ್ರಗಳಿದ್ದವು ಅಂತವುಗಳಲ್ಲಿ ಸನ್ನತಿಯು ಒಂದು ಪ್ರಮುಖ ಬೌದ್ಧಧರ್ಮ ಕೇಂದ್ರವಾಗಿದೆ.[೨೩]

ಸನ್ನತಿ ಪ್ರದೇಶವನ್ನು ಆಳ್ವಿಕೆ ಮಾಡಿದ ಮೌರ್ಯರ ದೊರೆ ಅಶೋಕನು ಬೌದ್ಧಧರ್ಮ ಪ್ರಚಾರಕ್ಕೆ ತಂದನು, ಇದಕ್ಕೆ ಆಧಾರ ಎಂಬಂತೆ ಈ ಸ್ಥಳದಲ್ಲಿ ಅಶೋಕ ಹಲವು ಶಾಸನಗಳು ದೊರಕಿವೆ. ಸನ್ನತಿಯಿಂದ ಈವರೆಗೆ ಅಶೋಕನ ಕಾಲಕ್ಕೆ (ಕ್ರಿ.ಪೂ. ೩ನೇ ಶತಮಾನ) ಸೇರಿದ ೦೪ ಬ್ರಾಹ್ಮಿ ಶಾಸನಗಳು ವರದಿಯಾಗಿವೆ. ಇವು ತ್ರುಟಿತ ಶಾಸನಗಳಾಗಿದ್ದು ಇವುಗಳಲ್ಲಿ ೨ ಅಶೋಕನ ೧೨ ಹಾಗೂ ೧೪ನೇ ಬೃಹತ ಶಿಲಾಲೇಖಗಳ ಪ್ರತಿಗಳಾದರೆ ಉಳಿದೆರಡು ವಿಶೇಷ ಶಿಲಾಲೇಖಗಳಾಗಿವೆ. ಕರ್ನಾಟಕದಲ್ಲಿ ಈವರಗೆ ಅಶೋಕನ ಕಿರು ಶಿಲಾಲೇಖಗಳೆಷ್ಟು ಪತ್ತೆಯಾಗಿದ್ದು ಸನ್ನತಿಯಲ್ಲಿ ದೊರೆತಿರುವ ಶಾಸನಗಳು ಅಶೋಕನ ಬೃಹತ ಶಿಲಾಲೇಖ ಹಾಗೂ ವಿಶೇಷ ಶಿಲಾಲೇಖ ಪ್ರಕಾರಗಳಿಗೆ ಸೇರಿರುವುದರಿಂದ ಮಹತ್ವ ಪಡೆಯುತ್ತವೆ.[೨೪]

ಇಲ್ಲಿ ಲಭಿಸಿರುವ ಶಿಲಾಲೇಖಗಳು ತ್ರುಟಿತಗೊಂಡಿದ್ದರೂ ಉಳಿದೆಡೆ ದೊರೆತಿರುವ ಇದೇ ಮಾದರಿಯ ಶಾಸನಗಳಿಂದ ಇವು ಅವನ ಧರ್ಮ ಶಾಸನಗಳೆಂದು ಭಾವಿಸಬಹುದಾಗಿದೆ. ಮೇಲಾಗಿ ಭೀಮಾ ನದಿ ತೀರ ಪ್ರದೇಶ ಅಶೋಕನ ಆಳ್ವಿಕೆಗೆ ಒಳಪಟ್ಟಿದ್ದ ಅಂಶ ತಿಳಿದುಬರುತ್ತದೆ.[೨೫]

ಸನ್ನತಿ ಪ್ರದೇಶದಲ್ಲಿ ತನ್ನ ಅಧಿಕಾರ ವಿಸ್ತರಿಸಿದ ಅಶೋಕನು ಬೌದ್ಧಧರ್ಮವನ್ನು ಪ್ರಚಾರಕ್ಕೆ ತಂದು ಸನ್ನತಿಯನ್ನು ಜಾಗೃತ ಧರ್ಮ, ಶಿಕ್ಷಣ, ಸಾಂಸ್ಕೃತಿಕ ಕೇಂದ್ರವಾಗಿ ಮಾರ್ಪಡಿಸಿದನು. ಈ ೦೩ ತೆರನಾದ ಕ್ರಿಯೆ, ಕಾರ್ಯಚಟುವಟಿಕೆಗಳು ಇಲ್ಲಿ ನಡೆದವು. ಮುಂದೆ ಕರ್ನಾಟಕದ ರಂಗ ಸಜ್ಜಿಕೆಯನ್ನು ಆಳ್ವಿಕೆ ಮಾಡಿದ ಶಾತವಾಹನರು, ಚಾಲುಕ್ಯರು, ರಾಷ್ಟ್ರಕೂಟರು ಈ ಪ್ರದೇಶಕ್ಕೆ ಮಾನ್ಯತೆ ನೀಡಿದರು. ಪ್ರಾಗೈತಿಹಾಸಿಕ ಮಾನವ ಶಿಲಾಯುಗ ಸಂಸ್ಕೃತಿಗೆ ನಾವು ಹೋಲಿಸಿದಾಗ ಅಂದಿನ ಪಳಿಯುಳಿಕೆಗಳು ಆಯುಧಗಳು ದೊರಕುವುದುರಿಂದ ಖಚಿತವಾಗಿ ಇದೊಂದು ಪ್ರಾಚೀನ ಬೌದ್ಧಕೇಂದ್ರ ಎಂಬುದರಲ್ಲಿ ಸಂದೇಹವೇ ಇಲ್ಲ ಎಂದು ಹೇಳಬಹುದು.[೨೬]

ಸನ್ನತಿಯು ಬೌದ್ಧರ ಮಹಾಯಾನ ಪಂಥದ ಆರಾಧನೆಯ ಮುಖ್ಯ ಕೇಂದ್ರವಾಗಿತ್ತು[೨೭] ಎಂಬುದು ಗಮನಾರ್ಹವಾಗಿದೆ. ಈ ಒಂದು ನಿಟ್ಟಿನಲ್ಲಿ ಮಹಾಯನ ಪಂಥದ ಬಗ್ಗೆ ಅಧ್ಯಯನಿಸುವುದು ಮಹತ್ವ ಎನಿಸುತ್ತದೆ. ಬನವಾಸಿಗಿಂತಲೂ ಪ್ರಾಚೀನವಾದ ಸನ್ನತಿಯ ಹಲವು ಸ್ಮಾರಕಗಳನ್ನು ಒಳಗೊಂಡ ಧಾರ್ಮಿಕ ಕೇಂದ್ರವಾಗಿದೆ. ಭೀಮಾನದಿಯ ದಂಡೆಗಳಗುಂಟ, ಕನಗನಹಳ್ಳಿ, ಅಂದರೆ ೨-೩ ಮೈಲುಗಳ ಹಂತದವರೆಗೆ ಬೌದ್ಧರ ಕುರುಹುಗಳು ಲಭಿಸುವುದರಿಂದ ಇದಕ್ಕೆ ಹೆಚ್ಚಿನ ಪುಷ್ಟಿ ನೀಡುತ್ತವೆ. ಮೌರ್ಯರ ನಂತರ ಅಧಿಕಾರಕ್ಕೆ ಬಂದ ಶಾತವಾಹನರ ಕಾಲದಲ್ಲಿ ಬೌದ್ಧಧರ್ಮವು ಕರ್ನಾಟಕ ತುಂಬೆಲ್ಲ ಪ್ರಸಾರಕ್ಕೆ ಬಂತು. ಸನ್ನತಿಯು ಸಹ ಶಾತವಾಹನರ ಒಂದು ಪ್ರಮುಖ ಬೌದ್ಧ ಕೇಂದ್ರವಾಗಿತ್ತು. ಇದಕ್ಕೆ ಆಧಾರವೆಂಬಂತೆ ಸನ್ನತಿ ಪರಿಸರದಲ್ಲಿ ಶಾತವಾಹನರ ಕಾಲದ ಹಲವು ಶಾಸನಗಳು ಲಭಿಸಿವೆ.[೨೮]

ಶಾತವಾಹನರ ಕಾಲಕ್ಕೆ ಸೇರಿದ (ಕ್ರಿ.ಶ.೨-೪ನೇ ಶತಮಾನ) ಸುಮಾರು ೭೭ (ಒಟ್ಟು ೮೧) ಪ್ರಾಕೃತ ಭಾಷೆಯಲ್ಲಿರುವ ಬ್ರಾಹ್ಮಿ ಶಾಸನಗಳು ವರದಿಯಾಗಿದ್ದು ಇಷ್ಟೊಂದು ಅಧಿಕ ಸಂಖ್ಯೆಯಲ್ಲಿ ಬ್ರಾಹ್ಮಿ ಶಾಸನಗಳು ರಾಜ್ಯದಲ್ಲಿ ಲಭಿಸಿರುವ ಏಕೈಕ ಸ್ಥಳ ಸನ್ನತಿಯೊಂದೆ ಎಂಬುದು ಗಮನಾರ್ಹವಾಗಿದೆ. ಶಾತವಾಹನ ಅರಸರಾದ ಸಿರಿ ಶಾತಕರ್ಣಿ, ವಾಶಿಷ್ಠ ಪುತ್ರ ಪುಳಮಾಯಿ ಹಾಗೂ ಮಹಾಶಾತವಾಹನ ಅಗ್ನಿ ಶರ್ಮರನ್ನು ಅಮಾತ್ಯರನ್ನು ಅಧಿಕಾರಿಗಳನ್ನು ಹಾಗೂ ಗಣ್ಯ ವರ್ಣಿಕರುಗಳನ್ನು ಉಲ್ಲೇಖಿಸುವ ಈ ಶಾಸನಗಳು ಆ ಕಾಲದ ಚಟುವಟಿಕೆಗಳನ್ನು ದಾಖಲಿಸಿವೆ. ಈ ಶಾಸನಗಳಲ್ಲಿ ಕೆಲವು ವಿಶಿಷ್ಟ ಶಿಲ್ಪ ಕೆತ್ತನೆಗಳಿಂದ ಕೂಡಿದ್ದು, ನೊಗೆ ಸಿಡಿದ ಬಂಡಿ, ವಿಶ್ರಾಂತಿ ಪಡೆಯುತ್ತಿರುವ ದನಗಳ ಶಿಲ್ಪ ಕೆತ್ತನೆಯುಳ್ಳ ಶಿಲಾಫಲಕಗಳು ಇವರ ಕಾಲದಲ್ಲಿ ಅಧಿಕ ಸಂಖ್ಯೆಯಲ್ಲಿ ಹಲವಾರು ಸ್ಥಳಗಳಲ್ಲಿ ಪತ್ತೆಯಾಗಿದ್ದು, ಇವುಗಳನ್ನು ಬೌದ್ಧ ಅನುಯಾಯಿಗಳ ಸ್ಮಾರಕ ಶಿಲ್ಪಗಳೆಂದು ಪರಿಗಣಿಸಲಾಗಿದೆ. ಕೆಲವೊಂದರ ಮೇಲೆ ಶಾಸನಗಳನ್ನು ಬರೆಯಲಾಗಿದೆ.[೨೯]

ಗೌತಮಿಪುತ್ರ ಶಾತಕರ್ಣಿ ತಂದೆಯ ಅಗಲಿಕೆಯ ನೋವನ್ನು ಅನುಭವಿಸುತ್ತಿರುವ ವಶಿಷ್ಠ ಪುತ್ರ ಪುಳಮಾಯಿಯ ಮನ ಮಿಡಿಯುವ ಶಿಲ್ಪ ಕೆತ್ತನೆಯುಳ್ಳ ಶಾಸನ ಫಲಕ ಇಲ್ಲಿಯ ಗಮನಾರ್ಹವಾದ ಶಿಲ್ಪವಾಗಿದ್ದು, ಇಂತಹ ಹಲವು ಶಿಲ್ಪಾವಶೇಷಗಳನ್ನು ಪುರಾತತ್ವ ಇಲಾಖೆಯ ಅಧಿಕಾರಿಗಳು, ಗುಲಬರ್ಗಾದ ರಾಜ್ಯ ವಸ್ತು ಸಂಗ್ರಹಾಲಯದಲ್ಲಿಟ್ಟು ರಕ್ಷಣೆ ಒದಗಿಸಿದ್ದಾರೆ. ಅಲ್ಲಿ ನೋಡಬಹುದು. ಚಂದ್ರಲಾ ಪರಮೇಶ್ವರಿ ದೇವಾಲಯದ ಮುಂದಿರುವ ಮರದ ಬದಿಯಲ್ಲಿರುವ ಬೋಧಿ ವೃಕ್ಷ, ಬರಿದಾದ ಸಿಂಹಾಸನ ಹಾಗೂ ಪಾದುಕೆಯ ಸುಂದರ ಕೆತ್ತನೆಯುಳ್ಳ ಬೌದ್ಧ ಶಿಲ್ಪ ಫಲಕ ಹಾಗೂ ಅದರ ಸನಿಹವೇ ಇರುವ ಶಾಸನವುಳ್ಳ ವೀರಗಲ್ಲುಗಳು ಉಲ್ಲೇಖವು[೩೦] ಶಾತವಾಹನರ ಕಾಲದಲ್ಲಿ ಸನ್ನತಿಯ ಒಂದು ಪ್ರಮುಖ ಬೌದ್ಧ ಕೇಂದ್ರವಾಗಿತ್ತು ಎಂಬುದಕ್ಕೆ ಸಂಶಯವಿಲ್ಲ ಎಂದು ಹೇಳಬಹುದು. ಶಾತವಾಹನರ ಕಾಲದ ಸನ್ನತಿಯು ಅತ್ಯಂತ ಪ್ರಾಚೀನ ಇತಿಹಾಸದ ಶಿಲ್ಪ ಕಲೆಯನ್ನು ಕುರಿತು ಖ್ಯಾತ ಇತಿಹಾಸತಜ್ಞರಾದ

ಮತ್ತು ಕಲಬುರ್ಗಿಯ ಸಂಶೋಧಕರಾದ ಕಪಟರಾಳ ಕೃಷ್ಣರಾಯರು ೧೯೫೬ರಲ್ಲಿಯೇ[೩೧] ಈ ಪ್ರದೇಶದಲ್ಲಿ ಸಂಶೋಧನೆ ನಡೆಸಿದರು. ಸನ್ನತಿಯು ಒಂದು ಧಾರ್ಮಿಕ ಕ್ಷೇತ್ರವೆಂದು ಸಾಧಿಸಿದರು. ಅದರೊಂದಿಗೆ ಶಾತವಾಹನರ ಕಾಲದ ಶಿಲ್ಪಗಳು ಮತ್ತು ಶಾಸನಗಳು ಗುರ್ತಿಸಲಾಯಿತು. 'ಕರ್ನಾಟಕ ಸಂಸ್ಕೃತಿ ಸಂಶೋಧನೆ' ಎಂಬ ಗ್ರಂಥವನ್ನ ಕೃಷ್ಣರಾಯರು ಪ್ರಕಟಿಸಿದರಿಂದ ಸನ್ನತಿಯ ಭಾಗದಲ್ಲಿ ಸಂಶೋಧನೆ ನಡೆಯಲು ಪ್ರಾರಂಭವಾದವು. ೧೯೭೫ರಲ್ಲಿ ಪ್ರೊ. ಅ ಸುಂದರ ಅವರು ಸನ್ನತಿಯ ಉತ್ಖನಕ್ಕೆ ಕಾರಣರಾದರು.[೩೨] ಹೀಗಾಗಿ ಸನ್ನತಿಯ ಪ್ರದೇಶದಲ್ಲಿ ಹಲವು ಬೌದ್ಧ ಶಿಲ್ಪಫಲಕಗಳು, ಬುದ್ಧಪಾದ ವಜ್ರಾಸನ, ಮಣ್ಣಿನ ಬೊಂಬೆಗಳು ದೊರೆತವು.

ಸನ್ನತಿಯಲ್ಲಿ ಸಾಕಷ್ಟು ಬೌದ್ಧ ಸ್ತೂಪಗಳು ದೊರೆತಿದ್ದು ಅವುಗಳಲ್ಲಿ ಬುದ್ಧನ ಜೀವನ ವಿಧಾನಗಳು ಪ್ರತಿಬಿಂಬಿಸುತ್ತವೆ. ಹಾಗೇ ವಿವಿಧ ಮಾದರಿಯ ಬುದ್ಧನ ಶಿಲ್ಪಗಳು ದೊರೆತಿದ್ದು ಬನವಾಸಿಯ ಬುದ್ಧಶಿಲ್ಪಗಳನ್ನು ಹೋಲುತ್ತವೆ. ನಾಗಾರ್ಜುನಕೊಂಡ ಹಾಗೂ ಅಮರಾವತಿಯಲ್ಲಿ ದೊರೆತ ಬುದ್ಧ ಫಲಕದಂತೆ ಸನ್ನತಿಯಲ್ಲಿಯು ಬುದ್ಧನ ವಜ್ರಾಸನ ಫಲಕ ದೊರೆತಿದ್ದು ವಿಶಿಷ್ಠ ಬಗೆಯದಾಗಿದೆ.[೩೩] ಸನ್ನತಿ ಕೃಷ್ಣೆಯ ಉಪನದಿ ಭೀಮೆಯ ಬಲ ದಂಡೆಯ ಹತ್ತಿರದಲ್ಲಿ ಇರುವುದರಿಂದ ಇದರ ಸುತ್ತ ವರ್ಷವಿಡಿ ನೀರು ಹರಿಯುತ್ತದೆ. ಈ ದಂಡೆಯ ಮೇಲಿರುವ ಶ್ರೀ ಚಂದ್ರಲಾಂಬ ದೇವಿಯ ಅಥವಾ ಚಂದ್ರಲಾ ಪರಮೇಶ್ವರಿ ದೇವಸ್ಥಾನವಿದೆ. ಇದೊಂದು ಧಾರ್ಮಿಕ ಪವಿತ್ರಾ ಸ್ಥಳವಾಗಿದೆ. ಪ್ರವಾಸಿಗಳು ಬ್ರಾಹ್ಮಣ ದೇವರು ಎಂದು ಇಂದಿಗೂ ಕರೆಯುತ್ತಾರೆ. ಆದರೆ ಇದು ಪ್ರಾಚೀನ ಕಾಲದ ಒಂದು ಬೌದ್ಧ ಆರಾಧನಾ ಕೇಂದ್ರವಾದ ಬೌದ್ಧಧರ್ಮದ ಅವನತಿಯ ಬಳಿಕ ಚಂಡಾಲ, ಚಂದಲಾ, ಚಂದ್ರಲಾ ಪರಿವರ್ತನೆಯೊಂದಿಗೆ ಇಲ್ಲಿಯ ಆರಾಧ್ಯ ದೇವತ್ವವನ್ನು ಪರಿಧಿಯೊಳಗೆ ಸೇರಿದ ಯತ್ನವೂ ಸ್ಪಷ್ಟವಾಗಿದೆ.[೩೪]

ಸನ್ನತಿಯಿಂದ ಸ್ವಲ್ಪ ದೂರದಲ್ಲಿರುವ ಚಂದ್ರಲಾ ಪರಮೇಶ್ವರಿ ದೇವಾಲಯ ಒಂದು ಪವಿತ್ರ ಧಾರ್ಮಿಕ ಕೇಂದ್ರವಾಗಿದೆ. ಸುತ್ತ-ಮುತ್ತಲಿನ ಯಾತ್ರಿಕರಿಗೆ ಒಂದು ನಿಸರ್ಗದ ಕೇಂದ್ರವಾಗಿದ್ದು, ಹಲವು ಭಕ್ತರು ದೇವಿ ದರ್ಶನಕ್ಕೆ ಈ ಪ್ರದೇಶಕ್ಕೆ ಬರುತ್ತಾರೆ. ಸ್ಥಳ ಪುರಾಣಗಳಲ್ಲಿ ಚಂದ್ರಲಾ ಪರಮೇಶ್ವರಿಯ ಬಗೆಗೆ ಮುಖ್ಯ ಸಂಗತಿಗಳು ನಮ್ಮ ಪ್ರಸ್ತಾಪಕ್ಕೆ ಬರುತ್ತವೆ. ಶ್ರೀಮದ್ವಚಾರ್ಯರಿಂದ ರಚನೆಗೊಂಡ ಮಹಾಭಾರದದಲ್ಲಿ ಚಂದ್ರ ಅವತಾರದ ಕಥೆಯನ್ನು ತಾತ್ಸರ್ಯ ನಿರ್ಣಯದಲ್ಲಿ ಬೇರೆ-ಬೇರೆ ರೀತಿ ಹೇಳಲಾಗಿದೆ. ಮುಂದೆ ಇವಳೆ ಶ್ರೀ ಆದಳು ಅವಳೇ ದ್ರೌಪದಿ ಅವಳಿಗೆ ವಾಯುದೇವ ಪತಿಯಾಗುತ್ತಾನೆ. ಚಂದ್ರ ದೇವಿಯ ಹೆಸರಿನ ಮೂಲ ತಿಳುವಳಿಕೆ ಇದಾಗಿತ್ತು. 'ಸನ್ನತಿ' ಎಂಬ ಶಬ್ದವು ಕೂಡ ಒಂಬತ್ತು ಲಕ್ಷ್ಮೀಯ ಶಕ್ತಿಗಳಲ್ಲಿ ಒಂದಾಗಿದೆ ಎಂಬುದನ್ನು ಶಾರದಾ ತಿಲಕ ಹೆಚ್ಚು ಪ್ರಚಾರ ಪಡಿಸುತ್ತದೆ.[೩೫]

**ಅತ್ತ ಸಮ್ಯಗ ಜೇತ ಪೀಠಂ ನವಶಕ್ತಿ ಸಮನ್ವಿತಂ ॥ ಪಟಲ (೮)**

**ವಿಭೂತಿರ್ನ ಕಾಂತಿ: ಶಾಂತಿ: ಕೀರ್ತಿಶ್ಚ ಸನ್ನತಿ।**

**ಪುಷ್ಟೆರುತ್ಸವಷ್ಠ ಖುಂಗಿಷ್ಪ ಸಪ್ತೊಕ್ವಾಶವ ಶಕ್ತಿಯಃ ಪಟಲಶೋ (೮)**

ವಾಚಕವಾಗಿರದೆ ಶಕ್ತಿ ವಾಚಕವಾಗಿದೆ (ಪ್ರಪಂಚದ ಸಾರದ್ಯಾಕರ ಪಟಲಶ್ಲೋಕ) ೧೯೫೪ ರಲ್ಲಿ ಕಪಟರಾಳ ಕೃಷ್ಣರಾಯ ಶ್ರೀ ಚಂದ್ರಲಾಂಬೆಯು ದೇವಾಲಯದ ಶಾಸನಗಳು ಚಂದ್ರಲಾಂಬ ದೇವಾಲಯ ಹೋಗುವ ಬಲಗಡೆಯ ತಾಳಿಯ ಅಂಳದಲ್ಲಿ ನೋಡಿದರೆ ಎತ್ತು ಹೂಡಿದ ರಥಾಕಾರದ ಒಂದು ಬಂಡಿಯಂತಿದ್ದ ಚಿತ್ರವನ್ನು ಕೊರೆಯಲಾಗಿತ್ತು. ಈ ಚಿತ್ರ ನೊಡಿದರೆ ಉತ್ತರ ಹಿಂದೂಸ್ಥಾನದಲ್ಲಿ ಹೊಡವು ರಥ ತರದ ಬಂಡಿಯ ಹಾಗೆ ಕಾಣಸಿತ್ತು ಇದನ್ನು ಅಧ್ಯಯನಿಸುವ ಮೂಲಕ ಸನ್ನತಿಯ ಚಂದ್ರಲಾಂಬೆ ದೇವಾಲಯದ ಕಲ್ಲುಗಳು ಮೇಲೆ ಬೌದ್ಧ ಸ್ತೂಪದ ಕೆತ್ತನೆಗಳನ್ನು ಸಂಶೋಧಿಸಿದರು.[೩೬] ಇಲ್ಲಿರುವ ಎಲ್ಲ ಬೌದ್ಧ ಸ್ತೂಪಗಳು ಭಗ್ನವಸ್ಥೆಗೊಂಡಿವೆ. ಕಾಲಕ್ಕೆ ತಕ್ಕಂತೆ ಇವುಗಳ ಕಥೆ ಬೇರೆಯಾಗಿವೆ.

ಕ್ರಿ.ಶ. ೪ನೇ ಶತಮಾನದಿಂದ ಇಂದಿನವರೆಗೆ ಸನ್ನತಿಯು ಒಂದಿಲ್ಲೊಂದು ರೀತಿಯಲ್ಲಿ ಎಲ್ಲಾ ಧರ್ಮಗಳ ಪವಿತ್ರ ಕ್ಷೇತ್ರವಾಗೇ ಪರಿಣಮಿಸಿದೆ. ಚಂದ್ರಲಾ ಪರಮೇಶ್ವರಿಯನ್ನು ಚಂದ್ರಲಾಂಬ

ಹಿಂಗುಳಾಂಬೆ, ಎಂಬ ಹೆಸರಿನಿಂದ ಕರೆಯಲಾಗಿದೆ. ಇವು ಹರಿನುಳಾ ಪೀಠದಿಂದ ಬಂದವವೆಂಬ ಪ್ರತೀತಿ ಇದೆ. ಕುಕನೂರಿನಲ್ಲಿ ಸಹ ಶಕ್ತಿ ಜೇಷ್ಠಾ ದೇವತೆ ಎಂದು ಕರೆಯಸಿಕೊಳ್ಳುವ ಮಹಾಮಾಯ ಕೂಡ ಮಲೆನಾಡಿನಿಂದ ಬಂದವಳು ಶೈವ ಪರಂಪರೆಯ ಕಾಳಾ ಮುಖದಿಂದ ಬಂದಿದೆ. ಅಂದರೆ ಮಹಾಮಾಹೆ. ಚಂದ್ರಲಾಂಬ ಎಂಬ ಹೆಸರುಗಳು ದೇವಿಯ ಆರತಿ ಪದ ಜನಪದ ಹಾಡುಗಳಲ್ಲಿ ಕಂಡು ಬರುತ್ತವೆ. ಹೀಗಾಗಿ ಇದರ ಮುಖ ತಿಳಿದುಕೊಂಡರೆ ಈ ಚಂದ್ರಲಾಂಬ ಮಹಾಮಾಯೆ ಎಂಬುದು ಬೌದ್ಧರ ದೇವತೆಗಳ ಹೆಸರುಗಳಾಗಿವೆ. ಏಕೆಂದರೆ ತಾಳ್ತಾಜೆ ವಸಂತಕುಮಾರ ಅವರ ತಮ್ಮ ಕರ್ನಾಟಕ ಬೌದ್ಧರು ಕುರಿತು ಸಂಶೋಧನೆಯಲ್ಲಿ ಸನ್ನತಿ ಕುರಿತು ಉಲ್ಲೇಖ ಬರುತ್ತವೆ. “ಚಂದ್ರಲಾಂಬ ಶಕ್ತಿ ದೇವತೆ ಒಪ್ಪಿಕೊಳ್ಳುತ್ತೇವೆ. ಶಕ್ತಿ ದೇವತೆಗಿಂತ ಪೂರ್ವದಲ್ಲಿ ತಾರಾದೇವಿ ಆಗಿರಬೇಕು ಎಂದು ಹಲವು ಸಂಶೋಧಕರು ಊಹಿಸಿದ್ದು, ಸಂಶೋಧನೆಗೆ ಪುಷ್ಟೀ ನೀಡುತ್ತದೆ.” (೩೭)

ಚಂದ್ರಲಾಂಬ ಗುಡಿಯು ಬೌದ್ಧರ ಕಾಲದಲ್ಲಿ ಸ್ಥಾನವಾಗಿಯೂ ಶೈವ-ಶಾಕ್ತರ ಕಾಲದಲಿ ಪಾರ್ವತಿ, ಮಹಾಕಾಳಿಯ ಸ್ಥಾನವಾಗಿಯೂ ವೈಷ್ಣವರಿಗೆ ಶ್ರೀರಾಮ ಸರಸ್ವತಿ ಸ್ಥಾನವಾಗಿಯೂ ಇದ್ದಿರುವ ಸಾಧ್ಯತೆಯು ಬಗೆಗೆ ಕಪಟರಾಯ ಕೃಷ್ಣಾರಾಯರು ಅಭಿಪ್ರಾಯಪಡುತ್ತಾರೆ. ಬೌದ್ಧರ ಅವಶೇಷಗಳು ಯಾವ ಕಾಲದವು ಯಾವ ಕಾಲದಲ್ಲಿ ಬೌದ್ಧರು ಇಲ್ಲಿ ನೆಲೆಸಿ ಇದನ್ನು ಪವಿತ್ರ ಕ್ಷೇತ್ರವನ್ನಾಗಿ ಮಾಡಿದರು? ಎಂಬುದಾಗಿಯೂ ಹಾಗೆ ಬಲೋಚಿಸ್ಥಾನದಂತಹ ಅತಿದೂರ ಪಶ್ಚಿಮ ದಿಕ್ಕಿನ ಹಿಂಗುಳಾದೇವಿ ಇಲ್ಲಿಗೆ ಎಂದು ಬಂದಳು? ಎಂದು ಪ್ರಶ್ನೆಯನ್ನು ಅಭಿವ್ಯಕ್ತಿಪಡಿಸುತ್ತಾರೆ.(೩೮)

ಅವರ ಪ್ರಶ್ನೆಯನ್ನು ಸೂಕ್ತವಾಗಿರುವಂತ ಬೆಲೋಚಿಸ್ಥಾನದ ಪ್ರದೇಶವೆಂದರೆ ಪ್ರಾಚೀನ ಗಾಂಧಾರಿ ದೇಶ. ಅಲ್ಲಿ ಅಶೋಕನ ಕಾಲದಲ್ಲೇ ಬೌದ್ಧ ಪ್ರಚಾರ ಬಿರುಸಾಗಿ ನಡೆಯುತ್ತಾ ಆ ಬಳಿಕ ತಾಂತ್ರಿಕ ಬೌದ್ಧ ಮತವು ಅಲ್ಲಿ ವಿಶೇಷವಾಗಿ ಪ್ರಸಾರಗೊಂಡಿತು. ಬೌದ್ಧಕೃತಿಗಳಲ್ಲಿ ಈ ಭಾಗವನ್ನು ಉಡ್ಯಾನ ಉದ್ಯಾನವೆಂದೂ ಹೇಳಲಾಗಿದೆ. ಇದು ದೊಡ್ಡ ತಾಂತ್ರಿಕ ಶಾಖೆಯ ಕೇಂದ್ರದಲ್ಲಿ ಆಗಿತ್ತು. ಕನಿಷ್ಕನ ಕಾಲದಿಂದಲೇ ಇಲ್ಲಿ ತಾಂತ್ರಿಕ ಬೌದ್ಧ ಧರ್ಮದ ಪ್ರಸಾರ ಗೊಂಡಿತ್ತು. (೩೯) ಹೊಯನತ್ಸಾಂಗ ಈ ಭಾಗದಿಂದಲೇ ಭಾರತಕ್ಕೆ ಪ್ರವೇಶಿಸಿದನು ಈ ಕತೆಗಳಲ್ಲಿ ತಾಂತ್ರಿಕ ಬೌದ್ಧದ ಅನೇಕ ಅಧಾರಗಳಿವೆ. ರಾವಿನದಿಯ ಉತ್ತರಭಾಗದಲ್ಲಿ ೮೪ ಬೌದ್ಧ ಸಿದ್ಧರ ಗುಡಿಗಳು, ಟಿಬೆಟ್‌ನ ಬರಹಗಳು ಯೋಗಿನಿಯರ ಕಂಚಿನ ಮೂರ್ತಿಗಳು ಸಿಕ್ಕಿವೆ. ಆದುದರಿಂದಲೇ ಇದೇ ಭಾಗದಲ್ಲಿ ಹಿಂಗುಳಾದೇವಿಯ ಕ್ಷೇತ್ರವೂ ಪ್ರಾಚೀನ ಕಾಲದಲ್ಲಿ ಬೌದ್ಧ ತಾಂತ್ರಿಕ ಕೇಂದ್ರವಾಗಿರುವುದು ಕಂಡುಬರುತ್ತದೆ. ಜಾತಕ ಕಥೆಯೊಂದರಲ್ಲಿ (ಭಾಗ-೦೫ ಪು.೪೧೫) ಹಿಂಗುಳಾ ಉಲ್ಲೇಖವಿದೆ.(೪೦) ಹೀಗಾಗಿ ಹಿಂಗುಳಾದೇವಿ ಕ್ರಿಶ.ಕದ ಮೊದಮೊದಲ ಶತಮಾನಗಳಲ್ಲಿ ಬೌದ್ಧ ತಾಂತ್ರಿಕ ದೇವತೆಯಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಸನ್ನತಿಯಲ್ಲಿ ೧೯೬೩-೬೫ ರ ಅವಧಿಯಲ್ಲಿ ಉತ್ಖನನ ಕೈಗೊಂಡ ಸಂದರ್ಭದಲ್ಲಿ ಮೌರ್ಯರ ಪೂರ್ವಕಾಲದ ಚೂರುಗಳು ದೊರಕಿದ ಒಂದು ಅಪರೂಪದ ಹೊಳಪಾದ ಕೆಂಪು ಮರಳು ಕಲ್ಲಿನ ಚಿತ್ರ ಫಲಕವು ಲಭಿಸಿರುವುದು ತುಂಭಾ ಅರ್ಥಪೂರ್ಣವಾದದ್ದು ಇದೊಂದು ಪೂರ್ಣ ಕಲಾಕೃತಿಯಾಗಿದೆ. ಈ ಫಲಕವು ೧೫ ಸೆಂ.ಮೀ ವ್ಯಾಸ ಹೊಂದಿದ್ದು ೦೧ ಸೆ.ಮೀ ನಷ್ಟು ಹಬ್ಬಿದೆ. ಮಧ್ಯದಲ್ಲಿ ಸಮನಾಂತರದಲ್ಲಿ ಕೇಂದ್ರದಿಂದ ಅಂಚಿನವರೆಗೂ ಉದ್ದವಿರುವ ೦೩ ತಾಳೆ ಮರದಂತೆ ಮರಗಳಿವೆ. ಅವುಗಳ ನಡುವೆ ಒಂದು ಸ್ತ್ರೀ ಉಬ್ಬು ಶಿಲ್ಪವಿದೆ. ಅದು ನಿಂತ ಭಂಗಿಯಲ್ಲಿ ಕಂಡರಿಯದ ಹಲವಾರು ಆಭರಣಗಳಿಂದ ಅಲಂಕೃತಗೊಂಡಿದೆ. ನೀಳ ಶರೀರ ಅತಿ ಕಿರಿದಾದ ಸೊಂಟ. ವಿಶಾಲವಾದ ನಡುವನಿ ಕೇಳಭಾಗ, ಸ್ತ್ರೀ ಮಾತೃ ಸ್ವರೂಪ ಹೊಂದುವ ಅಂಶಗಳಿಂದ ಕೂಡಿದೆ, ಈ ಫಲಕದ ಮೇಲೆ ಹಂಸ ಜಿಂಕೆ, ಟಗರು, ಕುದರೆ, ಸಿಂಹ ಮತ್ತು ಆನೆ ಮುಂತಾದ ಚಿತ್ರ ಕೆತ್ತನೆಗಳಿವೆ ಈ ತೇರನಾದ ಅವಶೇಷಗಳನ್ನು ನೋಡಿದರೆ ಮೌರ್ಯರ ಕಾಲದ ಚಿತ್ರ ಫಲಕಗಳು ಸಾಂಸ್ಕೃತಿಕ ಅವಶೇಷಗಳಾಗಿ ಕಂಡು ಬರುವುದು.(೪೧)

ಕ್ರಿ.ಶ. ಒಂದನೇ ಶತಮಾನದಲ್ಲಿ ಬೌದ್ಧರು ಸನ್ನತಿಯಲ್ಲಿ ಕ್ರೀಯಾಶೀಲರಾಗಿದ್ದರು. ಅವರು ಕೆತ್ತಲಾದ ಶಾಸನಗಳು ಶಿಲಾಫಲಕ, ಸ್ತಂಭ. ಇಲ್ಲಿ ಬೆಳಕಿಗೆ ಬಂದಿವೆ. ಇಲ್ಲಿ ದೊರೆತ ಎಲ್ಲ ಶಾಸನಗಳ ಅಪೂರ್ಣವಾಗಿವೆ. ಅನೇಕ ಅಧಿಕಾರಿಗಳು, ನಾಗರಿಕರು, ಗ್ರಹಸ್ಥರು, ವಿವಿಧ ಸ್ಥಳಗಳಿಂದ ಬಂದ ವ್ಯಕ್ತಿಗಳಿಗೆ ಸಾಕಷ್ಟು ಪರಿಚಯ ನೀಡುತ್ತದೆ. ಸಮಾಜದಲ್ಲಿ ಬೇರೆ–ಬೇರೆ ಸ್ತರಗಳು ದಾನಿಗಳು ಇರುತ್ತಿದ್ದರೆಂದು ಶಾಸನಗಳ ಮೂಲಕ ಗೊತ್ತಾಗುವುದು 'ನಾಗನಿಕಾ' ಆಯಕ ಸ್ತಂಭ ನೀಡಿದೆ. ಇಂಥ ಹಲವಾರು ವಿಷಯಗಳು ಇಲ್ಲಿ ಶಾಸನಗಳು ತಿಳಿಸುವುದುರಿಂದ ಬೌದ್ಧಧರ್ಮವನ್ನು ಇಟ್ಟುಕೊಂಡು ದಾನಗಳ ಎಂಬ ಶಾಸನಗಳಾಗಿವೆ. ಈ ದಾನಗಳು ಬೌದ್ಧಧರ್ಮಕ್ಕೆ ವಿಶೇಷ ಕೊಡುಗೆಯನ್ನು ನೀಡಿದವು ಎನ್ನಬಹುದು.[(೪೨)]

ಸನ್ನತಿ ಪ್ರಾಚೀನ ಶಿಲಾಯುಗದ ಸಂಸ್ಕೃತಿಯಿಂದ ತನ್ನದೆ ಆದ ಒಂದು ಪರಂಪರೆ ಹೊಂದಿದೆ. ಮೌರ್ಯರು, ಶಾತವಾಹನರು. ಚಾಲುಕ್ಯರು, ರಾಷ್ಟ್ರಕೂಟರು. ಈ ಭಾಗವನ್ನು ಆಳಿದರು. ಅವರೆಲ್ಲ ಎಲ್ಲ ಧರ್ಮಗಳ ಕುರಿತು ಉಲ್ಲೇಖ ನೀಡಿದ್ದಾರೆ. ಧರ್ಮಕ್ಕೆ ಒತ್ತನ್ನು ಸಹ ನೀಡಿದ್ದಾರೆ. ಸನ್ನತಿಯಲ್ಲಿರುವ ಶಿಲಾಶಾಸನಗಳು, ಶಿಲ್ಪಗಳು ನಮಗೆ ಹರಪ್ಪಾ ಮಹೆಂಜೋದಾರೋ ಕಾಲದ ನೆನಪನ್ನು ತರುತ್ತವೆ. ಪ್ರಾರಂಭದ ಹಂತದಲ್ಲಿ ಇಲ್ಲಿರುವ ಪ್ರಾಚೀನ ಅವಶೇಷ ಮಡಿಕೆ, ಕುಡಿಕೆ ಇವುಗಳಿಂದ ನಿರ್ಮಿತವಾದ ಈ ನಗರ ಆಡಳಿತ ಕೇಂದ್ರವಾಗಿತ್ತು ಅಷ್ಟೇ ಪುರಾತನ ಪವಿತ್ರ ಕ್ಷೇತ್ರವಾಯಿತು. ಕಾಲದ ತುಳಿತಕ್ಕೆ ಯಾವುದು ಈ ಭೂಮಿ ಮೇಲೆ ನಿಲ್ಲಲಾರದು, ಅದಕ್ಕೆ ಮನುಷ್ಯ ಹುಟ್ಟಿ ಮತ್ತೆ ಬರಲು ಹುಲ್ಲು ಬೀಜವಲ್ಲ, ಎಂದು ಬುದ್ಧ ಮನುಷ್ಯನ ಹುಟ್ಟಿನ ಬಗೆ, ಹೇಳುತ್ತಾನೆ. ಅದರಂತೆ ಧರ್ಮಗಳು ಒಂದು ಹುಟ್ಟಿದಾಗ ಅದಕ್ಕೆ ಪ್ರತಿ ಸ್ಪರ್ಧಿಯಾದ ಧರ್ಮ ಹಿಂದೆಯೇ ಹುಟ್ಟಿಕೊಳ್ಳುತ್ತದೆ. ಇದು ಜೀವಂತಿಕೆಯ ಲಕ್ಷಣ, ವಚನಕಾರರ ದಾಸೋಹ ಈ ಕಲ್ಪನೆ ಕೂಡ, ೧೨ನೇ ಶತಮಾನಕ್ಕಿಂತ ಪೂರ್ವದಲ್ಲಿ ಬೌದ್ಧ ಧರ್ಮದಲ್ಲಿ ಕಾಣುತ್ತೇವೆ. ಇದು ಬ್ರಾಹ್ಮಿಲಿಪಿಯಾಗಿರುವುದಿರಿಂದ ಜನರಿಗೆ ತಿಳಿಯಲಿಲ್ಲ. ಧರ್ಮ ಹಾಗೂ ಜನರಿಗೆ ಸಮಾನತೆ ಶಾಂತಿ–ಸೌಹಾರ್ದತೆಯು ಸಂಕೇತವಾಗಿತ್ತು. ಅಂತೆಯೆ ಬೌದ್ಧಧರ್ಮಕ್ಕೆ ಅಶೋಕನಂತಹ ಅರಸನಿಂದ ಹಿಡಿದು ಜನ ಸಾಮಾನ್ಯರು ಸಹ ಬೌದ್ಧರ್ಮದ ಕಡೆಗೆ ಗಮನ ನೀಡಿದರು. ಅದಕ್ಕೆ ಮತಾಂತರಗೊಂಡರು.[(೪೩)]

ಸನ್ನತಿಯು ಬೌದ್ಧಧರ್ಮದ ಧಾರ್ಮಿಕ ಕೇಂದ್ರವಾಗುವುದರೊಂಗಿದೆ ಬೌದ್ಧರ ಶಿಕ್ಷಣ ಕೇಂದ್ರವೂ, ಎಲ್ಲ ಧರ್ಮಗಳ ಪವಿತ್ರ ಕ್ಷೇತ್ರವುವಾಗಿತ್ತು. ಬೌದ್ಧ, ಜೈನ, ವೈಷ್ಣವ, ಶೈವ, ವೀರಶೈವ ಹೀಗೆ ಧರ್ಮಗಳು ಬದಲಾದಂತೆ ಇಲ್ಲಿರುವ ಅವಶೇಷಗಳು ಸಹ ಬದಲಾದವು. ಮಣ್ಣು ಪಾಲಾದವು. ಎಷ್ಟು ವಿಗ್ರಹಗಳು, ಸ್ತೂಪಗಳು ಒಡೆದು ಮೂಕಸಾಕ್ಷಿಗಳಾಗಿ ನಿಂತಿರುವುದು. ಶೋಚನೀಯ ಸ್ಥಿತಿಯಾಗಿದೆ. ಇದಕ್ಕೆ ಕಾರಣ ಆಸಕ್ತಿಯ ಕೊರತೆ ಎಂದು ಹೇಳಬಹುದು. ಇಲ್ಲಿರುವ ಅವಶೇಷಗಳನ್ನು ಒಡೆದು ನದಿಯ ನಿರಿನ ಪಾವಟಿಗೆಯ ಕಲ್ಲುಗಳನ್ನಾಗಿಸಿದ್ದು ಕಂಡುಬರುತ್ತದೆ. ಇದೊಂದು ನಿರ್ಲಕ್ಷವೇ ಎನ್ನಬಹುದು. ಆದರು ಅರಿವಿಲ್ಲದಂತೆ ಅವಶೇಷಗಳನ್ನು ಹಾಳುಮಾಡುತ್ತಿರುವುದು ವಿಷಾದನೀಯವಾಗಿದೆ. [(೪೪)]

ಒಟ್ಟಾರೆಯಾಗಿ 'ಸನ್ನತಿ' ಕರ್ನಾಟಕದಲ್ಲಿಯೇ ಒಂದು ಪ್ರಮುಖ ಬೌದ್ಧರ ಕೇಂದ್ರವಾಗಿತ್ತು ಎಂಬುದುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಸನ್ನತಿಯಲ್ಲಿ ಬೌದ್ಧಧರ್ಮದ ಅನೇಕ ಕುರುಹುಗಳು. ಅವಶೇಷಗಳು ಸ್ಮಾರಕಗಳಿಂದ ತನ್ನ ಪ್ರಾಚೀನತೆಯನ್ನು ಸಾರುವುದರ ಮುಖಾಂತರ ಜನತೆಯ ಕಲೆ, ಆಡಳಿತ, ಸಾಹಿತ್ಯ, ಸಮಾಜದ, ಧಾರ್ಮಿಕತೆಯ ಆಧಾರದ ಮೇಲೆ ಶಾಶ್ವತವಾಗಿ ಉಳಿದು, ಬೌದ್ಧರ ಪವಿತ್ರ ಸ್ಥಳವಾಗಿ ಕಂಡುಬರುವುದು ಹೆಮ್ಮೆಯ ಸಂಗತಿಯಾಗಿದೆ.

**ಹಂಪಿ:**

ಹಂಪಿ ಅಥವಾ ಶತಮಾನಗಳ ಹಿಂದೆ ಪ್ರಚಲಿತವಾಗಿದ್ದಂತ ಪಂಪೆ, ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕಿನ ತುಂಗಭಧ್ರಾ ನದಿಯ ದಕ್ಷಿಣ ದಂಡೆಯ ಮೇಲಿದೆ. ವಿಶ್ವ ಪರಂಪರೆಯ ಕೇಂದ್ರವಾಗಿರುವ

ಹಂಪಿ ಕರ್ನಾಟಕದ ಕಲಾವಂತಿಕೆಯ ಅವಶೇಷಗಳಲ್ಲೇ ಅತ್ಯಂತ ಸುಂದರವಾದುದಾಗಿದೆ. ಹಾಗೂ ಚಿತ್ತಾಕರ್ಷಕವಾಗಿದೆ. ಪುರಾತನ ದೇವಾಲಯಗಳು ಹಾಗೂ ಸ್ಮಾರಕಗಳಿಂದ ಕೂಡಿದ ಇದೊಂದು ಅಚ್ಚರಿಗಳ ಬಿಡಾಗಿದೆ.

ಇತಿಹಾಸ ಹಾಗೂ ಸ್ಥಳೀಯ ಪರಂಪರೆಗಳ ಪ್ರಕಾರ ವಿಜಯ ನಗರ ದೊರೆಗಳು ರಾಜಧಾನಿಯನ್ನಾಗಿ ಆಯ್ಕೆ ಮಾಡಿಕೊಳ್ಳುವ ಮುನ್ನ ಹಂಪಿಯು ಸಮೃದ್ಧವಾದ ಹಾಗೂ ಶ್ರೀಮಂತ ಪಟ್ಟಣವಾಗಿತ್ತು. ಶ್ರೇಷ್ಠ, ಮಹಾಕಾವ್ಯ ರಾಮಾಯಣದಲ್ಲಿ ಹಲವು ನಾಟಕೀಯ ಘಟನೆಗಳಿಗೆ ವೇದಿಕೆಯಾಗಿರುವ ಕಿಷ್ಕಿಂದೆಯು ಹಂಪಿ ಹತ್ತಿರದಲ್ಲೇ ಇತ್ತು. ಎಂದು ನಂಬಲಾಗಿದೆ. ರಾಮಾಯಣ ಕಾಲದಲ್ಲಿ ಈ ಪ್ರದೇಶವನ್ನು ವಾನರ ಕುಲಕ್ಕೆ ಸೇರಿದ ವಾಲಿ ಮತ್ತು ಸುಗ್ರೀವ ಎಂಬ ಸಹೋದರರು ಆಳುತ್ತಿದ್ದರು. ಪಂಪಾನದಿಯ (ಈಗಿನ ತುಂಗಭದ್ರಾ) ದಂಡೆಯಲ್ಲಿ ಪರ್ವತದ ಮೇಲೆ ಮಾತಂಗ ಋಷಿಗಳ ಆಶ್ರಮವಿತ್ತು. ಈ ಪರ್ವತವನ್ನು ಮತಂಗ ಪರ್ವತ ಎಂದು ಕರೆಯುತ್ತಿದ್ದರು.[೪೫]

ವಿಜಯನಗರವನ್ನು ಕರ್ನಾಟಕದ ಸುವರ್ಣಯುಗ ಎಂದು ಇಂದು ನೆನಪಿಸಿಕೊಳ್ಳಲಾಗುತ್ತದೆ. ಆಗ ಪ್ರಖ್ಯಾತ ಕವಿಗಳು ಕೃಷ್ಣ ದೇವರಾಯನ ಆಸ್ಥಾನವನ್ನು ಕಳೆಗಟ್ಟಿಸಿದ್ದರು. ಹೆಸರಿನಲ್ಲೇ ವಿಜಯವನ್ನು ಹೊಂದಿದ ವಿಜಯನಗರವು 'ಹಂಪಿ'ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಹಿಂದು ಸಾಮ್ರಾಜ್ಯಗಳಲ್ಲಿ ಶ್ರೇಷ್ಠವಾಗಿತ್ತು. ಹಿಂದೂ ಧರ್ಮದ ಸಂರಕ್ಷಣೆಗೆ ಉದಯಿಸಿದ ವಿಜಯನಗರ ಸಾಮ್ರಾಜ್ಯವು ಎಲ್ಲ ಧರ್ಮಗಳು ಆಶ್ರಯ ಕೇಂದ್ರವಾಗಿತ್ತು. ಹಂಪಿಯು ಶೈವ, ವೈಷ್ಣವ ಜೈನ, ಇಸ್ಲಾಂ ಮತ್ತು ಬೌದ್ಧ ಧರ್ಮದ ಕೇಂದ್ರವಾಗಿತ್ತು.[೪೬]

ವಿಜಯನಗರದ ಆಳ್ವಿಕೆಯ ಕಾಲದಲ್ಲಿ ಬೌದ್ಧಧರ್ಮವು ಪ್ರಚಲಿತದಲ್ಲಿತ್ತು. ಆದರೆ ಅಷ್ಟೇನೂ ಜನಪ್ರಿಯವಾಗಿರಲಿಲ್ಲ. ಕೃಷ್ಣದೇವರಾಯ ತನ್ನ ಅಮುಕ್ತಮೌಲ್ಯದ ಗ್ರಂಥದಲ್ಲಿ 'ಬುದ್ಧನನ್ನು ವಿಷ್ಣುವಿನ ಅವತಾರ'ವೆಂದು ತಿಳಿಸಿದ್ದಾನೆ. [೪೭] ವಿಜಯನಗರದ ಅರಸರು ಬೌದ್ಧ ಧರ್ಮಕ್ಕೆ ನೀಡಿದ ದಾನದತ್ತಿಗಳ ಬಗ್ಗೆ ಹಲವು ಶಾಸನಗಳು ವಿವರಿಸುತ್ತವೆ.

ಈಚೆಗೆ (೧೯೮೬ರಲ್ಲಿ) ಹಂಪಿಯಲ್ಲಿ ಪುರಾತತ್ವ ಇಲಾಖೆ ಶೋಧ ನಡೆಸುವ ಸಂದರ್ಭದಲ್ಲಿ ಕೆಲವು ಅಂಶಗಳು ಬೆಳಕಿಗೆ ಬಂದಿವೆ. ಅಲ್ಲಿಯ ರಾಜ ವಾಡೆಯ ಎಡಪಕ್ಕದ ಕೋಟೆಯ ಗೋಡೆಯ ಬದಿಯಲ್ಲಿ ಅಗೆತ ನಡೆಸಿದಾಗ ಅಮೃತ ಶಿಲೆಯ ಕೆಲವು ಪಟ್ಟಿಕೆಗಳು ದೊರೆತಿದ್ದು, ಅವುಗಳಲ್ಲಿ ಬುದ್ಧನ ಜೀವನವನ್ನು ಪ್ರತಿ ಬಿಂಬಿಸುವ ಕೆತ್ತನೆಗಳು ಕಂಡು ಬರುತ್ತವೆ. [೪೮] ಕೊಪ್ಪಳವು ಹಂಪಿಗೆ ಸಮೀಪವೇ ಇದ್ದಿತಾಗಿ ಅಲ್ಲಿಯ ಬೌದ್ಧರ ಪ್ರಭಾವ ಇಲ್ಲಿಯರೆಗೂ ವ್ಯಾಪಿಸಿರುವ ಸಾಧ್ಯತೆಯಿದೆ. ಈ ಬಗ್ಗೆ ಇನ್ನು ಹೆಚ್ಚಿನ ಶೋಧನೆ ನಡೆಯಬೇಕಾಗಿದೆ.

**ಮಸ್ಕಿ:**

ರಾಯಚೂರು ಜಿಲ್ಲೆಯ ಲಿಂಗಸೂರು ತಾಲೂಕಿನ ಕೇಂದ್ರವಾದ ಮಸ್ಕಿ. ಲಿಂಗಸೂರಿನಿಂದ ೨೬ ಕಿ.ಮೀ. ದೂರದಲ್ಲಿರುವ ಪ್ರಾಗೈತಿಹಾಸಿಕ ನೆಲೆಯಾಗಿದೆ. ಅಶೋಕನ ಶಾಸನದಿಂದ ಪ್ರಸಿದ್ಧವಾದ ಮಸ್ಕಿ ಕರ್ನಾಟಕವನ್ನಾಳಿದ ಹಲವು ಅರಸರ ಆಳ್ವಿಕೆಗೆ ಒಳಪಟ್ಟ ಐತಿಹಾಸಿಕ ಕೇಂದ್ರವಾಗಿದೆ. ಪ್ರಾಚೀನ ಬೌದ್ಧಧರ್ಮದ ಕೇಂದ್ರವಾದ ಮಸ್ಕಿಯು ಮೌರ್ಯರ ಆಳ್ವಿಕೆಗೆ ಒಳಪಟ್ಟ ನೆಲೆಯಾಗಿದ್ದು, ಅಶೋಕನ ಶಾಸನದಿಂದ ಇಡೀ ಜಗತ್ತಿಗೆ ಹೆಸರುವಾಸಿಯಾಗಿದೆ. [೪೯]

ಕರ್ನಾಟಕದ ಇತಿಹಾಸದಲ್ಲಿ ಉಪಲಬ್ಧವಿರುವ ಮೊತ್ತಮೊದಲ ಲಿಖಿತ ದಾಖಲೆಗಳಾದ ಅಶೋಕನ ಶಿಲಾಶಾಸನಗಳು. ಬೌದ್ಧ ದಾಖಲೆಗಳು ಹೌದು, ಅಶೋಕನ ಆಡಳಿತ ಕಾಲ ಸುಮಾರು ಕ್ರಿ.ಪೂ. ೨೭೩ರಿಂದ ೨೩೨ರವರೆಗೆ ಆತನ ಆಳ್ವಿಕೆಯ ಎಂಟನೆಯ ವರ್ಷದಲ್ಲಿ ಕಳಿಂಗದ ಮೇಲೆ ದಂಡೆತ್ತಿ

ಹೋಗಿ ನಡೆಸಿದ ಯುದ್ಧವೇ ನಿರ್ಣಯಕವಾಗಿ ಆತನ ಮನಸ್ಸು ಹಿಂಸೆಗೆ ಪ್ರತಿಯಾಗಿ ಅಹಿಂಸೆಯನ್ನು ಸ್ವೀಕರಿಸಿತು. ಧರ್ಮದ ಅನುಯಾಯಿಯಾಗಿ ಜನಪ್ರೀಯ ಅಂಶಗಳನ್ನು ಉದ್ದಗಲಕ್ಕೂ ಪ್ರಸಾರ ಪಡಿಸಿದ್ದು ಅಶೋಕನ ವೈಶಿಷ್ಟ್ಯ ಅಶೋಕನ ಶಿಲಾಶಾಸನಗಳು ತೀರ ವಿಶಿಷ್ಟವಾದ ಅಧ್ಯಯನ ಯೋಗ್ಯವಾದ ಸಾಹಿತ್ಯವಾಗಿದೆ. [(೩೦)]

ಕರ್ನಾಟಕದಲ್ಲಿ ದೊರೆತಿರುವ ಅಶೋಕನ ಶಾಸನಗಳೆಲ್ಲ ಲಘು ಶಿಲಾಲೇಖಗಳಾಗಿವೆ. ಈವರೆಗೆ ಒಟ್ಟು ಹತ್ತೊಂಬತ್ತು ಕಡೆಗಳಲ್ಲಿ ಈ ಬಗೆಯ ಶಿಲಾಲೇಖಗಳು ದೊರೆತಿದ್ದು, ಅವುಗಳಲ್ಲಿ ಹನ್ನೆರಡು ಸ್ಥಳಗಳು ದಕ್ಷಿಣ ಭಾರತದಲ್ಲಿವೆ. ಆ ಹನ್ನೆರಡರಲ್ಲಿ ಹತ್ತು ಕರ್ನಾಟಕದಲ್ಲಿವೆ. ಕರ್ನಾಟಕದಲಿ ಈ ಶಾಸನಗಳು ದೊರೆತಿರುವುದು ರಾಯಚೂರು ಜಿಲ್ಲೆಯ ಮಸ್ಕಿ, ಕೊಪ್ಪಳ ಜಿಲ್ಲೆಯ ಗವಿಮಠ ಮತ್ತು ಪಾಲ್ಕಿಗೊಂಡ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಂಟ್ಟಿಂಗರಾಮೇಶ್ವರ, ಬಳ್ಳಾರಿ ಜಿಲ್ಲೆಯ ನಿಟ್ಟೂರು, ಮತ್ತು ಉದಯಗೊಳಂಗಳಲ್ಲಿ ಅಶೋಕನ ಶಾಸನಗಳು ಕಾಣಬಹುದು. ಇದರ ಆಧಾರದ ಮೇಲೆ ಅಶೋಕನ ಆಳ್ವಿಕೆಗೆ ಕರ್ನಾಟಕವು ಒಳಪಟ್ಟಿತ್ತು ಮತ್ತು ಬೌದ್ಧಧರ್ಮ ಪ್ರಚಾರಕ್ಕೆ ಬಂತು ಎಂದು ಹೇಳಬಹುದು. [(೩೧)]

ಅಶೋಕನ ಈ ಕರ್ನಾಟಕದ ಶಾಸನಗಳಲ್ಲಿ ಮಸ್ಕಿ ಶಾಸನವು ಪ್ರಮುಖವಾಗಿದೆ. ಕಾರಣ ಭಾರತದ ತುಂಬೆಲ್ಲ ದೊರೆತ ಅಶೋಕನ ಶಾಸನಗಳಲ್ಲಿ 'ದೇವನಾಂಪ್ರೀಯ' ಎಂಬ ಹೆಸರು ಮಾತ್ರ ನಿರೂಪಿತಗೊಂಡಿತು. ದೇವನಾಂಪ್ರೀಯ ಯಾರು ಎಂಬ ಇತಿಹಾಸಕಾರರು, ಜಿಜ್ಞಾಸೆ ಉಂಟಾಗಿತ್ತು. ಈ ಜಿಜ್ಞಾಸೆಯನ್ನು ರಾಯಚೂರು ಜಿಲ್ಲೆಯ ಮಸ್ಕಿ ಶಾಸನವು ದೂರಮಾಡಿತು. ಈ ಮಸ್ಕಿ ಶಾಸನದಲಿ 'ದೇವನಾಂಪ್ರೀಯ' ಅರಸೋ ಅಶೋಕ'[(೩೨)] ಎಂಬುದಾಗಿ ಬರೆದಿದ್ದರಿಂದ ದೇವನಾಂಪ್ರೀಯ ಎಂಬುದು ಅಶೋಕ ತನ್ನನ್ನು ಕರೆದುಕೊಳ್ಳುತ್ತಿದ್ದ ಹೆಸರು ಎಂಬ ಆ ಮೊದಲಿನ ಊಹೆಗೆ ಸ್ಪಷ್ಟ ಪುರಾವೆ ಸಿಕ್ಕಿತ್ತು. ಇದರ ಆಧಾರದ ಮೇಲೆ ಮಸ್ಕಿವು ಸಹ ಅಶೋಕನ ಕಾಲದಲ್ಲಿ ಒಂದು ಪ್ರಮುಖವಾದ ಬೌದ್ಧಕೇಂದ್ರವಾಗಿತ್ತು. ಎಂಬುದು ಸ್ಪಷ್ಟತೆ ತಿಳಿದುಬರುತ್ತದೆ.

**ನಿಟ್ಟೂರು:**

ಕರ್ನಾಟಕದಲ್ಲಿ ದೊರೆತ ಅಶೋಕನ ಶಾಸನಗಳಲ್ಲಿ ನಿಟ್ಟೂರು ಶಾಸನವು ಒಂದಾಗಿದೆ. ಬಳ್ಳಾರಿ ಜಿಲ್ಲೆಯ ಶಿರಗುಪ್ಪ ತಾಲೂಕಿಗೆ ಸೇರಿದ ಒಂದು ಸಣ್ಣ ಹಳ್ಳಿ ನಿಟ್ಟೂರು, ಇದು ಶಿರಗುಪ್ಪಾ ಹೊಸಪೇಟೆ ಮಧ್ಯದಲ್ಲಿರುವ ಒಂದು ಐತಿಹಾಸಿಕ ಬೌದ್ಧಕೇಂದ್ರವಾಗಿದೆ. ಇಲ್ಲಿ ದೊರೆತ ಅಶೋಕನ ಶಾಸನದಿಂದ ನಿಟ್ಟೂರಿನ ಇತಿಹಾಸವನ್ನು ಅರಿಯಬಹುದು. ಮೌರ್ಯರ ಆಳ್ವಿಕೆಗೆ ಒಳಪಟ್ಟ ಈ ಗ್ರಾಮವು ಅವರ ಕಾಲದ ಪ್ರಾಚೀನ ಬೌದ್ಧ ಕೇಂದ್ರವಾಗಿ ಕರ್ನಾಟಕದ ಸಂಸ್ಕೃತಿಗೆ ಅಪಾರ ಕೊಡುಗೆಯನ್ನು ನೀಡಿದೆ.

ನಿಟ್ಟೂರು ಗ್ರಾಮದಿಂದ ೦೨ ಕಿ.ಮೀ ದೂರದಲ್ಲಿ ಚಿಕ್ಕಪ್ಪನ ಬೆಟ್ಟ ಎಂಬ ಒಂದು ಸಣ್ಣ ಗುಡ್ಡವಿದೆ. ಆ ಗುಡ್ಡದ ಎರಡು ಬಂಡೆಗಳ ಮೇಲೆ ಅಶೋಕನು ಕೆತ್ತಿದ್ದ ಶಾಸನಗಳಿವೆ. ಇದನ್ನು ಮೊದಲು ಪರಿಚಯಿಸಿದವರು. ವಿಶ್ವನಾಥ, ನಂತರ ವಿದ್ವಾಂಸರಾದ ಎಸ್.ಶೆಟ್ಟರ, ಎಸ್.ರಾಜಶೇಖರ ಮತ್ತು ಬೆಂಗಳೂರಿನ ಕೇಂದ್ರಿಯ ಪ್ರಾಚ್ಯವಸ್ತು ಅಧಿಕಾರಿಗಳಿಂದ ಶ್ರೀ ಶ್ರೀನಿವಾಸ ಮತ್ತು ಸಂಪತ ಎಂಬುವರು ಮೊದಲನೆಯ ಶಾಸನವು ಏಳು ಸಾಲುಗಳಿಂದ ಕೂಡಿದ್ದು, ಬ್ರಹ್ಮಗಿರಿಯ ಶಾಸನ ಪಾಠವನ್ನು ಹೋಲುತ್ತದೆ. ಈ ಶಾಸನದಲ್ಲಿ ಅಶೋಕನು ತಾನು ಬೌದ್ಧಧರ್ಮದ ಪ್ರಚಾರದಲ್ಲಿ ತೋರಿಸಿದ ಆಸಕ್ತಿಯ ಫಲ, ಉನ್ನತ ವ್ಯಕ್ತಿಮಾತ್ರವಲ್ಲ ಸಾಮಾನ್ಯ ವ್ಯಕ್ತಿಯೂ ಸಹ ಧರ್ಮ ಪ್ರಚಾರದಲ್ಲಿ ತೊಡಗಬಹುದೆಂದು ಹೇಳಿದ್ದಾನೆ.[(೩೩)]

ಅಶೋಕನ ಶಾಸನದ ಆಧಾರದ ಮೇಲೆ ಹೇಳುವುದಾದರೆ ಅಶೋಕನು ಬೌದ್ಧಧರ್ಮದ ಪ್ರಚಾರಕ್ಕಾಗಿ ನಿಟ್ಟೂರಿಗೆ ಬಂದು ಈ ಶಾಸನ ಕೊರೆಸಿದನೆಂದು ಸ್ಪಷ್ಟವಾಗುತ್ತದೆ. ಇದರ ಆಧಾರದ ಮೇಲೆ ನಿಟ್ಟೂರು ಸಹ ಒಂದು ಬೌದ್ಧಧರ್ಮದ ಕೇಂದ್ರವಾಗಿತ್ತೆಂದು ಅರಿಯಬಹುದು.

**ಹುರಸಗುಂಡಗಿ:**

ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿನ ಸಗರ ನಾಡಿನ ಪ್ರಮುಖ ಬೌದ್ಧ ಕೇಂದ್ರವಾದ ಹುರಸಗುಂಡಗಿ ಶಹಾಪುರ ದಿಂದ ಉತ್ತರಕ್ಕೆ ೧೬ ಕಿ.ಮೀ ದೂರದಲ್ಲಿರುವ ಒಂದು ಐತಿಹಾಸಿಕ ನೆಲೆಯಾಗಿದೆ. ಭೀಮಾನದಿಯ ಬಲದಂಡೆಯ ಮೇಲಿರುವ ಈ ಗ್ರಾಮವು ಕನಗನಹಳ್ಳಿ ಮತ್ತು ಸನ್ನತಿಯಲ್ಲಿನ ಬೌದ್ಧ ಸ್ತೂಪಗಳಿಗೆ ಸರಿ ಸಮಾನವಾದ ಸ್ತೂಪ ಮತ್ತು ಸ್ಮಾರಕ ಶಿಲಾಫಲಕಗಳನ್ನು ಹೊಂದಿದೆ. ಈ ಗ್ರಾಮದಲ್ಲಿ ಒಟ್ಟು ನಾಲ್ಕು ಕಡೆಗಳಲ್ಲಿ ಬೌದ್ಧಧರ್ಮದ ಕುರುಹುಗಳು ಕಂಡು ಬರುತ್ತವೆ.(೫೪)

ಹುರಸಗುಂಡಗಿ ಗ್ರಾಮದಿಂದ ವಾಯುವ್ಯಕ್ಕೆ ಒಂದು ಕಿ.ಮೀ ದೂರದಲ್ಲಿರುವ ಭೀಮಾನದಿಯ ಬಲ ತಟದಲ್ಲಿರುವ ಕುರುಬರ ಹೊಲದಲ್ಲಿ ಒಂದು ಬೌದ್ಧಸ್ತೂಪ ಕಂಡು ಬರುತ್ತದೆ. ಭಾರತೀಯ ಪುರಾತತ್ವ ಇಲಾಖೆಯವರ ೧೯೯೪ರಲ್ಲಿ ಕೈಗೊಂಡ ಉತ್ಖನನದ ಆಧಾರವಾಗಿದೆ.(೫೫) ಈ ಸ್ತೂಪದಲ್ಲಿ ಬುದ್ಧನ ಜೀವನಕ್ಕೆ ಸಂಬಂಧಪಟ್ಟ ಕೆಲವೊಂದು ಸ್ಮಾರಕಗಳು, ಶಿಲೆಗಳು, ಬುದ್ಧ ಪೀಠದ ಹಿಂದಿನ ಶಿಲೆ, ಕುದುರೆ, ಆನೆ, ಸಿಂಹ, ಮುಂತಾದ ಪ್ರಾಣಿಗಳ ಶಿಲ್ಪಗಳು, ಇಟ್ಟಿಗೆಗಳು ದೊರತಿವೆ.(೫೬) ಬೌದ್ಧ ಸ್ಮಾರಕ ಶಿಲಾಫಲಕಗಳು ಬುದ್ಧನ ಜೀವನ ನಿರೂಪಿಸುವ ಜಾತಕ ಕಥೆಗಳಿಗೆ ಸಂಬಂಧಿಸಿದ ಅಥವಾ ಬೌದ್ಧ ಪ್ರಚಾರಕ್ಕೆ ಉಪಾಸಕರ ಸ್ಮರಣಾರ್ಥ ನೆಟ್ಟಕಲ್ಲುಗಳು ದೊರಕಿವೆ. ಗ್ರಾಮದ ಆಗ್ನೆಯಕ್ಕೆ ಎರಡು ಕಿ.ಮೀ ದೂರದಲ್ಲಿರುವ ಪರಮಾನಂದ ಗುಡಿಯಲ್ಲಿ ಶಾತವಾಹನರ ಕಾಲದ ಬೌದ್ಧ ಶಿಲಾಫಲಕವೊಂದು ದೊರಕಿದ್ದು, ಇದು ಆರು ಅಡಿ ಎತ್ತರ ಮೂರಿ ಅಡಿ ಅಗಲ ಮತ್ತು ಹತ್ತು ಇಂಚು ದಪ್ಪವಾಗಿದೆ. ಇದರ ಮೂರು ಪಟ್ಟಿಕೆಗಳಲ್ಲಿ ಹಲವು ಚಿಕ್ಕ-ಚಿಕ್ಕ ಶಿಲಾಫಲಕಗಳಿವೆ. (೫೭) ಇವುಗಳಲ್ಲದೆ ಹಲವು ಬೌದ್ಧ ಶಿಲಾಫಲಕಗಳು ಗ್ರಾಮದ ಹೊಲಗಳಲ್ಲಿ, ಪತ್ತೆಯಾಗಿವೆ. ಇನ್ನು ಹೆಚ್ಚಿನ ಸಂಶೋಧನೆ ನಡೆದರೆ ಹುರಸಗುಂಡಗಿಯಲ್ಲಿ ಒಂದು ಪ್ರಮುಖ ಬೌದ್ಧ ಕೇಂದ್ರವಾಗುವುದರಲ್ಲಿ ಅನುಮಾನವಿಲ್ಲವೆಂದು ಹೇಳಬಹುದು.

**ಅಣಬಿ:**

ಯಾದಗಿರ ಜಿಲ್ಲೆಯ ತಾಲೂಕು ಕೇಂದ್ರವಾದ ಶಹಾಪುರದಿಂದ ಈಶಾನ್ಯಕ್ಕೆ ೨೨ ಕಿ.ಮೀ ಶಿರವಾಳದಿಂದ ಉತ್ತರಕ್ಕೆ ೫ ಕಿ.ಮೀ ದೂರದಲ್ಲಿ ಭೀಮಾನದಿಯ ಬಲದಂಡೆಯ ಮೇಲಿರುವ ಚಾರಿತ್ರಿಕ ಮಹತ್ವದ ಗ್ರಾಮವಾಗಿದೆ. ಪ್ರಾಚೀನ ಶಾಸನಗಳಲ್ಲಿ 'ಅಳಂಬೆ' 'ಅಗ್ರಹಾರ ಅಳಂಬೆ' ಎಂದೆ ಉಲ್ಲೇಖಿತಗೊಂಡಿರುವ ಈ ಗ್ರಾಮವು ಶಾತವಾಹನ ಕಾಲದಷ್ಟು ಪ್ರಾಚೀನ ನೆಲೆಯಾಗಿದೆ. ಶಾತವಾಹನ ಕಾಲದ ಒಂದು ಪ್ರಾಕೃತ ಶಾಸನ ಕಲ್ಯಾಣಿ ಚಾಲುಕ್ಯರ ಕಾಲದ ೩ ಶಾಸನಗಳು ಹೊಂದಿರುವ ಐತಿಹಾಸಿಕ ನೆಲೆಯಾಗಿದೆ.(೫೮) ಜೊತೆಗೆ ಶಾತವಾಹನರ ಕಾಲದ ಒಂದು ಶ್ರೇಷ್ಠ ಬೌದ್ಧ ಕೇಂದ್ರವಾಗಿದೆ. ಗ್ರಾಮದಲ್ಲಿ ದೊರೆತ ಶಾತವಾಹನರ ಕಾಲಕ್ಕೆ ಸೇರಿದ ಹಲವು ಬೌದ್ಧ ಶಿಲಾಫಲಕಗಳು ಇದಕ್ಕೆ ಸಾಕ್ಷಿಯಾಗಿವೆ.

ಗ್ರಾಮದ ಸುತ್ತ-ಮುತ್ತ ಹೊಲದಲ್ಲಿ ಹಲವು ಬೌದ್ಧ ಸ್ಮಾರಕಗಳು ದೊರಕಿವೆ. ಕೆಲವು ಶಿಲಾಫಲಕಗಳನ್ನು ಕಲುಬುರ್ಗಿಯ ಪುರಾತತ್ವ ಇಲಾಖೆಯ ವಸ್ತು ಸಂಗ್ರಹಾಲದಯಲ್ಲಿ ರಕ್ಷಣೆಯಲಿವೆ.(೫೯) ಜೊತೆಗೆ ಗ್ರಾಮದ ಮಧ್ಯದಲಿ ನಾಗರಕಟ್ಟೆಯ ಹತ್ತಿರ ಕ್ರಿ.ಪೂ ಒಂದನೇ ಶತಮಾನಕ್ಕೆ ಸೇರಿದ ಶಿಲಾಫಲಕ ನಿಲ್ಲಿಸಿದ್ದು, ಪ್ರಾಕೃತ ಭಾಷೆಯಲ್ಲಿ ಘರ (ತ) ಯಶೋಪಾಲಾಯ' ಎಂದು ಬರೆಯಲಾಗಿದ್ದು ಈ

ಶಿಲಾಸ್ಮಾರಕವನ್ನು ಗೃಹಸ್ಥನಾಗಿದ್ದು ಯಶೋಪಾಲನ ಸ್ಮರಣಾರ್ಥ ನಿಲ್ಲಿಸಿರಬಹುದಾಗಿದೆ.[೬೦] ಹೀಗೆ ಹಲವು ಸ್ಮಾರಕಗಳು ಗ್ರಾಮದಲ್ಲಿ ದೊರಕಿದ್ದು ನಿರ್ಲಕ್ಷಕ್ಕೊಳಗಾಗಿ ಮೂಕ ಸಾಕ್ಷಿಗಳಾಗಿ ನಿಂತಿವೆ.

**ಗುರಸಣಿಗೆ:**

ಗುರುಸಣಿಗಿಯು ತಾಲೂಕು ಕೇಂದ್ರವಾದ ಶಹಾಪುರದಿಂದ ಪೂರ್ವಕ್ಕೆ ೨೪ ಕಿ.ಮೀ ಯಾದಗಿರಿಯಿಂದ ಪಶ್ಚಿಮಕ್ಕೆ ಐದು ಕಿ.ಮೀ ದೂರದಲ್ಲಿ ಶಹಾಪುರ–ಯಾದಗಿರಿ ರಸ್ತೆಯಲ್ಲಿರುವ ಪ್ರಾಗೈತಿಹಾಸಿಕ ಹಿನ್ನೆಲೆಯುಳ್ಳ ಚಾರಿತ್ರಿಕ ಮಹತ್ವದ ಸ್ಥಳವಾಗಿದೆ. ಪ್ರಾಚೀನ ಶಾಸನಗಳಲ್ಲಿ 'ಗುರು ಸಣಂಬೆ'[೬೧] ಎಂದೆ ಉಲ್ಲೇಖಿತಗೊಂಡಿರುವ ಇದು ಹಿಂದೆ ಸಗರ–೫೦೦ಕ್ಕೆ ಸೇರಿತ್ತು. ಊರ ಬಳಿಯಿರುವ ಶಾಸನೋಕ್ತಗುರಸಣಂಬೆ ಬೆಟ್ಟದ ಮೇಲೆ ನೂತನ ಶಿಲಾಯುಗ ಸಂಸ್ಕೃತಿಗೆ ಸೇರಿದ ಶಿಲಾಯುಧಗಳೇ ಮುಂತಾದ ಅವಶೇಷಗಳು ಪತ್ತೆಯಾಗಿವೆ. ಅದೇ ರೀತಿ ಇಲ್ಲಿ ಶಾತವಾಹನರ ಕಾಲಕ್ಕೆ ಸೇರಿದ ಇಟ್ಟಿಗೆಗಳನ್ನು ದೊಡ್ಡ ಪ್ರಮಾಣದಲ್ಲಿ ನೋಡಬಹುದಾಗಿದ್ದು ಇವು ಶಾತವಾಹನರ ಕಾಲದ ಎರಡು ಸ್ತೂಪಗಳ ಅವಶೇಷಗಳಿರಬೇಕೆಂಬ ಅಭಿಪ್ರಾಯವಿದೆ. ಗುಡ್ಡದ ಮೇಲಿರುವ ಸಿದ್ದಲಿಂಗೇಶ್ವರ ಗುಡಿಯ ಬಳಿ ಇರುವ ಗವಿಯಲ್ಲಿ ಬೋಧಿವೃಕ್ಷ ಫಲಕ ಹಾಗೂ ಧರ್ಮಚಕ್ರ ಸ್ತಂಭದ ತುಂಡುಗಳಿವೆ. ಸುಮಾರು ೧–೨ನೇ ಶತಮಾನಕ್ಕೆ ಸೇರಿದ ಇಲ್ಲಿಯ ಶಾತವಾಹನ ಅವಶೇಷಗಳ ಸಂಶೋಧನೆಯಿಂದ ಹಿಂದೆ ಇದು ಪ್ರಮುಖ ಬೌದ್ಧ ಕೇಂದ್ರವಾಗಿತ್ತೆಂಬ ಅಂಶ ಸ್ಪಷ್ಟವಾಗುತ್ತದೆ.[೬೨]

**ಅವರಾದಿ:**

ಕಲಬುರಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಕೇಂದ್ರವಾದ ಅವರಾದಿಯ ಜೇವರ್ಗಿಯಿಂದ ದಕ್ಷಿಣಕ್ಕೆ ಆರು ಕಿ.ಮೀ ದೂರದಲ್ಲಿ ಜೇವರ್ಗಿ ಸುರಪುರ ರಸ್ತೆಯಲ್ಲಿರುವ ಐತಿಹಾಸಿಕ ನೆಲೆಯಾಗಿದೆ. ನೆರೆಯ ಕಲ್ಲೂರಿನ ೧೧೮೨ರ ಶಾಸನದಲ್ಲಿ 'ಸರ್ವನಮಸ್ಯದ ಅಗ್ರಹಾರ ಅವರವಾಡಿ' ಎಂದೇ ಉಲ್ಲೇಖಿತಗೊಂಡಿರುವ ಈ ಊರು ಹಿಂದೆ ನರಿಯಂಬೊಳ ೭೦ಕ್ಕೆ ಸೇರಿದ್ದು ೧೪೨ ಮಹಾಜನರನ್ನು ಒಳಗೊಂಡಿದ್ದ ಅಗ್ರಹಾರವಾಗಿದ್ದು, ಇಲ್ಲಿಂದ ಈ ವರೆಗೆ ಎರಡು ಶಾಸನಗಳು ವರದಿಯಾಗಿವೆ.[೬೩] ಈ ಶಾಸನಗಳಿಂದ ಅವರಾದಿಯ ಒಂದು ಬೌದ್ಧ ನೆಲೆಯಾಗಿತ್ತೆಂಬ ಅಂಶ ಬೆಳಕಿಗೆ ಬರುತ್ತದೆ. ಇಲ್ಲಿ ಶಾತವಾಹನರ ಕಾಲಕ್ಕೆ ಸೇರಿದ ಒಂದು ಬೌದ್ಧ ವಿದ್ಯಾಲಯ ಇದ್ದಿರಬಹುದೆಂದು ಸಂಶೋಧಕರ ಊಹೆಯಾಗಿದೆ. ಇದರಿಂದ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ.

ಅವರಾದಿ ಗ್ರಾಮದ ಹೊಲವೊಂದರಲ್ಲಿ ಶೋಧಿಸಲ್ಪಟ್ಟಿರುವ ಶಿಲಾಫಲಕದಲ್ಲಿ 'ಚಕಸ ಬೋದಿಣಸ ವಿಜಲಯ' ಎಂಬ ಬ್ರಾಹ್ಮೀ ಹಾಗೂ ಪ್ರಾಕೃತ ಭಾಷೆಯ ಶಿಲಾಶಾಸನವೂ ಇಲ್ಲಿಂದ ವರದಿಯಾಗಿದೆ. ಒಂದು ವೇಳೆ ಹೆಚ್ಚಿನ ಸಂಶೋಧನೆಗಳು ಜರುಗಿ ಇಲ್ಲಿದಿರಬಹುದಾದ ವಿದ್ಯಾಕೇಂದ್ರವನ್ನು ಗುರುತಿಸಿದರೆ ಇದು ಕರ್ನಾಟಕದ ಮಟ್ಟಿಗೆ ವಿದ್ಯಾಕೇಂದ್ರ ಉಲ್ಲೇಖ ನೀಡುವ ಪ್ರಥಮ ಶಾಸನವಾಗಬಹುದು.[೬೪]

ಇಷ್ಟೆಲ್ಲ ಕರ್ನಾಟಕದ ಪ್ರಮುಖ ಬೌದ್ಧ ಕೇಂದ್ರಗಳಲ್ಲದೆ ಇನ್ನು ಅನೇಕ ಸಣ್ಣ–ಪುಟ್ಟ ಅವಶೇಷದ ಕುರುಹಗಳ ದೊರೆತ ನೆಲೆಗಳನ್ನು ನೋಡಬಹುದ. ಇವುಗಳ ಆಧಾರದಿಂದ ಕರ್ನಾಟಕದಲ್ಲಿ ಬೌದ್ಧಧರ್ಮ ಎಷ್ಟರ ಮಟ್ಟಿಗೆ ಪ್ರಭಾವ ಬೀರಿತ್ತೆಂಬ ಅಂಶ ತಿಳಿದುಬರುತ್ತದೆ. ಇದರ ಆಧಾರವಾಗಿಯೇ ಕರ್ನಾಟಕದಲ್ಲಿ ಬೌದ್ಧಧರ್ಮದ ಕೇಂದ್ರವಾಗಿತ್ತೆಂಬುದು ಸ್ಪಷ್ಟಗೊಳ್ಳುತ್ತದೆ. ಕರ್ನಾಟಕದ ಹಲವು ಗ್ರಾಮಗಳಲ್ಲಿ ಬೌದ್ಧಧರ್ಮಕ್ಕೆ ಸೇರಿದ ಶಿಲಾಫಲಕಗಳು, ಸ್ಮಾರಕಗಳು, ಶಾಸನಗಳು ದೇವಾಲಯದಲ್ಲಿನ ಮೂರ್ತಿಗಳು, ಚೈತ್ಯಗಳು, ವಿಹಾರಗಳು, ಮುಂತಾದ ಬೌದ್ಧ ಅವಶೇಷಗಳು ಬೆಳಕಿಗೆ ಬಂದಿವೆ. ಇವು ಸ್ವಲ್ಪ ಮಟ್ಟಿಗೆಯಾದರೂ ಇನ್ನು ಹೆಚ್ಚಿನ ಸಂಶೋಧನಾ ಅಧ್ಯಯನ ನಡೆದಲ್ಲಿ ಹೆಚ್ಚಿನ ನೆಲೆಗಳು ದೊರೆಯಬಹುದು.

ದಕ್ಷಿಣ ಕನ್ನಡ ಜಿಲ್ಲೆಯ ಬಾರಕೊರಿನಲ್ಲಿ ಹಿಂಗುಳಾದೇವಿ ಗುಡಿಯಿದ್ದು ಅದು ಶೈವ ದೇವತೆ ಆರಾಧನೆಯ ಕೇಂದ್ರವಾಗಿದೆ. [೬೫] ಪ್ರಾಯಶಃ ಇದು ಕೂಡಾ ಪ್ರಾಚೀನ ಕಾಲದಲ್ಲಿ ಬೌದ್ಧ ಗುಡಿಯೇ ಇದ್ದು, ಬಳಿಕ ಈ ಬದಿಯ ಶೈವ ಪ್ರಾಬಲ್ಯದ ಕಾಲದಲ್ಲಿ ಪರಿವರ್ತನೆಯಾಗಿರಬಹುದೆಂದು ತಿಳಿದುಬರುತ್ತದೆ. ಬನವಾಸಿ ಸಮೀಪದ **'ಕಾಡಗೋಡು'** ಎಂಬಲ್ಲಿ ಕ್ರಿ.ಶ. ೧೯೭೧ ರಲ್ಲಿ ನಡೆದ ಉತ್ಖನನದಿಂದಾಗಿ ಬೌದ್ಧಸ್ತೂಪದ ಅವಶೇಷಗಳು ದೊರಕಿವೆ. ಈ ಸ್ತೂಪದ ಇಟ್ಟಿಗೆಗಳ ರಚನೆಯ ಆಧಾರದಿಂದ ಇದರ ಕಾಲವನ್ನು ಕ್ರಿ.ಶ. ೨–೩ನೇಯ ಶತಮಾನಕ್ಕೆ ನಿಗದಿಪಡಿಸಲಾಗಿದೆ.[೬೬] ಹಾಗೇ ಬನವಾಸಿಯ ಮಧುಕೇಶ್ವರ ದೇವಾಲಯದ ಹತ್ತಿರ ಮೈತ್ರೇಯ ಬುದ್ಧನ ಒಂದು ವಿಗ್ರಹ ದೊರಕಿದೆ. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ತೊಗರ್ಸಿ ಎಂಬಲ್ಲಿ ಬೌದ್ಧ ದೀಪಸ್ತಂಭವೊಂದು ದೊರೆತಿದೆ.[೬೭] ಇದರ ಆಧಾರದ ಮೇಲೆ ಶಿವಮೊಗ್ಗವು ಒಂದು ಬೌದ್ಧ ಕೇಂದ್ರವಾಗಿತ್ತೆಂಬ ಅಂಶ ತಿಳಿದುಬರುತ್ತದೆ.

ಹೆಚ್ಚು ಕಡಿಮೆ ಇದೇ ಅವಧಿಯಲ್ಲಿ ಕಾರವಾರದ ಸಮೀಪದ ದೀಪಕನಾಡಿನ ಸುಂದರಿಕಾ ಎಂಬ ಹೆಸರಿನ ಗ್ರಾಮವನ್ನು ವಿಹಾರ ಮತ್ತು ಸಂಘಗಳಿಗೆ ದಾನವಿತ್ತ ವಿವರಗಳುಳ್ಳ ತಾಮ್ರಪಟವೊಂದು ಸಿಕ್ಕಿದೆ.[೬೮] ಈ ದೀಪಕ ಎಂಬುದು ಕಾರವಾರ ಬಳಿಯ ಅಂಜ ದೀವ ಇದ್ದಿತೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದಾರೆ. ಬುದ್ಧನ ಜೀವನಕ್ಕೆ ಸಂಬಂಧಪಟ್ಟ ಚಿತ್ರಕಥೆಗಳು ದೇವಾಲಯಗಳು ಗೋಡೆಗಳ ಮೇಲೆ ಹೂವಿನ ತೋರಣಾಲಂಕಾರಗಳಲ್ಲಿ ಕೆತ್ತಿದನ್ನು ಕಾಣಬಹುದು. ಇದು ಬೌದ್ಧ ಧರ್ಮದ ಪ್ರಭಾವ ಕರ್ನಾಟಕದ ಹಲವು ಹಳ್ಳಿಗಳಲ್ಲಿ ಬೀರಿತ್ತು ಎಂಬ ಅಂಶ ಬೆಳಕಿಗೆ ಬರುತ್ತದೆ. ಭಾಣಾವರದ ಸಮೀಪ ದೇವನೂರಿನ ಲಕ್ಷ್ಮೀಕಾಂತ ದೇಗುಲದ ಲಕ್ಷ್ಮೀನಾರಾಯಣ ದೇವರ ಪ್ರಭಾವಳಿಯಲ್ಲಿ ದಶಾವತರ ಮೂರ್ತಿಗಳಲ್ಲಿ ಕೃಷ್ಣ ಬದಲಿಗೆ ಬುದ್ಧನನ್ನು ಕೆತ್ತಲಾಗಿದೆ.[೬೯] ಕರ್ನಾಟಕದ ಬೌದ್ಧಾವತಾರ ಪರಿಕಲ್ಪನೆಯ ಮೊದಲ ಉಲ್ಲೇಖ ದೊರೆಯುವುದು ಹೊಯ್ಸಳರ ಕಾಲಿನ ಶಾಸನಗಳಲ್ಲಿ ಕ್ರಿ.ಶ. ೧೧೭೦ರ ಶಾಸನವೊಂದು ಹೊಯ್ಸಳೇಶ್ವರ ವಿಷ್ಣುವರ್ಧನನ ಗುಣಾತಿಶಯವನ್ನು ಹೇಳುತ್ತಾ 'ಪದದೋಳು ಕೂರ್ಮ ಸ್ವರೂಪಂ ನಯನಯುಗದೊಳು ಮತ್ಸರೂಪಂ ಘನಗ್ರೀವ ದೊಳಾದ್ರಿ ಕ್ರೊಡರೊಪಂ ನಡುವಿನೊಳು ನ್ರಿಸಿಂಹತ್ವಂ ಆತ್ಮಪ್ರಭಾವಾಸ್ಪದದೊಳು ರಾಮತ್ರಯತ್ವಂ ಮತಿ ವಿಕಸನದಲು ಬುದ್ಧರೂಪಾಗಿ ಕಲ್ಕತ್ವಕ್ಕೆ ಮೆಯ್ದೊಪದೆ ಹರಿಯನಿಪಂ ವಿಷ್ಣು ಜಿಷ್ಣು ಕ್ಷೀತೀಶಂ' ಎಂದಿದೆ.[೭೦] ವಿಷ್ಣುವಿನ ದಶಾವತಾರಗಳ ಮಾಲಿಕೆಯಲ್ಲಿಯೇ ಇಲ್ಲಿ ಬುದ್ಧನನ್ನು ಸೇರಿಸಿರುವುದು ಗಮನಾರ್ಹವಾಗಿದೆ.

ದಶವತಾರಗಳಲ್ಲಿ ಬುದ್ಧ ಎಂಬುದಕ್ಕೆ ಆಧಾರವಾಗಿ ಚಿತ್ರದುರ್ಗದ ಗೋಪಾಲಕೃಷ್ಣ ದೇವಾಲಯ, ಹೊಸಹೊಳಲಿನ ಲಕ್ಷ್ಮೀನಾರಾಯಣ, ಬೆಳವಡಿಯ ವೀರನಾರಾಯಣ ದೇವಾಲಯ, ಚಿಕ್ಕಮಂಗಳೂರಿನ ಮರತಿ ಗ್ರಾಮದ ಕೇಶವ ದೇವಾಲಯ, ಗುಂಡ್ಲುಪೇಟೆ ಸಮೀಪದ ರಾಘವಪುರದ ಲಕ್ಷ್ಮೀನಾರಾಯಣ ದೇವಾಲಯ, ಚಾಮರಾಜನಗರದ ನರಸಮಂಗಲ ಗ್ರಾಮದ ರಾಮೇಶ್ವರ ದೇವಾಲಯ, ಹಾಸನ ಜಿಲ್ಲೆಯ ರಾಮನಾಥಪುರದ ಲಕ್ಷ್ಮೀನರಸಿಂಹ ದೇವಾಲಯ.[೭೧] ಹೀಗೆ ಮುಂತಾದ ದೇವಾಲಯ ಗೋಡೆ, ತೋರಣ, ಪ್ರಭಾವಳಿಗಳಲ್ಲಿ ದಶವತಾರಗಳಲ್ಲಿ ಬುದ್ಧನ ಶಿಲ್ಪ ಕೆತ್ತನೆಗಳನ್ನು ಕಾಣಬಹುದು.

**ಅಡಿಟಿಪ್ಪಣಿಗಳು:**

೧) ಡಾ.ತಾಳ್ತಜೆ ವಸಂತ ಕುಮಾರ – ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ ಮುಂಬಯಿ, ವಿಶ್ವವಿದ್ಯಾಲಯ, ಕನ್ನಡ ಅಧ್ಯಯನ ವಿಭಾಗದ ಪರವಾಗಿ, ವಿನಯ ಪ್ರಕಾಶನ, ಬೆಂಗಳೂರು. ಪು–೪೦

2) S.B.E Vol. X, Part-II Intr-p. XII

೩) ಅಮಗುತ್ತರನಿಕಾಯ ಪು–೨೧೩ ಖಗಿ ೨೫೨,೨೫೬, ೨೬೦

೪) ಡಾ.ತಾಳ್ತಜೆ. ವಸಂತ ಕುಮಾರ – ಪೂರ್ವಕ್ತ ಪು–೪೧

೫) ಅದೇ–

೬) ಕೆ.ಜಿ.ಕುಂದಣಗಾರ – ಕನ್ನಡ ಸಾಹಿತ್ಯ ಪರಿಷತ, ಪು–೨೩೦

7) W.Geiger – (tr) Mahavamsa –PTS-1908 Pg.No. 94

8) History of Tamils – Pg.No. 125

೯) ಡಾ.ತಾಳ್ತಜೆ ವಸಂತಕುಮಾರ ಪೂರ್ವೋಕ್ತ ಪು–೪೨

10) W.Geiger – (tr) Mahavamsa –1911, Pg.No. 73

11) Q.S.M.S, Vol. 3- 1911.

೧೨) ಡಾ.ತಾಳ್ತಜೆ ವಸಂತಕುಮಾರ ಪೂರ್ವೋಕ್ತ ಪು–೪೨

13) Hultzsch – Inseriptions of Ashok, Pg.No. 18-29

14) Early History of India, Pg.No. 163

೧೫) Beginnings of South Indian History – Pg.No. 73.

೧೬) ಡಾ.ತಾಳ್ತಜೆ ವಸಂತಕುಮಾರ ಪೂರ್ವೋಕ್ತ ಪು–೪೩

೧೭) ಡಾ.ತಾಳ್ತಜೆ. ವಸಂತ ಕುಮಾರ – ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ ಪು. ೫೩

೧೮) ಅದೇ – ಪು–೫೭

೧೯) ಅದೇ – ಪು–೫೮

೨೦) Aiyappan - A story of Buddhism with special reference to South India, Pg. 39-41.

೨೧) ಎಂ.ಬಿ.ಪಾಟೀಲ – ಗುಲಬರ್ಗಾ ಜಿಲ್ಲಾ ಗ್ಯಾಸೇಟಿಯರ್ ಪು–೭೮೨

೨೨) ಅದೇ – ೭೮೨–೮೩

೨೩) ಜಯದೇವಿ ಎಂ.ಗಾಯಕವಾಡ– ಪ್ರಾಚೀನ ಬೌದ್ಧ ವಿದ್ಯಾಕೇಂದ್ರ ಸನ್ನತಿ (೨೦೦೨, ಪುಸಂ. ೮–೯).

೨೪) ಎಂ.ಬಿ.ಪಾಟೀಲ – ಗುಲಬರ್ಗಾ ಜಿಲ್ಲಾ ಗ್ಯಾಸೇಟಿಯರ್ ಪು.ಸಂ. ೭೮೩

೨೫) ಅದೇ – ೭೮೨–೮೩

೨೬) ಜಯದೇವಿ ಎಂ.ಗಾಯಕವಾಡ– ಪ್ರಾಚೀನ ಬೌದ್ಧ ವಿದ್ಯಾಕೇಂದ್ರ ಸನ್ನತಿ (೨೦೦೨, ಪು–೯).

೨೭) ಡಾ.ವ್ಹಿ.ಜಿ.ಪೂಜಾರ – ಕನ್ನಡ ಸಾಹಿತ್ಯ ಸಂಬಂಧ, ಪು–೧೮೫

೨೮) ಅದೇ–

೨೯) ಎಂ.ಬಿ.ಪಾಟೀಲ – ಗುಲಬರ್ಗಾ ಜಿಲ್ಲಾ ಗ್ಯಾಸೇಟಿಯರ್ ಪು–೭೮೩

೩೦) ಅದೇ–

೩೧) ಜಯದೇವಿ ಎಂ.ಗಾಯಕವಾಡ– ಪ್ರಾಚೀನ ಬೌದ್ಧ ವಿದ್ಯಾಕೇಂದ್ರ ಸನ್ನತಿ (೨೦೦೨, ಪು–೨೭).

೩೨) ಅದೇ–ಪು.ಸಂ. ೨೭

೩೩) ಅದೇ–ಪು.ಸಂ. ೨೭

೩೪) ಡಾ.ತಾಳ್ತಜೆ ವಸಂತಕುಮಾರ– ಹೈದ್ರಾಬಾದ ಕರ್ನಾಟಕದಲ್ಲಿ ಬೌದ್ಧಧರ್ಮ ಒಂದು ನೋಟ–೧೯೯೬, ಪು–೧೨೨–೨೩.

೩೫) ಜಯದೇವಿ ಎಂ.ಗಾಯಕವಾಡ– ಪ್ರಾಚೀನ ಬೌದ್ಧ ವಿದ್ಯಾಕೇಂದ್ರ ಸನ್ನತಿ (೨೦೦೨, ಪು–೩೬).

೩೬) ಕಪಟರಾಳ ಕೃಷ್ಣರಾವ – ಕರ್ನಾಟಕ ಸಂಸ್ಕೃತಿ ಸಂಶೋಧನೆ ೧೯೭೦, ಪು–೨೫೯.

೩೭) ಡಾ.ತಾಳ್ತಜೆ ವಸಂತಕುಮಾರ – ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಪು–೭೮

೩೮) ಕಪಟರಾಳ ಕೃಷ್ಣರಾವ – ಕರ್ನಾಟಕ ಸಂಸ್ಕೃತಿ ಸಂಶೋಧನೆ ೧೯೭೦, ಪು–೨೫೮

39) Lalmani Joshi- Studies in Buddhist Culture of India, pg. 258-59

40) Law.B.C – Geography of Early Buddhism, pg. 59.

೪೧) ಜಯದೇವಿ ಎಂ.ಗಾಯಕವಾಡ – ಪ್ರಾಚೀನ ಬೌದ್ಧ ವಿದ್ಯಾಕೇಂದ್ರ ಸನ್ನತಿ (೨೦೦೨, ಪು–೩೯).

೪೨) ಅದೇ–ಪು–೪೧

೪೩) ಅದೇ–ಪು–೪೧–೪೨

೪೪) ಡಾ.ತಾಳ್ತಜೆ ವಸಂತಕುಮಾರ – ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಪು–೮೬

೪೫) ಬಿ.ಪಿ.ಹೂಗಾರ – ಕರ್ನಾಟಕ ಇತಿಹಾಸ ಪುಸಂ. ೨೫೬

೪೬) ಡಾ.ತಾಳ್ತಜೆ ವಸಂತಕುಮಾರ – ಕರ್ನಾಟಕದಲ್ಲಿ ಬೌದ್ಧಧರ್ಮ, ಪು–೮೫–೮೬

೪೭) ಎಂ.ಬಿ.ಪಾಟೀಲ – ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್

೪೮) ಡಾ.ತಾಳ್ತಜೆ ವಸಂತಕುಮಾರ – ಕರ್ನಾಟಕದಲ್ಲಿ ಬೌದ್ಧಧರ್ಮ, ಪು–೬೫–೬೭

೪೯) ಅದೇ–

೫೦) ಡಾ.ಸೂರ್ಯನಾಥ ಕಾಮತ–ಕರ್ನಾಟಕದ ಸಂಕ್ಷಿಪ್ತ ಇತಿಹಾಸ

೫೧) ಎ.ವಿ.ಶಂಕರನಾರಾಯಣರಾವ – ಕರ್ನಾಟಕದ ಪ್ರಸಿದ್ಧ ದೇವಾಲಯಗಳು, ಪು–೧೨೮

೫೨) ಅದೇ–

೫೩) ಕುಂದಣಗಾರ.ಕೆ.ಜಿ – ತಗರ ಸಾಹಿತ್ಯ ಪರಿಪತ್ರಿಕೆ–ಪು.ಸಂ. ೩

೫೪) ಭಾರತೀಯ ಪುರಾತತ್ವ ಇಲಾಖೆ, ಶೋಧನೆ–೧೯೪

೫೫) ಡಾ.ಶೈಲಜಾ ಎನ್ ಬಾಗೇವಾಡಿ–ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ; ಪು–೧೪–೧೫.

೫೬) ಅದೇ – ಪು–೧೬

೫೭) ಎಂ.ಬಿ.ಪಾಟೀಲ – ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್ ಪು.ಸಂ. ೬೭೭

೫೮) ಕಲುಬರ್ಗಿ ವಸ್ತು ಸಂಗ್ರಹಾಲಯಕ್ಕೆ ಭೇಟಿ.

೫೯) ಎಂ.ಬಿ.ಪಾಟೀಲ – ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್

೬೦) ಡಾ.ಶೈಲಜಾ ಎನ್ ಬಾಗೇವಾಡಿ–ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ–ಪು–೧೭

೬೧) ಎಂ.ಬಿ.ಪಾಟೀಲ – ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್ ಪು–೭೦೯

೬೨) ಅದೇ–

೬೩) ಅದೇ–ಪು–೬೮೧

೬೪) ಡಾ.ಶೈಲಜಾ ಎನ್ ಬಾಗೇವಾಡಿ–ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ–ಪು–೧೯

65) ಗುರುರಾಜ ಭಟ್ಟ ಪಿ – Studies in Tuluva History and Culture.

೬೬) ಡಾ.ತಾಳ್ತಜೆ ವಸಂತಕುಮಾರ – ಕರ್ನಾಟಕದಲ್ಲಿ ಬೌದ್ಧಧರ್ಮ, ಪು–೮೧

೬೭) ಕರ್ನಾಟಕ ಭಾರತಿ – ಗಿಖಖಖ–೨, ೧೯೭೫, ೩೦–೨೫

68) Epi Indi Vol-XXIII – pg. 22

೬೯) ಡಾ.ತಾಳ್ತಜೆ ವಸಂತಕುಮಾರ – ಕರ್ನಾಟಕದಲ್ಲಿ ಬೌದ್ಧಧರ್ಮ, ಪು–೧೪೪

70) E.C.Vol-V Hn No-53.



# ತತ್ವಪದ ಸಾಹಿತ್ಯಕ್ಕೆ ರಾಯಚೂರು ಜಿಲ್ಲೆಯ ಕೊಡುಗೆ.

**–ಶಾಂತಾ ಲಕ್ಷ್ಮಣ. ಬಿ,**
ಸಂಶೋಧನಾ ವಿದ್ಯಾರ್ಥಿ, ಇತಿಹಾಸ ಅಧ್ಯಯನ ವಿಭಾಗ,
ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ.

**ಸಾರಾಂಶ**

ತತ್ವಪದಗಳಲ್ಲಿ ನೆಲದ ಸಂಸ್ಕೃತಿಯ ಮನೋಧರ್ಮದಲ್ಲಿ ವಿಶ್ವ ಚಿಂತನೆಯನ್ನು, ಜಾಗತಿಕ ವಿದ್ಯಮಾನಗಳ ಹೊಡೆತವನ್ನು ಸಹಿಸಿಕೊಳ್ಳುವ, ತಮ್ಮತನವನ್ನು ಉಳಿಸಿಕೊಳ್ಳುವ ಹಾಗೂ ಬೆಳಗಿಸುವ ಮನೋಧರ್ಮವನ್ನು ಒತ್ತಿ ಹೇಳುತ್ತವೆ. ಅವುಗಳು ಬಣ್ಣ ಕಳಚಿದ ಮುಖದಂತೆ ಬಾಳಿನ ವ್ಯಾಮೋಹದ ಬಣ್ಣ ತೆಗೆದು ಇದರ ನೈಜತೆಯನ್ನು ಮತ್ತು ಅಂತರಾರ್ಥವನ್ನು ದರ್ಶಿಸುತ್ತವೆ. ಸಮಕಾಲೀನತೆಯೊಡನೆ ಸಾರ್ವತ್ರಿಕತೆಯನ್ನು ಸಾರುತ್ತವೆ. ಸೃಷ್ಠಿಯ ಜೈವಿಕ ಘಟಕವೆನಿಸಿದ ಮಾನವ ಪ್ರವಾಹ ಈ ಭೂಮಿಯ ಮೇಲೆ ಎಲ್ಲಿಯವರೆಗೆ ಕಂಡು ಬರುತ್ತದೆಯೋ ಅಲ್ಲಿಯವರೆಗೂ ತತ್ವಪದಗಳು ಪ್ರಸ್ತುತವಾಗುತ್ತವೆ.

ಕೃಷ್ಣ–ತುಂಗೆಯರ ತೋಳತೊಟ್ಟಿನಲ್ಲಿ ಪವಡಿಸಿರುವ ನಾಡಿಗೆ ಈ ಹಿಂದೆ ಎಡೆದೊರೆ ನಾಡು ಎಂದು ಕರೆಯಲಾಗುತ್ತಿತ್ತು. ಇದು ಭಕ್ತಿಯ ತವರುಮನೆ. ಶಿವಶರಣರ ವಚನಗಳ ಸಿರಿಮೊಳಗು, ಹರಿದಾಸರ ಕೀರ್ತನೆಗಳ ಸಾಲು, ಮಹಾಕವಿಗಳ ಅನುಭಾವ ಸ್ವರ ವಚನಕಾರರ ತಾಣದ ಜೊತೆಗೆ ಕಲೆಯ ಸಿಲೆಬೀಡಾಗಿದೆ. ತತ್ವಪದ ಸಾಹಿತ್ಯಕ್ಕೆ  ಎಡೆದೊರೆ ನಾಡು ಎಂದು ಹೆಸರಾದ ರಾಯಚೂರು ಜಿಲ್ಲೆಯ ಕೋಡುಗೆಯೂ ಅತ್ಯಂತ ಮಹತ್ವದಾಗಿದೆ. ಇಲ್ಲಿಯ ತತ್ವಪದಕಾರರೆಂದರೆ ಗೂಗಲ್ಲು ಪರಪ್ಪಯ್ಯ, ಅಂಕಲಿಮಠದ ನಿರುಪಾಧಿಶ್ವರರು, ನೀರಲಕೇರಿ ಬಸವಲಿಂಗ ಶರಣರು, ಸಂತೆಕೆಲ್ಲೂರಿನ ನಾಗಭೂಷಣ ಶಿವಯೋಗಿಗಳು, ಗಬ್ಬೂರಿನ ಹಂಪಯ್ಯ, ಗಬ್ಬೂರಿನ ಅಯ್ಯಪ್ಪಜ್ಜ, ಅರವಲಿ ಬಿಜಲಿ ವಸ್ತಾದಿ, ದೇವದುರ್ಗದ ಚೆನ್ನಮಲ್ಲ ಕವಿಗಳು ಹೀಗೆ ಮೊದಲಾದವರು ತಮ್ಮ ಕೈವಲ್ಯತತ್ವಗಳ ಮೂಲಕ ತತ್ವಪದ ಸಾಹಿತ್ಯಕ್ಕೆ ಭದ್ರಬುಬಾದಿ ಹಾಕಿದರು.

ಅನುಭವ ಮತ್ತು ಅನುಭಾವ ಇವು ಆಧ್ಯಾತ್ಮ ವಿಕಾಸದ ಎರಡು ಹಂತಗಳು ಎನ್ನಲಾಗುತ್ತದೆ. "ಲೌಕಿಕ ಜೀವನದಲ್ಲಿ ಕಂಡ ಸುಖ ದುಃಖವನ್ನು ಅನುಭವಿಸಿದ ವ್ಯಕ್ತಿಯನ್ನು ಸಂಸಾರದ ಅನುಭವಿ ಎಂದು ಹೇಳುತ್ತೇವೆ. ಈ ಲೌಕಿಕ ತತ್ವವು ಗಟ್ಟಿಕೊಂಡು ಪಾರಿಮಾರ್ಥಿಕತೆಯ ಮೂಲಕ ಆತ್ಮ ನಿವೇದನೆಯೊಂದಿಗೆ ಅರಿವಾಗುವ ಹಂತವೇ ಅನುಭಾವ" ಶರಣರು ತಮ್ಮ ವಚನಗಳಲ್ಲಿ "ಅಯ್ಯಾ ನಿಮ್ಮ ಅನುಭವದಿಂದ ಎನ್ನ ಕರ್ಮ ಭೇದವಾಯಿತಯ್ಯ" ಎಂದು ಬಸವಣ್ಣನವರು, "ಅರಿಷಡ್ವರ್ಗಳ ಇಚ್ಛೆಗೆ ಹರಿಯದಿಲ್ಲೆಡೆ ಅನುಭಾವ"ವೆಂದು ಚೆನ್ನಬಸವಣ್ಣನವರೂ ಹೇಳಿದ್ದನ್ನು ನೋಡುತ್ತೇವೆ. ಅನುಭಾವ ಪದದ ಅರ್ಥ ಅರಿವು, ಜ್ಞಾನ ಅಥವಾ ಆತ್ಮ ಜ್ಞಾನವಾಗಿದೆ. ಈ ಅನುಭಾವಕ್ಕೆ ಪಾಶ್ಚಾತ್ಯರು 'ಮಿಸ್ಟಿಸೀಸಮ್' ಎಂದು ಕರೆದಿದ್ದಾರೆ. ಈ ಎಲ್ಲ ವಿಚಾರಗಳನ್ನು ಗಮನಿಸಿದಾಗ ಜೀವಾತ್ಮ ಪರಮಾತ್ಮನಿಗೆ ಸಂಬಂಧಿಸಿದ ಆತ್ಮ ತೃಪ್ತಿಯೇ ಆತ್ಮತತ್ವವಾಗಿದ್ದು ಇದನ್ನು ತತ್ವಪದಕಾರರು ಲೋಕಜ್ಞಾನ ಮತ್ತು ಗುರುವಿನ ಮೂಲಕ ಕಂಡುಕೊಂಡವರಾಗಿದ್ದಾರೆ ಎಂದು ಹೇಳಬೇಕು.

ತತ್ವ ಎಂದರೆ ಸಾಮಾನ್ಯ ಅರ್ಥದಲ್ಲಿ ಸಿದ್ಧಾಂತ ನೀತಿ ನಿಯಮ ಎಂದಾದರೆ ತತ್ವಪದಕಾರರ ದೃಷ್ಟಿಯಲ್ಲಿ ಬ್ರಹ್ಮಜ್ಞಾನ ಪರಮಾತ್ಮನ ಸ್ವರೂಪವೇ ಆಗಿರುವ ಆತ್ಮನ ಸ್ವರೂಪ, ನಿಜ ಸ್ಥಿತಿಯನ್ನು ಕಂಡುಕೊಳ್ಳಲು ಇರುವ ಸತ್ಯಮಾರ್ಗ, ಪರಮಾತ್ಮನನ್ನು ಸಾಕ್ಷಾತ್ಕರಿಸಲು ಇರುವ ದಾರಿ ಎಂದಾಗುತ್ತದೆ. ದೇವರನ್ನು ಸಾಕ್ಷತ್ಕರಿಸಲು ಇರುವ ಮಾಧ್ಯಮವೇ ತತ್ವಪದ ಈ ತತ್ವ ಪದಗಳಿಗೆ ಅನುಭವ ಪದಗಳೆಂದು

ಇವುಗಳನ್ನು ರಚಿಸುವವರಿಗೆ ಜೊತೆಗೆ ಏಕಾಂತದಲ್ಲಿ ಕುಳಿತು ಧ್ಯಾನಿಸುವ ಹಾಡಾಗಿದ್ದು ಅನುಭಾವಿ ಕವಿ ಎಂದು ಕರೆಯುತ್ತಾರೆ ಈ ಅನುಭವ ಹಾಡುಗಳು ವಕ್ತಾರಿಯ ಅವೇ ಹಾಡುಗಳು ಸಮೂಹ ಮಾದ್ಯಮದಲ್ಲಿ ಬಂದಾಗ ಭಜನೆ ಪದಗಳಾದವು. ಅನುಭವ ಹಾಡುಗಳಾಗಿದ್ದ ಇವುಗಳನ್ನೇ ತತ್ವಪದಗಳೆಂದು ಕರೆಯುತ್ತೇವೆ.

ತತ್ವ ಪದಗಳಲ್ಲಿ ನೆಲದ ಸಂಸ್ಕೃತಿಯ ಮನೋಧರ್ಮದಲ್ಲಿ ವಿಶ್ವಚಿಂತನೆಯನ್ನು, ಜಾಗತಿಕ ವಿದ್ಯಮಾನಗಳ ಹೊಡೆತವನ್ನು ಸಹಿಸಿಕೊಳ್ಳುವ, ತಮ್ಮತನವನ್ನು ಉಳಿಸಿಕೊಳ್ಳುವ ಹಾಗೂ ಬೆಳಗಿಸುವ ಮನೋಧರ್ಮವನ್ನು ಒತ್ತಿ ಹೆಳುತ್ತವೆ. ಅವುಗಳ ಬಣ್ಣ ಕಳಚಿದ ಮುಖದಂತೆ ಬಾಳಿನ ವ್ಯಾಮೋಹದ ಬಣ್ಣ ತೆಗೆದು ಇದರ ನೈಜತೆಯನ್ನು ಮತ್ತು ಅಂತರಾರ್ಥವನ್ನು ದರ್ಶಿಸುತ್ತವೆ. ಸಮಕಾಲೀನತೆಯೊಡನೆ ಸಾರ್ವತ್ರಿಕತೆಯನ್ನು ಸಾರುತ್ತವೆ. ಸೃಷ್ಟಿಯ ಜೈವಿಕ ಘಟಕವೆನಿಸಿದ ಮಾನವ ಪ್ರವಾಹ ಈ ಭೂಮಿಯ ಮೇಲೆ ಎಲ್ಲಿಯವರೆಗೆ ಕಂಡು ಬರುತ್ತದೆಯೋ ಅಲ್ಲಿಯವರೆಗೂ ತತ್ವಪದಗಳು ಪ್ರಸಾರವಾಗುತ್ತದೆ.

ತತ್ವ ಪದಗಳ ಮೂಲಕ ಇಂತಹ ಶಾಶ್ವತ ಮೌಲ್ಯಗಳನ್ನು ಸಾರಿದ ತತ್ವಪದಕಾರರು ಸ್ವಾನುಭವ ಮತ್ತು ಲೋಕವೀಕ್ಷಣೆಯಿಂದ ಲೋಕಶಿಕ್ಷಣ ನೀಡುವಂತಹವರು ತತ್ವಪದಕಾರರು ತಮ್ಮತಮ್ಮೊಳಗೆ ತಾವು ಮಾತಾಡಿಕೊಂಡಂತೆ ತಮಗೆ ತಾವೇ ಬೋಧಿಸಿಕೊಂಡಂತೆ ಆತ್ಮನಿವೇದನೆ ಮಾಡಿಕೊಂಡಂತೆ ಹಾಡಿಕೊಂಡರು. ಅಂತರಂಗದರ್ಶನ, ಆತ್ಮಚಿಂತನ, ಧ್ಯಾನ ಶಿವಯೋಗಾನುಭವ, ಲೋಕಾನುಭವ ಹಾಗೂ ಲೋಕವಿಡಂಬನೆ ಹಾಡಾಗಿ ಹೊನಲಾಗಿ ಬಹಿರಂಗಕ್ಕೆ ಪ್ರವೇಶಿಸಿದಾಗ ಸರ್ವಲೋಕವು ಅವರ ತೆಕ್ಕೆಗೆ ಅಮರಿಕೊಂಡಿತು. ಇದರ ಪರಿಣಾಮವಾಗಿ ತತ್ವಪದದಲ್ಲಿನ ಆತ್ಮಶೋಧವು ನೀತಿ ಬೋಧೆ-ಲೋಕವಿಡಂಬನೆಯಾಗಿ ಪ್ರವಹಿಸಿತು ಜನಜೀವನದ ಕೊಳೆಯನ್ನು ತೊಳೆಯುವ ಪಾವನಗಂಗೆಯಾಗಿ ಈ ತತ್ವಪದಗಳು ಎಲ್ಲರಿಂದಲೂ ಮಾನ್ಯತೆಯನ್ನು ಪಡೆಯುವಂತಾದವು.

'ಈಸಬೇಕು ಇದ್ದು ಜಯಿಸಬೇಕು ಈ ಭವ ಸಾಗರವ' ಎಂದು ದಾಸರು ಹೇಳುವ ಹಾಗೆ ತತ್ವಪದಕಾರರು ಸಂಸಾರದಲ್ಲಿದ್ದುಕೊಂಡೇ ಆಧ್ಯಾತ್ಮದ ಸಾಧನೆಯನ್ನು ಮಾಡಿರುವರು. ಓದಿನ ಮಾತಿಗಿಂತ ಅನುಭವದ ಮಾತು ದೊಡ್ಡದೆಂದು ಬಾಳಿದವರು, ಸತ್ಯ ಸಹಜ ಬಾಳಿನ ಅನುಭವವನ್ನು ಸಾಹಿತ್ಯದ ಮೂಲಕ ತೋರಿಸಿದವರು. ಹನ್ನೆರಡನೆಯ ಶತಮಾನದ ಶಿವಶರಣರು ವೈಚಾರಿಕ ಗದ್ಯದ ವಚನಗಳ ಹಾಗೆ ರಾಗ, ತಾಳ, ಬದ್ಧ, ನುಡಿ, ಪಲ್ಲವಿಗಳ ಭಾವನಾತ್ಮಕ ರಚನಾತ್ಮಕವಾಗಿ ಸ್ವರವಚನಗಳನ್ನು ರಚಿಸಿದವರು. ಈ ಪರಂಪರೆಯನ್ನು ಕೀರ್ತನೆ, ಉಗಾಬೋಗ, ಸುಳಾದಿಗಳನ್ನು ಸಂಗೀತದ ರೂಪದಲ್ಲಿ ಭಕ್ತಿಯ ಪೌರಮ್ಯವಾಗಿ ಹರಿದಾಸರು ಮುಂದುವರೆಸಿದರು. ಆನಂತರಲ್ಲಿ ವಿರಶೈವ ವಾಗ್ಗೇಯಕಾರರಾದ ನಿಜಗುಣ ಶಿವಯೋಗಿಗಳು, ಮುಪ್ಪಿನ ಷಡಕ್ಷರಿ, ಸರ್ಪಭೂಷಣ ಶಿವಯೋಗಿಗಳು ಮತ್ತು ಬಾಲಲೀಲಾ ಮಹಾಂತ ಶಿವಯೋಗಿಗಳು ಹೀಗೆ ಮೊದಲಾದವರು ತಮ್ಮ ಕೈವಲ್ಯತತ್ವಗಳ ಮೂಲಕ ತತ್ವಪದ ಸಾಹಿತ್ಯಕ್ಕೆ ಭದ್ರ ಬುನಾದಿ ಹಾಕಿದರು.

ಕೃಷ್ಣ ತುಂಗೆಯರ ತೊಳತೊಟ್ಟಿಲಲ್ಲಿ ಪವಡಿಸಿರುವ ನಾಡಿಗೆ ಈ ಹಿಂದೆ ಎಡೆದೊರೆ ನಾಡು ಎಂದು ಕರೆಯಲಾಗುತ್ತಿತ್ತು. ಇದು ರನ್ನದ ನಾಡು ಶೂರರ ಬೀಡು ನಮ್ಮವರ ಕೆಚ್ಚು ತಲಿತನವಿಲ್ಲಿ ಬೆಟ್ಟಗೊಂಟೆಗಳಾಗಿ ಗಟ್ಟಿಗೊಂಡು ನಿಂತಿವೆ. ಇದು ಭಕ್ತಿಯ ತವರುಮನೆ, ಶಿವಶರಣರ ವಚನಗಳ ಸಿರಿಮೊಳಗು, ಹರಿದಾಸರ ಕೀರ್ತನೆಗಳ ಸಾಲು, ಮಹಾಕವಿಗಳ ಅನುಭಾವ ಸ್ವರ ವಚನಕಾರರ ತಾಣದ ಜೊತೆಗೆ ಕಲೆಯ ನೆಲೆಬೀಡಾಗಿದೆ. ತತ್ವಪದ ಸಾಹಿತ್ಯಕ್ಕೆ ಎಡೆದೊರೆ ನಾಡು ಎಂದು ಹೆಸರಾದ ರಾಯಚೂರು ಜಿಲ್ಲೆಯ ಕೊಡುಗೆಯೂ ಅತ್ಯಂತ ಮಹತ್ವದ್ದಾಗಿದೆ. ಇಲ್ಲಿಯ ತತ್ವಪದಕಾರರೆಂದರೆ ಗೂಗಲ್ಲು ಪರಪ್ಪಯ್ಯ, ಅಂಕಲಿಮಠದ ನಿರುಪಾಧೀಶ್ವರರು, ನೀರಲಕೇರಿ ಬಸವಲಿಂಗ ಶರಣರು, ಸಂತೆಕೆಲ್ಲೂರಿನ ನಾಗಭೂಷಣ ಶಿವಯೋಗಿಗಳು, ಗಬ್ಬೂರಿನ ಹಂಪಯ್ಯ, ಗಬ್ಬೂರಿನ ಅಯ್ಯಪ್ಪಜ್ಜ, ಅರವಲಿ ಬಿಜಲಿ ವಸ್ತಾದಿ, ದೇವದುರ್ಗದ ಚೆನ್ನಮಲ್ಲ ಕವಿಗಳು, ವೆಂಕಟಾಪುರದ ಖೇಮಣ್ಣ, ದಿನ್ನಿಯ

ತಾಳಪಲ್ಲಿ ವೆಂಕಯ್ಯ, ಬಳಗಾನೂರು ಮರಿಸ್ವಾಮಿಗಳು ಮತ್ತು ದೇವದುರ್ಗದ ಆದಿಅಮಾತೆಪ್ಪ ಮೊದಲಾದವರು ಕಂಡು ಬರುತ್ತಾರೆ.

ತತ್ವದಲ್ಲಿ ಅನುಭಾವ, ತನುಭಾವ, ಬ್ರಹ್ಮಾನುಭಾವವೆಂಬ ವಿಚಾರ ಮಹತ್ವಪೂರ್ಣವಾದುದು. ಈ ಜನ್ಮದಲ್ಲಿ ಧನ್ಯನಾಗಬೇಕಾದರೆ ದೇವರ ಧ್ಯಾನ ಬಹು ಮುಖ್ಯವಾಗುತ್ತದೆ. ಎರಡರೋಳು ಒಂದು ಮಾಡು ಎಂದರೆ ತನು, ಮನ, ಭಾವವು ಅನುಭಾವವಾಗಿ ಪರಿವರ್ತಿತವಾಗುತ್ತದೆ. ಇದನ್ನು ರಾಯಚೂರು ಜಿಲ್ಲೆಯ ವೆಂಕಟಾಪುರದ ಖೇಮಣ್ಣನ ತತ್ವಪದದಲ್ಲಿ ಕಾಣುವ ಸಾರವಾಗಿದೆ. ಹೀಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಗೂಗಲ್‌ದ ಪರಪ್ಪಯ್ಯ, ಬಾಲಲೀಲಾ ಮಹಾಂತ ಶಿವಯೋಗಿ, ಕೂಡಲೂರ ಬಸವಲಿಂಗ, ಬಿಜಲಿ ವಸ್ತಾದಿ, ವಡಿಕೆ ತಾತಪ್ಪಯ್ಯ, ಮೊದಲಾದವರು ತಮ್ಮ ಅನುಭಾವಿಕ ವ್ಯಕ್ತಿತ್ವದಿಂದಲೇ ಜನ ಸಾಮಾನ್ಯರನ್ನು ಆಕರ್ಷಿಸಿದರು. ಸಮಾಜದಲ್ಲಿ ತುಂಬಿದ್ದ ಅರಾಜಕತೆಯನ್ನು ಕಡಿಮೆ ಮಾಡಲು ಇವರು ಪರೋಕ್ಷವಾಗಿ ಕಾರಣರಾದರು. ಹಾಗೆ ನೋಡಿದರೆ ಈ ತತ್ವಪರಂಪರೆಯವರು ವ್ಯಕ್ತಿಗತವಾಗಿ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬಹುದೆಂದು ನಂಬಿದ್ದರು. ಅಂಥ ಅನುಭಾವಕ್ಕಾಗಿ ಬೇಕಾಗುವ ತನ್ಮತೆಯನ್ನು ಪಡೆಯಲು ಲೌಕಿಕದ ಕಟ್ಟುಪಾಡುಗಳನ್ನು ಬದಿಗೊತ್ತಿ ತಮ್ಮ ಒಳದನಿಗೆ ಮಾತ್ರ ಓಗೊಡುವ ಸ್ಥಿತಿಗೆ ಬದ್ಧರಾದರು. ತಾನು ಸಾಧನೆಯಿಂದ ದಕ್ಕಿಸಿಕೊಳ್ಳುವ ಅನುಭಾವಿಕ ಸ್ಥಿತಿಗೆ ಶರಣಾಗಿ ಅದರ ಜೊತೆಗೆ ಮೌನ ಸಂಧಾನವನ್ನು ನಿರಂತವಾಗಿ ನಡೆಸಿ ಅನುಭಾವದ ಅಂತ್ಯತ್ಮಿಕ ಗತಿಗೆ ಯತ್ನಿಸಿದರು. ತಮ್ಮ ಸಾಧನೆಗೆ ಗುರುವಿನ ನೆರವನ್ನು ಉತ್ಕಟವಾಗಿ ಬಯಸಿದರು.

ಇಂಥ ಅನುಭಾವಿಗಳು ಯಾವುದೇ ಜಾತಿ, ಕುಲ ಧರ್ಮವನ್ನು ಪ್ರತಿಪಾದಿಸಲಿಲ್ಲ. ಅವರು ಯಾವುದೇ ಜಾತಿ, ಕುಲ, ಧರ್ಮದಲ್ಲಿ ಹುಟ್ಟಿರಬಹುದು. ಆ ಜಾತಿ ಧರ್ಮವನ್ನು ಅವರು ಪ್ರಚಾರ ಮಾಡುವ ಯಾವುದೇ ಕಾರ್ಯಕ್ಕೆ ಕೈಹಾಕಲಿಲ್ಲ. ಅಧಿಕಾರ ಸಂಪತ್ತು ಭೋಗವನ್ನು ಖಂಡಿಸಿದರು ಮತ್ತು ಅಂತಹ ವ್ಯವಸ್ಥೆಯನ್ನು ತಮ್ಮ ಅನುಭಾವದಿಂದ ನಿಯಂತ್ರಿಸಿದರು ಎನ್ನಬೇಕು. ಇವರ ಹಾಡುಗಳನ್ನು ಜಿಲ್ಲೆಯ ಪ್ರತಿ ಹಳ್ಳಿಗಳಲ್ಲಿ ಆರಾಧನೆ, ಉತ್ಸವ ಭಜನೆಗಳಲ್ಲಿ ಹಾಡುವ ಸಾವಿರಾರು ಹಾಡುಗಾರರನ್ನು ಕಾಣುತ್ತೇವೆ. ಜಿಲ್ಲೆಯ ಜನಸಾಮಾನ್ಯ ವರ್ಗವು ಈ ತತ್ವಪದಗಳನ್ನೆ ತಮ್ಮ ಒಡಲಲ್ಲಿಟ್ಟುಕೊಂಡು ಪೋಷಿಸುತ್ತಾ ಬಂದಿದೆ.

**ಏನಾದಿ ಮನುಜ ಏನಾದಿ**
**ಏನಾದಿ ಮನುಜ ಏನಾದಿ ಶಿವ**
**ಜ್ಞಾನವರಿಯದೆ ನೀನೇನಾದಿ ॥ಪ॥**
**(ಘನಮಠದ ನಾಗಭೂಷಣ ಶಿವಯೋಗಿ)**
**ಜ್ಞಾನದಿಂದ ಶಿವಧ್ಯಾನದ ಮಾಡಣ್ಣಾ**
**ಜ್ಞಾನದಿಂದ ಶಿವಧ್ಯಾನದ ಮಾಡಣ್ಣಾ । ಹೇ ಜಾಣ**
**ಜ್ಞಾನದಿಂದ ಶಿವಧ್ಯಾನದ ಮಾಡಣ್ಣಾ**
**(ಅರವಲಿ ಬಿಜಲಿವಸ್ತಾದಿ)**
**ನಿನ್ನ ನೀ ತಿಳಯಲೋ ಮೂಢ**
**ನಿನ್ನ ನೀ ತಿಳಯಲೋ ಮೂಢ**
**ನಿನ್ನ ತಿಳಯದೆ ಕುನ್ನಿ ಮನುಜ ಕೆಡಬ್ಯಾಡ**
**(ಗೊಬ್ಬೂರು ಹಂಪಣ್ಣ)**

ಒಟ್ಟಾರೆಯಾಗಿ ಎಡೆದೊರೆ ನಾಡಿನ ತತ್ವಪದ ಸಾಹಿತ್ಯವು ಜನಸಾಮಾನ್ಯರ ಆಡುಭಾಷೆಯಲ್ಲಿ ಮತ್ತು ಅತ್ಯಂತ ಸರಳತೆಯ ನಿರೂಪಣೆಯಲ್ಲಿ ಬೆಳೆದು ಬಂದಿದೆ. ಇದರಲ್ಲಿ ವಿಚಾರ ಧಾರೆಯಿದೆ, ಭಕ್ತಿಯೂ ಇದೆ, ಭಾವುಕತೆ ಮತ್ತು ಪರದ ಆದರ್ಶವಿದೆ. ಇಹದ ವಾಸ್ತವಿಕತೆಯನ್ನು ಪರಿಚಯಿಸಲಾಗಿದೆ.

ಇದು ಯಾವುದೇ ರಾಜರ ಕಥೆಯಲ್ಲ, ಯಾವುದೇ ಕಾಲ್ಪನಿಕ ವ್ಯಕ್ತಿಯ ಚರಿತ್ರೆಯಲ್ಲ, ಇನ್ನಾವುದೇ ಸುದೀರ್ಘ ಕಥಾನಕವೂ ಅಲ್ಲ ಇವು ವಾಸ್ತವ ನೆಲೆಗಟ್ಟಿನ ಮೇಲೆ ರಚನೆಗೊಂಡ ಆಧ್ಯಾತ್ಮಿಕ ಗೀತೆಗಳಾಗಿವೆ.

**ಆಕಾರ ಸಾಮಗ್ರಿಗಳು.**


೧. ಅಮರೇಶ ನುಗಡೋಣ : ಹೈದರಾಬಾದ ಕರ್ನಾಟಕದ ಹಾಡಪಾಡು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೩.

೨. ಡಾ. ವ್ಹಿ. ಜಿ. ಪೂಜಾರ : ರಾಯಚೂರು ಜಿಲ್ಲೆಯ ತತ್ವಪದಕಾರರ ಸ್ಮಾರಕಗಳು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೧೨.

೩. ಸೂಗಯ್ಯ ಹಿರೇಮಠ : ಗೂಗಲ್ಲ ಪರಪ್ಪಯ್ಯನ ತತ್ವಪದಗಳು ಅತರಗಂಗೆ ಸಾಂಸ್ಕೃತಿಕ ಪ್ರತಿಷ್ಠಾನ ರಾಯಚೂರು, ೨೦೦೧.




# ಗುಲಬರ್ಗಾ ಜಿಲ್ಲೆಯ ಸಂಪ್ರದಾಯಗಳು.

**–ಡಾ. ಬಸವರಾಜ,**
ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸುಲೇಪೇಟ್.

**ಸಾರಾಂಶ.**

ಪ್ರತಿಯೊಂದು ಪ್ರದೇಶವು ತನ್ನದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದೆ. ಆದರೆ ಈ ಸಂಸ್ಕೃತಿಯು ಹಿಂದಿನ ಪೀಳಿಗೆಯಿಂದ ಮುಂದಿನ ಪೀಳಿಗೆಯವರೆಗೆ ಮುಂದುವರೆಸಿಕೊಂಡು ಹೋಗುವುದು ಅವಶ್ಯವಾಗಿದೆ. ಒಂದು ನಾಡಿನ ಸಂಸ್ಕೃತಿಯು ಅಲ್ಲಿನ ಜನರ ವ್ಯಕ್ತಿತ್ವವನ್ನು ರೂಪಿಸುತ್ತದೆ ಎಂದರೆ ತಪ್ಪಾಗಲಾರದು. ಗುಲಬರ್ಗಾ ಜಿಲ್ಲೆಯಲ್ಲಿ ಆಚರಿಸಲ್ಪಡುವ ಹಬ್ಬ–ಹರಿದಿನಗಳು, ಜಾತ್ರೆಗಳು, ಉತ್ಸವಗಳು ಸಾಂಸ್ಕೃತಿಕ ಕೊಡುಗೆಗಳು ಮಹತ್ವವಾಗಿವೆ. ಸಂಪ್ರದಾಯಗಳು ಎಂದರೆ ಯಾವುದೇ ಬಗೆಯ ಆಚರಣೆ ಮತ್ತು ರೂಢಿಗಳು ಹಿಂದಿನಿಂದಲೂ ಯಥಾವತ್ತಾಗಿ ಮುಂದುವರೆಸಿಕೊಂಡು ಬರುವದಕ್ಕೆ ಸಂಪ್ರದಾಯ ಎನ್ನುತ್ತೇವೆ.

ಸಂಪ್ರದಾಯಗಳಿಗೆ ತನ್ನದೇ ಆದ ಸಂಸ್ಕಾರವಿರುವುದರಿಂದ ವರ್ಗದಿಂದ–ವರ್ಗಕ್ಕೆ ಭಿನ್ನವಾಗಿರುತ್ತವೆ. ಸಂಸ್ಕೃತಿಯ ಸಂಕೇತವಾದ ಸಂಪ್ರದಾಯಗಳಿಗೆ ಪೂರಕವಾದದ್ದು ನಂಬಿಕೆ ಮತ್ತು ಆಚರಣೆ. ಸಮಾಜದಲ್ಲಿ ಸಂಪ್ರದಾಯಗಳು ಹುಟ್ಟಿನಿಂದ ಮರಣದವರೆಗೂ ಹಾಗೇ ಜೀವನದ ಉದ್ದಕ್ಕೂ ಕಾಣುತ್ತೇವೆ. ಈ ರೀತಿಯಲ್ಲಿ ಗುಲ್ಬರ್ಗಾ ಜಿಲ್ಲೆಯಲ್ಲಿ ಈಗಲೂ ಆಚರಣೆಯಲ್ಲಿರುವ ಕೆಲವು ಆಚರಣೆಗಳೆಂದರೆ, ಹಾಲೋಕುಳಿ: ಕಪನೂರಿನ ಹಸಿತೆನೆಯ ಕಾಳುಗಳ ಅಕ್ಷತೆ: ಜೋಕುಮಾರ: ಅಗ್ನಿ ತುಳಿಯುವ ಸಂಪ್ರದಾಯ; ಬಡಿಗೆ ಉತ್ಸವ: ಬಡಿಗಿ ಆಟ: ಬಡಿಗೆ ಆಟಕ್ಕೆ ಆಹ್ವಾನ: ಅರಬೆತ್ತಲೆ ಸೇವೆ–ದೇವದಾಸಿಯರು: ಉಟಗಿ ಸೇವೆ: ದೇವರಿಗೆ ದೀರ್ಘ ದಂಡ ನಮಸ್ಕಾರ ಹಾಕುವುದು: ಉರುಳು ಸೇವೆ: ನಂದಿ ಧ್ವಜಗಳು: ಇಂತಹ ಕೆಲವು ಸಂಪ್ರದಾಯಗಳು ತಮ್ಮಷ್ಟಕ್ಕೆ ತಾವೇ ವಿಶಿಷ್ಟವಾಗಿದ್ದು ಸಾಕಷ್ಟು ಭಕ್ತಾದಿಗಳನ್ನು, ಪ್ರವಾಸಿಗಳನ್ನು ತಮ್ಮೆಡೆಗೆ ಸೆಳೆಯುವಲ್ಲಿ ಸಮರ್ಥವಾಗಿದ್ದು ಆಮೂಲಕ ಪ್ರವಾಸೋದ್ಯಮದ ಏಳಿಗೆಗೂ ಕಾರಣವಾಗಿವೆ.

**ಉದ್ದೇಶಗಳು.**

ಸಂಪ್ರದಾಯದ ಅರ್ಥ ತಿಳಿಯುವುದು.
ಗುಲ್ಬರ್ಗಾ ಜಿಲ್ಲೆಯಲ್ಲಿ ಆಚರಣೆಯಲ್ಲಿರುವ ವಿವಿಧ ಸಂಪ್ರದಾಯಗಲನ್ನು ಕುರಿತು ವಿಶ್ಲೇಷಿಸುವುದು.
ಸಂಪ್ರದಾಯ ಮತ್ತು ಪ್ರವಾಸೋದ್ಯಮಗಳ ನಡುವಿನ ಸಂಭಂಧವನ್ನು ತಿಳಿಯುವುದು.

ಪ್ರತಿಯೊಂದು ಪ್ರದೇಶವು ತನ್ನದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದೆ. ಆದರೆ ಈ ಸಂಸ್ಕೃತಿಯು ಹಿಂದಿನ ಪೀಳಿಗೆಯಿಂದ ಮುಂದಿನ ಪೀಳಿಗೆಯವರೆಗೆ ಮುಂದುವರೆಸಿಕೊಂಡು ಹೋಗುವುದು ಅವಶ್ಯವಾಗಿದೆ. ಒಂದು ನಾಡಿನ ಸಂಸ್ಕೃತಿಯು ಅಲ್ಲಿನ ಜನರ ವ್ಯಕ್ತಿತ್ವವನ್ನು ರೂಪಿಸುತ್ತದೆ ಎಂದರೆ ತಪ್ಪಾಗಲಾರದು. ಒಂದು ದೇಶದ ಸಾಂಸ್ಕೃತಿಕ ಪರಂಪರೆಗಳು ಐತಿಹಾಸಿಕ ಪ್ರವಾಸಿ ತಾಣಗಳ ಮೂಲಕ ಪ್ರವಾಸೋದ್ಯಮದ ಮಹತ್ವವು ಅಡಗಿದೆ. ಒಂದು ನಾಡಿನ ಐತಿಹಾಸಿಕ ಹಿನ್ನಲೆಯನ್ನು ತಿಳಿದುಕೊಳ್ಳುವ ಮೂಲಕ ಒಂದು ಪ್ರದೇಶದ ಸಾಂಸ್ಕೃತಿಕ ಪರಂಪರೆಯನ್ನು ತಿಳಿದುಕೊಳ್ಳುವ ಆಸೆಗಳು ಜನರಲ್ಲಿ ಸಂಚರಿಸಲು ಪ್ರೇರಣೆಯನ್ನು ನೀಡುತ್ತದೆ.

ಗುಲಬರ್ಗಾ ಜಿಲ್ಲೆಯಲ್ಲಿ ಆಚರಿಸಲ್ಪಡುವ ಹಬ್ಬ-ಹರಿದಿನಗಳು, ಜಾತ್ರೆಗಳು, ಉತ್ಸವಗಳು ಸಾಂಸ್ಕೃತಿಕ ಕೊಡುಗೆಗಳು ಮಹತ್ವವಾಗಿವೆ. ಒಂದು ದೇಶದ ಪ್ರಾಕೃತಿಕ ಸಂಪತ್ತು ಅಲ್ಲಿನ ಜನರ ಆಚಾರ, ವಿಚಾರ, ಸಂಪ್ರದಾಯಗಳು ಹಾಗೂ ಕಲಾ ಪ್ರತಿಭೆಗಳು ನಮಗೆ ಪ್ರವಾಸದಿಂದ ಸಿಗುತ್ತದೆ.

## ಗುಲಬರ್ಗಾ ಜಿಲ್ಲೆಯ ಸಂಪ್ರದಾಯಗಳು:

ಸಂಪ್ರದಾಯಗಳು ಎಂದರೆ ಯಾವುದೇ ಬಗೆಯ ಆಚರಣೆ ಮತ್ತು ರೂಢಿಗಳು ಹಿಂದಿನಿಂದಲೂ ಯಥಾವತ್ತಾಗಿ ಮುಂದುವರೆಸಿಕೊಂಡು ಬರುವದಕ್ಕೆ ಸಂಪ್ರದಾಯ ಎನ್ನುತ್ತೇವೆ. ಅನೇಕ ಜಾತಿ-ಜನಾಂಗ ಸಮುದಾಯವು ಪ್ರಾಚೀನ ಕಾಲದಿಂದ ಇಲ್ಲಿಯವರೆಗೂ ತನ್ನದೇ ಆದ ಸಂಪ್ರದಾಯ ಮುಂದುವರೆಸಿಕೊಂಡು ಬಂದಿವೆ. ಕಾಲಕ್ಕೆ ತಕ್ಕಂತೆ ಕೆಲವೊಂದು ಬದಲಾವಣೆಗಳನ್ನು ಮಾಡಿಕೊಂಡು ಮುಂದೆ ಸಾಗುತ್ತಿರುವುದು ಕಂಡು ಬರುತ್ತವೆ.

ಸಂಪ್ರದಾಯಗಳಿಗೆ ತನ್ನದೇ ಆದ ಸಂಸ್ಕಾರವಿರುವುದರಿಂದ ವರ್ಗದಿಂದ-ವರ್ಗಕ್ಕೆ ಭಿನ್ನವಾಗಿರುತ್ತವೆ. ಸಂಸ್ಕೃತಿಯ ಸಂಕೇತವಾದ ಸಂಪ್ರದಾಯಗಳಿಗೆ ಪೂರಕವಾದದ್ದು ನಂಬಿಕೆ ಮತ್ತು ಆಚರಣೆ. ಸಮಾಜದಲ್ಲಿ ಸಂಪ್ರದಾಯಗಳು ಹುಟ್ಟಿನಿಂದ ಮರಣದವರೆಗೂ ಹಾಗೇ ಜೀವನದ ಉದ್ದಕ್ಕೂ ಕಾಣುತ್ತೇವೆ.[23] ಗುಲಬರ್ಗಾ ಜಿಲ್ಲೆಯ ಜನರು ಹಲವಾರು ಸಂಪ್ರದಾಯಗಳನ್ನು ಇಂದಿಗೂ ಆಚರಿಸಿಕೊಂಡು ಬರುತ್ತಿದ್ದಾರೆ. ಅವು ವಿಶಿಷ್ಟವಾದವುಗಳು ಆಗಿ ಸಾವಿರಾರು ಪ್ರವಾಸಿಗರನ್ನು ಆಕರ್ಷಿಸಲು ಸಾಧ್ಯವಾಗುತ್ತದೆ.

## ಹಾಲೋಕುಳಿ:

ಭರತ ಹುಣ್ಣಿಮೆಯಾದ ಐದನೆಯ ದಿವಸಕ್ಕೆ ಅಫಜಲಪುರ ತಾಲ್ಲೂಕಿನ ದೇವಲ ಗಾಣಗಾಪುರ ದತ್ತ ದೇವರ ಜಾತ್ರೆಯಲ್ಲಿ 'ಚಟಿಗೆ ಒಡೆಯುವ' ಸಂಪ್ರದಾಯವಿದೆ. ದೇವಸ್ಥಾನಕ್ಕೆ ಮಹಾರಾಷ್ಟ್ರದ ಜನತೆ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಆಗಮಿಸುವರು. ಇಲ್ಲಿ ನಡೆಯುವ ಸಂಪ್ರದಾಯಕ್ಕೆ 'ಹಾಲೋಕುಳಿ' ಜಾತ್ರೆಯೆಂದು ಜನ ಕರೆಯುತ್ತಾರೆ. ಗರ್ಭಗುಡಿಯ ಮುಂದೆ ಸ್ವಲ್ಪ ಎತ್ತರದಲ್ಲಿ ಪಂಚಕ್ಷೀರಗಳಿಂದ ತುಂಬಿದ ಎರಡು ಮಣ್ಣಿನ ಗಡಿಗೆಗಳನ್ನು ಕಟ್ಟಿರುತ್ತಾರೆ. ಕೆಳಗೆ ಸಾವಿರಾರು ಭಕ್ತ ಜನ ನೆರೆದಿರುತ್ತಾರೆ 'ಪೂಜೆಯಾದ ಮೇಲೆ ಬೆಳ್ಳಿಯ ಬೆತ್ತದಿಂದ ಅದಕ್ಕೆ ಹೊಡಿಯುವರು ಆಗ ಅದು ಚಲ್ಲಾಪಿಲ್ಲಿಯಾಗಿ ಸುರಿದ ಪಂಚಕ್ಷೀರವನ್ನು ಜನ ಸ್ವೀಕರಿಸುತ್ತಾರೆ. ಇದಾದ ನಂತರ ಪಲ್ಲಕ್ಕಿಯ ಮೆರವಣಿಗೆ ನಡೆಯುವುದು. ಆಗ ಭೂತಗಳ ಒಂದು ಸಣ್ಣ ಜಾತ್ರೆಯೇ ನಡೆಯುತ್ತದೆ. ಅವು ದೇವರನ್ನು ಅಶ್ಲೀಲವಾಗಿ ಬೈಯುತ್ತ ಭೀಮಾನದಿಯ ಕಡೆಗೆ ಓಡಿ ಹೋಗುವರು. ಅಲ್ಲಿ ನೀರು ಮುಟ್ಟಿದಾಕ್ಷಣ ಭೂತ ಪ್ರೇತಗಳು ಬಿಟ್ಟುಹೊಗುವ ಪ್ರತಿತಿ ಇದೆ.

## ಕಪನೂರಿನ ಹಸಿತೆನೆಯ ಕಾಳುಗಳ ಅಕ್ಷತೆ:

ಕುಪನೂರು 'ಮಲ್ಲಿಕಾರ್ಜುನ' ಜಾತ್ರೆಯಲ್ಲಿ ಕೆಲವು ವಿಶಿಷ್ಟವಾದ ಸಂಪ್ರದಾಯಗಳು ಜರುಗುತ್ತವೆ ಚಿಂಚೋಳಿ ತಾಲ್ಲೂಕಿನ ಕುಪನೂರ ಗ್ರಾಮ ಭಾವೈಕ್ಯದ ಪ್ರತೀಕವಾಗಿದ್ದು, ದೇವರ ಜಾತ್ರೆಯಲ್ಲಿ ಕಂಡುಬರುವ ವಿಶೇಷ ಸಂಪ್ರದಾಯವೆಂದರೆ ಈ ದೇವರ ಜಾತ್ರೆ ಮುಗಿಯುವವರೆಗೆ ಗ್ರಾಮದ ಹಾಗೂ ಸುತ್ತಮುತ್ತಲಿನ ಹಳ್ಳಿಗಳ ಜನರು ಜೋಳದ ಶೀತನಿ (ಹಸಿ ತೆನೆಸುಟ್ಟುಕಾಳು) ತಿನ್ನುವುದಿಲ್ಲ ಇಲ್ಲಿ ಇನ್ನೊಂದು ವಿಶೇಷವೆನೆಂದರೆ 'ವಧುವಿಲ್ಲದೆ ವರನ ವಿವಾಹ' ನಡೆಯುತ್ತದೆ. ಪ್ರತಿ ವರ್ಷ ಜನೇವರಿ-೧೫ರಂದು ದೇವಾಲಯದಲ್ಲಿ ಜೋಳದ ಹಸಿತೆನೆಯ ಕಾಳುಗಳ ಅಕ್ಷತೆ ಮಧುಮಗನ ಮೇಲೆ ಹಾಕುವ ಪದ್ಧತಿ ಹಲವು ವರ್ಷಗಳಿಂದ ನಡೆದುಕೊಂಡು ಬಂದ ಸಂಪ್ರಾದಾಯವಾಗಿದೆ.

---

[23] ಶರಣಪ್ಪ ಕಾಶಪ್ಪ, ಚಿತ್ತಪೂರ ತಾಲೂಕು: ಒಂದು ಸಾಂಸ್ಕೃತಿಕ ಅಧ್ಯಯನ, ಎಂ.ಫೀಲ್, ಅಪ್ರಕಟಿತ ಪ್ರಬಂಧ, ಪು-135-136.

## ಜೋಕುಮಾರ:

ಅನಂತ ಹುಣ್ಣಿಮೆಯಲ್ಲಿ ಈ ಆಚರಣೆ ನಡೆಯುತ್ತದೆ ಇದನ್ನು ಜನ ಜ್ಯೋಕ್ಯಾನ ಹುಣ್ಣಿಮೆ, ಅಥವಾ ಜೋಕುಮಾರ ಎಂತಲೂ ಕರೆಯುತ್ತಾರೆ, ಭಾದ್ರಪದ ಮಾಸದಲ್ಲಿ ಶುಕ್ಲಪಕ್ಷದ ಸಂದರ್ಭದಲ್ಲಿ ಗಂಗಾಮತದ ಹೆಣ್ಣು ಮಕ್ಕಳು ಗಣಪತಿ ಕಳುಹಿಸಿದ ನಂತರ ಬೇವಿನ ಸೊಪ್ಪಿನಿಂದ ತುಂಬಿದ ಬುಟ್ಟಿಯಲ್ಲಿ ಒಂದು ಮೂರ್ತಿಯನ್ನಿಟ್ಟುಕೊಂಡು ಮನೆ ಮನೆಗೂ ಹೋಗಿ ಕಾಳುಗಳು ಪಡೆದುಕೊಳ್ಳುವ ವಿಶೇಷ ಆಚರಣೆ. ಅಗಲ ಮುಖ, ತಕ್ಕಂತೆ ಕಣ್ಣು, ತಲೆಗೆ ಕಿರೀಟದಂತೆ ಭಾಸವಾಗುವ ಪೇಟದ ಸುತ್ತು, ಚೂಪಾದ ಹುರಿಮೀಸೆ, ತೆರೆದ ಬಾಯಿ, ಹಣೆಗೆ ವಿಭೂತಿ ಕುಂಕುಮದ ಪಟ್ಟಿಗಳು ಗಿಡ್ಡದಾದ ಕಾಲುಗಳಿರುವ ಕೈಯಲ್ಲಿ ಸಣ್ಣ ಕತ್ತಿ ಹಿಡಿದ ಮಣ್ಣಿನ ಈ ಗೊಂಬೆಯನ್ನು ಪೂರ್ಣ ಬೇವಿನಸೊಪ್ಪು ತುಂಬಿದ ಬುಟ್ಟಿಯಲ್ಲಿಟ್ಟುಕೊಂಡು, ಹಾಡುತ್ತಾ ಮನೆ–ಮನೆಗೆ ತೆರಳುವರು. ಏಳು ದಿನಗಳು ಊರು ತಿರುಗಿದ ನಂತರ ಏಳನೇ ದಿನ ಊರ ಕೇರಿಯ ಹೊರಗೆ ಮುಳ್ಳಿನಿಂದ ಮುಚ್ಚಿ ಒನಕೆಯಿಂದ ಹೊಡೆದು ಹಾಕುತ್ತಾರೆ.[೨೪]

## ಅಗ್ನಿ ತುಳಿಯುವ ಸಂಪ್ರದಾಯ;

ವೀರಭದ್ರ ದೇವರ ಜಾತ್ರೆಯ ಸಂದರ್ಭದಲ್ಲಿ ನಡೆಯುವಂಥ ಸಂಪ್ರದಾಯವಿದು. ಜಾತ್ರೆಯ ದಿನ ಊರಿನ ಜನರೆಲ್ಲಾ ಸೇರಿ ಅಗ್ನಿ ಸುಡುವ ಕಟ್ಟಿಗೆಗಳನ್ನು ರಾಶಿರಾಶಿಯಾಗಿ ಗುಡಿಯ ಮುಂದೆ ಹಾಕುವರು. ರಾತ್ರಿಯಾದಂತೆ ಊರಗೌಡರ ಮನೆಯಿಂದ ಕುಂಭಾ ಹಾಗೂ ಆರತಿಯನ್ನು ಮೆರವಣಿಗೆಯಲ್ಲಿ ಗುಡಿಗೆ ತರುವರು. ಎತ್ತರವಾಗಿ ಹಾಕಿದ ಅಗ್ನಿ ತುಳಿಯಲು ಪಟ್ಟದ ಪುರವಂತರು ಅಗ್ನಿಯಲ್ಲಿ ಮೊದಮೊದಲಿಗೆ ಪ್ರವೇಶಿಸಿದ ನಂತರ ಅನೇಕ ಪುರುವಂತರು ಜಾತ್ರೆಗೆ ಬಂದ ಭಕ್ತಾದಿಗಳು ಮಡಿಯಿಂದ ಆಗ್ನಿ ತುಳಿಯುವ ಆಚರಣೆಯಲ್ಲಿ ಭಾಗವಹಿಸುವರು. ಅಗ್ನಿ ತುಳಿಯುತ್ತ ತಮಗಾಗಿದ್ದ ಕರ್ಮಗಳು ನಾಶವಾದವು ಎನ್ನುವ ಪ್ರತೀತಿ ಇದೆ. ಪುರುವಂತರ ವೇಷ ಕಣ್ಮನವನ್ನು ಸೆಳೆಯುವಂತಿದ್ದು, ವಿವಿಧ ಭಾವ, ಭಂಗಿಗಳಲ್ಲಿ ವಾದ್ಯಗಳ ಹಿನ್ನೆಲೆಯಲ್ಲಿ ನರ್ತಿಸುತ್ತಾರೆ. ಬೆಳಗಾಗುವರೆಗೂ ಜನರಿಗೆ ರಂಜನೆ ನೀಡುತ್ತಾ ವೀರಭದ್ರನ ಒಡಪುಗಳನ್ನು ಹೇಳುತ್ತಾರೆ.

ಆಗಾಗ ದೇಹದ ಅಂಗಾಂಗಗಳಲ್ಲಿ ಅಸ್ತ್ರಗಳನ್ನು ಚುಚ್ಚಿಕೊಳ್ಳುವರು ಶಸ್ತ್ರ ಚುಚ್ಚಿದ ಸ್ಥಳದಲ್ಲಿ ಸ್ವಲ್ಪ ರಕ್ತ ಕಾಣಿಸಿಕೊಂಡರೆ ಆ ಶಸ್ತ್ರ ಹೊರತೆಗೆದು ಅಲ್ಲಿ ಭಸ್ಮವನ್ನು ಹಾಕಿಕೊಂಡು ಮತ್ತೆ ಕುಣಿಯುತ್ತಾರೆ. ಈ ಜಾತ್ರೆಯಲ್ಲಿ ಸುಮಾರು ಸಾವಿರಾರು ಪುರುವಂತರು ದೇವರಿಗೆ ಈ ರೀತಿ ಸೇವೆ ಸಲ್ಲಿಸುವರು. ಕಲಬುರ್ಗಿ ಜಿಲ್ಲೆಯಲ್ಲಿ ಇಂಥ ಅಗ್ನಿ ತುಳಿಯುವ ಪ್ರಸಿದ್ಧ ಜಾತ್ರಾ ಸ್ಥಳಗಳೆಂದರೆ–ಹಲಕಟ್ಟಿ, ಚಿಣಮಗೇರಿ, ಕೊರವಾರ ಹಾಗೂ ಸುಲೇಪೇಟೆ ಮುಂತಾದ ಸ್ಥಳಗಳಲ್ಲಿ ಕಂಡು ಬರುತ್ತದೆ.[೨೫]

## ಬಡಿಗೆ ಉತ್ಸವ:

ಗುಲಬರ್ಗಾ ಜಿಲ್ಲೆಯ ಜೀವರ್ಗಿ ತಾಲ್ಲೂಕಿನ 'ಮಳ್ಳಿ' ಚೌಡಮ್ಮನ ಜಾತ್ರೆಯಲ್ಲಿ ಈ ಉತ್ಸವ ನಡೆಯುತ್ತದೆ. ಪ್ರತಿ ಎರಡು ವರ್ಷಗಳಿಗೊಮ್ಮೆ ಜಾತ್ರೆ ನಡೆಯುತ್ತದೆ ಶಿವರಾತ್ರಿ ಅಮಾವಾಸ್ಯೆಗಿಂತ ಮುಂಚಿತವಾಗಿ ಬರುವ ಶುಕ್ರವಾರದ ದಿನವನ್ನು ಆರಿಸಿಕೊಂಡು ಜಾತ್ರೆ ಮಾಡುತ್ತಾರೆ. ಚೌಡಮ್ಮ ದೇವಿಯ ಮುಖವಾಡಗಳನ್ನು ನಿರ್ದಿಷ್ಟ ವ್ಯಕ್ತಿಗಳು ಧರಿಸಿಕೊಂಡು ಊರ ಪ್ರಮುಖರ, ಇನ್ನಿತರ ಸವರ್ಣೀಯರು ಮತ್ತು ದಲಿತರೊಂದಿಗೆ ಒಟ್ಟುಗೂಡಿ ಆಡುವ ಬಡಿಗೆ ಆಟ ಆಚರಣೆ ವಿಶಿಷ್ಟವಾಗಿದೆ. ಜಾತ್ರೆಯ ಹಿಂದಿನ ದಿನದ ರಾತ್ರಿ ದೇವಿಯನ್ನು ಉಸುಕಿನ ತೋಟದಿಂದ ಕರೆದುಕೊಂಡು ಬಂದು ಊರ ಸಮೀಪದ ಹಳ್ಳದ

[24] ರಮೇಶ.ಸ.ಚಿ. ಕರ್ನಾಟಕ ಜನಪದ ಆಚರಣೆಗಳು, ಪು. 100–101.

[25] ನಿಂಗಣ್ಣ.ಚಿ.ಸಿ. ಕಲ್ಬುರ್ಗಿ ಜಿಲ್ಲೆಯ ಜಾತ್ರೆಗಳು, ಪು. 116.

ದಂಡೆಯಲ್ಲಿರುವ ಕಟ್ಟೆಯ ಮೇಲೆ ದೇವಿಯರ ಮುಖಗಳಿಗೆ ಪೂಜೆ ಮಾಡುತ್ತಾರೆ. ಇದಕ್ಕೆ ಚೌಡಮ್ಮನ ಕಟ್ಟೆ ಎನ್ನುತ್ತಾರೆ. ನಂತರ ದೇವಸ್ಥಾನಕ್ಕೆ ವಾದ್ಯ, ಕುಣಿತದೊಂದಿಗೆ ತೆಗೆದುಕೊಂಡು ಹೋಗುತ್ತಾರೆ.

**ಬಡಿಗಿ ಆಟ:**

ಜಾತ್ರೆಯಂದು ಮಧ್ಯಾಹ್ನ ಎಲ್ಲಾ ಭಕ್ತರು ಸೇರಿ ಆಡುವ ಈ ಬಡಗಿ ಆಟದ ಸಿದ್ದತೆ ಮಾಡಿಕೊಂಡು, ದೇವಿಯರ ಮುಖವಾಡಗಳನ್ನು ನಿರ್ದಿಷ್ಟ ಪಡಿಸಿದವರು ಧರಿಸುವರು. ಮುಖವಾಡಗಳು ದೊಡ್ಡವಾದ್ದರಿಂದ ಅವುಗಳನ್ನು ಧರಿಸುವ ವ್ಯಕ್ತಿಯ ತಲೆಗೆ ರುಮಾಲುಗಳನ್ನು ಸುತ್ತಲಾಗುತ್ತದೆ ಕೀರಿಟದ ಹಿಂಬದಿಗಿರುವ ಮೊಳೆಗಳ ನೆರವಿನಿಂದ ಮುಖವಾಡ ಧರಿಸುವರು. ತಲೆಯ ಹಿಂಭಾಗಕ್ಕೆ ಅದನ್ನು ಗಟ್ಟಿಯಾಗಿ ಕಟ್ಟುತ್ತಾರೆ. ತಲೆಯ ಹಿಂಭಾಗದಲ್ಲಿ ಎರಡು ಭದ್ರವಾದ ಚೌಡಮ್ಮ ದೇವಿಯ ಮುಖಾಕೃತಿಗಳು ಇರುತ್ತವೆ. ಅದರಲ್ಲಿ ಒಬ್ಬಳು ಅಕ್ಕ ಇನ್ನೊಬ್ಬಳು ತಂಗಿ ಎಂದು, ಬೇರೆ ಬೇರೆ ಬಣ್ಣದ ಜರಿವಸ್ತ್ರವಿರುತ್ತದೆ. ಮುಖವಾಡ ಹೊತ್ತವರು ಸೊಂಟಕ್ಕೆ ಬಣ್ಣಬಣ್ಣದ ಸೀರೆಗಳನ್ನು ನೆರಿಗೆ ಮಾಡಿ ವಿಶೇಷವಾಗಿ ತಯಾರಿಸಿದ ಉಡುಪನ್ನು ಕಟ್ಟಿಕೊಂಡಿರುತ್ತಾರೆ. ಇನ್ನೊಂದು ತೆರನಾದ ವರ್ಗಾಯಿಸಬಲ್ಲ ಉಡುಪು, ಬೇಕೆಂದಾಗ ಸೊಂಟದ ಸುತ್ತಲಿನ ಹಗ್ಗವನ್ನು ಬಿಚ್ಚಿ ಮತ್ತೊಬ್ಬ ವ್ಯಕ್ತಿಗೆ ಕಟ್ಟಬಹುದು. ಆ ವ್ಯಕ್ತಿಗಳನ್ನು ಮುಖವಾಡ ಧರಿಸಿದ ಹೊತ್ತಿನಲ್ಲಿ **"ದೇವಿಯ ಸ್ವರೂಪವೆಂದೇ ಕಾಣಲಾಗುತ್ತದೆ"** ಹೀಗೆ ಅಲಂಕೃತರಾದ ದೇವಿಯನ್ನು ಊರಿನ ಪ್ರಮುಖರು ಸೇರಿ ವಾದ್ಯಗಳೊಂದಿಗೆ ಊರ ಅಗಸೆ ಹತ್ತಿರ **'ಗೌಡರ ಕಟ್ಟೆ"** ಎಂಬಲ್ಲಿಗೆ ಕರೆತರುತ್ತಾರೆ.

**ಬಡಿಗೆ ಆಟಕ್ಕೆ ಆಹ್ವಾನ:**

ಬಡಿಗೆ ಆಟವಾಡಲು ಸ್ಪರ್ಧಾಳುಗಳಿಗೆ ಆಹ್ವಾನವನ್ನು ಊರ ಪ್ರಮುಖರಾದ ವಾಲೀಕಾರರು ಹೋಗಿ ನೀಡುವರು. ನಂತರ ಅವರು ತಮ್ಮ ತಮ್ಮ ಉಡುಗೆಗಳನ್ನು ತೆಗೆದುಕೊಂಡು ಗೌಡರ ಕಟ್ಟೆಯ ಕಡೆಗೆ ರಭಸವಾಗಿ ಓಡೋಡಿ ಬರುತ್ತಾರೆ. ದೇವಿಯ ಎಡಬಲ ಭಾಗದಲ್ಲಿ ನಿಂತು ಈ ಮುಖವಾಡಗಳನ್ನು ಧರಿಸಿ ನಿಂತವರ ಎದುರುಗಡೆ ನಿಂತು ಬಡಿಗೆಗಳನ್ನು ಗಟ್ಟಿಯಾಗಿ ಕೈಯಲ್ಲಿ ಹಿಡಿದುಕೊಂಡು ಅವುಗಳನ್ನು ಒಂದರ ಮೇಲೊಂದು ಒಟ್ಟಾಗಿ ಜೋಡಿಸಿ ಹಂದರವೊಂದನ್ನು ರಚಿಸುತ್ತಾರೆ. ಹಾಗೆ ದೇವಿಯ ಮುಖ ಧರಿಸಿದವರು ಮತ್ತು ಎಡಬಲಗಳಲ್ಲಿ ನಿಂತವರು ಎದುರಿನ ಬಡಿಗೆಯ ಹಂದರಕ್ಕೆ ಏಟು ಹಾಕುತ್ತಾರೆ. ಏಟಿನ ರಭಸಕ್ಕೆ ಹಂದರ ಕಳಿಚಿ ಕುಸಿಯುತ್ತೇನೋ ಎಂಬಂತೆ ಕೆಳಗಿಳಿಯುತ್ತದೆ. ತಕ್ಷಣ ಬಡಿಗೆ ಹಂದರವನ್ನು ಮೇಲಕ್ಕೆತ್ತುತ್ತಾರೆ. ಕೆಳಗೆ ಆಧಾರ ಕೊಟ್ಟುಕೊಂಡು ಬಗ್ಗಿ ನಿಂತವರು ಇದಕ್ಕೆ ಸಹಾಯ ಮಾಡುತ್ತಾರೆ. ಹೀಗೆ ಆಡುತ್ತಾ ಮುಂದೆ ಸಾಗುತ್ತಾರೆ.[೨೬]

ಅದೇ ವೇಳೆಗೆ ಜನಸಂದಣಿಯಿಂದ ಕೆಲವು ವಿಲಕ್ಷಣ ವ್ಯಕ್ತಿಗಳು ತಲೆಗೆ ಕಂಬಳಿ ಹಾಕಿಕೊಂಡು ಅದರ ಮೇಲೆ ಜೋಳದ ಕಿಚಡಿ, ಜೋಳ ತುಂಬಿದ ಅಡುಗೆಗಳನ್ನು ಮತ್ತು ಕೆಲವರು ಚಾದರದಲ್ಲಿ ಸಗಣೆ ಗಂಟು ಕಟ್ಟಿಕೊಂಡು ಅದನ್ನು ಬೆನ್ನಿಗೆ ಕಟ್ಟಿಕೊಂಡು ನಿಂತವರತ್ತ ಕುಳಿತವರ ಕಡೆಗೆ ಎಸೆಯುತ್ತಾರೆ ಈ ಹಿನ್ನೆಲೆಯಲ್ಲಿ **'ಮುಳ್ಳ ಜಾತ್ರೆಗೆ ಮುಳ್ಳನಂತೆ'** ಎಂದು ಗಾದೆ ಮಾತು ಬಳಕೆಯಲ್ಲಿದೆ. ಈ ಬಗೆಯ ಆಚರಣೆಯಲ್ಲಿ ಗಂಗಾಮತದವರು ಮಾತ್ರ ಭಾಗವಹಿಸುತ್ತಾರೆ. ಮಡಿವಾಳನೊಬ್ಬ ಮಣ್ಣಿನ ರಾಡಿಯಲ್ಲಿ ಅದ್ದಿದ ಬಟ್ಟೆಯನ್ನು ಬರಿಮೈಗೆ ಸುತ್ತಿಕೊಂಡು ಅಡ್ಡದಿಡ್ಡಿಯಾಗಿ ನಡೆಯುತ್ತಾ ಬರುತ್ತಾನೆ ದಾರಿಗೆ ಅಡ್ಡವಾಗಿ ನಿಂತವರಿಗೆ ರಾಡಿ ಸಿಡಿಸುತ್ತ ಹೋಗುತ್ತಾನೆ.[೨೭]

**ಅರಬೆತ್ತಲೆ ಸೇವೆ–ದೇವದಾಸಿಯರು:**

[26] ಪ್ರೊ. ಹಿ.ಚಿ.ಬೋರಲಿಂಗಯ್ಯ (ಸಂ.) ಕರ್ನಾಟಕ ಜನಪದ ಕಲೆಗಳ ಕೋಶ, ಹಂಪಿ.ವಿ.ವಿ. ಹಂಪಿ, 1996, ಪು. 20–22.

[27] ರಮೇಶ. ಸ.ಚಿ. ಕರ್ನಾಟಕ ಜನಪದ ಆಚರಣೆಗಳು, ಪು. 137.

ಆಳಂದ ತಾಲ್ಲೂಕಿನ ಚಿಂಚನಸೂರ ಹಳ್ಳಿಯ ಊರ ವಲಯದಲ್ಲಿ ಮಾಪುರತಾಯಿಯ ದೇವಾಲಯವಿದ್ದು, ಜಾತಿ, ಮತ, ಧರ್ಮ, ಪಂಥ ಬೇಧ ಮಾಡದೇ ಎಲ್ಲರೂ ಭಕ್ತಿಯ ಮಹಾಪುರವೇ ಹರಿಯುವುದರಿಂದ ಮಹಾಪುರ ತಾಯಿ ಎಂದು ಕರೆಯುತ್ತಾರೆ.[೨೮]

## ಊಟಗಿ ಸೇವೆ:

'ಅರೆಬೆತ್ತಲೆ ಸೇವೆ' : ಪೂರ್ವದಲ್ಲಿ ಪೂರ್ತಿ ಬೆತ್ತಲೆ ಸೇವೆ ನಡೆಯುತ್ತಿತ್ತು, ಆದರೆ ಈಗ ಹರಕೆ ತೀರಿಸುವ ಅರಬೆತ್ತಲೆ ಸೇವೆಯನ್ನು ಸ್ತ್ರೀ ಪುರಷರು ಬೇವಿನ ಅಥವಾ ಲಕ್ಕಿಯ ತೊಪ್ಪಲವನ್ನು ನಯವಾಗಿ ಜೋಡಿಸಿ ದಾರ ಅಥವಾ ಹಗ್ಗದಿಂದ ಕಟ್ಟಿ ದೇಹದ ಅಂಗಾಂಗಗಳನ್ನು ಮುಚ್ಚಿಕೊಂಡು ಸಲ್ಲಿಸುವ ಸೇವೆಗೆ ಊಟಗಿ ಸೇವೆ ಎನ್ನುವರು ಈ ಹರಕೆ ಮಹಾಪುರ ತಾಯಿ, ಶಂಕರವಾಡಿ, ಭಂಕೂರಗಳಲ್ಲಿ ಕಂಡು ಬರುತ್ತದೆ.[೨೯]

## ದೇವರಿಗೆ ದೀರ್ಘ ದಂಡ ನಮಸ್ಕಾರ ಹಾಕುವುದು:

ದೇವರಿಗೆ ದಂಡ ನಮಸ್ಕಾರ ಸಲ್ಲಿಸುವ ಸೇವೆಯನ್ನು ನಾವು ಇಂದು ಗುಲಬರ್ಗಾ ಜಿಲ್ಲೆಯ ಅನೇಕ ಹಳ್ಳಿಗಳಲ್ಲಿ ಕಾಣುತ್ತೇವೆ. ಅಲ್ಲದೇ ದೇವರಿಗೆ ಹರಿಕೆ ಹೊತ್ತು ಪ್ರಾಣಿ ಬಲಿಕೊಡುವಾಗ ಅಥವಾ ಯಾವುದೇ ಕಾಯಿಲೆಗೆ ಸಿಕ್ಕಿ ಬಿದ್ದಾಗ ಅವರು ತಮ್ಮ ಊರಿನ ದೇವರಿಗಾಗಲಿ ಇಲ್ಲವೇ ಬೇರೆ ಯಾವುದೇ ದೇವ ದೇವತೆಯರಿಗೆ ಬೇಡಿಕೊಂಡು ಈ ದಂಡ ನಮಸ್ಕಾರ ಸೇವೆ ದೇವರಿಗೆ ಸಲ್ಲಿಸುತ್ತಾರೆ. ಮೈಮೇಲೆ ಒಂದು ಕೊಡ ಮೀಸಲು ನೀರು ಹಾಕಿಕೊಂಡು, ಎರಡು ಕೈಯಲ್ಲಿ ಜೋಳದ ದಂಟು ಹಿಡಿದುಕೊಂಡು, ಒದ್ದೆ ಬಟ್ಟೆಯಿಂದಲೇ ಮನಸ್ಸಿನಲ್ಲಿ ದೇವರ ಧ್ಯಾನ ಮಾಡುತ್ತಾ ತಮ್ಮ ಮನೆಯಿಂದ ನಮಸ್ಕಾರ ಹಾಕಲು ಪ್ರಾರಂಭಿಸುತ್ತಾರೆ. ಕೈಕಾಲುಗಳನ್ನು ಜೋಡಿಸಿ ನೇರವಾಗಿ ಬೋರಲಾಗಿ ಕೆಳಗೆ ಬಿದ್ದು, ಹಣೆ ನೆಲಕ್ಕೆ ತಾಗಿಸಿ ದೇವರಿಗೆ ನಮಸ್ಕಾರ ಮಾಡುವರು. ಗುಡಿಗೆ ಬಂದ ತಕ್ಷಣ ಅವರಿಗೆ ಬಳಗದವರು ಸಂಬಂಧಿಕರು, ಬೇಕಾದವರು ಹೊಸ ಬಟ್ಟೆ ಕೊಡುವರು. ದಂಡ ನಮಸ್ಕಾರದ ಇನ್ನೊಂದು ರೂಪ ದಿಂಡುರುಳಿಕೆ ಸಂಪ್ರದಾಯ ಈ ಪದ್ಧತಿ "ಕಾರಭಾಸಗಿಯ ಶ್ರೀ ಕಾಡಸಿದ್ದೇಶ್ವರ ಗುಡಿಯ ಮುಂದೆ ಉರುಳುವ ದಿಂಡುರುಳಿಕೆ ಸಂಪ್ರದಾಯ ಈಗಲೂ ಶಿವರಾತ್ರಿಯ ಅಮವಾಸ್ಯೆಯ ಮರುದಿವಸ ಜರುಗುತ್ತದೆ, ಅನೇಕ ಜನ ಸಣ್ಣ ಮಕ್ಕಳು ಆರತಿ ಹೊತ್ತು ನಿಂತಿರುತ್ತಾರೆ ಈ ರೀತಿಯಾಗಿ ದೇವರಿಗೆ ಜನಪದರು ಸೇವೆ ಸಲ್ಲಿಸುತ್ತಾರೆ.[೩೦]

## ಉರುಳು ಸೇವೆ:

ಗುಲಬರ್ಗಾ ಜಿಲ್ಲೆಯ ಅಫಜಲಪೂರ ತಾಲ್ಲೂಕಿನ ಮಾಶ್ಯಾಳದ ಚೌಡೇಶ್ವರಿ ಜಾತ್ರೆಯಲ್ಲಿ ಚೌಡೆಮ್ಮನ ಮುಖವಾಡವನ್ನು ತಲೆಯ ಮೇಲೆ ಹೊತ್ತು ಜನರ ಗುಂಪಿನ ನಡುವೆ ನುಗ್ಗುವ ಗುಡ್ಡವನ್ನು ನೂರಾರು ಜನರು ಹಿಂಬಾಲಿಸುತ್ತಾರೆ ಬೇವಿನ ಮರದ ಸೊಪ್ಪಿನಿಂದ ಚಾಮರ ಬೀಸುತ್ತಾರೆ. ಹರಿಕೆ ಹೊತ್ತ ಭಕ್ತರು ಅಡ್ಡ ಉರುಳು ಸೇವೆ ಮಾಡುತ್ತಾರೆ. ಕೆಲವರಂತೂ ನೇಗಿಲ ಹೊತ್ತುಕೊಂಡು ಪೂಜೆ ಗೈಯುತ್ತಾರೆ. ಹೀಗೆ ಮಾಡುವುದರಿಂದ ಇಡೀ ಹಳ್ಳಿಯಲ್ಲಿ ಯಾವುದೇ ಅಹಿತಕರ ಘಟನೆ ಸಂಭವಿಸುವುದಿಲ್ಲ ಎನ್ನುವ ನಂಬಿಕೆ ಇದೆ.[೩೧]

## ನಂದಿ ಧ್ವಜಗಳು:

[28] ನಿಂಗಣ್ಣ. ಚಿ.ಸಿ. ಕಲ್ಬುರ್ಗಿ ಜಿಲ್ಲೆಯ ಜಾತ್ರೆಗಳು, ಪು. 105.
[29] ಡಾ.ಚಿ.ಸಿ.ನಿಂಗಣ್ಣ, ಕಲ್ಬುರ್ಗಿ ಜಿಲ್ಲೆಯ ಜಾತ್ರೆಗಳು, ಪು–105.
[30] ಬಲಭೀಮ ಸಿ.ಅರಿಗೇರಿ, ಅಫಜಲಪೂರ ತಾಲೂಕ : ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ) ಪಿಹೆಚ್.ಡಿ.ಮಹಾಪ್ರಬಂಧ, ಪು. 77.
[31] ಅದೇ, ಪು–101.

ಕಲ್ಬುರ್ಗಿ ಜಿಲ್ಲೆಯ ಹಲವಾರು ಜಾತ್ರೆಗಳಲ್ಲಿ ನಂದಿಕೋಲುಗಳ ಮೆರವಣಿಗೆ ಕಾಣುತ್ತೇವೆ. ಸಮಾಜದಲ್ಲಿ ಏಕತೆಯ ಪ್ರತೀಕಗಳಾಗಿವೆ. ಕಲ್ಬುರ್ಗಿ ತಾಲೂಕಿನ ಮುತ್ತ್ಯಾನ ಬಬಲಾದಲ್ಲಿ ೪ ನಂದಿ ಧ್ವಜಗಳ ಮೆರವಣಿಗೆ ಅತಿ ಸಂಭ್ರಮ ಹಾಗೂ ಭಕ್ತಿಯಿಂದ ನಡೆಯುತ್ತದೆ. ಪ್ರತಿವರ್ಷವೂ ಸಂಕ್ರಮಣದಲ್ಲಿ ಜಾತ್ರೆಯೂ ಜರುಗುತ್ತದೆ. ಈ ಜಾತ್ರೆಯ ಸಮಯದಲ್ಲಿ ನಂದಿ ಧ್ವಜಗಳ ಮೆರವಣಿಗೆಯ ಮೂಲಕ ಜಾತ್ರಾ ರಥೋತ್ಸವಕ್ಕೆ ನಾಂದಿ ಹಾಡುತ್ತವೆ. ಎಲ್ಲಾ ಸಮುದಾಯಗಳಿಂದ ಬರುವ ನಂದಿಕೋಲುಗಳು ಸಾಮಾಜಿಕ, ಧಾರ್ಮಿಕ, ಸಮಾನತೆಯ ದ್ಯೋತಕವಾಗಿದ್ದು, ಬಬಲಾದಿ ಮುತ್ತ್ಯಾನ ಜಾತ್ರೆಯ ಮೆರವಣಿಗೆಯಲ್ಲಿ ಎದ್ದು ಕಾಣುತ್ತದೆ. ತಮ್ಮ ತಮ್ಮ ನಂದಿಕೋಲನ್ನು ಭಕ್ತಜನರು ವಿಶಿಷ್ಟ ರೀತಿಯಲ್ಲಿ ಶೃಂಗರಿಸುತ್ತಾರೆ.

ನಂದಿಕೋಲಿಗೆ ಬೇಕಾಗುವ ಕೋಲನ್ನು ಶ್ರೀಶೈಲದಿಂದ ತಂದು ಅದಕ್ಕೆ ಬೆಳಿಗ್ಗೆ ಹಚ್ಚಿ, ಕೆಲ ಸಮಯ ಗಿಡದಲ್ಲಿ ನೇತು ಹಾಕುತ್ತಾರೆ. ಈ ಒಂದೊಂದು ನಂದಿ ಕೋಲಿನ ಭಾರ ೧೦೦ ಕಿ.ಗ್ರಾಂ ಆಗಿರುತ್ತದೆ. ನಂದಿ ಕೋಲುಗಳನ್ನು ಆಡಿಸುವುದು ತುಂಬ ಕಸರತ್ತಿನ ಕಲೆ. ಈ ಕಲೆಯಲ್ಲಿ ಕರಗತ ಮಾಡಿಕೊಳ್ಳಲು ಅನೇಕರು ತಿಂಗಳುಗಟ್ಟಲೇ ಪ್ರಯಾಸ ಪಡುತ್ತಿರುತ್ತಾರೆ. ನಂದಿಕೋಲು ಹಿಡಿಯುವವರು ವೇಷವು ವಿಶಿಷ್ಟವಾದುದು. ಅವರು ತಲೆಗೆ ಬಿಳಿ ರುಮಾಲು ಬಿಳಿ ಅಂಗಿ, ಬಿಳಿ ಪಂಜೆ, ಧರಿಸಿರುತ್ತಾರೆ. ಹೀಗೆ ವೇಷಭೂಷಣಗಳೊಂದಿಗೆ ಅವರು ಹಿಡಿದ ನಂದಿಕೋಲುಗಳ ಮೆರವಣಿಗೆ ಯಾತ್ರಾರ್ಥಿಗಳ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತದೆ. ಕಲ್ಬುರ್ಗಿಯ ಶರಣಬಸವೇಶ್ವರ, ಚಿತ್ತಾಪುರ ತಾಲೂಕಿನ ಟೆಂಗಳಿ ಗ್ರಾಮದಲ್ಲಿ ಜರುಗುವ ಜಾತ್ರೆಯಲ್ಲಿ ನಂದಿಕೋಲು ಮೆರವಣಿಗೆಯು ಅಷ್ಟೇ ಮಹತ್ವದ್ದಾಗಿದೆ.[೩೨]

**ಉಪಸಂಹಾರ.**

ಅನೇಕ ಜಾತಿ–ಜನಾಂಗ ಸಮುದಾಯವು ಪ್ರಾಚೀನ ಕಾಲದಿಂದ ಇಲ್ಲಿಯವರೆಗೂ ತನ್ನದೇ ಆದ ಸಂಪ್ರದಾಯ ಮುಂದುವರೆಸಿಕೊಂಡು ಬಂದಿವೆ. ಕಾಲಕ್ಕೆ ತಕ್ಕಂತೆ ಕೆಲವೊಂದು ಬದಲಾವಣೆಗಳನ್ನು ಮಾಡಿಕೊಂಡು ಮುಂದೆ ಸಾಗುತ್ತಿರುವುದು ಕಂಡು ಬರುತ್ತವೆ. ಗುಲಬರ್ಗಾ ಜಿಲ್ಲೆಯಲ್ಲಿ ಆಚರಿಸಲ್ಪಡುವ ಹಬ್ಬ–ಹರಿದಿನಗಳು, ಜಾತ್ರೆಗಳು, ಉತ್ಸವಗಳು ಸಾಂಸ್ಕೃತಿಕ ಕೊಡುಗೆಗಳು ಮಹತ್ವವಾಗಿವೆ. ಒಂದು ದೇಶದ ಪ್ರಾಕೃತಿಕ ಸಂಪತ್ತು ಅಲ್ಲಿನ ಜನರ ಆಚಾರ, ವಿಚಾರ, ಸಂಪ್ರದಾಯಗಳು ಹಾಗೂ ಕಲಾ ಪ್ರತಿಭೆಗಳು ನಮಗೆ ಪ್ರವಾಸದಿಂದ ಸಿಗುತ್ತದೆ.



[32] ಡಾ.ಚಿ.ಸಿ.ನಿಂಗಣ್ಣ, ಕಲ್ಬುರ್ಗಿ ಜಿಲ್ಲೆಯ ಜಾತ್ರೆಗಳು, ಪು. 51–52.

# ಯೂಸುಫ್ ಆದಿಲ್‌ಖಾನ ಮತ್ತು ಬಹಮನಿ ಸಾಮ್ರಾಜ್ಯ.

**–ಡಾ. ಮಂಜುನಾಥ ಎಸ್. ಪಾಟೀಲ**
ಸಹಾಯಕ ಪ್ರಾಧ್ಯಾಪಕರು,
ಇತಿಹಾಸ ಮತ್ತು ಪುರಾತತ್ವ ವಿಭಾಗ,
ಸ್ನಾತಕೋತ್ತರ ಅಧ್ಯಯನ ಕೇಂದ್ರ,
ಬಿ.ಎಲ್.ಡಿ.ಇ ಸಂಸ್ಥೆ, ಜಮಖಂಡಿ.

ಪ್ರಾಚೀನ ಭಾರತದ ಇತಿಹಾಸದ ಅಧ್ಯಯನವು ನಿರೀಕ್ಷಿಸುವಷ್ಟು ಸದೃಢವಾಗಿ ರೂಪುಗೊಂಡಿಲ್ಲ ಅಲ್ಲಲ್ಲಿ ದೊರೆಯುವ ಪ್ರಾಥಮಿಕ ಆಕರಗಳಾದ ಶಾಸನಗಳು, ಚಾರಿತ್ರಿಕ ಕಾವ್ಯಗಳು, ದೇವಾಲಯಗಳು, ಕೈಫಿಯತ್ತುಗಳು, ಹಸ್ತಪ್ರತಿಗಳು, ಕಲಾಕೃತಿಗಳು ವಿದೇಶಿ ಯಾತ್ರಿಕರ ವರ್ಣನೆಗಳು, ಸ್ಥಳನಾಮಗಳು, ಐತಿಹ್ಯಗಳು, ಪ್ರಾಚ್ಯವಸ್ತು ಸಂಶೋಧನಾ ವರದಿಗಳು, ಇವೇ ಮುಂತಾದ ಆಕಾರಗಳನ್ನು ಬಳಸಿಕೊಂಡು ಇವುಗಳ ಮೂಲಕ ಗತಕಾಲದ ಘಟನಾವಳಿಗಳನ್ನು ಅರ್ಥವತ್ತಾಗಿ ಕ್ರಮಬದ್ಧವಾಗಿ ಜೋಡಿಸಿ ಅಧ್ಯಯನ ಮಾಡುವುದರ ಮೂಲಕ ನಮ್ಮ ಇತಿಹಾಸ ಮತ್ತು ಸಂಸ್ಕೃತಿಗಳ ಬಗೆಗೆ ಬೆಳಕು ಚೆಲ್ಲಬೇಕಾಗಿದೆ.

ಈ ರೀತಿ ಇತಿಹಾಸದ ಪುನರ್ ರಚನೆಗೆ ಸಹಾಯಕವಾಗುವ ಮಾಹಿತಿಗಳಲ್ಲಿ ಪೂರ್ವಗ್ರಹ, ವೈಭವೀಕರಣ, ಅತಿರೇಕ ಮುಂತಾದ ಪರ ವಿರೋಧ ಭಾವನೆಗಳು ಹೆಚ್ಚಿನ ಮಟ್ಟದಲ್ಲಿದ್ದು, ಇವುಗಳನ್ನು ಉಪಯೋಗಿಸಿ ಕೊಳ್ಳುವಾಗ ವಸ್ತುನಿಷ್ಟ ದೃಷ್ಠಿ ಮತ್ತು ಆ ಕಾಲದ ತಾತ್ವಿಕ ಹಿನ್ನೆಲೆಯ ಅರಿವು ಮುಖ್ಯವಾಗುತ್ತದೆ. ದಕ್ಷಿಣ ಭಾರತವನ್ನು ಆಳಿದ ಪ್ರಮುಖ ಮನೆತನಗಳಲ್ಲಿ ಬಹಮನಿ ಮತ್ತು ಇತರ ಶಾಹಿ ಸುಲ್ತಾನರು ಕೂಡಾ ಪ್ರಮುಖರಾಗಿದ್ದಾರೆ. ಆದರೆ ದಖ್ಖನ್ನಿನ ಶಾಹಿ ಸುಲ್ತಾನರ ಕುರಿತಾಗಿ ಅಧ್ಯಯನಗಳು ಅಷ್ಟಾಗಿ ನಡೆದಿರುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಶಾಹಿ ಸುಲ್ತಾನರ ಅಧ್ಯಯನಕ್ಕೆ ಲಭ್ಯವಿರುವ ಬಹುತೇಕ ಆಕರಗಳು ಪರ್ಶಿಯನ್ ಭಾಷೆಯಲ್ಲಿರುವುದು. ಅವುಗಳನ್ನು ಓದಿ ಅರ್ಥೈಸಿಕೊಳ್ಳುವ ಇತಿಹಾಸಕಾರರು ಕರ್ನಾಟಕದಲ್ಲಿ ಕೇವಲ ಬೆರಳಣಿಕೆಯಷ್ಟು. ಹಾಗಾಗಿ ಶಾಹಿ ಸುಲ್ತಾನರ ಅಧ್ಯಯನಗಳು ಅಷ್ಟಾಗಿ ನಡೆದಿಲ್ಲವೆಂದೇ ಅಭಿಪ್ರಾಯಿಸಬಹುದು. ಆದರೂ ಇತ್ತೀಚಿನ ದಿನಗಳಲ್ಲಿ ಆ ನಿಟ್ಟಿನಲ್ಲಿ ಕೆಲವು ಅಧ್ಯಯನಗಳು ನಡೆಯುತ್ತಿರುವುದು ಸಮಾಧಾನಕರ ವಿಷಯವಾಗಿದೆ. ಈ ನಿಟ್ಟಿನಲ್ಲಿ ವಿಜಯಪುರದ ಫ.ಗು. ಹಳಕಟ್ಟಿ ಸಂಶೋಧನಾ ಕೇಂದ್ರದಿಂದ ಪ್ರಕಟವಾಗಿರುವ ಆದಿಲ್‌ಶಾಹಿ ಆಸ್ಥಾನ ಸಂಪುಟಗಳನ್ನು ಇಟ್ಟುಕೊಂಡು ಯೂಸುಫ್ ಆದಿಲ್‌ಖಾನ ಮತ್ತು ಬಹಮನಿ ಸಾಮ್ರಾಜ್ಯ ಎಂಬ ವಿಷಯದ ಕುರಿತು ಪ್ರಬಂಧವನ್ನು ರಚಿಸುವ ಚಿಕ್ಕ ಪ್ರಯತ್ನವನ್ನು ಇಲ್ಲಿ ಮಾಡಿದ್ದೇನೆ.

ತುರ್ಕಿ ಮೂಲದವನಾದ ಯೂಸುಫ್ ಆದಿಲ್‌ಖಾನನು ಹಿಂದುಸ್ತಾನಕ್ಕೆ ಬಂದು ಬಹಮನಿ ಸಾಮ್ರಾಜ್ಯದಲ್ಲಿ ಸೇವೆಗೆ ಸೇರಿಕೊಂಡು ತನ್ನ ಪ್ರತಿಭೆಯಿಂದ ಉನ್ನತ ಸ್ಥಾನಮಾನಗಳನ್ನು ಪಡೆದುಕೊಂಡನಲ್ಲದೆ, ಅದು ಅವನತಿಯತ್ತ ಹೆಜ್ಜೆ ಹಾಕುತ್ತಿರುವ ಸಂದರ್ಭವನ್ನು ಬಳಸಿಕೊಂಡು ಸ್ವತಂತ್ರ ಆದಿಲ್‌ಶಾಹಿ ರಾಜ್ಯ ಸ್ಥಾಪನೆ ಮಾಡಿದ. ಆ ಕುರಿತಾದ ಘಟನಾವಳಿಗಳನ್ನು ಕುರಿತು ಈ ಪ್ರಬಂಧದಲ್ಲಿ ವಿಶ್ಲೇಷಣೆಗೆ ಒಳಪಡಿಸುವ ಪ್ರಯತ್ನವನ್ನು ಮಾಡಲಾಗಿದೆ.

ಯೂಸುಫ್ ಆದಿಲ್‌ಖಾನ ಆದಿಲ್‌ಶಾಹಿ ಸಂತತಿಯ ಮೂಲ ಸ್ಥಾಪಕನಾಗಿದ್ದಾನೆ. ಯೂಸುಫ್ ಆದಿಲ್‌ಖಾನನು ತುರ್ಕಿಮೂಲದವನು ಎಂದು 'ಬಸಾತೀನೆ ಸಲಾತೀನ' ಗ್ರಂಥದಲ್ಲಿ ಹೇಳಲಾಗಿದೆ. ಅಲ್ಲದೆ ಆದಿಲ್‌ಶಾಹಿ ಆಸ್ಥಾನದ ಕೆಲವು ಕೃತಿಕಾರರು ಹೇಳುವ ಪ್ರಕಾರ ಇವನು ಟರ್ಕಿಸುಲ್ತಾನ ಎರಡನೆಯ ಮುರಾದನ ಮಗ ಎಂದು ಹೇಳಲಾಗುತ್ತದೆ.[೧] ಆದರೆ ಅಟೋಮನ್ ಸಾಮ್ರಾಜ್ಯದ ಇತಿಹಾಸಕಾರರು ಈ ಸಂಗತಿಯನ್ನು ಅನುಮೋದಿಸುವುದಿಲ್ಲ. ಮುರಾದನು ಕ್ರಿ.ಶ. ೧೪೫೧ರಲ್ಲಿ ಮೃತನಾಗಲು ಅವನ ಅಣ್ಣ ಮುಹಮ್ಮದ್ ಸಿಂಹಾಸನವನ್ನೇರಿದನು. ಕಾನ್‌ಸ್ಟಾಂಟಿನೋಪಲನ್ನು ಗೆದ್ದವನು ಈತನೇ ಆಗಿದ್ದಾನೆ. ಅವನ

ಭೀತಿಯಿಂದ ಯೂಸುಫ್‌ನ ಕೊಲೆಯ ಸಂಚು ನಡೆದಾಗ ತಾಯಿಯ ಮುಖಾಂತರ ಅವನು ತಪ್ಪಿಸಿಕೊಂಡು ಬೀದರಗೆ ಬರುತ್ತಾನೆ.[೨] ತಾರೀಖ–ಎ–ಫರಿಶ್ತಾ ಹೇಳುವಂತೆ ಆದಿಲ್‌ಶಾಹಿ ಮನೆತನದ ಮೂಲಪುರುಷನು ಅಬುಲ್‌ಫಜಲ ಯೂಸುಫ್ ಆದಿಲ್‌ಖಾನನು ರೋಮ ಪ್ರಭುತ್ವಕ್ಕೆ ಅಧಿನದಲ್ಲಿದ್ದ ಅಲ್ ಉಸ್ಮಾನನ ಸಂತತಿಗೆ ಸಂಬಂಧಪಟ್ಟವನು. ಈ ಮನೆತನದ ಮೂಲ ಪುರುಷನು ಮರಣ ಹೊಂದಿದ ನಂತರ ಸುಲ್ತಾನನ ಹಿರಿಯ ಮಗ  ಮಹಮದನು ತಂದೆಯ ಅನಂತರ ಉತ್ತರಾಧಿಕಾರಿಯಾದನು. ಆದರೆ ಉತ್ತರಾಧಿಕಾರಕ್ಕಾಗಿ ಯೂಸುಫ್‌ನು ಮುಂದೆ ದಂಗೆಯೇಳುತ್ತಾನೆ ಎಂಬ ಹಿನ್ನೆಲೆಯಲ್ಲಿ ಆಸ್ಥಾನದ ಸಭಾಸದರು ಬಾದಶಾಹನಿಗೆ ಮನವಿ ಮಾಡಿದರು. ಆ ಹಿನ್ನೆಲೆಯಲ್ಲಿ ಸುಲ್ತಾನ ಮಹಮದನು ರಾಜಕುಮಾರ ಯೂಸುಫ್ ಆದಿಲ್‌ಖಾನನನ್ನು ಕೊಲೆ ಮಾಡಬೇಕೆಂಬ ರಾಜಾಜ್ಞೆ ಹೊರಡಿಸಿದನು ಇದರಿಂದ ಪ್ರಜೆಗಳಿಗೆ, ಉಸ್ಮಾನೀ ರಕ್ತ ಸಂಬಂಧಿಗಳಲ್ಲಿ ವಲೀ ಅಹಮದನನ್ನು ಬಿಟ್ಟು ಯಾರು ಉಳಿದಿಲ್ಲವೆಂದು ಖಚಿತವಾಗುತ್ತದೆ. ಮುಂದೆ ಉಸ್ಮಾನೀ ರಕ್ತ ಸಂಬಂಧಿಗಳಾರೂ ತಾವೇ ಅರಸೊತ್ತಿಗೆಯ ಹಕ್ಕುದಾರರೆಂದು ಪ್ರತಿಭಟಿಸಲಾರರು. ಎಂಬುದು ಸುಲ್ತಾನ ಮಹಮ್ಮದನ ಉದ್ದೇಶವೂ ಆಗಿತ್ತು ಆ ಹಿನ್ನಲೆಯಲ್ಲಿ ಯೂಸುಫ್‌ನನ್ನು ಕೊಲ್ಲಲು ಆದೇಶಿಸಿದನು.

ಗುಲದಸ್ತಾಯೆ ಬಿಜಾಪುರ ಕೃತಿಯು ತಿಳಿಸುವಂತೆ ರೂಮದ ಬಾದಶಹ ಸುಲ್ತಾನ ಮುರಾದ ಆತನು ಹಿಜರಿಶಕ ೫೮೪ (ಕ್ರಿ.ಶ. ೧೪೫೦)ರಲ್ಲಿ ತೀರಿಕೊಂಡನು. ಅವನ ಸ್ಥಳದಲ್ಲಿ ಹಿರಿಯ ಮಗನಾದ ಮಹಮದನು ಸುಲ್ತಾನನಾದನು. ಅವನಿಗೆ ಒಬ್ಬ ಕಿರಿಯ ತಮ್ಮನಿದ್ದನು. ಅವನು ತುಂಬ ಸುಂದರ ಹಾಗೂ ಲಕ್ಷಣವಂತನಾಗಿದ್ದರಿಂದ ಅವನಿಗೆ ಯೂಸುಫ್ ಸಾನಿ ಎಂದು ಕರೆಯುತ್ತಿದ್ದರು. ಹಿರಿಯ ಅಣ್ಣ ಮಹಮ್ಮದನು ಅವನನ್ನು ತುಂಬ ಪ್ರೀತಿಯಿಂದ ಕಾಣುತ್ತಿದ್ದನು. ಕ್ಷಣ ಮಾತ್ರ ಅವನನ್ನು ಬಿಟ್ಟು ಇರುತ್ತಿರಲಿಲ್ಲ. ಆದರೆ ಆಸ್ಥಾನದ ವಿದ್ವಾಂಸರು ಬಂದು 'ರಾಜ್ಯದ ಅಧಿಕಾರದಲ್ಲಿ ಪಾಲುದಾರನಾಗುವ ಯಾರನ್ನೇ ಆದರೂ ಪ್ರೀತಿಸುವುದು, ಪಾಲನೆ ಪೋಷಣೆ ಮಾಡುವುದು ಎಂದರೆ ಜೇಬಿನಲ್ಲಿ ಹಾವನ್ನು ಇಟ್ಟುಕೊಂಡಂತೆ, ಆದ್ದರಿಂದ ನೀನು ನಿಶ್ಚಿಂತೆಯಿಂದ ರಾಜ್ಯಭಾರವನ್ನು ಮಾಡುವುದಾದರೆ ಈ ನಿನ್ನ ತಮ್ಮನನ್ನು ಕೊಲ್ಲಬೇಕು. ಇದು ರೂಮ ದೇಶದ ಪರಂಪರೆಯೂ ಆಗಿದೆ ಎಂದು ಹೇಳಿದರು. ಅದಕ್ಕೆ ಮಹಮ್ಮದನು ಆ ವಿಷಯವನ್ನು ಯೂಸುಫನ್ ತಾಯಿಯ ಹತ್ತಿರ ಹೋಗಿ ಈ ವಿಷಯದಲ್ಲಿ ಪರಿಹಾರ ಪಡೆಯಿರಿ ಎಂದು ಹೇಳಿದನು. ಆಸ್ಥಾನದ ವಿದ್ವಾಂಸರು ಬಂದು ಯೂಸುಫ್‌ನ ತಾಯಿಯ ಹತ್ತಿರ ವಿಷಯವನ್ನು ಪ್ರಸ್ತಾಪಿಸಿದಾಗ ಬುದ್ಧಿವಂತಳಾದ ಮಾಹಾರಾಣಿಯು ಯೋಚಿಸಿ ತಾನು ಬೇಡವೆಂದರೂ ಯೂಸುಫ್‌ನನ್ನು ಇವರು ಕೊಲ್ಲುತ್ತಾರೆ ಎಂದು ಯೋಚಿಸಿ ಈ ರೀತಿಯಾಗಿ ಹೇಳುತ್ತಾಳೆ.

ಸುಲ್ತಾನ ಮಹಮದನ ತಾಯಿಗೆ ತನ್ನ ಚಿಕ್ಕ ಮಗನ ಮೇಲೆ ಬಹಳ ಪ್ರೀತಿ ಇದ್ದಿತು. ರಾಣಿಗೆ ಯೂಸುಫ್‌ನ ಕೊಲೆಯ ಸಂಚು ಗೊತ್ತಾದಾಗ ಆಕೆ ಅಂತಃಪುರದ ಬಾಗಿಲಿಗೆ ಬಂದಳು, ಆಕೆ ಬಹಳ ಅಂಗಲಾಚಿ ವಿನಂತಿಸುದುದೇನೆಂದರೆ, ಇಂತಹ ಮುಗ್ಧ ಬಾಲಕನಾಗಿರುವ ಈ ರಾಜಕುಮಾರನನ್ನು ಕೊಲೆ ಮಾಡುವುದರಿಂದ ಯಾವ ಲಾಭವೂ ಇಲ್ಲ. ಆದರೆ ಈ ಬಾಲಕನನ್ನು ವಧಿಸುವುದರಲ್ಲಿ ಸಮಸ್ಯೆಯ ಪರಿಹಾರವು ಇರುವುದಾದರೆ, ನನಗೆ ಒಂದು ದಿನದ ಅವಧಿಯನ್ನು ಕೊಡಬೇಕು, ಜೀವಿತದ ಪೂರ್ಣಾವಧಿಯವರೆಗೆ ಅಗಲಬೇಕಾಗಿರುವ ಪ್ರೀತಿಯ ಮಗನ ಜೊತೆಗೆ ಅವನನ್ನು ನೋಡುತ್ತ ರಾತ್ರಿಯೆಲ್ಲ ಕಳೆಯುತ್ತೇನೆ ಎಂದಳು, ಅಮೀರನಿಗೆ ಈ ವಿನಂತಿಯಲ್ಲಿ ಯಾವ ದೋಷವೂ ಕಾಣಿಸಲಿಲ್ಲ. ಆದ್ದರಿಂದ ರಾಜಕುಮಾರ ಯೂಸುಫ್‌ನ ಕೊಲೆಯನ್ನು ಒಂದು ದಿನಕ್ಕೆ ಮುಂದೊಡಲಾಯಿತು.

ಅಮೀರರೆಲ್ಲ ಹೊರಟು ಹೋದ ಮೇಲೆ ರಾಣಿಯು ಸಾವಾ ನಿವಾಸಿಯಾದ ಖ್ವಾಜಾ ಇಮಾದುದ್ದೀನ ಮಹಮೂದ ಗರಜಿಸ್ಥಾನಿ (ಗುರ್ಜರಸ್ಥಾನದ ವ್ಯಾಪಾರಿ) ಎಂಬುವನನ್ನು ಕರೆಸಿದಳು. ಈತನು ಒಬ್ಬ ಪ್ರಸಿದ್ಧ ವ್ಯಾಪಾರಿಯಾಗಿದ್ದನು. ಇರಾನದಿಂದ ಬೆಲೆಬಾಳುವ ವಸ್ತುಗಳನ್ನು ತಂದು ಉಸ್ಮಾನಿ ಅಂತಃಪುರದಲ್ಲಿ ಮಾರಾಟ ಮಾಡುತ್ತಿದ್ದನು. ರಾಣಿಯು ಇಮಾದನಿಗೆ ಎಲ್ಲ ವಿಷಯಗಳನ್ನು ತಿಳಿಸಿದಳು ಮತ್ತು ಉಪ್ಪಿನ ಋಣವಿದ್ದರೆ ನನಗೆ ಸಹಾಯ ಮಾಡು ಎಂದು ವಚನ ತೆಗೆದುಕೊಂಡು, ರಾಜಕುಮಾರ

ಯೂಸುಫ್‌ನನ್ನು ಗುಲಾಮರ ಗುಂಪಿನಲ್ಲಿ ಸೇರಿಸಿಬಿಡು ಎಂದು ಹೇಳಿದಳು. ರಾಜಕುಮಾರ ಯೂಸುಫ್‌ನನ್ನು ಪರದೇಶಕ್ಕೆ ತಲುಪಿಸಿ ಬಿಡು. ನಿನ್ನ ಸೇವೆಯನ್ನು ಪರಿಗಣಿಸಿ ಸಂಪತ್ತನಿಂದ ಸಂತುಷ್ಟಗೊಳಿಸುತ್ತೇನೆ ಎಂದು ರಾಣಿಯು ಹೇಳಿದಳು. ಇಮಾದನು ರಾಜಕುಮಾರ ಯೂಸುಫ್‌ನನ್ನು ಕರೆದುಕೊಂಡು ರಾತ್ರೋರಾತ್ರಿ ಒಂದೇ ಉಸಿರಿನಲ್ಲಿ ಬಗದಾದಿನ ಕಡೆಗೆ ಹೊರಟುಬಿಟ್ಟನು.

ಎರಡನೆಯ ದಿವಸ, ಉಸ್ಮಾನಿ ಆಸ್ಥಾನದ ಶ್ರೀಮಂತ ಅಮೀರರು ಮಾತುಕೊಟ್ಟಂತೆ ಅಂತಃಪುರದ ದ್ವಾರದ ಬಳಿ ಬಂದರು. ಅವರು ರಾಜಕುಮಾರ ಯೂಸುಫ್‌ನನ್ನು ತಮ್ಮ ವಶಕ್ಕೆ ನೀಡಲು ಕೇಳಿದರು. ಆಗ ರಾಣಿಯು ಯೂಸುಫ್‌ನಂತೆ ವಯಸ್ಸಿನಲ್ಲಿ ಲಕ್ಷಣಗಳಲ್ಲಿ ತುಂಬ ಸುಂದರವಾಗಿರುವ ಖ್ವಾಜಾ ಇಮಾದುದ್ದೀನನಿಂದ ಖರೀದಿಸಿದ್ ಗುಲಾಮನನ್ನು ಒಪ್ಪಿಸಿದಳು.[೩] ಸರದಾರನು ಆ ಗುಲಾಮನನ್ನು ರಾಜಕುಮಾರ ಯೂಸುಫ್‌ನ ಸ್ಥಳದಲ್ಲಿ ವಧಿಸಿದನು. ಶವವನ್ನು ರಾಜಧರ್ಮದ ಅನುಸಾರ ಅಂತ್ಯವಿಧಿಗಾಗಿ ಅಂತಃಪುರದಿಂದ ಹೊರಗೆ ತರಲಾಯಿತು. ಗುಲಾಮನ ಶವವನ್ನು ರಾಜಕುಮಾರನ ಶವವೆಂದು ಅಂತ್ಯಸಂಸ್ಕಾರ ಮಾಡಲಾಯಿತು.[೪] ಸಮಕಾಲೀನ ಕೆಲವು ಸಾಹಿತ್ತಿಕ ಕೃತಿಗಳು ಮೇಲಿನ ಘಟನೆಗೆ ಸಂಬಂಧಿಸಿದಂತೆ ಬೇರೆ ಬೇರೆ ವಿಷಯಗಳನ್ನು ಪ್ರಸ್ತಾಪಿಸುತ್ತವೆ. ಇಮಾದುದ್ದೀನನಿಂದ ಖರೀದಿಸಿದ ಗುಲಾಮ ಹುಡುಗನಿಗೆ ಅದೇ ರಾತ್ರಿ ವಿಷವನ್ನು ಸ್ವತಹಃ ರಾಣಿಯೇ ಕುಡಿಸಿ ಸಾಯಿಸಿದಳು ಎಂದು ಗುಲದಸ್ತಾಯೆ ಬಿಜಾಪುರ ಕೃತಿಯು ಉಲ್ಲೇಖಿಸುತ್ತದೆ. ಬಸಾತೀನೆ ಸಲಾತೀನ ಕೃತಿಯೂ ಇದೇ ವಿಷಯವನ್ನೇ ಅನುಮೂದಿಸುತ್ತದೆ. ವಿಷ ಕುಡಿಸಿದ್ದರಿಂದ ಮಗುವಿನ ರೂಪವೆಲ್ಲ ಬದಲಾಯಿತು. ರಾತ್ರಿಯ ಕೊನೆಯ ಗಳಿಗೆಯಲ್ಲಿ ಅರಮನೆಯ ಚಾಕರರನ್ನು ಕರೆದು ರಾಜಪುತ್ರ ಯೂಸುಫ್‌ನು ಸತ್ತನೆಂದು ಹೇಳುತ್ತ ಎಲ್ಲರೂ ದೊಡ್ಡ ಧ್ವನಿಯಲ್ಲಿ ದುಃಖಿಸತೊಡಗಿದರು. ಬೆಳಕು ಹರಿಯುತ್ತಿದ್ದಂತೆ ರಾಜಪುತ್ರ ಯೂಸುಫ್ ಸತ್ತ ಸುದ್ದಿ ನಗರದ ತುಂಬೆಲ್ಲ ಹಬ್ಬಿತು. ಅದು ಬಾದಶಹ ಮತ್ತು ಆಸ್ಥಾನದ ಮಹಾಜನರಿಗೆ ಗೊತ್ತಾಗುತ್ತಿದ್ದಂತೆ ಅವರು ಬಂದು ರಾಜ ಸನ್ಮಾನದಲ್ಲಿ ಯುಸೂಫ್‌ನ ಹಾಗಿ ಇರುವ ಗುಲಾಮನ ಅಂತ್ಯ ಸಂಸ್ಕಾರವನ್ನು ಮಾಡಿದರು. ಮತ್ತು ಮಹಾರಾಣಿಗೆ ಸಾಂತ್ವಾನವನ್ನು ಹೇಳಿದರು. ಈತ್ತ ವ್ಯಾಪಾರಿಯಾದ ಖ್ವಾಜಾ ಇಮಾದುದ್ಧೀನ ರಾಜ ಪುತ್ರನ ಪಾಲನೆ ಪೋಷಣೆ ತನಗೆ ಬಂದದ್ದು ಭಗವಂತನ ಆಶೀರ್ವಾದವೆಂದು ತಿಳಿದು ಅದೇ ರಾತ್ರಿ ಆ ಊರನ್ನು ಬಿಟ್ಟು ಸಾವಾನಗರಕ್ಕೆ ಬಂದನು. ಅಲ್ಲಿ ಕೆಲ ಕಾಲ ಇದ್ದು ಅಲ್ಲಿಂದ ಹಿಂದುಸ್ತಾನಕ್ಕೆ ಬಂದನು.

**ಹಿಂದುಸ್ಥಾನದತ್ತ ಯೂಸುಫ್‌ನ ಪ್ರಯಾಣ.**

ಹಿಂದುಸ್ಥಾನದತ್ತ ಹೋರಡುವ ಪೂರ್ವದಲ್ಲಿ ಯೂಸುಫ್‌ನ ಸ್ವಪ್ನದಲ್ಲಿ ವಂದನೀಯ ಹಜರತ್ ಖಜರ ಆಲಿಯಾರು[೫] ಅಥವಾ ಖ್ವಾಜಾ ಖಿಜರ ಎಂಬುವವನು ಬಂದು "ಹೇ ಯೂಸುಫ್‌ನೆ, ನೀನು ಸಾವಾ ನಗರಕ್ಕೆ ಹೋಗದೆ ಹಿಂದುಸ್ಥಾನದತ್ತ ಹೋಗು ನಿನ್ನ ಮನೋರಥವು ಅಲ್ಲಿ ಈಡೇರುತ್ತದೆ. ಪ್ರವಾಸದ ಶ್ರಮದ ಅನಂತರ ಅಲ್ಲಿ ನಿನ್ನ ಬಯಕೆ ಫಲಪ್ರದವಾಗುತ್ತದೆ. ಶ್ರೇಷ್ಠ ರಾಜ್ಯಾಧಿಕಾರ ಹಾಗೂ ಐಶ್ವರ್ಯವು ನಿನಗೆ ಲಭಿಸುತ್ತದೆ" ಎಂದು ಹೇಳಿದಂತಾಯಿತು. ಯೂಸುಫ್‌ನು ಈ ಸ್ವಪ್ನ ವಿಷಯವನ್ನು ತಿಳಿಸದೆ ಖ್ವಾಜಾ ಇಮಾದುದ್ಧೀನನಿಗೆ ಹಿಂದುಸ್ಥಾನದತ್ತ ಹೋಗುವಂತೆ ಹಟ ಹಿಡಿದನು. ಆಗ ಖ್ವಾಜಾ ಇಮಾದುದ್ಧೀನನು ಸಾವಾ ನಗರಕ್ಕೆ ಹೋಗುವುದನ್ನು ಬಿಟ್ಟು ಹಿಂದುಸ್ಥಾನಕ್ಕೆ ಹೋಗಲು ಯೂಸುಫ್‌ನೊಂದಿಗೆ ಹಡಗನ್ನು ಏರಿದನು.[೬] ಹಿಜರಿ ಶಕೆ ೮೬೪ (ಕ್ರಿ.ಶ. ೧೪೫೯–೬೦)ರಲ್ಲಿ ಜಲಮಾರ್ಗದಿಂದ ಹಿಂದುಸ್ಥಾನದ ಕಡೆಗೆ ಹೋರಟು ಮಹಾರಾಷ್ಟ್ರದ ರತ್ನಾಗಿರಿಯ ಧಾಬೋಳ ಬಂದರದಲ್ಲಿ ಬಂದು ಇಳಿದನು. ಅಲ್ಲಿರುವಾಗ ಒಂದು ದಿನ ಯೂಸುಫ್‌ನು ಬೇಟೆಯಾಡಲು ಹೊರಟು ಸಮುದ್ರದ ತೀರಕ್ಕೆ ಬಂದನು. ಆಗ ಅವನಿಗೆ ತುಂಬಾ ಬಾಯಾರಿಕೆಯಾಗಿತ್ತು. ಅದೇ ಹೊತ್ತಿಗೆ ಒಬ್ಬ ಸುಂದರ ತೇಜಸ್ವಿ ವ್ಯಕ್ತಿ–ಯಾರನ್ನು ಮೊದಲು ಕನಸಿನಲ್ಲಿ ಕಂಡಿದ್ದನೋ ಆತನೇ ಪ್ರತ್ಯಕ್ಷನಾಗಿ ಯೂಸುಫ್‌ನ ಮುಂದೆ ನಿಂತನು. ಅವನ ಕೈಯಲ್ಲಿ ಸಿಹಿಯಾದ ನೀರು ತುಂಬಿದ ಪಾತ್ರೆ ಇತ್ತು. ಅದನ್ನು

ಯೂಸುಫ್‌ನ ಕೈಯಲ್ಲಿರಿಸಿ ಹೀಗೆ ನುಡಿದನು. 'ನೀರು ಕುಡಿ' ಎನ್ನುತ್ತ 'ಮೊದಲು ನೀನು ಕಂಡಿದ್ದ ಕನಸು ಸತ್ಯವಾಗಿದೆ. ಅದರ ಕುರಿತು ಸಂಶಯ ಬೇಡ. ಆ ದಿಶೆಯಲ್ಲಿ ಇಚ್ಛೆ ಮಾಡು' ಎಂದನು. ಆಗ ಯೂಸುಫ್‌ನು ನೀರು ಕುಡಿಯುತ್ತಿದ್ದಂತೆ ಆ ಸುಂದರ ಖಿಜರ್ ಪೈಗಂಬರನು ಅದೃಶ್ಯನಾದನು. ಯೂಸುಫ್‌ನು ಈ ಹೊಸ ಕಲ್ಯಾಣದಾಯಕ, ಕನಸನ್ನು ಕಂಡು ಆಶ್ಚರ್ಯಚಕಿತನಾದನು.[೭] ಆದರೆ ಕಾಶೀಮ ಫರಿಶ್ತಾ ಹೇಳುವಂತೆ ರಾಜಕುಮಾರನು ಹಡಗಿನಿಂದ ಇಳಿದು ಬಂದರಿನಲ್ಲಿ ಸ್ಥಳ ವೀಕ್ಷಿಸುತ್ತ ಅಲ್ಲಿ ತಿರುಗಾಡಿದನು. ರಾಜಕುಮಾರನು ಪ್ರತಿದಿವಸ ಬಂದರದಲ್ಲಿ ತೋಟಗಾರಿಕೆಯಿಂದ ಬರುತ್ತಿದ್ದ ತರಕಾರಿ ವ್ಯಾಪಾರಸ್ಥರ ಜೊತೆ ಸೇರಿ ಕಾಲಹರಣ ಮಾಡತೊಡಗಿದನು. ಒಂದು ದಿವಸ ಆಕಸ್ಮಿಕವಾಗಿ ಒಬ್ಬ ಮುದುಕನನ್ನು ಭೇಟಿಯಾಗುವ ಅವಕಾಶ ಬಂದಿತು. ಆ ಹಿರಿಯನು ರಾಜಕುಮಾರನ ಕುಶಲೋಪರಿ ವಿಚಾರಿಸಿದನು. ರಾಜಕುಮಾರನು ಇದುವರೆಗೆ ನಡೆದು ಹೋದ ಎಲ್ಲ ಘಟನೆಗಳನ್ನು ಆ ಹಿರಿಯನಿಗೆ ತಿಳಿಸಿದನು. ಆ ಹಿರಿಯನು ಒಂದು ಲೋಟ ಪಾನಕ ನೀಡಿ ಅತಿಥಿ ಸತ್ಕಾರ ಮಾಡಿದನು. ರಾಜಕುಮಾರನು ಪಾನಕದ ಬಟ್ಟಲನ್ನು ತೆಗೆದುಕೊಂಡು ಕುಡಿಯತೊಡಗಿದನು. ರಾಜಕುಮಾರನು ಪಾನಕದ ಬಟ್ಟಲನ್ನು ತುಟಿಗೆ ಹಚ್ಚಿರಬೇಕು. ಆ ಕ್ಷಣ ಆ ಹಿರಿಯನು ಅದೃಶ್ಯನಾದನು. ಆಗ ರಾಜಕುಮಾರನು ಆ ಹಿರಿಯ ವ್ಯಕ್ತಿಯು ವಂದನೀಯ ಖಿಜರ್ ಆಲಿಯಾ ಇಸ್ಲಾಮೀ ಅವರೇ ಇರಬೇಕೆಂದು ಊಹಿಸಿ ಫೈಜಿಯಾದ್ ತೀರ್ಥಯಾತ್ರೆಯ ಮೂಲಕ ಖ್ವಾಜಾ ಇಮಾದನ ಜೊತೆಗೆ ಅಹಮದಾಬಾದ ಬೀದರದ ಕಡೆಗೆ ಬಂದನು.[೮] ಈ ಮೇಲಿನ ಹೇಳಿಕೆಗಿಂತ ಸ್ವಲ್ಪ ಭಿನ್ನವಾಗಿ ಗುಲದಸ್ತಾಯೆ ಬಿಜಾಪುರ ಕೃತಿಯು ತಿಳಿಸುತ್ತದೆ. ದಾಭೋಳ ಬಂದರಕ್ಕೆ ಬಂದ ಮೇಲೆ ಯೂಸುಫ್‌ನು ಒಂದು ದಿನ ಬೇಟೆಯಾಡುತ್ತ ಒಂದು ಬೆಟ್ಟದ ಅಡಿಯಲ್ಲಿ ಬಂದನು. ಅಲ್ಲಿ ಅವನಿಗೆ ತುಂಬ ಬಾಯಾರಿಕೆಯಾಯಿತು. ಅಲ್ಲಿ ಅವನಿಗೆ ಎಲ್ಲಿಯೂ ನೀರು ಸಿಗಲಿಲ್ಲ. ಆಗ ಆಕಸ್ಮೀಕವಾಗಿ ಈ ಮೊದಲು ಯೂಸುಫ್‌ನು ಕನಸಿನಲ್ಲಿ ನೋಡಿದ ಒಬ್ಬ ತೇಜೋವಂತ ಸತ್ಪುರುಷನು ಪ್ರತ್ಯಕ್ಷನಾಗಿ ಮುಂದೆ ಬಂದು ನಿಂತನು ಮತ್ತು ತನ್ನ ಕೈಯಲ್ಲಿದ್ದ ಒಂದು ಪಾತ್ರೆಯಲ್ಲಿಯ ತಣ್ಣಗಿನ ಸಿಹಿನೀರನ್ನು ಯೂಸುಫ್‌ನಿಗೆ ಕೊಟ್ಟು, ಇದನ್ನು ಕುಡಿ ಎಂದು ಆದೇಶಿಸಿದನು. ಈ ಮೊದಲು ಸ್ವಪ್ನ್‌ದಲ್ಲಿ ಹೇಳಿದ್ದನ್ನು ಸುಳ್ಳು ಎಂದು ತಿಳಿಯಬೇಡ ಮತ್ತು ಅದರ ಬಗ್ಗೆ ಸಂಶಯ ಪಡಬೇಡ. ಅಲ್ಲಿ ನಾನು ಸ್ವಪ್ನದಲ್ಲಿ ಹೇಳಿದ್ದೆ, ಈಗ ನಾನು ಸ್ವತಃ ಬಂದು ಹೇಳುತ್ತಿರುವೆನು, ಭಗವಂತನು ನಿನಗೆ ಬಹು ದೊಡ್ಡ ಹುದ್ದೆಯನ್ನು ಕೊಡುತ್ತಾನೆ ಎಂದು ಹೇಳುತ್ತಿರುವಾಗ ಅದನ್ನು ಕುಡಿಯುತ್ತ ಕೇಳುತ್ತಿದ್ದ ಯೂಸುಫ್‌ನು ಹೀಗೆ ಹೇಳುತ್ತಿದ್ದವನ ಮುಖವನ್ನು ನೋಡಬೇಕೆಂದು ತನ್ನ ಮುಖ ಮೇಲೆತ್ತಿರುವಂತೆ ಖ್ವಾಜಾ ಖಿಜ್ರನು ಅದೃಶ್ಯನಾಗಿ ಬಿಟ್ಟಿದ್ದನು.[೯] ಈ ಮೇಲಿನ ಹೇಳಿಕೆಗಳೆಲ್ಲವೂ ಒಂದೇ ರೀತಿಯಾಗಿದ್ದರು ಕೂಡಾ ಅವು ಯೂಸುಫ್‌ನನ್ನು ಹಿಂದುಸ್ಥಾನದ ಕಡೆಗೆ ಹೋಗಲು ಪ್ರೇರೆಪಿಸಿದವು ಎಂದು ಹೇಳಬಹುದು. ಯೂಸುಫ್‌ನು ಖ್ವಾಜಾ ಇಮಾದುದ್ದೀನನ ಜೊತೆ ರಾಜಧಾನಿ ಬೀದರಗೆ ಬಂದನು. ಆ ಅವಧಿಯಲ್ಲಿ ಮಹಮೂದ ಗೀಲಾನಿಯು ಬೀದರದ ದಿವಾನನಾಗಿದ್ದನು. ಈತನು ಮೊದಲು ಮಲಿಕುತ್ತುಜ್ವಾರ, ಖ್ವಾಜೇ ಜಹಾನ ಎಂಬ ಬಿರುದನ್ನು ಪಡೆದಿದ್ದನು. ಈತನೇ ನಂತರದ ದಿನಗಳಲ್ಲಿ ಖ್ವಾಜಾ ಮಹಮೂದ ಗವಾನನೆಂದು ಚರಿತ್ರೆಯಲ್ಲಿ ಪ್ರಸಿದ್ಧನಾಗಿದ್ದಾನೆ. ಈತನು ಬಹಮನಿ ಸಾಮ್ರಾಜ್ಯದ ನಾಲ್ಕು ಬಾದಶಾಹರಿಗೆ ಸಚಿವನಾಗಿದ್ದನು. ಖ್ವಾಜಾ ಇಮಾದುದ್ದೀನನು ಬೀದರಿನಲ್ಲಿ ಮಹಮೂದ ಗವಾನನನ್ನು ಭೇಟಿಯಾದನು. ಅವರಿಬ್ಬರೂ ಒಂದೇ ಊರಿನವರಾಗಿದ್ದರಿಂದ ಇಬ್ಬರಲ್ಲೂ ಪರಸ್ಪರ ಪ್ರೀತಿ ವಿಶ್ವಾಸಗಳು ಬಹು ಬೇಗ ಬೆಳೆದುವು. ಒಂದು ದಿನ ಮಹಮೂದ ಗವಾನನ ದೃಷ್ಠಿ ಸುಂದರನಾದ, ಲಕ್ಷಣವಂತ ಯೂಸುಫ್‌ನ ಮೇಲೆ ಬಿದ್ದಿತು. ಆಗ ಅವನು ಖ್ವಾಜಾ ಇಮಾದುದ್ದೀನನಿಗೆ ಹೇಳುತ್ತ ಇಂಥ ಸುಂದರ ಹುಡುಗನು ಬಾದಶಾಹರ ಸೇವೆಯಲ್ಲಿ ಇರಬೇಕು. ಅವರಲ್ಲಿ ಸೇರಿಸು ಎಂದು ಹೇಳಿದನು. ಆ ದಿನಗಳಲ್ಲಿ ಶ್ರೀಮಂತರು, ಸರದಾರರು ತಮ್ಮ ತಮ್ಮ ಹುಡುಗರನ್ನು ಬಾದಶಹರ ಸೇವೆಯಲ್ಲಿ ಬಿಡುವುದು ಇಡೀ ದಖನದಲ್ಲಿ ಒಂದು ರೀತಿಯ ರಿವಾಜು ಇತ್ತು. ಹಾಗೆ ಬಾದಶಹರ ಸೇವೆಯಲ್ಲಿ ಸೇರಿದ ಹುಡುಗರು ತಮ್ಮ ತಮ್ಮ ಯೋಗ್ಯತೆ, ಶಕ್ತಿ ಸಾಮರ್ಥ್ಯಗಳಿಂದ ಸರದಾರರು, ಅಮೀರರು, ವಜೀರರು, ಸಿಪಾಹ ಸಾಲಾರು ಇತ್ಯಾದಿ ಹುದ್ದೇಗಳಿಗೆ ಬಡ್ತಿಯನ್ನು

ಪಡೆಯುತ್ತಿದ್ದರು. ಮಹಮೂದ ಗವಾನನ ಮಾತನ್ನು ಕೇಳಿದ ಖ್ವಾಜಾ ಇಮಾದುದ್ದೀನನು ರಾಜಪುತ್ರನಾದ ಈತನನ್ನು ಬಾದಶಹರ ಚಾಕರಿಗೆ ಸೇರಿಸುವುದೇ ಬೇಡವೇ ಎಂದು ಮೊದಲು ಮನಸ್ಸಿನಲ್ಲಿ ಯೋಚಿಸಿದನು. ಬೇಸರಪಟ್ಟುಕೊಂಡು ಅವನ ಮಾತನ್ನು ಒಪ್ಪಿಕೊಳ್ಳುವುದು ಬೇಡ ಎನಿಸಿತು. ಆದರೆ ಅದನ್ನೇ ಯೋಚಿಸುತ್ತಿದ್ದ ಇಮಾದುದ್ದೀನನ ಮನಸ್ಸಿನಲ್ಲಿ, ಯೂಸುಫ್‌ನ ದೈವ ಇದರಿಂದಲೇ ತೆರೆಯುವುದಿದ್ದರೆ ಯಾಕೆ ಆಗಬಾರದೆಂದು ಯೋಚಿಸಿ ಕೊನೆಗೆ ಬಾದಶಹನ ಸೇವೆಯಲ್ಲಿ ಯೂಸುಫ್‌ನನ್ನು ಸೇರಿಸಿದನು.[೧೦] ಬಸಾತೀನೆ ಸಲಾತೀನ ಕೃತಿಯು ಇದೇ ವಿಷಯಗಳನ್ನು ಪ್ರಸ್ತಾಪಿಸುತ್ತ ಯೂಸುಫ್‌ನನ್ನು ಬಾದಶಹನ ಖಾಸಾಶಿಷ್ಯ ಮಂಡಳಿಯಲ್ಲಿ ಸೇರಿಸಲಾಯಿತು ಎಂದು ತಿಳಿಸುತ್ತದೆ. ಕೆಲವು ಚರಿತ್ರೆಕಾರರು ಯೂಸುಫ್‌ನನ್ನು ಬೀದರಿನಲ್ಲಿ ತುರ್ಕಿ ಗುಲಾಮನನ್ನಾಗಿ ಮಾರಿದರು ಎಂದು ಹೇಳುತ್ತಾರೆ. ಆದರೆ ಯೂಸುಫ್‌ನ ಬಗ್ಗೆ ಇದುವೆ ಸತ್ಯವಾದ ಕಥೆಯಾಗಿದೆ. ಎಂದು ಗುಲದಸ್ತಾಯೆ ಬಿಜಾಪುರ ಕೃತಿಯು ವಿವರಿಸುತ್ತದೆ.[೧೧] ತಾರೀಖ–ಎ–ಫರಿಶ್ತಾ ಹೇಳುವಂತೆ ರಾಜಕುಮಾರ ಬೀದರನ್ನು ತಲುಪಿದಾಗ ಆತನು ಹನ್ನೆರಡು ವರ್ಷದವನಿದ್ದನು. ಬೀದರ ತಲುಪಿದ ನಂತರ, ಅಲ್ಲಿಯ ಸುಲ್ತಾನನ ಮೇಲೆ ತುರ್ಕಿ ಗುಲಾಮರ ಪ್ರಭಾವವು ಘನಿಷ್ಠವಾಗಿತ್ತೆಂದು ರಾಜಕುಮಾರನಿಗೆ ಗೊತ್ತಾಯಿತು. ಮತ್ತು ಸುಲ್ತಾನನ ಖಜಾನೆಯ ವ್ಯವಹಾರವೆಲ್ಲ ಅವರ ಮುಖಾಂತರವೇ ನಡೆಯುತ್ತದೆಂದು ಸಹ ಗೊತ್ತಾಯಿತು. ಯೂಸುಫ್‌ನು ಖ್ವಾಜಾ ಇಮಾದುದ್ದೀನನಿಗೆ ತನ್ನನ್ನು ಈ ಸುಲ್ತಾನನಲ್ಲಿರುವ ತುರ್ಕಿ ಗುಲಾಮರ ಗುಂಪಿಗೆ ಸೇರಿಸಿ ಬಿಡಬೇಕೆಂದು ವಿನಂತಿಸಿದನು. ಖ್ವಾಜಾ ಮೊದಲು ಈ ವಿನಂತಿಯನ್ನು ಮನ್ನಿಸಲಿಲ್ಲ, ಆದರೆ ಆತನ ವಿನಂತಿಯ ಒತ್ತಡವು ಮೇರೆ ಮೀರಿದಾಗ ಖ್ವಾಜಾ ಇಮಾದನು ಎಲ್ಲ ವಿಷಯಗಳನ್ನು ಮಹಮೂದ ಗವಾನನಿಗೆ ವರದಿ ಮಾಡಿದನು. ಮಹಮೂದ ಗವಾನನು ರಾಜಕುಮಾರ ಯೂಸುಫ್‌ನನ್ನು ತನ್ನ ಹತ್ತಿರ ಕರೆದು, ಆತನ ಚೆಲುವಾದ ಮುಖ, ಅಂಗಸೌಷ್ಟವ, ಪಾಂಡಿತ್ಯ, ಮಾತಿನಲ್ಲಿಯ ಚಮತ್ಕಾರ, ಗಾಂಭೀರ್ಯ ಮತ್ತು ಪರಾಕ್ರಮದ ಲಕ್ಷಣಗಳನ್ನು ಕಂಡು ಅವನು ನಿಜಾಮಶಾಹಿ ಬಹಮನಿಯ ಮುಖಾಂತರ ಅವರ ತಾಯಿ ಮಗದುಮಾ ಜೊತೆ ಯೂಸುಫ್‌ನ ಬಗ್ಗೆ ಪ್ರಸ್ತಾಪಿಸಿದನು. ಅದಾದ ನಂತರ ರಾಜಕುಮಾರ ಯೂಸುಫ್‌ನನ್ನು ಖ್ವಾಜಾ ಇಮಾದುದ್ದೀನನಿಂದ ಖರೀದಿಸಿಕೊಂಡನು. ಹೀಗೆ ಯೂಸುಫ್‌ಶಾಹಿಯು ತುರ್ಕಿ ಗುಲಾಮರ ಗುಂಪಿನಲ್ಲಿ ಸೇರಿಕೊಂಡನು.[೧೨]

ರಫೀಯುದ್ದೀನ್ ಇಬ್ರಾಹಿಂ ಶಿರಾಜಿಯು ತನ್ನ 'ತಝ್ಕೀರತುಲ್ ಮುಲೂಕ್' ಕೃತಿಯಲ್ಲಿ ಯೂಸುಫ್‌ನು ಹಿಂದುಸ್ತಾನಕ್ಕೆ ಬಂದಿರುವ ವೃತ್ತಾಂತವನ್ನು ಕುರಿತು ಈ ರೀತಿ ಉಲ್ಲೇಖಿಸುತ್ತಾನೆ. 'ನಾನು ಸನ್ ಸಮಾನ ವ ಸಿತ್ತೈನ ವ ತಿಸಾಮಯಾ (ಕ್ರಿ.ಶ. ೧೫೬೭–೬೮) ವರುಷ ವ್ಯಾಪಾರಕ್ಕಾಗಿ ನಾನಾ ತರಹ ಪದಾರ್ಥಗಳೊಂದಿಗೆ ದಕ್ಷಿಣ ದೇಶಕ್ಕೆ ಬಂದೆನು. (ಕ್ರಿ.ಶ. ೧೫೬೫ರ ರಕ್ಕಸಗಿ ತಂಗಡಗಿ ಕಾಳಗದಲ್ಲಿ ರಫಿಯುದ್ದೀನನು ಭಾಗವಹಿಸಿದ್ದಾನೆ. ಆ ಮೊದಲೆ ಅವನು ಬಂದಿರಲು ಸಾಧ್ಯವಿದೆ ಎಂದು ಡಾ. ಕೃಷ್ಣ ಕೊಲ್ಹಾರಕುಲಕರ್ಣಿ ಅವರು ಅಭಿಪ್ರಾಯ ಪಡುತ್ತಾರೆ.) ಸಾಗರ ಕಸಬಾದಲ್ಲಿ ಸಾಗರ ಎಂಬ ಪಟ್ಟಣ ಪ್ರಸಿದ್ಧವಿದೆ. ಅಲ್ಲಿಗೆ ಬಂದು ಮುಟ್ಟಿದೆನು. ಖರೀದಿ ವಿಕ್ರಿಯಲ್ಲಿ ಮಗ್ನನಾದೆನು. ಆ ಊರಿನಿಂದ ಎರಡೂವರೆ ಕೋಸು ಅಂತರದಲ್ಲಿ 'ಕೌಲಾ' ಎಂಬ ಕಸಬಾ ಇದೆ. ಆ ಊರಿನಲ್ಲಿ ಯೂಸುಫ್ ಆದಿಲ್‌ಖಾನ ಹಾಗೂ ಅವನ ವಂಶಸ್ಥರ ಸಮಾಧಿಗಳಿವೆ. (ಈಗಿನ ಕಲಬುರ್ಗಿ ಜಿಲ್ಲೆಯ 'ಗೋಗಿ' ಯಲ್ಲಿ ಯೂಸುಫ್ ಮತ್ತು ಅವನ ಮಗನ ಸಮಾಧಿಗಳಿವೆ) ಅಲ್ಲಿಯ ಉಸ್ತುವರಿಗಾಗಿ ನೌಕಾಸೇನೆಯ ಖರ್ಚಿನಲ್ಲಿಯ ಸೇವಕ ಜನರನ್ನು ನಿಯಮಿಸಿದ್ದರು. ನೂರು ಜನ ಸೇವಕರನ್ನು ಸಂರಕ್ಷಣೆಗಾಗಿ, ಅದರಂತೆ ಸರ್ವ ಸೇವೆಗಳಿಗೆ, ಮತ್ತು ಹುದ್ದೇದಾರರನ್ನು, ಮತ್ತೆ ಕೆಲವರು ಫಾತೆಹಾ ಕೊಡಲು, ದಾನ ಮಾಡಲು, ಮತ್ತು ಪಾರುಪತ್ಯಮಾಡಲು ನಿಯಮಿಸಲಾಗಿತ್ತು. ಎಲ್ಲ ಸೇವಕ ಜನರಲ್ಲಿ ಶಮಸುದ್ದೀನ ಹಜರೇ ಎಂಬುವನು ಧಾರ್ಮಿಕನೂ ಹಾಗೂ ಒಳ್ಳೆಯ ನಡತೆಯವನೂ ಆಗಿದ್ದನು. ಆತನ ವಯಸ್ಸು ಸುಮಾರು ತೊಂಭತ್ತರ ಮೇಲೆ ಇದ್ದಿತು. ಸಾಕಷ್ಟು ಪ್ರವಾಸ ಮಾಡಿದವನಾಗಿದ್ದನು. ಆತ ಯೂಸೂಫ್ ಆದಿಲ್‌ಖಾನ್‌ನ ಕಾಲದ ಹಳೆಯ ಪ್ರಾಮಾಣಿಕ ನೌಕರರಲ್ಲೊಬ್ಬನಾಗಿದ್ದನು. ಅವನು ಅನಂತರ ಯೂಸುಫ್‌ನ ಸಮಾಧಿಯ ಉಸ್ತುವಾರಿಯನ್ನು ಮಾಡಿದನು. ಆತನನ್ನು ಭೇಟಿಯಾದೆ ಮತ್ತು ಸ್ನೇಹ

ಸಂಪಾದಿಸಿದೆ. ಆಗ ಒಮ್ಮೆ ಶಮಸುದ್ದೀನನು ಯೂಸುಫ್ ಆದಿಲ್‌ಖಾನ್‌ನ ಕಾರ್ಯಾರಂಭವನ್ನು ಹಾಗೂ ಆತನ ಮೂಲ ವಂಶಾವಳಿಯನ್ನು ಸವಿಸ್ತಾರವಾಗಿ ಹೀಗೆ ಹೇಳಿದ್ದನು.[೧೩] ಹಸನಬೇಗ ರಾಜ್ಯವಾಳುತ್ತಿದ್ದ ಕಾಲದಲ್ಲಿ ನಾನು ಹಿತ್ರ ಎಂಬ ಪಟ್ಟಣದಲ್ಲಿ ವಾಸಿಸುತ್ತಿದ್ದೆನು. ಆಗ ಉಮರಾ ಜಹಾಂಷಾಹ್ ಎಂಬುವನು ದ್ವೇಷ ಸಾಧಿಸುತ್ತಿದ್ದಾನೆಂಬ ಸುದ್ದಿ ಪ್ರಕಟವಾಯಿತು. ಒಬ್ಬರೊಬ್ಬರು ಮುಖತಿರುವ ಉಭಯತರು ಪರಸ್ಪರ ಒಳಸಂಚಿನಲ್ಲಿ ಮಗ್ನರಾದರು. ಹಸನಬೇಗನು ಸಮಯ ಸಾಧಿಸಿ ಜಹಾಂ ಶಾಹನ ಪ್ರದೇಶವನ್ನು ತೆಗೆದುಕೊಳ್ಳುವ ಸಂಕಲ್ಪ ಮಾಡಿದನು. ಆಗ ತಬರೇಜ್ ಎಂಬಲ್ಲಿಗೆ ಮುಟ್ಟುವ ಹೊತ್ತಿಗೆ ಜಹಾನ್‌ಶಾಹನು ತೀರಿಕೊಂಡನು.[೧೪] ಅಜರ್‌ಬಾಬಜಾನ್, ಖುರಾಸಾನ, ಆರಾಕೀನ, ಪಾರಸ ಮತ್ತು ಕಿರ್ಮಾನಗಳನ್ನು ಸಹಿತವಾಗಿ ಆತನ ಸಂಪೂರ್ಣ ಪ್ರದೇಶಗಳನ್ನು ಹಸನ್‌ಬೇಗನು ತನ್ನ ಕೈವಶಮಾಡಿಕೊಂಡನು. ಪ್ರತಿಯೊಂದು ಪಟ್ಟಣ, ಪ್ರದೇಶಗಳಿಗೆ ತನ್ನ ಪರವಾಗಿ ಮುಖ್ಯಸ್ಥರನ್ನು, ಮಾಮಲೇದಾರರನ್ನು ನಿಯಮಿಸಿದನು. ಅದೇ ಪ್ರಕಾರ ಅಹ್ಮದಬೇಗ ಎಂಬ ಹೆಸರಿನ ತನ್ನ ಸೋದರಳಿಯನನ್ನು ಸಾವಾ ಪ್ರದೇಶಕ್ಕೂ ಹಾಗೂ ಸಾವಾನಗರಕ್ಕೂ ಒಡೆಯನನ್ನಾಗಿ ನಿಯಮಿಸಿದನು. ಸಂಪೂರ್ಣ ಸಿದ್ಧತೆಗಳೊಂದಿಗೆಯೇ ಅಹ್ಮದಬೇಗನು ಆ ಪ್ರದೇಶಕ್ಕೆ ಬಂದು ಮುಟ್ಟಿದನು. ಸಂರಕ್ಷಣೆ, ನ್ಯಾಯಪಾಲನೆ ಹಾಗೂ ರೈತರ ಪಾಲನೆಯನ್ನು ಮಾಡುತ್ತ ಪ್ರದೇಶವನ್ನು ಅಭಿವೃದ್ಧಿ ಪಡಿಸಿದನು. 'ಸಾವಾ' ದಲ್ಲಿಯ ಶ್ರೇಷ್ಠ ಜನರ ಕುಲೀನ ಹೆಣ್ಣುಮಗಳೊಂದಿಗೆ ಆತನ ಮದುವೆಯಾಯಿತು. ಅವಳಿಗೆ ಮಕ್ಕಳು ಹುಟ್ಟಿದುವು. ಅನಂತರ ಒಂದು ದಿನ ಅಹ್ಮದಬೇಗನು ಸತ್ತನು. ಅವನ ಮಕ್ಕಳಲ್ಲಿಯ ಮೆಹಮೂದಬೇಗ ಎಂಬುವನು ಸಾವಾ ನಗರದಲ್ಲಿ ತಂದೆಯ ಸಿಂಹಾಸನವನ್ನು ಏರಿದನು. ಆತನೂ ಕೂಡ ತಂದೆಯಂತೆ ನ್ಯಾಯ ನಿಷ್ಠುರನಾಗಿ ಪ್ರಜೆಗಳ ಪಾಲನೆ ಮಾಡಿ ಕೀರ್ತಿಯನ್ನು ಸಂಪಾದಿಸಿದನು. ಇಪ್ಪತ್ತು ವರುಷಗಳವರೆಗೆ ಸಂಸಾರ ಮಾಡಿ ಜಗತ್ತಿನಲ್ಲಿ ಕೀರ್ತಿವಂತನಾಗಿ ಬಾಳಿದನು. ಕೊನೆಗೆ ಅವನ ರಾಜ್ಯದಲ್ಲಿ ಗದ್ದಲವಾಯಿತು. ಆಗ ಅಧಿಕಾರಿವರ್ಗ ಬದಲಾಯಿತು. ಕೆಟ್ಟದಾಗಿ ನಡೆದುಕೊಳ್ಳಹತ್ತಿದರು. ಈ ಕಾರಣದಿಂದಾಗಿ ಈಸ್ತೆಫರ್ ಮಿರ್ಜಾನ ಜೊತೆಗೆ ವೈರತ್ವವನ್ನು ಕಟ್ಟಿಕೊಳ್ಳಬೇಕಾಯಿತು. ಅದರಿಂದಾಗಿ ಸಾವಾ ನಗರದಲ್ಲಿ ನಡೆದ ಯುದ್ಧದಲ್ಲಿ ಮಹಮೂದ ಬೇಗನನ್ನು ಕೊಲ್ಲಲಾಯಿತು. ಮೆಹಮೂದಬೇಗನ ವಂಶಸ್ಥರಲ್ಲಿಯ ಪ್ರತಿಯೊಬ್ಬರೂ ಶತೃವಿನ ಭಯದಿಂದ ದೇಶಾಂತರ ಓಡಿಹೋದರು. ಯೂಸುಫ್ ಬೇಗನು ಮೆಹಮೂದ ಬೇಗನ ಜ್ಯೇಷ್ಠ ಪುತ್ರನಾಗಿದ್ದನು. ಬಾಲ್ಯದಲ್ಲಿಯೇ ಆತನು ಆಸ್ಫಹಾನ್ ನಗರದಲ್ಲಿ ಇರುತ್ತಿದ್ದನು. ಅಲ್ಲಿಯೂ ಶತ್ರುವಿನ ಭಯದಿಂದ ಇರಲಾರದೆ ಶಿರಾಜ ನಗರಕ್ಕೆ ಬಂದು ಅಲ್ಲಿ ಐದು ವರುಷ ಕಳೆದನು. ಅಲ್ಲಿಯೂ ಶತೃವಿನ ಭಯ ಅಥವಾ ಆತನ ದುರ್ದೈವ ಎನ್ನುವಂತೆ ನಿರುಪಾಯನಾಗಿ ಹಿಂದುಸ್ಥಾನಕ್ಕೆ ಹೋಗುವ ಸಂಕಲ್ಪ ಆತನ ಮನಸ್ಸಿನಲ್ಲಿ ಬಂದಿತು. ಅಲ್ಲಿಂದ ಲಾರ ನಗರಕ್ಕೆ ಬಂದನು. ಅಲ್ಲಿಯ ಮಸೀದಿಯೊಂದರಲ್ಲಿ ಉಳಿದುಕೊಂಡಿದ್ದಾಗ ಆತನಿಗೆ ಒಂದು ಕನಸು ಬಿದ್ದಿತು. ಕನಸಿನಲ್ಲಿ ತೇಜಸ್ವಿಯಾದ, ಪ್ರೌಢ ಸ್ವಭಾವದ ಒಬ್ಬ ವೃದ್ಧನು ಬಂದು ಎಷ್ಟೋ ಒಣಗಿದ ರೊಟ್ಟಿಗಳನ್ನು ಯೂಸುಫ್‌ನ ಕೈಯಲ್ಲಿ ಕೊಡುತ್ತ ಹೇಳಿದನು. 'ನೀನು ದಕ್ಷಿಣ ದೇಶಕ್ಕೆ ಹೋಗಬೇಕು. ಏಕೆಂದರೆ ನಿನ್ನ ರೊಟ್ಟಿ ಅಲ್ಲಿ ಬೆಂದಿದೆ' ಎಂದು ಹೇಳಿದಂತಾಯಿತು. ಎಚ್ಚರವಾದಾಗ ಆ ಕನಸನ್ನು ನೆನೆದು ಆನಂದ ಪಟ್ಟನು. ಅಲ್ಲಾನ ಸೂಚನೆಯಂತೆ ಹಾರೂನ ಬಂದರಕ್ಕೆ ಬಂದನು. ಅಲ್ಲಿಗೆ ಮುಟ್ಟುತ್ತಿದ್ದದಂತೆ, ಅಷ್ಟರಲ್ಲಿ ಖ್ವಾಜಾ ಜೈನುಲ್ ಅಬಿದೀನಖಾನ ಸೆಹ್‌ಮನಾನಿ ಎಂಬ ಹೆಸರಿನ ವ್ಯಾಪಾರಿಯೊಬ್ಬನು ಅನೇಕ ತರದ ಪದಾರ್ಥಗಳನ್ನು ಖರೀದಿಸಿದ್ದನು. ಅವುಗಳಲ್ಲಿ ವಾಯುವೇಗದ ಕುದುರೆಗಳು, ತುರ್ಕಿ ಮೂಲದ ಸೇವಕರು, ಪ್ರತಿಯೊಂದು ಪ್ರಕಾರದ ಚಿಲ್ಲರೆ ಪದಾರ್ಥಗಳು, ಹೆಚ್ಚು ಬೆಲೆಬಾಳುವ ಆಭರಣಗಳನ್ನು ಖರೀದಿಸಿ, ಅವುಗಳೊಂದಿಗೆ ಹಡಗಿನ ಮೂಲಕ ಹಿಂದುಸ್ಥಾನದತ್ತ ಹೋಗುವ ಪ್ರಯತ್ನದಲ್ಲಿದ್ದನು. ಆ ಸಮಯದಲ್ಲಿಯೇ ಖ್ವಾಜಾ ಜೈನುಲ್ ಅಬಿದೀನ ಹಾಗೂ ಯೂಸುಫ್‌ನ ಸಮಾಗಮವಾಯಿತು. ಕಟ್ಟುಮಸ್ತಾದ, ರೂಪವಂತ ಯೂಸುಫ್‌ನನ್ನು ಕಂಡು ಮಮತೆಯಿಂದ ತನ್ನೊಂದಿಗೆ ಹಡಗಿನಲ್ಲಿ ಕರೆದುಕೊಂಡು ಬಂದನು. ಹಡಗಿನಲ್ಲಿ ಬೀದರದ ಖಾನಸಾಲಾರ್‌ನ ಸ್ನೇಹವಾಗಿ ಅವನೊಂದಿಗೆ ಬೀದರಿಗೆ ಬಂದು ಕೆಲವು ದಿನ ಕಳೆದನು. ಈಗಲೂ ಕೂಡ ಯೂಸುಫ್‌ನಿಗೆ ಶತೃಗಳ ಪ್ರಾಣ ಘಾತುಕದ ಭಯ ಆವರಿಸಿತ್ತು. ಅವರನ್ನು ಸದೆಬಡೆಯುವ ಪ್ರಾತಃಕಾಲದ ಪ್ರಕಾಶದ ಪ್ರಸಿದ್ಧಿಗೆ ಇನ್ನೂ ಅವಕಾಶವಿತ್ತು. ಆದ್ದರಿಂದ ಬಂದದ್ದು ತಪ್ಪಾಯಿತೆಂದು ತಿಳಿದು ಪುನಃ

ಸ್ವದೇಶಕ್ಕೆ ಹೊರಟನು. ಮತ್ತೆ 'ಲಾರ' ಪಟ್ಟಣಕ್ಕೆ ಬಂದು ಮುಟ್ಟಿದನು.[೧೫] ಮತ್ತೆ ಮೊದಲಿನ ಮಸೀದಿಯಲ್ಲಿಯೇ ಉಳಿದುಕೊಂಡನು. ಆಗ ಪುನಃ ಮೊದಲಿನಂತೆ ಸ್ವಪ್ನ ಬಿದ್ದಿತು. 'ನಿನ್ನನ್ನು ದಕ್ಷಿಣ ದೇಶಕ್ಕೆ ಕಳುಹಿಸಿದಾಗಲೂ ನೀನು ತಿರುಗಿ ಬರುವ ಅವಸರದ ಕಾರಣವಾದರೂ ಏನು? ಮತ್ತೆ ನೀನು ಅಲ್ಲಿಗೆ ಹೋಗು, ಏಕೆಂದರೆ ನಿನ್ನ ದೀಪ ಉಜ್ವಲವಾಗಿ ಬೆಳಗುವುದು ಅಲ್ಲಿಯೇ' ಎಂದು ಆ ಪುರುಷನು ಹೇಳಿದಂತಾಯಿತು. ಹೀಗೆ ದೈವವು ಮತ್ತೆ ಅವನನ್ನು ದಕ್ಷಿಣಕ್ಕೆ ಕಳುಹಿಸಿತು. ಆತನು ಅದೇ ಮೊದಲಿನ ಸ್ಥಳಕ್ಕೆ ಬಂದು, ಸ್ನೇಹಿತನಾಗಿದ್ದ ಖಾನಸಾಲಾರ್‌ನ ಮನೆಯಲ್ಲಿಯೇ ಉಳಿದುಕೊಂಡನು. ಸಿಪಾಯಿಯಾಗಿ ಕೆಲಸಕ್ಕೆ ಸೇರಿದನು. ಬಿಲ್ಲುವಿದ್ಯೆ, ಈಟಿ, ಕತ್ತಿವರಸೆಗಳ ಅಭ್ಯಾಸದೊಂದಿಗೆ ಕುಸ್ತಿ ವಿದ್ಯೆಯನ್ನು ಕಲಿಯ ಹತ್ತಿದನು. ಅಭ್ಯಾಸದ ವಿಷಯದಲ್ಲಿ ಅವನೆಂದಿಗೂ ಆಲಸಿಯಾಗಿರಲಿಲ್ಲ. ಅಲ್ಲಿಯ ಗರಡೀ ಮನೆಯೊಂದರಲ್ಲಿ ಪೈಲವಾನನಿಂದ ಕುಸ್ತಿಯ ಆಟದ ಕಲೆಯನ್ನು ಕರಗತ ಮಾಡಿಕೊಂಡನು. ಕೆಲವೇ ದಿನಗಳಲ್ಲಿ ಕುಸ್ತಿ ಕಲೆಯಲ್ಲಿ ಮಾನ್ಯತೆ ಪಡೆದನು.[೧೬]

ಮುಂದೆ ಕುಸ್ತಿಯಲ್ಲಿರುವ ಅವನ ಪಟುತ್ವಕ್ಕೆ ಸರಿಯಾದ ತರಬೇತಿಯನ್ನು ಪಡೆಯತೊಡಗಿದ. ಕುಸ್ತಿಯ ಅಖಾಡದಲ್ಲಿ ಅಲ್ಲಿನ ಪಟುಗಳನ್ನು ಸೋಲಿಸಿ ಜಯಗಳಿಸತೊಡಗಿದ. ಭಾರತಕ್ಕೆ ಆಗಮಿಸಿದ್ದ ಖೊರಸಾನಿನ ಕುಸ್ತಿ ಪಟುಗಳು ಅವನಿಗೆ ತರಬೇತಿ ನೀಡುವಂತಹ ಅಪೂರ್ವ ಅವಕಾಶವನ್ನು ಪಡೆದ. ಈ ಪ್ರಸಿದ್ಧಿಯ ಜೊತೆಯಲ್ಲಿ ಅವನಿಗೆ ಸಾಕಷ್ಟು ಶಿಷ್ಯಂದಿರು ಬಂದು ಸೇರ ತೊಡಗಿದರು. ಶಿಷ್ಯಂದಿರಿಗೆ ತರಬೇತಿ ಮತ್ತು ಚಿಕ್ಕಪುಟ್ಟ ಕುಸ್ತಿಯ ಏರ್ಪಾಡು ಮಾಡಿ ಇವನ ವಿರುದ್ಧ ಸೆಣಸಾಡಲು ಪಣತೊಡುತ್ತಿದ್ದರು. ಹೀಗೆ ಕುಸ್ತಿಯಲ್ಲಿ ಒಂದು ಪ್ರಮುಖ ಸ್ಥಾನ ಪಡೆದು ಜನಪ್ರಿಯನಾದ. ತನ್ನ ಕುಸ್ತಿಪಟುತ್ವದಲ್ಲಿ ಬಹದ್ದೂರನೆನಸಿ ಅತ್ಯುನ್ನತ ಪದವಿಯನ್ನು ಪಡೆದ.[೧೭] ಆ ಕಾಲದಲ್ಲಿ ದೆಹಲಿಯ ಓರ್ವ ಅತ್ಯಂತ ಬಲಶಾಲಿಯೆನಿಸಿದ ಕುಸ್ತಿಯ ಹೆಸರಾಂತ ಪಹಿಲ್ವಾನ ಅಲ್ಲಿಗೆ ಆಗಮಿಸಿದ್ದ. ಈತ ಭಾರತದ ಅನೇಕ ಕಡೆಗಳಲ್ಲಿ ನಡೆದ ಕುಸ್ತಿಯ ಅಖಾಡದಲ್ಲಿ ತನ್ನ ಪಟುತ್ವ ಪ್ರದರ್ಶಿಸಿ ಅನೇಕ ಪ್ರಖ್ಯಾತ ಪಹಿಲ್ವಾನರನ್ನು ಸೋಲಿಸಿದ್ದ. ಅವನಿಗೆ ಪ್ರೋತ್ಸಾಹ ನೀಡುವ ಬಹುಸಂಖ್ಯೆಯ ಶಿಷ್ಯಂದಿರು ಅವನ ಹಿಂದೆ ಇರುತ್ತಿದ್ದರು. ಅವನು ತನ್ನ ಶಿಷ್ಯರ ತಂಡದೊಂದಿಗೆ ಗುಜರಾತಿನ ಕಡೆಯಲ್ಲಿ ಸಂಚರಿಸಿದ್ದ. ಹೋದಲ್ಲೆಲ್ಲ ಅವನನ್ನು ಸೋಲಿಸುವವರು ಯಾರೂ ಇರಲಿಲ್ಲ. ಅವನು ಬೀದರಗೆ ಆಗಮಿಸುವ ವರ್ತಮಾನ ಸುಲ್ತಾನ್ ಮಹಮೂದನ ದರ್ಬಾರಿಗೆ ತಲುಪಿದಾಗ ಕುಸ್ತಿ ಪಟುತ್ವದ ಪ್ರದರ್ಶನ ಪ್ರತಿ ಶುಕ್ರವಾರದ ದಿನ ಏರ್ಪಾಡು ನಡೆಯಿತು. ಈ ಪ್ರದರ್ಶನದಲ್ಲಿ ತನ್ನ ರಾಜ್ಯದ ಪಹಿಲ್ವಾನರ ಶಕ್ತಿ ಪರೀಕ್ಷೆಯಲ್ಲಿ ಸ್ವತಃ ಸುಲ್ತಾನನು ತನ್ನ ಆಸ್ಥಾನದ ಪ್ರಮುಖರ ಜೊತೆ ಆಗಮಿಸಿ ಆಯ್ಕೆಯನ್ನು ವೀಕ್ಷಿಸುತ್ತಿದ್ದ. ದೆಹಲಿಯ ಪಹಿಲ್ವಾನ ರಾಜ್ಯದ ಕುಸ್ತಿಪಟುಗಳ ಕಪಾಳಮೋಕ್ಷ ಮಾಡಿ ಅಖಾಡದಲ್ಲಿ ಕೆಟ್ಟದಾಗಿ ಬಯ್ಯತೊಡಗಿ ತನ್ನ ಅಹಂಕಾರವನ್ನು ಪ್ರದರ್ಶಿಸಿದ. ಸುಲ್ತಾನನಿಗೆ ಇದು ಇಷ್ಟವಾಗಲಿಲ್ಲ. ಯೂಸುಫ್ ಬೇಗ್ ತನ್ನ ಶಿಷ್ಯರೊಂದಿಗೆ ಆಗಾಗ ಅಖಾಡಾದ ಸನಿಹದಲ್ಲಿ ಸಿಪಾಯಿಗಳ ಸಮವಸ್ತ್ರ ಧರಿಸಿಕೊಂಡು ಪ್ರೇಕ್ಷಕರೊಂದಿಗೆ ಕುಳಿತು ನೋಡುತ್ತಿದ್ದ. ದೆಹಲಿಯ ಪಹಿಲ್ವಾನ ಅಖಾಡದಲ್ಲಿ ಎದುರಾಳಿಗಳಿಗೆ ಬಯ್ಯುತ್ತ ಇತರ ಕುಸ್ತಿ ಪಟುಗಳಿಗೆ ಅವಮಾನ ಮಾಡುತ್ತಿರುವುದು, ಅಹಂಕಾರ ಪ್ರದರ್ಶಿಸುತ್ತಿರುವುದು ಮತ್ತು ಇದರಿಂದ ಸುಲ್ತಾನ ಬೇಸತ್ತುಕೊಂಡದ್ದನ್ನು ಗಮನಿಸುತ್ತಿದ್ದ. ಒಂದು ದಿನ ಸಾಲಾರ (ಮುಖ್ಯ ಸರದಾರ)ನೊಂದಿಗೆ ಯೂಸುಫ್ ಬೇಗ್ 'ಸುಲ್ತಾನರ ಮುಂದೆ ಈ ಪಹಿಲ್ವಾನನ ಅಹಂಕಾರ ಪ್ರದರ್ಶನ ಮತ್ತು ದುರ್ವರ್ತನೆ ತೋರುತ್ತಿರುವುದು ನನಗೆ ಸಹಿಸಲಾಗುತ್ತಿಲ್ಲ. ನನಗೆ ಅವಕಾಶ ಸಿಕ್ಕಲ್ಲಿ ಅವನನ್ನು ಎದುರಿಸುವುದಕ್ಕೆ ಕುಸ್ತಿಯ ಅಖಾಡ ಪ್ರವೇಶಿಸಲು ತಯಾರಾಗಿದ್ದೇನೆ' ಎಂದು ಹೇಳಿದ. ಈ ಮಾತನ್ನು ಸರದಾರ ಸುಲ್ತಾನನಿಗೆ ಮುಟ್ಟಿಸಿದ. ಇದರಿಂದ ಸುಲ್ತಾನ ಸಂತಸಪಟ್ಟುಕೊಂಡು ಮುಂದಿನ ಕುಸ್ತಿ ಪ್ರದರ್ಶನದ ದಿನ ಹಾಜರಾಗುವಂತೆ ಯೂಸುಫ್ ಬೇಗನಿಗೆ ಅನುಮತಿ ನೀಡಲಾಯಿತು. ಶುಕ್ರವಾರದ ದಿನ ತನ್ನ ದರ್ಬಾರಿನ ಮಂತ್ರಿಗಳ ಜೊತೆಗೆ ಸುಲ್ತಾನನು ಆಗಮಿಸಿದ. ಸಾರ್ವಜನಿಕರು ಕೂಡ ಈ ತಮಾಷೆಯನ್ನು ನೋಡಲು ಎಂದಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಸೇರಿದರು. ದೆಹಲಿಯ ಹೆಸರಾಂತ ಪಹಿಲ್ವಾನ ಅಖಾಡಾದೊಳಗೆ ಅದ್ದೂರಿಯ ಜಯಕಾರದೊಂದಿಗೆ ಪ್ರವೇಶಿಸಿದ. ಯೂಸುಫ್ ಬೇಗನ ಪ್ರವೇಶದೊಂದಿಗೆ ಕುಸ್ತಿ ಶುರುವಾಯಿತು.[೧೮]

'ದೆಹಲಿಯ ಪಹಿಲ್ವಾನ ತನ್ನನ್ನು ತಾನು 'ರುಸ್ತುಂ ಇಸ್ಪಂದರಿಯಾರ್' ಎಂದು ತಿಳಿದುಕೊಂಡಿದ್ದ. ಅಂದು ದೆಹಲಿಯ ಪಹಿಲ್ವಾನ ಹೊಸತೊಂದು ಕರಾರು ಹಾಕಿದ. 'ನನ್ನೊಂದಿಗೆ ಕುಸ್ತಿಮಾಡುವ ಮೊದಲು ನನ್ನ ಶಿಷ್ಯಂದಿರಲ್ಲಿ ಕೆಲವರನ್ನು ಅಖಾಡಕ್ಕಿಳಿಸುತ್ತೇನೆ ಅವರನ್ನು ಸೋಲಿಸಬೇಕು. ಅವರನ್ನು ಸೋಲಿಸಿದರೆ ಮುಂದಿನ ಶುಕ್ರವಾರ ನಾನು ನಿನ್ನೊಂದಿಗೆ ಕುಸ್ತಿ ಮಾಡಲು ಅಖಾಡಕ್ಕೆ ಇಳಿಯುತ್ತೇನೆ' ಎಂದು ಸವಾಲೆಸೆದ. ಇದಕ್ಕೆ ಯೂಸುಫ್‌ನೂ ಒಪ್ಪಿಕೊಂಡ. ಯೂಸುಫ್ ತನ್ನ ಚಾಕಚಕ್ಯತೆಯ ಆಟದಿಂದ ಶಿಷ್ಯಂದಿರನ್ನು ಸೋಲಿಸಲು ಹೆಚ್ಚು ಸಮಯ ತಾಗಲಿಲ್ಲ. ಅವನು ಬಳಸಿದಂತಹ 'ಪಹಿಲ್ವಾನಿ ದಾವ್' ಪಟುತ್ವ ಆಕರ್ಷಕವಾಗಿದ್ದು ನೋಡುವ ಪ್ರೇಕ್ಷಕರಿಗೆ ಹೊಸ ಅನುಭವವಾಗಿ ರೋಮಾಂಚನಗೊಂಡು 'ಯೂಸುಫ್ ಜಿಂದಾಬಾದ್' ಎಂಬ ಘೋಷಣೆಯನ್ನು ಕೂಗತೊಡಗಿದರು.[೧೯] ನಿಗದಿತ ದಿನದಂದು ಯೂಸುಫ್ ಮತ್ತು ದೆಹಲಿ ಪಹಿಲ್ವಾನನ ಮಧ್ಯೆ ಕುಸ್ತಿ ನಡೆಯಿತು. ಮೊದಲನೆಯ ಸುತ್ತಿನಲ್ಲೇ ಯೂಸುಫ್ ದೆಹಲಿ ಪಹಿಲ್ವಾನನ್ನು ಎಷ್ಟು ಜೋರಾಗಿ ನೆಲಕ್ಕೆ ಅಪ್ಪಳಿಸಿದನೆಂದರೆ ಅವನು ಜೋರಾಗಿ 'ಓ.. ದೇವರೇ!' ಎಂದು ಕೂಗಿಬಿಟ್ಟ ನೆಲದಿಂದ ಎಬ್ಬಿಸಿ ಸುಲ್ತಾನ ಕುಳಿತು ಕೊಂಡಲ್ಲಿಗೆ ತಂದು ಅವರ ಸಮ್ಮುಖದಲ್ಲಿ ಮತ್ತೆ ಅವನನ್ನು ಎತ್ತಿ ನೆಲಕ್ಕೆ ಕುಕ್ಕಿದ. ಈಗ ಅವನು ನೆಲದಿಂದ ಏಳಲಾರದೆ ಅಲ್ಲೇ ಬಿದ್ದುಕೊಂಡ. ಸುಲ್ತಾನ್ ಈ ದೃಶ್ಯವನ್ನು ಕಂಡು ಹರ್ಷೋಲ್ಲಾಸದಿಂದ ಕುಳಿತಲ್ಲಿಂದ ಎದ್ದು ಕುಣಿದಾಡಿದ. ಅಲ್ಲಿ ಸೇರಿದ ಪ್ರೇಕ್ಷಕ ಗಣವೂ ಕೂಡ ಸಂತಸದಿಂದ ಹುಚ್ಚೆದ್ದು ಕುಣಿಯತೊಡಗಿತು. ಸುಲ್ತಾನ, ಯೂಸುಫ್‌ಗೆ ಉತ್ತಮ ತಳಿಯ ಕುದುರೆಗಳು, ಒಂದು ವಿಶೇಷ ಉಡುಪು, ಒಂದು ಸಾವಿರ ದಿರ್ಹಮ್ ಉಡುಗೊರೆಯನ್ನು ನೀಡಿದ. ಸುಲ್ತಾನ ಯೂಸುಫ್‌ನ ಜೊತೆಗಾರರಿಗೂ ಬಟ್ಟೆ, ಕುದುರೆಗಳು, ಹಣ ಮುಂತಾದ ಉಡುಗೊರೆಗಳನ್ನು ಭಕ್ಷೀಸು ನೀಡಿ ಖುಷಿಪಡಿಸಿದ. ಅಲ್ಲಿ ನೆರೆದ ಜನಸಮೂಹ ಸಮ್ಮುಖದಲ್ಲಿ ಯೂಸುಫ್‌ನನ್ನು ತನ್ನ ಆಸ್ಥಾನದಲ್ಲಿ ಸ್ಥಾನ ನೀಡಿ ಗೌರವಿಸುವುದಾಗಿ ಘೋಷಿಸಿದ. ಯೂಸುಫ್ ಬೇಗನನ್ನು ತನ್ನ ಹತ್ತಿರ ಸಿಂಹಾಸನದ ಬಳಿ ಸುಸಜ್ಜಿತ ದಂಡವನ್ನು ಹಿಡಿದು ನಿಲ್ಲುವ ಅಂಗರಕ್ಷಕನನ್ನಾಗಿ ಸುಲ್ತಾನ ನೇಮಿಸಿದ. ಮುಂದೆ ನಗರದ ಬಂದೂಬಸ್ತ, ಮಾರುಕಟ್ಟೆಯ ಕಾವಲು ಮತ್ತು ನಗರದ ಶಿಸ್ತನ್ನು ಕಾಪಾಡುವ ಕೆಲಸದಲ್ಲಿ ಯೂಸುಫ್ ಮಗ್ನನಾದ. ಇವೆಲ್ಲದರೊಂದಿಗೆ ಒಂದೊಂದೇ ಹೆಜ್ಜೆಯಲ್ಲಿ ಪದವಿಗಳನ್ನು ಪಡೆಯತೊಡಗಿ, ಎಷ್ಟು ಎತ್ತರದ ಗೌರವದ ಸ್ಥಾನ ಗಳಿಸಿದನೆಂದರೆ ದರ್ಬಾರಿನ ಪ್ರಮುಖರು ಕೆಲವರು ಅಸೂಯೆಪಡತೊಡಗಿದರು. ಆದರೆ ಸುಲ್ತಾನ ಇವನ್ನೆಲ್ಲ ಲೆಕ್ಕಿಸದೆ ದಿನೇ ದಿನೇ ಅವನು ಒಂದೊಂದೇ ಉತ್ತಮ ಕೆಲಸ ಮಾಡಿದಂತೆ ಪದವಿಯ ಮೆಟ್ಟಿಲುಗಳಲ್ಲಿ ಏರಿಸುತ್ತ ಬಡ್ತಿ ನೀಡತೊಡಗಿದ.[೨೦]

ಗುಲದಸ್ತಾಯೆ ಬಿಜಾಪುರ ಮತ್ತು ತಾರೀಖೆ ಹಪ್ತಕುರ್ಸಿ ಕೃತಿಯು ಉಲ್ಲೇಖಿಸುವಂತೆ ಯೂಸುಫ್‌ನು ಕುಸ್ತಿಯಲ್ಲಿ ಜಯಗಳಿಸಿದ ಮೇಲೆ ಸುಲ್ತಾನನು ಈತನನ್ನು ಸತ್ಕರಿಸಿದನಲ್ಲದೆ ಗೋಗಿ ಮತ್ತು ಸುತ್ತಲಿನ ಐದು ಹಳ್ಳಿಗಳ ಇನಾಮನ್ನು ಹಾಕಿ ಕೊಟ್ಟನು. ಮತ್ತು ಆತನನ್ನು ತನ್ನ ಖಾಸಾ ಸುರಕ್ಷಾ ಬಲದಲ್ಲಿ ಸೇರಿಸಿಕೊಂಡನು ಎಂದು ಉಲ್ಲೇಖಿಸುತ್ತದೆ.[೨೧] ಕೆಲವು ದಿನಗಳ ನಂತರ ಯೂಸುಫ್‌ನು ನಗರದ ಕೊತ್ವಾಲನಾಗಿ ಬಡ್ತಿಯನ್ನು ಪಡೆದನು. ಅನಂತರ ಹವಾಲದಾರನಾದನು. ಈ ದಿನಗಳಲ್ಲಿಯೇ ತೆಲಂಗಾಣದಲ್ಲಿ ದಂಗೆ ಎದ್ದಿತು. ಅದನ್ನು ಹತ್ತಿಕ್ಕಲು ಸುಲ್ತಾನನು ಯೂಸುಫ್‌ನನ್ನು ಕರೆದು ಅವನಿಗೆ 'ಮಲೆಕುಲಷರ್ಕ'[೨೨] ಅಥವಾ 'ಮಲಿಕ್ಕುಶರ್ಕ' (ಪೂರ್ವದ ಅಧಿಪತಿ)[೨೩] ಮತ್ತು 'ಮಜಲಿಸ್ ರಫಿಯಾ'[೨೪] ಎಂಬ ಬಿರುದುಗಳನ್ನು ನೀಡಿ ಸೈನ್ಯದೊಂದಿಗೆ ತೆಲಗು ದೇಶಕ್ಕೆ ಕಳುಹಿಸಿದನು.[೨೫] ಯೂಸುಫ್‌ನು ಅಲ್ಲಿ ಹೋಗಿ ಎಲ್ಲ ಬಂಡುಖೋರರನ್ನು ಹತ್ತಿಕ್ಕಿ, ಅವರನ್ನು ಬಂಧಿಸಿ ಶಿಕ್ಷೆ ಕೊಟ್ಟು ಅಲ್ಲಿ ಶಾಂತಿಯನ್ನು ಸ್ಥಾಪಿಸಿದನು. ಬಾದಶಹನಿಗೆ ಸುದ್ದಿಯನ್ನು ತಿಳಿಸುತ್ತ ಅನೇಕ ಬಗೆಯ ಕಾಣಿಕೆಗಳನ್ನು ಕಳುಹಿಸಿದನು. ಮತ್ತು ಯೂಸುಫ್‌ನು ಅಲ್ಲಿಯೇ ಕೆಲವು ದಿನ ಉಳಿದುಕೊಂಡನು.[೨೬] ಈ ವೇಳೆಗೆ ಬಹಮನಿ ಸುಲ್ತಾನನಿಗೆ ಯೂಸುಫ್‌ನು ಹೋಗಿ ಬಹಳ ದಿನಗಳಾದವು. ಆತನಿಂದ ಯಾವ ಸುದ್ಧಿಯೂ ಬರಲಿಲ್ಲ ಎಂದು ವಿಚಾರಿಸಿದನು. ವಾಸ್ತವದಲ್ಲಿ ಕಾಲಕಾಲಕ್ಕೆ ಅಲ್ಲಿಯ ವರ್ತಮಾನವನ್ನು ಸರಕಾರಕ್ಕೆ ಕಳುಹಿಸುತ್ತಲೇ ಇದ್ದನು. ಆದರೆ ಎಲ್ಲ ಕಪಟ ಹಾಗೂ ಸ್ವಾರ್ಥ ಅಧಿಕಾರಿ ವರ್ಗವು ಈ ಪತ್ರಗಳು ತಮ್ಮ

ಇಚ್ಚೆಗೆ ಬಾಧಕವೆಂದು ತಿಳಿದು ಆ ಪತ್ರಗಳನ್ನು ಮುಚ್ಚಿ ಇಡುತ್ತಿದ್ದರು. ಮತ್ತು ಬಾದಶಹನಿಗೆ ಹೇಳುತ್ತಲೇ ಇರಲಿಲ್ಲ. ಈಗ ಬಾದಶಹನೆ ಕೇಳಿದಾಗ ಅಧಿಕಾರಿಗಳು ಬೇರೊಂದೇ ಕಥೆಯನ್ನು ಕಟ್ಟಿ 'ಯೂಸುಫ್‌ನು ತಾನು ಗೆದ್ದ ಪ್ರದೇಶಕ್ಕೆ ತಾನೇ ಒಡೆಯನೆಂಬುದಾಗಿ ಹೇಳಿ ಕಳುಹಿಸಿದ್ದಾನೆ' ಎಂದರು ಅದಕ್ಕೆ (ಯೂಸುಫ್‌ನ ಗುರು) ಹುಸೇನ ಆಕಾ ಅವರಿಗೆಲ್ಲ ಉತ್ತರಿಸುತ್ತ 'ಯೂಸುಫ್‌ನು ಉಪ್ಪು ತಿಂದವರಿಗೆ ಎರಡು ಬಗೆಯುವವನಲ್ಲ ಬಾದಶಹರ ಕೆಲಸದಲ್ಲಿ ಆಸೆಯನ್ನು ಪಡುವವನಲ್ಲ. ಆದಾಗ್ಯೂ ಇದರಲ್ಲಿ ಏನಾದರೂ ಒಂದು ಕಾರಣವಿರಬೇಕು. ಆದ್ದರಿಂದಲೇ ಅವನು ಅಲ್ಲಿ ಇಷ್ಟು ದಿನ ಇರಲು ಕಾರಣವಾಗಿರಬೇಕು ಎಂದು ಹೇಳಿದರು. ಅನಂತರ ಹುಸೇನ ಆಕಾನು ಈ ವಿಷಯವನ್ನು ವಿಚಾರಿಸಿ, ಯೂಸುಫ್‌ನನ್ನು ಕರೆತರಲು ಬಾರಿ–ಆಕಾನನ್ನು ಕಳುಹಿಸಿದನು. ಬಾರಿ–ಆಕಾ ಹೋಗಿ ಬಹಳ ದಿನಗಳವರೆಗೆ ತಿರುಗಿ ಬರಲಿಲ್ಲ. ಆಗ ಮತ್ತೆ ಕಪಟ ಜನರು ದರಬಾರದಲ್ಲಿ ಕೂಗಾಡುತ್ತ 'ಇಬ್ಬರೂ ವಿಶ್ವಾಸ ಘಾತುಕರಾಗಿದ್ದಾರೆ ಉಭಯತರೂ ಒಡೆತನದ ಸಂಕಲ್ಪ ಮಾಡಿದ್ದಾರೆ. ಏಕೆಂದರೆ ಇಬ್ಬರಲ್ಲಿ ಒಬ್ಬನೂ ತಿರುಗಿ ಬರಲಿಲ್ಲ ಎಂದರು. ಆಗ ಬಾದಶಹನು ಹುಸೇನ ಆಕಾನಿಗೆ ಆಜ್ಞೆ ನೀಡಿ 'ತಕ್ಷಣ ಯೂಸುಫ್‌ನನ್ನು ತಂದು ನನ್ನ ಮುಂದೆ ಹಾಜರು ಪಡಿಸಿ' ಎಂದರು. ಅದರಂತೆ ಹುಸೇನ ಆಕಾನು ಸ್ವತಃ ತಾನೇ ಅಲ್ಲಿಗೆ ಹೋದನು. ಬಾರೀ–ಆಕಾನನ್ನು ಅಲ್ಲಿಯ ಬಂದೋಬಸ್ತಿಗಾಗಿ ನಿಲ್ಲಿಸಿ ಯೂಸುಫ್‌ನೊಂದಿಗೆ ಅನೇಕ ತರದ ಉತ್ತಮ ಪದಾರ್ಥಗಳನ್ನು ರಾಜನ ಖುಷಿಗಾಗಿ ಕಾಣಿಕೆಯೆಂದು ತೆಗೆದುಕೊಂಡು ತಿರುಗಿ ಬಂದನು.[೨೭] ಯೂಸುಫ್‌ನು ರಾಜಧಾನಿ ಬೀದರಿಗೆ ಬಂದಾಗ ಆತನನ್ನು ಬಾದಶಹನು ಅವನ ಗುರುವಾದ ಹುಸೇನ ಆಕಾನ ಜೊತೆಗೆ ನಗರದ ಹೊರಗೆ ಶಾಹ ನೇಮತುಲ್ಲಾ ದರ್ಗಾದ ವರೆಗೆ ಬಂದು ತನ್ನ ಕುದುರೆಯಿಂದ ಇಳಿದು ಯೂಸುಫ್‌ನನ್ನು ಆಲಂಗಿಸಿಕೊಂಡು ಸ್ವಾಗತಿಸಿದನು. ಅವನ ಉತ್ತಮ ಸೇವೆಗಾಗಿ ಸುಲ್ತಾನನು ಯೂಸುಫ್‌ಗೆ ಬಾದಶಾಹಿ ಅಧಿಕಾರದ ಹೊಸ ಹುದ್ದೆಯನ್ನು ನೀಡುತ್ತ ಅನೇಕ ಬಕ್ಷೀಸುಗಳನ್ನು– ಇನಾಮುಗಳನ್ನು ನೀಡಿದನು. ಕನಕರ್ತಿ, ಕಲ್ಯಾಣದಿಂದ ಹಿಡಿದು ಮಂಜಾನ (ಮಜ್ಯಾನ[೨೮]) ಗೋವಾ (ಕೋವಾ[೨೯]), ಕುಂಚಿ(ಕಚೀ[೩೦]), ಕಾಳಹಸ್ತಿ (ಕಾಲಸ್ತರಿ[೩೧])ಮೊದಲಾದ ಪ್ರದೇಶಗಳನ್ನು ಅವನ ವಶಕ್ಕೆ ಕೊಟ್ಟನು ಮತ್ತು ಹಳೆಯ ರಾಜಧಾನಿಯಾದ ಮಂಗಳವೇಡೆಯನ್ನು ಅವನಿಗೆ ಜಹಗೀರು ಹಾಕಿ ಕೊಟ್ಟನು.[೩೨] ಮತ್ತು ಆತನನ್ನು ಈ ಪ್ರದೇಶಗಳ ಕಡೆಗೆ ಕಳುಹಿಸಿದನು. ಈ ಪ್ರದೇಶಗಳಲ್ಲಿಯೇ ಬೆಂಜನಹಳ್ಳಿ ಎಂಬ ಒಂದು ಗ್ರಾಮವಿತ್ತು. ಅದು ರಾಜಧಾನಿಯನ್ನಾಗಿ ಮಾಡಲು ಯೋಗ್ಯವಾಗಿತ್ತು. ಆದ್ದರಿಂದ ಯೂಸುಫ್‌ನು ಅಲ್ಲಿಯೇ ಇದ್ದು ಅದರ ಸುತ್ತಮುತ್ತ ಕೋಟೆಯನ್ನು ಕಟ್ಟಿಸಿ ಅದರ ಹೆಸರನ್ನು 'ಬಿಜಾಪುರ' ಎಂದು ಇಟ್ಟನು. ಈ ಘಟನೆ ನಡೆದದ್ದು ಹಿಜರಿ ಶಕ ೯೧೯. ಅನಂತರ ಇಲ್ಲಿ ಖ್ವಾಜಾ ಜಹಾನನ್ನು ಮುಖ್ಯಸ್ಥನನ್ನಾಗಿ ನಿಯುಕ್ತಿ ಗೋಳಿಸಿ ಇಲ್ಲಿಯೆ ಇಟ್ಟನು.[೩೩] ಹೀಗಾಗಿ ಯೂಸುಫ್‌ನ ತಾರಾಬಲವು ದಿನದಿಂದ ದಿನಕ್ಕೆ ಬೆಳೆಯುತ್ತ ಹೋಯಿತು. ಬಹಮನಿ ರಾಜ್ಯದಲ್ಲಿಯೇ ಶ್ರೇಷ್ಠ ಅಮೀರನಾದನು.[೩೪]

ಹೀಗೆ ಯೂಸುಫ್‌ನು ಸುಲ್ತಾನ ಮಹಮ್ಮದ ಬಹಮನಿಯ ಸೇವೆಯಲ್ಲಿ ಸೇರಿಕೊಂಡನು ಮತ್ತು ಹಂತ ಹಂತವಾಗಿ ತನ್ನ ಯೋಗ್ಯತೆಯಿಂದ ಭಗವಂತನ ಕೃಪೆಯಿಂದ ಉನ್ನತಿಯನ್ನು ಸಾಧಿಸಿದನು. ಮಹಮೂದ ಗವಾನನು ತನ್ನ ಮಗನಿಗಿಂತ ಅಧಿಕ ಪ್ರೀತಿಯನ್ನು ಯೂಸುಫ್‌ನಿಗೆ ತೋರಿಸುತ್ತಿದ್ದನು. ತನ್ನ ದೈವ ಬಲದಿಂದ ಮತ್ತು ಹುಟ್ಟಿನಿಂದಲೇ ಜಾಣನಾದುದರಿಂದ ತನ್ನ ಸ್ಥಾನದಲ್ಲಿ ದಿನದಿಂದ ದಿನಕ್ಕೆ ಪ್ರವರ್ಧಮಾನನಾದನು. ಕಾಲ–ಕಾಲಕ್ಕೆ ಶ್ರೇಷ್ಠ ಸ್ಥಾನಗಳನ್ನು ಪಡೆಯುತ್ತ ಹೋದನು ಕೆಲವೇ ದಿನಗಳಲ್ಲಿ ಸುಲ್ತಾನ ಮಹಮ್ಮದ್‌ನ ಸೈನ್ಯದಲ್ಲಿ ಪ್ರಮುಖ ಹುದ್ದೆಯನ್ನು ಪಡೆದನು. ಮೊದಲು ಯೂಸುಫ್ ಆದಿಲ್‌ಖಾನನೆಂದು, ಅನಂತರ 'ಮಜ್ಲಿಸೆರಫಿಯಾ' ಎಂದು, ಮೂರನೆಯದಾಗಿ 'ಮಲೆಕುಲ್–ಷರ್ಕ್' (ಪೂರ್ವದ ಅಧಿಪತಿ) ಎಂಬ ಬಿರುದುಗಳನ್ನು ಪಡೆದನು. ಕೊನೆಗೆ ಬಿಜಾಪುರದಲ್ಲಿ ಹಿಜರಿ ಶಕ ೮೧೭ರಲ್ಲಿ (ಕ್ರಿ.ಶ. ೧೪೯೧) ರಲ್ಲಿ ತನ್ನದೇ ಆದ ರಾಜ್ಯವನ್ನು ಸ್ಥಾಪಿಸಿದನು.[೩೫]

ಮಹಮ್ಮದ ಕಾಶೀಮ ಫೇರಿಶ್ತಾನು ಸಹ ಯೂಸುಫ್‌ನ ಏಳಿಗೆಯನ್ನು ಕುರಿತು ಮೇಲಿನ ಹಾಗೆ ಪ್ರಸ್ತಾಪಿಸುತ್ತನಾದರೂ ಕೂಡ ಅಲ್ಪ ಭಿನ್ನತೆಯನ್ನು ಕಾಣಬಹುದು. ಕಾಶೀಮ ಫೇರಿಶ್ತಾ ಹೇಳುವಂತೆ ಹುಮಾಯೂನ ಅವಧಿಯಲ್ಲಿಯೇ ಮಹಮ್ಮದ ಗವಾನ ತನ್ನ ಮಗನನ್ನಾಗಿ ಸ್ವೀಕರಿಸಿದ್ದ ಯೂಸುಫ್ ಆದಿಲ್ ಸವಾಯಿಯನ್ನು ದೌಲತಾಬಾದ್‌ನ ದಂಡನಾಯಕನನ್ನಾಗಿ ನೇಮಕ ಮಾಡಲಾಯಿತು. (ಹುಮಾಯೂನ್‌ನ ಅವಧಿಯಲ್ಲಿ ಮಹಮ್ಮದ್ ಗವಾನನು ಸಾಮ್ರಾಜ್ಯವನ್ನು ಎಂಟು ವಿಭಾಗಗಳಾಗಿ ವಿಂಗಡಿಸಿದ. ಈ ಮೊದಲು ಹಸನ್‌ಗಂಗೂ ಬಹಮನ್‌ಶಹಾನ ಅವಧಿಯಲ್ಲಿ ನಾಲ್ಕು ವಿಭಾಗಗಳನ್ನಾಗಿ ವಿಭಾಗಿಸಿತ್ತು. ಆ ಎಂಟು ವಿಭಾಗಗಳಲ್ಲಿ ಸೇನೆಯ ಒಬ್ಬ ಸರದಾರನನ್ನು ಒಂದೊಂದು ವಿಭಾಗದಲ್ಲಿ ನೇಮಕ ಮಾಡಿದ ಅವನನ್ನು ದಖನಿಯರ ಪರಿಭಾಷೆಯಲ್ಲಿ 'ತರಫ್‌ದಾರ್' ಎನ್ನಲಾಗುತ್ತದೆ. ಯೂಸುಫ್ ಆದಿಲ್‌ನಿಗೆ ದೌಲತಾಬಾದ್ ವಹಿಸಿಕೊಡಲಾಯಿತು.)[೩೬] ಈ ಹುದ್ದೆ ಉನ್ನತವಾದದ್ದು ಬಹಮನಿ ಸುಲ್ತಾನ ಮನೆತನದಲ್ಲಿ ಇದಕ್ಕಿಂತ ದೊಡ್ಡ ಹುದ್ದೆ ಇದ್ದಿರಲಿಲ್ಲ. ಅಮೀರರ ವರ್ಗದಲ್ಲಿ ಶಾಮೀಲಾಗಿದ್ದ ದರಿಯಾಖಾನ ಮತ್ತಿತರ ಸುಪ್ರಸಿದ್ಧ ತುರ್ಕಿ ಗುಲಾಮರನ್ನು ಯೂಸುಫ್ ಆದಿಲ್‌ಗೆ ಅಧೀನರನ್ನಾಗಿಸಲಾಯಿತು ಅವರ ಜಾಗೀರುಗಳನ್ನು ಸಹ ದೌಲತಾಬಾದ್ ಪ್ರದೇಶದಲ್ಲೇ ನಿಗದಿ ಮಾಡಲಾಯಿತು. ಕಾಸಿಮ್‌ಬೇಗ ವಲದ್ ಕಾಸಿಮ್‌ಬೇಗ್ ಸಫ್‌ಶಿಕನ್ ಶಾಹ ಕುಲಿ ಸುಲ್ತಾನ್ ಮತ್ತು ಇತರ ಜುನೇರ ಚಾಕನಾದ ಜಾಗೀರದಾರರಾಗಿದ್ದ ಮೊಗಲ್ ಅಮೀರರನ್ನು ಯೂಸುಫ್ ಆದಿಲ್‌ನಿಗೆ ಅಧೀನರನ್ನಾಗಿ ಮಾಡಲಾಯಿತು. ಒಟ್ಟಾರೆ ಯೂಸುಫ್ ಆದಿಲ್, ಮೆಹಮೂದ ಕಾವಾನರ ದಯೆ ಹಾಗೂ ಕೃಪೆಯಿಂದ ಎಲ್ಲ ಮೇಲ್ವಿಚಾರಕರಲ್ಲಿ ಎಲ್ಲಕ್ಕೂ ಹೆಚ್ಚು ಗೌರವಾರ್ಹರಾದರು. ಮುಂದೆ ಈತನನ್ನು ದೇರಾಕುಹರ್ ಮತ್ತು ಅಂತೂರ ಕೋಟೆಗಳನ್ನು ವಶಪಡಿಸಿಕೊಳ್ಳಲು ಕಳುಹಿಸಲಾಯಿತು. ಅದರಲ್ಲಿ ಯಶಸ್ವಿಯೂ ಆದನು.[೩೭] ಎಂದು ಹೇಳುತ್ತಾನೆ.

ಇದೇ ದಿನಗಳಲ್ಲಿ ಮಚಲಿಪಟ್ಟಣಂ, ಕಥೇಲಿಯ ಕಡೆಯಿಂದ ಅಪಾಯಕಾರಿಯಾದ ಸೈನ್ಯ ದಂಡೆತ್ತಿ ಬರುತ್ತಿದೆ ಎಂದು[೩೮] ತೆಲಂಗಾಣದಲ್ಲಿ, ಕೊಲೆ ಸುಲಿಗೆ ಲೂಟಿ ನಡೆದಿದೆ ಎಂಬ ಹಾಗೂ ಮುಸಲ್ಮಾನ ವ್ಯಾಪಾರಸ್ಥರನ್ನು ಕೊಂದು ಅವರ ಮನೆ, ಆಸ್ತಿ ಇತ್ಯಾದಿಗಳ ಲೂಟಿ ಮಾಡುತ್ತಿದ್ದಾರೆ ಮತ್ತು ಇದು ಇನ್ನೂ ಮುಂದುವರಿಯುತ್ತದೆ ಎಂಬ ಸುದ್ಧಿ ಬಂದಿತು. ಆದ್ದರಿಂದ ಬಾದಶಾಹರಾದ ತಾವು ನಮ್ಮ ರಾಜ್ಯದ ಸರಹದ್ದಿನಲ್ಲಿ ಶಾಂತಿಯನ್ನು ಕಾಪಾಡಲು ವ್ಯವಸ್ಥೆ ಮಾಡಬೇಕು ಎಂಬ ಪ್ರಾರ್ಥನೆಯನ್ನು ಮುಂದಿಡಲಾಯಿತು. ಆ ಅವಧಿಯಲ್ಲಿ ತೆಲಂಗಾಣದ ಪ್ರದೇಶದಲ್ಲಿ ಶಕ್ತಿಶಾಲಿ ಸಾಮಂತ ಅರಸ ಇರಲಿಲ್ಲ. ಇಲ್ಲಿಯ ಗೋಲ್ಕೊಂಡ ಕೋಟೆ ಮಹಮೂದ್‌ಷಾನ ರಾಜ್ಯದ ವ್ಯಾಪ್ತಿಯಲ್ಲಿತ್ತು. ಈ ಇಲಾಖೆ ಪರ್ವತ ಕಾಡುಮೇಡುಗಳ ಪ್ರದೇಶವಾಗಿತ್ತು. ಇವು ಹಿಂದೂ ತುಂಡರಸರ ಹಿಡಿತದಲ್ಲಿದ್ದವು. ಆಗ ಬಾದಶಹನು ತನ್ನ ದರಬಾರದ ಅಧಿಕಾರೀ ಜನರನ್ನು ಕರೆದು ಈ ವಿಷಯವನ್ನು ಚರ್ಚಿಸಿದನು ಮತ್ತು ಇಂಥ ಸಮಯದಲ್ಲಿ ಯಾರನ್ನು ಕಳುಹಿಸುವುದು ಯೋಗ್ಯ ಎಂಬುದನ್ನು ವಿಚಾರಿಸಿದನು. ಆಗ ದರಬಾರದ ಸರದಾರರು ಯೂಸುಫ್ ಬೇಗನೇ ಈ ಸಂದರ್ಭದಲ್ಲಿ ಯೋಗ್ಯ ವ್ಯಕ್ತಿ ಎಂದು ಹೇಳಿದರು. ಏಕೆಂದರೆ ಅವನು ತುಂಬಾ ಶಕ್ತಿಶಾಲಿ ಮತ್ತು ತರುಣನಾಗಿದ್ದಾನೆ ಆದ್ದರಿಂದ ಅವನನ್ನೇ ಕಳುಹಿಸಬೇಕು ಎಂದು ಹೇಳಿದರು. ದರಬಾರದ ಜನರ ಮಾತನ್ನು ಕೇಳಿ ಸುಲ್ತಾನನು ಯೂಸುಫ್ ಬೇಗನನ್ನು ಕರೆ ಕಳುಹಿಸಿದನು. ಅವನು ಬಂದ ನಂತರ ಅವನಿಗೆ ವಿಶೇಷ ವಸ್ತ್ರಗಳನ್ನು ಕೊಟ್ಟನು ಮತ್ತು ಅವನಿಗೆ 'ಮಜಲಿಸ್ ರಫೀಯೇ' ಮತ್ತು 'ಮಲಿಕುಶ್‌ಶರ್ಕ್' ಎಂಬ ಬಿರುದುಗಳನ್ನು ನೀಡಿ ಅವನ ಜೊತೆಗೆ ಒಂದು ದೊಡ್ಡ ಸೈನ್ಯವನ್ನು ಕೊಟ್ಟು ತೆಲಂಗಾಣ ಪ್ರದೇಶಕ್ಕೆ ಕಳುಹಿಸಿ ಕೊಟ್ಟನು. ಈ ಘಟನೆ ನಡೆದ ವರುಷ ಹಿಜರಿ ಶಕೆ ೯೦೨.[೩೯] ಯೂಸುಫ್ ಬೇಗನು ಸುಲ್ತಾನನ ಆದೇಶದಂತೆ ತೆಲಂಗಾಣ ಪ್ರದೇಶಕ್ಕೆ ಹೋಗಿ ಕೆಲವೇ ದಿನಗಳಲ್ಲಿ ಅಲ್ಲಿಯ ದಂಗೆಯನ್ನು ಹತ್ತಿಕ್ಕಿದನು ಮತ್ತು ದುಷ್ಟರನ್ನು ಸದೆ ಬಡೆದು ಅಲ್ಲಿ ಶಾಂತಿಯನ್ನು ಸ್ಥಾಪಿಸಿದನು. ಅದಾದನಂತರ ಬಾದಶಹರಿಗೆ ಮೌಲ್ಯಯುತ ಕಾಣಿಕೆಗಳನ್ನು ತೆಗೆದುಕೊಂಡು ಬೀದರಿಗೆ ಹೋಗಲು ಸಿದ್ಧನಾಗುತ್ತಿದ್ದನು. ಇತ್ತ ಕಡೆಗೆ ಬೀದರದ ಸುಲ್ತಾನನಿಗೆ ಒಂದು ದಿನ ಯೂಸುಫ್ ಬೇಗನ ನೆನಪಾಯಿತು. ಮತ್ತು ದರಬಾರದ ಜನರಿಗೆ ಅಲ್ಲಿಯ ಸಂಗತಿಯನ್ನು ಕೇಳುತ್ತ, ಯೂಸುಫ್‌ನು ತೆಲಂಗಾಣ ಪ್ರದೇಶಕ್ಕೆ

ಹೋಗಿ ಬಹಳ ದಿನಗಳಾದವು. ಅವನಿಂದ ಯಾವ ಸುದ್ದಿಯೂ ಬರಲಿಲ್ಲ. ಇದಕ್ಕೆ ಕಾರಣ ಏನಿರಬಹುದು ಎಂದು ಕೇಳಿದನು. ಆದರೆ ಯೂಸುಫ್ ಬೇಗನು ತೆಲಂಗಾಣ ಪ್ರದೇಶದಲ್ಲಿ ನಡೆದ ಕ್ಷಣ ಕ್ಷಣದ ಸುದ್ದಿಯನ್ನು ರಾಜಧಾನಿಗೆ ಕಳುಹಿಸುತ್ತಲೇ ಇದ್ದನು. ಆದರೆ ಬೀದರದ ದರಬಾರದ ಜನರು ಯೂಸುಫ್ ಬೇಗನ ಕೆಲಸವನ್ನು ಸಹಿಸದವರಾಗಿದ್ದು, ಅಸೂಯೆಯಿಂದ ಅವನ ಸಂದೇಶದ ಕಾಗದಗಳನ್ನು ಬಾದಶಹನವರೆಗೆ ಮುಟ್ಟಿಸುತ್ತಿರಲಿಲ್ಲ. ಅಲ್ಲಿಯೇ ಮುಚ್ಚಿಹಾಕಿ ಬಿಡುತ್ತಿದ್ದರು. ಇಂಥವರಿಗೆ ಬಾದಶಹನು ಕೇಳಿದಾಗ ಜನರು ಬಾದಶಹನಿಗೆ ಹೀಗೆ ಹೇಳಿದರು. ಯೂಸುಫ್‌ನು ತೆಲಂಗಾಣದ ಪ್ರದೇಶಗಳನ್ನು ತನ್ನ ವಶದಲ್ಲಿ ಇಟ್ಟುಕೊಂಡು ತಾನೆ ಅಧಿಕಾರಿಯೆಂದು ಘೋಷಿಸಿಕೊಂಡು ಬಿಟ್ಟಿದ್ದಾನೆ ಎಂದು ಹೇಳಿದರು. ಇದನ್ನು ಕೇಳಿದ ಯೂಸುಫ್ ಬೇಗನ ಗುರುವಾದ ಹುಸೇನ್ ಆಕಾ ರೂಮಿಯು ಬಾದಶಹನಿಗೆ ಹೀಗೆ ಹೇಳಿದನು. ‘ಯೂಸುಫ್ ಬೇಗನು ಇಂಥ ಕೀಳುಮಟ್ಟದ ಮನೋಭಾವದವನಾಗಿರಲಾರನು ಮತ್ತು ಬಾದಶಹನ ವಿರುದ್ಧ ಬಂಡು ಖೋರನಾಗಲು ಸಾಧ್ಯವಿಲ್ಲ. ಅವನ ಸುದ್ದಿ ಬರದಿದ್ದಕ್ಕೆ ಯಾವುದೋ ಕಾರಣವಿರಬೇಕು. ಎಂದು ಹೇಳುತ್ತ ದರಬಾರದಲ್ಲಿ ಇರುವ ಇನ್ನೊಬ್ಬ ಅಮೀರ ಬರ್ರೀ ಆಕಾ ಎಂಬುವನನ್ನು ತೆಲಂಗಾಣಕ್ಕೆ ಹೋಗಿ ಯೂಸುಫ್ ಬೇಗನನ್ನು ಕರೆದು ತರಲು ಕಳುಹಿಸಿದನು.[೪೦] ಬರ್ರೀ ಆಕಾನು ಅಲ್ಲಿಗೆ ಹೋದ ನಂತರ ಅವನು ಸಹ ಅಲ್ಲಿಯ ಸಮಸ್ಯೆಗಳಲ್ಲಿ ತೊಡಗಿ ಬಿಟ್ಟನು. ಅವನಿಂದಲೂ ಯಾವ ಸುದ್ದಿಯೂ ಬರಲಿಲ್ಲ. ಯೂಸುಫ್ ಬೇಗನನ್ನು ಕರೆದೂ ತರಲಿಲ್ಲ. ಇದನ್ನು ಕಂಡ ದರಬಾರದಲ್ಲಿಯ ಹೊಟ್ಟೆಕಿಚ್ಚಿನ ಜನರು ಬಾದಶಹನ ಹತ್ತಿರ ಬಂದು, ಇಬ್ಬರೂ ಹರಾಮಖೋರರಾಗಿ ಅಲ್ಲಿಯ ಮುಖ್ಯಸ್ಥರಾಗಿ ಇದ್ದು ಬಿಟ್ಟಿದ್ದಾರೆ ಎಂದು ದೊಡ್ಡ ಗದ್ದಲವನ್ನೆ ಎಬ್ಬಿಸಿದರು. ಆಗ ಬಾದಶಹನು ಹುಸೇನ ಆಕಾ ರೂಮಿಗೆ ಆದೇಶಿಸುತ್ತ ನೀನು ಸ್ವತಃ ತೆಲಂಗಾಣ ಪ್ರದೇಶಕ್ಕೆ ಹೋಗಿ ಯೂಸುಫ್‌ನನ್ನು ನನ್ನ ಎದುರಿಗೆ ತಂದು ನಿಲ್ಲಿಸು ಎಂದು ಆದೇಶಿಸಿದನು. ಅದನ್ನು ಕೇಳಿ ಹುಸೇನ ಆಕಾ ರೂಮಿಯು ಸ್ವತಃ ಯೂಸುಫ್‌ನನ್ನು ಕರೆತರಲು ಹೋದನು. ಅಲ್ಲಿ ಹೋಗಿ ಬರ್ರೀ ಆಕಾನನ್ನು ತೆಲಂಗಾಣಾ ಪ್ರದೇಶದ ಮುಖ್ಯಸ್ಥನನ್ನಾಗಿ ನಿಯುಕ್ತಿಗೊಳಿಸಿ ಯೂಸುಫ್ ಬೇಗನನ್ನು ಕರೆದುಕೊಂಡು ಬಾದಶಹರಿಗೆ ಯೋಗ್ಯವಾದ ಕಾಣಿಕೆಗಳ ಸಹಿತ ಬೀದರ ಕಡೆಗೆ ಹೊರಟನು.[೪೧] ಯೂಸುಫ್‌ನು ಯಶಸ್ವಿ ದಂಡಯಾತ್ರೆಯನ್ನು ಮುಗಿಸಿ ಬೀದರಕ್ಕೆ ಬರುತ್ತಿರುವುದನ್ನು ಕೇಳಿದ ಬಾದಶಹನು ತಾನೆ ಸ್ವತಃ ಹಜರತ್ ಖಲೀಲುಲ್ಲಾ ಕಿರ್ಮಾನಿಯವರ ದರ್ಗಾದತ್ತ ಹೋಗಿ ಯೂಸುಫ್‌ನನ್ನು ಸ್ವಾಗತಿಸಿದನು. ಮತ್ತು ಅತ್ಯಂತ ಗೌರವದಿಂದ ಅವರಿಬ್ಬರನ್ನೂ ನಗರಕ್ಕೆ ಕರೆತಂದನು. ಯೂಸುಫ್‌ನಿಂದ ಬಾದಶಹನು ತೆಲಂಗಾಣಾದ ಸಂಪೂರ್ಣ ವಿಷಯವನು ಕೇಳಿ ತಿಳಿದನು. ತೆಲಂಗಾಣದಲ್ಲಿ ಬಂಡುಖೋರರನ್ನು ಶಿಕ್ಷಿಸಿ ಅಲ್ಲಿ ಶಾಂತಿಯನ್ನು ಸ್ಥಾಪಿಸಿದ ವಿಷಯವನ್ನು ಯೂಸುಫ್‌ನಿಂದ ಕೇಳಿ ಬಾದಶಹನು ಸಂತೋಷಪಟ್ಟನು. ಆಗ ಯೂಸುಫ್‌ನು ತಾನು ತಂದಂಥ ಕಾಣಿಕೆಗಳನ್ನು ಬಾದಶಹನಿಗೆ ಒಪ್ಪಿಸಿದನು. ಬಾದಶಹನು ಅವನ ಕಾಣಿಕೆಗಳನ್ನು ಸ್ವೀಕರಿಸಿ ಯೂಸುಫ್‌ನ ಪ್ರಾಮಾಣಿಕತನವನ್ನು ಮತ್ತು ಆತನು ಮಾಡಿದ ಸುಂದರ ವ್ಯವಸ್ಥೆಯನ್ನು ಕೇಳಿ ಖುಷಿಯಾಗಿ ಅವನಿಗೆ ಇನಾಮುಗಳನ್ನು ಮತ್ತು ಕಾಣಿಕೆಗಳನ್ನು ಕೊಟ್ಟು ಗೌರವಿಸಿದನು. ಇದು ನಡೆದ ಘಟನೆ ಹಿಜರಿ ಶಕೆ ೯೦೮.[೪೨] ತೆಲಂಗಾಣದ ವಿಜಯದಿಂದ ಸಂತೋಷಗೊಂಡ ಸುಲ್ತಾನ ಮಹಮ್ಮದ್ ಬಹಮನಿಯು ಅವನಿಗೆ ಕನಕರ್ತಿ, ಕಲ್ಯಾಣದಿಂದ ಹಿಡಿದು ಮಂಜಾನ, ಗೋವಾ, ಕಂಚಿ, ಕಾಳಹಸ್ತಿ ಮೊದಲಾದ ಪ್ರದೇಶಗಳನ್ನು ಅವನ ವಶಕ್ಕೆ ಹಾಕಿ ಕೊಟ್ಟನು ಮತ್ತು ಹಳೆಯ ರಾಜಧಾನಿಯಾದ ಮಂಗಳವೇಡೆಯನ್ನು ಅವನಿಗೆ ಬಹಮನಿ ಸುಲ್ತಾನ ಮಹಮ್ಮದನು ಜಹಗೀರು ಹಾಕಿಕೊಟ್ಟನು.[೪೩] ಮತ್ತು ಅವನನ್ನು ಅತ್ತ ಕಡೆಗೆ ಕಳುಹಿಸಿದನು. ಯೂಸುಫ್ ಬೇಗನು ಇಲ್ಲಿ ಬಂದು ತನ್ನ ಪ್ರದೇಶಗಳ ಅಭಿವೃದ್ಧಿಯನ್ನು ಮಾಡ ಹತ್ತಿದನು. ಈ ಪ್ರದೇಶಗಳಲ್ಲಿ ಬೆಂಜನಹಳ್ಳಿ ಎಂಬ ಒಂದು ಗ್ರಾಮವಿತ್ತು. ಅದರ ಹೆಸರನ್ನು ಯೂಸೂಫ್‌ನು ‘ವಿಜಾಪುರ’ ಎಂದು ಇಟ್ಟನು. ಈ ಘಟನೆ ನಡೆದದನ್ನು ಹಿಜರಿ ಶಕೆ ೯೧೯ ಅನಂತರ ಇಲ್ಲಿ ಖ್ವಾಜಾ ಜಹಾನನನ್ನು ಮುಖ್ಯಸ್ಥನನ್ನಾಗಿ ನಿಯುಕ್ತಿಗೊಳಿಸಿದನು.[೪೪] ಹೀಗೆ ಹಂತ ಹಂತವಾಗಿ ಬಹಮನಿ ರಾಜ್ಯದಲ್ಲಿಯೇ ಶ್ರೇಷ್ಠ ಅಮೀರನಾದನು. ಮಹಮೂದ್ ಗವಾನನ ಅತಿ ಆಪ್ತನಾದ ಯೂಸುಫ್‌ನು ಅವನ ಕೈಗಳಗೆ ತರಬೇತಿ ಪಡೆದು, ರಾಜಕೀಯ ಪಕ್ಷಗಳ ಕೋಟಲೆಯನ್ನು ತಾನೇ

ನೋಡಿ ಯೂಸುಫ್ ಆತ್ಮರಕ್ಷಣೆಯ ತಂತ್ರವನ್ನು ಚೆನ್ನಾಗಿ ಕರಗತ ಮಾಡಿಕೊಂಡನು. ತನ್ನ ವಿರುದ್ಧವಾಗಿ ಹಾಕಿದ ಅನೇಕ ಪಿತೂರಿಗಳಿಂದ ಯಾವ ಅಪಾಯವೂ ಆಗದಂತೆ ಪಾರಾದನು. ವಿಕಾರಯುತವೂ, ಸುಸಂಪನ್ನವೂ, ಸದೃಢವೂ ಆದ ಅವನ ಸಂಕಲ್ಪಶಕ್ತಿಯು ಅವನಿಗಾಗಿ ಇತಿಹಾಸದಲ್ಲಿ ಇನ್ನು ನಿರ್ಧಿಷ್ಟವಾದ ಪಾತ್ರವನ್ನು ಸಿದ್ಧಪಡಿಸಿಕೊಟ್ಟಿತು.

ಬೀದರಿನ ಆಸ್ಥಾನದ ಅನಿಶ್ಚಿತ ರಾಜಕಾರಣಕ್ಕೆ ಸಿಕ್ಕಿ ತನ್ನ ಜೀವನನ್ನು ಅಪಾಯಕ್ಕೊಡ್ಡುವುದಕ್ಕಿಂತಲೂ ತನ್ನ ಪ್ರಾಂತವಾದ ಬಿಜಾಪುರದಲ್ಲಿ ಭದ್ರವಾಗಿ ಸ್ಥಾಪನೆಗೊಳ್ಳುವುದೇ ವಿವೇಕ ಎಂದು ಅವನು ಭಾವಿಸಿದನು. ಬಹಮನಿ ಮನೆತನದ ಪ್ರಧಾನಿಯಾದ ಮಹಮ್ಮದ್ ಗವಾನನ ಶಿರಶ್ಛೇದನವಾದ ನಂತರ ಅವನು ಬಹಮನಿ ಸುಲ್ತಾನನಿಂದ ದೂರ ಉಳಿದು ಬಿಜಾಪುರದತ್ತ ಹೊರಟನು. ಈ ಹಿಂದೆ ತಿಳಿಸಿರುವ ಹಾಗೆ ಖ್ವಾಜಾ ಜಹಾನನ್ನು ಬಿಜಾಪುರದ ಮುಖ್ಯಸ್ಥನನ್ನಾಗಿ ಯೂಸುಫ್‌ನು ನಿಯುಕ್ತಿ ಗೊಳಿಸಿದ್ದ[೪೫] ಹಾಗಾಗಿ ಯೂಸುಫ್‌ನು ಖ್ವಾಜಾ ಜಹಾನರ ವಶದಲ್ಲಿದ್ದ ಕೋಟೆಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಬಿಜಾಪುರದತ್ತ ಆಗಮಿಸಿದನು. ಇವರು ಅಲ್ಲಿಗೆ ಹೋಗಿ ೨೦ ದಿನಗಳ ಕಾಲ ತಂಗಿ ಅಲ್ಲಿಯ ವಾತಾವರಣ ಮತ್ತು ಜನರ ಬಗ್ಗೆ ವಿಚಾರಣೆ ನಡೆಸಿ ತಿಳಿದುಕೊಂಡರು. ಈ ಹಿಂದೆ ಖ್ವಾಜಾ ಜಹಾನರು ತನಗೆ ಕಷ್ಟಸಾಧ್ಯವಾದದ್ದು ಎಂದೆನಿಸಲ್ಪಟ್ಟದ್ದನ್ನು ಬೇರೆಯವರಿಗೆ ಒಪ್ಪಿಸಿ ಊರನ್ನು ತೊರೆದು ಮುನ್ನಡೆದಿದ್ದರು. ಖ್ವಾಜಾ ಜಹಾನ ಬಿಜಾಪುರವನ್ನು ತೊರೆದು ಪರಂದಾ ಕೋಟೆಯ ಕಡೆ ನಡೆದರು. ಇವರು ತಮ್ಮ ಸಂಪತ್ತು ಸಾಮಾನುಗಳನ್ನು ಇಲ್ಲಿಯೇ ಬಿಟ್ಟು ಖ್ವಾಜಾ ಜಹಾನರು ಊರನ್ನು ತೊರೆದಿದ್ದರು. ಇವನ್ನೆಲ್ಲವನ್ನೂ ರಕ್ಷಿಸಿ ಬಹಳ ಜತನದಿಂದ ಸುರಕ್ಷಿತ ಸ್ಥಳಕ್ಕೆ ಕಳುಹಿಸಲಾಯಿತು. ಇವರು ಬಿಜಾಪುರವನ್ನು ೩೧ ವರ್ಷಗಳ ಕಾಲ ನೋಡಿಕೊಂಡಿದ್ದರು. ಇವರ ನಿಧನ ಹಿಜರಿ ವರ್ಷ ಸನ್ ೯೨೫ರಲ್ಲಿ ಎಂದು ಹೇಳಲಾಗುತ್ತದೆ.[೪೬]

ಮೂರನೆಯ ಮಹಮ್ಮದನು ಪಟ್ಟಾಭಿಷೇಕವಾದಾಗಲೂ ಕೂಡ ಯೂಸುಫ್ ನಗರದ ಹೊರಭಾಗದಲ್ಲಿ ತನ್ನ ಗುಡಾರವನ್ನು ಹಾಕಿಸಿಕೊಂಡಿದ್ದನು. ನಿಜಾಮುಲ್‌ಮುಲ್ಕನು ರಾಜ್ಯದ ಆಡಳಿತದಲ್ಲಿ ಸೇರಿಕೊಳ್ಳಬೇಕೆಂದು ಆಹ್ವಾನಿಸಿದಾಗ ಅವನ ಉತ್ತರ, ಒಬ್ಬ ಯೋಧನಾಗಿ ರಾಜ್ಯದ ಸಂರಕ್ಷಣೆಯಲ್ಲಿ ತೊಡಗುದರಲ್ಲೇ ತನಗೆ ಹೆಚ್ಚಿನ ಸಂತೋಷವಿದೆ ಎನ್ನುವುದಾಗಿತ್ತು. ಅಹಮದ್‌ನಗರದಲ್ಲಿ ಅಹಮದ್ ನಿಜಾಮುಲ್‌ಮುಲ್ಕನು ತನ್ನದೇಯಾದ ಒಂದು ಪ್ರತ್ಯೇಕ ಸಂಸ್ಥಾನವನ್ನು ಕಟ್ಟಿಕೊಂಡುದು ಅವನಿಗೆ ಕಣ್ಣೆದುರಿಗಿದ್ದ ಆದರ್ಶವಾಗಿತ್ತು. ಮಹಮೂದ್ ಗವಾನನ ಕೊಲೆಯು ಒಂದು ಮುಖ್ಯವಾದ ತಿರುವಾಯಿತು. ಸಾಮಂತರಾಜರು ರಾಜ್ಯವನ್ನು ವಿಭಜಿಸಬೇಕೆಂದು ಹೆಚ್ಚು ಹೆಚ್ಚಾಗಿ ಒತ್ತಾಯಿಸುವ ನೂತನ ಪ್ರವೃತ್ತಿ ಕಾಣಿಸಿಕೊಂಡಿತು. ಖಾಸಿಂ ಬರೀದನು ಬೀದರಿನ ವಸ್ತುತಃ ಅರಸನಾಗಿ ಮೇಲೇರಿದ್ದು ಈ ಪ್ರವೃತ್ತಿಗೆ ಇಂಬುಗೊಟ್ಟಿತು. ಖಾಸಿಂ ಬರೀದ್ ಮತ್ತು ಅವನ ಮಗ ಅಮೀದ್ ಬರೀದ್ ಇವರ ಉದ್ಧಟತನ, ನೀತಿ ರಾಹಿತ್ಯಗಳು ಮೇರೆ ಮೀರಿ ಬಹಮನಿ ರಾಜ್ಯದ ಅವನತಿಗೆ ಕಾರಣವಾದವು.[೪೭] ಕೆಲವೇ ದಿನಗಳಲ್ಲಿ ಸುಲ್ತಾನ ಮಹಮ್ಮದನು ತೀರಿಕೊಂಡನು. ಈ ಸದುಪಯೋಗವನ್ನು ಪಡೆದುಕೊಂಡು ಯೂಸುಫ್ 'ಆದಿಲ್‌ಶಾಹಿ' ರಾಜ್ಯವನ್ನು ಸ್ಥಾಪಿಸಿದನು.[೪೮] ಅದೇ ರೀತಿ ಅಹಮದನಗರದಲ್ಲಿ ನಿಜಾಂ ಷಾಹಿ, ಸುಲ್ತಾನ ಕುತ್ಬ್‌ಉಲ್ ಮುಲ್ಕ್‌ನಿಂದ ಗೋಲ್ಕೊಂಡಾದಲ್ಲಿ ಕುತ್ಬ್‌ಷಾಹಿ, ಖಾಸಿಂ ಬರೀದ್‌ನಿಂದ ಬೀದರ್‌ನಲ್ಲಿ ಬರೀದ್‌ಷಾಹಿ, ಫತುಲ್ಲಾ ಇಮಾದ್ ಉಲ್ ಮುಲ್ಕ್‌ನಿಂದ ಬೆರಾರ್‌ನಲ್ಲಿ ಇಮಾದ್‌ಷಾಹಿ ಮನೆತನಗಳು ಸ್ಥಾಪನೆಯಾದವು. ಕ್ರಿ.ಶ. ೧೪೮೧ರಲ್ಲಿ ಗವಾನನು ಕೊಲೆಯಾದಾಗಿನಿಂದ ಕ್ರಿ.ಶ. ೧೪೯೦ರಲ್ಲಿ ಯೂಸುಫ್‌ನು ಸುಲ್ತಾನನೆಂದು ಹೇಳಿಕೊಳ್ಳುವವರೆಗೆ ಒಂಬತ್ತು ವರ್ಷ, ನೂತನ ರಾಜ್ಯ ಸ್ಥಾಪನೆಗೆ ಸಿದ್ಧತೆಯ ಅವಧಿಯಾಗಿತ್ತು. ಅವನು 'ಶಹಾ' ಎಂಬ ಹೆಸರನ್ನು ಇಟ್ಟುಕೊಳ್ಳಲಿಲ್ಲ. ಆಸ್ಥಾನದ ಎಲ್ಲಾ ಸಮಾರಂಭಗಳಲ್ಲೂ ಪ್ರಾಂತಿಯ ನಿಷ್ಠ ಗವರ್ನರನಾಗಿ ನಡೆದುಕೊಂಡನು. ಅಗತ್ಯವಾದಾಗಲೆಲ್ಲ ಸುಲ್ತಾನನಿಗೆ ನೆರವು ಸಲ್ಲಿಸಿದನು. ಆದರೂ ವಾಸ್ತವದಲ್ಲಿ ಅವನು ಸ್ವತಂತ್ರನಾಗಿದ್ದನು. ಸುಲ್ತಾನನು ಖಾಸಿಂ ಬರೀದನ ಕೈಗೊಂಬೆಯಾಗಿದ್ದಾನೆ ಎಂದು ಅವನಿಗೆ ತಿಳಿದಿತ್ತು. ತಾನೂ ಅವರ ಅಧೀನನಾಗಲು

ಇಚ್ಚಿಸದಾದನು. ಪೆಂಟಾರ್ಕಿ ಆಗಲೆ ಅಸ್ತಿತ್ವಕ್ಕೆ ಬಂದಿತ್ತು. ವಿಜಾಪುರ ಜಿಲ್ಲೆಯ ಗ್ಯಾಸೆಟಿಯರ್‌ನಲ್ಲಿ ಉಲ್ಲೇಖಿಸಿರುವಂತೆ ಗವಾನನ ಮರಣಾನಂತರ, ಆವರೆಗೆ ಪ್ರಧಾನಿ ಗವಾನನ ಉಸ್ತುವಾರಿಯಲ್ಲಿದ್ದ 'ವಿಜಾಪುರ' ಪ್ರಾಂತಕ್ಕೆ ತರಫದಾರನಾಗಿ ಸುಲ್ತಾನನಿಂದ ನೇಮಿಸಲ್ಪಟ್ಟನು. ಡೋಲಾಯಮಾನ ಸ್ಥಿತಿಯಲ್ಲಿದ್ದ ಬಹಮನಿ ಸಾಮ್ರಾಜ್ಯದ ಆಗು–ಹೋಗುಗಳಲ್ಲಿ ಭಾಗವಹಿಸುತ್ತಾ ಪ್ರಾದೇಶಿಕವಾಗಿ ಬಲಿಷ್ಠಗೊಳ್ಳುತ್ತಾ, ಸ್ವತಂತ್ರಗೊಳ್ಳಬೇಕೆಂಬ ಹೆಬ್ಬಯಕೆಯನ್ನು ವ್ಯಕ್ತಪಡಿಸುವ ಎದೆಗಾರಿಕೆ ತೋರದೆ, ಸುಲ್ತಾನನಿಗೆ ತೋರಿಕೆಯ ವಿಧೇಯತೆ ವ್ಯಕ್ತಪಡಿಸುತ್ತಾ ಬಂದನು. ಆದರೂ ಯೂಸುಫ್ ಆದಿಲ್‌ಖಾನನು ಕ್ರಿ.ಶ. ೧೪೮೯ರ ವೇಳೆಗೆ ವಿಜಯಪುರದಲ್ಲಿ ಶುಕ್ರವಾರದ ಪ್ರಾರ್ಥನಾ ಸಭೆಯಲ್ಲಿ ಖುತ್ಬಾವನ್ನು ತನ್ನ ಹೆಸರಲ್ಲೇ ಪಠಿಸಲು ಆದೇಶಿಸಿದನಾದರೂ ಅವನು ತನ್ನ ಜೀವಿತಾವಧಿಯಲ್ಲಿ ಸಾರ್ವಭೌಮ ಸೂಚಕ 'ಶಹಾ' ಬಿರುದನ್ನು ಧರಿಸಲಾಗಲೀ, ಸುಲ್ತಾನನೆಂದು ಘೋಷಿಸಿಕೊಳ್ಳಲಾಗಲೀ ಮುಂದಾಗಲಿಲ್ಲ. ಹಾಗೆ ನೋಡಿದರೆ, ಕ್ರಿ.ಶ. ೧೫೩೪ರಲ್ಲಿ ಪಟ್ಟಕ್ಕೆ ಬಂದ ನಾಲ್ಕನೆಯ ಸುಲ್ತಾನ ಒಂದನೆಯ ಇಬ್ರಾಹಿಂ ಆದಿಲ್‌ಶಹಾವರೆಗೆ ಯಾರೂ ಔಪಚಾರಿಕವಾಗಿ 'ಶಹಾ' ಅಥವಾ 'ಸುಲ್ತಾನ' ಎಂದು ಕರೆದುಕೊಳ್ಳಲು ಮುಂದಾಗಲಿಲ್ಲ.[೪೯]

ಕೆಲವು ಸಾಹಿತ್ಯ ಕೃತಿಗಳು ಯೂಸುಫ್ ಬೇಗನನ್ನು 'ಸಾವೀ' ಎಂದು ಉಲ್ಲೇಖಿಸುತ್ತವೆ. ಅದಕ್ಕೆ ಕಾರಣ ಅವನು ಕೆಲವು ಕಾಲ ಸಾವಾ ನಗರದಲ್ಲಿ ಇದ್ದನು. ಇದಕ್ಕೆ ಇನ್ನೊಂದು ಅರ್ಥವಿದೆ. ದಖಣಿ ಭಾಷೆಯಲ್ಲಿ ಅವನಿಗೆ ಯೂಸುಫ್ ಸವಾಯಿ ಎಂದು ಕರೆಯುತ್ತಿದ್ದರು. ಏಕೆಂದರೆ ಎಲ್ಲರೂ ಒಂದು ಸಂಖ್ಯೆಗೆ ಸಮನಾಗಿದ್ದರೆ ಯೂಸುಫ್‌ನು ಒಂದು ಮತ್ತು ಒಂದರ ಕಾಲುಭಾಗ ಅಧಿಕವಾಗಿದ್ದನು. ವಿಶೇಷವಾಗಿ ಶಕ್ತಿಯಲ್ಲಿ, ಯೋಗ್ಯತೆಯಲ್ಲಿ ಒಂದೂ ಕಾಲು ಭಾಗದಷ್ಟಿದ್ದನು ಮತ್ತು ತಾನು ಸ್ಥಾಪಿಸಿದ ರಾಜ್ಯದ ಪ್ರದೇಶವೂ ಅಂದಿನ ದಿನಗಳಲ್ಲಿ ಇನ್ನೊಬ್ಬರ ರಾಜ್ಯಗಳಿಗಿಂತ ಕಾಲು ಭಾಗ ಅಧಿಕವಾಗಿತ್ತು. ಈ ಎಲ್ಲ ಕಾರಣಗಳಿಂದಾಗಿ ಯೂಸುಫ್‌ನಿಗೆ ಸವಾಯಿ ಎಂದು ಕರೆಯುತ್ತಿದ್ದರು[೫೦] ಎಂದು ಹೇಳಲಾಗುತ್ತದೆ. ಆದರೆ ಮಹಮ್ಮದ ಕಾಸೀಮ್ ಫರಿಶ್ತಾ ಹೇಳುವಂತೆ ಯೂಸುಫ್ ಆದಿಲ್‌ಶಾಹನ ಬಿರುದು ಸವಾಯಿ ಇತ್ತು. ಇದರ ಮೂಲವು ಸಾವಿ ಇದೆ. ಏಕೆಂದರೆ, ಯೂಸುಫ್‌ನು ಸಾವಾ ಎಂಬ ಪಟ್ಟಣದಲ್ಲಿ ಶಿಕ್ಷಣ ಮತ್ತು ತರಬೇತಿಯನ್ನು ಪಡೆದವನು. ಈ ಕಾರಣದಿಂದ ಯೂಸುಫ್‌ನನ್ನು 'ಸಾವೀ' ಎಂದು ಕರೆಯಲಾಗುತ್ತಿತ್ತು. ಅಶಿಕ್ಷಿತ ಜನರು ಕರೆಯುತ್ತಿದ್ದ 'ಸಾವಿ' ಶಬ್ದದಿಂದ 'ಸವಾಯಿ' ಎಂಬುದು ಪ್ರಚಾರಕ್ಕೆ ಬಂದಿತು. ಈ ಬಗ್ಗೆ ಕೆಲವು ಇತಿಹಾಸಕಾರರ ವಿಚಾರವೇನೆಂದರೆ, ಸವಾಯಿ(ಸವ್ವಾ) (೧ ೧/೪) ದಿಂದ ನಿಷ್ಪನ್ನಗೊಂಡಿದೆ. ಏಕೆಂದರೆ, ಯೂಸುಫ್ ಆದಿಲ್‌ಖಾನ ಮತ್ತು ಈತನ ಸಮಕಾಲೀನರು ಮತ್ತು ಕೆಲವು ಆಜ್ಞಾಧಾರಕರು ರಾಜ್ಯದಲ್ಲಿ ಮತ್ತೊಂದು ಸವಾಯಿ ಎಂಬ ಪ್ರಮಾಣವನ್ನು ಜಾರಿಗೊಳಿಸಿದರು. ಆದ್ದರಿಂದ ಯೂಸುಫ್ 'ಸವಾಯಿ' ಎಂಬ ಬಿರುದಿನಿಂದಲೇ ಪ್ರಖ್ಯಾತಿ ಪಡೆದನು ಎಂದು ಹೇಳುತ್ತಾನೆ.[೫೧] ಜೊತೆಗೆ ಆತನೇ ಉಲ್ಲೇಖಿಸಿರುವ ಹಾಗೆ ನಿಜಾಮುಲ್ ಮುಲ್ಕನ್ ಶಿಫಾರಸ್ಸಿನಿಂದ ಯೂಸುಫ್‌ನಿಗೆ ಸುಲ್ತಾನನ ಆಸ್ಥಾನದಿಂದ 'ಆದಿಲ್‌ಖಾನ' ಎಂಬ ಗೌರವಾಂಕಿತವಾಯಿತು ಎನ್ನುತ್ತಾನೆ.[೫೨] ಇದೇ ರೀತಿ ಗುಲದಸ್ತಾಯೆ ಬಿಜಾಪುರ ಕೃತಿಯು ಯೂಸುಫ್ ಬೇಗ ಸಾವಿ ಎಂಬುವವನು ಯೂಸುಫ್ ಆದಿಲ್‌ಶಾಹ ಎಂಬ ಹೆಸರಿನಿಂದ ಆದಿಲ್‌ಶಾಹಿ ರಾಜ್ಯವನ್ನು ಸ್ಥಾಪಿಸಿದನಲ್ಲದೇ ತನ್ನ ಹೆಸರಿನ ಖುತಬಾವನ್ನು ಓದಿಸಿದನು ಮತ್ತು ತನ್ನ ಹೆಸರಿನ ಮೊಹರುಗಳನ್ನು ಹೊರಡಿಸಿದನು.[೫೩] ಒಟ್ಟಾರೆಯಾಗಿ 'ಆದಿಲ್' ಎಂಬುದು ಪರ್ಶಿಯನ್ ಶಬ್ದ. ಅದರ ಅರ್ಥ 'ನ್ಯಾಯ', ಯೂಸುಫ್‌ಖಾನನು ವಿಜಯಪುರದಲ್ಲಿ ತನ್ನ ಸ್ವತಂತ್ರ ರಾಜ್ಯವನ್ನು ಪ್ರಾರಂಭಿಸಿದರೂ ಕೂಡ ಆತನು ತನ್ನ ರಾಜ್ಯಾರೋಹಣ ಸಮಾರಂಭವನ್ನು ನಡೆಸಲಿಲ್ಲ. ಬಹಮನಿ ರಾಜ್ಯ ಇನ್ನೂ ಜೀವಂತವಾಗಿತ್ತು ಅದು ಜೀವಂತವಾಗಿ ಇರುವವರೆಗೂ (ಕ್ರಿ.ಶ. ೧೫೨೬) ಇಲ್ಲಿಯ ಸುಲ್ತಾನರು ತಮ್ಮ ಹೆಸರಿನ ಮುಂದೆ 'ಶಾಹ' ಎಂಬ ಪದವನ್ನು ಬಳಸಲಿಲ್ಲ. 'ಖಾನ್' ರಾಗಿಯೇ ಉಳಿದರು. ಎಂದು ಇಲ್ಲಿಯ ಹಲವಾರು ಶಾಸನಗಳು ಹೇಳುತ್ತವೆ.

ಕೊನೆಯ ಮಾತನ್ನು ಹೇಳುವುದಾದರೆ ಉತ್ತಮ ಭವಿಷ್ಯವಿರುವ ನಾಯಕನು ಸದಾಕಾಲವೂ ತನ್ನ ಮುಖ್ಯ ಉದ್ದೇಶವನ್ನು ದೃಷ್ಟಿಯಲ್ಲಿ ಇಟ್ಟುಕೊಂಡಿರುತ್ತಾನೆ, ಎಂದೂ ಅದನ್ನು ಬಲಿಗೊಡುವುದಿಲ್ಲ. ಯೂಸುಫ್‌ನು ಹೊಸ ರಾಜ್ಯವನ್ನು ಕಟ್ಟಲು ಬಯಸಿದನು. ಅದರಲ್ಲಿ ಯಶಸ್ವಿಯಾದನು. ಅವನ ಸಮಸ್ತ ಪರಿಶ್ರಮವೂ ಅದೊಂದು ವಿಷಯದ ಮೇಲೆ ಕೇಂದ್ರೀಕೃತವಾಗಿತ್ತು. ಹಾಗಾಗಿ ಯೂಸುಫ್‌ನನ್ನು ದಕ್ಷಿಣ ಭಾರತದ ಪ್ರತಿಭಾವಂತ ರಾಜರುಗಳಲ್ಲಿ ಒಬ್ಬನೆಂದು ಕರೆಯಲಾಗುತ್ತದೆ.

ಬಹಮನಿ ಸಾಮ್ರಾಜ್ಯದಿಂದ ಹೊರಬಂದು ಯೂಸುಫ್ ಆದಿಲ್‌ಖಾನನು ಆದಿಲ್‌ಶಾಹಿ ಸಾಮ್ರಾಜ್ಯವನ್ನು ಸ್ಥಾಪಿಸಿದುದರ ಕುರಿತಾಗಿ ಇನ್ನೂ ಕೆಲವು ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ.

ಮುಖ್ಯವಾಗಿ ಮಹಮೂದ್ ಗವಾನನ ಹತ್ಯೆಯು ಬಹಮನಿ ಸಾಮ್ರಾಜ್ಯದ ವಿಲಯನ–ವಿನಾಶಗಳಿಗೆ ಈ ಅಕೃತ್ಯವೇ ಕಾರಣವಾಯಿತು. ಇದರ ಬಗ್ಗೆ ತೀವ್ರ ಅಸಮಾಧಾನಗೊಂಡ "ಪರ್ದೇಸೀ ಅಮೀರರು' ರಾಜಧಾನಿಯಲ್ಲಿರಲು ಇಷ್ಟಪಡದೆ, ಸುಲ್ತಾನನ ಅನುಮತಿ ಪಡೆಯುವ ನೀತಿಗೂ ಬದ್ಧರಾಗಿರದೆ, ತಮ್ಮ ಪ್ರಾಂತ್ಯಗಳಿಗೆ ಹೊರಟುಹೋದರು. ದಖ್ಖನೀಯರಲ್ಲೂ ಜವಾಬ್ದಾರರಾದವರು ಪಿತೂರಿಗಾರರ ವಿರುದ್ಧವಾಗಿ ಯೂಸುಫ್ ಆದಿಲ್‌ಖಾನನ ಪಂಗಡ ಸೇರಿದರು. ವಿದೇಶೀಯರೂ ಕೆಲವು ದಖ್ಖನೀಯರೂ ತನ್ನ ಕೈ ಬಿಟ್ಟಾಗ ದಾರಿಗಾಣದ ರಾಜ, ಪಿತೂರಿಗಾರರಿಗೇ ವಶನಾದ. ಅವರ ಮುಖಂಡನಾದ ಹಸನ್ ನಿಜಾಮ್–ಉಲ್–ಮುಲ್ಕನನ್ನು ಮಲಿಕ್ ನಾಯಿಬ್‌ನ ಉನ್ನತ ಸ್ಥಾನಕ್ಕೇರಿಸಿ, ಆಡಳಿತಾಧಿಕಾರವನ್ನು ಅವನ ಕೈಗಿತ್ತ. ಆದರೆ ಮಹಮ್ಮದ್ ಷಾಹನಿಗೆ ತಾನು ನಿರಪರಾಧಿಯನ್ನು ಕೊಲ್ಲಿಸಿದನೆಂಬ ಸತ್ಯವನ್ನು ಮರೆಯಲಾಗಲಿಲ್ಲ. ತನ್ನ ಮಂತ್ರಿಯನ್ನು ಕೊಲ್ಲಿಸಿದ ಒಂದು ವರ್ಷದೊಳಗಾಗಿ ಮೃತನಾದ.[೫೩]

ಮುಹಮ್ಮದನ ಮಗ ಹಾಗೂ ಉತ್ತರಾಧಿಕಾರಿಯಾದ ಮಹಮೂದನು (೧೪೮೨–೧೫೧೮) ಕಿರಿಯವನಾದ್ದರಿಂದ, ಅಧಿಕಾರವು ಮಲಿಕ್ ನಾಯಿಬನ ಕೈಯಲ್ಲೇ ಉಳಿಯಿತು. ಪಟ್ಟಾಭಿಷೇಕದ ಹಿಂದಿನ ದಿನ, 'ಅಮೀರ'ರೆಲ್ಲರೂ ರಾಜಧಾನಿಯಲ್ಲಿ ಸೇರಿದ್ದಾಗ, ಈ ಚಾಲಾಕಿ ದಖ್ಖನೀಯನು, ಆದಿಲ್‌ಖಾನನನ್ನು ಆತನ, ಹಿಂಬಾಲಕರನ್ನೂ ಮುಗಿಸಿಬಿಡಲು ಸಂಚು ರೂಪಿಸಿದ. ಆದರೆ ದಖ್ಖನೀಯರಲ್ಲೇ ಕೆಲವು ಹಿತಚಿಂತಕರು ತಮ್ಮ ವಿರುದ್ಧ ಬಣದವರಿಗೆ ಇದರ ಸೂಚನೆ ಕೊಟ್ಟು ಎಚ್ಚರಿಸಿದರು. ಆಗ ಎರಡೂ ಗುಂಪುಗಳ ನಡುವೆ ಬಹಿರಂಗ ಘರ್ಷಣೆ ಆರಂಭವಾಗಿ, ಇಪ್ಪತ್ತು ದಿನಗಳವರೆಗೆ ಬೀದರ್ ನಗರ ಇದಕ್ಕೆ ಸಾಕ್ಷಿಯಾಗಿತ್ತು. ಕಡೆಗೆ ಹೊಂದಾಣಿಕೆಯ ಮೇರೆಗೆ, ಮಲಿಕ್ ನಾಯಿಬನನ್ನು ಅತ್ಯುನ್ನತ ಸ್ಥಾನದಲ್ಲಿರಲು ಬಿಟ್ಟು, ಆದಿಲ್‌ಖಾನನು ವಿಜಯಪುರಕ್ಕೆ ಮರಳಬೇಕೆಂದು ಒಪ್ಪಿಗೆಯಾಯಿತು. ಬಳಿಕ ಅಲ್ಲಿ ಶಾಂತಿಯನ್ನು ಕಾಪಾಡಲಾಯಿತು. ಆದರೆ ಮಲಿಕ್ ನಾಯಿಬನ ಅಧಿಕಾರ ಹೆಚ್ಚು ದಿನ ನಡೆಯಲಿಲ್ಲ. ಆತನನ್ನು ಬೀದರಿನ ಅಬಿಸೀನಿಯನ್ ರಾಜ್ಯಪಾಲನು ಹಿಡಿಸಿ ಕೊಲ್ಲಿಸಿದ. ಧೀಮಂತನಾದ ಪ್ರಸಿದ್ಧ ವ್ಯಕ್ತಿಯನ್ನು ಕೊಲ್ಲಲು ಕುತ್ಸಿತವಾದ ಸಂಚು ಹೂಡಿದ ದಖ್ಖನೀ ಮಂತ್ರಿ ತಾನೂ ಅದೇ ದುರ್ದಶೆಗೇ ಈಡಾದ. ಇದೇ ಸಂದರ್ಭದಲ್ಲಿ ಮಹಮೂದ್ ಷಾಹನು ಆಡಳಿತ ವ್ಯವಹಾರದಲ್ಲಿ ಆಸಕ್ತಿಯನ್ನು ಕಳೆದುಕೊಂಡ. ಸರಕಾರದ ಜವಾಬ್ದಾರಿ ಈಗ, ಸುನ್ನಿ ಮತದವನಾದ ಖಾಸಿಂ ಬರೀದ್ ಎಂಬ ತುರ್ಕಿ ಅಮೀರನ ಕೈಗೆ ಬಂದಿತು. ಅಲ್ಲಿಗೇ ಬಹಮನೀ ಸಾಮ್ರಾಜ್ಯದ ಏಕತೆಯು ಕೊನೆಗೊಳ್ಳಲಿಕ್ಕೆ ಪ್ರಾರಂಭವಾಯಿತು. ಪ್ರಾಂತಿಯ ಆಡಳಿತಗಾರರು ಖಾಸಿಂ ಬರೀದ್‌ನ ಅಧಿಕಾರವನ್ನು ಮನ್ನಿಸಲು ಒಪ್ಪಲಿಲ್ಲ. ಮಲಿಕ್ ನಾಯಿಬನ (ಹಸನ್ ನಿಜಾಮ್–ಉಲ್–ಮುಲ್ಕನ) ಮಗನಾದ ಮಲಿಕ್ ಅಹಮದ್ ನಿಜಾಮ್–ಉಲ್–ಮುಲ್ಕನು ನಿಷ್ಠಾಂತರ ಮಾಡುವುದರೊಂದಿಗೆ ರಾಜ್ಯದ ಛಿದ್ರತೆ ಆರಂಭವಾಯಿತು. ವಿಜಯಪುರದ ಯೂಸುಫ್ ಆದಿಲ್‌ಖಾನ ಹಾಗೂ ಬೇರಾರಿನ ಫತ್–ಉಲ್ಲಾ–ಇಮಾದ್–ಉಲ್–ಮುಲ್ಕ್ ಇಬ್ಬರೂ ಅವನ ಪರವಾಗಿದ್ದರು. ಜೂನ್ ೧೪೯೦ರಲ್ಲಿ ಅಹಮದನು ತನ್ನ ಹೆಸರಲ್ಲೇ ನಿರ್ಮಿಸಲ್ಪಟ್ಟ ಅಹಮದ್ ನಗರದಲ್ಲಿ ತಾನು ಸ್ವತಂತ್ರನೆಂದು ಘೋಷಿಸಿಕೊಂಡ. ತದನಂತರ ಅವನ ಜೊತೆಯವರಾದ ಈಮಾದ್–ಉಲ್–ಮುಲ್ಕ್ ಹಾಗೂ ಯೂಸುಫ್ ಆದಿಲ್‌ರೂ ಕೂಡ ಹಾಗೆಯೇ ಮಾಡಿದರು. ಆದರೆ ಈ ಮೂರು ಪ್ರಾಂತಗಳನ್ನು

ಕಳೆದುಕೊಂಡರೂ ಬಹಮನಿ ಸುಲ್ತಾನನು ಹೆಸರಿಗೆ ಇನ್ನೂ ಚಕ್ರಾಧಿಪತಿಯಾಗಿಯೇ ಉಳಿದಿದ್ದ. ಏಕೆಂದರೆ ಮೂವರೂ ಸ್ವಾಯತ್ತರೇ ಆಗಿದ್ದರೂ ತಮ್ಮದೇ ನಾಣ್ಯಗಳನ್ನು ಹೊರಡಿಸಲು ಇಲ್ಲವೆ 'ಖುತ್ಬ'ವನ್ನು ತಮ್ಮ ಹೆಸರಿನಲ್ಲೇ ಓದಿಸಲು ಹೋಗದೆ, ಭ್ರಮೆಯ ಸುಲ್ತಾನನಿಗೆ ಅಧೀನರಾಗಿರುವಂತೆಯೇ ಇದ್ದರು.[೫೪]

ಮಹಮೂದ್ ಷಾಹ ಬಹಮನಿಯು ಕ್ರಿ.ಶ. ೧೫೧೮ರವರೆಗೂ ನಾಮ ಮಾತ್ರ ಸುಲ್ತಾನನಾಗಿ ಮುಂದುವರಿದ. ಕ್ರಿ.ಶ. ೧೫೧೮ರಲ್ಲಿ ಮಹಮೂದ್ ಷಾಹನು ತೀರಿಕೊಂಡಾಗ ಈ ವಿಚ್ಛಿದ್ರಕಾರಕ ಶಕ್ತಿಗಳು ಪೂರ್ಣ ಪ್ರಮಾಣದಲ್ಲಿ ಕೆಲಸ ಮಾಡುತ್ತಿದ್ದವು. ಅವನ ಉತ್ತರಾಧಿಕಾರಿಗಳಾಗಿ ನಾಲ್ಕು ಜನ ರಾಜರಾದರು. ಆದರೆ ಈ ನಾಲ್ವರೂ ವಾಸ್ತವಿಕವಾಗಿ, ಬಹಮನಿ ರಾಜಧಾನಿಯನ್ನು ನಿಯಂತ್ರಿಸುತ್ತಿದ್ದ (ಖಾಸಿಂ ಬರೀದ್‌ನ ಮಗ) ಅಮೀರ್ ಬರೀದ್‌ನ ಹತೋಟಿಯಲ್ಲಿದ್ದರು. ಈ ಕೈಗೊಂಬೆ ರಾಜರಲ್ಲಿ ಕೊನೆಯವನಾದ ಕಲೀಮುಲ್ಲಾ ಕ್ರಿ.ಶ. ೧೫೩೮ರಲ್ಲಿ ಮರಣ ಹೊಂದುವದರೊಂದಿಗೆ ಬಹಮನಿ ಆಡಳಿತ ಕೊನೆಗೊಂಡಿತು. ಈಗ ಆ ಸಾಮ್ರಾಜ್ಯವು ವಿಜಯಪುರದ ಆದಿಲ್‌ಶಾಹಿ, ಗೋಲ್ಕಂಡದ ಕುತ್ಬ್ ಷಾಹಿ, ಅಹಮದ್ ನಗರದ ನಿಜಾಂ ಷಾಹಿ, ಬೀದರಿನ ಬರೀದ್ ಷಾಹಿ ಹಾಗೂ ಬೇರಾರಿನ ಇಮಾದ್ ಷಾಹಿ ಎಂಬ ಐದು ಸ್ವತಂತ್ರ ಅಧಿಪತ್ಯಗಳಾಗಿ ಬೇರ್ಪಟ್ಟಿತು. ತಾರೀಖ-ಎ-ಫರಿಶ್ತಾ ಹೇಳುವ ಹಾಗೆ ಬಹಮನಿ ರಾಜನೆತನದ ತಳಹದಿಯು ದುರ್ಬಲವಾಗುತ್ತ ಸಾಗಿದಾಗ, ರಾಜ್ಯದ ಸುಬೇದಾರರು ತಮ್ಮ ತಮ್ಮ ಆಡಳಿತವನ್ನು ತಮ್ಮ ಪ್ರಭುತ್ವಕ್ಕೆ ತೆಗೆದುಕೊಳ್ಳಲು ಮುಂದಾಗತೊಡಗಿ, ಅದೇ ಸ್ಥಳಗಳಲ್ಲಿ ಸ್ವತಂತ್ರ ರಾಜರಾಗತೊಡಗಿದರು. ಈ ಸ್ಥಿತಿಯಿಂದಾಗಿ ದಖ್ಖನಿನಲ್ಲಿ ಹನ್ನೊಂದು ಸ್ವತಂತ್ರ ರಾಜರು ಹುಟ್ಟಿಕೊಂಡರು. ಅವುಗಳೆಂದರೆ

೧. ಯೂಸುಫ್ ಆದಿಲ್‌ಖಾನ, ಬಿಜಾಪುರ

೨. ಅಹಮದ್ ನಿಜಾಮುಲ್ ಮುಲ್ಕ್, ಖೇರ

೩. ಫತೇವುಲ್ಲಾ ಇಮಾದುಲ್ ಮುಲ್ಕ, ಬೆರಾರ

೪. ಖುತ್ಬುಲ್ ಮುಲ್ಕ ಹಮ್ದಾನಿ, ತೆಲಂಗಾಣ

೫. ಬಹಾದ್ದೂರ ಗಿಲಾನಿಯು ಬಿಜಾಪುರದ ಘೋರನದಿಯ ತಟದ ಅಂಚಿನವರೆಗೆ ಪ್ರಸಿದ್ಧಿ ಪಡೆದ ಪ್ರದೇಶಗಳಾದ ಮಿರಜ್-ಕಲ್ಹಾರಗಳನ್ನು ವಶಪಡಿಸಿಕೊಂಡಿದ್ದನು. ಪನಾಲಾ ಮತ್ತು ಗೋವಾ ಮುಂತಾದ ಬಲಿಷ್ಠ ಕೋಟೆಗಳ ಒಡೆತನ ಪಡೆದಿದ್ದನು. ಗಿಲಾನಿಯ ಮರಣದ ನಂತರ ಅವನ ಮಗನಾದ ಮಲಿಕ್ ಇಲಿಯಾಸ್‌ನ ಆತನ ಮರಣದ ನಂತರ ಮಹಮದ್ ಬಿನ್ ಇಲಿಯಾಸ ಈ ಪ್ರದೇಶಗಳ ರಾಜರಾದರು.

೬. ದಸ್ತೂರ ದಿನಾರನು ದಕ್ಷಿಣ ದಿಕ್ಕಿಗೆ ಭನಿವಾರ ಎಂಬ ಹಳ್ಳದ ಬಳಿ ವಾಸಸ್ಥಾನ ಮಾಡಿಕೊಂಡು ಬೀದರದ ನಡುವಿನ ಪ್ರದೇಶಗಳಾದ ಗುಂಜೋಟಿ, ಆಳಂದ ಮತ್ತು ಹುಸ್ನಾಬಾದ ಗುಲಬರ್ಗಾಗಳ ಮೇಲೆ ಒಡೆತನದ ಹಿಡಿತವನ್ನಿಟ್ಟು ಕೊಂಡಿದ್ದನು.

೭. ಖ್ವಾಜಾ ಜಹಾನ ದಖ್ಖನಿಯು ಪರಿಂಡಾ ಮತ್ತು ಸೋಲಾಪುರದ ಕೋಟೆಗಳಿರುವ ಪ್ರದೇಶ ಮತ್ತು ಗ್ರಾಮಗಳ ಮೇಲೆ ಒಡೆತನ ಸಾಧಿಸಿದ್ದನು.

೮. ಜೈನುದ್ಧೀನ ಅಲಿನಾಸನು ಪೂನಾ, ವಾಕಿಯಾ, ಮಚಾವಕೊಂಡ ಮತ್ತು ಖಿಲಾವಂದ್ರ ರಾಜಪುರಿಗಳ ರಾಜನಾಗಿದ್ದನು.

೯. ಮಲಿಕ್ ವಜೀಹ, ಮಲಿಕ್ ಅಶರಫರು ಒಡಹುಟ್ಟಿದ ಸೋದರರು, ಇವರು ದೌಲತಾಬಾದಿನ ಕೋಟೆಯನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಸಂಭಾಳಿಸುತ್ತಿದ್ದರು.

೧೦. ಖುದಾವಂದ ಖಾನ ಹಬಶಿಯು ಬೆರಾರನಲ್ಲಿಯ ಫತೇವುಲ್ಲಾ ಇಮಾದಿಯ ವೈರಿಯಾಗಿದ್ದನು. ರೆಲ್ಹೆರ್ ಮತ್ತು ಮಾಲೇವರ್ ಕೋಟೆಗಳ ರಾಜನಾಗಿದ್ದನು.

೧೧. ಖಾಸಿಂ ಬರೀದ ತುರ್ಕನು ಬೀದರನ್ನು ವಶವಾಗಿಟ್ಟುಕೊಂಡು ಬೀದರ ರಾಜಧಾನಿಯಲ್ಲಿ ರಾಜನಾದನು.[೫೫]

**ಕೊನೆ ಟಿಪ್ಪಣಿಗಳು.**

೧. ಕೃಷ್ಣ ಕೊಲ್ಹಾರಕುಲಕರ್ಣಿ ಮತ್ತು ಮಹಬೂಬುರ್ ರಹಮಾನ್ ಮದನಿ(ಅನು.), ೨೦೧೪, ಗುಲದಸ್ತಾಯೆ ಬಿಜಾಪುರ, ಪು.೧೦೭

೨. ಷೇಕ್ ಅಲಿ ಬಿ. (ಪ್ರ.ಸಂ.), ೧೯೯೭, ಕರ್ನಾಟಕ ಚರಿತ್ರೆ, ಸಂ.೦೪, ಪು.೬೬

೩. ಕೃಷ್ಣ ಕೊಲ್ಹಾರಕುಲಕರ್ಣಿ ಮತ್ತು ಮಹಬೂಬುರ್ ರಹಮಾನ್ ಮದನಿ(ಅನು.), ೨೦೧೪, ಪೂರ್ವೋಕ್ತ ಪು.೧೦೮

೪. ವಸಂತ ಕುಷ್ಟಗಿ ಮತ್ತು ಇತರರು (ಅನು.), ೨೦೧೪, ತಾರೀಖ–ಎ–ಫರಿಶ್ತಾ, ಸಂ.೦೩, ಪು.೪–೬

೫. ವಸಂತ ಕುಷ್ಟಗಿ ಮತ್ತು ಇತರರು (ಅನು.), ೨೦೧೪, ಪೂರ್ವೋಕ್ತ, ಪು.೦೭

೬. ಕೃಷ್ಣ ಕೊಲ್ಹಾರಕುಲಕರ್ಣಿ(ಅನು.), ೨೦೧೪, ಬಸಾತೀನೆ ಸಲಾತೀನ, ಪು.೦೫

೭. ಅದೇ., ಪು.೦೫

೮. ವಸಂತ ಕುಷ್ಟಗಿ ಮತ್ತು ಇತರರು (ಅನು.), ೨೦೧೪, ಪೂರ್ವೋಕ್ತ, ಪು.೮

೯. ಕೃಷ್ಣ ಕೊಲ್ಹಾರಕುಲಕರ್ಣಿ ಮತ್ತು ಮಹಬೂಬುರ್ ರಹಮಾನ್ ಮದನಿ(ಅನು.), ೨೦೧೪, ಪೂರ್ವೋಕ್ತ, ಪು.೧೧೦–೧೧೧

೧೦.ಅದೇ., ಪು.೧೧೧–೧೧೨

೧೧.ಅದೇ., ಪು.೧೧೧–೧೧೨

೧೨. ವಸಂತ ಕುಷ್ಟಗಿ ಮತ್ತು ಇತರರು (ಅನು.), ೨೦೧೪, ಪೂರ್ವೋಕ್ತ, ಪು.೮–೯

೧೩. ಕೃಷ್ಣ ಕೊಲ್ಹಾರಕುಲಕರ್ಣಿ(ಅನು.), ೨೦೧೪, ಬಸಾತೀನೆ ಸಲಾತೀನ, ಪು.೫ ರಿಂದ ೭, ಮತ್ತು ಫಕೀರ್ ಮುಹಮ್ಮದ್ ಕಟ್ಪಾಡಿ(ಅನು.), ೨೦೧೫, ತಝ್ಕಿರತುಲ್ ಮುಲೂಕ್, ಪು.೨೯ ರಿಂದ ೩೩.

೧೪. ಅದೇ., ಪು.೫ ರಿಂದ ೭ ಮತ್ತು ಅದೇ., ಪು.೨೯ ರಿಂದ ೩೩

೧೫. ಅದೇ., ಪು.೫ ರಿಂದ ೭ ಮತ್ತು ಅದೇ., ಪು.೨೯ ರಿಂದ ೩೩

೧೬. ಅದೇ., ಪು.೫ ರಿಂದ ೭ ಮತ್ತು ಅದೇ., ಪು.೨೯ ರಿಂದ ೩೩

೧೭. ಫಕೀರ್ ಮುಹಮ್ಮದ್ ಕಟ್ಪಾಡಿ(ಅನು.), ೨೦೧೫, ತಝ್ಕಿರತುಲ್ ಮುಲೂಕ್, ಪು.೩೨

೧೮. ಅದೇ., ಪು.೩೪–೩೬

೧೯. ಅದೇ., ಪು.೩೪–೩೬

೨೦. ಅದೇ., ಪು.೩೪–೩೬

೨೧. ಕೃಷ್ಣ ಕೊಲ್ಹಾರ ಕುಲಕರ್ಣಿ ಮತ್ತು ಮಹಬೂಬುರ್ ರಹಮಾನ್ ಮದನಿ (ಅನು.), ೨೦೧೪, ಗುಲದಸ್ತಾಯೆ ಬಿಜಾಪುರ,ಪು. ೧೧೪–೧೧೫ ಮತ್ತು ತಾರೀಖೆ ಹಪ್ತಕುರ್ಸಿ,ಪು.೧೯೯–೨೦೦

೨೨. ಕೃಷ್ಣ ಕೊಲ್ಹಾರಕುಲಕರ್ಣಿ(ಅನು.), ೨೦೧೪, ಬಸಾತೀನೆ ಸಲಾತೀನ, ಪು.೧೪

೨೩. ಅದೇ., ಪು.೧೧೪

೨೪. ಕೃಷ್ಣ ಕೊಲ್ಹಾರಕುಲಕರ್ಣಿ ಮತ್ತು ಮಹಬೂಬುರ್ ರಹಮಾನ್ ಮದನಿ(ಅನು.), ೨೦೧೪, ಗುಲದಸ್ತಾಯೆ ಬಿಜಾಪುರ, ಪು. ೧೧೪–೧೧೫ ಮತ್ತು ತಾರೀಖೆ ಹಪ್ತಕುರ್ಸಿ, ಪು.೧೯೯–೨೦೦

೨೫. ಕೃಷ್ಣ ಕೊಲ್ಹಾರಕುಲಕರ್ಣಿ ಮತ್ತು ಮಹಬೂಬುರ್ ರಹಮಾನ್ ಮದನಿ(ಅನು.), ೨೦೧೪, ಗುಲದಸ್ತಾಯೆ ಬಿಜಾಪುರ, ಪು.೧೧೪

೨೬. ಅದೇ., ಪು.೧೧೪

೨೭. ಕೃಷ್ಣ ಕೊಲ್ಹಾರಕುಲಕರ್ಣಿ(ಅನು.), ೨೦೧೪, ಬಸಾತೀನೆ ಸಲಾತೀನ, ಪು.೧೪–೧೫
೨೮. ಅದೇ., ಪು.೧೫
೨೯. ಅದೇ., ಪು.೧೫
೩೦. ಅದೇ., ಪು.೧೫
೩೧. ಅದೇ., ಪು.೧೫
೩೨. ಅದೇ., ಪು.೧೧೪–೧೧೫
೩೩. ಕೃಷ್ಣ ಕೊಲ್ಹಾರಕುಲಕರ್ಣಿ ಮತ್ತು ಮಹಬೂಬುರ್ ರಹಮಾನ್ ಮದನಿ(ಅನು.), ೨೦೧೪, ತಾರೀಖೆ
ಹಪ್ತಕುರ್ಸಿ ಪು.೨೦೨
೩೪. ಕೃಷ್ಣ ಕೊಲ್ಹಾರಕುಲಕರ್ಣಿ(ಅನು.), ೨೦೧೪, ಬಸಾತೀನೆ ಸಲಾತೀನ, ಪು. ೧೧೪–೧೧೫
೩೫. ಅದೇ., ಪು. ೧೧೧–೧೧೨
೩೬. ಹಸನ್ ನಯೀಮ್ ಸುರಕೋಡ ಮತ್ತು ಎಂ.ಎನ್. ನದಾಫ (ಅನು.), ೨೦೧೪, ತಾರೀಖ–
ಎ–ಫರಿಶ್ತಾ, ಸಂ.೦೨, ಪು.೬೮೩
೩೭. ಅದೇ., ಪು.೬೬೭–೬೭೦
೩೮. ಫಕೀರ್ ಮುಹಮ್ಮದ್ ಕಟ್ಪಾಡಿ(ಅನು.), ೨೦೧೫, ತಝ್ಕೀರತುಲ್ ಮುಲೂಕ್, ಪು.೩೬
೩೯.ಹಸನ್ ನಯೀಮ್ ಸುರಕೋಡ ಮತ್ತು ಎಂ.ಎನ್. ನದಾಫ (ಅನು.), ೨೦೧೪, ಪೂರ್ವೋಕ್ತ, ಪು.೨೦೦
೪೦. ಅದೇ., ಪು.೨೦೦
೪೧. ಅದೇ., ಪು.೨೦೦–೨೦೧
೪೨. ಅದೇ., ಪು.೨೦೧
೪೩. ಕೃಷ್ಣ ಕೊಲ್ಹಾರಕುಲಕರ್ಣಿ ಮತ್ತು ಮಹಬೂಬುರ್ ರಹಮಾನ್ ಮದನಿ(ಅನು.), ೨೦೧೪,
ಗುಲದಸ್ತಾಯೆ ಬಿಜಾಪುರ, ಪು.೧೧೫
೪೪. ಕೃಷ್ಣ ಕೊಲ್ಹಾರಕುಲಕರ್ಣಿ ಮತ್ತು ಮಹಬೂಬುರ್ ರಹಮಾನ ಮದನಿ(ಅನು.), ೨೦೧೪, ತಾರೀಖೆ
ಹಪ್ತಕುರ್ಸಿ, ಪು.೨೦೨
೪೫. ಅದೇ., ಪು.೨೦೨
೪೬. ಫಕೀರ್ ಮುಹಮ್ಮದ್ ಕಟ್ಪಾಡಿ(ಅನು.), ೨೦೧೫, ತಝ್ಕೀರತುಲ್ ಮುಲೂಕ್, ಪು.೪೧–೪೨
೪೭. ಷೇಕ್ ಅಲಿ ಬಿ. (ಪ್ರ.ಸಂ.), ೧೯೯೭, ಕರ್ನಾಟಕ ಚರಿತ್ರೆ, ಸಂ.೪, ಪು.೬೬
೪೮. ಕೃಷ್ಣ ಕೊಲ್ಹಾರಕುಲಕರ್ಣಿ ಮತ್ತು ಮಹಬೂಬುರ್ ರಹಮಾನ ಮದನಿ(ಅನು.), ೨೦೧೪,
ಗುಲದಸ್ತಾಯೆ ಬಿಜಾಪುರ, ಪು.೧೧೫
೪೯. ಮುನಿಸ್ವಾಮಿ ಆರ್.(ಮು.ಸಂ.), ೧೯೯೯, ವಿಜಾಪುರ ಜಿಲ್ಲಾ ಗ್ಯಾಸೆಟಿಯರ್, ಪು.೧೨೪
೫೦. ಕೃಷ್ಣ ಕೊಲ್ಹಾರಕುಲಕರ್ಣಿ ಮತ್ತು ಮಹಬೂಬುರ್ ರಹಮಾನ ಮದನಿ(ಅನು.), ೨೦೧೪,
ಗುಲದಸ್ತಾಯೆ ಬಿಜಾಪುರ, ಪು.೧೧೫
೫೧. ವಸಂತ ಕುಷ್ಟಗಿ ಮತ್ತು ಇತರರು (ಅನು.), ೨೦೧೪, ತಾರೀಖ–ಎ–ಫರಿಶ್ತಾ, ಸಂ.೦೩, ಪು.೧೧
೫೨. ಅದೇ., ಪು.೧೨
೫೩. ಅದೇ., ಸಂ.೧೧, ಪು.೪೦೮
೫೪. ಅದೇ., ಸಂ.೧೧, ಪು. ೪೦೮
೫೫. ಆಸಾಸಂ.೦೩., ತಾರೀಖ–ಎ–ಫರಿಶ್ತಾ (ಭಾಗ–೩) ಪು.೩೦–೩೧.



# ರಾಷ್ಟ್ರೀಯ ಭಾವೈಕ್ಯತೆ ಮೂಡಿಸಿದ ಕಲ್ಯಾಣ ಕರ್ನಾಟಕದ ಶ್ರೀ ಶರಣಬಸವೇಶ್ವರರು.

**–ಶ್ರೀಮತಿ ಅನ್ನಪೂರ್ಣ ವಿ. ಪಾಟೀಲ,**
ಸಂಶೋಧನಾ ವಿದ್ಯಾರ್ಥಿನಿ, ಮಹಿಳಾ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲ್ಯಾಣ ಕರ್ನಾಟಕ ಎಂಬ ಹೆಸರು ಚಾಲುಕ್ಯರಿಂದ (ಕಲ್ಯಾಣಿ ಚಾಲುಕ್ಯರು) ಬಂದಿದೆ. ಅದು ಆಗಿನ ಕಾಲದಲ್ಲಿ ಶರಣ ಚಳುವಳಿ ಹಾಗೂ ವಚನ ಸಾಹಿತ್ಯ ರಚನೆಯ ಕೇಂದ್ರಬಿಂದು ಆಗಿತು. ಈ ಪ್ರಾಂತ್ಯದ ಅತಿ ದೊಡ್ಡ ಊರು ಗುಲ್ಬರ್ಗ, (ಗುಲ್ಬರ್ಗ ಕರ್ನಾಟಕದ ೫ನೇ ಅತಿ ದೊಡ್ಡ ಊರು). ಗುಲ್ಬರ್ಗ ಎಂದು ಊರು ಬಂದಾಗ ಶರಣಬಸವೇಶ್ವರ ಕೊಡುಗೆ ಅಪಾರ, ದೈವತತ್ವದಾಗಲಿ, ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಹೀಗೆ ಅನೇಕ ಕ್ಷೇತ್ರಗಳಲ್ಲಿ ಅವರು ತಮ್ಮ ಉನ್ನತ ವಿಚಾರಗಳನ್ನು ಇತರ ಸಾಮಾನ್ಯ ಜನರೊಂದಿಗೆ ಹಂಚಿಕೊಳ್ಳುತ್ತಿದ್ದರು. ಕೇವಲ ತಮ್ಮ ಕುಟುಂಬದ ಹಿತವನ್ನೇ ಒಳ್ಳೆಯದನ್ನೇ ಬಯಸದೇ ಇಡೀ ವಿಶ್ವ ಕುಟುಂಬ ದೃಷ್ಟಿಯಿಂದ ಜೀವಿಸುವಂತಹ ಮಹಾನ ವ್ಯಕ್ತಿಯಾಗಿದ್ದು ಧಾರ್ಮಿಕ ಮಹಾಪುರುಷರಷ್ಟೇ ಆಗದೆ ಅವರು ತಮ್ಮ ಧರ್ಮದೊಂದಿಗೆ ಸಮಾಜ, ಸಮಾಜದೊಂದಿಗೆ ರಾಷ್ಟ್ರದ ಪ್ರಗತಿಗೆ ಪೂರಕರಾದರು, ಅಂದಿನ ಕಾಲದಲ್ಲಿ 'ರಾಷ್ಟ್ರೀಯ ಭಾವೈಕ್ಯತೆಯನ್ನು' ಸಾಧಿಸಿದರು.

ಅಂದಿನ ಶರಣಬಸವರ ಕಾಲದಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಬೆಳೆಸುವುದು ತುಂಬಾ ಕಷ್ಟವಾಗಿತು. ಹಾಗೆಯೇ ಅವಶ್ಯಕವು ಆಗಿತು. ಕಾಲವು ಬದಲಾಗಿದೆ. ಆಗಿದ್ದಕ್ಕೂ ಈಗಿನದಕ್ಕೂ ಬಹಳ ವ್ಯತ್ಯಾಸವಿದೆ. ಇಂದು ಆಧುನಿಕಯುಗ, ವೈಜ್ಞಾನಿಕ ತಂತ್ರಜ್ಞಾನಗಳ ಯುಗ, ಎಲ್ಲರೂ ಸುಶಿಕ್ಷಿತರಾಗಿದ್ದಾರೆ. ಹೆಚ್ಚು ಹೆಚ್ಚು ಸಂಶೋಧನೆಗಳು ನಡೆಯುತ್ತಿವೆ. ಎಲ್ಲಿ ಜನರು ಅಕ್ಷರಸ್ಥರಾಗುತಿದ್ದಾರೋ ಅಲ್ಲಿ ರಾಷ್ಟ್ರೀಯ ಭಾವೈಕ್ಯ ಎನ್ನುವ ಮಾತು ಕೇಳುತ್ತಿಲ್ಲ. ಮನುಷ್ಯ ವೈಜ್ಞಾನಿಕ ಚಿಂತನೆಯಲ್ಲಿಯೇ ಮುಂದುವರಿಯುತ್ತಿದ್ದಾನೆಯೇ ಹೊರತು ಅವನಲ್ಲಿ ಪರಾರ್ಥಕ್ಕಿಂತಲೂ ಸ್ವಾರ್ಥದ ಬೆನ್ನು ಹತ್ತಿ ರಾಷ್ಟ್ರೀಯ ಪ್ರಗತಿಯನ್ನು ಮರೆತಿದ್ದಾನೆ. ಪ್ರಗತಿಯೊಬ್ಬರು ತನ್ನ ನಾಡು–ನುಡಿಯ ಬಗ್ಗೆ ವೇಷ ಭೂಷಣದ ಬಗ್ಗೆ ಅಭಿಮಾನವಿರಬೇಕು. ಯಾವುದೇ ಆಸೆ–ಆಮಿಷಗಳಿಗೆ ಒಳಗಾಗದೇ ತನ್ನ ತನವನ್ನು ಬಿಡಬಾರದು. ಸ್ವಾಭಿಮಾನದಿಂದ ಬದುಕನ್ನು ಕಲಿಯಬೇಕು, ಯಾರು ತಮ್ಮ ಮಾತೃಭೂಮಿ, ಮಾತೃಭಾಷೆ ಹಾಗೂ ಉಡುಗೆ ತೊಡುಗೆಯ ಬಗ್ಗೆ ಹೆಮ್ಮೆ ಪಾಡುತ್ತಾರೋ ಅವರು ನಿಶ್ಚಿತವಾಗಿಯೂ ರಾಷ್ಟ್ರೀಯ ಭಾವೈಕ್ಯತೆಗೆ ಗೌರವಕ್ಕೆ ಪಾತ್ರರಾಗುತ್ತಾರೆ.

ಇವುಗಳ ಮಧ್ಯಯೇ ಪ್ರಶ್ನೆ ಏಳುತ್ತದೆ. ಊರು–ಕೇರಿಗಳ ಮಧ್ಯ ಭೇದ, ಭಾಷೆ–ಭಾಷೆಗಳ ನಡುವೆ ಹೋರಾಟ ಧರ್ಮ–ಧರ್ಮಗಳ ನಡುವೆ ಕಿಚ್ಚಾಟ, ಇವೆಲ್ಲವುಗಳಿಗೆ ಯಾರು ಜವಾಬ್ದಾರರು? ಇವುಗಳ ಮಧ್ಯ ರಾಷ್ಟ್ರೀಯ ಭಾವೈಕ್ಯತೆ ಹೇಗೆ ತಾನೇ ಮಾಡುತ್ತದೆ. ಇಲ್ಲಿ ಪ್ರತಿಯೊಬ್ಬ ಪ್ರಜೆಯ ಕರ್ತವ್ಯ ಗಂಭೀರವಾಗಿ, ಆತ್ಮಸಾಕ್ಷಿಯಾಗಿ ಹೇಳಬೇಕು. ರಾಷ್ಟ್ರೀಯ ಭಾವೈಕ್ಯತೆ ಕೇವಲ ವೇದಿಕೆಯ ಮೇಲೆ ನಿಂತು ಗಂಟೆಗಟ್ಟಲೆ ಮಾತನಾಡವುದರ ಪ್ರಯೋಜನವಿಲ್ಲ. ಪ್ರಚಾರ ಗಿಟ್ಟಿಸಲು, ಅಪಟ್ಟ ಭಕ್ತನೆನಿಸಿಕೊಳ್ಳಲು, ಮಾಡುವ ಆಡಂಬರವಲ್ಲ. ಇದು ಸ್ವಚ್ಛ, ನಿರ್ಮಲ, ಶಾಂತ, ಮನಸ್ಸಿನಿಂಧ, ಗೌರವದಿಂದ ಬೆಳೆಸುವ ಭಾವನೆಯಾಗಿದೆ. ಈ ಸತ್ಯವನ್ನು ಪ್ರತಿಯೊಬ್ಬರ ಮನದಲ್ಲಿ ಮೂಡಿಸುವುದಕ್ಕಾಗಿ ಮಹಾತ್ಮರು ನಾಡಿನಲ್ಲಿ ಈ ದೇಶದಲ್ಲಿ ಜನ್ಮ ತಾಳುತಲೇ ಬಂದಿದ್ದಾರೆ. ಪ್ರತಿಯೊಬ್ಬರು ರಾಷ್ಟ್ರೀಯ ಭಾವೈಕ್ಯತೆ 'ವಿಶ್ವಕುಟುಂಬ ತತ್ವ' ಎಚ್ಚರಗೊಳಿಸುತ್ತಲೇ ಬಂದಿದ್ದಾರೆ. ಅಂಥವರ ಸಾಲಿನಲ್ಲಿಯೆ ಶರಣಬಸವರನ್ನು ಕಾಣಬಹುದಾಗಿದೆ.

ಅಂದಿನ ಶರಣಬಸವೇಶ್ವರರ ಕಾಲದಲ್ಲಿ, ಧಾರ್ಮಿಕ, ಆಡಳಿತ, ಸಾಮಾಜಿಕ, ಆರ್ಥಿಕ, ಪರಿಸರದ ಇತ್ಯಾದಿ ಕ್ಷೇತ್ರಗಳಲ್ಲಿ ನೋಡಿದಾಗ ವ್ಯವಸ್ಥೆಗಳಲ್ಲಿ ಬಹಳ ಸಂಕೀರ್ಣತೆಯನ್ನು ಕಾಣುತ್ತೇವೆ. ಆಳುವವರು ಪ್ರತ್ಯೇಕ್ಷ ದೇವರಾಗಿ ಕಾಣುತ್ತಿದ್ದರು ಹೇಳಿದ ವ್ಯಾಕವೇ ವೇದವಾಕ್ಯವಾಗುತಿತ್ತು. ಯಾರು ಕೂಡ ವಿರೋಧವಾಗಿ ಮಾತನಾಡುತ್ತಿರಲಿಲ್ಲ. ಒಂದೇ ವೇಳೆ ಮಾತನಾಡಿದರೆ, ಶಿಕ್ಷೆ ಕಟ್ಟಿಟಬುತ್ತಿ ಇರುತಿತ್ತು.

ಹೀಗಾಗಿ ಜನರಿಗೆ ತಮ್ಮದೇ ಆದ ಯಾವ ಸ್ವಾತಂತ್ರ್ಯವು ಇರುತ್ತಿರಲಿಲ್ಲ. ಜಾತಿ–ಮತ–ಪಂಥ–ಪಂಗಡಗಳ ಮಧ್ಯ ದ್ವೇಷ–ಅಸುಯೇಗಳಿದ್ದರೇ ಅಂತಹ ಸಣ್ಣ ಪುಟ್ಟ ಭಿನ್ನಾಭಿಪ್ರಾಯಗಳನ್ನು ಕಂಡರೇ ಅಂಥವರನ್ನು ಶರಣಬಸವೇಶ್ವರರು ಕರೆಯಿಸಿ, ಬುದ್ದಿ ಮಾತುಗಳು ಹೇಳುತ್ತಿದ್ದರು. ನಿಮ್ಮನ್ನು ನೀವು ಗುರುತಿಸಿಕೋಳ್ಳಬೇಕಾದರೆ ಯಾವುದೇ ಜಾತಿ ಬೇಡ, ನೀಮ ಸರಳತೆ, ಸಜ್ಜನಿಕೆ, ಸದ್ಗುಣ, ಆಚಾರ–ವಿಚಾರಗಳಿಂದ ದೊಡ್ಡವರಾಗಬೇಕಾದರೆ ಬಸವಣ್ಣನವರ ಮಾರ್ಗದರ್ಶನದಲ್ಲಿ ನಡೆಯಿರಿ. ಇದರಿಂದ ನಿಮ್ಮ ಘನತೆ ಹೆಚ್ಚುತ್ತದೆ ಹೊರತು ಜಾತಿಗಳ ನಡುವೆ ತಿಕ್ಕಾಟ ಬೇಡ ಎಂದು ಹೇಳುತ್ತಿದ್ದರು.

ಜನಾಂಗ ಜನಾಂಗ ನಡುವೆ ದ್ವೇಷಭಾವನೆ ಅಂದಿನ ದಿನಗಳಲ್ಲಿ ಎದ್ದು ಕಾಣುತಿತ್ತು. ಮುಸ್ಲಿಂ ಆದವನ್ನು ಹಿಂದುಗಳ ಮೇಲೆ, ಹಿಂದುಗಳು ತಮ್ಮ ತಮ್ಮಲ್ಲಿಯೇ ಬ್ರಾಹ್ಮಣರು–ವೀರಶೈವ ಲಿಂಗಾಯವ ಜನಾಂಗಗಳ ವೈರತ್ವವನ್ನು ಸಾಧಿಸುತ್ತಿದ್ದರು. ಈ ಪ್ರದೇಶದಲ್ಲಿ ಹೈದ್ರಾಬಾದ ಕರ್ನಾಟಕ ನಿಜಾಮನ ಕಾಲದಲ್ಲಿ ಆಳಿದ ಭಾಗವಾಗಿದ್ದರಿಂದ ಮುಸ್ಲಿಂ ಸಂಖ್ಯೆ ಹೆಚ್ಚು ಹೀಗಾಗಿ ಜನಾಂಗ ಜನಾಂಗ ನಡುವೆ ವೈಷ್ಯಮ ಕಂಡು ಬರುತ್ತಿತ್ತು. ಆದರೆ ಶರಣಬಸವೇಶ್ವರರು ತಮ್ಮ ಸಹನ ಶೀಲ, ತಾಳ್ಮೆ, ವಿಚಾರಗಳಿಂದ ಅವರೆಲ್ಲರನ್ನು ಒಂದುಗೂಡಿಸುತ್ತಿದ್ದರು.

ಬಡವ–ಶ್ರೀಮಂತರ ನಡುವೆ ಇರುವ ಅಂತರವನ್ನೆ ಶರಣಬಸವೇಶ್ವರರು ಹಲವಾರು ಘಟನೆಗಳಿಂದ ನಿವಾರಣೆ ಮಾಡಲು ಹೊರಟ್ಟರು. ಅವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಭಕ್ತಿ ಮಾರ್ಗದಲ್ಲಿ ಯಾರೋ ಬಂದರು ಎಲ್ಲರೂ ಒಂದೇ ಎಂಬ ಭಾವನೆಯಿಂದ ನೋಡುತ್ತಿದ್ದರು. ಎಲ್ಲರೂ ಶರಣಬಸವರಿಂದ ತಮಗೆ ಬೇಕಾದದ್ದನ್ನು ಪೂರೈಸಿಕೊಳ್ಳುತ್ತಿದ್ದರು. ಬಡವ, ಶ್ರೀಮಂತರು ಎನ್ನದೇ ತನ್ನಲ್ಲಿ ಬಂಧ ಭಕ್ತರ ಬೇಡಿಕೆಯನ್ನು ಪೂರೈಸುತ್ತಿದ್ದರು. ಎಲ್ಲರು, ದಾಸೋಹದ ಮೂಲಕ ಕಾಣಿಕೆಯನ್ನು ಅರ್ಪಿಸುವದಾಗಿತ್ತು. ಅಪ್ಪು–ಇಷ್ಟ ಎಂದು ಭೇದ–ಭಾವ ಮಾಡದೇ ಕಾಣಿಕೆಯನ್ನು ಕೋಡುತ್ತಿದ್ದರು. ಎಲ್ಲರು ಒಂದೇ ಎಂದು ಪರಿಗಣಿಸುತ್ತಿದ್ದರು.

ಶರಣಬಸವರ ಕಾಲದಲ್ಲಿ ಸ್ತ್ರೀಯರ ಪರಿಸ್ಥಿತಿಯು ಅಷ್ಟು ಉತ್ತಮವಾಗಿರಲಿಲ್ಲ. ಸ್ತ್ರೀ–ಪುರುಷರ ನಡುವೆ ಬಹಳಷ್ಟು ಅಂತರವನ್ನು ನಾವು ಕಾಣುತ್ತೇವೆ. ಸ್ತ್ರೀಗೆ ಕೆಳದರ್ಜೆಯ ಪ್ರಜೆಯೆಂದು ತಿಳಿದು ಅವಳ ಮೆಲೆ ಶೋಷಣೆ, ದೌರ್ಜನ್ಯಗಳು ನಡೆಯುತ್ತಲೆ ಇದ್ದವು. ಮದುವೆಯ ನಂತರವು ಗಂಡನ ದಬ್ಬಾಳಿ, ಅವಳನ್ನು ಮಾನಸಿಕವಾಗಿ ಕುಗ್ಗುವಂತೆ ಮಾಡಿದವು. ಆದರೆ ಶರಣಬಸವರರು ಇಬ್ಬರನ್ನು ಕರೆಯಿಸಿ ಕೌಟುಂಬಿಕ ಬದುಕಿನ ಬಗ್ಗೆ, ಅನ್ಯೋನ್ಯತೆಯ ಬಗ್ಗೆ, ದಾಂಪತ್ಯ ಜೀವನ ಹೇಗೆ ಎಂಬುದನ್ನು ತಿಳಿಸುತ್ತಿದ್ದರು. ಪುರುಷನ ದುರ್ಬಲವಾದ ಮನಸ್ಸು, ಸ್ತ್ರಿಯಲ್ಲಿ ಹೇಗೆ ಮಾನಸಿಕ ಯಾತನೆಯಾಗುತ್ತದೆ ಎಂಬುದನ್ನು ಸರಿಯಾಗಿ ತಿಳಿದ್ದಿದ ಅವರು ಸಮಸ್ಯೆಯನ್ನು ಕ್ಷಣಾರ್ಧದಲ್ಲಿ ನಿವಾರಿಸಿ ಜೀವನದಲ್ಲಿ ಪ್ರೇರಣೆಯನ್ನು ತುಂಬುತ್ತಿದ್ದರು. ಸ್ತ್ರೀ–ಪುರುಷರು ದಾಂಪತ್ಯದಲ್ಲಿ ಒಬ್ಬರನ್ನು ಇನ್ನೊಬ್ಬರು ಗೌರವಿಸಬೇಕು ಎಂದರು.

ಶರಣಬಸವರು ಹಲವಾರು ಧರ್ಮದಲ್ಲಿನ ಒಳಬೇದ ನಿವಾರಣೆಮಾಡುವಲ್ಲಿ ಅವರ ಪಾತ್ರ ದೊಡ್ಡದು, ವೀರಶೈವ ಧರ್ಮದಲ್ಲೂ ಇದ್ದ ವೈಷಮ್ಯ ಭೇದ–ಭಾವಗಳನ್ನು ನಿವಾರಿಸಿದರು. ಗುರುವೃಂದ ಮತ್ತು ಶಿಷ್ಯವೃಂದದ ಬಗ್ಗೆ ಅಸಡ್ಡೆ ಭಾವನೆಯನ್ನು ನಿವಾರಿಸಲು ಸೇತುವೆ ಹಾಗೇ ಕಾರ್ಯವನ್ನೆ ಮಾಡಿದರು.

ರಾಷ್ಟ್ರೀಯ ಭಾವೈಕ್ಯತೆಯನ್ನು ವಿವಿಧ ಜನಾಂಗ ಜನರಲ್ಲಿ ತುಂಬುತ್ತಾ ನಾವೆಲ್ಲರೂ ಒಂದೇ ಎಂಬ ಭಾವನೆಯನ್ನು ತಾಳುತ್ತಾ ಸುಂದರ ಸಮಾಜವನ್ನು ಕಟ್ಟುವ ಕಡೆ ಅವರ ಕೊಡುಗೆ ಅಮೂಲ್ಯವಾದದು.

ಕೊನೆಯದಾಗಿ ಹೇಳುದಾದ್ದರೆ ಶರಣಬಸವರರು ಭೌತಿಕ ದೇಹ ನಮ್ಮೆಂದಿಗಿಲ್ಲವಾದರೂ ಅವರ ವಚನಗಳು, ಆದರ್ಶತೆ, ಪವಾಡ, ಸದೃಶ್ಯಗಳು, ಅವರ ಜೀವನ ಕ್ರಮ ನಮ್ಮೊಂದಿಗೆ 'ಸರ್ವಕಾಲಕ್ಕೂ ಹಾಸು ಹೊಕ್ಕಾಗಿ ಅಮರರಾಗಿದ್ದಾರೆ'. ಅವರು ಹೇಳುವಂತೆ ಭಕ್ತಿಯ ಬೆಳಕನ್ನು ತಮತಮ್ಮ

ಅಂತರಂಗದಲ್ಲಿ ಹರಡಿಕೊಂಡು, ತನ್ಮೂಲಕ ಹೊರಗಡೆ ಬಾಹ್ಯಪ್ರಪಂಚದಲ್ಲಿ ಮೂಢ ಜನತೆಯ ಸಲುವಾಗಿ, ಜನರ ಕಲ್ಯಾಣಕ್ಕಾಗಿ ಜ್ಞಾನದ ಬೆಳಕನ್ನು ಚೆಲ್ಲಾಡಿದರು. ಇಂತಾಹ ತ್ಯಾಗಿ ಲೋಕದಲ್ಲಿ ನಿಜಕ್ಕೂ ಅಪರೂಪದಲ್ಲಿ ಅಪರೂಪ ಎನ್ನಬಹುದು.



# ಶಾಸನಗಳಲ್ಲಿ ರಾಣಿಯರ ಉಲ್ಲೇಖ.

**–ಡಾ. ನಿವೇದಿತಾ ಸ್ವಾಮಿ,**
ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ,
ಸರಕಾರಿ ಪ್ರಥಮ ದರ್ಜೆ ಕಾಲೇಜು
ಕಮಲಾಪುರ, ಜಿ॥ಕಲಬುರಗಿ.

ಕುಟುಂಬವು ಸಮಾಜದ ಒಂದು ಅವಿಭಾಜ್ಯ ಅಂಗ. ಇಂತಹ ಹಲವು ಕುಟುಂಬಗಳು ಸೇರಿ ಸಮುದಾಯವಾಗಿದೆ. ಆದರೆ ಸಮಾಜಗಳಲ್ಲಿರುವುದು ಗಾತ್ರ ವ್ಯತ್ಯಾಸವೇ ಹೊರತು ಗುಣ ವ್ಯತ್ಯಾಸವಲ್ಲ. ಈ ಹಿನ್ನೆಲೆಯಲ್ಲಿ ಕುಟುಂಬದ ಪ್ರಾಮುಖ್ಯತೆ ಪರಸ್ಪರ ಪ್ರೀತಿ, ಪ್ರೇಮದಿಂದ ಕೂಡಿ ಬಾಳುವುದು. ಇಂಥ ಬದುಕಿಗೆ ಮಹಿಳೆ ಸಿದ್ಧಳಾಗಬೇಕಾಗುತ್ತದೆ. ಹೀಗಿರುವಾಗಲೂ ಉನ್ನತ ವರ್ಗದ ಮಹಿಳೆಯರು ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದುಂಟು. ಆದರೂ ಮಹಿಳೆ ಸೀಮಿತ ಪರಿಸರವನ್ನು ಮೀರಿ ಜೀವನದಲ್ಲಿ ಹೆಚ್ಚಿನದನ್ನು ಸಾಧಿಸಬೇಕೆಂಬ ಛಲ ಹೊಂದಿದ್ದಾಳೆ.

ಪುರಾತನ ಕಾಲದಿಂದಲೂ ಕಲಬುರ್ಗಿ ಜಿಲ್ಲೆ ಸಾಂಸ್ಕೃತಿಕ ಪರಂಪರೆಯ ಕೇಂದ್ರವಾಗಿದೆ. ಸಾಮಾಜಿಕ ಜೀವನ ಅರಿಯಬೇಕಾದರೆ ಅಲ್ಲಿನ ಕೌಟುಂಬಿಕ ವೈವಾಹಿಕ, ಜೀವನದ ಅಧ್ಯಯನ ಮಾಡಬೇಕಾಗುತ್ತದೆ ಸಾಮಾಜಿಕ ಜನಜೀವನ ಅವಿಭಕ್ತ ಕುಟುಂಬಗಳು ಮಹತ್ವದ ಪಾತ್ರವಹಿಸುತ್ತವೆ. ಆದರೆ ಇಂತಹ ಕುಟುಂಬಗಳು ಪ್ರಸ್ತುತ ದಿನದಲ್ಲಿ ಮರೆಯಾಗುತ್ತಿರುವುದು ಶೋಚನಿಯ ಸಂಗತಿ ಪುರುಷ ಮತ್ತು ಸ್ತ್ರೀ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ವಿರುದ್ಧವಾಗಿದ್ದರೂ ಪರಸ್ಪರ ಪೂರಕವಾಗಿವೆ. ಸ್ತ್ರೀ ತನ್ನ ಪಾತ್ರವನ್ನು ವಿವಿಧ ರೀತಿಯಲ್ಲಿ ನಿರ್ವಹಿಸುತ್ತಾಳೆ. ತಂದೆಗೆ ಮಗಳಾಗಿ, ಗಂಡನಿಗೆ ಹೆಂಡತಿಯಾಗಿ ಮಗುವಿಗೆ ತಾಯಿಯಾಗಿ, ಸಮಾಜದಲ್ಲಿ ಒಬ್ಬ ಉನ್ನತ ಗೃಹಿಣಿ ಎನಿಸಿಕೊಳ್ಳುತ್ತಾಳೆ. ಅನಾದಿ ಕಾಲದಲ್ಲಿ ಸ್ತ್ರೀಗೆ ಸಮಾಜದಲ್ಲಿ ದೊರೆತ ಅವಕಾಶಗಳು ತೀರ ವಿರಳ ಅವರಿಗೆ ಉನ್ನತ ಸ್ಥಾನ ದೊರಕದೆ ಇದ್ದರೂ, ಸಮಾಜದಲ್ಲಿ ಅವರನ್ನು ತ್ಯಾಜ್ಯವಾಗಿ ಕಂಡ ಯಾವ ಉದಾಹರಣೆಗಳು ಶಾಸನಗಳಲ್ಲಿ ಕಾಣುವುದಿಲ್ಲ. ಭಾರತದ ಹಿನ್ನೆಲೆಯಲ್ಲಿ ಸ್ತ್ರೀ ಸಮಾಜದ ಮೇಲೆ ಬೆಳಕನ್ನು ಚೆಲ್ಲುವ ಗ್ರಮಥಗಳು ಮೂಡಿ ಬಂದಿವೆ ಹೊರತು ಕರ್ನಾಟಕ ಕೇಂದ್ರವಾಗಿಟ್ಟುಕೊಂಡು ಬರೆದ ಕೃತಿಗಳನ್ನು ಹುಟ್ಟಿಕೊಂಡಿದ್ದರೂ ಇವು ಇತಿಹಾಸದ ಹಿನ್ನೆಲೆಯಲ್ಲಿ ಬರೆದ ಸಾಹಿತ್ಯ ಕೃತಿಗಳಾಗಿವೆ. ಹಿಗಾಗಿ ಚಿದಾನಂದ ಮೂರ್ತಿ ಅವರ ಗ್ರಂಥ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನದಲ್ಲಿ ಸ್ತ್ರೀಯರನ್ನು ಕುರಿತು ಚರ್ಚಿಸಿದ್ದಾರೆ.

## ವಿದ್ಯಾಭ್ಯಾಸ:

ಕಳೆದ ಶತಮಾನಗಳಿಂದ ಮಹಿಳೆಯರ ಅಸಾಧಾರಣ ಸಚ್ಚಾರಿತ್ರ್ಯ ಮತ್ತು ಕಲಿತನಗಳ ಬಗೆಗೆ ಸಾಕಷ್ಟು ಉದಾಹರಣೆಗಳಿವೆ. ಇದು ಕರ್ನಾಟಕದ ಸಂಸ್ಕೃತಿಯ ಶ್ರೀಮಂತ ಪರಂಪರೆಗೆ ಸಾಕ್ಷಿಯಾಗಿದೆ. ಅನಾದಿ ಕಾಲದಿಂದಲೂ ಸುಸಂಸ್ಕತ ಸ್ತ್ರೀ ಉನ್ನತ ಸ್ಥಾನ ಹೊಂದಿದ್ದಳು. ಕಲ್ಯಾಣ ಚಾಲುಕ್ಯರ ಸುರಕ್ಷಿತ ಮತ್ತು ಸುಶಿಕ್ಷಿತ ಮಹಿಳೆಯರು ಲೌಕಿಕ ಸುಖ ಸಂತಸಗಳನ್ನು ತೊರೆದು ತಮ್ಮ ದೈವಕುಲಗಳಿಗೆ ಶರಣು ಹೋಗಿ ಮುಕ್ತಿ ಸಾಧಿಸಿದರು. ಉನ್ನತ ವರ್ಗದ ಮಹಿಳೆಯರಲ್ಲಿ ಶಿಕ್ಷಣ ಸಾಮಾನ್ಯ ಸಂಗತಿಯಾಗಿತ್ತು. ಅವರಿಗೆ ಗಣಿತ, ವ್ಯಾಕರಣ, ಕಾವ್ಯ, ಛಂದಸ್ಸು ಮತ್ತು ಕುಶಲ ಕಲೆಗಳಲ್ಲಿ ಶಿಕ್ಷಣ ಕೊಡಲಾಗುತ್ತಿತ್ತು. ರಾಣಿಯರು ಹಾಗೂ ರಾಜಕುಮಾರಿಯರನ್ನು ಶಾಸನಗಳಲ್ಲಿ ಮಹಾ ವಿಧುಷಿಯರು, ಕವಿಗಳ ಮತ್ತು ವಿದ್ವಾಂಸರು ಆಶ್ರಯದಾತರೆಂದು ವರ್ಣಿಸಲಾಗಿದೆ. ಇಛಿಛಿಂಟಿಠಿಟಟುಛಿ ಅಠಿಟಿಜುಣಖುಠಿಛಿ ುಟಿ ¸ಠಣಾಖು ುಟಿಜುಚಿ: ಕ.೪೧೦ ಮಹಿಳೆಯರ ವಿದ್ಯಾಭ್ಯಾಸವು ಶಾಸ್ತ್ರಗಳನ್ನೊಳಗೊಂಡಿದ್ದರೂ ಮುಖ್ಯವಾಗಿ ಕಲೆಗಳ ಕಡೆ ಹೆಚ್ಚು ಒಲವು ಇದ್ದಿತ್ತು. ಇತರ ಸಾಮಾನ್ಯ ವರ್ಗದ ಸ್ತ್ರೀಯರು ಅವಿದ್ಯಾವಂತರಾಗಿದ್ದರು. ಸ್ತ್ರೀಯರಲ್ಲಿ ಕೆಲವರು ದೇವದಾಸಿಯರು, ಗೀತೆ, ನರ್ತನ ಮುಂತಾದ ಕಲೆಗಳಲ್ಲಿ ಪರಿಣಿತರಾಗಿದ್ದರು. ಕ್ರಮೇಣ

ಸ್ತ್ರೀಯರು ವಿದ್ಯಾಭ್ಯಾಸಕ್ಕೆ ಅನರ್ಹರೆಂದು ಅವರು ತಮ್ಮ ಜೀವನದುದ್ದಕ್ಕೂ ನಾಲ್ಕು ಗೋಡೆಗಳ ಮಧ್ಯದಲ್ಲಿಯೇ ಉಳಿಯಬೇಕಾಯಿತು.

ಸಾಮಾನ್ಯ ಮಹಿಳೆಯ ಜೀವನ ಗಂಡ, ಮಕ್ಕಳು ಮನೆಯವರ ಸುಖವೇ ಅವಳ ಮುಖ್ಯ ಗುರಿಯಾಗಿತ್ತು. ಅವಳು ಸ್ವತಂತ್ರವಾಗಿರಲು ಅವಕಾಶ ಇರಲಿಲ್ಲ. ಶ್ರೀಮಂತರು, ರಾಜರ ಹೆಂಡಂದಿರು, ಅವರ ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದರು. ಆದರೆ ಸಾಮಾನ್ಯವಾಗಿ ಪ್ರಾಚೀನ ಕನಾಟಕದ ಶಾಸನಗಳಲ್ಲಿ ಕಂಡುಬರುವ ಯಾವ ಮಹಿಳೆಯೂ ಶಾಸ್ತ್ರಗಳಲ್ಲಿ ಪಾರಂಗತಳಾಗಿರಲಿಲ್ಲ. ಸ್ತ್ರೀಯರು ಕೂಡ ದೊಡ್ಡ ವಿದ್ವಾಂಸರು ಆಗಿದ್ದರು ಎನ್ನುವುದಕ್ಕೆ ಆಧಾರಗಳಿಲ್ಲ. ವಿದ್ಯಾಭ್ಯಾಸ, ನರ್ತನ ಸಂಗೀತ ಮುಂತಾದ ಕಲೆಗಳಿಗೆ ಹೆಚ್ಚು ಪ್ರಾಧಾನ್ಯವಿದ್ದಂತೆ ಸ್ತ್ರೀಯರು ಮುಖ್ಯವಾಗಿ ರಾಣಿ ವಾಸದವರು. ಆಡಳಿತದಲ್ಲಿ ಭಾಗವಹಿಸುತ್ತಿದ್ದರಲ್ಲದೆ. ದಾನ ದತ್ತಿಗಳನ್ನು ನೀಡುತ್ತಿದ್ದರು. ಕಲಬುರಗಿ ಜಿಲ್ಲೆಯ ಶಾಸನಗಳಲ್ಲಿ ಕಂಡುಬರುವ ಸ್ತ್ರೀಯರು ಸಮಾಜದಲ್ಲಿ ತಮ್ಮದೇ ಆದ ಸ್ಥಾನವನ್ನು ಹೊಂದಿದ್ದರು. ಹನ್ನೆರಡನೆಯ ಶತಮಾನದಲ್ಲಿ ವಿದ್ಯಾವಂತರಾದ ಪುರುಷರು ಮೂವತ್ತರಷ್ಟರಾದರೆ, ಸ್ತ್ರೀಯರು ಹತ್ತರಷ್ಟಿತ್ತೆಂದು ಡಾ. ಅಲಟ್ಟಿಕರರು ಊಹಿಸುತ್ತಾರೆ. ಒಟ್ಟಿನಲ್ಲಿ ಅಕ್ಷರ ವಿದ್ಯೆಯಲ್ಲಿ ಸಿಗಲಾರದ ಸ್ಥಾನವನ್ನು ಕೆಲವು ಕಲೆಯಲ್ಲಿ ಮಹಿಳೆಯರು ಪರಿಣಿತರಾಗಿದ್ದರು.

**ಬಹುಪತ್ನಿತ್ವ:**

ಬಹುಪತ್ನಿತ್ವ ಪದ್ಧತಿ ಅನಾದಿ ಕಾಲದಿಂದಲೂ, ಅದರಲ್ಲೂ ರಾಜ ಮನೆತನದಲ್ಲಿ ಹೆಚ್ಚಾಗಿ ಕಾಣುತ್ತೇವೆ. ಇದಕ್ಕೆ ಸಮಾಜದಲ್ಲಿ ಮುನ್ನಣೆ ಇತ್ತು. ಆನ ಸಾಮಾನ್ಯರಲ್ಲಿ ವಿರಳವಾಗಿತ್ತು ರಾಜನ ಪತ್ನಿಯರಲ್ಲಿ ಹಿರಿಯವಳೇ 'ಅಗ್ರಮಹಿಷಿ' ಅಥವಾ 'ಪಿರಿಯರಸಿ' ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನಿಗೆ ೧೬ ಜನ ರಾಣಿಯರು ಅವರಲ್ಲಿ 'ಮಲಯಮತಿ' ಮಹಾದೇವಿಯನ್ನು 'ಪಿರಿಯರಸಿ' ಪಟ್ಟದ ಮಹಾದೇವಿ ಎಂದು ಕರೆಯಲಾಗಿದೆ. (ಖ.ಖ.ಖಫಿಖ;೮೮;೧೦೩೪ ೦.ಆ) ರಾಜನೊಂದಿಗೆ ಸುಖದಿಂದ ಇರುತ್ತಿದ್ದ ಇವರಲ್ಲಿ ಪಿರಿಯರಸಿ ಪಟ್ಟ ಮಹಾದೇವಿ ಇವಳು ರಾಜನ ಜೊತೆಯಲ್ಲಿ ಅರಮನೆಯಲ್ಲಿಯೂ ಇರುತ್ತಿದ್ದಳು. ಇನ್ನುಳಿದ ರಾಣಿಯರನ್ನು ರಾಜಕೀಯದಲ್ಲಿ ತೊಡಗುವಂತೆ ಮಾಡಿ ಅವರಿಗೆ ಕಲೆ ಪ್ರದೇಶಗಳನ್ನು ಆಳ್ವಿಕೆ ಮಾಡಲು ಬಿಟ್ಟು ಕೊಡುತ್ತಿದ್ದನು. ಉದಾಹರಣೆಯಾಗಿ ಹೇಳುವುದಾದರೆ ಪಟ್ಟಮಹಾದೇವಿಯ ಮಲಮತಿದೇವಿ ಅಗ್ರಹಾರ ದಿಗ್ಗಾಂವಿಯ ಮೇಲಾಳ್ವಿಕೆಯನ್ನು (ಕ್ರಿ.ಶ. ೧೧೦೭ರ ಶಾಸನ) ಮಾಡುತ್ತಿದ್ದಳು ಹಾಗೂ ಜಾಕಲದೇವಿ ಇಂಗುಣಿಗೆಯ ಮೇಲಾಳ್ವಿಕೆ ಮಾಡುತ್ತಿದ್ದು, ಆರಲು ೩೦೦ ಈಕೆಯ ಆಡಳಿತಕ್ಕೆ ಒಳಪಟ್ಟಿತ್ತು. (ಕ್ರಿ.ಶ. ೧೮೯೪) ಅಗ್ರಹಾರ ಮತ್ತು ಭತ್ತ ಗ್ರಾಮಗಳನ್ನು ಅವರು ನೋಡಿಕೊಳ್ಳುತ್ತಿದ್ದರು. ಆದರೆ ವಾಸ್ತವವಾಗಿ ರಾಣಿಯರು ವಿಭಾಗಗಳನ್ನು ಆಳುತ್ತಿರಲ್ಲ. ಇವುಗಳನ್ನು ಮಹಾಮಂಡಳೇಶ್ವರರು ನೋಡಿಕೊಳ್ಳುತ್ತಿದ್ದರು.

**ಸ್ತ್ರೀಯರ ಸ್ಥಾನಮಾನ:**

ಕಲಬುರಗಿ ಜಿಲ್ಲೆಯ ಶಾಸನಗಳಲ್ಲಿ ಸ್ತ್ರೀಯರ ಬಗ್ಗೆ ಹೆಚ್ಚಿನ ವಿವರಣೆಗಳು ಕಂಡುಬರುವುದಿಲ್ಲವಾದರೂ, ಶಾತವಾಹನರ ಕಾಲಿಂದಲೂ ಸ್ತ್ರೀಯರ ಸ್ಥಾನಮಾನವನ್ನು ಪರಿಗಣಿಸಿದರೆ ರಾಜರ ಹೆಸರಿನ ಹಿಂದೆ ತಾಯಿ ಹೆಸರು ಇದೆ. ಗೌತಮಿಪುತ್ರ ಶಾತಕರ್ಣಿ ಎಂಬ ಹೆಸರಿನ ಉಲ್ಲೇಖ ನಾಸಿಕ ಶಾಸನ ತಿಳಿಸುತ್ತದೆ. ಅಂದರೆ ಇದರಿಂದ ಸ್ತ್ರೀಯರು ಸಮಾಜದಲ್ಲಿ ಉನ್ನತ ಸ್ಥಾನಪಡೆದಿದ್ದಳು. ಘ್ರಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಚಂದಲದೇವಿ ಅಲ್ಲಂದೆ ೧೦೦೦ ವನ್ನು ಆಳುತ್ತಿದ್ದಳೆಂದು ಹುಣಸಿಹಡಗಲಿ ಕ್ರಿ.ಶ. ೧೮೯೯ರ ಶಾಸನ ತಿಳಿಸುತ್ತದೆ. ಇದುವರೆಗೂ ಸಂಶೋಧಕರು ಆರನೆಯ ವಿಕ್ರಮಾದಿತ್ಯನ ೨೨ ಜನ ರಾಣಿಯರನ್ನು ಗುರುತಿಸಿದ್ದಾರೆ. ಹಾಗೂ ಡಾ. ಚನ್ನಕ್ಕ ಎಲಿಗಾರರು 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ' ಎಂಬ ಗ್ರಂಥದಲ್ಲಿ ಹದಿನಾರು ಜನ ರಾಣಿಯರ ಹೆಸರನ್ನು

ಹೇಳಿದ್ದಾರೆ. ನಂತರ ಇದೇ ಸಂಶೋದನಾ ಕಾರ್ಯಕ್ಕೆ ಕೈ ಹಾಕಿದ ಡಾ.ಜೆ.ಎಂ. ನಾಗಯ್ಯನವರು ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ' ಎಂಬ ಗ್ರಂಥದಲ್ಲಿ ಹತ್ತೊಂಭತ್ತು ಜನ ರಾಣಿಯರನ್ನು ಹೆಸರಿಸಿದ್ದಾರೆ.

**ಚಂದಲದೇವಿ:**

ಡಾ. ಚನ್ನಕ್ಕ ಎಲಿಗಾರ ಅವರು ತಮ್ಮ ಕೃತಿಯಲ್ಲಿ ವಿಕ್ರಮಾದಿತ್ಯ ತನ್ನ ರಾಣಿಯರನ್ನು ಸಾಧ್ಯವಾದಷ್ಟು ದೂರದಲ್ಲಿಟ್ಟು ಸವತಿ ಮತ್ಸರ ತಪ್ಪಿಸುತ್ತಿದ್ದನು ಎಂದಿದ್ದಾರೆ. ಆದರೂ ಕೆಲ ರಾಣಿಯರಲ್ಲಿ ಚಂದಲಾದೇವಿ ಸವತಿ ಶಿರೋವಜ್ರ ಮುಷ್ಠಿ ಎಂಬ ಪ್ರಶಸ್ತಿಯನ್ನು ಹೊಂದಿದ್ದಳು ಎಂಬುವುದು ಸವತಿಯರ ವಿಷಯವಾಗಿ ಇವಳಿಗಿದ್ದ ದರ್ಪ ಸೂಚಿಸುತ್ತದೆ. ರಾಜಕೀಯದತ್ತ ಅವರ ಮನಸ್ಸು ಕೇಂದ್ರಿಕರಿಸಲು ಕೆಲ ಪ್ರದೇಶಗಳನ್ನು ಆಳ್ವಿಕೆ ಮಾಡಲು ನೇಮಿಸಿದನು. ಇದು ಈತನ ರಾಜಕೀಯ ನಿಪುಣತೆ ಎತ್ತಿತೋರಿಸುತ್ತದೆ. ಒಂದರ್ಥದಲ್ಲಿ ಸಾಂಸರಿಕ ನೆಮ್ಮದಿ ಹಾಗೂ ರಾಜಕೀಯ ಭದ್ರತೆಗೆ ಕಾರಣವಾಗಿತ್ತು. ರಾಜ ಅಗ್ರಹಾರಗಳಲ್ಲಿ ನೇಮಿಸಲು ಕಾರಣ ರಾಜಕೀಯ ಭದ್ರತೆಗಿಂತ, ರಾಣಿಯರ ಭದ್ರತೆ ಪ್ರಮುಖ ಕಾರಣವಾಗಿದ್ದಿತ್ತು. ಅಗ್ರಹಾರ ಧಾರ್ಮಿಕ ಹಾಗೂ ರಕ್ಷಣೆಯ ಪ್ರಾಚೀನ ಕೇಂದ್ರಗಳಾಗಿದ್ದವು. ಇಂತಹ ಸ್ಥಳಗಳಲ್ಲಿ ರಾಣಿಯರನ್ನು ಇಡಲಾಗುತ್ತಿತ್ತು. ಇದರಿಂದ ಅರಿಷಡ್ವರ್ಗಗಳನ್ನು ನಿಯಂತ್ರಿಸುವ ಶಕ್ತಿ ಅಗ್ರಹಾರಗಳದ್ದಾಗಿತ್ತು. ಇಲ್ಲಿ ಯಾರೆ ಬಂದರೂ ದಾನದತ್ತಿಗಳನ್ನು ನೀಡುತ್ತಿದ್ದರು. ಇದರಿಂದ ಇವರ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಹೆಚ್ಚಾಗಿ ಭಾಗವಹಿಸಿ ಅಲೌಕಿಕ ಕಡೆಗೆ ಹೆಚ್ಚು ಚಿಂತಿಸುತ್ತಿದ್ದರು. ರಾಣಿಯರು ಅಗ್ರಹಾರದ ಆಡಳಿತ ನೋಡಿಕೊಳ್ಳುತ್ತಿದ್ದರೇ ವಿನಃ ರಾಜಕೀಯದತ್ತ ಮನಸ್ಸು ತೊಡಗಿಸಿ ಕಾರ್ಯೋನ್ಮುಖರಾಗಿ ಮಾಡುವುದಕ್ಕಲ್ಲ.

ಹುಣಸಿಹಡಗಲಿ ಕ್ರಿ.ಶ. ೧೧೯೯ರ ಶಾಸನದಲ್ಲಿ "ಸ್ವಸ್ತ್ಯನವರತ ಪರಮಕಲ್ಯಾಣಭ್ಯುದಯ ಸಹಸಸ್ರಪಳಬೋಗಭಾಗಿನಿ. ದ್ವಿತಿಯಲಕ್ಷ್ಮೀ ಸಮಾನ ಕಲಹಂಸಯಾನೆ. ರಾಯ ಝಳಪ್ಪಕವ್ವಿ ಕುಜಸಮಾಲಿಂಗಿತ ಕಲ್ಪಲತೆ. ಸಾಮಂತ ಸೀಮಂತನೀ ಪರಿವ್ರಿತೆ. ದುಷ್ಟದಪ್ಪಿರ್ಷಠ ಸವತೀ ಶಿರೋವ್ರಜಮುಷ್ಠಿ ದೀನಾನಾಕಥಕ ವೈತಾಳಿಕ ಸುವರ್ಣವ್ರರ್ಷಟ. ವಂದಿ ಚಿಂತಾಮಣಿ ಅಂತಃಪುರ ಚೂಡಾಮಣಿ ಮಲಪವಿದ್ಯಾಧರಿ. ಸಕಳಕಲಾಧರಿ ರಾಯಮನೋಜರಾಜತರಿ. ಅಡಬಳಸರಸ್ವತಿ ನೃತ್ಯವಿದ್ಯಾಧರಿ ಸವತೀಗಜಕೇಸರಿ ಕಲಿಕಾಲಸರಸ್ವತಿ ಶ್ರೀ ತ್ರಿಭುವನಮಲ್ಲದೇವ ವಿಶಾಸಲವರ್ಷತಳ ನಿವಸಿಯರಪ್ಪ ಶ್ರೀಮತ್ಪರಿಯರಸಿ ಚಂದಲದೇವಿಯರು ಎಂದು ಕ್ರಿ.ಶ. ೧೧೯೯ರ ಹುಣಸಿಹಡಗಲಿ ಶಾಸನದಿಂದ ಈಕೆಯ ಪ್ರಶಸ್ತಿಗಳ ಉಲ್ಲೇಖವಿದೆ. ಕರಹಾಡ ಶಿಲಾಹಾರ ರಾಜಕುಮಾರಿ ಚಂದಲದೇವಿ ಯಾವ ದಾಖಲೆಗಳಲ್ಲಿಯೂ ಪಟ್ಟಮಹಾದೇವಿ ಎಂದು ಕರೆಯಿಸಿಕೊಳ್ಳುವುದಿಲ್ಲ. ಚಂದಲದೇವಿ ದತ್ತಿಯನ್ನು ಕೊಡುವುದರ ಮೂಲಕ ವಿದ್ಯಾಭ್ಯಾಸಕ್ಕೆ ನೆರವಾಗಿದ್ದಾಳೆ.

ಚಂದಲದೇವಿ ಕೆಲವು ಭತ್ತ ಗ್ರಾಮಗಳನ್ನು ಆಳುತ್ತಿದ್ದರೂ ದುಷ್ಟರ ನಿಗ್ರಹ, ಶಿಷ್ಟರ ರಕ್ಷಣೆ ಮಾಡುತ್ತಿದ್ದಳು. ಆಳಂದೆ ಸಾಸಿರದಲ್ಲಿ ತನ್ನ ಉಪಜೀವನಕ್ಕಾಗಿ ಕೊಟ್ಟ ಭತ್ತಗ್ರಾಮಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದಳು ಕೆಲ ಅಧಿಕಾರಿಗಳು ಈಕೆಯ ಪಾದಪದ್ಮೋಪ ಜೀವಿಗಳಾಗಿದ್ದರು. ಮಹಾಮಂಡಳೇಶ್ವರ ಬಿಂಬರಸನು ಈಕೆಯ ಪಾದಪದ್ಮೋಪ ಜೀವಿಯಾಗಿದ್ದನು.

**ರಾಣಿ ಜಾಲಕದೇವಿ:**

ಆರನೇಯ ವಿಕ್ರಮಾದಿತ್ಯನ ಮಡದಿ ಜಾಕಲದೇವಿ ಕ್ಷೇತ್ರದಲ್ಲಿ ಆಡಳಿತ ಮತ್ತು ಯುದ್ಧ ಪರಿಣಿತಳಾಗಿದ್ದಳು. ಕ್ರಿ.ಶ.೧೧೯೪ರ ಇಂಗಳಗಿ ಗ್ರಾಮದ ತ್ರಿಭೋಗಾಭ್ಯಂತರ ಸಿದ್ಧಿಯಿಂದ ಅರಲು-೩೦೦ ರೊಳಗಿನ ಇಂಗಳಿಗಿಯಲ್ಲಿ ಆಳುತ್ತಿದ್ದಳು. ಇವಳು ಟಿಕ್ಕಾ ಎಂಬುವನ ಮಗಳಾಗಿದ್ದಳು. ಮೂಲತಹ ಜೈನ ಧರ್ಮದ ಅನುಯಾಯಿಯಾಗಿದ್ದಳು. ಈಕೆಯ ಗುಣ ವರ್ಣನೆ (ಕ್ರಿ.ಶ.೧೧೯೪) ಶಾಸನದಲ್ಲಿ.

**ಜನಕೆಯಂತೆ ಸಜ್ಜನ ಜನಸ್ತುತೆ ಪಾವವ್ತಿಯಂತೆ**
**ಜೀವಿತೇಶನೊಳವಿಕಳ್ಪ ಭಾವೆ ಧರೆಯಂತೆ ಧ್ರಿತಕ್ಷಮೆ**
**ರಂಭೆಯಂತೆ ರೂಪಿನ ನೆಲೆ, ಪೆಂಪುವೆತ್ತ**
**ಮರುದೇನುವಿನಂತ ದಾನಿ ಕಾಮನಲಂತಿರಯ**
**ಪರಿಭಾವಿಸೆ ಜಾಕಲದೇವಿ ಧಾತ್ರಿಯೋಳ್॥**

ಉಲ್ಲೇಖಿಸುತ್ತದೆ, ಶಾಸನದ ಕೆಲ ಸಾಲಿನ ಗದ್ಯಭಾಗದಲ್ಲಿ ಜಾಕಲದೇವಿ ಬಗ್ಗೆ ಅಲ್ಲಿ 'ಸಮಸ್ತ್ರ ನಿಮರ ನಿತಾಂಬಿನಿ ಕದಂಬ ಚುಡಾಮಣಿ' ಎಂಬ ವಾಕ್ಯವಿದೆ. ಅಂದರೆ ಸ್ತ್ರೀಯರಲ್ಲಿ ಸುಂದರ ಸ್ತ್ರೀಯರ ಮಧ್ಯ ರತ್ನವಿದ್ದ ಹಾಗೆ ಇದ್ದಳು. ಚಕ್ರವರ್ತಿ ತನ್ನ ಇನಿಯಳ ಪ್ರತಿಷ್ಠೆಯನ್ನು ಪ್ರೀತಿಯ ಈರ್ಷೆಯಿಂದ ಪಣ ತೊಟ್ಟು ಕೆಣಕಿ ಕೆಡಿಸಲಾಗಿದೆ. ಸೋತ ಸ್ವಾರಸ್ಯಕರವಾದ ಪ್ರಸಂಗವನ್ನು ಉಲ್ಲೇಖಿಸುತ್ತದೆ. ಶಾಸನದಲ್ಲಿ ಇಕೆ ಯುದ್ಧಕ್ಕೆ ಹೊರಟು ತನ್ನ ಪತಿ ವಿಕ್ರಮಾದಿತ್ಯನ ಜೊತೆಗೆ ಹೋಗುತ್ತಿರಬೇಕು. ಅದಕ್ಕಾಗಿಯೇ ಈಕೆಯನ್ನು

**ಚಾಳುಕ್ಯ ಚಕ್ರೇಶ್ವರನ ದಿಗ್ವಿಜಯ ಸಮಯದೋಳ್**
**ಕೀರ್ತಿ ಲಕ್ಷಿ ಯಂ ಮದವದರಿರಾಯ ಮದಮರ್ದನ ಸಮಯದೋಳ್**
**ವಿಜಯಲಕ್ಷ್ಮೀಯುವೆನಿಸಿದ್ದಳು ಎಂದು ಹೇಳಲಾಗಿದೆ.**

ಜಾಕಲದೇವಿ ಕಲೆಗಳಲ್ಲಿ ಪರಿಣಿತಿ ಹೊಂದಿದವಳಾಗಿದ್ದಳು. ಈಕೆಯನ್ನು ಶಾಸನದಲ್ಲಿ ಜಕ್ಕವ್ವ ಅಥವಾ ವೈಜಕ್ಕವ್ವ ಎಂದು ಕರೆಯಲಾಗಿದೆ. ಇವಳ ಚಾತುರ್ಯ ಮೆಚ್ಚಿದ್ದ ಗ್ರಾಮದ ಜನತೆ ಅವಳ ದರ್ಶನಕ್ಕೆ ಬಂದವರು ಇಂಗಳಿಗಿಯ ಗ್ರಾಮದಲ್ಲಿಯೇ ನೆಲೆಸಿದ್ದರು. ಇದೇ ಮುಂದೆ ಇಂಗಳಗಿ ಗ್ರಾಮಸ್ಥರಲ್ಲಿ ಕಾಣಬಹುದಾಗಿದೆ. ಇಂಗಳಗಿ ಗ್ರಾಮದ ಮಹಿಳೆಯರು ಧೈರ್ಯವಂತರಾಗಿದ್ದರೆಂಬುದು ಜನರ ಅಭಿಪ್ರಾಯ. ಈ ಗ್ರಾಮದವನ್ನು ಆಳಿದ ಜಾಕಲದೇವಿ ದೇವರ ಸ್ವಯಂಭುದೇಚನಿಗೆ ಕಾಣಿಕೆಯಾಗಿ ಕೊಟ್ಟಿದ್ದಳು.

ಜಾಕಲದೇವಿ ನೃತ್ಯ ಕಲಾಧರಿಯಾಗಿದ್ದಳಲ್ಲದೇ ಈಕೆ ನೃತ್ಯ ವಿದ್ಯಾಧರಿ ಎಂಬ ಪ್ರಶಸ್ತಿಯನ್ನು ಹೊಂದಿದ್ದಳು. ಈಕೆಗೆ 'ಅಭಿನವ ಸರಸ್ವತಿ' ಎಂಬ ಬಿರುದು ಇತ್ತು. ಇವಳು ದತ್ತಿಗಳನ್ನು ಕೊಡುವುದರ ಮೂಲಕ ವೈದಿಕ (ಇಅ.ಖಗಿ.೯೮೨೦.ಆಕ, ೨೦೬) ವಿದ್ಯಾಭ್ಯಾಸಕ್ಕೆ ನೆರವಾಗಿದ್ದಳು. ಕ್ರಿ.ಶ. ೧೧೧೦ ರ ಕಾಳಗಿಯ ಶಾಸನದಲ್ಲಿ ಪಿರಿಯರಸಿ ಎಂದು ಹೇಳಲಾಗಿದೆ. 'ಶ್ರೀ ತ್ರಿಭುವನಮಲ್ಲ ಭೂಪತಿ ದೇವಾನುಗ್ರಹ ಮಹಾಮಹಿಷಿ ಪದ್ಮದಿಂದ ಅಭಿನವರೂಪವಿಭ್ರಮ ಸಮನ್ವತ ಚಂದಲದೇವಿ ಎಂದು ಉಲ್ಲೇಖಿವಿದೆ. ಕೆಲ ಅಧಿಕಾರಿಗಳು ಚಂದಲದೇವಿಯ ಪಾದಪದ್ಮೋಪ ಜೀವಿಗಳಾಗಿದ್ದರು.

## ಮೈಲಾಳದೇವಿ:

ಆರನೇಯ ವಿಕ್ರಮಾದಿತ್ಯನ ರಾಣಿ ಮೈಲಾಳದೇವಿ ಕ್ರಿ.ಶ. ೧೦೮೪ ರಲ್ಲಿ ತೆಂಗಳಿ ಗ್ರಾಮದಲ್ಲಿ ಆಳ್ವಿಕೆ ಮಾಡುತ್ತಿದ್ದಳು. ಸೋನ್ನ ಹಾಗೂ ಪಟ್ಟೆವಾಡ ಗ್ರಾಮದಿಂದ ಆಳುತ್ತಿದ್ದಳು. ಕ್ರಿ.ಶ. ೧೦೮೭ರ ಇನ್ನೊಂದು ಶಾಸನ ಈಕೆ ಐದು ಗ್ರಾಮಗಳನ್ನು ಬ್ರಾಹ್ಮಣರಿಗೆ ದಾನ ದತ್ತಿಕೊಟ್ಟ ವಿಷಯ ಉಲ್ಲೇಖಿಸುತ್ತದೆ. ಕಾಳಗಿ ಶಾಸನ ಬಾನ ವೀರಗೊಂಕರಸ ಆತನ ರಾಣಿ ಮೈಲಾಳದೇವಿಯು ದಾನ ಕೊಟ್ಟಿದ್ದನ್ನು ತಿಳಿಸುತ್ತದೆ. ಈಕೆಯ ಆರನೆಯ ವಿಕ್ರಮಾದಿತ್ಯನ ಪ್ರಥಮ ಪಟ್ಟದ ರಾಣಿಯಾಗಿದ್ದಳು. ಮಲ್ಲಿಕಾರ್ಜುನನೇ ಈಕೆಯ ಮಗನಾಗಿದ್ದನು.

## ಮಲಯಮತಿದೇವಿ:

ಕಲ್ಯಾಣ ಚಾಲುಕ್ಯ ವಂಶದವರು ಎಲ್ಲ ಧರ್ಮಗಳಂತೆ ವೈಧಿಕ ಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ಕೊಟ್ಟಿದ್ದರು. ಆರನೆಯ ವಿಕ್ರಮಾದಿತ್ಯನು ಇತರ ಧರ್ಮದ ಮಹಿಳೆಯನ್ನು ವಿವಾಹವಾಗಿದ್ದರಿಂದ ಸರ್ವಧರ್ಮವನ್ನು ಪೋಷಿಸಬೇಕಾಯಿತು. ಎಲ್ಲ ರಾಣಿಯರ ಮತ ಅರಿತುಕೊಳ್ಳದಿದ್ದರೂ. ಕೆಲ ರಾಣಿಯರ ಧರ್ಮವನ್ನು ಅರಿತಿದ್ದನು. ಅವರು ವೈಧಿಕ ಧರ್ಮಕ್ಕೆ ಸೇವೆಯನ್ನು ಸಲ್ಲಿಸಿದರು ವಿಕ್ರಮಾದಿತ್ಯನ ಪರಿಯರಸಿ ಪಟ್ಟಮಹಾದೇವಿ ಸ್ಥಾನವನ್ನು ಅಲಂಕರಿಸುವುದರಲ್ಲಿ ಮಲಯಮತಿದೇವಿಯು ಒಬ್ಬಳು ದಿಗ್ಗಾಂವಿಯ ಸೋಮೇಶ್ವರ ದೇವಾಲಕ್ಕೆ (ಕ್ರಿ.ಶ.೧೧೦೭) ದಾನ ಕೊಟ್ಟಿದ್ದಳು. ದಿಗ್ಗಾಂವಿಯ ಅಗ್ರಹಾರದಲ್ಲಿ ೩೦೦ ಮಹಾಜನರು ಸಂಮತದಿಂದ ನೆರೆಯ ಅಗ್ರಹಾರನಾಗಾಯಿಯ ೪೦೦ ಮಹಾಜನರು ಕೂಡಿ ಈ ದೇವರ ಸೇವೆಯಿಂದ ಗೆದ್ದ ದಾನಕೊಟ್ಟ ಅಂಶ ತಿಳಿಸುತ್ತದೆ. ಅಗ್ರಹಾರದಲ್ಲಿ ರಾಣಿಯರು ಸುರಕ್ಷಿತವಾಗಿದ್ದರು. ಜೊತೆಗೆ ಇತರ ಸ್ತ್ರೀಯರು ಸಹ  ಸುರಕ್ಷಿತವಾಗಿರಲು ಸಾಧ್ಯವಾಗಿದ್ದಿತು. ಅಲ್ಲದೆ ಸಮಾಜದಲ್ಲಿ ರಾಣಿಯರು ಉನ್ನತ ಸ್ಥಾನ ಪಡೆದಿದ್ದರು.

**ಸಿರಿಯಾದೇವಿ:**

ಯಾದವ ಸಿಂಗಣನ ಕಾಲಕ್ಕೆ ಸೇರಿದ ಕ್ರಿ.ಶ.೧೨೦೬ರ ಶಾಸನವು ಮಹಾಮಂಡಲೇಶ್ವರ ಬಿಬ್ಬರಸ ಅವನ ರಾಣಿ ಸಿರಿಯಾದೇವಿಯು ಇಂಗಳಗಿ ಗ್ರಾಮದ ಲೋಕೇಶ್ವರ ಆಚಾರ್ಯಕರ್ತರಜಿಯರಿಗೆ ವಿವಿಧ ಸುಂಕಗಳನ್ನು ದಾನಕೊಟ್ಟ ವಿಷಯ ತಿಳಿಸುತ್ತದೆ.

**ಗುಡ್ಡವ್ವೆ:**

ಷೋಡಶ ಗಣದಲ್ಲಿ ಗುಡ್ಡವ್ವೆಯದು ಸುಪ್ರಸಿದ್ಧ ಹೆಸರು. ವೈಷ್ಣವರು ಕಿತ್ತೊಗೆದ ಅಣಂಪುರ ಬಾಲಬ್ರಹ್ಮೇಶ್ವರ ಲಿಂಗವು ಕೆಲ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಕ್ರಿ.ಶ.೧೨೨೯ ಇಂಗಳಗಿ ಶಾಸನವು ಗುಡ್ಡವ್ವೆ ಉಲ್ಲೇಖ ಪರೋಕ್ಷವಾಗಿ ಬಂದಿದ್ದು ಈಕೆ ಗುಡ್ಡಾಪುರದ ದಾನಮ್ಮದೇವಿಯೇ ಆಗಿರಬೇಕೆಂದು ಊಹ ಕ್ಷೇತ್ರ ಸನ್ಯಾಸಿನಿಯಾದ ಅಚ್ಚಲವ್ವೆಯ ಕಾಲನ್ನು ತೊಳೆದು ಸಪ್ತಲಿಂಗೇಶ್ವರ ಹಾಗೂ ಗಣಮಠಕ್ಕೆ ಗುಡ್ಡವ್ವೆಯ ನಾಲ್ಕು ಮನೆಯ ನಿವೇಶನ, ಹೊಲ, ತೋಟ ಹಾಗೂ ಗಾಣಗಳನ್ನು ದಾನಕೊಟ್ಟ ಸಂದರ್ಭದಲ್ಲಿ ದೇವರಿಗೆ ದಾನ, ದತ್ತಿ ಕೊಟ್ಟ ವಿಷಯ ತಿಳಿಸುತ್ತದೆ ಗಮನಿಸಿರಿ.

ರಾಣಿಯರಲ್ಲಿ ಜಾಕಲದೇವಿಯು ಜೈನ ಧರ್ಮದವಳಾಗಿದ್ದಳು. ಅನೇಕ ಜೈನ ಬಸದಿಯನ್ನು ಇಂಗಳಗಿಯಲ್ಲಿ ನಿರ್ಮಿಸಿದ್ದಳು ವೀರ ಮಹಿಳೆಯರ ಬಗೆಗೆ ಇಂಗಳಗಿ ಶಾಸನವು ಉಲ್ಲೇಖಿಸುತ್ತದೆ. ಶಾಸನಗಳಲ್ಲಿ ಸ್ತ್ರೀಯರು ನೀಡಿದ ದತ್ತಿಯ ಉಲ್ಲೇಖ ದೊರೆತರು ಇಂಗಳಿಯ ಇನ್ನೊಂದು ಶಾಸನದಲ್ಲಿ ಬಲವ್ವೆ ಎಂಬುವವಳು ಅರಲು ೩೦೦ ರ ಇಂಗಳಿಗಿಯ ಪಂಚಮಠ, ಪ್ರಭು, ಹೆಗ್ಗಡೆ ಹಾಗೂ ಗಡ್ಡವ್ವೆ ಇವರ ಸಮ್ಮುಖದಲ್ಲಿ ದತ್ತಿ ಕೊಟ್ಟ ವಿಷಯವನ್ನು ಉಲ್ಲೇಖಿಸುತ್ತದೆ.

**ಶ್ರೀದೇವಿಯಕ್ಕ:**

ಕ್ರಿ.ಶ. ೧೧೦೬ರ ಕಾಳಗಿಯ ಶಾಸನ ಆದಿತ್ಯ ಭಟ್ಟೋಪಾಧ್ಯಾಯನ ಮಗಳು ಶ್ರೀದೇವಿಯಕ್ಕ ತೆಂಗಳಿ ಜಗನ್ನಾಥ ಕೇಶವ ದೇವರ ಮೂರ್ತಿಯನ್ನು ಪ್ರತಿಷ್ಠಾಪಿಸಿ ದೇವಾಲಯ ಕಟ್ಟಿಸಿದ್ದಳು. ಸಾವಿತ್ರಿಯಕ್ಕ ಮಲ್ಲಿಯಕ್ಕರು ಈ ದೇವಾಲಯಕ್ಕೆ ದಾನಕೊಟ್ಟ ವಿಷಯ ತಿಳಿಸುತ್ತದೆ.

**ಕಾಳಬ್ಬರಸಿ:**

ಇಂಗಳಗಿಯ ಗ್ರಾಮದ ಮಹಾಮಂಡಳೇಶ್ವರ ಹೈಹಯ ವಂಶದ ಬಾಚರಸ ಮತ್ತು ಆತನ ಪತ್ನಿ ಕಾಳಬ್ಬರಸಿಯ ವರ್ಣನೆ ಶಾಸನದಲ್ಲಿ ಉಲ್ಲೇಖಗೊಂಡಿದೆ.

**ಮನೋವಲ್ಲಭೆ, ಭೂಮಿ ದಾನ ಮಹೋನ್ನತಿಯನ್ತೆನೆ**
**ಸ್ವಸ್ತೀನವರತ ಪರಮಕಲ್ಯಾಣಾಭ್ಯುದಯ ಸತಸಹಸ್ರ ಪರಮ**
**ಗಂಭೀರಯೋಗ ಭಾಗಿನಿಯರಮ ದ್ವಿತೀಯ ಲಕ್ಷ್ಮೀ ಸಮಾನೆಯರುಮಪ್ಪ**
**ಬಾಚ ಮಹಾರಾಜನಧಾಂಗನೆ ಶ್ರೀಕಾಳಬ್ಬರಸಿ॥**

ಎಂದು ಶಾಸನವು ದಾನ ದತ್ತಿಕೊಟ್ಟ ವಿಷಯವನ್ನು ಉಲ್ಲೇಖಿಸುತ್ತದೆ. ರಾಣಿಯರಷ್ಟೇ ಅಲ್ಲದೆ. ಮಹಾಮಂಡಳೇಶ್ವರರ ಪತ್ನಿಯರು ಸಹ ಆಡಳಿತದಲ್ಲಿ ಭಾಗವಹಿಸಿದ್ದರು ಎನ್ನುವುದಕ್ಕೆ ಇದು ನಿದರ್ಶನವಾಗಿದೆ. ಹಿಂದೂ ಸಮಾಜದಲ್ಲಿ ಸ್ತ್ರೀಗೆ ಉನ್ನತ ಸ್ಥಾನವಿತ್ತು. ಸಾಮಾಜಿಕವಾಗಿ ಮುಂದುವರೆದ ಜನಾಂಗ ಜಾತಿಗಳಲ್ಲಿ ಸ್ತ್ರೀಯರು ಉನ್ನತ ಮಟ್ಟದವರಾಗಿದ್ದರು. ಸಾಮಾಜಿಕ ನೆಲೆಯಲ್ಲಿ ಹೆಣ್ಣಿಗೆ ಆದರದ ಗೌರವದ ಸ್ಥಾನವಿತ್ತು. ಆದರೂ ಯಾವುದೇ ರೀತಿಯ ಆರ್ಥಿಕ ಸ್ವಾತಂತ್ರ್ಯವಿರಲಿಲ್ಲ. ಮಿತಾಕ್ಷರದ ಕರ್ತೃ ವಿಜ್ಞಾನೇಶ್ವರನು ಕ್ರಿ.ಶ. ೧೧೨೩ ರ ಮರತೂರ ಶಾಸನದಲ್ಲಿ ಸ್ತ್ರೀಯರಿಗೂ ಆಸ್ತಿಯ ಹಕ್ಕು ದೊರಕಬೇಕೆಂದು ಪ್ರತಿಪಾದಿಸಿದನು. ಅವರ ಪ್ರಕಾರ ಗಂಡು ಸಂತಾನವಿಲ್ಲದವರ ಆಸ್ತಿಯೂ ಆತನ ಪತ್ನಿಗೆ ಸೇರಬೇಕು. ಅವಿಭಕ್ತ ಕುಟುಂಬದಲ್ಲಿ ಗಂಡು ಮಕ್ಕಳೊಂದಿಗೆ ಹೆಂಡತಿ ಹಾಗೂ ತಾಯಿ ಪಾಲು ದೊರೆಯಬೇಕು. ಸ್ತ್ರೀ ಧನದ ಬಗ್ಗೆಯೂ ಉಲ್ಲೇಖವಿದೆ. ಒಂದು ಹೆಣ್ಣಿಗೆ ಮದುವೆ ಅಥವಾ ಬೇರೆ ಯಾರೋ ಕೊಟ್ಟ ಉಡುಗೋರೆ ಆಸ್ತಿ ಹಾಗೂ ಅವಳ ಸ್ವಂತ ಬಂದ ಧನವು ಸ್ತ್ರೀ ಧನವಾಗುತ್ತದೆ. ಇಂತಹ ಸ್ತ್ರೀ ಧನಕ್ಕೆ ಆಕೆಯ ಅಧಿಕಾರವಿರುತ್ತದೆ. ಆದರೆ ಪತಿಗೆ ಅದರಲ್ಲಿ ಅಧಿಕಾರಿವಿರುವುದಿಲ್ಲ. ನಂತರ ಸ್ತ್ರೀ ಧನವು ಆಕೆಯ ಹೆಣ್ಣು ಮಕ್ಕಳಿಗೆ ಸೇರಬೇಕು. ತಂದೆಯ ಆಸ್ತಿಯಲ್ಲಿ ಗಂಡು ಮಕ್ಕಳಿಗೂ ಹೆಣ್ಣು ಮಕ್ಕಳಿಗೂ ಪಾಲು ದೊರೆಯಬೇಕೆಂದು ಸ್ಮೃತಿಗಳು ಹಾಗೂ ಅವುಗಳ ವ್ಯಾಖ್ಯಾನಕಾರರು ಪ್ರತಿಪಾದಿಸಿದ್ದರು ಸ್ವತಃ ಯಾಜ್ಞವಲ್ಕ್ಯ ಕೂಡ ಸನ್ಯಾಸ ಸ್ವೀಕರಿಸುವ ಮುಂಚೆ ತನ್ನ ಸಂಪತ್ತನ್ನೆಲ್ಲಾ ಇಬ್ಬರು ಹೆಂಡತಿಯರಾದ ಕಾತ್ಯಾಯನಿ ಮತ್ತು ಮೈತ್ರೆಯಗೆ ಸಮನಾಗಿ ಹಂಚುತ್ತಾನೆ. ಮೈತ್ರೆಯ ತನಗೆ ಬೇಡವೆಂದು ಜ್ಞಾನ ಪಡೆದು ಮೋಕ್ಷ ಹೊಂದಲು ಬಯಸುತ್ತಾಳೆ. ಯಾಜ್ಞವಲ್ಕ್ಯರು ಆಸ್ತಿ ಇಲ್ಲದ ಕಾಲದಲ್ಲೇ ತಮ್ಮ ಆಸ್ತಿಯನ್ನು ಪತ್ನಿಯರಿಗೆ ಹಂಚಿ ಸ್ತ್ರೀಯರ ಆಸ್ತಿ ಹಕ್ಕನ್ನು ತಮ್ಮ ಸ್ವಂತ ನಡುವಳಿಕೆಯ ಮೂಲಕ ಜಗತ್ತಿಗೆ ತಿಳಿಸಿದ್ದಾನೆ. ಹಾಗೂ ಸ್ತ್ರೀಯರಿಗೆ ವೇದಾಧ್ಯಯನಕ್ಕೆ ಅವಕಾಶವಿಲ್ಲದಿದ್ದ ಕಾಲದಲ್ಲೆ ಪತ್ನಿಗೆ ಅತಂಹ ಅವಕಾಶ ಕಲ್ಪಿಸಿಕೊಟ್ಟಿದ್ದರು ಎಂಬುದು ಗಮನಾರ್ಹ.ಹೀಗೆ ಇಂತಹ ಅನೇಕ ಉಲ್ಲೇಖಗಳು ಶಾಸನಗಳಲ್ಲಿ ಕಾಣುತ್ತೇವೆ. ಅಂದಿನ ಕಾಲದಲ್ಲಿ ಸಿಕ್ಕಿರುವ ಅವಕಾಶದಲ್ಲಿ ತಮ್ಮ ಸ್ಥಾನ–ಮಾನದ ಬಗ್ಗೆ ತೀಳಿಸಿಕೊಟ್ಟಿದ್ದಾರೆ. ಅವರಿಗೆ ಇನ್ನು ಸ್ವಾತಂತ್ರ್ಯ ಸಿಕ್ಕಿದ್ದರೆ ಅಂದಿನ ಸಮಾಜ ಪ್ರಸ್ತುತ ಆಧುನಿಕತೆಗೆ ಕಡಿಮೆ ಏನು ಇಲ್ಲ.

**ಗ್ರಂಥಋಣಿ:**


೧. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ–ಡಾ.ಚಿದಾನಂದ ಮೂರ್ತಿ.

೨. ಆರನೇ ವಿಕ್ರಮಾದಿತ್ಯನ ಶಾಸನಗಳು–ಜೆ.ಎಂ.ನಾಗಯ್ಯ.




# ಬೌದ್ಧ ಧಮ್ಮ ಮತ್ತು ಛಲವಾದಿ ಸಮುದಾಯ.

**-ಶ್ರೀಮತಿ ಸುಜಾತ,**
ಸಂಶೋಧನಾರ್ಥಿ, ಸಮಾಜಶಾಸ್ತ್ರ ಬುಡಕಟ್ಟು
ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಪ್ರಸ್ತಾವನೆ:**

ಬೌದ್ಧ ಧಮ್ಮವು ವಿಶ್ವದ ಪ್ರಮುಖ ಧಮ್ಮಗಳಲ್ಲಿ ಒಂದು ಇದು ಒಂದು ವಿಶಿಷ್ಟವಾದ ಧಮ್ಮವಾಗಿದೆ ವಿಶ್ವದ ಅನೇಕ ರಾಷ್ಟ್ರಗಳಲ್ಲಿ ಈ ಧಮ್ಮದ ಅನುಯಾಯಿಗಳಿದ್ದಾರೆ. ವಿಶ್ವಕ್ಕೆ ಶಾಂತಿ, ಅಹಿಂಸೆಯ ಸಂದೇಶವನ್ನು ಈ ಧಮ್ಮವು ಸಾರಿದೆ. ಮೂಢನಂಬಿಕೆಗಳು, ಅಂಧಶ್ರದ್ಧೆಗಳನ್ನು, ಬೌದ್ಧ ಧಮ್ಮವು ಧಿಕ್ಕರಿಸುವುದರಿಂದ ಮತ್ತು ವೈಜ್ಞಾನಿಕ ತಳಹದಿಯ ಮೇಲೆ ಇದು ನಿಂತಿರುವುದರಿಂದ ವಿಶ್ವದ ಬಹುತೇಕ ರಾಷ್ಟ್ರಗಳು ಭೌದ್ಧ ಧಮ್ಮವನ್ನು ಅಪ್ಪಿಕೊಂಡಿವೆ.

ಭೌದ್ಧ ಧಮ್ಮ ಸುಮಾರು ೨೫೦೦ ವರ್ಷಗಳ ಹಿಂದೆ ತಥಾಗತ ಗೌತಮ ಬುದ್ದರಿಂದ ಉದಯವಾಯಿತು. ಈ ಧಮ್ಮ ಇಂದು ವಿಶ್ವವ್ಯಾಪ್ತಿ ವ್ಯಾಪಿಸಿದೆ. ಮೌರ್ಯದೊರೆ ಅಶೋಕ ಸಾಮ್ರಾಟನ ಕಾಲದಲ್ಲಿ ಭಾರತವು ಭೌದ್ಧಮಯವಾಗಿತ್ತೆಂದು ಇತಿಹಾಸದ ಪುಟಗಳಿಂದ ನಮಗೆ ಸ್ಪಷ್ಟವಾಗುತ್ತದೆ. ಆನಂತರ ಗುಪ್ತರ ಮತ್ತು ಮುಂದಿನ ರಾಜಮನೆತನಗಳ ನಿರಾಸಕ್ತಿಯಿಂದಾಗಿ ಭೌದ್ಧ ಧಮ್ಮದ ಪ್ರಭಾವವು ಕಡಿಮೆಯಾಗುತ್ತಾ ಬಂದಿರುವುದು ಇತಿಹಾಸದಿಂದ ಸ್ಪಷ್ಟವಾಗುತ್ತದೆ.

ಡಾ. ಬಾಬಾಸಾಹೇಬ ಅಂಬೇಡ್ಕರ ರವರು ಶ್ರೇಣಿಕೃತ ಜಾತಿ ವ್ಯವಸ್ಥೆಯಿಂದ ಮತ್ತು ವರ್ಣ ವ್ಯವಸ್ಥೆಯಿಂದ ಕೂಡಿರುವ ಹಿಂದೂ ಧಮ್ಮವನ್ನು ಬಿಟ್ಟು ಬೇರೆ ಧಮ್ಮವನ್ನು ಆಯ್ಕೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿ ವಿವಿಧ ಧಮ್ಮಗಳ ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಭಾರತದ ನೆಲದಲ್ಲಿಯೇ ಉದಯಿಸಿದ ಮತ್ತು ಅನೇಕ ಮೂಲ ನಿವಾಸಿ ಅರಸರಿಂದ ಆಶ್ರೆಯಿಸಿಲ್ಪಟ್ಟ ಸತ್ಯ, ಅಹಿಂಸೆ ಮತ್ತು ಮಾನವೀಯ ಮೌಲ್ಯಗಳು ಹಾಗೂ ವೈಜ್ಞಾನಿಕ ತಳಹದಿಯ ಮೇಲೆ ರೂಪಗೊಂಡಿರುವ ಭೌದ್ಧ ಧಮ್ಮದ ಕುರಿತು ಹೆಚ್ಚು ಆಕರ್ಷಿತರಾದರು. ಈ ದೇಶದ ಮೂಲ ಸಂಸ್ಕೃತಿಗೆ ಹೊಂದಿಕೊಳ್ಳುವ ಮತ್ತು ಭವಿಷ್ಯದಲ್ಲಿ ವಿಶ್ವಕ್ಕೆ ದಾರಿತೋರಬಲ್ಲ ಭೌದ್ಧ ಧಮ್ಮವನ್ನು ಸ್ವಿಕರಿಸಲು ತಿರ್ಮಾನಮಾಡಿ ದಿನಾಂಕ: ೧೪.೧೦.೧೯೫೬ ರಂದು ತಮ್ಮ ೫ ಲಕ್ಷಕ್ಕೂ ಹೆಚ್ಚು ಅನುಯಾಯಿಗಳೊಂದಿಗೆ ನಾಗಪೂರದಲ್ಲಿ ಭೌದ್ಧ ಧಮ್ಮಕ್ಕೆ ಸೇರ್ಪಡೆಯಾಗುತ್ತಾರೆ.

ಅನಂತರ ಅವರ ಅನುಯಾಯಿಗಳು ಪ್ರತಿವರ್ಷ ಧಮ್ಮಚಕ್ರ ಪುವರ್ತನ ದಿನ ಎಂದು ಆಚರಣೆ ಮಾಡುವುದರ ಮೂಲಕ ಭೌದ್ಧ ಧಮ್ಮಕ್ಕೆ ಹಿಂದೂ ಧಮ್ಮವನ್ನು ತೊರೆದು ಸೇರ್ಪಡೆಯಾಗುತ್ತಿದ್ದಾರೆ.

ಛಲವಾದಿ ಅಥವಾ ಹೊಲೆಯ ಸಮುದಾಯವು ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಮುಖವಾದ ಸಮುದಾಯವಾಗಿದೆ. ರಾಷ್ಟ್ರದ ಬೇರೆ-ಬೇರೆ ರಾಜ್ಯಗಳಲ್ಲಿ ಈ ಸಮುದಾಯದವರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ.

ಉದಾ:- ಕರ್ನಾಟಕದಲ್ಲಿ ಹೊಲೆಯಾ, ಹೊಲೆಯರ, ಛಲವಾದಿ, ಆದಿ ಕರ್ನಾಟಕ, ಆದಿ ದ್ರಾವಿಡ, ಬಲಗೆ, ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಮಹಾರಾಷ್ಟ್ರದಲ್ಲಿ ಮಾಹರ್, ಮಹರ್, ಎಂದು ಕರೆಯುತ್ತಾರೆ. ಹಿಂದೂ ಧಮ್ಮದಲ್ಲಿರುವ ಜಾತಿ ಪದ್ಧತಿ, ಅಸ್ಪ್ರಶ್ಯತೆ ಆಚಣೆಯಿಂದ ರೋಸಿಹೋಗಿ ಮತ್ತು ಬಾಬಾಸಾಹೇಬ ಅಂಬೇಡ್ಕರ್ ಅವರ ಕರೆಯಿಂದಾಗಿ ಹಾಗೂ ದಲಿತ ಸಂಘಟನೆಗಳ ಜಾಗೃತಿ ಕಾರ್ಯಕ್ರಮಗಳಿಂದಾಗಿ ಇತಿಚೀನ ದಿನಗಳಲ್ಲಿ ಆಳಂದ ತಾಲೂಕಿನಲ್ಲಿಯೂ ಸಹ ಛಲವಾದಿ ಅಥವಾ ಹೊಲೆಯ ಸಮುದಾಯದ ಜನರು ಭೌದ್ಧ ಧಮ್ಮದಕಡೆಗೆ ಸಾಗುತ್ತಿದ್ದಾರೆ. ಅಧಿಕೃತವಾಗಿ

ಮತಾಂತರವಾಗುವರ ಸಂಖ್ಯೆ ಕಡಿಮೆಯಿದ್ದರೂ ಸಹ ತಮ್ಮ ನಡೆ, ನುಡಿ, ಆಚರಣೆಯಲ್ಲಿ ಬಹುತೇಕ ಛಲವಾದಿ ಸಮುದಾಯದ ಜನರು ಬೌದ್ಧ ಧಮ್ಮದ ಕಡೆಗೆ ಸಾಗುತ್ತಿದ್ದಾರೆ.

ಅವರು ತಮ್ಮ ಮನೆಯಲ್ಲಿ ವಿವಾಹ ಕಾರ್ಯಕ್ರಮ, ಗೃಹ ಪ್ರವೇಶ, ಮಗುವಿನ ನಾಮಕರಣ ಇನ್ನಾವುದೆ ಕಾರ್ಯಕ್ರಮಗಳಿ ಇರಲಿ ಅವರು ಭೌದ್ಧ ಧಮ್ಮದ ಪ್ರಕಾರವೆ ಆಚರಣೆಯನ್ನು ಮಾಡುತ್ತಾರೆ. ಬೌದ್ಧ ದಮ್ಮದ ಗುರುಗಳಾದ ಬಂತೆಜೀಗಳಿಗೆ ವಿಶೇಷ ಸ್ಥಾನಮಾನವಿದೆ. ಅವರೆ ಗುರುಗಳು ಅವರ ನೇತೃತ್ವದಲ್ಲೇ ಎಲ್ಲಾ ಕಾರ್ಯಕ್ರಮಗಳು ನಡೆಯುತ್ತವೆ. ಭೌದ್ಧ ಧಮ್ಮದಲ್ಲಿ ಬಿಕ್ಕುಗಳಿಗೆ ವಿಶೇಷ ಸ್ಥಾನವಿದೆ. ಏಕೆಂದರೆ ಅವರು ಸಂಸಾರವನ್ನು ತ್ಯಾಗ ಮಾಡಿ ಸನ್ಯಾಸವನ್ನು ಸ್ವಿಕರಿಸಿ ಕೇವಲ ಭಗವಾನ ಬುದ್ಧನ ಆರಾಧನೆಯನ್ನು ಮಾಡುತ್ತಾ ಹಾಗೂ ಭೌದ್ಧ ಧಮ್ಮದ ಪ್ರಚಾರವನ್ನು ಮಾಡಿ ತಮ್ಮ ಜೀವನವನ್ನು ಸಾರ್ಥಕ ಮಾಡಿಕೊಂಡಿರುತ್ತಾರೆ. ಅವರು ಭೌದ್ಧ ಧಮ್ಮದ ಪ್ರಕಾರ ಆಚಾರ, ವಿಚಾರ, ನಡೆ, ನುಡಿಗಳನ್ನು ಬಹಳ ಕಟ್ಟು ಬದ್ಧವಾಗಿ ಪಾಲಿಸಿಕೊಂಡು ಬರುತ್ತಾರೆ. ಸಾಮಾಜಿಕ ಮೋಹದಿಂದ ಶಿಕ್ಷೆಯನ್ನು ಪಡೆದು ಅವರು ತಮ್ಮ ಜೀವನವನ್ನು ಕೇವಲ ಧ್ಯಾನದಲ್ಲಿ ತೋಡಗಿಸಿಕೋಳ್ಳುತ್ತಾರೆ. ಇಲ್ಲಿ ವಿಶೇಷವೇನೆಂದರೆ ಮಹಿಳೆಯರಿಗು ಬಿಕ್ಕು ಆಗುವ ಅವಕಾಶವಿರುವುದರಿಂದ ಅನೇಕ ಮಹಿಳಾ ಬಿಕ್ಕುಗಳನ್ನು ನೋಡಬಹುದಾಗಿದೆ. ಸ್ತ್ರೀಯರಿಗೆ ಸಮಾನವಾದ ಸ್ಥಾನಮಾನ ನೀಡಿರುವುದು ಈ ಧಮ್ಮದಲ್ಲಿ ಮಾತ್ರ ಎಂದು ಹೇಳಿದರೆ ತಪ್ಪಾಗಲಾರದು.

**ಭೌದ್ಧ ಧಮ್ಮದ ಆಚರಣೆಗಳು:**

ಭೌದ್ಧ ಧಮ್ಮದಲ್ಲಿ ವಿಶೇಷವಾಗಿ ಆಚರಿಸಲ್ಪಡುವುದೆಂದರೆ ಬುದ್ಧ ಪೂರ್ಣಿಮಾ, ಭೀಮಕೊರೆಗಾಂವ ವಿಜಯೋತ್ಸವ ಹಾಗೂ ಬಾಬಾಸಾಹೇಬ ಅಂಬೇಡ್ಕರ ಅವರ ಜಯಂತಿ, ಅಕ್ಟೋಬರ್ ತಿಂಗಳಲ್ಲಿ ಧಮ್ಮ ಚಕ್ರ ಪ್ರವರ್ತನ ಇವುಗಳನ್ನು ಭೌದ್ಧ ಧಮ್ಮದವರು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ.

**ಬುದ್ಧ ಪೂರ್ಣಿಮಾ:**

ಭೌದ್ಧ ಧಮ್ಮದಲ್ಲಿ ಬುದ್ಧ ಪೂರ್ಣಿಮೆಯನ್ನು ಬಹಳ ಉತ್ಸಾಹದಿಂದ ಆಚರಿಸುತ್ತಾರೆ. ಈ ಧಮ್ಮಕ್ಕೆ ಅಡಿಪಾಯ ಹಾಕಿದ ಭಗವಾನ ಬುದ್ಧನಿಗೆ ಜ್ಞಾನೋದಯವಾದ ದಿನ, ಹುಟ್ಟಿದ ದಿನ ಹಾಗೂ ಪರಿನಿರ್ವಾಣ ಹೊಂದಿದ ದಿನ ಇದಾಗಿದೆ. ಆದ್ದರಿಂದ ಭಾರತಾದ್ಯಂತ ಬುದ್ಧ ಪೂರ್ಣಿಮೆಯನ್ನು ಆಚರಿಸುತ್ತಾರೆ. ಇದನ್ನು ಕೆಲವು ದೇಶಗಳ ಬುದ್ಧನ ಅನುಯಾಯಿಗಳು ಈ ದಿನವನ್ನು 'ವೆಸಕ್', ಎಂದು ಕರೆಯುತ್ತಾರೆ. ವೆಸಕ್ ಎಂದರೆ ಏಪ್ರಿಲ್–ಮೇ ತಿಂಗಳ ಪವಿತ್ರದಿನ ಎಂದರ್ಥ. ಈ ಪವಿತ್ರ ದಿನದಂದು ಎಲ್ಲರು ತಮ್ಮ ಪರಿವಾರದೊಂದಿಗೆ ಬಿಳಿಯ ಬಣ್ಣದ ಉಡುಪ್ಪುಗಳನ್ನು ಧರಿಸಿ ಬುದ್ಧ ವಿಹಾರಕ್ಕೆ ಭೇಟಿನೀಡಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ ಹಾಗೂ  ಕೇಲವು ಅನೂಕುಲಸ್ಥರು ತಮಗೆ ಸಾಧ್ಯಾವಾದಷ್ಟು ಅನ್ನದಾನವನ್ನು ಮಾಡುತ್ತಾರೆ.

ಗುಲ್ಬರ್ಗಾ ಜಿಲ್ಲೆಯಲ್ಲಿ ಇರುವ ಪ್ರಸಿದ್ಧ ಭೌದ್ಧ ವಿಹಾರಕ್ಕೆ ಸಾವಿರಾರು ಜನ ಬುದ್ಧ ಪೂರ್ಣಿಮೆಯ ದಿನದಂದು ಬರುತ್ತಾರೆ. ಬಂದಿರುವಂತಹ ಬುದ್ಧ ಜನಾಂಗದವರಿಗೆ ಊಟ, ನೀರು, ಚಹಾ, ಹಣ್ಣು ಇತ್ಯಾದಿಗಳ ವ್ಯವಸ್ಥೆಯನ್ನು ದಾನಿಗಳು ಮಾಡಿರುತ್ತಾರೆ. ಪ್ರಸಿದ್ಧವಾದ ಭೌದ್ಧ ವಿಹಾರಕ್ಕೆ ಬುದ್ಧ ಪೂರ್ಣಿಮೆಯ ದಿನದಂದು ಬಂದ ಅನುಯಾಯಿಗಳು ಪ್ರಾರ್ಥನೆ ಸಲ್ಲಿಸಿ, ಧ್ಯಾನಮಾಡಿ ಅತೀ ವಿಜೃಂಭಣೆಯಿಂದ ಈ ದಿನವನ್ನು ಆಚರಣೆ ಮಾಡುತ್ತಾರೆ. ಅದರಂತೆ ಆಳಂದ ತಾಲೂಕಿನ ಎಲ್ಲಾ ಹಳ್ಳೀಯ ಮತ್ತು ಆಳಂದ ಪಟ್ಟಣದ ಛಲವಾದಿ ಸಮುದಾಯದ ಜನರು  ತಮ್ಮ ತಮ್ಮ ಮನೆಗಳಲ್ಲಿ ಸಮುಧಾಯ ಭವನದಲ್ಲಿ ಬುದ್ಧನ ಪ್ರತಿಮೆಯ ಮುಂದೆ ಪೂಜೆ, ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಮತ್ತು ಕೆಲವೊಬ್ಬರು ಗುಲಬರ್ಗಾ ನಗರದ ಬುದ್ಧ ವಿಹಾರಕ್ಕೆ ಬರುತ್ತಾರೆ.

**ಡಾ. ಬಾಬಾಸಾಹೇಬ ಅಂಬೇಡ್ಕರ ಜಯಂತೋತ್ಸವ:**

ಭಾರತ ರತ್ನ ಡಾ. ಬಾಬಾಸಾಹೇಬ ಅಂಬೇಡ್ಕರ ಅವರ ಜಯಂತಿಯನ್ನು ಭೌದ್ಧ ಧಮ್ಮದ ಅನುಯಾಯಿಗಳು ಮತ್ತು ಎಲ್ಲಾ ದಲಿತ ಸಮುದಾಯದವರು ಈ ಜಯಂತಿಯನ್ನು ಸಹ ಹಬ್ಬದಂತೆಯೇ ಆಚರಣೆಯನ್ನು ಮಾಡುತ್ತಾರೆ.

೧೪ ಏಪ್ರೀಲ್ ರಂದು ಕಲಬುರಗಿ ಜಿಲ್ಲೆಯಲ್ಲಿ ಮಾತ್ರವಲ್ಲದೆ ಈಡಿ ನಾಡಿನ ಜನತೆ ಬಹಳ ಅದ್ದೂರಿಯಾಗಿ ಆಚರಣೆ ಮಾಡುತ್ತಾರೆ. ಸಮಾಜದಲ್ಲಿ ಶೋಷಿತ ಸಮುದಾಯದವರಿಗೆ, ಮಹಿಳೆಯರಿಗೆ, ಹಿಂದುಳಿದವರಿಗೆ ಸಮಾನ ಸ್ಥಾನವನ್ನು ಕೊಡಿಸಿದ ಮಹಾನ ನಾಯಕ ಎಂದು ಜನರು ಬಾಬಾ ಸಾಹೇಬ ಅಂಬೇಡ್ಕರ ರವರ ಹುಟ್ಟಿದ ದಿನವನ್ನು ಬಹಳ ವಿಶೇಷ ದಿನವಾಗಿ ಆಚರಿರುತ್ತಾರೆ. ಪ್ರತಿಯೊಬ್ಬರು ತಮ್ಮ ಮನೆಯಲ್ಲಿ ಬಾಬಾ ಸಾಹೇಬ ಅಂಬೇಡ್ಕರ ಅವರ ಪೂಜೆಯನ್ನು ಮಾಡಿ ಪ್ರಾರ್ಥನೆ ಸಲ್ಲಿಸುತ್ತಾರೆ.

ಸಾಮುಹಿಕವಾಗಿ, ಬಾಬಾಸಾಹೇಬ ಅಂಬೇಡ್ಕರ ರವರ ವಿಗ್ರಹಕ್ಕೆ ಹೂವಿನ ಮಾಲೆಯನ್ನು ಹಾಕಿ ಅಲಂಕರಿಸಿ ಹಲವು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೋಳಲಾಗುತ್ತದೆ. ಅದರಂತೆ ಆಳಂದ ತಾಲೂಕಿನ ಜನರು ಆಳಂದ ಪಟ್ಟಣದಲ್ಲಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಭೌದ್ಧ ಧಮ್ಮವನ್ನು ಎತ್ತಿಹಿಡಿದು ತಮ್ಮ ಸಮುದಾಯದ ಜನರಿಗೆ ಅಸ್ಪೃಶ್ಯತೆಯ ಆಚರಣೆಯಿಂದ ಹೊರತರಲು ಭೌದ್ಧ ಧಮ್ಮವನ್ನು ಸ್ವೀಕರಿಸುವಂತೆ ಮಾಡಿ ಪರಿವರ್ತನೆಯನ್ನು ತಂದು. ಭಾರತದಲ್ಲಿ ಮತ್ತೆ ಭೌದ್ಧ ಧಮ್ಮ ಎತ್ತರಕ್ಕೆ ಬೆಳೆಯಲು ಕಾರಣರಾಗಿದ್ದಾರೆ.

**ಅಧ್ಯಾಯನದ ವ್ಯಾಪ್ತಿ:**

ಕಲಬುರಗಿ ಜಿಲ್ಲೆಯ ೧೧ ತಾಲೂಕುಗಳಲ್ಲಿ ಆಳಂದ ತಾಲೂಕವು ಒಂದಾಗಿದೆ. ಕಲಬುರಗಿ ನಗರದಿಂದ ೪೫ಕಿ.ಮಿ. ಅಂತರದಲ್ಲಿದೆ. ಇಲ್ಲಿ ಎಲ್ಲಾ ಜಾತಿ ಮತ್ತು ಧರ್ಮಿಯರು ಇದ್ದಾರೆ. ಕಲಬುರರ್ಗಿ ಜಿಲ್ಲೆಯ ಆಳಂದ ತಾಲೂಕನ್ನು ಅನುಲಕ್ಷೀಸಿ ಈ ಲೇಖನವನ್ನು ಸಿದ್ಧಪಡಿಸಲಾಗಿದೆ.

**ಉದ್ದೇಶಗಳು:**

೧. ಛಲವಾದಿ ಸಮುದಾಯದ ಪರಿಚಯ
೨. ಆಳಂದ ತಾಲೂಕಿನಲ್ಲಿ ಛಲವಾದಿ ಸಮುದಾಯ ಮತ್ತು ಭೌದ್ಧ ಧಮ್ಮ ಆಚರಣೆ ಕುರಿತು ಮಾಹಿತಿ ನೀಡುವುದು

**ಸಂಶೋಧನಾ ವಿಧಾನ:**

ಸಂದರ್ಶನ ವಿಧಾನ ಮತ್ತು ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ಲೇಖನವನ್ನು ಸಿದ್ಧಪಡಿಸಿದ್ದೇನೆ.

**ಉಪಸಂಹಾರ:**

ಭಾರತದಲ್ಲಿ ಭೌದ್ಧ ಧಮ್ಮದ ಪ್ರಭಾವ ದಿನದಿನಕ್ಕೆ ಹೆಚ್ಚುತ್ತಲೆ ಇದೆ. ಈ ಧಮ್ಮದಲ್ಲಿರುವ ಸತ್ಯ, ಅಂಹಿಸೆ, ಶಾಂತಿ ತತ್ವಗಳಿಗೆ ಜನರು ಮಾರುಹೊಗುತ್ತಿದ್ದಾರೆ. ಸರಳವಾದ ಜೀವನ ಮತ್ತು ಶಾಂತಿಗೆ ಹೆಚ್ಚು ಮಹತ್ವವನ್ನು ಇಲ್ಲಿ ನೀಡಲಾಗಿದೆ. ಸ್ತ್ರೀಯರಿಗೆ ಸಮಾನವಾದ ಅವಕಾಶವನ್ನು ಕಲ್ಪಿಸಿಕೋಡಲಾಗಿದೆ. ಹೀಗಾಗಿ ಆಳಂದ ತಾಲೂಕಿನ ಔಲವಾದಿ ಸಮುದಾಯದ ಜನರು ಸಹ ಬೌದ್ಧ ಧಮ್ಮವನ್ನು ತಮ್ಮ

ಜೀವನ ಕ್ರಮದಲ್ಲಿ ಸಂಶೋಧನಾ ವಿಧ್ಯಾರ್ಥಿನಿ ಅಳವಡಿಸಿಕೊಳ್ಳುತ್ತಿದ್ದಾರೆ. ಭೌದ್ಧ ಧಮ್ಮದ ಬಗ್ಗೆ ಇನ್ನು ಹೆಚ್ಚಿನ ಅರಿವನ್ನು ಈ ಭಾಗದ ಜನರಿಗೆ ಮೂಡಿಸುವುದು ಅವಶ್ಯಕವಾಗಿದೆ. ಸಮಾನತೆಯ ತತ್ವವನ್ನು ಸಾರುವ ಈ ಧಮ್ಮದ ಅನುಕರಣೆಯನ್ನು ಪ್ರತಿಯೊಬ್ಬರು ಮಾಡಬೇಕಾದ ಅವಶ್ಯಕತೆ ಇದೆ.



# ಭಾರತದ ರಾಜಕೀಯ ಚಿಂತನೆಯಲ್ಲಿ ಧರ್ಮದ ಕುರಿತಾದ ಸಕರಾತ್ಮಕ ದೃಷ್ಟಿಕೋನ – ಒಂದು ವಿಶ್ಲೇಷಣಾತ್ಮಕ ಅಧ್ಯಯನ.

**–ಶ್ರೀಮತಿ ಬಸವರಾಜೇಶ್ವರಿ ಸಿದ್ರಾಮಪ್ಪ,**
ಸಹಾಯಕ ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ,
ಸರಕಾರಿ ಪ್ರಥಮ ದರ್ಜೆ ಕಾಲೇಜು, ಸುಲಪೇಟ್.

**ಪೀಠಿಕೆ:**

ರಾಜಕೀಯ ಮತ್ತು ಧರ್ಮದ ಸಂಬಂಧ ಕುರಿತಾದ ಚರ್ಚೆ ಹಿಂದಿನಿಂದಲೂ ನಡೆಯತ್ತಿದೆ. ರಾಜಕೀಯ ರಾಜ್ಯ ಆಡಳಿತಕ್ಕೆ ಸಂಬಂಧಪಟ್ಟರೆ, ಧರ್ಮ, ವ್ಯಕ್ತಿಯನ್ನು ಸನ್ಮಾರ್ಗದಲ್ಲಿ ನಡೆಸುವ ಜೀವನ ಮಾರ್ಗ. ಧರ್ಮ ವ್ಯಕ್ತಿಯ ವೈಯಕ್ತಿಕ ಜೀವನಕ್ಕೆ ಸಂಬಂಧಪಟ್ಟದ್ದು, ಆದರೂ ಅಧಿಕಾರ ಪ್ರಭಾವ ರಾಜಕೀಯದಲ್ಲಿ ಕಂಡು ಬರುತ್ತದೆ. ರಾಜಕೀಯದಲ್ಲಿ ಧರ್ಮದ ಪ್ರಭಾವ ಪುರಾತನ ಕಾಲದಿಂದಲೂ ಕಂಡು ಬರುತ್ತದೆ. ಕಾಲ ಕಾಲಕ್ಕೆ ಇವರೆಡರ ಸಂಬಂಧ ಕುರಿತು ಚರ್ಚೆ ನಡೆಯುತ್ತಿದೆ. ರಾಜಕೀಯದಲ್ಲಿ ಧರ್ಮ ಇರಬೇಕೋ ಅಥವಾ ಬೇಡವೋ? ಎಂಬ ಬಗ್ಗೆ ರಾಜಕೀಯ ತಜ್ಞರು ವಿಭಿನ್ನ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಪ್ರಸ್ತುತ ಈ ಲೇಖನದಲ್ಲಿ ರಾಜಕೀಯದಲ್ಲಿ ಧರ್ಮ ಇರಬೇಕು ಎಂಬ ಸಮರ್ಥನೆ ನೀಡಿದ ತಜ್ಞರ ಅಭಿಪ್ರಾಯಗಳ ವಿಶ್ಲೇಷಣೆ ಮಾಡಲಾಗಿದೆ.

**ಉದ್ದೇಶಗಳು:**

೧) ರಾಜಕೀಯದಲ್ಲಿ ಧರ್ಮದ ಪ್ರಭಾವದ ಬಗ್ಗೆ ರಾಜಕೀಯ ಚಿಂತಕರ ಅಭಿಪ್ರಾಯಗಳ ಬಗ್ಗೆ ತಿಳಿಯುವುದು.
೨) ಇಂದಿನ ರಾಜಕೀಯ ಕ್ಷೇತ್ರದ ಅಧೋಗತಿಗೆ ರಾಜಕೀಯದಿಂದ ಧರ್ಮವನ್ನು ಬೇರ್ಪಡಿಸಿರುವುದು ಕಾರಣವೇ? ಎಂಬ ಬಗ್ಗೆ ತಿಳಿಯುವುದು.

ಪ್ರಾಚೀನ ಕಾಲದ ರಾಜಕೀಯ ವ್ಯವಸ್ಥೆಯ ಹಿಂದೂ ತತ್ವಜ್ಞಾನ ಅಥವಾ ಹಿಂದೂ ಧಾರ್ಮಿಕ ವ್ಯವಸ್ಥೆಯ ಒಂದು ಅಂಶವಾಗಿತ್ತು. ಹಿಂದೂ ರಾಜಕೀಯ ಶಾಸ್ತ್ರವೂ ತನ್ನದೇ ಆದ ಆದ್ಯಾತ್ಮಿಕ ಸ್ವರೂಪ ಹೊಂದಿದೆ. ಅದು ಹಿಂದೂ ತತ್ವಶಾಸ್ತ್ರ ಸಮ್ಮಿಲನವಾಗಿದೆ. ಅದಕ್ಕಾಗಿಯೇ ರಾಜ್ಯಶಾಸ್ತ್ರಕ್ಕೆ ರಾಜಧರ್ಮ, ನೀತಿಶಾಸ್ತ್ರ ಶಬ್ದಗಳನ್ನು ಪರ್ಯಾಯ ಅರ್ಥದಲ್ಲಿ ಬೆಳಸಿದ್ದೇ ಸಾಕ್ಷಿಯಾಗಿದೆ. ರಾಜಧರ್ಮ ಎಂಬುದು ರಾಜ ಮತ್ತು ಧರ್ಮ ಎಂಬ ಎರಡು ಪದಗಳ ಸಂಯೋಜನೆಯಾಗಿದೆ. ರಾಜ ಎಂಬುದು 'ಆಳುವ ದೊರೆ' ಅಥವಾ ಅರಸನಾದರೆ, ಧರ್ಮ ಎಂಬುದು 'ಕರ್ತವ್ಯ' ಅಥವಾ 'ಜವಾಬ್ದಾರಿ' ಎಂಬ ಅರ್ಥದಲ್ಲಿ ಬಳಸಲಾಗಿದೆ. ಅಂದರೆ ರಾಜಧರ್ಮ ಎಂಬ ಶಬ್ದವನ್ನು ರಾಜನು ನಿರ್ವಹಿಸುತ್ತಿದ್ದ ಕರ್ತವ್ಯಗಳನ್ನು ಸೂಚಿಸುತ್ತದೆ. ಆದರೆ ಪ್ರಾಚೀನ ಕಾಲದ ರಾಜನ ಕರ್ತವ್ಯವನ್ನೇ ರಾಜಧರ್ಮ ಎಂದು ಕರೆಯಲಾಗುತ್ತದೆ.

**ಧರ್ಮದ ಅರ್ಥ:**

ಧರ್ಮ ಎಂದರೆ ಸಮಾಜದ ಒಟ್ಟು ಹಿತಕ್ಕಾಗಿ ಇರುವಂತಹ ನಡೆ, ನುಡಿ, ರೂಢಿ, ಸಂಪ್ರದಾಯ, ಪದ್ಧತಿ ನಂಬಿಕೆಗಳಾಗಿವೆ. ಧರ್ಮ ಎಂಬ ಪದವು 'ದೃ' ಎಂಬ ಪದದಿಂದ ಬಂದಿದೆ. 'ದೃ' ಎಂದರೆ ಧರಿಸುವುದು ಅಥವಾ ಎತ್ತಿ ಹಿಡಿಯುವುದು, ಆಸರೆಯಾಗುವುದು, ಪೋಷಿಸುವುದು ಎಂದರ್ಥ. ಒಳ್ಳೆಯದನ್ನು , ನೀತಿಯನ್ನು, ನ್ಯಾಯವನ್ನು , ಸದ್ಗುಣಗಳನ್ನು ಎತ್ತಿ ಹಿಡಿಯುವುದು. ಸದ್ಗುಣಗಳನ್ನು ಪಾಲಿಸಿಕೊಂಡು ಬರುವುದು ಎಂದು ಅರ್ಥ. ನೀತಿ, ನಿಯಮಗಳು, ತತ್ವಗಳು, ಮೌಲ್ಯಗಳು, ಸನ್ನಡತೆಗಳ ಒಟ್ಟು ಮೊತ್ತವೇ ಧರ್ಮವಾಗಿದೆ.

ಧರ್ಮ ಎಂಬ ಪದವು ಪ್ರಾರಂಭದಲ್ಲಿ ಸೌಜನ್ಯದ ಪ್ರತೀಕವಾಗಿ ಬಂದರೆ, ನಂತರದಲ್ಲಿ ಮಾನನ ಸಮಾಜವನ್ನು ಸನ್ಮಾರ್ಗದಲ್ಲಿ ನಡೆಸುವ ನೀತಿ ನಿಯಮಗಳಾಗಿ, ರೂಢಿ ಪದ್ಧತಿಗಳಾಗಿ ರೂಪುಗೊಂಡವು. ರಾಜ್ಯವು ಧರ್ಮವನ್ನು ಸಂರಕ್ಷೀಸುವ ಮೂಲಕ ಧರ್ಮವನ್ನೇ ಕಾನೂನಿನ ಮುಖ್ಯ ಮೂಲವನ್ನಾಗಿ ಮಾಡಿದೆ. ಅಂದರೆ ರಾಜ್ಯವು ಕಾನೂನು ರೂಪಿಸುವ, ನ್ಯಾಯ ವಿತರಿಸುವ ಮೂಲಕ ಧರ್ಮವನ್ನು ಸಂರಕ್ಷಿಸುವ ರಕ್ಷಾ ಕವಚವೆಂದು ಹಿಂದೂ ರಾಜನೀತಿಜ್ಞರು ಬಾವಿಸಿದರು. ಅಂದರೆ ಧರ್ಮವೆಂದರೆ ಸಮಾಜದ ಒಳಿತಿಗಾಗಿ ಅನುಸರಿಸುವ ನಡುವಳಿಕೆಯೇ ಆಗಿದ್ದು, ಮಾನವ ಜೀವನದ ನೀತಿ ಸಂಹಿತೆಯಿದ್ದಂತೆ ಹಾಗೂ ಮಾನವನ ನೈತಿಕ , ಬೌದ್ಧಿಕ, ವೈಚಾರಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ ರಾಜಕೀಯ ಕರ್ತವ್ಯವಿದ್ದಂತೆ.

ಒಟ್ಟಿನಲ್ಲಿ ಧರ್ಮ ಎಂದರೆ ವ್ಯಕ್ತಿಯ ಕರ್ತವ್ಯ, ಹಕ್ಕು, ಜವಬ್ದಾರಿ ಎಂದು ಸಮಾಜದಲ್ಲಿ ಆಳ್ವಿಕೆ ನಡೆಸಲು ಅನುಸರಿಸಬಹುದಾದ ನಿಯಮ ಎನ್ನಬಹುದು. ಧರ್ಮ ಎಂಬ ಪದವು ರಾಮಾಯಣ, ಮಹಾಭಾರತ, ಮನುಸ್ಮೃತಿ, ಋಗ್ವೇದ, ವೇದಗಳ ಸಾಹಿತ್ಯ, ಶುಕ್ರನ ನೀತಿಸಾರ, ಕಾಮಾಂದಕನ ನೀತಿಸಾರ, ನಾರದ ಸ್ಮೃತಿ, ಗೌತಮನ ಧರ್ಮ ಸೂತ್ರ, ಬೌದ್ಧಾಯನ ಇವೇ ಮೊದಲಾದ ಸಾಹಿತ್ಯಗಳಲ್ಲಿ ಬಳಸಲಾಗಿದೆ. ಮನುಸ್ಮೃತಿಯಲ್ಲಿ "ಶೀಲವಂತರಾದ ಪಂಡಿತರು ಯಾವುದನ್ನು ಆಚರಿಸುವರೋ ಹಾಗೂ ಯಾವುದು ಅತ್ಮಃಸಾಕ್ಷಿಯಾಗಿ ಅಂಗೀಕೃತವಾಗಿದೆಯೋ ಅದೇ "ಧರ್ಮ" ಎಂದಿದೆ. ಕಾಮಾಂದಕನ ನೀತಿ ಸಾರವು ಯಾವುದನ್ನು ಆಚರಿಸಿ ಅನುಸರಿಸಿದರೆ, ವೈದಿಕರು ಗೌರವಿಸುತ್ತಾರೋ ಅದೇ "ಧರ್ಮ" ಎಂದು ಹೇಳಲಾಗಿದೆ. ಜೈನ ಮುನಿಯು ಧರ್ಮ ಎಂದರೆ ಸುಖಕ್ಕೆ ಕಾರಣವಾಗುವ ಅಪೇಕ್ಷಿತ ಉದ್ದೇಶ ಅಥವಾ ಫಲ ಎಂದಿದ್ದಾರೆ.

ಪ್ರಾಚೀನ ಭಾರತದ ರಾಜಕೀಯ ಚಿಂತಕರ ಪ್ರಕಾರ ಧರ್ಮವನ್ನು ರಕ್ಷಿಸುವುದು ರಾಜನ ಬಹುಮುಖ್ಯ ಕಾರಣವಾಗಿದೆ. ರಾಜ ಧರ್ಮವನ್ನು ರಕ್ಷಿಸಿದರೆ, ಧರ್ಮ ರಾಜನನ್ನು ರಾಜ್ಯವನ್ನು ರಕ್ಷಿಸುತ್ತದೆ. ಧರ್ಮ ಉನ್ನತ ಮಟ್ಟಕ್ಕೆ ಏರಿದಂತೆಲ್ಲಾ ಜನರು ಸಂತೋಷದಿಂದಿರುತ್ತಾರೆ. ಧರ್ಮ ಕ್ಷೀಣಿಸಿದಂತೆಲ್ಲಾ ಜನರು ಸಂಕಷ್ಟವನ್ನು ಎದರಿಸುತ್ತಾರೆ. ಧರ್ಮ ಎಂದರೆ ನೈತಿಕವಾಗಿ, ಭೌತಿಕವಾಗಿ, ಸರ್ವ ವ್ಯಾಪಕವಾದಂತಹ ತತ್ವವಾಗಿದ್ದು, ಮಾನವ ಸಮಾಜವನ್ನು ಆಳ್ವಿಕೆ ನಡೆಸಲು ಅನುಸರಿಸುವ ಕಾನೂನು. ರಾಜನಾದವನು ಧಾರ್ಮಿಕ ಮಾರ್ಗದಲ್ಲಿ ನಡೆಯುತ್ತಿದ್ದನು. ದೇವರು, ರೂಢಿ ಪದ್ಧತಿ ಮತ್ತು ಸಂಪ್ರದಾಯಗಳ ಮಿತಿಗೆ ರಾಜನು ಒಳಗಾಗಿದ್ದನು. ಅಂದರೆ ದೇವಾಜ್ಞೆ ಮತ್ತು ಧರ್ಮಗಳು ರಾಜನನ್ನು ನಿಯಂತ್ರಿಸುವ ನೈತಿಕ ನಿಯಮಗಳಾಗಿವೆ. ರಾಜನು ಧರ್ಮ ಮಾರ್ಗದಲ್ಲಿ ರಾಜಭಾರ ಮಾಡಬೇಕೆಂದು ನೀತಿಯುತ ರಾಜಕೀಯ ಮಾಡಬೇಕೆಂದು ಹೇಳಲಾಗಿದೆ.

ಬೌದ್ಧ ಸಾಹಿತ್ಯದಲ್ಲಿ ರಾಜಕೀಯವು ನೈತಿಕ ತಳಹದಿಯ ಮೇಲಿರಬೇಕೆಂದು ಹೇಳಿದೆ. ಮಹಾಭಾರತದಲ್ಲಿಯೂ ರಾಜಧರ್ಮವು ನೈತಿಕತೆಯ ತಳಹದಿಯ ಮೇಲೆ ನಿಂತಿದೆ ಎಂದು ಹೇಳಿದೆ. ಇದರಲ್ಲಿ ರಾಜಧರ್ಮವನ್ನು ಅಧರ್ಮಕ್ಕೆ ವಿರೋಧವಾಗಿ ನೀತಿ ನಿಬಂಧಗಳ ಸಂಕೇತವಾಗಿ ಬಳಸಲಾಗಿದೆ. ರಾಮಾಯಣದ ೬೬ ಶ್ಲೋಕಗಳು ರಾಜಧರ್ಮ ಬಗ್ಗೆ ಪ್ರಸ್ತಾಪಿಸುತ್ತವೆ. ರಾಮನಂತಹ ಆದರ್ಶ ರಾಜ ಧರ್ಮಮಾರ್ಗದಿಂದ ರಾಜ್ಯ ಭಾರ ಮಾಡಿದ್ದರಿಂದಲೇ ಪ್ರಜೆಗಳೆಲ್ಲ ರಾಮರಾಜ್ಯವೆಂಬ ಸುಖೀರಾಜ್ಯದಲ್ಲಿ ಸುಖವಾಗಿದ್ದರು. ಇಂದಿನ ರಾಜಕೀಯ ನಾಯಕರಿಗೂ ರಾಮನ ಆದರ್ಶಗಳು ಮಾರ್ಗದರ್ಶಕವಾಗಿವೆ.

ಮಹಾಭಾರತದಲ್ಲಿ ರಾಜನು ನಿರಂಕುಶಾಧಿಕಾರಿಯಂತೆ ವರ್ತಿಸದೇ ಆಡಳಿತವನ್ನು ಒಂದು ಸಭೆಯ ನೆರವಿನಿಂದ ನಡೆಸುತ್ತಿದ್ದನು. ಈ ಸಭೆಯಲ್ಲಿ ಧರ್ಮಾಧಿಕಾರಿಗಳು ಇರುತ್ತಿದ್ದರು. ಇವರು ರಾಜನನ್ನು ಧರ್ಮ, ಸಾಮಾಜಿಕ ಕಟ್ಟು ಪಾಡುಗಳಿಗೆ ಅನುಸಾರವಾಗಿ ರಾಜ್ಯಭಾರ ಮಾಡಲು ಸೂಚಿಸುತ್ತಿದ್ದರು.

ಅರವಿಂದೋ ಅವರು ಹಿಂದೂ ರಾಜಕೀಯದ ಮೂಲ ಪ್ರಮುಖ ಲಕ್ಷಣಗಳನ್ನು ಗುರುತಿಸಿದ್ದಾರೆ. ಅವುಗಳೆಂದರೆ, ಆಧ್ಯಾತ್ಮಿಕತೆ, ಸೃಜನಶೀಲತೆ, ಹಾಗೂ ಬೌದ್ಧಿಕತೆಗಳು. ಇವರ ಪ್ರಕಾರ ಧಾರ್ಮಿಕತೆ ಮತ್ತು ತ್ಯಾಗ ಅಂದಿನ ಜೀವನದಲ್ಲಿ ಹಾಸುಹೊಕ್ಕಾಗಿತ್ತು.

ಪ್ರಾಚೀನ ಭಾರತದ ರಾಜಕೀಯದ ಮೇಲೆ ಧರ್ಮದ ಪ್ರಭಾವ ಕಾಣುತ್ತೇವೆ. ಹಿಂದೂ ರಾಜಕೀಯ ಚಿಂತಕರು ಧರ್ಮ ಮತ್ತು ರಾಜಕೀಯವನ್ನು ಪ್ರತ್ಯೇಕಿಸಿಲ್ಲ. ಆ ಕಾಲದಲ್ಲಿ ಧರ್ಮ ಎಂಬುದು ವ್ಯಕ್ತಿಯ ಜನನದಿಂದ ಹಿಡಿದು ಮರಣದವರೆಗೂ  ಹಾಸುಹೊಕ್ಕಾಗಿತ್ತು. ವ್ಯಕ್ತಿಯ ಜೀವನದ ಎಲ್ಲಾ ಹಂತಗಳಲ್ಲೂ ಧರ್ಮ ಹೇಗೆ ಸುತ್ತುವರಿದಿತ್ತೋ ಹಾಗೆಯೇ ಅಂದಿನ ರಾಜಕೀಯ ಸಂಸ್ಥೆಗಳ ಮೇಲೆ, ರಾಜಕೀಯ ವಿಚಾರಗಳ ಮೇಲೆ ಧರ್ಮದ ಪ್ರಭಾವ ಕಾಣುತ್ತೇವೆ. ಅಂದಿನ ಬಹುತೇಕ ತತ್ವಜ್ಞಾನಿಗಳ ಬರಹದಲ್ಲಿಯೂ ಆದ್ಯಾತ್ಮಿಕತೆಯ ಪ್ರಭಾವ ಕಾಣುತ್ತೇವೆ. ಇದಕ್ಕೆ ಉದಾಹರಣೆ ಎಂದರೆ ರಾಜ್ಯದ ಉಗಮದ ಕುರಿತಾದ ದೈವಿ ಸಿದ್ಧಾಂತ. ಈ ಸಿದ್ಧಾಂತದ ಪ್ರಕಾರ ರಾಜ್ಯದ ಅಸ್ತಿತ್ವಕ್ಕೆ ದೈವಿಶಕ್ತಿಯೇ ಕಾರಣ. ದೇವರ ಉದ್ದೇಶವನ್ನು ಸಾಧನೆ ಮಾಡುವದಕ್ಕಾಗಿಯೇ ರಾಜನನ್ನು ನೇಮಿಸಲಾಯಿತು. ರಾಜನ ಆದೇಶವನ್ನು ಉಲ್ಲಂಘಿಸಿದವರನ್ನು ದೇವರೆ ಅಂದರೇ ರಾಜನೇ ಶಿಕ್ಷಿಸುತ್ತಾನೆ ಎಂದು ಹೇಳಲಾಗಿದೆ. ಈ ಸಿದ್ಧಾಂತ ಕಾಲ್ಪನಿಕವಾದರೂ ಧರ್ಮದ ಜೊತೆಗೆ ರಾಜಕೀಯದ ಸಂಬಂಧ ತಳುಕು ಹಾಕುತ್ತದೆ. ಪ್ರಾಚೀನ ಭಾರತದ ರಾಜನೀತಿಯ ಪ್ರಕಾರ ರಾಜ ರಾಜ್ಯದ ಧರ್ಮದರ್ಶಿಯಾಗಿ, ವಿಶ್ವಸ್ಥವಾಗಿ, ದೈವ ಶಾಸನಕ್ಕೆ ತಲೆಬಾಗಿ ರಾಜ್ಯವನ್ನಾಳುತ್ತಿದ್ದ ದೈವ ಶಾಸನಕ್ಕೆ ಮಿಗಿಲಾದ ಯಾವುದೇ ಶಾಸನವು ಇರಲಿಲ್ಲ.

ಆದರೆ ಪ್ರಾಚೀನ ಭಾರತದ ಹಿಂದೂ ರಾಜ ನೀತಿಜ್ಞನಾದ ಕೌಟಿಲ್ಯನ ಪ್ರಕಾರ ಜಗತ್ತಿನಲ್ಲಿ ಮಾನವನ ಮೇಲೆ ದೈವ ನಿಯಮಗಳು ಪ್ರಭಾವ ಬೀರತ್ತವೆ ಎಂದಾಗಲೇ ಮಾನವನ ಬೌದ್ಧಿಕ  ಶಕ್ತಿಗೂ ಮೀರಿದ ದೈವ ಕೈವಾಡವೊಂದಿದೆ ಎಂಬುದನ್ನು ಒಪ್ಪುವುದಿಲ್ಲ. ಅಂದರೆ ಸುವ್ಯವಸ್ಥಿತವಾದ ಸಮಾಜದ ನಿರ್ಮಾಣವು ದೇವರ ಹಿಡಿತದಲ್ಲಿಲ್ಲದೇ ಮಾನವನ ಹಿಡಿತದಲ್ಲಿಯೇ ಇದೆ ಎಂದು ಸಮರ್ಥಿಸಿದ್ದು, ರಾಜ್ಯವನ್ನು ಧರ್ಮ ಮತ್ತು ನೀತಿಯ ತಳಹದಿಯ ಮೇಲೆ ನಿರ್ಮಾಣ ಮಾಡುವ ಬದಲು ವಿಚಾರದ ತಳಹದಿಯ ಮೇಲೆ ರಾಜ್ಯವನ್ನು ಸ್ಥಾಪಿಸಬೇಕೆಂದು ಹೇಳಿದ್ದಾರೆ.

ಕೌಟಲ್ಯನು ರಾಜ್ಯದ ಒಳಿತಿಗಾಗಿ ರಾಜನಾದವನು ಧರ್ಮವನ್ನು ರಾಜಕೀಯಕ್ಕೆ ಬಳಸಿಕೊಳ್ಳಲು ಪೂರ್ಣ ಸ್ವತಂತ್ರವಾಗಿದ್ದು, ಆದರೆ ರಾಜಕೀಯದ ಮೇಲೆ ಧರ್ಮ ಮೈಲುಗೈ ಸಾದಿಸುವಂತೆ ನೋಡಿಕೊಳ್ಳಬೇಕೆಂದು ಸಲಹೆ ನೀಡಿದ್ದಾನೆ. ರಾಜ್ಯ ಹಣಕಾಸಿನ ದುಸ್ಥಿತಿಯನ್ನು ಎದುರಿಸುತ್ತಿದ್ದರೆ ಧಾರ್ಮಿಕ ಸಂಸ್ಥೆಗಳು, ದೇವಸ್ಥಾನಗಳು, ಬ್ರಾಹ್ಮಣರ ಆದೀನದಲ್ಲಿರುವ ದೇವಸ್ಥಾನಗಳಿಂದಲೂ ಸಹ ಜನರಿಗೆ ತಿಳಿಯದಂತೆ ಉಪಯೋಗಿಸಕೊಳ್ಳಬೇಕೆಂದು ಸಹ ಜನರಿಗೆ ತಿಳಿಯದಂತೆ ಉಪಯೋಗಿಸಕೊಳ್ಳಬೇಕೆಂದು ಹೇಳಿದ್ದಾರೆ. ಹಾಗೆಯೇ ಧಾರ್ಮಿಕ ಮಂದಿರಗಳಲ್ಲಿ ವಿಗ್ರಹಗಳಲ್ಲಿ ಆಯುಧಗಳನ್ನು ಅಡಗಿಸಿಟ್ಟು, ಆ ಮಂದಿರಗಳಲ್ಲಿ ಅಡಗಿ ಕುಳಿತು ದೇವರೇ ಮಾತಾಡುವಂತೆ ಸ್ವಂತ ರಾಜನೇ ಮಾತಾಡಿ ಶತ್ರುಗಳನ್ನು ಹೆದರಿಸುವುದು, ಆ ಮೂಲಕ ರಾಜಕೀಯ ಹಿತಸಾಧನೆ ಮಾಡಿಕೊಳ್ಳಬೇಕು. ಒಟ್ಟಿನಲ್ಲಿ ಕೌಟಿಲ್ಯನು ಒಂದು ಕಡೆ ಧರ್ಮಕ್ಕೆ ಪ್ರಾಮುಖ್ಯತೆ ನೀಡಿದರೆ, ಮತ್ತೊಂದು ಕಡೆ ಧರ್ಮವನ್ನು ವಿರೋಧಿಸುವಂತಹ ದ್ವಂದ್ವ ನೀತಿಯನ್ನು ಅನುಸರಿಸಿದ್ದಾನೆ. ಆದರೆ ರಾಜ್ಯದ ಸಂರಕ್ಷಣೆಗೋಸ್ಕರ, ರಾಜ್ಯದ ಹಿತ ಕಾಪಾಡುವುದಕ್ಕೋಸ್ಕರ ರಾಜನು ಧರ್ಮವನ್ನು ಮೆಟ್ಟಿ ನಿಲ್ಲಬಹುದು. ಹೀಗೆ ಕೌಟಿಲ್ಯನು ಧರ್ಮಕ್ಕಿಂತ ರಾಜ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿರುವುದು ಕಂಡು ಬರುತ್ತದೆ. ಅಂದರೆ ಕೌಟಿಲ್ಯ ಧರ್ಮವನ್ನು ಎತ್ತಿ ಹಿಡಿದ್ದಿದ್ದು, ರಾಜ್ಯಕ್ಕೆ ಆಪತ್ತು ಬಂದಾಗ ಮಾತ್ರವೇ ಧರ್ಮವನ್ನು ಮೆಟ್ಟಿ ನಿಲ್ಲುವಂತೆ ಸಲಹೆ ಮಾಡಿದ್ದಾರೆ. ಏಕೆಂದರೆ ರಾಜ್ಯ ಇದ್ದಾಗ ಮಾತ್ರವೇ ಧರ್ಮ, ನೀತಿಗೆ ಅಸ್ತಿತ್ವವಿರಲು ಸಾಧ್ಯ ಎಂಬ ಅಂಶವನ್ನು ಎತ್ತಿ ಹಿಡಿದಿದ್ದಾನೆ. ಅಂದರೆ ರಾಜ್ಯದ ಅಸ್ತಿತ್ವವನ್ನು ಉಳಿಸಿಕೊಳ್ಳಲು ಕುಟೀಲ ತಂತ್ರಗಳನ್ನು ಅನುಸರಿಸುವಂತೆಯೋ ಹೇಳಿದ್ದಾನೆ.

ಸ್ವಾಮಿ ವಿವೇಕಾನಂದರು ಧರ್ಮ ಎಂದರೆ ಆಧ್ಯಾತ್ಮಿಕ ಮತ್ತು ನೈತಿಕ ಶಕ್ತಿಯೇ ಆಗಿದ್ದು, ಇದು ವ್ಯಕ್ತಿ ಹಾಗೂ ರಾಷ್ಟ್ರದ ಅಭಿವೃದ್ಧಿಗೆ ಅತ್ಯಂತ ಸಹಕಾರಿಯಾಗಿದೆ ಎಂದು ಅವರ ಅಭಿಮತವಾಗಿತ್ತು. ಅಂದರೆ ಆಧ್ಯಾತ್ಮಿಕ ಮತ್ತು ನೀತಿ ಧರ್ಮಗಳ ಆಧಾರದ ಮೇಲೆ ರಾಜ್ಯದ ನಿರ್ಮಾಣ ಅಭಿವೃದ್ಧಿಗೆ ಪೂರಕವಾಗಿದೆ. ಆದರೆ ಅವರು ಧರ್ಮದ ಹೆಸರಿನಲ್ಲಿ ನಡೆಯುವ ಅಂಧಶ್ರದ್ಧೆ ಅಸಮಾನತೆಯನ್ನು ಬೆಂಬಲಿಸದವರಲ್ಲ.

ರಾಜಕೀಯದಲ್ಲಿ ಧರ್ಮದ ಪಾತ್ರ ಸಕಾರಾತ್ಮಕವಾಗಿರಬೇಕೆಂದು ಪ್ರತಿಪಾದಿಸದವರು ಮಹಾತ್ಮಾ ಗಾಂಧೀಜಿಯವರು. ಧರ್ಮದಿಂದ ಪ್ರತ್ಯೇಕವಾದ ರಾಜಕೀಯವನ್ನು ಬಯಸಿದವರಲ್ಲ. ಗಾಂಧೀಜಿಯವರ ಪ್ರಕಾರ ಧರ್ಮದ ಜ್ಞಾನವಿಲ್ಲದ ರಾಜಕೀಯವನ್ನು ಹಾವಿಗೆ ಹೋಲಿಸದ್ದಾರೆ. ಧರ್ಮ ಮರೆತ ರಾಜಕೀಯ ನಾಯಕರು ಹಾವಿನಷ್ಟೇ ವಿಷಕಾರಿಯಾಗುತ್ತಾರೆ. ಹೀಗೆ ರಾಜಕೀಯ ಮತ್ತು ಧರ್ಮಕ್ಕೂ ಅನ್ಯೋನ್ಯ ಸಂಬಂಧವಿದ್ದು, ಈ ಸಂಬಂಧವನ್ನು ವ್ಯಕ್ತಿಯ ದೇಹ ಮತ್ತು ಆತ್ಮಕ್ಕೆ ಹೋಲಿಸಿದ್ದಾರೆ. ರಾಜಕಾರಣ ಧರ್ಮ ರಹಿತವಾಗಿದ್ದರೆ ಅದು ಆತ್ಮವಿಲ್ಲದ ದೇಹದಂತೆ ಅಂದರೆ ಸತ್ತ ಹೆಣದಂತೆ ಆಗುತ್ತದೆ. ರಾಜಕೀಯಕ್ಕೆ ಧರ್ಮದ ಅಗತ್ಯವಿದೆ. ರಾಜಕಾರಣ ಧರ್ಮ ರಹಿತವಾಗಿರಬಾರದು ಎಂದು ಆಶಿಸಿದ್ದಾರೆ. ಗಾಂಧೀಜಿಯವರು ಎಲ್ಲಾ ಧರ್ಮಗಳನ್ನು ಒಂದೇ ಎಂದು ಬಾವಿಸಿದ್ದು, ಅವರ ಪ್ರಕಾರ ಸತ್ಯ ಮತ್ತು ಅಹಿಂಸೆಯೇ ಎಲ್ಲಾ ಧರ್ಮದ ಮೂಲವಾಗಿದ್ದು, ಅನೈತಿಕ ಮಾರ್ಗಗಳಿಂದ ರಾಜಕೀಯ ಲಾಭ ಪಡೆಯುವದನ್ನು ವಿರೋಧಿಸಿದ್ದಾರೆ. ಅವರ ಪ್ರಕಾರ ರಾಜಕೀಯದಲ್ಲಿ ಸತ್ಯ ಮತ್ತು ಅಹಿಂಸೆ ಇರಬೇಕು. ಈ ಮಾತನ್ನು ಇಂದಿನ ಕಾಲದ ರಾಜಕೀಯಕ್ಕೆ ಹೋಲಿಸಿದಾಗ ಬಹಳ ನಿರಾಸೆಯಾಗುತ್ತದೆ. ರಾಜಕೀಯದಲ್ಲಿ ಹಿಂಸೆ ಸಾಮಾನ್ಯವಾಗಿದ್ದು, ಅಪರಾಧದ ಹಿನ್ನಲೆಯುಳ್ಳವರೇ ಹೆಚ್ಚಾಗಿ ಚುನಾವಣೆಗೆ ಸ್ಪರ್ಧಿಸುತ್ತಿದ್ದಾರೆ. ಗೆದ್ದು ಬಂದು ಸಚಿವರಾಗಿ ಅನೈತಿಕ ಮಾರ್ಗದಿಂದ ದುಡ್ಡು ಗಳಿಸುತ್ತಿದ್ದಾರೆ. ಇದರಿಂದಾಗಿ ಇಂದು ಭ್ರಷ್ಟಾಚಾರ, ಹಿಂಸೆ ತಾಂಡವಾಡುತ್ತಿದೆ.

**ಉಪಸಂಹಾರ:**

ಈ ಮೇಲಿನ ಎಲ್ಲಾ ವಿಚಾರಗಳನ್ನು ಗಮನಿಸಿದಾಗ ಪ್ರಾಚೀನ ಕಾಲದ ಭಾರತದಲ್ಲಿ ಧರ್ಮ ಪ್ರಧಾನ ರಾಜಕೀಯವಿತ್ತು. ಸತ್ಯ , ನ್ಯಾಯ, ನೀತಿಗಳೇ ಧರ್ಮದ ತಳಹದಿಯಾಗಿದ್ದವು. ಅಂದರೆ ಸತ್ಯ, ಧರ್ಮ , ನ್ಯಾಯ ನೀತಿ ಪ್ರತಿಪಾದಿಸುವ, ರಾಜಕೀಯದಲ್ಲಿ ಶಿಸ್ತು, ಪ್ರಾಮಾಣಿಕತೆ ಕರ್ತವ್ಯ ಪ್ರಜ್ಞೆ ಬೆಳೆಸುವಂತಹ ಧರ್ಮದ ಅವಶ್ಯಕತೆ ಎಂದಿಗೂ ಇದ್ದೆ ಇರುತ್ತದೆ. ಗಾಂಧೀಜಿಯವರು ಸತ್ಯ, ಅಹಿಂಸೆ, ನ್ಯಾಯನೀತಿಗಳೇ ಧರ್ಮವೆಂದು ಅರ್ಥೈಸಿ ಅಂತಹ ಧರ್ಮ ರಾಜಕೀಯದಲ್ಲಿ ಇರಬೇಕೆಂದು ಹೇಳಿದರು. ನಾಯಕನಾದವನು ನ್ಯಾಯ, ಅನ್ಯಾಯ, ಸರಿ ತಪ್ಪುಗಳ ಪರಿಜ್ಞಾನ ಹೊಂದಿರಬೇಕು. ರಾಜಕೀಯ ಎಂದರೇ ಜನಸೇವೆ ಮಾಡುವ ಕ್ಷೇತ್ರವಾಗಿದ್ದು, ಜನಸೇವೆಯೇ ಜನಾರ್ಧನ ಸೇವೆ ಎಂದು ತಿಳಿದು, ಸೇವಾ ಮನೋಭಾವನೆಯಿಂದ ಕಾರ್ಯ ನಿರ್ವಹಿಸಬೇಕು. ರಾಜಕೀಯ ಒಂದು ವೃತ್ತಿಯಲ್ಲ, ಲಾಭ ನಷ್ಟಗಳ ಲೆಕ್ಕ ಹಾಕಿ ಕೆಲಸ ಮಾಡುವ ಕ್ಷೇತ್ರವಲ್ಲ. ಅದು ರಾಷ್ಟ್ರದ  ಒಳಿತಿಗಾಗಿ, ಜನತೆಯ ಹಿತಕ್ಕಾಗಿ ನಿಶ್ವಾರ್ಥದಿಂದ ದುಡಿಯುವ ಜನರನ್ನು ಬಯಸುವ ಕ್ಷೇತ್ರ. ಆದರೆ ಅಧಿಕಾರ ಪಡೆಯುವ ವ್ಯಾಮೋಹದಿಂದಾಗಿ ನ್ಯಾಯ ಅನ್ಯಾಯಗಳ ಪರಿಜ್ಞಾನ ಇಲ್ಲದೇ, ರಾಜಕೀಯದಲ್ಲಿ ಧರ್ಮ ಬೇಡ ಎನ್ನುತ್ತಾ ಮಾಡಿದ್ಮೇಲೆ ಸರಿ ಎನ್ನುವ ಮನೋಭಾವನೆಯಿಂದಾಗಿ ರಾಜಕೀಯ ಕ್ಷೇತ್ರ ಧರ್ಮವನ್ನು ಮರೆತ ಪರಿಣಾಮ ಇಂದು ಭ್ರಷ್ಟಾಚಾರ, ಹಿಂಸೆ, ಸ್ವಜನಪಕ್ಷಪಾತ, ತುಂಬಿ ತುಳುಕುತ್ತಿದೆ. ಇದರಿಂದಾಗಿ ಒಳ್ಳೆಯ ಜನರು ರಾಜಕೀಯಕ್ಕೆ ಬರಲು ಭಯಪಡುವಂತಾಗಿದೆ. ಹೀಗೆ ಮುಂದುವರೆದರೆ ಜನರು ದುಷ್ಟ ನಾಯಕನ ಕೈಯಲ್ಲಿ ಸಿಲುಕಿ ತೊಂದರೆ ಅನುಭವಿಸುತ್ತಾರೆ. ದೇಶ ಅಧೋಗತಿಗೆ ಇಳಿಯುತ್ತದೆ. ಇಂತಹ ಸ್ಥಿತಿ ಬರಬಾರದೆಂದರೆ ಸತ್ಯ ನ್ಯಾಯ ಪ್ರಾಮಾಣಿಕತೆಯನ್ನು ತಿಳಿಸುವ, ಜನರನ್ನು ಸರಿಯಾದ ದಾರಿಯಲ್ಲಿ ನಡೆಸುವ ಧರ್ಮದ ಅವಶ್ಯಕತೆ ಇದೆ.

**ಅಧಾರ ಗ್ರಂಥಗಳು:**

೧) ಡಾ. ಕೆ.ಜಿ.ಸುರೇಶ : ರಾಜಕೀಯ ಸಿದ್ಧಾಂತ ಮತ್ತು ಚಿಂತಕರು.
೨) ಪ್ರೊ.ಎಸ್.ಎನ್.ಸಿ.ರಾವ : ರಾಜ್ಯ ನೀತಿಯ ವಿವೇಚಕರು.
೩) ಡಾ. ಕೆ.ಜಿ.ಸುರೇಶ: ಭಾರತದ ರಾಜಕೀಯ ಚಿಂತನೆ.
4) ಆಡಿ. J.S. Patil, Indian Political Thought.
5) Himanshu Roy and M.P. Singh: Indian Political Thought.



# ಕಲ್ಯಾಣ ಕರ್ನಾಟಕದ ಬೀದರ್ ಸಹಕಾರ ಕನ್ನಡ ಕೃಷಿ ಪತ್ರಿಕೆ ಬೆಳೆದು ಬಂದ ಹಾದಿ.

**–ಡಾ. ನರಸಿಂಹ,**
ಸಹಾಯಕ ಪ್ರಾಧ್ಯಾಪಕರು, ಪತ್ರಿಕೋದ್ಯಮ ವಿಭಾಗ
ಸರಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ಕೊಪ್ಪಳ.

**ಲೇಖನ ಸಾರಂಶ.**

ಮಾಧ್ಯಮಗಳು ಸಮಾಜದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ಸಮೂಹ ಮಾಧ್ಯಮಗಳಲ್ಲಿ ಪತ್ರಿಕೆಗಳು ಅಗ್ರಸ್ಥಾನ ಹೊಂದಿದ್ದು ಓದುಗರಿಗೆ ಜ್ಞಾನಾರ್ಜನೆ, ಮಾಹಿತಿ ಹಾಗೂ ಮನರಂಜನೆಯ ದಾಹವನ್ನು ನೀಗಿಸುತ್ತಾ ಬಂದಿವೆ. ಇವು ಸಾಮಾನ್ಯ ಪತ್ರಿಕೆಗಳಿಗಿಂತ ಭಿನ್ನವಾಗಿ ವಿಶೇಷ ಪತ್ರಿಕೆಗಳಾಗಿ ತಮ್ಮದೇ ಆದ ಓದುಗರ ಆಶೋತ್ತರಗಳಿಗೆ ನಿರಂತರವಾಗಿ ಸ್ಪಂದಿಸುತ್ತಾ ಬಂದಿವೆ. ಅಂತಹ ವಿಶೇಷ ಪತ್ರಿಕೆಗಳ ಸಾಲಿನಲ್ಲಿ ಕೃಷಿ ಪತ್ರಿಕೆಗಳು ಸೇರಿವೆ. ಕೃಷಿ ಅಭಿವೃದ್ದಿಯಲ್ಲಿ ಕೃಷಿ ಪತ್ರಿಕೆಗಳು ಮಹತ್ತರ ಪಾತ್ರವನ್ನು ವಹಿಸುತ್ತಿವೆ. ಹೊಸ ಆವಿಷ್ಕಾರಗಳು, ವಿವಿಧ ಬೆಳೆ ಪದ್ಧತಿಗಳು, ವೈಜ್ಞಾನಿಕ ವಿಚಾರಗಳು, ಗೊಬ್ಬರ, ಕೀಟನಾಶಕಗಳು ಹೀಗೆ ವ್ಯವಸಾಯದ ಕುರಿತು ವಿಭಿನ್ನ ಮಾಹಿತಿಯನ್ನು ನೀಡುತ್ತಿವೆ. ಕೃಷಿ ಪತ್ರಿಕೋದ್ಯಮವು ಅಭಿವೃದ್ಧಿ ದೇಶಗಳ ಜೊತೆಗೆ ಭಾರತದಂತಹ ಅಭಿವೃದ್ಧಿಶೀಲ ದೇಶಗಳಲ್ಲಿಯೂ ಸಹ ತನ್ನದೇ ಆದ ಸ್ಥಾನವನ್ನು ಪಡೆದುಕೊಳ್ಳುತ್ತಿದೆ. ಆಧುನಿಕ ವ್ಯವಸಾಯ ಪದ್ಧತಿಗಳ ಆಗಮನದಿಂದ ಕೃಷಿ ಪತ್ರಿಕೋದ್ಯಮದ ಮಹತ್ವ ಹೆಚ್ಚಾಗಿದೆ. ಜ್ಞಾನ ಮತ್ತು ಕೌಶಲ್ಯಗಳ ವರ್ಗಾವಣೆಯೇ ಕೃಷಿ ಪತ್ರಿಕೋದ್ಯಮದ ಮೂಲ ಉದ್ದೇಶವಾಗಿದೆ.

ಭಾರತದಲ್ಲಿ ಇತರೆ ಭಾಷಾ ಪತ್ರಿಕೋದ್ಯಮದಂತೆ ಕನ್ನಡದಲ್ಲಿಯೂ ಕೃಷಿ ಪತ್ರಿಕೋದ್ಯಮವು ಇಂದು ಎರಡು ರೀತಿಯಲ್ಲಿರುವುದನ್ನು ಕಾಣಬಹುದು. ಮೊದಲನೆಯದು ಮುಖ್ಯವಾಹಿನಿ ಪತ್ರಿಕೆಗಳಲ್ಲಿ ಪ್ರಕಟವಾಗುವ ಕೃಷಿ ವಿಷಯಗಳು ಹಾಗೂ ಅವುಗಳು ಹೊರ ತರುವ ಕೃಷಿ ಸಾಪ್ತಾಹಿಕಗಳು. ಕನ್ನಡ ಎಲ್ಲಾ ದೈನಿಕಗಳು ಸಹ ಕೃಷಿ ಪುರವಣಿಗಳನ್ನು ಹೊರ ತರುತ್ತಿವೆ. ಮುಖ್ಯವಾಹಿನಿ ಪತ್ರಿಕೆಗಳಲ್ಲಿ ಬಳಸುವ ಭಾಷೆ ಸರಳವಾಗಿ ಅರ್ಥವಾಗುವ ಜೊತೆಗೆ ಹೆಚ್ಚು ಜನರನ್ನು ತಲುಪುತ್ತವೆ. ಎರಡನೆಯದು, ಕೃಷಿಗಾಗಿಯೇ ಇರುವ ನಿಯತಕಾಲಿಕೆಗಳು.

ಕನ್ನಡದಲ್ಲಿನ ಸಾಮಾನ್ಯ ಪತ್ರಿಕೆಗಳು ವಿಶೇಷವಾಗಿ ದೈನಿಕಗಳು ಸೇರಿದಂತೆ ಎಲ್ಲಾ ರೀತಿಯ ಸುದ್ದಿಗಳು ಇದ್ದು ಕೃಷಿ ಪೂರಕ ವರದಿಗಾರಿಕೆಗೆ ಸೀಮಿತವಾಗಿದೆ. ಇದು ನಾನಾ ರೀತಿಯ ಕೃಷಿ ಪ್ರಕಾರದ ಮಾಹಿತಿಯನ್ನು ದೇಶದ ಬೆನ್ನೆಲಬಾದ ರೈತರಿಗೆ ಸಮಗ್ರವಾಗಿ ನೀಡಲು ಕೃಷಿ ಪತ್ರಿಕೆಗಳ ಆರಂಭಕ್ಕೆ ನಾಂದಿಯಾಯಿತು. ಈ ಪತ್ರಿಕೆಗಳ ಜೊತೆಯಲ್ಲಿ ದೇಶದ ಅಭಿವೃದ್ಧಿ ಪಥ ಹಾಗೂ ಸಾಕ್ಷರತೆ ಪ್ರಮಾಣ ಹೆಚ್ಚುತ್ತಿದ್ದಂತೆ ಕರ್ನಾಟಕದ ಕನ್ನಡ ಜನಪ್ರಿಯ ದಿನಪತ್ರಿಕೆಗಳು ಸಹ ಕೃಷಿ ಕುರಿತ ವಿಶೇಷ ಪ್ರಕಟಣೆಗಳನ್ನು ಹೊರತರುವ ಪರಿಪಾಠವನ್ನು ಆರಂಭಿಸಿದವು. ಹಾಗೇಯೇ ಕರ್ನಾಟಕದಲ್ಲಿ ಬಹಳಷ್ಟು ಕನ್ನಡ ಕೃಷಿ ಪತ್ರಿಕೆಗಳು ಹುಟ್ಟಿಕೊಂಡವು. ಇವುಗಳಲ್ಲಿ ಕಲ್ಯಾಣ ಕರ್ನಾಟಕದ ಬೀದರ್ ಸಹಕಾರ ಕನ್ನಡ ಕೃಷಿ ಪತ್ರಿಕೆ ಕೂಡ ಪ್ರಮುಖ ಪತ್ರಿಯಾಗಿದೆ.

**ಪೀಠಿಕೆ.**

ಮಾಧ್ಯಮಗಳು ಸಮಾಜದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ಸಮೂಹ ಮಾಧ್ಯಮಗಳಲ್ಲಿ ಪತ್ರಿಕೆಗಳು ಅಗ್ರಸ್ಥಾನ ಹೊಂದಿದ್ದು ಓದುಗರಿಗೆ ಜ್ಞಾನಾರ್ಜನೆ, ಮಾಹಿತಿ ಹಾಗೂ ಮನರಂಜನೆಯ ದಾಹವನ್ನು ನೀಗಿಸುತ್ತಾ ಬಂದಿವೆ. ಇವು ಸಾಮಾನ್ಯ ಪತ್ರಿಕೆಗಳಿಗಿಂತ ಭಿನ್ನವಾಗಿ ವಿಶೇಷ ಪತ್ರಿಕೆಗಳಾಗಿ ತಮ್ಮದೇ ಆದ ಓದುಗರ ಆಶೋತ್ತರಗಳಿಗೆ ನಿರಂತರವಾಗಿ ಸ್ಪಂದಿಸುತ್ತಾ ಬಂದಿವೆ. ಅಂತಹ

ವಿಶೇಷ ಪತ್ರಿಕೆಗಳ ಸಾಲಿನಲ್ಲಿ ಕೃಷಿ ಪತ್ರಿಕೆಗಳು ಸೇರಿವೆ. ಕೃಷಿ ಅಭಿವೃದ್ಧಿಯಲ್ಲಿ ಕೃಷಿ ಪತ್ರಿಕೆಗಳು ಮಹತ್ತರ ಪಾತ್ರವನ್ನು ವಹಿಸುತ್ತಿವೆ. ಹೊಸ ಆವಿಷ್ಕಾರಗಳು, ವಿವಿಧ ಬೆಳೆ ಪದ್ಧತಿಗಳು, ವೈಜ್ಞಾನಿಕ ವಿಚಾರಗಳು, ಗೊಬ್ಬರ, ಕೀಟನಾಶಕಗಳು ಹೀಗೆ ವ್ಯವಸಾಯದ ಕುರಿತು ವಿಭಿನ್ನ ಮಾಹಿತಿಯನ್ನು ನೀಡುತ್ತಿವೆ. ಕೃಷಿ ಪತ್ರಿಕೋದ್ಯಮವು ಅಭಿವೃದ್ಧಿ ದೇಶಗಳ ಜೊತೆಗೆ ಭಾರತದಂತಹ ಅಭಿವೃದ್ಧಿಶೀಲ ದೇಶಗಳಲ್ಲಿಯೂ ಸಹ ತನ್ನದೇ ಆದ ಸ್ಥಾನವನ್ನು ಪಡೆದುಕೊಳ್ಳುತ್ತಿದೆ. ಆಧುನಿಕ ವ್ಯವಸಾಯ ಪದ್ಧತಿಗಳ ಆಗಮನದಿಂದ ಕೃಷಿ ಪತ್ರಿಕೋದ್ಯಮದ ಮಹತ್ವ ಹೆಚ್ಚಾಗಿದೆ. ಜ್ಞಾನ ಮತ್ತು ಕೌಶಲ್ಯಗಳ ವರ್ಗಾವಣೆಯೇ ಕೃಷಿ ಪತ್ರಿಕೋದ್ಯಮದ ಮೂಲ ಉದ್ದೇಶವಾಗಿದೆ.

**ಕರ್ನಾಟಕದಲ್ಲಿ ಕನ್ನಡ ಕೃಷಿ ಪತ್ರಿಕೋದ್ಯಮ.**

ಭಾರತದಲ್ಲಿ ಇತರೆ ಭಾಷಾ ಪತ್ರಿಕೋದ್ಯಮದಂತೆ ಕನ್ನಡದಲ್ಲಿಯೂ ಕೃಷಿ ಪತ್ರಿಕೋದ್ಯಮವು ಇಂದು ಎರಡು ರೀತಿಯಲ್ಲಿರುವುದನ್ನು ಕಾಣಬಹುದು. ಮೊದಲನೆಯದು ಮುಖ್ಯವಾಹಿನಿ ಪತ್ರಿಕೆಗಳಲ್ಲಿ ಪ್ರಕಟವಾಗುವ ಕೃಷಿ ವಿಷಯಗಳು ಹಾಗೂ ಅವುಗಳು ಹೊರ ತರುವ ಕೃಷಿ ಸಾಪ್ತಾಹಿಕಗಳು. ಕನ್ನಡ ಎಲ್ಲಾ ದೈನಿಕಗಳು ಸಹ ಕೃಷಿ ಪುರವಣಿಗಳನ್ನು ಹೊರ ತರುತ್ತಿವೆ. ಮುಖ್ಯವಾಹಿನಿ ಪತ್ರಿಕೆಗಳಲ್ಲಿ ಬಳಸುವ ಭಾಷೆ ಸರಳವಾಗಿ ಅರ್ಥವಾಗುವ ಜೊತೆಗೆ ಹೆಚ್ಚು ಜನರನ್ನು ತಲುಪುತ್ತವೆ. ಎರಡನೆಯದು, ಕೃಷಿಗಾಗಿಯೇ ಇರುವ ನಿಯತಕಾಲಿಕೆಗಳು.

ಕನ್ನಡದಲ್ಲಿನ ಸಾಮಾನ್ಯ ಪತ್ರಿಕೆಗಳು ವಿಶೇಷವಾಗಿ ದೈನಿಕಗಳು ಸೇರಿದಂತೆ ಎಲ್ಲಾ ರೀತಿಯ ಸುದ್ದಿಗಳು ಇದ್ದು ಕೃಷಿ ಪೂರಕ ವರದಿಗಾರಿಕೆಗೆ ಸೀಮಿತವಾಗಿದೆ. ಇದು ನಾನಾ ರೀತಿಯ ಕೃಷಿ ಪ್ರಕಾರದ ಮಾಹಿತಿಯನ್ನು ದೇಶದ ಬೆನ್ನೆಲಬಾದ ರೈತರಿಗೆ ಸಮಗ್ರವಾಗಿ ನೀಡಲು ಕೃಷಿ ಪತ್ರಿಕೆಗಳ ಆರಂಭಕ್ಕೆ ನಾಂದಿಯಾಯಿತು. ಈ ಪತ್ರಿಕೆಗಳ ಜೊತೆಯಲ್ಲಿ ದೇಶದ ಅಭಿವೃದ್ಧಿ ಪಥ ಹಾಗೂ ಸಾಕ್ಷರತೆ ಪ್ರಮಾಣ ಹೆಚ್ಚುತ್ತಿದ್ದಂತೆ ಕರ್ನಾಟಕದ ಕನ್ನಡ ಜನಪ್ರಿಯ ದಿನಪತ್ರಿಕೆಗಳು ಸಹ ಕೃಷಿ ಕುರಿತ ವಿಶೇಷ ಪ್ರಕಟಣೆಗಳನ್ನು ಹೊರತರುವ ಪರಿಪಾಠವನ್ನು ಆರಂಭಿಸಿದವು. ಹಾಗೇಯೇ ಕರ್ನಾಟಕದಲ್ಲಿ ಬಹಳಷ್ಟು ಕನ್ನಡ ಕೃಷಿ ಪತ್ರಿಕೆಗಳು ಹುಟ್ಟಿಕೊಂಡವು. ಇವುಗಳಲ್ಲಿ ಕಲ್ಯಾಣ ಕರ್ನಾಟಕದ ಬೀದರ್ ಸಹಕಾರ ಕನ್ನಡ ಕೃಷಿ ಪತ್ರಿಕೆ ಕೂಡ ಪ್ರಮುಖ ಪತ್ರಿಯಾಗಿದೆ.

**ಬೀದರ್ ಸಹಕಾರ ಕನ್ನಡ ಕೃಷಿ ಪತ್ರಿಕೆ.**

ಇದು ಕಲ್ಯಾಣ ಕರ್ನಾಟಕದ ಗುಲಬರ್ಗಾ ವಿಭಾಗದ ಬೀದರ್ ಜಿಲ್ಲೆಯಿಂದ ೧೯೯೭ ರಿಂದ ಪ್ರಕಟವಾಗುತ್ತಿದೆ. ಇದು ರೈತರ ಶ್ರೇಯೋಭಿವೃದ್ಧಿಗೆ ಮೀಸಲಾದ ಪತ್ರಿಕೆ ಎಂದು ಉಪ ಶೀರ್ಷಿಕೆ ತಿಳಿಸುತ್ತದೆ. ಪತ್ರಿಕೆಯ ಗಾತ್ರ ಡೆಮ್ಮಿ ೧/೬ ಇದೆ. ಇದರ ಪ್ರಧಾನ ಸಂಪಾದಕರು ಗುರುಪಾದಪ್ಪ ನಾಗಮಾರಪಳ್ಳಿ ಮೊದಲು ಇದ್ದರು. ವ್ಯವಸ್ಥಾಪಕ ಸಂಪಾದಕರು ನಿಜಪ್ಪ ಪತ್ರಿ ಹಾಗೂ ಸಂಪಾದಕರು ಮಹಾಜನ ಮಲ್ಲಿಕಾರ್ಜುನ ಮೊದಲು ಇದ್ದರು. ಇವರು ಸಂಪಾದಕೀಯ ವೃತ್ತಿಯನ್ನು ತಮ್ಮ ವೃತ್ತಿ ಬದುಕಿನ ಜೊತೆಗೆ ಅರೆಕಾಲಿಕ ವೃತ್ತಿಯನ್ನಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಇದರ ಪ್ರಕಾಶಕರು ಬೀದರ್‌ನ ಡಿ.ಸಿ.ಸಿ. ಬ್ಯಾಂಕ್ ಆಗಿದೆ.

ಸಂಪಾದಕರ ಮಾತಿನಲ್ಲಿ ಹೇಳುವುದಾದರೆ 'ಕೃಷಿಯನ್ನು ಅಭಿವೃದ್ಧಿ ಪಡಿಸುವುದಕ್ಕೆ ಪತ್ರಿಕೆಯ ಮುಖಾಂತರ ರೈತರಿಗೆ ಸಹಾಯ ಮಾಡುವುದು ಮತ್ತು ರೈತರ ಶ್ರೇಯೋಭಿವೃದ್ಧಿಗೆ ಕೃಷಿ ಮಾಹಿತಿಯನ್ನು ನೀಡುವ ಉದ್ದೇಶದಿಂದ' ಪತ್ರಿಕೆಯನ್ನು ಸ್ಥಾಪನೆ ಮಾಡಲಾಗಿದೆ. ರೈತರ ಸಂಕಷ್ಟಗಳ ಪರ ನಿಲ್ಲುವುದು ಈ ಪತ್ರಿಕೆಯ ಸಂಪಾದಕೀಯ ಧೋರಣೆಯಾಗಿದೆ ಎಂಬುದು ಬೀದರ್ ಸಹಕಾರ ಪತ್ರಿಕೆಯ ಮೂಲ ಉದ್ದೇಶವಾಗಿದೆ.

ಮಾಜಿ ಪ್ರಧಾನಿ ಐ.ಕೆ. ಗುಜ್ರಾಲ್‌ರವರು ೧೯೯೭ ರಲ್ಲಿ ಸಹಕಾರ ಬ್ಯಾಂಕಿನ ವಜ್ರ ಮಹೋತ್ಸವದ ಕಾರ್ಯಕ್ರಮಕ್ಕೆ ಆಗಮಸಿ ಆ ಸಂದರ್ಭದಲ್ಲಿ ರೈತರ ಬೆಳವಣಿಗೆಗೆ ಹಾಗೂ ಹೊಸ ಚಟುವಟಿಕೆಗಳನ್ನು ಬೆಳೆಸುವುದಕ್ಕೆ ಕೃಷಿ ಪತ್ರಿಕೆಗಳನ್ನು ಪ್ರಕಟಣೆ ಮಾಡಿ, ಬೆಳೆಸಿ ಎಂದು ಬ್ಯಾಂಕಿನ ಆಡಳಿತ ಮಂಡಳಿಗೆ ಸಲಹೆ ನೀಡಿದ್ದರು. ಅವರ ಸಲಹೆ ಮೇರೆಗೆ ಜಿಲ್ಲೆಯ  ಸಹಕಾರ ಬ್ಯಾಂಕ್ ಈ ಕೃಷಿ ಪತ್ರಿಕೆ ಆರಂಭಗೊಳಿಸಿ ಅಂದಿನಿಂದ ಇಂದಿನವರೆಗೆ ಪತ್ರಿಕೆಯನ್ನು ನಿರಂತರವಾಗಿ ನಡೆಸುತ್ತಾ ಬಂದಿದ್ದಾರೆ.

ಪತ್ರಿಕೆಯು ಋತುಗಳಿಗೆ ತಕ್ಕಂತೆ ರೈತರು ಬೆಳೆಯುವ ಬೆಳೆಗಳ ಬಗ್ಗೆ ಮಾಹಿತಿ ನೀಡುತ್ತಿದೆ. ಅಂದರೆ ರೈತರು ಬೇಸಿಗೆಕಾಲ, ಮಳೆಗಾಲ ಮತ್ತು ಚಳಿಗಾಲದಲ್ಲಿ ವಿವಿಧ ಬೆಳೆಗಳನ್ನು ಬೆಳೆಯುತ್ತಿರುವುದರಿಂದ ಅವರು ಬೆಳೆಯುವ ಬೆಳೆಗೆ ತಕ್ಕಂತೆ ಕೃಷಿ ಬಗ್ಗೆ ಮಾಹಿತಿ ನೀಡುತ್ತಿದೆ.  ಪತ್ರಿಕೆ ರೈತರ ಸಮಸ್ಯೆಗೆ ಉತ್ತಮವಾಗಿ ಸ್ಪಂದಿಸುತ್ತಿದೆ. ರೈತರು ಎದರುಸುತ್ತಿರುವ ಬೆಳೆ, ಮಾರುಕಟ್ಟೆ ಮತ್ತು ರೋಗ ಇನ್ನಿತರ ಸಮಸ್ಯೆಗಳನ್ನು ಗಮನಕ್ಕೆ ತೆಗೆದುಕೊಂಡು ಕೃಷಿ ತಜ್ಞರಿಂದ ಮಾಹಿತಿ ಪಡೆದುಕೊಂಡು ಪತ್ರಿಕೆಗಳಲ್ಲಿ ಪ್ರಕಟಸಿ  ರೈತರಿಗೆ ತಿಳಿಸುತ್ತಿದೆ.

ಈ ಪತ್ರಿಕೆಗೆ ಬೀದರ್ ಜಿಲ್ಲಾ ಸಹಕಾರ ಬ್ಯಾಂಕಿನ (ಡಿ.ಸಿ.ಸಿ.ಬ್ಯಾಂಕ್) ೧೭೧ ಸ್ವಸಹಾಯ ಸಂಘಗಳ ಅಜೀವ ಸದಸ್ಯತ್ವ ಇದೆ. ಇದು ೩೦೦ ರೈತರ (ಫಾರ್ಮರ್ಸ್) ಕ್ಲಬ್ ಮತ್ತು ಕೈಗಾರಿಕೆಗಳಿಗೆ ಅಜೀವ ಸದಸ್ಯತ್ವ ಹೊಂದಿದೆ. ಪತ್ರಿಕೆಗೆ ೨೦೦೦ ಚಂದದಾರರು ಇದ್ದು ಅದರ ಪ್ರಸಾರ ೧೦೦೦೦ ದಷ್ಟಿದೆ. ರೈತರು ಪತ್ರಿಕೆಗೆ ಅಜೀವ ಸದಸ್ಯತ್ವ ಪಡೆಯುವವರಿಗೆ ರಿಯಾಯಿತಿ ಇದೆ. ಅವರಿಗೆ  ರೂ. ೧೦೦೦ ಮಾತ್ರ. ಸಂಘ ಸಂಸ್ಥೆಗಳಿಗೆ ರೂ. ೨೦೦೦,  ಕ್ಲಬ್ ಮತ್ತು ಕೈಗಾರಿಕೆ ಸಂಸ್ಥೆಗಳಿಗೆ ರೂ. ೫೦೦೦ ಇದೆ. ಬಿಡಿ ಪ್ರತಿ ರೂ. ೧೦ ಗಳು, ಅಂಚೆ ವೆಚ್ಚ ಸೇರಿ ರೂ. ೧೫ ಗಳು ಹಾಗೂ ವಾರ್ಷಿಕ ಚಂದಾ ದರ ( ಅಂಚೆ ವೆಚ್ಚ ಸೇರಿ) ರೂ. ೧೫೦ ಗಳು ಇದೆ. ಸ್ವಸಹಾಯ ಸಂಘಗಳು, ಫಾರ್ಮರ್ಸ್ ಕ್ಲಬ್‌ಗಳು ಮತ್ತು ಕೈಗಾರಿಕಾ ಸಂಸ್ಥೆಗಳ ಮೂಲಕ ಚಂದಾದಾರರನ್ನು ವಿಸ್ತರಿಸುತ್ತಿದ್ದಾರೆ.  ಪತ್ರಿಕೆಗೆ ಕೃಷಿ ವಿಜ್ಞಾನ ಕೇಂದ್ರದ ವಿಜ್ಞಾನಿಗಳು ಹಾಗೂ ಸ್ವಯಂ ಸೇವಾ ಸಂಘದ ಸದಸ್ಯರು ಲೇಖನಗಳನ್ನು ಬರೆಯುತ್ತಾರೆ. ಪತ್ರಿಕೆಯಲ್ಲಿ ಯಾವುದೇ ರೀತಿಯ ಜಾಹಿರಾತುಗಳು ಪ್ರಕಟಿಸದಿರುವುದು ವಿಶೇಷ. ಇದರಲ್ಲಿ ಶೇ. ೧೦೦. ರಷ್ಟು ಸುದ್ದಿಯ ಪ್ರಮಾಣ ಇದೆ. ಸರಕಾರಿ ಜಾಹಿರಾತುಗಳು ಪಡೆಯುವುದಿಲ್ಲ. ವಿಶೇಷ ಸಂಚಿಕೆಗಳನ್ನು  ಪ್ರತಿ ವರ್ಷ ಪ್ರಕಟಿಸಲಾಗುತ್ತಿದೆ.

ಪತ್ರಿಕೆಯಲ್ಲಿ ಕೃಷಿ ತಜ್ಞರು, ಕೃಷಿ ವಿಜ್ಞಾನ ಕೇಂದ್ರದ ವಿಜ್ಞಾನಿಗಳು ಹಾಗೂ ಸ್ವಸಹಾಯ ಸಂಘಗಳ ಸದಸ್ಯರು ಕ್ಷೇತ್ರ ಅಧ್ಯಯನ ಮಾಡಿ ಪತ್ರಿಕೆಗೆ ಲೇಖನಗಳನ್ನು ಬರೆದು ಕಳುಸುತ್ತಿದ್ದಾರೆ. ರೈತರ ಅಭಿವೃದ್ಧಿಯ ಮಾಹಿತಿಯನ್ನು ಪತ್ರಿಕೆಯಲ್ಲಿ ಪ್ರಕಟಿಸುತ್ತಿವೆ.  ಕೃಷಿ ತಜ್ಞರು, ಕೃಷಿ ವಿಜ್ಞಾನ ಕೇಂದ್ರದ ವಿಜ್ಞಾನಿಗಳು, ಸ್ವಸಹಾಯ ಸಂಘಗಳು ಹಾಗೂ ಪ್ರಗತಿಪರ ರೈತರು ಪತ್ರಿಕೆಯ ಪ್ರಮುಖ ಸುದ್ದಿ ಮೂಲಗಳಾಗಿವೆ.

ಪತ್ರಿಕೆಯು ಕೃಷಿ ತಂತ್ರಜ್ಞಾನಕ್ಕೆ ಹೆಚ್ಚು ಪ್ರೋತ್ಸಾಹ ನೀಡುತ್ತಿದೆ. ಮಾರುಕಟ್ಟೆಗೆ ಮತ್ತು ಕೃಷಿಗೆ ಪೂರಕವಾದ ರೈತರಿಗೆ ಉಪಯೋಗವಾಗುವ ಯಾವುದೇ ಸಲಕರಣೆಗಳು ಬಂದರೆ ಅದರ ಸಂಪೂರ್ಣ ಮಾಹಿತಿ ಅಂದರೆ ಅದರ ಬೆಲೆ, ಕಂಪನಿಯ ಹೆಸರು, ಸಿಗುವ ಸ್ಥಳ, ಬಳಸುವ ರೀತಿ ಇನ್ನಿತರ ಮಾಹಿತಿಯನ್ನು ಅದು ರೈತರಿಗೆ ತಿಳಿಸುತ್ತಿವೆ. ಈ ಪತ್ರಿಕೆಯಲ್ಲಿ ಬಹಳಷ್ಟು ವಿಶೇಷ ಲೇಖನಗಳನ್ನು ಕಾಣಬಹುದು. ರೈತರ ಆತ್ಮಹತ್ಯೆ, ಅತಿವೃಷ್ಟಿ, ಅನಾವೃಷ್ಟಿ ಹಾಗೂ ಭೂಕಂಪ ಬಗ್ಗೆ ರೈತರಿಗೆ ಸಲಹೆಗಳನ್ನು ನೀಡುತ್ತಿದ್ದಾರೆ.

ಪತ್ರಿಕೆಯ ವಿನ್ಯಾಸ, ಮುದ್ರಣ, ಪ್ರಸಾರ  ಮತ್ತು ಪತ್ರಿಕೆಯಲ್ಲಿ ಬಣ್ಣದ ಛಾಯಚಿತ್ರಗಳು ಬಳಸುವ ಪತ್ರಿಕೆಯನ್ನು ಆಧುನಿಕರಣಗೊಳಿಸಲಾಗಿದೆ.  ಪ್ರಸ್ತುತ ಪತ್ರಿಕೆ ಎದುರಿಸುತ್ತಿರುವ ಬಹು ದೊಡ್ಡ ಸವಾಲು ಎಂದರೆ ಓದುಗರ ಸಮಸ್ಯೆ. ಕೃಷಿಗೆ ಮೀಸಲಾದ ಪತ್ರಿಕೆ ಆದ್ದರಿಂದ ಹೆಚ್ಚಾಗಿ ಪತ್ರಿಕೆ ರೈತ ಓದುಗರ

ಮೇಲೆ ಅವಲಂಭಿಸಿದೆ. ಆದರೆ ಬಹಳಷ್ಟು ರೈತರು ಅನಕ್ಷರಸ್ಥರು. ಪತ್ರಿಕೆ ಪ್ರಕಟವಾಗುವ ಜಿಲ್ಲೆ ಹೈದರಾಬಾದ್ ಕರ್ನಾಟಕ ವಿಭಾಗ. ಇಲ್ಲಿ ಮೊದಲೇ ಅಕ್ಷರಸ್ಥರ ಪ್ರಮಾಣ ಕಡಿಮೆ. ಆದ್ದರಿಂದ ಪತ್ರಿಕೆ ಓದುಗರ ಸಂಖ್ಯೆ ತುಂಬಾ ಕಡಿಮೆ. ಪತ್ರಿಕೆ ಇಂದು ತುಂಬಾ ನಷ್ಟದಲ್ಲಿದ್ದು ಪತ್ರಿಕೆಯ ವೆಚ್ಚ ಏರುತ್ತಿದೆ. ಕೃಷಿ ಮತ್ತು ರೈತರ ಅಭಿವೃದ್ಧಿಗೆ ಸಂಬಂಧಪಟ್ಟಂತೆ ಯೋಜನೆಗಳನ್ನು ಹಾಕಿಕೊಂಡು ರೈತರಿಗೆ ಅನುಕೂಲವಾಗುವ ರೀತಿಯಲ್ಲಿ ಪತ್ರಿಕೆ ಮುಖಾಂತರ ಅವರಿಗೆ ಮನಮುಟ್ಟುವಂತೆ ಮಾಹಿತಿ ನೀಡಲಾಗುತ್ತಿದೆ.

ಈ ಪತ್ರಿಕೆಯು ೩೦ ಪುಟಗಳನ್ನು ಒಳಗೊಂಡಿದೆ. ಇದರಲ್ಲಿ ಅಕ್ಷರ ಜೋಡಣೆಯಲ್ಲಿ ಮತ್ತು ಮುದ್ರಣದಲ್ಲಿ ಉತ್ತಮ ಮಟ್ಟದ ತಾಂತ್ರಿಕತೆಯನ್ನು ಕಾಣಬಹುದಾಗಿದೆ. ಇದರ ಮುಖಪುಟವು ಕಪ್ಪು–ಬಿಳುಪಿನ ಬಣ್ಣದ, ಅಕರ್ಷಕ ಚಿತ್ರವನ್ನು ನೀಡುವುದರ ಜೊತೆಗೆ ಉತ್ತಮ ದರ್ಜೆಯ ಮುಖ ಪುಟ ಹೊಂದಿದೆ. ಒಳ ಪುಟಗಳಲ್ಲಿ ಆಯಾ ಲೇಖನಕ್ಕೆ ಸಂಬಂಧಿಸಿದಂತೆ ಕೃಷಿ ಬಗೆಗಿನ ವಿಚಾರಕ್ಕೆ ತಕ್ಕಂತೆ ಉತ್ತಮ ಛಾಯಾಚಿತ್ರಗಳನ್ನು ನೀಡಲಾಗಿದೆ. ಬಹಳ ಅಚ್ಚುಕಟ್ಟಾಗಿ ಪುಟ ವಿನ್ಯಾಸ ಮಾಡಲಾಗಿದೆ. ಒಟ್ಟಾರೆ, ಬೀದರ್ ಸಹಕಾರ ಕನ್ನಡ ಕೃಷಿ ಪತ್ರಿಕೆಯು ಕೃಷಿಕರ ಸರ್ವತೋಮುಖ ಬೆಳವಣಿಗೆಗೆ ಮನಸಾರೆ ಶ್ರಮಿಸುತ್ತಿದೆ.

**ಉಪಸಂಹಾರ.**

ಕೃಷಿ ನಿಯತಕಾಲಿಕೆಗಳ ಪ್ರಸಾರ ಇಳಿಮುಖವಾಗುತ್ತಿರುವುದಕ್ಕೆ ಪ್ರಮುಖವಾಗಿ ಮೂರು ಕಾರಣಗಳನ್ನು ಗುರುತಿಸಲಾಗಿದೆ. ೧. ದೈನಿಕಗಳಲ್ಲಿ ಪುರವಣಿಗಳ ಪ್ರಕಟಣೆ ೨. ದೂರದರ್ಶನ ೩. ಆಕಾಶವಾಣಿ ಹಾಗೂ ಕನ್ನಡ ದೈನಿಕಗಳು ಈಚಿನ ವರ್ಷಗಳಲ್ಲಿ ಪ್ರತಿದಿನವೂ ಮುಖ್ಯ ಸಂಚಿಕೆಯೊಂದಿಗೆ ಒಂದು ಪುರವಣಿವನ್ನು ನೀಡಲು ಆರಂಭಿಸಿವೆ. ಈ ಪುರವಣಿಗಳು ಹೆಚ್ಚಾಗಿ ಕೃಷಿ, ವಾಣಿಜ್ಯ, ಕ್ರೀಡೆ, ಚಲನಚಿತ್ರ ಮತ್ತು ಮಹಿಳೆಯರು ಇತ್ಯಾದಿ ವಿಷಯಾಧಾರಿತ ಓದುಗರ ಆಸಕ್ತಿಗಳನ್ನು ತಣಿಸುತ್ತಿವೆ. ನಿಯತಕಾಲಿಕೆಗಳಲ್ಲಿ ಕಂಡುಬರುವ ಲೇಖನಗಳು, ನುಡಿಚಿತ್ರಗಳು ಮತ್ತು ಅಧುನಿಕ ಸಲಕರಣೆಗಳ ಬಗ್ಗೆ ಮಾಹಿತಿಗಳು ಈ ಪುರವಣಿಗಳಲ್ಲೂ ಪ್ರಕಟವಾಗುತ್ತಿವೆ. ರೈತರಿಗೆ ದಿನಪತ್ರಿಕೆಗಳ ಪುರವಣಿಗಳ ಜೊತೆ ಕೃಷಿ ಮಾಹಿತಿ ದೊರೆಯುತ್ತಿರುವುದರಿಂದ ಮತ್ತೆ ಹಣದುಕೊಟ್ಟು ಕೃಷಿ ನಿಯತಕಾಲಿಕೆಗಳನ್ನು ಖರೀದಿಸುವುದು ತಕ್ಕ ಮಟ್ಟಿಗೆ ಕಡಿಮೆಯಾಯಿತು. ಓದುಗರಿಗೆ ಆಕರ್ಷಣೀಯ ಜಾಹಿರಾತುಗಳೂ ಕೃಷಿ ನಿಯತಕಾಲಿಗಳಿಂದ ಪುರವಣಿಗಳಿಗೆ ವರ್ಗಾವಣೆ ಹೊಂದಿದವು. ಇದರ ಪರಿಣಾಮವಾಗಿ ಕೃಷಿ ನಿಯತಕಾಲಿಕೆಗಳ ಪ್ರಸಾರ(circulation)ಕಡಿಮೆಯಾಗಿ ಆರ್ಥಿಕ ಬಿಕ್ಕಟ್ಟುಗಳು ಎದುರಿಸುವಂತಾಗಿದೆ.

ದೂರದರ್ಶನದಲ್ಲಿ ಪ್ರಸಾರವಾಗುತ್ತಿರುವ 'ಕೃಷಿ ದರ್ಶನ' ಕಾರ್ಯಕ್ರಮ ಮತ್ತು ಆಕಾಶವಾಣಿಯಲ್ಲಿ ಪ್ರಸಾರವಾಗುತ್ತಿರುವ 'ಕೃಷಿ ಕಾರ್ಯಕ್ರಮಗಳು'ಗಳಿಂದ ನಿಯತಕಾಲಿಕೆಗಳಿಗೆ ಬರುತ್ತಿದ್ದ ಜಾಹಿರಾತುಗಳು ವಿದ್ಯುನ್ಮಾನ ಮಾಧ್ಯಮದತ್ತ ಮುಖ ಮಾಡಿವೆ. ಈ ನಿಟ್ಟಿನಲ್ಲಿ ಕೃಷಿ ನಿಯತಕಾಲಿಕೆ ಪತ್ರಿಕೆಗಳು ಇಂದು ತೀವ್ರವಾದ ಹಣಕಾಸಿನ ಮುಗ್ಗಟ್ಟನ್ನು ಎದುರಿಸಿಸುವಂತಾಗಿದೆ.

## ಆಕಾರ ಗ್ರಂಥಗಳು.


೧. ಖಾರ್ವಿ, ರಾಜು. (೨೦೧೧). ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಶೇಷ ಆರ್ಥಿಕ ವಲಯ ಕುರಿತು ಕನ್ನಡ ಪ್ರಮುಖ ದಿನ ಪತ್ರಿಕೆಗಳ ವರದಿಗಾರಿಕೆ. ಎಮ್. ಸಿ. ಜೆ. ಪ್ರೌಢ ಪ್ರಬಂಧ.

೨. ಗೋಣಿ, ಮಂಜಪ್ಪ,. ದ್ಯಾಮಪ್ಪ. (೨೦೦೫). ಗ್ರಾಮೀಣ ಜನತೆಯ ಮೇಲೆ ಸಮೂಹ ಮಾಧ್ಯಮಗಳ ಪರಿಣಾಮ : ಪುತ್ತೂರು ತಾಲ್ಲೂಕಿನ ಒಂದು ಅಧ್ಯಯನ. ಎಮ್.ಸಿ.ಜೆ. ಪ್ರೌಢ ಪ್ರಬಂಧ. ಮಂಗಳಗಂಗೋತ್ರಿ : ಮಂಗಳೂರು ವಿಶ್ವವಿದ್ಯಾನಿಲಯ.

೩. ಚಂದ್ರಪ್ಪ, ಸಿ. (೨೦೧೨). ರೈತ ಮತ್ತು ಆದಿವಾಸಿ ಚಳುವಳಿ. ಬೆಂಗಳೂರು : ಮನೋಜ್ ಪಬ್ಲಿಕೇಷನ್ಸ್.

೪. ಚಂದ್ರಶೇಖರ್, ಆರ್. ವಿ. (೨೦೦೮). ಅಭಿವೃದ್ಧಿ ಎಂಬ ಅವನತಿ. ಬೆಂಗಳೂರು : ನಿರ್ವಾಚನ ಪ್ರಕಾಶನ.

೫. ಚಂದ್ರಶೇಖರ್, ಬಿ. ಎಸ್. (೨೦೦೩). ಸಂವಹನ ಮಾಧ್ಯಮಗಳು. ಹಂಪಿ : ಕನ್ನಡ ವಿಶ್ವವಿದ್ಯಾಲಯ.

೬. ಜಪ್ತಿ, ಶೆಟ್ಟಿ, ಉಪೇಂದ್ರ ಕುಮಾರ್. (೧೯೯೫). ಗ್ರಾಮೀಣ ಜನತೆಯ ಮೇಲೆ ಟೆಲಿವಿಷನ್ ಪರಿಣಾಮ ಃ ಒಂದು ಅಧ್ಯಯನ. ಎಂ.ಸಿ.ಜೆ. ಪ್ರೌಢ ಪ್ರಬಂಧ. ಮಂಗಳಗಂಗೊತ್ರಿ : ಮಂಗಳೂರು ವಿಶ್ವವಿದ್ಯಾನಿಲಯ.

೭. ಕಳವೆ, ಶಿವಾನಂದ. (೨೦೧೪, ಜನವರಿ). ಅಚ್ಚುಕಟ್ಟು ಪ್ರದೇಶದಲ್ಲಿ ನವೀನ ನೀರಾವರಿ ಪದ್ಧತಿಗಳ ಮಹತ್ವ. ಕೃಷಿ ಮುನ್ನಡೆ; ಸಂಪುಟ : ೨೭. ಸಂಚಿಕೆ : ೧. ಧಾರವಾಡ. ಕೃಷಿ ವಿಶ್ವವಿದ್ಯಾಲಯ.



# ಜನಪದ ಮತ್ತು ತತ್ವಪದಕಾರರು.

**–ರೇಖಾ ಧೂಳಪ್ಪಾ,**
ಸಂಶೋಧನಾ ವಿದ್ಯಾರ್ಥಿನಿ, ಇತಿಹಾಸ ಅಧ್ಯಯನ ವಿಭಾಗ,
ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ.

ಭಾರತ ದೇಶದಲ್ಲೇ ಕರ್ನಾಟಕದ ಜಾನಪದ ಸಂಸ್ಕೃತಿ ಅತ್ಯಂತ ಶ್ರೀಮಂತವಾಗಿದೆ. ಹೈದ್ರಾಬಾದ ಕರ್ನಾಟಕದ ಪ್ರದೇಶದಲ್ಲಿ ಕಲಬುರ್ಗಿ ಜಿಲ್ಲೆಯು ಪ್ರಮುಖ ಕೇಂದ್ರ ಸ್ಥಾನವೆನಿಸಿದೆ. ಐತಿಹಾಸಿಕ, ಸಾಹಿತಿಕ, ರಾಜಕೀಯ ಅಷ್ಟೇ ಅಲ್ಲದೇ ಸಾಂಸ್ಕೃತಿಕವಾಗಿಯೂ ಮಹತ್ವ ಪಡೆದಿದೆ. ಆದುದರಿಂದಲೇ ಇದು ಕಲ್ಯಾಣದ ಹೆಬ್ಬಾಗಿಲು ಎಂಬ ಹೆಬ್ಬಳಿಕೆಗೆ ಪಾತ್ರವಾಗಿದೆ. ಇಂತಹ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೊಂದಿರುವ ಗುಲಬುರ್ಗಾ ಹಿಂದೂ–ಮುಸ್ಲಿಂ ಭಾವೈಕ್ಯತೆಯ ತವರೂರು ಎನಿಸಿದೆ. ಇಲ್ಲಿಯ ಸಾಹಿತ್ಯವನ್ನು ಗಮನಿಸುವುದಾದರೆ ಕನ್ನಡದ ಮೊಟ್ಟ ಮೊದಲನೆಯ ಲಕ್ಷಣ ಗ್ರಂಥ ಕವಿರಾಜ ಮಾರ್ಗವನ್ನು ಕನ್ನಡ ನಾಡಿಗೆ ಕೊಟ್ಟ ಶ್ರೇಯಸ್ಸು ಈ ಜಿಲ್ಲೆಗೆ ಸಲ್ಲುತ್ತದೆ. ಇದು "ಕಾವೇರಿಯಿಂದಮಾ ಗೋದಾವರಿವರಮಿರ್ದನಾಡದಾ ಕನ್ನಡದೊಳ್ ಬಾವಿಸಿದ ಜನಪದಂ" ಎಂಬ ಉಕ್ತಿಯು ನಾಡಿನ ವಿಸ್ತೀರ್ಣವನ್ನು ತಿಳಿಸುತ್ತದೆ.

ಕನ್ನಡ ಜಾನಪದ ಸಂಸ್ಕೃತಿಯು ಒಂದು ಭಾಗವಾದ ಜಾನಪದ ಗೀತೆಗಳು ಅತ್ಯಂತ ವೈವಿಧ್ಯಮಯವಾಗಿ ಕನ್ನಡ ನಾಡಿನ ವಿವಿಧ ಪ್ರದೇಶಗಳ ಪ್ರಾದೇಶಿಕ ಸೊಗಡುಗಳನ್ನು ನಮ್ಮ ಮುಂದಿನ ಪೀಳಿಗೆಗೆ ಜೋಪಾಲ ಮಾಡಿವೆ ಎಂದರೆ ತಪ್ಪಿಲ್ಲ. ಇಂದಿನ ಪಾಶ್ಚಾತ್ಯ ಶೈಲಿಯ ಸಂಗೀತದ ವಾಧ್ಯ ಜಾನಪದ ಗೀತೆಗಳು ತನ್ನ ಹಿಂದಿನ ವೈಭವವನ್ನು ಸ್ವಲ್ಪ ಮಟ್ಟಿಗೆ ಕಳೆದುಕೊಂಡಿವೆ ಎಂದೆನಿಸಿದರೂ ತನ್ನ ಮೂಲನೆಲೆಯಾದ ಹಳ್ಳಿಗಳಲ್ಲಿ ಇನ್ನೂ ತನ್ನ ನೆಲೆಯನ್ನು ಭದ್ರವಾಗಿ ಉಳಿಸಿಕೊಂಡಿರುವುದು ಸಮಾಧಾನ ತರುವ ಸಂಗತಿಯಾಗಿದೆ. ಕಂಸಾಳೆ ಪದ, ಗೀಗಿ ಪದ, ಕೋಲಾಟದ ಪದ, ರಾಗಿ ಬಿಸೋ ಪದ, ಸುಗ್ಗಿ ಹಾಡುಗಳು ಹೀಗೆ ಇನ್ನು ಅನೇಕ ವಿವಿಧ ಬಗೆಯ ಜಾನಪದ ಗೀತೆಗಳು ಆಯಾ ಪ್ರದೇಶದ ಜನರ ದೈನಂದಿನ ಚಟುವಟಿಕೆಗಳನ್ನು ಕೌಟುಂಬಿಕ ಜೀವನವನ್ನು, ಸಂಬಂಧಗಳನ್ನು ದೇವರುಗಳನ್ನು ಹಾಗೂ ಧಾರ್ಮಿಕ ಆಚರಣೆಗಳನ್ನು ನಮ್ಮ ಮುಂದೆ ತೆರೆದಿಡುತ್ತವೆ. ಈ ಜಾನಪದ ಗೀತೆಗಳನ್ನು ಸೃಷ್ಟಿಸಿದವರು ಯಾರೆಂದು ಹೇಳುವುದಕ್ಕೆ ಸಾಧ್ಯವಿಲ್ಲ ಇವು ಹಳ್ಳಿಯ ಸಾಮಾನ್ಯ ಜನರ ನಡುವೆ ಹುಟ್ಟಿ ಬಾಯಿಂದ ಬಾಯಿಗೆ ಹರಿದು ಬಂದಿರುವ ಸಿರಿನುಡಿ ಎನ್ನಬಹುದು.

'ಜಾನಪದ' ಎನ್ನುವ ಪದ ಇಂಗ್ಲೀಷನಲ್ಲಿ Folklore ಎಂಬುದಕ್ಕೆ ಸಮಾನಾರ್ಥಕವಾಗಿ ಬಳಸಿರುವ ಕನ್ನಡ ಪದವಾಗಿದೆ. ಜನಪದ ಎನ್ನುವುದು ಮನುಷ್ಯನ ಬದುಕಿನೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿ ತಲೆ–ತಲೆಮಾರುಗಳಿಂದ ಬಂದಿರುವ ಮೌಖಿಕ ಪರಂಪರೆಯಲ್ಲಿ ಸಂಬಂಧಿ ಜ್ಞಾನವೇ ಜಾನಪದ. ಭಾರತೀಯ ಜ್ಞಾನ ಪರಂಪರೆಯಲ್ಲಿ ಹಲವು ಮಾರ್ಗಗಳನ್ನು ಕಾಣುತ್ತೇವೆ. ಅವುಗಳಲ್ಲಿ ಮುಕ್ತಿ ಮಾರ್ಗವು ಸೇರಿದೆ. ಎಲ್ಲ ಧರ್ಮಗಳ ಪರಮ ಆಕಾಂಕ್ಷೆಯೆಂದರೆ ಮುಕ್ತಿಯೇ ಆಗಿದೆ. ತತ್ವಜ್ಞಾನವೂ ಮುಕ್ತಿಯನ್ನು ಕರುಣಿಸುವ ಮಾರ್ಗವೇ ಆಗಿದೆ.

ತತ್ವಜ್ಞಾನ ಮೋಕ್ಷದ ಸಾಧನೆಗೆ ಸಹಾಯವಾಗುವ ಜ್ಞಾನವಾಗಿದೆ. ಅದನ್ನು ಭಾರತೀಯ ದಾರ್ಶನಿಕರು, 'ಶಾಸ್ತ್ರ', ಪುರಾಣ, ಕಾವ್ಯಗಳ ರೂಪದಲ್ಲಿ ಉಣಬಡಿಸಿದರು. ಅವುಗಳಲ್ಲಿ ತತ್ವಪದ ಸಾಹಿತ್ಯವೂ ಒಂದಾಗಿದೆ. ತತ್ವಪದ ಲೋಕದ ಜ್ಞಾನಕ್ಕೆ ತಳಹದಿಯಾಗಿದೆ. ತತ್ವಪದವನ್ನು ಅನುಭಾವ ಸಾಹಿತ್ಯವೆಂತಲೂ ಕರೆಯಲಾಗುತ್ತದೆ.

ಆಧ್ಯಾತ್ಮವೇ ತನ್ನ ಜೀವಾಳವಾಗಿಸಿಕೊಂಡ ತತ್ವಪದಗಳ ಉಗಮ ಒಂದು ರೀತಿಯಲ್ಲಿ ಹನ್ನೆರಡನೇಯ ಶತಮಾನದಲ್ಲಿಯೇ ಆಯಿತೆಂದು ಹೇಳಬೇಕು. ಆದ್ಯವಚನಕಾರ ಜೇಡರ ದಾಸಿಮಯ್ಯನಿಂದ ಹಿಡಿದು ಬಸವಣ್ಣ, ಅಲ್ಲಮ, ಅಕ್ಕಮದೇವಿ ಮೊದಲಾದ ಶಿವಶರಣರು ತಮ್ಮ ಅಗತ್ಯವಾದ ಅನುಭವಗಳನ್ನು ಸ್ವರಾನುರೂಪವಾಗಿ ಹಾಡಿಕೊಂಡಿರುವರು.

'ತತ್ವ' ಎಂದರೆ 'ಸಾರ' 'ಸತ್ಯ', ಸಿದ್ಧಾಂತ' ಎಂಬುದು ನಿಘಂಟುವಿನ ಅರ್ಥವಾಗಿದೆ. ತತ್ವಪದವೆಂದರೆ ದೇಹಾತ್ಮ ಮತ್ತು ಪರಮಾತ್ಮನ ಬಗೆಗೆ ತಿಳಿದುಕೊಳ್ಳುವ ಸತ್ಯದರ್ಶನವಾಗಿರುತ್ತದೆ. ಅಂದರೆ ದೇಹಾತ್ಮನನ್ನು ಪರಮಾತ್ಮನ ಕಡೆಗೆ ಹೊರಳಿಸುವುದು ಎಂದರ್ಥವಾಗಿದೆ.

ಬಹುಸಂಖ್ಯಾತ ಮುಸ್ಲೀಂ ಜನಪದರು ಕನ್ನಡವನ್ನು ಬಳಸಿಕೊಂಡು ಜನಪದ ಸಾಹಿತ್ಯ ಸೃಷ್ಟಿಸಿರುವುದು ವಿಶೇಷ ಸಂಗತಿ. ಆ ಮೂಲಕ ಕನ್ನಡ ಭಾಷೆ ಹಾಗೂ ಜನಪದ ಸಾಹಿತ್ಯದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿರುವುದು ಗಮನಿಸಬೇಕಾದ ಸಂಗತಿಯಾಗಿದೆ. ಚೆನ್ನೂರಿನ ಜಲಾಲ ಸಾಹೇಬ, ಮಹಾಗಾಂವದ ಮೀರಾಸಾಬ, ಕೊಳ್ಳೂರು ಹಸನ್‌ಸಾಬ, ಬೆನೂರಿನ ಭವಾನಸಿಂಗ್, ಲಾಡಂತಿಯ ಲಾಡಮದನಸಾ, ಸಾವಳಿಯ ಮಹ್ಮದಸಾಬ, ಮಂಗಲಗಿಯ ಮಶಾಖಸಾಬ, ದೇವಗಾಂವದ ಹಜರತ್‌ಸಾಬ, ಭೈರಮಡಗಿಯ ಹೈದರಸಾಬ ಮುಂತಾದವರು ಲಾವಣಿ ಹಾಗೂ ತತ್ವಪದಕಾರರ ಸಾಹಿತ್ಯವನ್ನು ಅನುಲೋಕಿಸಬಹುದಾಗಿದೆ.

**ಕಾಳಗಿ ಮಶಾಕಸಾಬಹನ ತತ್ವಪದಗಳು (೧೮೮೭–೧೯೪೬).**

ಗುಲಬರ್ಗಾ ಜಿಲ್ಲೆಯ ಕಾಳಗಿ (ತಾಲ್ಲೂಕಿನಲ್ಲಿ)ಯಲ್ಲಿ ಕ್ರಿ. ಶ. ೧೮೮೭ರಲ್ಲಿ ಮಶಾಖಸಾಬನು ಜನಿಸಿದನು. ಈತನ ತಂದೆ ನಿಜಾಮುದ್ದೀನ, ತಾಯಿ ಜೈನಾಬಿ, ಈ ಮುಸ್ಲೀಂ ದಂಪತಿಗಳಿಗೆ ಮಶಾಖಸಾಬನು ಮಗನಾಗಿ ಜನಿಸಿದ ಬಾಲ್ಯದಲ್ಲಿಯೇ ಈತ ತನ್ನ ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾದ ಈತನಿಗೆ ನದೀಮಸಾಬ ಎಂಬ ಅಣ್ಣನಿದ್ದ. ಅನಾಥರಾದ ಅಣ್ಣ–ತಮ್ಮ ಇಬ್ಬರೂ ಮಾವನಾದ ನಸ್ರುದ್ದೀನನ ಆಶ್ರಯದಲ್ಲಿ ಬೆಳೆದರು.

ಅಣ್ಣ ನದೀಮಸಾಬನೇ ಮಶಾಕಸಾಬನ ಮದುವೆ ಮಾಡಿದ. ಮಹಿಬೂಬಿ ಮಶಾಖಸಾಬನ ಹೆಂಡತಿಯಾಗಿ ಬಂದಳು. ಮಹಿಬೂಬಿಗೆ ಮಕ್ಕಳಾಗದೇ ಇದ್ದುದರಿಂದ ಖಾದರಬಿಯೆಂಬ ಹೆಣ್ಣುಮಗಳೊಡನೆ ಎರಡನೇ ಮದುವೆ ಮಾಡಿಕೊಂಡ. ಇಬ್ಬರು ಹೆಂಡರನ್ನೂ ಮಾಡಿಕೊಂಡರೂ ಮಕ್ಕಳಾಗಲಿಲ್ಲ. ನಂತರ ಅಣ್ಣನ ಮಗನಾದ ಗುಲಾಮ ದಸ್ತಗೀರನನ್ನು ದತ್ತಕ್ಕೆ ತೆಗೆದುಕೊಂಡ. ಈ ದತ್ತು ಪುತ್ರನೇ ಈ ಎಲ್ಲ ವಿವರಗಳನ್ನು ನೀಡಿದ್ದಾನೆ.

ಮೂರನೇ ತರಗತಿಯವರೆಗೆ ಅಭ್ಯಾಸ ಮಾಡಿದ್ದ ಮಶಾಖಸಾಬನನಿಗೆ ಉರ್ದು, ಅರಬ್ಬಿ ಭಾಷೆಗಳು, ಬರುತ್ತಿದ್ದವು. ಈತ ಮೋಡಿ ಲಿಪಿಯಲ್ಲಿ ತತ್ವಪದಗಳನ್ನು ರಚಿಸಿದ್ದಾನೆ. ಕಲಗುರ್ತಿಯ ಮಹ್ಮದ ಪಾಶಾಖಾದ್ರಿ ಈತನ ಗುರುಗಳಾಗಿದ್ದರು. ಖುರಾರಿನ ಪಠಣ ಹಾಗೂ ವೀರಶೈವ ತತ್ವ ಚಿಂತನೆಗಳೆರಡೂ ಏಕಕಾಲದಲ್ಲಿ ನಡೆದವು. ಆಧ್ಯಾತ್ಮದ ಹಂಬಲ, ಸಾಮಾಜಿಕ ಕಳಕಳಿ ಈತನ ತತ್ವಪದಗಳಲ್ಲಿ ಎದ್ದು ಕಾಣುತ್ತದೆ.

ಈತ ಬರೆದ ತತ್ವಪದಗಳ ಸಂಗ್ರಹ ಹಾಗೂ ಪ್ರಕಟಣಾ ಕಾರ್ಯ ನಡೆದಿಲ್ಲ. ಡಾ. ಬಸವರಾಜ ಸಬರದ ಅವರು "ಹೈದರಾಬಾದ್ ಕರ್ನಾಟಕದ ತತ್ವಪದಗಳು" ಎಂಬ ಸಂಕಲನದಲ್ಲಿ ಈತನು ಮೂರು ತತ್ವಪದಗಳನ್ನು ಇಲ್ಲಿ ಆಯ್ದುಕೊಡಲಾಗಿದೆ.

1. ಜಾಗದ ಗುಣ ನೋಡಿ ಹುಡಕೋ
   ಜಾಗದ ಗುಣ ನೋಡ ಹುಡಕೋ ಹಿಂದರಗಡಿ ಕಳದಲ್ಲಿ

ಹೋಗಿ ಹುಡಕೋ, ಹೃದಯ ಮಾತು ಊರೂರಿಗೆ
ಹೇಳಿದರ ಹ್ಯಾಂಗ ನಿಲುಕೀತೊ ತಿಳಕೋ ॥೧॥

**2. ಚನ್ನೂರ ಜಲಾಲ ಸಾಹೇಬ (೧೭೭೦–೧೮೫೦).**

ಕಡಗೋಳ ಮಡಿವಾಳಪ್ಪನ ಸಮಕಾಲೀನನಾಗಿ ಬಾಳಿ ಬದುಕಿದ ತತ್ವಪದಕಾರನೇ ಚನ್ನೂರ ಜಲಾಲ ಸಾಹೇಬ. ಚನ್ನೂರ ಇವನು ಜನಿಸಿದ ಊರು. ಇದು ಗುಲಬರ್ಗಾ ಜಿಲ್ಲೆಯ ಜೇವರ್ಗಿ ತಲ್ಲೂಕಿನಲ್ಲಿದೆ. ಇಲ್ಲಿಯವರೆಗಿನ ತತ್ವಪದಕಾರರನ್ನು ನೋಡಿದಾಗ ಮುಸ್ಲೀಂ ತತ್ವಪದಕಾರರು ಯಾರು ಇರಲಿಲ್ಲದ ಕಾರಣ ಇವನನ್ನು ಕರ್ನಾಟಕದ ಮೊಟ್ಟಮೊದಲ ಮುಸ್ಲೀಂ ತತ್ವಪದಕಾರನೆಂದು ಹೇಳಬಹುದು. ಜಲಾಲ ಸಾಬನ ತತ್ವಪದಗಳಿಗೆ 'ಗುರುಮಡಿವಾಳ' ಎಂಬುದು ಅಂಕಿತನಾಮವಾಗಿದೆ.

**3. ಮೋಟ್ನಳ್ಳಿ ಹಸನಸಾಬ (೧೮೫೫–೧೯೧೫).**

ಇತನು ಹುಟ್ಟಿದ್ದು ಸೇಡಂ ತಾಲ್ಲೂಕಿನ ಇಟಗಾ ಎಂಬ ಗ್ರಾಮದಲ್ಲಿ ೧೮೫೫ ರಲ್ಲಿ ಮೂಲತಃ ಇಸ್ಲಾಂ ಮತದಲ್ಲಿ ಹುಟ್ಟಿ ವೀರಶೈವ ಧರ್ಮದ ಪರಂಪರೆಯಿಂದ ಪ್ರಭಾವಿತನಾಗಿದ್ದನು. ಈತನು ೨೦೦ಕ್ಕೂ ಹೆಚ್ಚು ತತ್ವಪದಗಳನ್ನು ರಚಿಸಿದ್ದಾನೆ.

**4. ಕಲಬುರ್ಗಿ ಅಂಬಾದಾಸ (೧೮೭೭–೧೯೩೨).**

ಲಾವಣಿ, ಗೀಗೀ, ರಿವಾಯಿತ್ ಹಾಡುಗಳ ಜೊತೆಗೆ ಅನೇಕ ತತ್ವಪದಗಳನ್ನು ರಚಿಸಿದ ಅಂಬಾದಾಸನು ಗುಲಬರ್ಗಾದಲ್ಲಿ ನೆಲೆಸಿದ್ದನು. ಕೋಮು–ಸೌಹರ್ದತೆಗೆ ಹೆಸರಾದ ಶರಣಬಸವೇಶ್ವರ, ಬಂದೇನವಾಜ್ ಇಬ್ಬರನ್ನು ಸ್ಮರಿಸುವ ಹಾಡುಗಳು ರಚನೆಯಾಗಿವೆ. ಇನ್ನು ಮುಂತಾದವರು ಲಾವಣಿ ಹಾಗೂ ತತ್ವಪದಗಳನ್ನು ರಚಿಸಿದ್ದಾರೆ.

ಒಟ್ಟಿನಲ್ಲಿ ಹೇಳುವುದಾದರೆ ಜಾನಪದ ಮತ್ತು ತತ್ವಪದಕಾರರ ದಾಖಲೀಕರಣ ಮತ್ತು ಅಧ್ಯಯನಗಳ ಜೊತೆಗೆ ಜನಪದರಲ್ಲಿ, ಯುವಕರಲ್ಲಿ ಹಾಗೂ ಮಕ್ಕಳಲ್ಲಿ ಆಸಕ್ತಿಯನ್ನು ಮೂಡಿಸುವ ಕೆಲಸ ಆಗಬೇಕಾಗಿದೆ. ಅನೇಕ ಬಗೆಯ ವಿಚಾರ ಸಂಕಿರಣ, ಪ್ರದರ್ಶನ ಹಾಗೂ ಕಾರ್ಯಗಾರಗಳ ಮೂಲಕ ಹೆಚ್ಚಿನ ಮಟ್ಟದಲ್ಲಿ ಈ ಕೆಲಸ ತೀವ್ರವಾಗಿ ಆಗಬೇಕಾಗಿದೆ.

## ಆಧಾರ ಗ್ರಂಥಗಳು.


೧. ಡಾ॥ ವ್ಹಿ.ಜಿ.ಪೂಜಾರ್–ಗುಲಬರ್ಗಾ ಮತ್ತು ಯಾದಗಿರಿ ಜಿಲ್ಲೆಗಳ ತತ್ವಪದಕಾರರ ಸ್ಮಾರಕಗಳು, ಕನ್ನಡ ಅಧ್ಯಯನ ಸಂಸ್ಥೆ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ.

೨. ಡಾ॥ ಬಸವರಾಜ ಸಬರದ–ಹೈದರಾಬಾದ್ ಕರ್ನಾಟಕದ ತತ್ವಪದಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ.

೩. ಡಾ॥ ಶಾಂತಪ್ಪ ಟಿ. ಗುರೋಡೆ–ಗುಲಬರ್ಗಾ ಜಿಲ್ಲೆಯ ತತ್ವಪದಕಾರರು (ಸಂಶೋಧನ ಮಹಾಪ್ರಬಂಧ)

4. ಆಡಿ. Sarvodaya S.S Dr. Gandiji C. Molakeri, Manjusree, Dr. B.Manjula B Chincholli, Abhinandana Grantha Kikkeri Publication .




# ಸಾಹಿತ್ಯದ ಬೆಳವಣಿಗೆಗೆ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳ ಕೊಡುಗೆ : ಕಲ್ಯಾಣ ಕರ್ನಾಟಕಕ್ಕೆ ಸಂಬಂಧಿಸಿದಂತೆ

**–ವಿನುತ ಎಂ.ಕೆ**
ಸಹಾಯಕ ಪ್ರಾಧ್ಯಾಪಕರು, ಇಂಗ್ಲೀಷ್ ವಿಭಾಗ,
ಶಾ॥ ಸೋಗಮಲ್ ಪೀರಾಜಿ ಓಸ್ವಾಲ್
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮುದ್ದೇಬಿಹಾಳ.

**ಸಾರಾಂಶ.**

ಸಾಂಸ್ಕೃತಿಕ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸಾಹಿತ್ಯದ ಬೆಳವಣಿಗೆಗೆ ಅನೇಕ ಸಾಮ್ರಾಜ್ಯಗಳು ಪ್ರೋತ್ಸಹಿಸಿವೆ, ಅಂತೆಯೇ ಇಂದಿನ ಕಲ್ಯಾಣ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳು ಸಾಹಿತ್ಯದ ಬೆಳವಣಿಗೆಗೆ ಪ್ರೋತ್ಸಹಿಸಿವೆ. ಅದರ ಫಲವಾಗಿ ವಿವಿಧ ಭಾಷೆಗಳ ಸಾಹಿತ್ಯ ಕೃತಿಗಳು ಈ ಕಾಲ ಘಟ್ಟದಲ್ಲಿ ರಚನೆಯಾಗಿವೆ. ವಿಶೇಷವಾಗಿ ವಿಜಯನಗರ ಕಾಲಾವಧಿಯಲ್ಲಿ ಸಂಸ್ಕೃತ, ಕನ್ನಡ, ತೆಲುಗು, ತಮಿಳು ಭಾಷೆಯ ಕೃತಿಗಳು ಹೇರಳವಾಗಿ ರಚನೆಯಾಗಿವೆ. ಈ ಕಾಲದಲ್ಲಿ ವೈದ್ಯಕೋಶ, ಕಾವ್ಯ, ಗದ್ಯ, ನಾಟಕ, ವ್ಯಾಕರಣ, ಅಲಂಕಾರ ಮತ್ತು ಜ್ಯೋತಿಷ್ಯ ಗ್ರಂಥಗಳು ರಚನೆಗಳಾಗಿವೆ. ಇಡೀ ದಕ್ಷಿಣ ಭಾರತವನ್ನೇ ಒಮ್ಮೆ ತಮ್ಮ ಅಧೀನಪಡಿಸಿಕೊಂಡಿದರ ಫಲವಾಗಿ ವಿಜಯನಗರ ಸಾಮ್ರಾಜ್ಯ  ಸಂಸ್ಕೃತ, ಕನ್ನಡವಲ್ಲದೆ ಪಾರಸಿ, ದಖನಿ, ಉರ್ದು, ತೆಲುಗು, ತಮಿಳು ಭಾಷೆಗಳಿಗೆ ಪ್ರೋತ್ಸಹ ನೀಡಿದ್ದರು. ಸಾಮ್ರಾಜ್ಯದಲ್ಲಿ ಶಾಂತಿ, ಸುವ್ಯವಸ್ಥೆ, ಆರ್ಥಿಕ ಪ್ರಗತಿ, ರಾಜರ ಪ್ರೋತ್ಸಾಹದ ಫಲವಾಗಿ ಸಾಹಿತ್ಯಾಭಿವೃದ್ಧಿಯಾಯಿತು. ಆದ್ದರಿಂದ ಈ ಯುಗವನ್ನು ಸಾಹಿತ್ಯದ ಸುವರ್ಣಯುಗ ಎಂದು ಕರೆಯುತ್ತಾರೆ. ಅದೇ ರೀತಿ ಬಹಮನಿ ಸಾಮ್ರಾಜ್ಯಗದ ಕಾಲದಲ್ಲಿ ಅರೇಬಿಕ್, ದಖನಿ, ಉರ್ದು ಮತ್ತು ಪರ್ಷಿಯನ್ ಹಾಗು ಕನ್ನಡ ಭಾಷೆಗಳ ಕೃತಿಗಳು ವಿಪುಲವಾಗಿ ರಚನೆಯಾಗಿವೆ. ಇವು ಕಾವ್ಯರೂಪದಲ್ಲಿ ಹಾಗೂ ಗದ್ಯರೂಪದಲ್ಲಿ ಸಾಹಿತ್ಯ ಕೃತಿಗಳು ಬಹಮನಿಯ ಇತಿಹಾಸವನ್ನು ಸೂಚಿಸುತ್ತದೆ.

**ವಿಶೇಷ ಪದಗಳು**: ಸಾಹಿತ್ಯ, ಭಾಷೆ, ಸಂಸ್ಕೃತ, ಕನ್ನಡ, ತೆಲುಗು, ತಮಿಳು, ಅರೇಬಿಕ್, ದಖನಿ ಉರ್ದು ಮತ್ತು ಪರ್ಷಿಯನ್

**ಪೀಠಿಕೆ.**

ಸಾಂಸ್ಕೃತಿಕ ಬೆಳವಣಿಗೆಗೆ ಸಂಬಂಧಿಸಿದಂತೆ ದಕ್ಷಿಣ ಭಾರತದಲ್ಲಿ ಸಾಹಿತ್ಯದ ಬೆಳವಣಿಗೆಗೆ ಅನೇಕ ಸಾಮ್ರಾಜ್ಯಗಳು ಪ್ರೋತ್ಸಾಹಿಸಿವೆ. ಅಂತೆಯೇ ಇಂದಿನ ಕಲ್ಯಾಣ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ವಿಜಯನಗರ ಮತ್ತು ಬಹುಮನಿ ಸಾಮ್ರಾಜ್ಯಗಳು ಹಲವಾರು ಭಾಷಾ ಸಾಹಿತ್ಯದ ಬೆಳವಣಿಗೆಗೆ ಪ್ರೋತ್ಸಾಹಿಸಿವೆ. ಅದರ ಫಲವಾಗಿ ವಿವಿಧ ಭಾಷೆಗಳ ಸಾಹಿತ್ಯ ಕೃತಿಗಳು ಈ ಕಾಲ ಘಟ್ಟದಲ್ಲಿ ರಚನೆಯಾಗಿವೆ. ವಿಶೇಷವಾಗಿ ವಿಜಯನಗರದ ಕಾಲಾವಧಿಯಲ್ಲಿ ಸಂಸ್ಕೃತ, ಕನ್ನಡ, ತೆಲುಗು, ತಮಿಳು ಭಾಷೆಯ ಕೃತಿಗಳು ಹೇರಳವಾಗಿ ರಚನೆಯಾಗಿದುದಲ್ಲದೆ ಅನೇಕ ವೈದ್ಯಕೋಶ, ಕಾವ್ಯ, ಗದ್ಯ, ನಾಟಕ, ವ್ಯಾಕರಣ, ಅಲಂಕಾರ ಮತ್ತು ಜ್ಯೋತಿಷ್ಯ ಗ್ರಂಥಗಳು ರಚನೆಯಾಗಿವೆ.

ಇಡೀ ದಕ್ಷಿಣ ಭಾರತವನ್ನೆ ಒಮ್ಮೆ ತಮ್ಮ ಅಧೀನಪಡಿಸಿಕೊಂಡಿದರ ಫಲವಾಗಿ ವಿಜಯನಗರ ಸಾಮ್ರಾಜ್ಯವು ಸಂಸ್ಕೃತ ಮತ್ತು ಕನ್ನಡವಲ್ಲದೆ, ಪಾರಸಿ, ದಖನಿ, ಉರ್ದು, ತೆಲುಗು, ತಮಿಳು ಭಾಷೆಗಳಿಗೂ ಪ್ರೋತ್ಸಾಹ ನೀಡಿದ್ದರು. ಇದೇ ಕಾಲದ ಬಹುಮನಿ ರಾಜರ ಕಾಲಾದಲ್ಲಿಯೂ ನೇಕ ಸಾಹಿತ್ಯೋನ್ಮುಖ ಕಾರ್ಯಗಳನ್ನು ನಡೆದಿರುವುದನ್ನು ಕಾಣಬಹುದಾಗಿದೆ. ಅರೇಬಿಕ್, ದಖನಿ, ಉರ್ದು, ಪರ್ಷಿಯನ್

ಮತ್ತು ಕನ್ನಡ ಭಾಷೆಗಳ ಕೃತಿಗಳು ವಿಫುಲವಾಗಿ ರಚನೆಯಾಗಿ ಹಲವಾರು ಭಾಷಾ ಸಾಹಿತ್ಯದ ಬೆಳವಣಿಗೆಗೆ ಪೂರಕವಾದದಂತಿದೆ.

**ಸಂಸ್ಕೃತ ಸಾಹಿತ್ಯ.**

ವಿಜಯನಗರದ ಅರಸರು ಸಂಸ್ಕೃತ ವಿದ್ವಾಂಸರಿಗೆ ನೀಡಿದ ಆಶ್ರಯದಿಂದಾಗಿ ಸಂಸ್ಕೃತದಲ್ಲಿ ಹೇರಳ ಸಾಹಿತ್ಯ ಸೃಷ್ಟಿಯಾಯಿತು. ವಿದ್ಯಾರಣ್ಯ, ವಿದ್ಯಾಶಂಕರ, ಸಾಯಣಾಚಾರ್ಯ ಮತ್ತು ಮಾಧವರು ಹಲವಾರು ಸಂಸ್ಕೃತ ಗ್ರಂಥಗಳನ್ನು ರಚಿಸಿದ್ದಾರೆ. ಇವರ ರಚನೆಗಳು ಹೊಸ ಕೃತಿಗಳಾಗಿರದೆ, ವೇದ, ಉಪನಿಶತ್ತು, ಬ್ರಹ್ಮಸೂತ್ರ, ಭಗವದ್ಗೀತೆ ಮೊದಲಾದ ಗ್ರಂಥಗಳಿಗೆ ರಚಿಸಲಾದ ವ್ಯಾಖ್ಯಾನ ಮತ್ತು ಉಪವ್ಯಾಖ್ಯಾನ ಗ್ರಂಥಗಳಾಗಿವೆ ಮತ್ತೆ ಕೆಲುವು ಗ್ರಂಥಗಳು ವೈದ್ಯಕೋಶ, ವಿಶ್ವಕೋಶದಂತಹ ಕಾವ್ಯ, ಗದ್ಯ, ಪದ್ಯ, ನಾಟಕ, ವ್ಯಾಕರಣ, ಅಲಂಕಾರ ಮತ್ತು ಜ್ಯೋತಿಷ್ಯ ರಚನೆಗಳಾಗಿವೆ. ಈ ಕಾಲದ ಒಂದು ಕೃತಿ 'ಆಕಾಶ ಭೈರವ ಕಲ್ಪ'. ಕೃತಿಯು ಶಿವ–ಪಾರ್ವತಿಯರ ನಡುವೆ ಸಂಭಾಷಣಾ ರೂಪದಲ್ಲಿದ್ದು, ರಾಜ್ಯಾಡಳಿತದ ವಿವರಗಳನ್ನು ನೀಡಲಾಗಿದೆ. ್ಲ ಸಾಯಣಾಚಾರ್ಯರು ನಾಲ್ಕು ವೇದ ಸಂಹಿತೆಗಳನ್ನು ವ್ಯಾಖ್ಯಾನ ರೂಪದಲ್ಲಿ ರಚಿಸಿ, ಲಿಖಿತ ರೂಪಪದಲ್ಲಿರುವ ಅಧಿಕೃತ ಆಧಾರ ಗ್ರಂಥಗಳು ಎಂಬ ಹೆಸರಿಗೆ ಒಳಪಟ್ಟಿದೆ. ಮಾಧ್ವ ವಿದ್ಯಾರಣ್ಯರು ಸಂಗೀತಸಾರ, 'ಪರಾಶರ ಮಾಧವೀಯ ವ್ಯಾಖ್ಯಾನ' ಎಂಬ ಕೃತಿಯನ್ನು ಹಾಗೂ ದುರ್ಗಾದಾಸ್ ಎಂಬುವರು ಸಂಸ್ಕೃತದಲ್ಲಿ 'ಪಶುವೈದ್ಯ' ಎಂಬ ಕೃತಿಯನ್ನು ರಚಿಸಿದ್ದಾರೆ.

ಚಾವುಂಡಮಾಧವನು ಸೂತಸಂಹಿತೆಯ ವ್ಯಾಖ್ಯಾನವಾದ 'ತಾತ್ಪರ್ಯ ದೀಪಿಕಾ' ಎಂಬ ಗ್ರಂಥವನ್ನು ರಚಿಸಿದನು. ಬುಕ್ಕರಾಯನ ಮಗ ಕಂಪರಾಯನ ಮಡದಿ ಗಂಗಾದೇವಿ 'ಮಧುರಾ ವಿಜಯಂ' ಅಥವಾ 'ವೀರ ಕಂಪಣರಾಯ ವಿಜಯ'ವೆಂಬ ಸುಲಲಿತ ಕಾವ್ಯದಲ್ಲಿ ಕಂಪಣನ ದಕ್ಷಿಣ ದೇಶದ ದಿಗ್ವಿಜಯವನ್ನಲ್ಲದೆ ಅಲ್ಲಿನ ಪುಣ್ಯಸ್ಥಳಗಳ ಶೋಚನೀಯ ಸ್ಥಿತಿಯನ್ನು ತಿಳಿಸಿದ್ದಾರೆ.

ಇಮ್ಮಡಿ ದೇವರಾಯ(ಪ್ರೌಢದೇವರಾಯ) 'ಬ್ರಹ್ಮಸೂತ್ರವೃತ್ತಿ' ಎಂಬ ಭಾಷ್ಯವನ್ನೂ, ಸಾಳುವ ನರಸಿಂಹನು 'ರಾಮಾಭ್ಯದಯ' ಎಂಬ ಕಾವ್ಯವನ್ನು ಬರೆದಿದ್ದಾರೆ. ಇವನ ಆಸ್ಥಾನ ಕವಿಯಾದ ರಾಜನಾಥಡಿಂಡಿಮನು 'ಸಾಳುವಾಭ್ಯುದಯಮು' ಎಂಬ ಕಾವ್ಯದಲ್ಲಿ ಸಾಳುವ ಮನೆತನದ ಬೆಳವಣಿಗೆಯನ್ನು ವಿವರಿಸಿದ್ದಾನೆ. ಇವನ ಮತ್ತೊಂದು ಕೃತಿ ಅಚ್ಯುತರಾಯಾಭ್ಯುದತ' ತುಳುವ ಮನೆತನದ ಇತಿಹಾಸ ಕುರಿತುದಾಗಿದೆ.

ಕೃಷ್ಣದೇವರಾಯನ ಕಾಲದಲ್ಲಿ ವೈವಿಧ್ಯಮಯವಾದ ಕಾವ್ಯ ಸೃಷ್ಠಿಯಾಯಿತು. ಇವನ ಆಸ್ಥಾನದಲ್ಲಿ 'ಅಷ್ಟದಿಗ್ಗಜ'ರೆಂಬ ಉದ್ದಾಮ ಪಂಡಿತರಿದ್ದರು. ಸಂಸ್ಕೃತವಲ್ಲದೆ ಕನ್ನಡ, ತೆಲುಗು ಮತ್ತು ತಮಿಳು ಭಾಷೆಯಲ್ಲೂ ಗ್ರಂಥಗಳು ರಚಿತವಾದವು. ಕೃಷ್ಣದೇವರಾಯ 'ಜಾಂಬವತೀ ಕಲ್ಯಾಣ' ಎಂಬ ಸಂಸ್ಕೃತ ನಾಟಕವನ್ನು ರಚಿಸಿದ್ದಾನೆ. ಇವನ ಗುರುಗಳಾದ ಶ್ರೀವ್ಯಾಸರಾಯರು 'ದ್ವೈತವೇದಾಂತದ ರತ್ನಗಳಾದ ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ, ಭೇದೋಜ್ಜೀನವ ಗ್ರಂಥಗಳನ್ನು ರಚಿಸಿದ್ದಾರೆ. ಇವರ ಶಿಷ್ಯರಾದ ಶ್ರೀ ವಾದಿರಾಜರು 'ಯುಕ್ತಮಲ್ಲಿಕಾ', 'ರುಕ್ಮಿನೀಶ ವಿಜಯ', 'ಗುರ್ವರ್ಥ ದೀಪಿಕಾ' ಮೊದಲಾದ ಗ್ರಂಥಗಳನ್ನು ರಚಿಸಿದ್ದಾರೆ. ಸಂಸ್ಕೃತದಲ್ಲಿ ಅದ್ವಿತೀಯ ಪಂಡಿತನೆನಿಸಿದ ಅಯ್ಯಪ್ಪದೀಕ್ಷಿತ ಕುಂಭಕೋಣದಲ್ಲಿ ವಾಸಿಸುತ್ತಿದ್ದನು. ಇವನು 'ಪರಿಮಳ' ಗ್ರಂಥದಲ್ಲಿ ಅದ್ವೈತತ್ವ ಸಮರ್ಥನೆನು, 'ಶಿವತತ್ವವಿವೇಕ'ದಲ್ಲಿ ಶಿವನ ಉಪಾಸನೆಯನ್ನು ಮಾಡಿದ್ದಾನೆ. ಇವಲ್ಲದೆ ಕುವಲಯಾನಂದ, ರಾಮಾಯಣ ತಾತ್ಪರ್ಯ ಸಂಗ್ರಹ, ಮಹಾಭಾರತ ತಾತ್ಪರ್ಯ ಸಂಗ್ರಹ ಮೊದಲಾದ ಗ್ರಂಥಗಳನ್ನು ರಚಿಸಿದ್ದಾನೆ. ಇವನು ಶೈವನಾದರೂ ವಿಷ್ಣುದ್ವೇಷಿಯಾಗಿರಲಿಲ್ಲ.

ತಂಜಾವೂರಿನ ರಘುನಾಥನಾಯಕ ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾನೆ ಎಂಬ ಪ್ರತೀತಿ ಇದೆ. 'ಪಾರಿಜಾತಾಪರಣಂ', 'ವಾಲ್ಮೀಕಿ ಚರಿತಂ', 'ಅಚ್ಯುತೇಂದ್ರಾಭ್ಯುದಯಂ' ಮೊದಲಾದ ಕಾವ್ಯಗಳೂ ಮತ್ತು 'ಸಂಗೀತ ಸುಧಾ' ಎಂಬ ಸಂಗೀತ ಶಾಸ್ತ್ರ ಇವನ ಕೃತಿಗಳಲ್ಲಿ ಮುಖ್ಯವಾದವು. ಇವನ ಆಸ್ಥಾನದ ಕವಯಿತ್ರಿಯಾದ ಶ್ರೀರಾಮ ಭದ್ರಾಂಬಾ ಅಷ್ಟ ಭಾಷಾ ಪ್ರವೀಣೆಯಾಗಿದ್ದಳು. ರಘುನಾಥಾನಾಯಕನ ಜೀವನ ಚರಿತ್ರೆಯನ್ನು ತನ್ನ 'ರಘುನಾಥಭ್ಯುದಯಂ' ಕಾವ್ಯದಲ್ಲಿ ವಿವರಿಸಿದ್ದಾಳೆ.

**ವಿಜಯನಗರ ಕಾಲದ ಪ್ರಮುಖ ಸಂಸ್ಕೃತ ಕೃತಿಗಳು.**

| ರಾಜಾಶ್ರಯ | ಕವಿಗಳು | ಕೃತಿಗಳು | ಭಾಷೆ |
|---|---|---|---|
| ೧ನೇ ಹರಿಹರ | ವಿದ್ಯಾರಣ್ಯರು | ಸರ್ವದರ್ಶನ ಸಂಗ್ರಹ, ವೇದಭಾಷ್ಯ, ಶಂಕರವಿಜಯ, ಅನುಭೂತಿ ಪ್ರಕಾಶ | ಸಂಸ್ಕೃತ |
| ೧ನೇ ಹರಿಹರ | ಸಾಯಣಾಚಾರ್ಯ | ವೇದಾರ್ಥ ಪ್ರಕಾಶ, ಆಯುರ್ವೇದ ಸುಧಾನಿಧಿ,ಸುಭಾಷಿತ ಸುಧಾನಿಧಿ, ಪ್ರಾಯಶ್ಚಿತ ಸುಧಾನಿಧಿ, ಪುರುಷಾರ್ಥ ಸುಧಾನಿಧಿ ಇತ್ಯಾದಿ | ಸಂಸ್ಕೃತ |
| ೧ನೇ ಹರಿಹರ | ೨ನೇ ಹರಿಹರ | ಮಧುರ, ಧರ್ಮನಾಥಪುರಾಣ | ಸಂಸ್ಕೃತ |
| ೧ನೇ ಹರಿಹರ | ವಿರೂಪಾಕ್ಷ ದೊರೆ | ಉನ್ಮತ್ತ ರಾಘವ, ನಾರಾಯಣಿ ವಿಲಾಸ (ನಾಟಕ) | ಸಂಸ್ಕೃತ |
| ೧ನೇ ಹರಿಹರ | ಅಹೋಬಲ ಸೂರಿ | ವಸಂತೋತ್ಸವ, ಯತಿರಾಜ ವಿಜಯ,ವಿರೂಪಾಕ್ಷ | ಸಂಸ್ಕೃತ |
| ೧ನೇ ಹರಿಹರ | ಇರುಗಪ್ಪ ದಂಡನಾಯಕ | ನಾನಾರ್ಥ ರತ್ನಮಾಲಾ | ಸಂಸ್ಕೃತ |
| ೧ನೇ ದೇವರಾಯ | ಸ್ವತಃ ವಿದ್ವಾಂಸ | ಮಹಾನಾಟಕ ಸುಧಾನಿಧಿ | ಸಂಸ್ಕೃತ |
| ೧ನೇ ದೇವರಾಯ | ಲಕ್ಕಣದಂಡೇಶ | ತೀರ್ಥಪ್ರಬಂಧ, ಪಾರ್ಶ್ವನಾಥ ಚರಿತ | ಸಂಸ್ಕೃತ |
| ಕೃಷ್ಣ ದೇವರಾಯ | ವ್ಯಾಸರಾಯರು | ತರ್ಕತಾಂಡವ | ಸಂಸ್ಕೃತ |
| ಕೃಷ್ಣ ದೇವರಾಯ | ವಾದಿರಾಜ | ತೀರ್ಥ ಪ್ರಬಂಧ | ಸಂಸ್ಕೃತ |

**ಕನ್ನಡ ಸಾಹಿತ್ಯ.**

ಕನ್ನಡ ಸಾಹಿತ್ಯ ವಿಫುಲವಾಗಿ ಬೆಳೆಯಲು ವಿಜಯನಗರ ಕಾಲ ಪರಿಪಕ್ವವಾಗಿದ್ದಿತು. ಪರಕೀಯರ ದಾಳಿಯಿಂದಾಗಿ ಸ್ವಧರ್ಮದ ರಕ್ಷಣೆಗೆ ಹೆಚ್ಚು ಪ್ರಾಶಸ್ತ್ಯ ದೊರೆತುದರಿಂದ ಆಗಿನ ಕಾಲದ ಗ್ರಂಥಗಳು

ಬಹುತೇಕವಾಗಿ  ಕರ್ತೃಗಳು ಅನುಸರಿಸುತ್ತಿದ್ದ ಧರ್ಮಕ್ಕೆ ಸಂಬಂಧಿಸಿದವುಗಳಾಗಿವೆ. ಹರಿಹರನ ಕಾಲದ ಜೈನಕವಿ ಧರ್ಮನಾಥ 'ಮಹಾಪುರಾಣ' ವನ್ನೂ, ಭೀಮ ಕವಿಯು ಪಾಲ್ಕುರಿಕೆ ಸೋಮನಾಥನ ತೆಲುಗು ಕೃತಿ 'ಬಸವಪುರಾಣ' ವನ್ನೂ ಕನ್ನಡದಲ್ಲಿ ಬರೆದಿದ್ದಾನೆ. ಇಮ್ಮಡಿ ದೇವರಾಯನ ಕಾಲದ ವೀರಶೈವ ಕವಿಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ದಂಡನಾಯಕನಾದ ಲಕ್ಕಣನು "ಶಿವತತ್ವ ಚಿಂತಾಮಣಿ'ಯನ್ನೂ, ಚಾಮರಸ ಕವಿಯು 'ಪ್ರಭುಲಿಂಗಲೀಲೆ'ಯನ್ನು ರಚಿಸಿದರು. ವಿರೂಪಾಕ್ಷನ ಆಳ್ವಿಕೆಯಲ್ಲಿ ಏಳಿಗೆಯಲ್ಲಿದ್ದ ತೋಂಟದ ಸಿದ್ದೇಶ್ವರ ವೀರಶೈವಧರ್ಮವನ್ನು ಕುರಿತು "ಷಟ್ಸ್ಥಲ ಜ್ಞಾನಾಮೃತ" ಬರೆದಿದ್ದಾರೆ.

ಕೃಷ್ಣದೇವರಾಯನ ಆಶ್ರಯದಲ್ಲಿದ್ದ ಕವಿ ಗುಬ್ಬಿಯ ಮಲ್ಲಣ್ಣನು 'ಗುಣಭಾಷ್ಯರತ್ನಮಾಲೆ', 'ಭಾವ ಚಿಂತಾರತ್ನ', 'ವೀರಶೈವಾಮೃತ ಪುರಾಣ' ರಚಿಸಿದ್ದಾರೆ. ಕುಮಾರ ವಾಲ್ಮೀಕಿ ಎಂಬ ಬಿರುದು ಪಡೆದಿದ್ದ ಕವಿ ನರಹರಿ 'ತೊರವೆ ರಾಮಾಯಣ' ವನ್ನು ರಚಿಸಿದನು. ವಿರೂಪಾಕ್ಷನು 'ಚನ್ನಬಸವ ಪುರಾಣ' ವನ್ನು ಬರೆದಿದ್ದಾನೆ. ಜೈನ ಕವಿ ರತ್ನಾಕರವರ್ಣಿ 'ಭರತೇಶ ವೈಭವ', 'ತ್ರಿಲೋಕ ಶತಕ' ಮೊದಲಾದುವುಗಳನ್ನು ರಚಿಸಿದ್ದಾನೆ. ಮತ್ತೊಬ್ಬ ಜೈನ ಕವಿ ಭಟ್ಟಾಕಳಂಕದೇವ ತನ್ನ ಜೀವಮಾನವನ್ನೇ ಸವೆಸಿ ಕನ್ನಡ ವ್ಯಾಕರಣ 'ಕರ್ನಾಟಕ ಶಬ್ದಾನುಶಾಸನ' ರಚಿಸಿದ್ದಾನೆ.

ವಿಜಯನಗರ ಕಾಲ ವಚನ ಸಾಹಿತ್ಯದ ಪುನರುಜ್ಜೀವನಕ್ಕೆ ಹೆಸರಾಗಿದೆ. ವೀರಶೈವ ಧರ್ಮ ಸಾಹಿತ್ಯದ ಪುನರುಜ್ಜೀವನ ಕಾಲವು ಆಗಿತ್ತು.

**ವಿಜಯನಗರ ಕಾಲದ ಪ್ರಮುಖ ಕನ್ನಡ ಕೃತಿಗಳು.**

| ರಾಜಾಶ್ರಯ | ಕವಿಗಳು | ಕೃತಿಗಳು | ಭಾಷೆ |
|---|---|---|---|
| ೧ನೇ ದೇವರಾಯ | ೧ನೇ ಮಂಗರಸ | ಖಗೇಂದ್ರ ಮಣಿದರ್ಪಣ (ವೈದ್ಯ) | ಕನ್ನಡ |
| ೨ನೇ ದೇವರಾಯ | ಗದುಗಿನ ನಾರಯಪ್ಪ | ಕುಮಾರವ್ಯಾಸ ಭಾರತ | ಕನ್ನಡ |
| ೨ನೇ ದೇವರಾಯ | ಎಡೆಯೂರು ಸಿದ್ಧಲಿಂಗೇಶ್ವರರು | ಷಟ್‌ಸ್ಥಲಜ್ಞಾನಸಾರ ಸಂಗ್ರಹ | ಕನ್ನಡ |
| ೨ನೇ ದೇವರಾಯ | ಲಕ್ಷ್ಮೀಶ | ಜೈಮಿನಿಭಾರತ | ಕನ್ನಡ |
| ೨ನೇ ದೇವರಾಯ | ಜಕ್ಕಣಾಚಾರ್ಯ | ನೂರೊಂದೂ ಸ್ಥಲ | ಕನ್ನಡ |
| ೨ನೇ ದೇವರಾಯ | ತೊರವೆ ನರಹರಿ | ತೊರವೆ ರಾಮಾಯಣ | ಕನ್ನಡ |

| | | | |
|---|---|---|---|
| ೨ನೇ ದೇವರಾಯ | ಲಕ್ಕಣದಂಡೇಶ | ಶಿವತತ್ವ ಚಿಂತಾಮಣಿ | ಕನ್ನಡ |
| ಕೃಷ್ಣ ದೇವರಾಯ | ಹರಿದಾಸ | ಇರುಸಮಯ ವಿಳಕ್ಕಂ | ಕನ್ನಡ |

**ತೆಲುಗು ಸಾಹಿತ್ಯ.**

ಕೃಷ್ಣದೇವರಾಯನ ಕಾಲದಲ್ಲಿ ಅವರ ಆಸ್ಥಾನದ **'ಅಷ್ಟದಿಗ್ಗಜ'**ರೆನಿಸಿದ್ದ ಪ್ರಸಿದ್ದ ಎಂಟು ಮಂದಿಯೂ ತೆಲುಗು ಕವಿಗಳಾಗಿದ್ದರು. ಅವರುಗಳು ಅಲ್ಲಸಾನಿ ಪೆದ್ದನ, ನಂದಿಯ ತಿಮ್ಮನ, ಧೂರ್ಜಟಿ, ತೆನಾಲಿ ರಾಮ ಕೃಷ್ಣ, ಮಾದಯ್ಯಗಾರಿ ಮಲ್ಲಣ, ಅಯ್ಯಲರಾಜು ರಾಮಭದ್ರಯ್ಯ, ರಾಮರಾಜ ಭೂಷಣ, ಪಿಂಗಳಿ ಸೂರನ್ನ ಇತರರು. ಖ್ಯಾತ ತೆಲುಗು ಕವಿ ಶ್ರೀನಾಥನು 'ನೈಷದ ಕಾವ್ಯ', 'ಹರಿವಿಲಾಸ', 'ಕಾಶಿ ಖಾಂಡಂ' ಗಳನ್ನು ರಚಿಸಿದ್ದಾರೆ. ಕೃಷ್ಣದೇವರಾಯನು ತೆಲುಗು ಕೃತಿಯಾದ 'ಆಮುಕ್ತಮೌಲ್ಯದ' ಕಾವ್ಯವು ವೈಷ್ಣವ ಅಂಡಾಳದೇವಿಯನ್ನು ಕುರಿತುದಾಗಿದೆ. ಅಲ್ಲಸಾನಿ ಪೆದ್ದನನ 'ಮನುಚರಿತ', ನಂದಿ ತಿಮ್ಮಣ್ಣನ 'ಪಾರಿಜಾತಾಪಹರಣ' ಈ ಕಾಲದ ಇತರೆ ಕೃತಿಗಳು. ವಿಕಟ ಕವಿ ತೆನಾಲಿ ರಾಮಕೃಷ್ಣ 'ಪಾಂಡುರಂಗ ಮಹಾತ್ಮ್ಯ' 'ಘಟಿಕಾಚಲ ಮಹಾತ್ಮ್ಯಂ', ಲಿಂಗಪುರಾಣ ಗಳನ್ನು ರಚಿಸಿದ್ದಾರೆ. ಸಿಂಗರಾಚಾರ್ಯ 'ದಶರಥರಾಜನಂದ ಚರಿತ್ರಮು' ಎಂಬ ಕಾವ್ಯವನ್ನು ರಚಿಸಿದರು.

**ವಿಜಯನಗರ ಕಾಲದ ಪ್ರಮುಖ ತೆಲುಗು ಕೃತಿಗಳು.**

| ರಾಜಾಶ್ರಯ | ಕವಿಗಳು | ಕೃತಿಗಳು | ಭಾಷೆ |
|---|---|---|---|
| ೧ನೇ ದೇವರಾಯ | ಶ್ರೀನಾಥ | ಹರಿವಿಲಾಸಮು | ತೆಲುಗು |
| ಕೃಷ್ಣ ದೇವರಾಯ | ಸ್ವತಃ ವಿದ್ವಾಂಸ | ಮದಾಲಸಚರಿತಂ, ರಸಮಂಜರಿ, ಜಾಂಬವತಿ ಪರಿಣಯಂ, ಉಷಾಪರಿಣಯ,ಅಮುಕ್ತ ಮೌಲ್ಯದ | ತೆಲುಗು |
| ಕೃಷ್ಣ ದೇವರಾಯ | ವಿಶ್ವನಾಥ | ರಾಯವಾಚಕಮು | ತೆಲುಗು |
| ಕೃಷ್ಣ ದೇವರಾಯ | ಅಲ್ಲಸಾನಿ ಪೆದ್ದನ | ಮನುಚರಿತಮು | ತೆಲುಗು |
| ಕೃಷ್ಣ ದೇವರಾಯ | ನಂದಿ ತಿಂಮ್ಮಣ್ಣ | ಪಾರಿಜಾತಪಹರಣಮು | ತೆಲುಗು |
| ಕೃಷ್ಣ ದೇವರಾಯ | ರಾಮರಾಜ ಭೂಷಣ | ವಸುಚರಿತಂ | ತೆಲುಗು |
| ಕೃಷ್ಣ ದೇವರಾಯ | ತೆನಾಲಿ ರಾಮಕೃಷ್ಣ | ಉಭಟಾರಾಧ್ಯ ಚರಿತಮು | ತೆಲುಗು |
| ಕೃಷ್ಣ ದೇವರಾಯ | ಪಿಂಗಳಿಸೂರಣ್ಣ | ಕಲಾಪೂರ್ಣೋದಯಂ | ತೆಲುಗು |
| ಕೃಷ್ಣ ದೇವರಾಯ | ದುರ್ಜಟಿ | ಕೃಷ್ಣ ರಾಜವಿಜಯಂ | ತೆಲುಗು |
| ಕೃಷ್ಣ ದೇವರಾಯ | ಮಲ್ಲಣ | ರಾಜಶೇಖರ ಚರಿತಮು | |

**ತಮಿಳು ಸಾಹಿತ್ಯ.**

ತಮಿಳು ಕವಿಗಳಾದ ಪರಂಜೋತಿಯರ್, ತತ್ವಪ್ರಕಾಶ ಸ್ವಾಮಿಗಳ್, ವೀರರಾಘವರ್ ಮೊದಲಾದವರು ಕೃಷ್ಣದೇವರಾಯನ ಆಸ್ಥಾನದಲ್ಲಿದ್ದರು. ವೀರರಾಮ ಪಾಂಡೆ 'ನೈಷಧಂ' 'ಕೂರ್ಮಪುರಾಣಂ' 'ಲಿಂಗಪುರಾಣಂ' ಕೃತಿಗಳನ್ನು ಹಾಗೂ ಪರಂಜೋತಿಯರ್ ಕವಿಯು 'ತಿರುವಿಳಯಾಡಲ್ ಪುರಾಣಂ' ಬರೆದಿದ್ದಾರೆ.

| ಕವಿ | ಕೃತಿ |
|---|---|
| ಒಟ್ಟಿಕೂಲರ್ | ನಳವೆಂಬ ಮೂವರ್–ಉಳ |
| ಜಯಗೊಂಡರ್ | ಕುಲೋತ್ತುಂಗ ಕೂವೈ, ಕಳಿಂಗತ್ತು–ಪರಣಿ |
| ಕುಲೋತ್ತುಂಗ | ಪಿಳ್ಳೆ ತಮಿಳ್ (ಬಾಲಬೋಧೆ) |
| ಬುಧಮಿತ್ರ | ವೀರಚೋಳಿಯಂ |
| ನೇಮಿನಾಥಂ | ನೇಮಿನಾಥಂ ಪುರಾಣಂ |
| ಶಿವಪ್ರಕಾಶರ್ | ಪ್ರಭುಲಿಂಗ ಲೀಲೈ |
| ಭವನಂದಿ | ನನ್ನೂಲ್ ಕಾವ್ಯಂ |

**ಮಲಯಾಳಂ ಸಾಹಿತ್ಯ.**

| | |
|---|---|
| ಅನಾಮಿಕ | ಉಣ್ಣುನೀಲಿ ಸಂದೇಶ |
| ಅನಾಮಿಕ | ಉಣಿಯಾತಿ ಚರಿತಂ |
| ಚೆರುಸೇರಿ ನಂಬೂದರಿ | ಕೃಷ್ಣಗಾದಾ |
| ಎಳುತ್ತು ಅಚ್ಚನ್ | ಅಧ್ಯಾತ್ಮ ರಾಮಾಯಣ, ಭಾರತಂ. |

**ಪಾರ್ಸಿ ಮತ್ತು ದಖ್ಖನಿ ಉರ್ದು ಸಾಹಿತ್ಯ.**

**೧. ಪರ್ಷಿಯನ್ ಸಾಹಿತ್ಯ.**

ಬಹಮನಿ ರಾಜ್ಯವು ಪಾಶ್ಚಮಾತ್ಯ ರಾಷ್ಟ್ರಗಳು, ಅರಬ್ ದೇಶಗಳೊಂದಿಗೆ ನಿಕಟ ಸಂಬಂಧ ಹೊಂದಿದ್ದರಿಂದ ಪರ್ಷಿಯನ, ಉರ್ದು, ಅರಬ್ಬೀ ಬಾಷೆಗಳು ಮತ್ತು ಸಾಹಿತ್ಯ ಪ್ರವರ್ಧಮಾನಕ್ಕೆ ಬಂದಿತು. ಹಸನ್ ಗಂಗೂವಿನ ಆಸ್ಥಾನ ಕವಿಯಾಗಿದ್ದ ಇಸಾಮಿ 'ಫತುಹಾ–ಉಸ್–ಸಾಲತಿನ್' ಕೃತಿಯನ್ನು ರಚಿಸಿದರು. ಮುಹಮ್ಮದ್ ಶಾಹನ ಕಾಲದ ಹಾಫೀಜ ಹಾಗೂ ಫಿರೋಜಶಾಹನು ಪ್ರಸಿದ್ಧ ಕವಿಗಳಾಗಿದ್ದು 'ಗಜಲ್'ಗಳನ್ನು ಮತ್ತು ದ್ವಿಪದಿಗಳನ್ನು ಬರೆದರು. ಇಸ್ಮಾಯಿಲ್ ಆದಿಲ್ ಖಾನ್ ನ ಕುರಿತು ಯುಸುಫ್ ಕವಿಯು ಗಜಲ್‌ಗಳಲ್ಲಿ ಹೇಳಿರುತ್ತಾರೆ. ಅಜಾದಿ ಮತ್ತು ಮುಲ್ಲಾ ದಾವೂದ್ ಬಿದರಿ ಪರ್ಷಿಯನ್ ಭಾಷೆಯಲ್ಲಿ ಸಾಹಿತ್ಯ ರಚಿಸಿದವರು. ಆಜಾದಿಯು ಬಹಮನಿ ಇತಿಹಾಸವನ್ನು ಕಾವ್ಯರೂಪದಲ್ಲಿ ರಚಿಸಿದನು.

ಮುಲ್ಲಾ ದಾವೂದ್ ಬಿದರಿ ಗದ್ಯರೂಪದಲ್ಲಿ ಇತಿಹಾಸ ಬರೆದನು. ಮಹಮದ್ ಗವಾನ್ ಪರ್ಷಿಯಾ ಭಾಷೆಯ ವಿದ್ವಾಂಸನಾಗಿದ್ದನು. ಮಂಜ್ರುಲ್–ಇನ್–ಷಾ ಮತ್ತು ರಿಯಾಝ್–ಇ–ಇನ್ಶಾ ಎಂಬ ಎರಡು ಕೃತಿಗಳನ್ನು ಗವಾನನು ಬರೆದನು. ಇಸಾಮಿ ಎಂಬ ಇತಿಹಾಸಕಾರನು 'ಫುತುಹಸ್–ಸಲತಿನ್' ಎಂಬ ಕೃತಿಯನ್ನು ಬರೆದನು.

**೨. ಅರೇಬಿಕ್ ಸಾಹಿತ್ಯ.**

ಬಹಮನಿ ಸುಲ್ತಾನರ ಆಳ್ವಿಕೆಯ ಕಾಲದಲ್ಲಿ ಅರೇಬಿಕ್, ಪರ್ಶಿಯನ್, ಉರ್ದು ಮತ್ತು ಕನ್ನಡ ಭಾಷೆಗಳು ಅಭಿವೃದ್ಧಿಗೊಂಡವು. 'ಅತ್ವಾರ–ಉಲ್–ಅಬ್‌ರಾರ್' ಕೃತಿಯು ಕರ್ತೃ ಜುನ್ನೈದಿಯೂ ಕೂಡ ಹಸನ್‌ನ ಕಾಲದ ಪಂಡಿತನು. ಮುಹಮ್ಮದ ಶಾಹ, ಫಿರೋಜ್ ಶಾಹ, ಅಹಮ್ಮದ ಶಾಹ ಇವರು ಅರೇಬಿಕ್ ಪಾಂಡಿತ್ಯ ಪಡೆದಿದ್ದರು. ಮಹಮ್ಮೂದ ಗವಾನನು ಅನೇಕ ಅರಬ್ಬಿ ಪದ್ಯಗಳನ್ನು ರಚಿಸಿದ್ದಾರೆ. ಬೀದರ ಮಧ್ಯಕಾಲೀನ ಭಾರತದ ಪ್ರಸಿದ್ಧ ಪರ್ಶಿಯನ್ ಮತ್ತು ಅರೇಬಿಕ್ ಶಿಕ್ಷಣ ಕೇಂದ್ರವಾಗಿತ್ತು.

**೩. ಉರ್ದು ಸಾಹಿತ್ಯ.**

ಗುಲ್ಬರ್ಗದ ಗೇಸೂ ದರಾಜ್ ಮೊಟ್ಟ ಮೊದಲಿಗೆ ಉರ್ದುವಿನಲ್ಲಿ ಕೃತಿ ರಚಿಸಿದನು. ಅವನು ರಚಿಸಿದ ಮಿರಾಜುಲ್–ಅಶಿಕಿನ್ ಒಂದು ಅನುಭವ ಗ್ರಂಥ. ಬಿಜಾಪುರದ ಷಾಮಿರಂಜಿ, ಬಿದರೆಯ ನಿಜಾಮ ಬಿದರಿ, ಫಿರೋಜ್ ಬಿದರಿ ರವರು ಕೂಡ ದಖನಿ ಉರ್ದುವಿನಲ್ಲಿ ಸಾಹಿತ್ಯ ರಚಿಸಿದ್ದಾರೆ. ಕುರೈಶಿ ಬಿದರಿ ಎಂಬುವನು ಕೋಕಶಾಸ್ತ್ರವನ್ನು ದಖನಿಯಲ್ಲಿ ಪದ್ಯರೂಪಕ್ಕೆ ಭಾಷಾಂತರಿಸಿದನು. ಈ ಕೃತಿ ಭೋಗಬಲ್ ಎಂಬ ಹೆಸರಿನಲ್ಲಿ ಪ್ರಸಿದ್ಧಿಯಾಯಿತು. ಶಹಾ ಬರ್ಹಾನುದ್ದೀನ್ ಜನಂ ಇರ್ಷದ್‌ನಾಮಾ ಮತ್ತು ಕಲಿಮತಲ್ ಹಕೈಕ್ ಕೃತಿಗಳನ್ನು ಬರೆದಿದ್ದಾರೆ.

**ಉಪಸಂಹಾರ.**

ಇಂದಿನ ಕಲ್ಯಾಣ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳಲ್ಲಿ, ಅಂದಿನ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳು ಸಾಹಿತ್ಯ ಕ್ಷೇತ್ರಕ್ಕೆ ವಿಫುಲವಾದ ಕೊಡುಗೆಗಳನ್ನು ನೀಡಿದ್ದರಿಂದ ಅನೇಕ ಭಾಷಾ ಬೆಳವಣಿಗೆಗೆ ಹಾಗೂ ಸಾಹಿತ್ಯ ಕೃತಿ ರಚನೆಗೆ ಪ್ರೋತ್ಸಾಹ ದೊರೆತಂತಾಗಿದೆ. ಈ ಸಾಮ್ರಾಜ್ಯಗಳು ಕಲ್ಯಾಣ ಕರ್ನಾಟಕದ ಭಾಷಾ ವೈವಿಧ್ಯ ಮತ್ತು ದಕ್ಷಿಣ ಭಾರತದಲ್ಲಿ ಭಾಷಾ ಉಳಿವು ಹಾಗೂ ಇನ್ನಿತರ ದೇಶಗಳ ಸಂಪರ್ಕವನ್ನು ಸಾಧಿಸುವಲ್ಲಿ ಯಶಸ್ವೀಯಾಯಿತು ಎನ್ನಬಹುದು.

ವಿಜಯನಗರ ಹಾಗೂ ಬಹಮನಿ ಸಾಮ್ರಾಜ್ಯವು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಪ್ರೋತ್ಸಾಹವು ಶ್ರೇಷ್ಠತೆಗೆ ಹಾಗೂ ಬೆಳವಣಿಗೆಗೆ ಆಧಾರಸ್ತಂಭಗಳಾಗಿವೆ.

## ಆಧಾರ ಗ್ರಂಥಗಳು.


೧) ಫಾಲಾಕ್ಷ. ೨೦೦೭, ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಶಶಿ ಪ್ರಕಾಶನ ತಿಪಟೂರು.

೨) ಡಾ.ಬಸವರಾಜ ಎನ್. ಅಕ್ಕಿ. ೨೦೧೮, ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ, ಸೋಮೇಶ್ವರ ಪಬಿಕೇಶನ್ಸ್, ಧಾರವಡ.

೩) ಡಾ.ಕೆ.ಸದಾಶಿವ, ೨೦೦೪, ಮಧ್ಯಯುಗೀನ ಭಾರತದ ಇತಿಹಾಸ, ಪ್ರಿಯದರ್ಶಿನಿ ಪ್ರಕಾಶನ, ಮೈಸೂರು.

೪) ಡಾ.ಜಿ.ಶಿವಪ್ಪ ಅರಿವು, ೨೦೧೫, ಸಮಗ್ರ ಕರ್ನಾಟಕ ಇತಿಹಾಸ(ಪ್ರಾರಂಭದಿಂದ ೨೦೧೪ರ ವರೆಗೆ)

೫) ಡಾ.ಎ.ಸಿ.ನಾಗೇಶ ಮತ್ತು ಪ್ರೊ. ಆರ್. ರಾಜಣ್ಣ, ೨೦೧೪, ಕರ್ನಾಟಕ ಚರಿತ್ರೆ ಭಾಗ –೧, ಅನ್ನದಾನಿ ಭೈರವ ಪ್ರಕಾಶನ, ಬೆಂಗಳೂರು.
೬) ಡಾ. ಸೂರ್ಯನಾಥ ಕಾಮತ್, ೨೦೧೫, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಎಂ.ಸಿ.ಸಿ. ಪಬ್ಲಿಕೇಷನ್ಸ್, ಬೆಂಗಳೂರು, ಹುಬ್ಬಳ್ಳಿ, ಮೈಸೂರು.
೭) ಡಾ.ಕೆ.ಜಗದೀಶ,೨೦೧೦, ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಚಿರಾಗ ಪ್ರಕಾಶನ, ಧಾರವಾಡ.
೮) ಪ್ರೋ.ಜಿ.ಆರ್.ರಂಗಸ್ವಾಮಯ್ಯ,೨೦೦೧, ಕರ್ನಾಟಕದ ಸಂಕ್ಷಿಪ್ತ ಚರಿತ್ರೆ, ಚೇತನ ಬುಕ್ ಹೌಸ್, ದಾವಣಗೆರೆ.



## ಕಲೆ ಮತ್ತು ವಾಸ್ತುಶಿಲ್ಪಕ್ಕೆ ವಿಜಯನಗರ ಹಾಗೂ ಬಹಮನಿ ಸಾಮ್ರಾಜ್ಯಗಳ ಕೊಡುಗೆಯ ಒಂದು ಐತಿಹಾಸಿಕ ಅಧ್ಯಯನ : ಕಲ್ಯಾಣ ಕರ್ನಾಟಕಕ್ಕೆ ಸಂಬಂಧಿಸಿದಂತೆ.

**–ಶೋಭಾ ಬಿ.ಎಸ್.**
ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ,
ಶಾ॥ಸೋಗಮಲ್ ಪೀರಾಜಿ ಓಸ್ವಾಲ್
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮುದ್ದೇಬಿಹಾಳ.

**ಸಾರಾಂಶ.**

ಯಾವುದೇ ಸಾಮ್ರಾಜ್ಯಗಳ ಇತಿಹಾಸದ ಅಧ್ಯಯನದಲ್ಲಿ ಆ ಸ್ಥಳಗಳಲ್ಲಿ ಸಿಗುವ ಸ್ಮಾರಕಗಳು ಅಮೂಲ್ಯ ಆಧಾರಗಳಾಗುತ್ತವೆ. ಇಂತಹ ಸ್ಮಾರಕಗಳು ಕಲೆ ಮತ್ತು ವಾಸ್ತುಶಿಲ್ಪಗಳನ್ನು ಪ್ರತಿನಿಧಿಸಿ ಅವುಗಳಲ್ಲಿರುವ ವಿಶಿಷ್ಟ ಲಕ್ಷಣಗಳನ್ನು ಜಗತ್ತಿಗೆ ಪರಿಚಯಿಸಿ ಅಂದಿನ ಕಾಲಘಟ್ಟದ ಕಲೆ ಮತ್ತು ವಾಸ್ತುಶಿಲ್ಪಯ ಬೆಳವಣಿಗೆಯನ್ನು ಅರಿಯಲು ಸಹಾಯಕವಾಗಿವೆ. ಕಲ್ಯಾಣ ಕರ್ನಾಟಕದ ಸಂಬಧಿಂಸಿದಂತೆ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದ ಬೆಳವಣಿಗೆ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳು ವಿಶಿಷ್ಟವಾದ ಕೊಡುಗೆಗಳನ್ನು ನೀಡಿವೆ. ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳ ಕಾಲಾವಧಿಯಲ್ಲಿ ನಿರ್ಮಾಣವಾದ ಅನೇಕ ಅರಮನೆಗಳು, ದೇವಾಲಯಳು, ಕಲ್ಯಾಣ ಮಂಟಪಗಳು, ಗೋಪುರಗಳು, ಸಾರ್ವಜನಿಕ ಕಟ್ಟಡಗಳು, ಕೋಟೆಗಳು, ಸಮಾಧಿಗಳು, ಮದ್ರಸಾ, ಮಸೀದಿಗಳಲ್ಲಿ ಕಲೆ ಮತ್ತು ವಾಸ್ತುಶಿಲ್ಪಗಳ ಬೆಳವಣಿಗೆಯನ್ನು ಕಾಣಬಹುದು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ವಾಸ್ತುಶಿಲ್ಪ ಶೈಲಿ ದ್ರಾವಿಡ ಶೈಲಿಯ ಶ್ರೇಷ್ಠ ವಿಕಸಿತ ಶೈಲಿ ಬೆಳವಣಿಗೆಯಾದರೆ ಬಹಮನಿ ಸಾಮ್ರಾಜ್ಯದ ಕಾಲದಲ್ಲಿ ಇಂಡೋ – ಸಾರ್ಸೆನಿಕ್ ಶೈಲಿಯ ವಾಸ್ತುಶಿಲ್ಪ ಶೈಲಿ ಕಾಣಬಹುದು. ವಿಜಯನಗರದ ಅರಸರು ಗಟ್ಟಿ ಶಿಲೆ (ಗ್ರಾನೈಟ್)ಗಳನ್ನು ಬಳಸಿಕೊಂಡು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಆ ಕಾರಣದಿಂದಾಗಿ ಸೂಕ್ಷ್ಮ ಮತ್ತು ಕುಸುರಿ ಕೆತ್ತನೆ ಹೊಯ್ಸಳ ಸ್ಮಾರಕಗಳಿಗೆ ಹೋಲಿಸಿದರೆ ಕಡಿಮೆ ಎನ್ನಬಹುದು. ಇಲ್ಲಿನ ದೇವಾಲಯಗಳು ಸಾಮಾನ್ಯವಾಗಿ ಸಭಾಂಗಣ, ಕಲ್ಯಾಣ ಮಂಟಪ, ದ್ವಾರ ಗೋಪುರಗಳು, ಗರ್ಭಗುಡಿಗಳನ್ನು ಹೊಂದಿವೆ. ಈ ಕಾಲದ ವೈಶಿಷ್ಟ್ಯವೆಂದರೆ ಎತ್ತರವಾದ ದ್ವಾರದ ಗೋಪುರಗಳ ನಿರ್ಮಾಣ. ಬಹಮನರ ಪ್ರಮುಖ ರಚನಾ ವಿನ್ಯಾಸವನ್ನು ಅವರು ನಿರ್ಮಿಸಿದ ಮಸೀದಿಗಳಲ್ಲಿ ನೋಡಬಹುದಾಗಿದೆ. ಕಮಾನು, ಗುಮ್ಮಟ, ಸ್ತಂಭಗೋಪುರ ಮುಂತಾದವು ಬಹಮನಿ ಕಲೆಗೆ ಸಾಕ್ಷಿಯಾಗಿವೆ. ಕಟ್ಟಡಗಳ ಅಲಂಕಾರ ಲಿಪಿ ದೊಡ್ಡ ಕಲೆಯಾಗಿ ಈ ಕಾಲದಲ್ಲಿ ವಿಕಾಸವಾಗಿದೆ. ಗಾಜು, ಸಿರಾಮಿಕ್ಸ್, ಮರ, ಲೋಹ, ರತ್ನಗಂಬಳಿಗಳು, ಅಮೃತಶಿಲೆ ಅಥವಾ ಗ್ರಾನೈಟ್ ಶಿಲೆಗಳ ಹಲಗೆಗಳು ಈ ಕಾಲದ ಕಟ್ಟಡಗಳ ಸೌಂದರ್ಯವನ್ನು ಹೆಚ್ಚಿಸಿದೆ.

**ವಿಶೇಷ ಪದಗಳು:** ಕಲೆ, ವಾಸ್ತುಶಿಲ್ಪ, ವಿಜಯನಗರ, ಬಹಮನಿ, ಕಲ್ಯಾಣ ಕರ್ನಾಟಕ, ದ್ರಾವಿಡ ಶೈಲಿಯ ಶ್ರೇಷ್ಠ ವಿಕಸಿತ, ಇಂಡೋ– ಸಾರ್ಸೆನಿಕ್ ಶೈಲಿ, ಸ್ಮಾರಕಗಳು.

**ಪೀಠಿಕೆ.**

ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪಗಳು ಚಾರಿತ್ರಿಕಯುಗದ ಆರಂಭಕಾಲದಿಂದಲೂ ಪ್ರಾಮುಖ್ಯತೆ ಗಳಿಸಿಕೊಂಡಿದೆ. ಇಲ್ಲಿನ ನಾನಾ ಅರಸುಮನೆತನಗಳೂ ಶ್ರೀಮಂತ ವಂಶಗಳೂ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೆ ಯಾವಾಗಲೂ ಪ್ರೋತ್ಸಾಹ ನೀಡುತ್ತಾ ಬಂದಿವೆ. ಅಲ್ಲದೆ ಈ ನಾಡು ತನ್ನ ವಿಶಿಷ್ಟ ಭೌಗೋಳಿಕ ಸನ್ನಿವೇಶದ ಕಾರಣದಿಂದಾಗಿ ಅನೇಕ ವಾಸ್ತುಶೈಲಿಗಳ ಸಂಗಮ ಸ್ಥಾನವಾಗಿದೆ. ಆದ್ದರಿಂದ ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ ಸಂಪತ್ತು ಗಮನಾರ್ಹವೂ, ವೈವಿಧ್ಯಪೂರ್ಣವೂ, ವಿಶಿಷ್ಟವೂ ಆಗಿದೆ. ಕಲ್ಯಾಣ ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದ ಬೆಳವಣಿಗೆ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳು

ವಿಶಿಷ್ಟವಾದ ಕೊಡುಗೆಗಳನ್ನು ನೀಡಿವೆ. ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳ ಕಾಲಾವಧಿಯಲ್ಲಿ ನಿರ್ಮಾಣವಾದ ಅನೇಕ ದೇವಾಲಯಳು, ಕಲ್ಯಾಣ ಮಂಟಪಗಳು, ಗೋಪುರಗಳು, ಸಾರ್ವಜನಿಕ ಕಟ್ಟಡಗಳು, ಕೋಟೆಗಳು, ಅರಮನೆಗಳು, ಸಮಾಧಿಗಳು, ಮದ್ರಸಾ, ಮಸೀದಿಗಳಲ್ಲಿ ಕಲೆ ಮತ್ತು ವಾಸ್ತುಶಿಲ್ಪಗಳ ಬೆಳವಣಿಗೆಯನ್ನು ಕಾಣಬಹುದು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ವಾಸ್ತುಶಿಲ್ಪ ಶೈಲಿ ದ್ರಾವಿಡ ಶೈಲಿಯ ಶ್ರೇಷ್ಠ ವಿಕಸಿತ ಶೈಲಿ ಬೆಳವಣಿಗೆಯಾದರೆ ಬಹಮನಿ ಸಾಮ್ರಾಜ್ಯದ ಕಾಲದಲ್ಲಿ ಇಂಡೋ – ಸಾರ್ಸೆನಿಕ್ ಶೈಲಿಯ ವಾಸ್ತುಶಿಲ್ಪ ಶೈಲಿ ಕಾಣಬಹುದು. ವಿಜಯನಗರದ ಅರಸರು ಗಟ್ಟಿ ಶಿಲೆ (ಗ್ರಾನೈಟ್)ಗಳನ್ನು ಬಳಸಿಕೊಂಡು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಆ ಕಾರಣದಿಂದಾಗಿ ಸೂಕ್ಷ್ಮ ಮತ್ತು ಕುಸುರಿ ಕೆತ್ತನೆ ಹೊಯ್ಸಳ ಸ್ಮಾರಕಗಳಿಗೆ ಹೋಲಿಸಿದರೆ ಕಡಿಮೆ ಎನ್ನಬಹುದು. ಇಲ್ಲಿನ ದೇವಾಲಯಗಳು ಸಾಮಾನ್ಯವಾಗಿ ಸಭಾಂಗಣ, ಕಲ್ಯಾಣ ಮಂಟಪ, ದ್ವಾರ ಗೋಪುರಗಳು, ಗರ್ಭಗುಡಿಗಳನ್ನು ಹೊಂದಿವೆ. ಈ ಕಾಲದ ವೈಶಿಷ್ಟ್ಯವೆಂದರೆ ಎತ್ತರವಾದ ದ್ವಾರದ ಗೋಪುರಗಳ ನಿರ್ಮಾಣ. ವಿಜಯನಗರ ಕಾಲದ ದೇವಾಲಯಗಳಲ್ಲಿ ಪ್ರಮುಖವಾದವು ಹಂಪೆ, ಲೇಪಾಕ್ಷಿ, ಶೃಂಗೇರಿ, ಶ್ರೀರಂಗಂ, ತಿರುಪತಿ, ಕಂಚಿ, ಕೋಲಾರ, ಮೂಡಬಿದರೆ ಮೊದಲಾದ ಸ್ಥಳಗಳಲ್ಲಿವೆ. ಬಹಮನಿ ಕಾಲದ ಕಲೆ ಮತ್ತು ವಾಸ್ತುಶಿಲ್ಪವನ್ನು ಬೀದರ್, ಗುಲ್ಬರ್ಗಾ, ವಿಜಯಪುರ ಮೊದಲಾದ ಸ್ಥಳಗಳಲ್ಲಿವೆ. ಬಹಮನರ ಪ್ರಮುಖ ರಚನಾ ವಿನ್ಯಾಸವನ್ನು ಅವರು ನಿರ್ಮಿಸಿದ ಮಸೀದಿಗಳಲ್ಲಿ ನೋಡಬಹುದಾಗಿದೆ. ಕಮಾನು, ಗುಮ್ಮಟ, ಸ್ತಂಭಗೋಪುರ ಮುಂತಾದವು ಬಹಮನಿ ಕಲೆಗೆ ಸಾಕ್ಷಿಯಾಗಿವೆ. ಕಟ್ಟಡಗಳ ಅಲಂಕಾರ ಲಿಪಿ ದೊಡ್ಡ ಕಲೆಯಾಗಿ ಈ ಕಾಲದಲ್ಲಿ ವಿಕಾಸವಾಗಿದೆ.

ವಿಶೇಷವಾಗಿ ಕಲ್ಯಾಣ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೆ ವಿಜಯನಗರ ಹಾಗೂ ಬಹಮನಿ ಸಾಮ್ರಾಜ್ಯಗಳ ಕೊಡುಗೆಗಳ ಬಗ್ಗೆ ಈ ಒಂದು ಲೇಖನದಲ್ಲಿ ಪರಿಶೀಲಿಸಲಾಗಿದೆ.

**ಉದ್ದೇಶ:–**

- ಕಲ್ಯಾಣ ಕರ್ನಾಟಕದ ವ್ಯಾಪ್ತಿಯ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದ ಬೆಳವಣಿಗೆಗೆ ವಿಜಯನಗರ ಹಾಗೂ ಬಹಮನಿ ಸಾಮ್ರಾಜ್ಯಗಳ ಕೊಡುಗೆಗಳನ್ನು ತಿಳಿಯುವುದು.
- ವಿಜಯನಗರ ಸಾಮ್ರಾಜ್ಯದ ಕಲೆ ಮತ್ತು ವಾಸ್ತುಶಿಲ್ಪ ಶೈಲಿಯನ್ನು ತಿಳಿಯುವುದು.
- ಬಹಮನಿ ಸಾಮ್ರಾಜ್ಯದ ಕಲೆ ಮತ್ತು ವಾಸ್ತುಶಿಲ್ಪ ಶೈಲಿಯನ್ನು ತಿಳಿಯುವುದು.
- ವಿಜಯನಗರ ಹಾಗೂ ಬಹಮನಿ ಸಾಮ್ರಾಜ್ಯಗಳ ಕಲೆ ಮತ್ತು ವಾಸ್ತುಶಿಲ್ಪದ ಲಕ್ಷಣಗಳನ್ನು ಅರಿಯುವುದು.

**ವ್ಯಾಪ್ತಿ:–**

- ಈ ಒಂದು ಅಧ್ಯಯನಕ್ಕೆ ಸಂಬಂಧಿಸಿದಂತೆ ಬೀದರ್, ಗುಲ್ಬರ್ಗಾದಿಂದ ಪ್ರಾರಂಭವಾಗಿ ಬಳ್ಳಾರಿಯವರೆಗಿನ ಕಲ್ಯಾಣ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದ ಬೆಳವಣಿಗೆಗೆ ವಿಜಯನಗರ ಹಾಗೂ ಬಹಮನಿ ಸಾಮ್ರಾಜ್ಯಗಳ ಕೊಡುಗೆಗಳನ್ನು ಅಧ್ಯಯನ ಮಾಡುವುದಾಗಿದೆ.

**ಪ್ರಾಮುಖ್ಯತೆ:–**

- ಬೆಳವಣಿಗೆಗೆ ವಿಜಯನಗರ ಹಾಗೂ ಬಹಮನಿ ಸಾಮ್ರಾಜ್ಯಗಳ ಕೊಡುಗೆಗಳ ಬಗ್ಗೆ ತಿಳಿಯಲು ಸಹಕಾರಿಯಾಗುತ್ತದೆ.

➢ ವಿಜಯನಗರ ಹಾಗೂ ಬಹಮನಿ ಸಾಮ್ರಾಜ್ಯಗಳ ಕಲೆ ಮತ್ತು ವಾಸ್ತುಶಿಲ್ಪ ಶೈಲಿಗಳ ವಿಶೇಷತೆಗಳನ್ನು ತಿಳಿಯಲು ಉಪಯುಕ್ತವಾಗುತ್ತದೆ.

**ಸಂಶೋಧನ ವಿಧಾನ:–**

ಈ ಒಂದು ಲೇಖನಕ್ಕೆ ಬೇಕಾಗಿರುವ ಮಾಹಿತಿಯನ್ನು ಮಾಧ್ಯಮಿಕ ಮಾಹಿತಿ ಮೂಲಗಳಾದ ಪುಸ್ತಕ, ಲೇಖನ ಆಧಾರಗಳು, ಅಂತರ್ಜಾಲ, ಕೈಪಿಡಿ, ಇತ್ಯಾದಿಗಳಿಂದ ಸಂಗ್ರಹಿಸಲಾಗಿದೆ.

ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳು ಒಂದೇ ಶತಮಾನಗಳಲ್ಲಿ ಉದಯವಾಗಿ ಏಳಿಗೆಗೆ ಬಂದ ಸಾಮ್ರಾಜ್ಯಗಳಾಗಿದ್ದು. ಈ ಸಾಮ್ರಾಜ್ಯಗಳು ಕಲೆ ಮತ್ತು ವಾಸ್ತುಶಿಲ್ಪದ ಕ್ಷೇತ್ರಕ್ಕೆ ಅತ್ಯಂತ ವಿಶಿಷ್ಟ ಕೊಡುಗೆಗಳನ್ನು ನೀಡಿವೆ. ವಿಜಯನಗರ ಕಾಲದ ಇಂದಿನ ಕಲ್ಯಾಣ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ಹಂಪಿ ವಿಜಯನಗರ ಸಾಮ್ರಾಜ್ಯದ ಕಲೆ ಮತ್ತು ವಾಸ್ತುಶಿಲ್ಪದ ಮುಖ್ಯ ಕಲಾಕೇಂದ್ರವಾಗಿದೆ. ಅಂತೆಯೇ ಕಲ್ಯಾಣ ಕರ್ನಾಟಕದ ಸರಹದ್ದಿನಲ್ಲಿ ಬರುವ ಬೀದರ್ ಮತ್ತು ಗುಲ್ಬರ್ಗ(ಕಲಬುರಗಿ)ಗಳು. ಬಹಮನಿ ಸಾಮ್ರಾಜ್ಯದ ಕಲೆ ಮತ್ತು ವಾಸ್ತುಶಿಲ್ಪದ ಪ್ರಮುಖ ಕಲಾಕೇಂದ್ರಗಳು.

ವಿಜಯನಗರದ ಕಾಲದಲ್ಲಿ ನಿರ್ಮಾಣವಾದ ಅಸಂಖ್ಯಾತ ರಾಯಗೋಪುರಗಳು, ಕಲ್ಯಾಣಮಂಟಪಗಳು, ಅರಮನೆಗಳು, ದೇವಾಲಯಗಳು, ಸಾರ್ವಜನಿಕ ಕಟ್ಟಡಗಳು, ಕೋಟೆಗಳಲ್ಲಿ ಅವರ ಕಲೆ ಮತ್ತು ವಾಸ್ತುಶಿಲ್ಪಗಳನ್ನು ಕಾಣಹುದು. ವಿಜಯನಗರದ ಮುಖ್ಯ ಕಲಾಕೇಂದ್ರಗಳಲ್ಲಿ ಅವರ ಕಲಾಶೈಲಿಯು ಚೋಳ, ಪಲ್ಲವ, ಹೋಯ್ಸಳರ ಶೈಲಿಯ ಮಿಶ್ರಣವಾಗಿರುವುದರಿಂದ ಪರ್ಶಿಬ್ರೌನ್ "ದ್ರಾವಿಡ ಶೈಲಿಯ ಶ್ರೇಷ್ಠ ವಿಕಸಿತ ರೂಪ" ಎಂದಿದ್ದಾರೆ. ಇಂದಿನ ಕಲ್ಯಾಣ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ಹಂಪಿ ಪುರಾಣಗಳ ಕಾಲದಲ್ಲಿ ಕಿಷ್ಕಿಂದೆ ಎಂದು ನಂತರ ಪಂಪಾ ಅಥವಾ ಭಾಸ್ಕರ ಕ್ಷೇತ್ರವೆಂದು ಕರೆಯಲ್ಪಟ್ಟ ಇಂದಿನ ಹಂಪಿ ಬಹು ಪ್ರಾಚೀನ ನಗರವಾಗಿದ್ದು ಹಿಂದಿನ ಕಾಲದ ಕೆತ್ತನೆಗಳ ಭಗ್ನಾವಶೇಷಗಳು ಇಂದು ವಿಶ್ವದ ಮೂಲೆ ಮೂಲೆಗಳಿಂದ ಪ್ರವಾಸಿಗರನ್ನು, ಇತಿಹಾಸ ಪ್ರಿಯರನ್ನು, ಕಲಾ ಮತ್ತು ವಾಸ್ತುಶಿಲ್ಪ ಪ್ರಿಯರನ್ನು ಆಕರ್ಷಿಸುತ್ತಿದೆ. ಕಲ್ಯಾಣ ಕರ್ನಾಟಕದ ವ್ಯಾಪ್ತಿಯ ಬಳ್ಳಾರಿ ಜಿಲ್ಲೆಯ ಹೊಸಪೇಟೆ ಬಳಿಯಿರುವ ವಿಜಯನಗರ ಸಾಮ್ರಾಜ್ಯದ ಗತ ವೈಭವವನ್ನು ಸಾರುತ್ತಿರುವ ಹಂಪಿ ಅತ್ಯದ್ಭುತ ಸುಂದರ ಕೆತ್ತನೆಯ ಶಿಲ್ಪಕಲೆಯ ರಚನೆಗಳು ಯುನೆಸ್ಕೊದಿಂದ ಮಾನ್ಯತೆಯನ್ನು ೧೯೮೬ ರಲ್ಲಿ ಪಡೆದುಕೊಂಡಿದೆ.

ವಿಜಯನಗರ ವಾಸ್ತುಶಿಲ್ಪರಚನೆಯಲ್ಲಿ ದೇವಾಲಯಗಳು ಪ್ರಮುಖ ಸ್ಥಾನವನ್ನು ಹೊಂದಿವೆ. ಇವರ ಪ್ರಾರಂಭದ ಕಾಲದಲ್ಲಿ ಕಟ್ಟಿದ ದೇವಾಲಯಗಳಲ್ಲಿ ಸೂಕ್ಷ್ಮ ಕೆತ್ತನೆ ಹಾಗೂ ವಿಶೇಷ ಅಲಂಕಾರಗಳು ಕಂಡು ಬರುವುದಿಲ್ಲವಾದರು ಕಾಲಕ್ರಮೇಣ ಅವುಗಳನ್ನು ಅನುಸರಿಸಿದರು. ಈ ಕಾಲದ ದೇವಾಲಯಗಳಲ್ಲಿನ ವಿಶಿಷ್ಟತೆಯೆಂದರೆ ಭದ್ರವಾದ ಗೋಡೆ, ವಿಶಾಲವಾದ ಬಾಗಿಲುಗಳು ಎತ್ತರವಾದ ರಾಯಗೋಪುರಗಳು, ಪ್ರತಿಯೊಂದು ದೇವಾಲಯಗಳಲ್ಲಿ ಕಲ್ಯಾಣ ಮಂಟಪ ಮತ್ತು ವಸಂತ ಮಂಟಪಗಳಿರುವ ಬಾಗಿಲುಗಳು ಶಿಲೆಯಿಂದ ನಿರ್ಮಾಣವಾಗಿದ್ದು ಅವುಗಳ ಮೇಲೆ ಎತ್ತರವಾದ ರಾಯಗೋಪುರಗಳಿವೆ. ಗರ್ಭಗುಡಿಗಳು, ಸುಖನಾಸಿ, ನವರಂಗಗಳು ಈ ದೇವಾಲಯಗಳ ಅವಿಭಾಜ್ಯ ಅಂಗಗಳಾಗಿವೆ. ಗರ್ಭಗೃಹ ಮತ್ತು ಅಂತರಾಳಗಳಿಗೆ ಸೇರಿದಂತೆ ಒಂದು ಅಧಿಷ್ಟಾನವಿದ್ದು ಪ್ರಾಕಾರಕ್ಕಿಂತ ಸ್ವಲ್ಪ ಕೆಳಮಟ್ಟದಲ್ಲಿದೆ. ಪ್ರಾಕಾರದ ಭಿತ್ತಿಯ ಹೊರ ಭಾಗವನ್ನು ಗೋಡೆಕಂಬಗಳು, ಕುಂಭಪಂಜರ, ದೇವಕೋಷ್ಟ ಮತ್ತು ಅಧಿಷ್ಟಾನದಲ್ಲಿನ ಅಚ್ಚುಪಟ್ಟಿಗಳಿಂದ ಅಲಂಕಾರಕ ಕೆತ್ತನೆಯಾಗಿದೆ.

ವಿಜಯನಗರ ವಾಸ್ತುಶಿಲ್ಪದ ಮತ್ತೊಂದು ವೈಶಿಷ್ಟ್ಯವೆಂದರೆ ದೇವಾಲಯಗಳ ಕಂಬಗಳು ದೊಡ್ಡದಾದ ಮತ್ತು ಎತ್ತರವಾದ ಶಿಲೆಗಳಿಂದ ನಿರ್ಮಿಸಿದ್ದು ಹೆಚ್ಚು ಭಾರವನ್ನು ಹೊರಬಲ್ಲ ಈ ಕಂಬಗಳಲ್ಲಿ ಕುದುರೆ ಮತ್ತು ಹುಲಿಗಳು ಮನೋಹರವಾಗಿವೆ. ಕಂಬಗಳ ಮತ್ತೊಂದು ಭಾಗದಲ್ಲಿ ದೇವ,

ದೇವತೆಗಳನ್ನು ಕೆತ್ತಲಾಗಿದೆ. ಇವರ ಕಾಲದ ದೇವಾಲಯಗಳಲ್ಲಿನ ಪ್ರತಿಯೊಂದು ಕಲಾಕೃತಿಗಳು ಜೀವ ತಳೆದು ಎದ್ದು ಬರುವಂತಿವೆ. ವಿಜಯನಗರದ ವಾಸ್ತುಶಿಲ್ಪದ ತವರು ಮನೆಯಾದ ಹಂಪಿಯು ಪುರಾತನ ಸ್ಮಾರಕಗಳ ಮಹಾಗುಚ್ಛಗಳ ಶಿಲ್ಪಕಲೆಯ ಸೊಬಗು ಸೊಗಸು ಮೇಳೈಸಿದೆ. ಇಲ್ಲಿನ ಪ್ರಮುಖ ಸ್ಮಾರಕಗಳೊಂದಾದ ಶ್ರೀ ವಿರೂಪಾಕ್ಷ ದೇವಾಲಯದ ಪ್ರವೇಶ ದ್ವಾರದ ಮೇಲಿನ ಮೂರ್ತಿಶಿಲ್ಪಗಳು ಕಲಾತ್ಮಕವಾಗಿವೆ. ಶಿಲ್ಪ ವೈಭವಕ್ಕೆ ಖ್ಯಾತಿಯಾದ ವಿಜಯ ವಿಠ್ಠಲ ದೇವಾಲಯ ವಿಶಾಲವಾದ ಪ್ರಾಕಾರ, ಅಲಂಕೃತ ಕಂಬಗಳು, ಎತ್ತರದ ಮೂರು ಗೋಪುರಗಳು, ಅಂಗಳದ ಸುತ್ತ ಮಂಟಪಗಳ ಸಾಲು, ಕಲ್ಯಾಣ ಮಂಟಪ, ಉತ್ಸವ ಮಂಟಪ, ನೂರು ಕಂಬಗಳ ಮಂಟಪ, ದೀಪಸ್ತಂಭ ಮತ್ತು ಕಲ್ಲಿನ ರಥಗಳು ಈ ದೇವಾಲಯದ ಅಂಗಗಳು. ಸೂಕ್ಷ್ಮ ಕೆತ್ತನೆಯ ರಥಗಳನ್ನು ಒಂದೇ ಕಲ್ಲಿನಲ್ಲಿ ಕೆತ್ತಲಾಗಿದೆ ಹಾಗೂ ರಥದ ಗರ್ಭಗೃಹದಲ್ಲಿ ಗರುಡನ ವಿಗ್ರಹವಿದೆ. ಹಜಾರರಾಮಸ್ವಾಮಿ ದೇವಾಲಯ ಗರ್ಭಗೃಹ ಮುಖಮಂಟಪ, ಅಕ್ಷ ಮಂಟಪಗಳು, ಕಲ್ಯಾಣ ಮಂಟಪ ಮತ್ತು ಪರಿವಾರ ಗುಡಿಗಳೊಂದಿಗೆ ಪೂರ್ವದ ಕೊನೆಯಲ್ಲಿ ತೆರೆದ ಮಂಟಪದಲ್ಲಿ ಸುಂದರ ಅಲಂಕೃತ ಕಂಬಗಳಿವೆ. ಈ ದೇವಾಲಯದ ಹೊರಗೋಡೆಗಳ ಮೇಲೆ ರಾಮಾಯಣ, ಭಾಗವತ, ಚಿತ್ರಪಟ್ಟಿಕೆಗಳು ಇವೆ. ಗರ್ಭಗೃಹದ ಹೊರಭಿತ್ತಿಯ ಮೇಲೆ ವಿಷ್ಣುವಿನ ಎಲ್ಲಾ ಅವತಾರಗಳ ಉಬ್ಬು ಚಿತ್ರಗಳಿವೆ. ಈ ದೇವಾಲಯವು ಅರಮನೆಗೆ ಹೊಂದಿಕೊಂಡಿದೆ. ವಿಠಲಸ್ವಾಮಿ ದೇವಾಲಯದಂತೆ ಕೃಷ್ಣದೇವರಾಯನು ಕಟ್ಟಿಸಿದ ಕೃಷ ದೇವಾಲಯ ಕಲಾತ್ಮಕವಾಗಿದೆ. ಅಚ್ಯುತರಾಯನಿಂದ ನಿರ್ಮಾಣವಾದ ಅಚ್ಯುತರಾಯ ದೇವಾಲಯ ಇನ್ನೊಂದು ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಾಕ್ಷಿಯಾಗಿರುವ ಸ್ಮಾರಕವಾಗಿದೆ.

ವಿಜಯನಗರದ ವಾಸ್ತುಶಿಲ್ಪದ ದೃಷ್ಟಿಯಿಂದ ಪರಿಗಣಿಸಿದರೆ ರಾಜಧಾನಿಯಾದ ಹಂಪಿಯ ಕೇಲವು ಕಟ್ಟಡಗಳಲ್ಲಿ ಹಿಂದೂ–ಮುಸ್ಲಿಂ ಶೈಲಿಯನ್ನು ಕಾಣಬಹುದು. ಕೆಲವು ಮುಸ್ಲಿಮ್ ಶೈಲಿಯ ಕುರುಹಾದ ಗುಮ್ಮಟ ಮತ್ತು ಕಮಾನುಗಳನ್ನು ಗಜಶಾಲೆಗಳಲ್ಲಿ ಗುಮ್ಮಟ, ರಾಣಿಯರ ಸ್ನಾನಗೃಹ, ಪಹರೆ ಗೋಪುರ ಮತ್ತು ಕಮಲ ಮಹಲ್‌ಗಳಲ್ಲಿ ಕಮಾನುಗಳನ್ನು ನೋಡಬಹುದು. ಎರಡು ಅಂತಸ್ತುಗಳ ಕಮಲ ಮಹಲ್ ಕಮಲದ ಹೂವಿನ ಆಕಾರದಲ್ಲಿದ್ದು ಇಪ್ಪತ್ತನಾಲ್ಕು ಕಂಬಗಳ ಆಧಾರದಿಂದ ನಿಂತಿರುವ ಸುಂದರವಾದ ರಚನೆ. ಇದರಲ್ಲಿ ಹಿಂದು ಮತ್ತು ಮುಸ್ಲಿಂ ವಾಸ್ತುಕಲೆ ಸಂಮಿಶ್ರಣಗೊಂಡಿದೆ. ಕಂಬಗಳ ನಡುವೆ ಕಮಾನು ವಿನ್ಯಾಸವಿದೆ. ಒಳಚಾವಣಿಗಳ ನಡುವೆ ಕಮಲದ ಮೊಗ್ಗು, ಮೇಲೆ ಪಿರಮಿಡ್ಡು ಆಕಾರದ ಚಾವಣಿ ಇದೆ. ಈ ಮಹಲ್‌ನ್ನು ಯಾವ ದಿಕ್ಕಿನಿಂದ ನೋಡಿದರು ಒಂದೇ ರೀತಿ ಕಾಣುವುದು ಇದರ ವೈಶಿಷ್ಟ್ಯ. ಕಮಲ ಮಹಲ್ ಸಮೀಪದಲ್ಲಿ ಇರುವ ಆನೆಗಳನ್ನು ಕಟ್ಟುವ ಗಜಶಾಲೆ ಹನ್ನೊಂದು ಲಾಯದ ಕೊಠಡಿಗಳಿದ್ದು ಪ್ರವೇಶದ್ವಾರಗಳು ಕಮಾನಿನ ಆಕಾರದಲ್ಲಿವೆ. ಲಾಯಗಳ ಮೇಲೆ ವಿಭಿನ್ನ ಆಕಾರದ ಶಿಖರಗಳಿವೆ. ರಾಣಿಯರ ಸ್ನಾನಗೃಹ ಚೌಕಾಕಾರದ ಕಟ್ಟಡವಾಗಿದ್ದು ಇದರ ಕೆಳಗೆ ಆಳವಾದ ಈಜು ಕೊಳವಿದೆ.

ವಿಜಯನಗರದಲ್ಲಿ ಜನಪ್ರಿಯವಾದ ದಸರಾ ಅಥವಾ ಮಹಾನವಮಿ ಹಬ್ಬದ ಸಮಾರಂಭ ನಡೆಸಲು ನಿರ್ಮಿಸಿದ ಒಂದು ಎತ್ತರದ ವೇದಿಕೆ ಇಂದಿಗೂ ಹಂಪಿಯಲ್ಲಿ ಉಳಿದುಕೊಂಡಿದೆ. ಬಹುಶಃ ಈ ವೇದಿಕೆ ಮೇಲೆ ಒಂದು ಕಟ್ಟಡ ಇದ್ದಿರಬಹುದು. ಅದು ಈಗ ಉಳಿದಿಲ್ಲ ಉಳಿದಿರುವ ಕಲ್ಲಿನ ದಿಬ್ಬದ ಕಲ್ಲಿನ ಗೋಡೆಗಳ ಮೇಲೆ ಬೇಟೆ, ಕೋಲಾಟ, ನೃತ್ಯ ಮತ್ತಿತ್ತರ ಚಿತ್ರಗಳಿವೆ. ಪುರಂದರ ದಾಸರು ಒಂದು ತಂಬೂರಿ ಹಿಡಿದು ನಿಂತಿರುವ ಒಂದು ಉಬ್ಬು ಶಿಲ್ಪ ಹಂಪಿಯಲ್ಲಿ ತುಂಗಭದ್ರ ನದಿ ತೀರದ ಪುರಂದರ ಮಂಟಪದಲ್ಲಿದೆ. ಹದಿನೈದು ಅಡಿ ಎತ್ತರದ ಎರಡು ಶಿಲಾಕಂಬಗಳಿರುವ ಕೃಷ್ಣದೇವರಾಯನ ತುಲಾಭಾರ ಮಂಟಪದ ಕಂಬಗಳ ಮೇಲೆ ರಾಜ ಮತ್ತು ಅವನ ಇಬ್ಬರು ಪತ್ನಿಯರ ಚಿತ್ರಗಳನ್ನು ಕೆತ್ತಲಾಗಿದೆ. ಹೇಮಕೂಟ ದೇವಾಲಯಗಳಲ್ಲಿ ಬಹು ಮಟ್ಟಿಗೆ ತ್ರಿಕೂಟಚಲಗಳಾಗಿದ್ದು ಗರ್ಭಗುಡಿಗಳನ್ನು ಹೊಂದಿದೆ. ಹಂಪಿಯ ಕೋಟೆ ಶಿಥೀಲಗೊಂಡಿದ್ದರೂ ಅದರ ಕುರುಹುಗಳು ಇಂದಿಗೂ ಉಳಿದುಕೊಂಡಿವೆ. ಕೆಲವು ಕಡೆ ಎತ್ತರದ ಕೋಟೆಯಗೋಡೆ ಸುರಕ್ಷಿತವಾಗಿ ನಿಂತಿವೆ.

ವಿಜಯನಗರದ ಕಲೆ ಮತ್ತು ವಾಸ್ತುಶಿಲ್ಪವನ್ನು ಪ್ರತಿನಿಧಿಸುವ ಹಂಪಿಯ ಇನ್ನಿತರ ಸ್ಮಾರಕಗಳೆಂದರೆ ಯಂತ್ರೋದ್ಧಾರಕ ಆಂಜನೇಯ ಗುಡಿ, ಜೈನ ದೇವಾಲಯಗಳು, ಕಡಲೆಕಾಳು ಗಣೇಶ ವಿಗ್ರಹ, ಸಾಸಿವೆ ಕಾಳು ಗಣೇಶನ ವಿಗ್ರಹ, ಉಗ್ರನರಸಿಂಹನ ವಿಗ್ರಹ, ಬಡವಲಿಂಗ, ಉದ್ದಾನ ವೀರಭದ್ರ ದೇವಾಲಯ, ಅಕ್ಕತಂಗಿಯರ ಗುಂಡು, ಭೂಗರ್ಭ ದೇವಾಲಯ, ಟಂಕ ಶಾಲೆ, ಮೆಟ್ಟಿಲು ಬಾವಿ, ಚಂಡಿಕೇಶ್ವರ ದೇವಾಲಯ, ಚಂದ್ರಶೇಖರ ದೇವಾಲಯ, ಪಟ್ಟಾಭಿರಾಮ ದೇವಾಲಯ, ಸರಸ್ವತಿ ಗುಡಿ, ಡಣಾಯಕನ ನಿವಾಸ, ದೊಡ್ಡ ಭೂಗರ್ಭ ದೇವಾಲಯ, ವಿಷ್ಣು ಪಾದ ನೂರಾರು ಸ್ಮಾರಕಗಳನ್ನು ಹೊಂದಿರುವ ಹಂಪಿ ಈಗ ಹಿಂದಿನ ವೈಭವವನ್ನು ಕಳೆದುಕೊಂಡಿದೆ. ಆದರೂ ಈ ಪ್ರಾಚೀನ ನಗರ ಅತಿ ಹೆಚ್ಚು ಐತಿಹಾಸಿಕ ಮಹತ್ವವನ್ನು ಹೊಂದಿರುವುದರಿಂದ ವಿಶ್ವಸಂಸ್ಥೆಯ ಅಂಗ ಸಂಸ್ಥೆಯಾದ ಯುನೆಸ್ಕೊ ಇದನ್ನು "ವಿಶ್ವಪರಂಪರೆ ನಗರ" ಎಂದು ಘೋಷಿಸಿದೆ. ಕಲಾಣ್ಯ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ಹಂಪಿಲ್ಲಿ ಭಾರತ ಪುರಾತತ್ವ ಇಲಾಖೆಯ ಕಛೇರಿ, ಕರ್ನಾಟಕ ಪುರಾತತ್ವ ಮತ್ತು ಸಂಗ್ರಹಾಲಯದ ಕೇಂದ್ರ ಕಛೇರಿ, ಪುರಾತತ್ವ ವಸ್ತು ಸಂಗ್ರಹಾಲಯ ಮತ್ತು ಕನ್ನಡ ವಿಶ್ವವಿದ್ಯಾಲಯಗಳು ಹಂಪಿ ಸಂಸ್ಕೃತಿಯನ್ನು ಹಾಗೂ ಅಲ್ಲಿರುವ ಕಲೆ ಮತ್ತು ವಾಸ್ತು ಶಿಲ್ಪದ ಸಂರಕ್ಷಿಸುವ ಕೆಲಸವನ್ನು ಮಾಡುತ್ತಿವೆ.

ಕಲೆ ಮತ್ತು ವಾಸ್ತುಶಿಲ್ಪಗಳ ಬೆಳವಣಿಗೆಗೆ ವಿಶಿಷ್ಟ ಆದ್ಯತೆಯನ್ನು ಬಹಮನರು ದೆಹಲಿ ಮಾದರಿಯ ವಾಸ್ತುಶಿಲ್ಪ ಅನುಸರಿಸಿದ್ದರಿಂದ ಬಹಮನಿ ರಾಜ್ಯದ ಸ್ಮಾರಕಗಳಲ್ಲಿ ಪರ್ಶಿಯನ್ ಕಲೆಯ ಲಕ್ಷಣಗಳನ್ನು ಕಾಣಬಹುದು. ಆದರೂ ಬಹಮನಿ ಸ್ಮಾರಕಗಳಲ್ಲಿ ಸ್ಥಳೀಯ ಕಲಾ ಪರಂಪರೆಯ ಪ್ರಭಾವಗಳೇನು ಕಡಿಮೆ ಇಲ್ಲ. ಬಹಮನಿಯ ರಾಜಧಾನಿ ನಗರಗಳಾಗಿದ್ದ ಗುಲ್ಬರ್ಗ ಮತ್ತು ಬೀದರ್‌ಗಳಲ್ಲಿ ಅನೇಕ ಅರಮನೆಗಳು, ಮಸೀದಿಗಳು, ಸಮಾಧಿಗಳು, ಕೋಟೆ ಹಾಗೂ ಮತ್ತಿತ್ತರ ಕಟ್ಟಡಗಳಲ್ಲಿ ಬಹಮನರ ಕಲೆ ಮತ್ತು ವಾಸ್ತುಶಿಲ್ಪಗಳನ್ನು ಹಾಗೂ ಅದರ ಲಕ್ಷಣಗಳನ್ನು ಕಾಣಬಹುದಾಗಿದೆ. ಅಲ್ಲಾವುದ್ದೀನ್ ಬಹಮನ್‌ಷಾ ಕಾಲದಲ್ಲಿ ಕಟ್ಟಿದ ಗುಲ್ಬರ್ಗದ ಅತ್ಯಂತ ಹಳೆಯದಾದ ಕೋಟೆ ಸುಮಾರು ಮೂರು ಕಿಲೋಮಿಟರ್ ಉದ್ದವಾಗಿದ್ದು ಇದರ ಸುತ್ತಲೂ ಮೂರು ಅಡಿ ಆಳದ ಕಂದಕಗಳಿವೆ. ಈ ಕೋಟೆಯಲ್ಲಿ ಒಂದು ಮುಖ್ಯ ಮತ್ತು ಉಪದ್ವಾರವಿದೆ. ಕೋಟೆಯ ಒಳಭಾಗದಲ್ಲಿ ಅರಮನೆ, ಸೇನಾ ಕಛೇರಿ, ಮಸೀದಿ ಮೊದಲಾದ ಭವನಗಳನ್ನು ನಿರ್ಮಿಸಲಾಗಿದೆ.

ಗುಲ್ಬರ್ಗಾದ ಕೋಟೆಯ ಮಧ್ಯಭಾಗದಲ್ಲಿರುವ ಜಾಮಿ ಅಥವಾ ಜುಮ್ಮಾ ಮಸೀದಿ ತೆರೆದ ಅಂಗಳವಿಲ್ಲದೆ ಒಳಭಾಗ ಪೂರ್ಣಚಾವರಣೆಯಿಂದ ಆವೃತ್ತವಾಗಿದೆ. ಮಸೀದಿಯ ಆವರಣಗಳಲ್ಲಿ ರೇಖಾ ಚಿತ್ರಗಳ ಅಲಂಕಾರಗಳಿವೆ. ಈ ಮಸೀದಿಯ ಹೊರಭಾಗದಲ್ಲಿ ಕಮಾನುಗಳುಳ್ಳ ದ್ವಾರಗಳಿವೆ. ಗಾರೆಯಿಂದ ನಿರ್ಮಿಸಿದ ಜಾಲಂದ್ರಗಳು ದ್ವಾರದ ಬಳಿ ಅಳವಡಿಸಿರುವ ಈ ಮಸೀದಿಯಲ್ಲಿ ೫೦೦೦ ಸಾವಿರ ಮಂದಿ ಪ್ರಾರ್ಥನೆಗೆ ಕುಳಿತು ಕೊಳ್ಳಲು ಅವಕಾಶವಿದೆ. ಇದರ ಮತ್ತೊಂದು ವಿಶಿಷ್ಟತೆ ಎತ್ತರದ ವೇದಿಕೆ (ಮಿನ್‌ಬರ್) ಇಲ್ಲದಿರುವುದು. ಗುಲ್ಬರ್ಗಾದ ಷಾ ಬಜಾರ ಮಸೀದಿ ತುಘಲಕ್ ಶೈಲಿಯಲ್ಲಿದೆ. ಇವರ ಸ್ಮಾರಕಗಳಲ್ಲಿ ಕಮಾನುಗಳು ಮತ್ತು ಗುಮ್ಮಟಗಳು ಸರ್ವೇಸಾಮಾನ್ಯವಾಗಿ ಕಂಡುಬರುತ್ತದೆ. ಗುಲ್ಬರ್ಗಾದಲ್ಲಿರುವ ಷೇಕ್ ಸಿರಾಜ್ ಉದ್ದೀನ್ ದರ್ಗಾ, ಫಿರೋಜ್ ಷಾ ಗೋರಿ, ಬಂದೇನವಾಜ್ ದರ್ಗಾ, ಷಾ ಕಮಾಲ್ ಮುಕರದ್ ದರ್ಗಾ, ಹಸನ್‌ಗಂಗು ಮತ್ತು ಇತರ ಸಮಾದಿಗಳು ಹಫ್ತ್ ಅಥವಾ ಸುಲ್ತಾನರ ಸಾತ್ ಗುಂಬಜ್ ಇವರ ಕಾಲದಲ್ಲಿ ನಿರ್ಮಾಣವಾದ ಇನ್ನಿತರ ಕಲೆ ಮತ್ತು ವಾಸ್ತುಶಿಲ್ಪವನ್ನು ಪ್ರತಿನಿಧಿಸುವ ಸ್ಮಾರಕಗಳಾಗಿವೆ.

ಬಹಮನಿಯ ಎರಡನೆ ರಾಜಧಾನಿಯಾದ ಬೀದರ್‌ನಲ್ಲಿ ಗುಲ್ಬರ್ಗಾಕ್ಕೂ ಮಿಗಿಲಾದ ಕಲಾವೈಶಿಷ್ಟ್ಯವನ್ನು ಕಾಣಬಹುದು. ಇಲ್ಲಿನ ಕಲೆ ಮತ್ತು ವಾಸ್ತುಶೀಲ್ಪ ವೈಖರಿಗೆ ಹೆಸರಾದವು ಬೀದರಿನ ಕೋಟೆ, ಇದರೊಳಗಿನ ಜನಾನಾಮಹಲ್, ಜಾಮಿ ಮಸೀದಿ,ತಖ್ತ್ ಮಹಲ್, ರಂಗೀನ ಮಹಲ್, ಬಾರಾಗುಂಬಜ್ ಎಂಬ ಹನ್ನೆರಡು ಸಮಾಧಿಗಳು, ಮಹಮದ್ ಗವಾನ್ ನಿರ್ಮಿಸಿದ ಮದ್ರಸಾ ಮೊದಲಾದವು. ಇವುಗಳಲ್ಲಿ ಭಾರತೀಯ ಮತ್ತು ಸೆರಾಸೆನಿಕ್ ಶೈಲಿ ಒಟ್ಟಿಗೆ ಮೂಡಿದೆ. ಇವುಗಳಲ್ಲೆಲ್ಲ

ಮುಖ ದ್ವಾರವು ಯಾವ ಅಲಂಕಾರಗಳೂ ಇಲ್ಲದೆ ಸರಳವಾಗಿರುವ, ಭಾರಿ ಗಾತ್ರದ ೧೬ ಕಂಬಗಳಿರುವ "ಸೋಲಾಕಂಭ ಮಸೀದಿ" ವೈಶಿಷ್ಟ್ಯಪೂರ್ಣವಾಗಿದೆ. ಅರಮನೆಗಳು ಕಾರಂಜಿಗಳು, ಸ್ನಾನಗೃಹಗಳು, ಕೊಳಗಳು ಮೊದಲಾದ ಸೌಲಭ್ಯಗಳಿಂದ ಕೂಡಿದ್ದವು. ಇವುಗಳ ಅವಶೇಷಗಳನ್ನು ಇಂದಿಗೂ ಕಾಣಬಹುದು. ಬೀದರ್‌ನ ಕಿರ್ಮಾನಿ ತಖ್ತ್ ಇದು ಒಂದು ಭವ್ಯ ಪ್ರವೇಶದ್ವಾರ ಮಂಟಪವಾಗಿದೆ. ತಾವರೆ ಮಗ್ಗಿನಂತಹ ಗೋಪುರಗಳು ಇದನ್ನು ಅಲಂಕರಿಸಿವೆ. ಒಳಂಗಣದಲ್ಲಿ ಕಮಾನುಗಳು, ಆಕರ್ಷಣೀಯ ಕಂಬಗಳು ಕಂಡುಬರುತ್ತವೆ. ಸುಲ್ತಾನರ ಸಮಾದಿಗಳು ಗುಮ್ಮಟ ಮತ್ತು ಕಮಾನುಗಳಿಂದ ಕೂಡಿದ್ದು ಗುಮ್ಮಟಗಳ ತಳಭಾಗಗಳಲ್ಲಿ ವರ್ಣಮಯ ಅಲಂಕಾರಗಳಿವೆ. ಗುಮ್ಮಟದ ಒಳಛಾವಣಿಯಲ್ಲಿ ವರ್ಣಮಯ ಬಿಲ್ಲೆಗಳ ಮೇಲೆ ಕುರಾನಿನ ವಾಕ್ಯಗಳನ್ನು ಕೆತ್ತಲಾಗಿದೆ. ಬೀದರ್‌ನ ಅಸ್ತೂರಿನಲ್ಲಿರುವ ಅಹಮದ್ ಷಾನ ಸಮಾಧಿಯಲ್ಲಿ ಸುಂದರ ವರ್ಣಚಿತ್ರಗಳಿವೆ.

ಸಾರ್ವಜನಿಕ ಸಭಾ ಭವನವಾದ ದಿವಾನ್- ಎ- ಆಮ್ ಕುಶಲ ಕೆತ್ತನೆಯ ಮರದ ಕಂಬಗಳಿಂದ ಮತ್ತು ಪಿಂಗಾಣಿಯ ಸುಂದರವಾದ ಬಿಲ್ಲೆಗಳಿಂದ ಅಲಂಕೃತಗೊಂಡಿದೆ. ಇದರ ಗೋಡೆಗಳ ಮೇಲ್ಭಾಗದಲ್ಲಿ ಪಾರ್ಶಿಶೈಲಿಯ ಕಲಾ ಲಿಪಿಯ ಬರವಣಿಗೆಗಳು, ರೇಖಾವಿನ್ಯಾಸಗಳು,ಹೂ ಬಳ್ಳಿಗಳನ್ನು ಬರೆಯಲಾಗಿದ್ದು ಮರದ ಕಂಬಗಳು ಕಣ್ಮರೆಯಾಗಿದ್ದು ಭವನ ಶಿಥಿಲಾವಸ್ಥೆಯಲ್ಲಿವೆ. ಮಹಮದ್ ಗವಾನ್ ಮದ್ರಸಾ ಭವ್ಯವಾದ ಮೂರು ಅಂತಸ್ತುಗಳಿಂದ ಕೂಡಿದ್ದು ಚೌಕಾಕಾರದ ಈ ಕಟ್ಟಡದ ಮಧ್ಯಭಾಗದಲ್ಲಿ ವಿಶಾಲವಾದ ಅಂಗಳವಿದೆ. ಒಳಭಾಗದ ಅಲಂಕೃತ ಕಂಬಗಳು, ಪ್ರವೇಶ ದ್ವಾರಗಳು ನಿರ್ಮಾಣವಾಗಿವೆ. ನಾಲ್ಕೂ ದಿಕ್ಕುಗಳ ದ್ವಾರಗಳ ಮೇಲ್ಭಾಗದಲ್ಲಿ ಗುಮ್ಮಟಗಳು ರಚಿಸಲಾಗಿದೆ. ಈಶಾನ್ಯ ಮತ್ತು ಆಗ್ನೇಯ ಮೂಲೆಗಳಲ್ಲಿ ೭೦ಅಡಿ ಎತ್ತರಗಳಿದ್ದವು ಈಗ ಈಶಾನ್ಯ ಭಾಗದ ಮಿನಾರ್ ಮಾತ್ರ ಉಳಿದುಕೊಂಡಿದೆ. ಸ್ಥಂಭಗೋಪುರ ಮತ್ತು ಪ್ರವೇಶದ್ವಾರಗಳನ್ನು ವರ್ಣಮಯ ಪಿಂಗಾಣಿ ಬಿಲ್ಲೆಗಳಿಂದ ಅಲಂಕರಿಸಲಾಗಿದೆ.

**ಉಪಸಂಹಾರ.**

ಇಂದಿನ ಕಲ್ಯಾಣ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳಲ್ಲಿನ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅಂದಿನ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳು ವಿಫುಲವಾದ ಕೊಡುಗೆಗಳನ್ನು ನೀಡಿದ್ದರಿಂದ ಈ ಸಾಮ್ರಾಜ್ಯಗಳು ಕಲ್ಯಾಣ ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪದ ಶ್ರೇಷ್ಠತೆಗೆ ಹಾಗೂ ಬೆಳವಣಿಗೆಗೆ ಆಧಾರಸ್ತಂಭಗಳಾಗಿವೆ. ವಿಜಯನಗರ ವಾಸ್ತುಶಿಲ್ಪ ಶೈಲಿ ದ್ರಾವಿಡ ಶೈಲಿಯ ಶ್ರೇಷ್ಠ ವಿಕಸಿತ ಶೈಲಿಯಾ ಹಾಗೂ ಬಹಮನಿ ಇಂಡೋ - ಸಾರ್ಸೆನಿಕ್ ಶೈಲಿಯ ವಾಸ್ತುಶಿಲ್ಪ ಶೈಲಿ ಸ್ಮಾರಕಗಳು ಕಲ್ಯಾಣ ಕರ್ನಾಟಕದ ಕಲೆ ಮತ್ತು ವಾಸ್ತುಶೈಲಿಯ ಬೆಳವಣಿಯನ್ನು ಮತ್ತು ಕಲೆ ಮತ್ತು ವಾಸ್ತುಶಿಲ್ಪಗಳ ಸಂಮಿಲನಗಳ ಇತಿಹಾಸವನ್ನು ತಿಳಿಯಲು ಅಂದಿನ ಸ್ಮಾರಕಗಳು ಶ್ರೇಷ್ಟ ಆಧಾರಗಳಾಗುತ್ತವೆ.

## ಆಧಾರ ಗ್ರಂಥಗಳು.


೧. ಫಾಲಾಕ್ಷ. ೨೦೦೭, ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಶಶಿ ಪ್ರಕಾಶನ ತಿಪಟೂರು.
೨. ಡಾ.ಬಸವರಾಜ ಎನ್. ಅಕ್ಕಿ. ೨೦೧೮, ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ, ಸೋಮೇಶ್ವರ ಪಬ್ಲಿಕೇಶನ್ಸ್, ಧಾರವಾಡ.
೩. ಡಾ.ಕೆ.ಸದಾಶಿವ, ೨೦೦೪, ಮಧ್ಯಯುಗೀನ ಭಾರತದ ಇತಿಹಾಸ, ಪ್ರಿಯದರ್ಶಿನಿ ಪ್ರಕಾಶನ, ಮೈಸೂರು.
೪. ಡಾ.ಜಿ.ಶಿವಪ್ಪ ಅರಿವು, ೨೦೧೫, ಸಮಗ್ರ ಕರ್ನಾಟಕ ಇತಿಹಾಸ (ಪ್ರಾರಂಭದಿಂದ ೨೦೧೪ರ ವರೆಗೆ)
೫. ಡಾ.ಎ.ಸಿ.ನಾಗೇಶ ಮತ್ತು ಪ್ರೊ. ಆರ್. ರಾಜಣ್ಣ, ೨೦೧೪, ಕರ್ನಾಟಕ ಚರಿತ್ರೆ ಭಾಗ -೧, ಅನ್ನದಾನಿ ಭೈರವ ಪ್ರಕಾಶನ, ಬೆಂಗಳೂರು.

೬. ಡಾ. ಸೂರ್ಯನಾಥ ಕಾಮತ್, ೨೦೧೫, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಎಂ.ಸಿ.ಸಿ. ಪಬ್ಲಿಕೇಷನ್ಸ್, ಬೆಂಗಳೂರು, ಹುಬ್ಬಳ್ಳಿ, ಮೈಸೂರು.
೭. ಡಾ.ಕೆ.ಜಗದೀಶ,೨೦೧೦, ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಚಿರಾಗ ಪ್ರಕಾಶನ, ಧಾರವಾಡ.
೮. ಪ್ರೋ.ಜಿ.ಆರ್.ರಂಗಸ್ವಾಮಯ್ಯ,೨೦೦೧, ಕರ್ನಾಟಕದ ಸಂಕ್ಷಿಪ್ತ ಚರಿತ್ರೆ, ಚೇತನ ಬುಕ್ ಹೌಸ್, ದಾವಣಗೆರೆ.



## ಕೊಡೇಕಲ್ಲ ಬಸವಣ್ಣನವರ ತತ್ವಪದಗಳಲ್ಲಿ ಸಾಮಾಜಿಕ ಪ್ರಜ್ಞೆ.

**–ಶ್ರೀ ರಾಜಶೇಖರ ಬಿರಾದಾರ ಬೋನ್ಹಾಳ,**
ಕನ್ನಡ ಸಹಾಯಕ ಪ್ರಾಧ್ಯಾಪಕರು,
ಶ್ರೀ ಸಿ.ಎಂ.ಮಾಮನಿ ಸರಕಾರಿ ಪ್ರಥಮ ದರ್ಜೆ ಕಾಲೇಜು
ಯರಗಟ್ಟಿ, ತಾ.ಸವದತ್ತಿ ಜಿ.ಬೆಳಗಾವಿ.

**"ಕಸವರಮೆಂಬುದು ನೆರೆ ಸೈರಿಸಲಾರ್ಪೊಡೆ**
**ಪರ ಧರ್ಮಮುಮಂ ಪರ ವಿಚಾರಮುಮಂ"**

ಹನ್ನೆರಡು ನೂರು ವರ್ಷಗಳ ಹಿಂದೆಯೇ ಕವಿರಾಜಮಾರ್ಗಕಾರನು ಹೇಳಿದ ಇತರರ ಧರ್ಮ ಮತ್ತು ವಿಚಾರಗಳನ್ನು ಗೌರವಿಸುವುದೇ ಮನುಷ್ಯ ಪ್ರೀತಿಯ ನಿಜದ ನೆಲೆಯ ಸಂಪತ್ತಾಗಿದೆ. ಅದರಲ್ಲೂ ಕಲ್ಯಾಣ ಕರ್ನಾಟಕವು ಆರು ನೂರು ವರ್ಷ ಪರಕೀಯ ಆಡಳಿತಕ್ಕೆ ಒಳಪಟ್ಟಿತ್ತು. ಇದರಿಂದ ಸಹಜವಾಗಿ ಉರ್ದು, ದಖನಿ, ಮೋಡಿ, ಮರಾಠಿ, ತೆಲುಗು ಹಾಗೂ ಕನ್ನಡದ ಬಹುಭಾಷಾ ಸೌಹಾರ್ದ, ಸಾಮಾಜಿಕ ಸೌಂದರ್ಯ ಹಾಗೂ ಸಂಸ್ಕೃತಿಯ ಚಾರಿತ್ರಿಕ ನೆಲ ಇದಾಗಿದೆ. ಅನೇಕ ಜನ ಹಿಂದೂ, ಮುಸ್ಲಿಂ, ಸೂಫಿ ಸಂತರು ಬಾಳಿ ಬದುಕಿದ ಕಲ್ಯಾಣ ಕರ್ನಾಟಕವು ಕನ್ನಡ ಸಂಸ್ಕೃತಿ ಮತ್ತು ಸೌಹಾರ್ದದ ಸಾಕ್ಷಿಪ್ರಜ್ಞೆಯೇ ಆಗಿದೆ. ನಿಜಾಮನ ಕಾಲದಲ್ಲಿ ಸೂಫಿ ಸಂತರು, ತತ್ವಪದಗಳ ಅನುಭಾವಿಗಳು ಮೈಮನ ಬಿಚ್ಚಿ ಕನ್ನಡದಲ್ಲಿ ಸಾಹಿತ್ಯ ರಚಿಸಿದ್ದಾರೆ.

ಭಾರತದ ಪ್ರಾಚೀನತಮ ಧಾರ್ಮಿಕ ಸಂಪ್ರದಾಯ ಸಿದ್ಧ ಪಂಥ ಮತ್ಸ್ಯೇಂದ್ರನಾಥ, ಗೋರಖನಾಥರೆಂಬ ಯೋಗನಿಷ್ಠ ಬೈರಾಗಿಗಳಿಂದಾಗಿ 'ನಾಥ ಪಂಥ'ವು ಜನ್ಮ ತಾಳಿ, ಭಾರತದ ಬೇರೆ ಬೇರೆ ಭಾಗಗಳಲ್ಲಿ ರೂಪಾಂತರ ಹೊಂದಿತು. ಕರ್ನಾಟಕದಲ್ಲಿ ಕಲ್ಯಾಣದ ಬಸವಣ್ಣನವರ ಪ್ರಭಾವದ ಕಾರಣವಾಗಿ ಈ ಪಂಥವು ಬದಲಾದ ಸ್ಥಿತಿಯಲ್ಲಿ 'ಆರೂಢ' ಪಂಥವಾಗಿ ಬೆಳೆಯಿತು. ಮೊದಲು ಅಸ್ಪಷ್ಟ ರೂಪದಲ್ಲಿ ತಲೆಯೆತ್ತಿದ್ದ ಈ ಸಂಪ್ರದಾಯಕ್ಕೆ ಒಂದು ಸ್ಪಷ್ಟತೆಯನ್ನು ಒದಗಿಸಿದವರು ಕೊಡೇಕಲ್ಲ ಬಸವಣ್ಣನವರು. ಅವರ ತತ್ವಪದಗಳಲ್ಲಿ ಸಹನೀಯವಾದ ಜೀವನ ಕ್ರಮದ ಚಿತ್ರಣವಿದೆ, ಪ್ರಜಾಸತ್ತಾತ್ಮಕ ಮತ್ತು ಈ ನೆಲದ ವಿವೇಕದ ಜೀವನವನ್ನು ಅವರು ಕಟ್ಟಿಕೊಟ್ಟಿದ್ದಾರೆ.ಕೊಡೇಕಲ್ಲ ಬಸವಣ್ಣನವರ ತತ್ವಪದಗಳಲ್ಲಿ ಅಭಿವ್ಯಕ್ತಗೊಂಡ ಸಾಮಾಜಿಕ ಪ್ರಜ್ಞೆಯ ಅಂಶಗಳನ್ನು ವಿಶ್ಲೇಷಿಸುವುದು ಈ ಲೇಖನದ ಉದ್ದೇಶವಾಗಿದೆ.

ಕೊಡೇಕಲ್ಲ ಬಸವಣ್ಣನವರು ವಚನಗಳ ಜೊತೆಗೆ ಮುಂದಾಗುವ ಭವಿಷ್ಯವನ್ನು ಕಾಲಜ್ಞಾನದ ಮೂಲಕ ತಿಳಿಸಿದ್ದಾರೆ. ಕೊಡೇಕಲ್ಲಿನ ಕಾಲಜ್ಞಾನವು ಇಂದಿಗೂ ಹೆಸರುವಾಸಿಯಾಗಿದೆ. ಇವುಗಳ ಮೂಲಕ ಸಂಭವನೀಯ ದುರಂತಗಳ ಬಗ್ಗೆ ಮೊದಲೇ ಊಹಿಸಿ, ಪರಿಹಾರ ನೀಡುವ ಪ್ರಯತ್ನವನ್ನು ಕೊಡೇಕಲ್ಲ ಬಸವಣ್ಣ ಮಾಡಿದ್ದಾರೆ. ಅವರ ಸಾಹಿತ್ಯ ಸಾಮಗ್ರಿಯಲ್ಲಿ ಎರಡು ರೀತಿಯ ಕಾಲಜ್ಞಾನ ರಚನೆಗಳಿವೆ. ಒಂದು 'ಹಂಡಿ ಭಿಕ್ಷದ ಕಾಲಜ್ಞಾನ ವಚನ'. ಎರಡನೆಯದು 'ಸಾಮಾನ್ಯ ಕಾಲಜ್ಞಾನ'. ಪ್ರತಿವರ್ಷ ಶಿವರಾತ್ರಿಯ ದಿವಸ ಕೊಡೇಕಲ್ಲ ಬಸವೇಶ್ವರ ದೇವಸ್ಥಾನದಲ್ಲಿ ಕಾಲಜ್ಞಾನ ನುಡಿಯನ್ನು ಪಠಿಸಲಾಗುತ್ತದೆ.

ಹನ್ನೆರಡನೆಯ ಶತಮಾನದ ಬಸವಾದಿ ಶಿವಶರಣರ ಕಲ್ಯಾಣ ಪರಂಪರೆಯನ್ನು ಹದಿನೈದನೆಯ ಶತಮಾನದಲ್ಲಿ ಮುಂದುವರೆಸಿದವರು ಕೊಡೇಕಲ್ಲ ಬಸವಣ್ಣ. ಜಾತಿರಹಿತ ಸಮಾಜದ ನಿರ್ಮಾಣವು ಕಲ್ಯಾಣದ ಬಸವಣ್ಣನವರಂತೆ ಕೊಡೇಕಲ್ಲ ಬಸವಣ್ಣನವರ ಕನಸೂ ಆಗಿತ್ತು. ಈ ಕನಸನ್ನು ಸಾಕಾರಗೊಳಿಸಲು ಕೊಡೇಕಲ್ಲ ಬಸವಣ್ಣನವರು ಭವಿ–ಭಕ್ತ ಭೇದದ ವಾದಕ್ಕೆ ಇಷ್ಟಲಿಂಗ ಧಾರಣೆಯಲ್ಲಿ ಅವಕಾಶ ಇರುವುದಾದರೆ, ಅದರ ಧಾರಣೆಯನ್ನೇ ನಿರಾಕರಿಸುತ್ತಾರೆ. ಆ ಮೂಲಕ ತಮ್ಮದು ಐಕ್ಯ ಸ್ಥಲವೆಂದೂ, ಆರೂಢ ಮಾರ್ಗವೆಂದೂ ಸ್ಪಷ್ಟಪಡಿಸುತ್ತಾರೆ. ಈ ರೀತಿ ಅದ್ವೈತ ನೆಲೆಗಟ್ಟಿನ ಮೇಲೆ ತಮ್ಮ

‘ಅಮರ ಕಲ್ಯಾಣ’ ಪರಿಕಲ್ಪನೆಯನ್ನು ಪ್ರತಿಪಾದಿಸುತ್ತಾರೆ. ಬಹಮನಿ ಸುಲ್ತಾನರು–ವಿಜಯನಗರದೊಂದಿಗೆ ಸಂಘರ್ಷ ನಡೆಸುತ್ತಿದ್ದ ಕಾಲದಲ್ಲಿ ಕೊಡೇಕಲ್ಲ ಬಸವಣ್ಣನವರು ಜನರನ್ನು ತಮ್ಮ ‘ಅಮರ ಕಲ್ಯಾಣ’ಕ್ಕೆ ಆಹ್ವಾನಿಸುತ್ತಾರೆ. ಜಾತಿ ಮೀರಿದ, ಕಂದಾಚಾರವನ್ನು ಹಿಂದಿಕ್ಕಿದ, ನಿರ್ಮೋಹದ ಶರಣ ಜೀವನಕ್ಕೆ ಕರೆ ಕೊಡುತ್ತಾರೆ. ಈ ಎಲ್ಲ ಅಂಶಗಳು ಅವರ ತತ್ವಪದಗಳಲ್ಲಿ ಅಭಿವ್ಯಕ್ತಗೊಂಡಿವೆ.

**ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಯಾಗಿ**
**ಕೊಂಡು ಬಿಡುವಾತ ಸಂಸಾರಯೋಗಿ**
**ಗಂಡು ಮಗನಾದ ಹೆಂಡತಿ ಮಗಳು ತಾನಾಗಿ**
**ಖಂಡಿಸಲು ಬೇಕು ಕಾಯದ ಕರ್ಮವ**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೨೦).**

‘ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ’ ಎಂಬ ಶರಣರ ಮಾರ್ಗವನ್ನು ಕೊಡೇಕಲ್ಲ ಬಸವಣ್ಣನವರು ಈ ರೀತಿ ಮಾರ್ಪಡಿಸಿಕೊಳ್ಳುತ್ತಾರೆ. ಸಂಸಾರದಲ್ಲಿದ್ದೂ ಯೋಗಿಯಾಗುವ ಬಗೆಯನ್ನು ಇಲ್ಲಿ ಹೇಳುತ್ತಿದ್ದಾರೆ. ನೀರಲ್ಲಿದ್ದೂ ಮೈಗಂಟಿಕೊಳ್ಳದೆ ಬಾಳುವ ಕಮಲದಂತೆ ಸಂಸಾರದಲ್ಲಿದ್ದೂ ಇಲ್ಲದಂತಿರಲು, ಕಾಯ ಕರ್ಮದ ಮೂಲಕ ದೇಹ ದಂಡಿಸುವುದೇ ಇದಕ್ಕಿರುವ ರಾಜಮಾರ್ಗವಾಗಿದೆ.

ಸಮಾಜದಲ್ಲಿ ನಮ್ಮ ಪಾಡಿಗೆ ನಾವು ದುಡಿದು ಬದುಕಿದರೂ ತೊಂದರೆ ಕೊಡುವವರು ಎಲ್ಲ ಕಾಲದಲ್ಲಿಯೂ ಇರುತ್ತಾರೆ. ಇದನ್ನೇ ಕೊಡೇಕಲ್ಲ ಬಸವಣ್ಣನವರು,

**ಮಳೆ ಬೆಳೆ ಆಯಿತ್ತೆಂದು ನಾ ಪಾಪಿ**
**ನಲಿದು ಸಂತೋಷ ಮಾಡಿದೆ**
**ಹೊಲದಲ್ಲಿ ತಿನಗೊಡರು ಹಗೇವಕ್ಕೆ ಬರಗೊಡರು**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೪೦)**

ಎಂದು ಹೇಳುತ್ತಾರೆ. ಹೊಲವನ್ನು ಸಾಕಷ್ಟು ಪರಿಶ್ರಮದಿಂದ ಉತ್ತಿ–ಬಿತ್ತಿ, ಮಳೆಗಾಗಿ ಕಾದು, ಸಮೃದ್ಧವಾಗಿ ಮಳೆಯಾದಾಗ ಸಂತೋಷಗೊಳ್ಳುತ್ತೇವೆ. ಆದರೆ ಕೆಲವು ಕಿಡಿಗೇಡಿಗಳು ಉದ್ದೇಶಪೂರ್ವಕವಾಗಿ ಬೆಳೆದ ಬೆಳೆಯನ್ನು ನಾಶಗೊಳಿಸಿ, ಇಲ್ಲವೆ ಕಿತ್ತು ತಿನ್ನುವ ವಿಕೃತಿಯನ್ನು ಮೆರೆಯುತ್ತಾರೆ. ಈ ತತ್ವಪದದ ಮೂಲಕ ಕೊಡೇಕಲ್ಲ ಬಸವಣ್ಣನವರ ಸಾಮಾಜಿಕ ವಾಸ್ತವವನ್ನು ಅನಾವರಣಗೊಳಿಸಿದ್ದಾರೆ.

ಇಂತಹ ಅಡೆತಡೆಗಳ ಮಧ್ಯೆಯೂ ನಾವು ಕೈಗೊಳ್ಳುವ ಕಾಯಕವನ್ನು ಸತ್ಯನಿಷ್ಠೆಯಿಂದ ಮಾಡುವುದೇ ಆತ್ಯಂತಿಕ ನೆಮ್ಮದಿಯನ್ನು ನೀಡುವ ರಹದಾರಿಯಾಗಿದೆ. ಇಂತಹ ‘ಕಾಯಕದ ಮಾರ್ಗ’ವು ಕ್ಲಿಷ್ಟಕರವಾದರೂ ನಿರ್ಮಲವಾಗಿದ್ದು, ಕಾಮಧೇನುವಿನಂತೆ ನಮ್ಮ ಆಶೋತ್ತರಗಳನ್ನು ಈಡೇರಿಸುತ್ತದೆ.

**ಸತ್ಯ ಧರ್ಮದ ಕಾಯಕ ನಿತ್ಯ ನಿರ್ಮಳ ಕೇಳು**
**ಕತ್ತಲಲ್ಲವು ಕಾಮಧೇನು**
**ಭಕ್ತಿ ಭೃತ್ಯನಾಗಿ ಸತ್ಯದೊಳು ಕಾಯಕವು ತಾ**
**ಮತ್ತೆ ಹಿಡಿದರೆ ನಡೆವುದಯ್ಯ**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೪೬)**

ಆದ್ದರಿಂದ ಕಾಯಕನಿಷ್ಠೆಯನ್ನು ಬೆಳೆಸಿಕೊಳ್ಳುವಂತೆ ಕೊಡೇಕಲ್ಲ ಬಸವಣ್ಣನವರು ಪ್ರತಿಪಾದಿಸುತ್ತಾರೆ. ಇಂತಹ ಕಾಯಕದಿಂದ ಬಂದ ಪ್ರತಿಫಲವನ್ನು ನಾವೊಬ್ಬರೇ ಅನುಭವಿಸದೆ ಇತರರೊಂದಿಗೆ ಹಂಚಿಕೊಂಡು ಉಣ್ಣಬೇಕು. “ಕಂಚಿಲುಂಬುದ ಬಿಟ್ಟು ನಾವಿನ್ನು ಹಂಚಿಲುಣ್ಣಬೇಕು, ಹಂಚಿಕೊಂಡು ಗಂಜಿ ಕುಡಿಯಬೇಕು” (ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೪೯) ಎಂದು ಹೇಳುವ ಮಾತು ಮಾರ್ಮಿಕವಾದುದಾಗಿದೆ. ಏಕೆಂದರೆ ಹಂಚಿಕೊಂಡಷ್ಟು ನಾವು ಉಣ್ಣುವ ಊಟದ ರುಚಿ ಹೆಚ್ಚಾಗುತ್ತದೆ. ಜೊತೆಗೆ ದುಡಿದದ್ದೆಲ್ಲವನ್ನೂ ಕೂಡಿಟ್ಟರೆ ಅದು ನಿಷ್ಪ್ರಯೋಜಕವಾಗುತ್ತದೆ. ಅಲ್ಲದೆ

ನಾವು ಮಡದಿ, ಮಕ್ಕಳಿಗೆಂದು ದುಡಿಯುವುದು ನಿರರ್ಥಕವೆಂದು ಕೊಡೇಕಲ್ಲ ಬಸವಣ್ಣನವರು ಹೀಗೆ ಹೇಳುತ್ತಾರೆ :

**ಒಡವೆ ವಸ್ತುವು ನನ್ನ ಮಡದಿ ಮಕ್ಕಳಿಗೆಂದು**
**ನುಡಿವ ನುಡಿ ತಾ ಹೆಡ್ಡು ಬಿಡು ಮಾನವ**
**ಧನದ್ರವ್ಯ ಉಳ್ಳರೆನುತ ಸುತಪಿತ ಬಂಧು**
**ಕನಸಿನೊಳು ತೊಳಲುತ ಅವರು ಬಯ್ವರು**
**ವಿನಾ ಅರ್ಥ ವಿವೇಕ ವಿದ್ಯೆ ಬುದ್ಧಿಯೆ ತನ್ನದು**
**ಮನದಿಚ್ಛೆಯ ಮಾತು ಮೀರಿರೊ ಸಕಲರು**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೬೫–೬೭)**

ಅತ್ಯಂತ ವಾಸ್ತವವಾದ ಹಾಗೂ ಸಾರ್ವಕಾಲಿಕ ಸತ್ಯವೊಂದನ್ನು ಈ ತತ್ವಪದಲ್ಲಿ ಕೊಡೇಕಲ್ಲ ಬಸವಣ್ಣನವರು ಪ್ರತಿಪಾದಿಸುತ್ತಿದ್ದಾರೆ. ಹಗಲಿರುಳೆನ್ನದೆ ದುಡಿದು ಮಡದಿ–ಮಕ್ಕಳಿಗೆಂದು ಹಣ ಗಳಿಸುವ ಜನರಿಗೆ ಸತ್ಯದ ಮನವರಿಕೆ ಮಾಡಿಸುತ್ತಿದ್ದಾರೆ. ನಮ್ಮ ಬಳಿ ಹಣ–ಅಂತಸ್ತು ಇರುವವರೆಗೆ ಮಾತ್ರ ತಂದೆ–ತಾಯಿ, ಹೆಂಡತಿ–ಮಕ್ಕಳು, ಬಂಧು–ಬಳಗದವರು ನಮ್ಮನ್ನು ಕೊಂಡಾಡುತ್ತಾರೆ. ನಮ್ಮ ಖಜಾನೆ ಖಾಲಿಯಾದ ತಕ್ಷಣ ಅವರೆಲ್ಲರೂ ನಮ್ಮನ್ನು ಹೀಗಳೆಯುತ್ತಾರೆ. ಆದ್ದರಿಂದ ವಿವೇಕ, ಬುದ್ಧಿಗಳೇ ನಿಜವಾದ ಆಸ್ತಿಯೆಂದು ಹೇಳುತ್ತಾರೆ.

**ತನಗೆ ಉಳ್ಳರೆ ಮೂರು ಲೋಕಕೆ ಉಣಲುಂಟು**
**ತನಗಿಲ್ಲದಿರೆ ಮೂರು ಲೋಕವಿಲ್ಲ**
**ಧನಧಾನ್ಯ ಅಷ್ಟಮದವು ಐಶ್ವರ್ಯವ್ಯಾಕೆ**
**ತನಗೇಕೆ ಈ ಲೋಕಪುರದ ಜನರು**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೬೭)**

ಅದೇ ರೀತಿ ಲೋಕದ ಎಲ್ಲ ಸುಖಾಂಕ್ಷೆಗಳೂ ನಮ್ಮ ಬಳಿ ಹಣವಿದ್ದರೆ ಮಾತ್ರ ದೊರೆಯುತ್ತವೆ. ಇಲ್ಲದಿದ್ದರೆ ಯಾವುದೂ ದೊರೆಯುವುದಿಲ್ಲ. ಆದರೂ ಹಣ, ಅಧಿಕಾರ, ಸಂಪತ್ತು, ರೂಪ, ಯೌವ್ವನ ಮುಂತಾದ ಅಷ್ಟಮದಗಳಿಗೆ ಬಲಿಯಾಗದೆ, 'ನಮ್ಮ ಜೀವಿತಾವಧಿಯಲ್ಲಿ ಅಧ್ಯಾತ್ಮಿಕ ಚಿಂತನೆಗೂ ಒಂದಷ್ಟು ಸಮಯವನ್ನು ಮೀಸಲಾಗಿಡಬೇಕು' ಎಂಬುದನ್ನು ಈ ತತ್ವಪದವು ಸಮರ್ಥವಾಗಿ ಬಿಂಬಿಸುತ್ತದೆ.

'ನಡೆ–ನುಡಿ ಸಾಮರಸ್ಯ'ವು ವ್ಯಕ್ತಿಯ ಜೀವನದಲ್ಲಿ ಕಷ್ಟಸಾಧ್ಯವಾದ ಹಾಗೂ ನೆಮ್ಮದಿಯುತ ಸಾಮಾಜಿಕ ಜೀವನಕ್ಕೆ ಪ್ರತಿಯೊಬ್ಬರೂ ಪ್ರಯತ್ನಿಸಲೇಬೇಕಾದ ಆದರ್ಶಗಳಲ್ಲೊಂದಾಗಿದೆ. ಆದರೆ ಆದರ್ಶಗಳನ್ನು ಕೇವಲ ಉಪದೇಶ ಮಾಡುವವರೇ ನಮ್ಮ ಸುತ್ತಲೂ ಅಧಿಕವಾಗಿರುತ್ತಾರೆ. ಕಾಲದೇಶಾತೀತವಾದ ಈ ಸಾಮಾಜಿಕ ವಾಸ್ತವವನ್ನು ಕೊಡೇಕಲ್ಲ ಬಸವಣ್ಣನವರು "ನುಡಿವರಲ್ಲದೆ ನಡೆದವರ ನಾ ಕಾಣೆ"(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೯೧) ಎಂದು ವಿಡಂಬಿಸುತ್ತಾರೆ. ಇಂತಹವರ ಮಧ್ಯೆಯೂ 'ಮುಳ್ಳುಗಳ ನಡುವೆ ಇದ್ದರೂ ಕೋಮಲತೆಯ ಗುಣವನ್ನು ಹೊಂದಿರುವ ಗುಲಾಬಿಯ ಹಾಗೆ' ಸಜ್ಜನರೂ ಇರುತ್ತಾರೆ. ಅಂತಹವರ ಸ್ನೇಹವನ್ನು ನಾವು ಸಂಪಾದಿಸಬೇಕು.

**ಸಾತ್ವಿಕ ಸಜ್ಜನರು ನೀತಿ ತಪ್ಪರು**
**ನೀತಿ ಉಳ್ಳವರ ಸಂದಣಿಸು**
**ಪಾತಕ ಪಂಚಮ ಸೂತಕ ದೇಹಿಗಳ**
**ನೇತ್ರಕ್ಕೆ ತೋರದಂದದಲಿ**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೯೯)**

ಏಕೆಂದರೆ ಈ ಸಾತ್ವಿಕ ಸಜ್ಜನರು ನೀತಿವಂತರಾಗಿದ್ದು, ಎಂತಹ ಕ್ಲಿಷ್ಟ ಸಂದರ್ಭಗಳಲ್ಲಿಯೂ 'ನುಡಿದಂತೆ ನಡೆಯುವ'ವರಾಗಿರುತ್ತಾರೆ. ಆದ್ದರಿಂದ ಇಂತಹ 'ನೀತಿವಂತರ ಸ್ನೇಹವನ್ನು ಕರುಣಿಸು'

ಎಂದು ಕೊಡೇಕಲ್ಲ ಬಸವಣ್ಣನವರು ತಮ್ಮ ಆರಾಧ್ಯ ದೈವವನ್ನು ಬೇಡುತ್ತಾರೆ. ಬದಲಿಗೆ ನೀತಿ ಹೀನರನ್ನು ತೋರಬೇಡವೆಂದೂ ಪ್ರಾರ್ಥಿಸುತ್ತಾರೆ.

ಉನ್ನತ ಸಾಂಸ್ಕೃತಿಕ ಪರಂಪರೆ ಹಾಗೂ ಅಧ್ಯಾತ್ಮಗಳೊಂದಿಗೆ ಸಾಮಾಜಿಕ–ಧಾರ್ಮಿಕ ಮೌಢ್ಯಗಳೂ ನಮ್ಮ ಸಮಾಜದ ಅವಿಭಾಜ್ಯ ಅಂಗಗಳಾಗಿವೆ. ಕಾಲಕಾಲಕ್ಕೆ ಹಲವು ದಾರ್ಶನಿಕರು ತಮ್ಮ ಜೀವನ ಹಾಗೂ ಉಪದೇಶಗಳ ಮೂಲಕ ಅಂಧಕಾರ ನಿವಾರಣೆಗೆ ಶ್ರಮಿಸಿದ್ದಾರೆ. ಆದರೂ ಹಲವು ಮೌಢ್ಯಗಳು ಇಪ್ಪತ್ತೊಂದನೆಯ ಶತಮಾನದಲ್ಲಿಯೂ ಅವ್ಯಾಹತವಾಗಿ ಮುಂದುವರೆಯುತ್ತಿವೆ. ಇಂತಹ ಸಂದರ್ಭದಲ್ಲಿ 'ದೈವ'ವನ್ನು ಕುರಿತು ಕೊಡೇಕಲ್ಲ ಬಸವಣ್ಣನವರ ಚಿಂತನೆಗಳು ಮನನಯೋಗ್ಯವಾಗಿವೆ.

**ಅನ್ನ ದೈವವು ಅಗ್ಗವಣೆ ಸ್ವಯವು**
**ಇನ್ನು ಇವು ಇಲ್ಲದಿರೆ ನಿಲ್ಲದು ಕಾಯವು**
**ಹೊನ್ನು ಚಿನ್ನ ರತ್ನಗಳೆಲ್ಲವು**
**ತನ್ನಿಂದ ಅದು ಯಾತರ ದೈವವು**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೧೦೮)**

ಗುಡಿ, ಚರ್ಚು, ಮಸೀದಿ, ಬಸದಿ, ಚೈತ್ಯಾಲಯಗಳಲ್ಲಿನ ದೈವಕ್ಕಿಂತಲೂ, ಸರ್ವ ಜೀವಿಗಳ ಅಸ್ತಿತ್ವಕ್ಕೆ ಅತ್ಯಗತ್ಯವಾಗಿರುವ 'ಅನ್ನ(ಆಹಾರ)'ವೇ ದೈವವೆನ್ನುವುದು ವೈಚಾರಿಕ ಚಿಂತನೆಯಾಗಿದೆ. ಕೊಡೇಕಲ್ಲ ಬಸವಣ್ಣನವರ ಈ ತತ್ವಪದದ ಸಾಲುಗಳು 'ಅನ್ನದೇವರ ಮುಂದೆ ಇನ್ನು ದೇವರು ಉಂಟೆ?' ಎಂಬ ಸರ್ವಜ್ಞನ ವಚನದ ಸಾಲುಗಳೊಂದಿಗೆ ಆಶ್ಚರ್ಯಕರವಾಗಿ ಹೋಲಿಕೆಯಾಗುತ್ತವೆ.

ಸತ್ಯನಿಷ್ಠೆಯು ವ್ಯಕ್ತಿಯ ಉನ್ನತ ಆದರ್ಶಗಳಲ್ಲಿ ಒಂದು. ಆದರೆ 'ಸತ್ಯವಂತರಿಗಿದು ಕಾಲವಲ್ಲ' ಎಂಬ ದಾಸವಾಣಿಯು ಹಿಂದೆಂದಿಗಿಂತೂ ಹೆಚ್ಚು ಪ್ರಸ್ತುತವಾಗುತ್ತಿದೆ. ಏಕೆಂದರೆ, ಸತ್ಯವನ್ನು ಅರಗಿಸಿಕೊಳ್ಳಲು ಬಹುತೇಕರು ಸಿದ್ಧರಿರುವುದಿಲ್ಲ. ಆದ್ದರಿಂದ ಸತ್ಯವಂತರನ್ನು ಹೀನಾಯವಾಗಿ ಕಾಣುತ್ತಾರೆ.

**ಕಂಡುದನ್ನು ಆಡಿದರೆ ಕೊಂಡೆನೆಂಬರು**
**ಕಂಡು ಇಚ್ಛೆಯನಾಡಿದರೆ ಕೊಂಡಾಡುವರು**
**ತೊಂಡು ತೊಳಸಿ ಕೂಡಿ ಜಗವ ಬಂಡು ಆದರು**
**ಕೆಂಡವೆಲ್ಲ ಆರಿಹೋಗಿ ಬೂದಿ ಆಯಿತು**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೧೧೪)**

ಇದ್ದುದನ್ನು ಇದ್ದ ಹಾಗೆಯೇ ಮಾತನಾಡಿದರೆ ಕೋಪಗೊಳ್ಳುತ್ತಾರೆ; ಕೆಂಡದಂತಾಗುತ್ತಾರೆ. ತಮ್ಮನ್ನು ಹೊಗಳಿದರೆ ಕೊಂಡಾಡುತ್ತಾರೆ. ಇಂಥವರು ಮನುಷ್ಯರಾಗಿದ್ದೂ ವ್ಯರ್ಥವೆಂಬುದು ಕೊಡೇಕಲ್ಲ ಬಸವಣ್ಣನವರ ನಿಲುವು. ಏಕೆಂದರೆ 'ಸತ್ಯ ವಾಕ್ಯಕೆ ತಪ್ಪಿ ನಡೆದರೆ ಮೆಚ್ಚನಾ ಪರಮಾತ್ಮನು' ಎಂಬುದು ಅವರ ನಿಲುವಾಗಿತ್ತು. ಆದರೆ ದುರುಳರಿಗೆ ಇಂತಹ ಉಪದೇಶದ ಮಾತುಗಳು ಸಹ್ಯವೆನಿಸುವುದಿಲ್ಲ. ಅದನ್ನು ಈ ರೀತಿ ಹೇಳುತ್ತಾರೆ:

**ನೀಚಗೆ ಉಪದೇಶ ಉನ್ನಂತ ಹೇಳಲು**
**ಆಚಾರವೆಂದು ನಡೆಯುವನೆ**
**ವಿಚಾರಬುದ್ಧಿಯ ವಿವರವು ದೊರಕದು**
**ಈಚಲ ಮರದಂತಿಹನಿಗೆ**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೧೭೯)**

ಈಚಲ ಮರದಂತೆ ಕೇವಲ ಭೌತಿಕವಾಗಿ ಎತ್ತರ ಬೆಳೆಯುವುದಲ್ಲ; ಉನ್ನತ ವ್ಯಕ್ತಿತ್ವವನ್ನು ರೂಢಿಸಿಕೊಳ್ಳಬೇಕೆಂಬದು ಅವರ ಖಚಿತ ನಿಲುವಾಗಿದೆ. ಕ್ಷುಲ್ಲಕ ವ್ಯಕ್ತಿತ್ವದವರಿಗೆ ಎಷ್ಟೇ ಸದುಪದೇಶ ಮಾಡಿದರೂ ನಿರರ್ಥಕವೆಂಬುದನ್ನು ಈ ತತ್ವಪದದಲ್ಲಿ ಹೇಳಿದ್ದಾರೆ.

**ಹಿಂದೆ ಪರರನು ಆಡುವವ ಅಧಮನು**
**ಮುಂದೆ ನುಡಿಗಳ ನುಡಿವ ಮಧ್ಯಮ**
**ಹಿಂದೆ ಮುಂದೆ ಪರರ ಆಡದಿರೆ ಆತನುತ್ತಮ**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೨೦೮)**

'ಮನೆ ಗೆದ್ದು ಮಾರು ಗೆಲ್ಲು' ಎಂಬಂತೆ ಪ್ರತಿಯೊಬ್ಬ ವ್ಯಕ್ತಿಯೂ ಮೊದಲು ತನ್ನ ತಪ್ಪುಗಳನ್ನು ತಿದ್ದಿಕೊಳ್ಳಬೇಕು. ಆದರೆ ಬಹುತೇಕರು ತಮ್ಮ ಹುಳುಕುಗಳನ್ನು ಗೌಣಗೊಳಿಸಿಕೊಂಡು, ಇತರರ ತಪ್ಪುಗಳನ್ನು ಎತ್ತಿ ತೋರಿಸುತ್ತಿರುತ್ತಾರೆ. ಅಂಥವರನ್ನು ಕೊಡೇಕಲ್ಲ ಬಸವಣ್ಣನವರು 'ಅಧಮ'ರೆಂದು ಕರೆಯುತ್ತಾರೆ. ಲೋಕದ ಡೊಂಕನ್ನು ತಿದ್ದದೆ, ತಮ್ಮ ಡೊಂಕನ್ನು ತಿದ್ದಿಕೊಳ್ಳಲು ಪ್ರಯತ್ನಿಸುವವರನ್ನು 'ಉತ್ತಮ'ರೆಂದು ಭಾವಿಸುತ್ತಾರೆ. ಇಂತಹ 'ಉತ್ತಮರು ಭಾವ ಶುದ್ಧಿಯಿಂದ ಯಾವುದೇ ಕೆಲಸ ಮಾಡಿದರೂ ಯಶಸ್ಸು ಗಳಿಸುತ್ತಾರೆ' ಎಂಬುದು ಕೊಡೇಕಲ್ಲ ಬಸವಣ್ಣನವರ ವೈಚಾರಿಕತೆಯಾಗಿದೆ.

**ಭಾವ ಶುದ್ಧವಿಲ್ಲದಲಿ ಯಾವುದು ಬಿತ್ತಿದರೆ**
**ದೇವ ನಮಗಲ್ಲಿ ಬೆಸನ ಕೊಡನು! ಮುಂದಿನ್ನು**
**ಭಾವಕ್ಕೆ ತಕ್ಕ ಬೆಳಸಯ್ಯ**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೨೪೭)**

'ಯದ್ಭಾವಂ ತದ್ಭವತಿ' ಎನ್ನುವಂತೆ ಶುದ್ಧ ಮನಸ್ಸಿನಿಂದ ಕೈಗೊಳ್ಳುವ ಕಾರ್ಯವು ಕೈಗೂಡುತ್ತದೆ. ಅಳಿಮನದ ಕೆಲಸವು ವಿಫಲವಾಗುತ್ತದೆ. ಆದ್ದರಿಂದ ಯಾವುದೇ ಕೆಲಸ ಮಾಡಿದರೂ ತ್ರಿಕರಣ(ತನು, ಮನ ಹಾಗೂ ಧನ)ಗಳನ್ನು ಸಮರ್ಪಿಸಬೇಕು. ಇಂತಹ ಸಮರ್ಪಣಾ ಭಾವವನ್ನು ಹೊಂದಲು 'ಸದಾಚಾರ–ಸನ್ನಡತೆಗಳು' ಅತ್ಯವಶ್ಯಕ.

**... ... ಆಡಿ ಹುಸಿಯಲು ಬೇಡ**
**ಓಡಿ ಓಡಾಡಿ ಗತ ಬೀಳಲಿಬೇಡ**
**ಹೇಡಿತನ ಮಾಡಿ ಭಕ್ತಿ ಬಿಡಬೇಡ**
**ಮಾಡಿದ ಲೇಸ ಮರೆಯಬೇಡ**
**(ಕೊಡೇಕಲ್ಲ ಬಸವಣ್ಣನ ತತ್ವಪದಗಳು, ಪು. ೩೨೧)**

ಆಡಿದ ಮಾತಿಗೆ ಬದ್ಧರಾಗಿರುವುದು, ಸುಮ್ಮನೆ ಓಡಾಡಿ ಕಾಲಹರಣ ಮಾಡದೆ ಸದಾ ಕ್ರೀಯಾಶೀಲವಾಗಿರುವುದು, ಕಷ್ಟಗಳು ಎದುರಾದರೆ ಹೇಡಿತನದಿಂದ ಪಲಾಯನ ಮಾಡದಿರುವುದು, ಇತರರು ನಮಗೆ ಮಾಡಿದ ಉಪಕಾರಗಳನ್ನು ಮರೆಯದಿರುವುದು – ಇವು ಕೊಡೇಕಲ್ಲ ಬಸವಣ್ಣನವರ ಪ್ರಕಾರ ಸದಾಚಾರ–ಸನ್ನಡತೆಗಳಾಗಿವೆ.

ಹೀಗೆ ಸಾಮಾಜಿಕ ಪ್ರಜ್ಞೆಯಿಂದ ರೂಪುಗೊಂಡ ಕೊಡೇಕಲ್ಲ ಬಸವಣ್ಣನವರ ತತ್ವಪದಗಳಲ್ಲಿ ಭಾವ ಮತ್ತು ಭಾಷೆಯಲ್ಲಿ ಸಹೃದಯ ಸಮನ್ವಯತೆ ಸಾಧಿಸಿರುವುದನ್ನು ಕಾಣಬಹುದು. ಜನರ ಅಜ್ಞಾನ–ಅಂಧಕಾರಗಳನ್ನು ನಿವಾರಿಸಿ, ಅಧ್ಯಾತ್ಮಿಕ ಪಥದಲ್ಲಿ ನಡೆಯುವಂತೆ ಮಾಡುವುದು ಅವರ ಆಶಯವಾಗಿತ್ತು. ಪ್ರೀತಿ–ವಿಶ್ವಾಸಗಳಲ್ಲಿ ದೇವರನ್ನು ಕಂಡು, ದುಡಿದುಣ್ಣಲು ಅವರ ತತ್ವಪದಗಳು ಪ್ರೇರೇಪಿಸುತ್ತವೆ. ಇಂತಹ ಅಮೂಲ್ಯ ತತ್ವಪದಗಳ ಗಣಿಯಾಗಿರುವ ಕೊಡೇಕಲ್ಲ ಬಸವಣ್ಣನವರ ಬಗೆಗಿನ ಗಂಭೀರ ಅಧ್ಯಯನ ಇಂದಿನ ತುರ್ತು ಅಗತ್ಯಗಳಲ್ಲಿ ಒಂದಾಗಿದೆ.

**ಆಕರ ಗ್ರಂಥಗಳು.**


೧. ಅಮರೇಶ ನುಗಡೋಣಿ: ತತ್ವಪದ ಸಾಹಿತ್ಯ ಅಧ್ಯಯನ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.

೨. ಕಲಬುರ್ಗಿ ಎಂ. ಎಂ. : ಕೊಡೆಕಲ್ ವಚನವಾಕ್ಯ : ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೧೧.

೩. ಮಕಾನದಾರ ಎ.ಎಸ್. (ಸಂ) : ಉಳಿ ಮುಟ್ಟಿದ ಜೀವ : ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಗದಗ, ೨೦೧೫.

೪. ಬಸವಲಿಂಗ ಸೊಪ್ಪಿಮಠ: ಕೊಡೇಕಲ್ಲ ಬಸವಣ್ಣನವರ ತತ್ವಪದಗಳು :ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೭.




# ಬಸವ ಚಿಂತನೆಯ ಸಾಮಾಜಿಕ ಸಮಾನತೆಯ ವಿವಿಧ ಆಯಾಮಗಳು : ಕಲ್ಯಾಣ ಕರ್ನಾಟಕಕ್ಕೆ ಸಂಬಂಧಿಸಿದಂತೆ.

**–ಶ್ರೀ ಮಂಜುನಾಥ ಆಚಾರಿ,**
ಸಮಾಜಶಾಸ್ತ್ರ ಸಹಾಯಕ ಪ್ರಾಧ್ಯಾಪಕರು,
ಲ ಸೋ ಬಂ ಸ ಪ್ರ ದ ಕಾಲೇಜು, ಕೋಟ,
ಪಡುಕೆರೆ, ಉಡುಪಿ ಜಿಲ್ಲೆ.

**ಸಾರಾಂಶ.**

ಭಾರತೀಯ ಸಮಾಜವನ್ನು ನಿರಂತರವಾಗಿ ಕಾಡುತ್ತಾ ಬಂದಿದ್ದ ಹಲವಾರು ಸಾಮಾಜಿಕ ಧಾರ್ಮಿಕ ಅನಿಷ್ಟ ಪದ್ದತಿಗಳು ಮತ್ತು ಪಿಡುಗುಗಳ ವಿರುದ್ಧ ಸಂಪೂರ್ಣವಾಗಿ ಅಹಿಂಸಾತ್ಮಕ ಸ್ವರೂಪದಲ್ಲಿ ಮೌನಕ್ರಾಂತಿಯನ್ನು ಹುಟ್ಟುಹಾಕಿದ ಮಹಾಪುರಷರ ಸಾಲಿನಲ್ಲಿ ವಿಶಿಷ್ಟ ಸ್ಥಾನಪಡೆದವರು ಬಸವಣ್ಣವರು. ಸಮಾಜದಲ್ಲಿದ್ದ ವಿಷಮ ಪರಿಸ್ಥಿತಿಗಳನ್ನು ನಾಶಗೊಳಿಸಿ ಸಮಸ್ಥಿತಿಯನ್ನು ತರಲು ಬಸವೇಶ್ವರರು ನಡೆಸಿದ ಜನಪರ ಆಂದೋಲನಗಳು ನಮ್ಮ ನಾಡಿನ ಇತಿಹಾಸದಲ್ಲಿ ಒಂದು ಮಹತ್ವದ ಮೈಲುಗಲ್ಲಾಗಿದೆ.

ಕಾಯಕವೇ ಕೈಲಾಸ ಎಂಬ ಶ್ರಮಗೌರವ ತತ್ವದ ಪ್ರತಿಪಾದಕರಾಗಿ ಸ್ರೀ ಪುರುಷರ ಸಮಾನತಾ ಆಂದೋಲನದ ಹರಿಕಾರರಾಗಿ ಧಾರ್ಮಿಕ ಮತ್ತು ಜಾತಿಯ ವಿಷಮತಗಳ ವಿರುದ್ಧ ಬಂಡೆದ್ದ ಬಂಡಾಯಗಾರರಾಗಿ ಸಮಾನತೆಯ ಸಮಾಜದ ಸ್ಥಾಪನಗೆ ಶ್ರಮಿಸಿದ ಬಸವಣ್ಣವರದು ಸರ್ವಕಾಲಿಕ ಒಪ್ಪಿತವಾದ ವ್ಯಕ್ತಿತ್ವ. ಬಸವಣ್ಣನವರು ತನ್ನ ಅಂತರಂಗವನ್ನು ಕನ್ನಡಿಯಂತೆ ತೋರಿಸುವಂತೆಯೇ ಸಮಾಜದ ಅಂತರಂಗವನ್ನು ಸರ್ಮಪಕವಾಗಿ ತನ್ನ ವಚನಗಳಲ್ಲಿ ಮೂಡಿಸಿದ್ದಾರೆ. ಅಂದಿನ ಸಮಾಜದ ಲೋಪದೋಷಗಳನ್ನು ಕಟುವಾಗಿ, ನಿರ್ದಾಕ್ಷಿಣ್ಯವಾಗಿ ತೋರಿಸಿಕೊಟ್ಟಿದ್ದಾರೆ. ವ್ಯಕ್ತಿ ಯಾರೇ ಆಗಿರಲಿ ಅವನಲ್ಲಿರುವ ಡಾಂಭಿಕತೆ, ಹೊರ ತೊರಿಕೆಯ ಅವಗುಣಗಳನ್ನು ಒಲವಿಲ್ಲದ ಪೂಜೆ ಇವುಗಳನ್ನು ಖಂಡಿಸಿದ್ದಾರೆ. ಸಾಮಾಜಿಕ ಬದಲಾವಣೆಯ ಹೊಸ ಮನ್ವಂತರಕ್ಕೆ ಕಾರಣರಾದ ಬಸವಣ್ಣವರು ಒಬ್ಬ ಆಂದೋಲನಕಾರಿ, ಮಾನವತವಾದಿ, ದಲಿತೋದ್ಧಾರಕ. ತನ್ನ ಸಮಾಜ ಸೇವೆಯ ಅಂಗವಾಗಿ ವರ್ಗಭೇದ, ವರ್ಣಭೇದ, ಲಿಂಗಭೇದ ನಿರಾಕರಣೆಯ ಕ್ರಾಂತಿಯನ್ನು ಮೂಡಿಸಿದವರು.

ಸಾಮಾಜಿಕ ಸಮಾನತೆಯ ಉದಾತ್ತ ಕಲ್ಪನೆಯ ಬಸವಣ್ಣನವರು ಸಾಮಾಜಿಕ ಸುಧಾರಣೆಯ ಪ್ರತಿಪಾದಕರಾಗಿದ್ದರು. ಈ ಒಂದು ಲೇಖನವು ಬಸವಣ್ಣವರ ಕಲ್ಪನೆಯ ಸಾಮಾಜಿಕ ಸಮಾನತೆಯು – ಜಾತಿಸಮಾನತೆ, ಲಿಂಗಸಮಾನತೆ, ಆರ್ಥಿಕಸಮಾನತೆ ಮತ್ತು ಕಾಯಕ ಸಮಾನತೆಯ ಆಯಾಮಗಳನ್ನು ಹೊಂದಿದ್ದು ಸಾಮಾಜಿಕ ಪರಿವರ್ತನೆಯಲ್ಲಿ ಅವುಗಳ ಪಾತ್ರಗಳ ಕುರಿತು ಬೆಳಕು ಚೆಲ್ಲಲಿದೆ.

**ವಿಶೇಷ ಪದಗಳು:** ಅಹಿಂಸಾತ್ಮಕ, ಕಾಯಕ, ಕೈಲಾಸ, ಆಂದೋಲನ, ಡಾಂಭಿಕತೆ.

**ಪೀಠಿಕೆ.**

ಭಾರತದಲ್ಲಿ ಕಾಲಕಾಲಕ್ಕೆ ಹಲವಾರು ಮಂದಿ ದಾರ್ಶನಿಕರು, ವಿಚಾರವಾದಿಗಳು, ಬುದ್ಧಿಜೀವಿಗಳು, ಸಾಧುಗಳು, ಸಂತರು, ಯೋಗಿಗಳು, ಮಹರ್ಷಿಗಳು, ಸುಧಾರಕರು, ಬರಹಗಾರರು, ಕಲಾಕಾರರು ಸಮಾಜದ ಸುಧಾರಣೆಯ ಕಾರ್ಯವನ್ನು ಕೈಗೊಂಡಿದ್ದಾರೆ. ಬಹುಶಃ ಜಗತ್ತಿನ ಬೇರಾವ ದೇಶದಲ್ಲಿಯೂ ಭಾರತದಲ್ಲಿ ಹುಟ್ಟಿ ಬಂದಷ್ಟು ದೊಡ್ಡ ಸಂಖ್ಯೆಯಲ್ಲಿ ಸುಧಾರಕರು,ಸಾಧುಗಳು,ಸಂತರು,ಮಹಂತರು ಹುಟ್ಟಿ ಬಂದಿರಲಿಕ್ಕಿಲ್ಲ ಜಡ ಭರಿತವಾದ ಸಾಮಾಜಿಕ ವ್ಯವಸ್ಥೆಗೆ ಪರಿವರ್ತನೆಯ ಚುರುಕು ಮುಟ್ಟಿಸಲು ಮತ್ತು ಕಾಲಬಾಹ್ಯವಾದ ನಂಬಿಕೆ,ಆಚರಣೆಗಳಲ್ಲಿ ಮುಳುಗಿ ವಿವೇಚನಾ ಶೂನ್ಯವಾಗಿರುವ ಜನಮಾನಸದಲ್ಲಿ

ವಿಚಾರ ಪರತೆಯ ಅಲೆಯನ್ನು ಎಬ್ಬಿಸಿ ಇವುಗಳಿಗೆ ಚಿಕಿತ್ಸೆಯನ್ನು ನೀಡಲು ಆಂದೋಲನಗಳು ಅವಶ್ಯವಾಗಿದ್ದವು.

ಭಾರತವು ಒಂದು ಬಹುಧರ್ಮೀಯರ ನಾಡು. ಇಲ್ಲಿರುವ ಮುಖ್ಯ ಧಾರ್ಮಿಕ ಪರಂಪರೆ "ಹಿಂದೂ ಪರಂಪರೆ"ಯಾಗಿದ್ದರೂ ಇದರ ಅಳವಿನಲ್ಲಿಯೇ ಹಲವಾರು ವೈವಿಧ್ಯಮಯ ಧಾರ್ಮಿಕ ಪಂಥಗಳು ಹುಟ್ಟಿಕೊಂಡಿವೆ. ಅಂತೆಯೇ ಭಾರತದಲ್ಲಿ ನಡೆದ ಧಾರ್ಮಿಕ ಆಂದೋಲನಗಳು ಹೆಚ್ಚಾಗಿ ಹಿಂದೂ ಧರ್ಮದ ವ್ಯಾಪ್ತಿಯಲ್ಲಿಯೇ ನಡೆದಂತಹವುಗಳು ಅವುಗಳಲ್ಲಿ ಕೆಲವು ಪ್ರತಿಭಟನಾತ್ಮಕ ಸ್ವರೂಪದಲ್ಲಿದ್ದರೆ ಮತ್ತೆ ಕೆಲವು ಸುಧಾರಣಾತ್ಮಕ ರೂಪದಲ್ಲಿದ್ದವು.

ಧಾರ್ಮಿಕ ಆಂದೋಲನಗಳ ಕುರಿತಂತೆ ಕರ್ನಾಟಕದ ಉದಾಹಾರಣೆಯನ್ನು ತೆಗೆದು ಕೊಳ್ಳುವುದಾದರೆ ಕ್ರಿ.ಶ ೧೨ನೇ ಶತಮಾನದಲ್ಲಿ ಬಸವೇಶ್ವರರ ನೇತೃತ್ವದಲ್ಲಿ ನಡೆದ ವೀರಶೈವ ಆಂದೋಲನವು ಬಹಳ ಪ್ರಮುಖವಾದುದು. ಭಾರತೀಯ ಧರ್ಮ, ಸಾಹಿತ್ಯ, ಸಂಸ್ಕೃತಿ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಅಗ್ರಸ್ಥಾನವನ್ನು ಗಳಿಸಿ ಕಲ್ಯಾಣವನ್ನು ಕೈಲಾಸವನ್ನಾಗಿ ಪರಿವರ್ತಿಸಿದ ಮಹಾತ್ಮ ಬಸವೇಶ್ವರರು. ಭಕ್ತಿ ಭಂಡಾರಿಯಾಗಿ, ಧಾರ್ಮಿಕ ಸುಧಾರಕರಾಗಿ, ಸಾಮಾಜಿಕ ಅಸಮಾನತೆಯನ್ನು ಪರಿರ್ವತಿಸುವಲ್ಲಿ ಬಂಡಾಯಕಾರರಾಗಿ, ಕ್ರಾಂತಿಕಾರರಾಗಿ, ಸ್ತ್ರೀ– ಪುರುಷ ಸಮಾನತೆಯ ಆಂದೋಲನದ ಹರಿಕಾರರಾಗಿ, ಶ್ರಮಗೌರವ ತತ್ವದ ಪ್ರತಿಪಾದಕರಾಗಿ ಕಾಯಕ ನಿಷ್ಠರಾಗಿ, ಸಾಮಾಜಿಕ ಚಿಂತಕರಾಗಿ ವಿಶ್ವಮಾನವರೆನಿಸಿರುವರು ಶ್ರೀ ಬಸವೇಶ್ವರರು.

ಈ ಒಂದು ಲೇಖನ ಬಸವ ಚಿಂತನೆಯ ಸಾಮಾಜಿಕ ಸಮಾನತೆಯ ವಿವಿಧ ಆಯಾಮಗಳ ಕುರಿತು ಬೆಳಕನ್ನು ಚೆಲ್ಲಿದೆ. ಲೇಖನಕ್ಕೆ ಸಂಬಧಿಸಿದ ಪೂರಕ ಮಾಹಿತಿಯನ್ನು ಮಾಧ್ಯಮಿಕ ಮೂಲಗಳಿಂದ ಪಡೆಯಲಾಗಿದೆ. ಬಸವಣ್ಣನವರು ಸಾಮಾಜಿಕ ಸಮಾನತೆಯ ಪ್ರತಿಪಾದನೆ ಮಾಡಲು ಕಾರಣ ಆ ಕಾಲದ ಸಾಮಾಜಿಕ ವ್ಯವಸ್ಥೆಯ ವಿಷಮ ಪರಿಸ್ಥಿತಿ, ಜಡ ಸಂದರ್ಭ, ಅಜ್ಞಾನ, ಅಂಧಕಾರ, ಭಯ, ಮೌಢ್ಯತೆ ಇತ್ಯಾದಿಗಳ ಆಗರ, ಜಾತಿ, ಮತ, ವರ್ಣ, ಲಿಂಗ, ಉದ್ಯೋಗಗಳಲ್ಲಿ ತಾರತಮ್ಯತೆ, ವರ್ಗಶೋಷಣೆ, ನಿರಂತರವಾಗಿ ಕಂಡುಬರುತ್ತಿದ್ದವು, ಅಂದಿನ ಸಂದರ್ಭದಲ್ಲಿ ರಾಜರು ಮತ್ತು ಪುರೋಹಿತಶಾಹಿಗಳು ಮಾಡಿದ್ದೇ ಮಾರ್ಗ ನುಡಿದಿದ್ದೆ ನಿರ್ಣಯ ಎನ್ನುವಂತಿತ್ತು. ಪುರೋಹಿತಶಾಹಿಗಳನ್ನು ಪ್ರಶ್ನಿಸುವಂತಿರಲಿಲ್ಲ. ವರ್ಣ ವ್ಯವಸ್ಥೆಯಲ್ಲಿನ ಸಾಮಾಜಿಕ ಸಮಾನತೆ ಮಾಯವಾಗಿ ಅಸಮಾನತೆ ಎದ್ದುಕಾಣುತ್ತಿತ್ತು. ವರ್ಣವ್ಯವಸ್ಥೆ ವರ್ಣಾಂಕುರಗೊಂಡ ಜಾತಿ ಭೇದಗಳಾಗಿ ಪರಿಣಮಿಸಿ ಇಡಿ ಸಮಾಜವೇ ಹೋಳು ಹೋಳಾದ ಭಾಗವಾಗಿತ್ತು. ಇಂತಹ ವಿಷಮ ಸಂದರ್ಭಗಳಲ್ಲಿ, ಸಂಕಟ ಸಮಯಗಳಲ್ಲಿ ಜನಸಮುದಾಯದ ಅಗತ್ಯಗಳಿಗೆ ಸ್ಪಂದಿಸಿ ಸದೃಢ ಸಮಾಜದ ನಿರ್ಮಾಣದ ಅಗತ್ಯಮನಗಂಡ ಬಸನಣ್ಣನವರು ರಾಜಕೀಯ, ಆರ್ಥಿಕ ಧಾರ್ಮಿಕ ಸುಧಾರಣೆಗಳಿಗೆ ಚಾಲನೆ ನೀಡಿದ್ದರು.

**ಹನ್ನೆರಡನೇ ಶತಮಾನದ ಕಾಲದಲ್ಲಿ ಕಲ್ಯಾಣ ಕರ್ನಾಟಕದ ಸಾಮಾಜಿಕ ಪರಿಸ್ಥಿತಿ.**

ಭಾರತದ ಸಾಂಸ್ಕೃತಿಕ ಪರಂಪರೆ ಬಹಳ ಪ್ರಾಚೀನವಾದುದು, ದೀರ್ಘವಾದುದು, ವ್ಯಾಪಕವಾದುದು, ಪ್ರಭಾವಿಯಾದುದು ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಸಂಕೀರ್ಣವಾದುದು. ಭಾರತದ ಸಂಸ್ಕೃತಿಯಲ್ಲಿ ಪ್ರಾಚೀನತೆಯೊಂದಿಗೆ ಹಲವಾರು ಸಮೂಹಗಳು ಪಂಥಗಳ, ಪಂಗಡಗಳ, ಮತ ಸಮೂಹಗಳ ಜೀವನ ಕ್ರಮಗಳು ಸಮಾವೇಶಗೊಂಡಿರುವುದನ್ನು ಕಾಣಬಹುದು. ಭೌಗೋಳಿಕವಾಗಿ ದೇಶದಲ್ಲಿ ಅಸಂಖ್ಯವಾದ ವ್ಯತ್ಯಾಸಗಳನ್ನು ಕಾಣುತ್ತೇವೆ. ಅಭೇದ್ಯವಾದ ಪರ್ವತಶ್ರೇಣಿಗಳು, ದುರ್ಗಮವಾದ ಕಾಡುಗಳು, ವಿಸ್ತಾರವಾದ ಸಮುದ್ರಗಳು, ಅಸಂಖ್ಯ ನದಿಗಳು, ಬೃಹತ್ ಕಣಿವೆಗಳು, ಬೆಟ್ಟಗುಡ್ಡಗಳು, ಮರುಭೂಮಿ, ಫಲವತ್ತಾದ ಪ್ರದೇಶಗಳು ಸಮತಟ್ಟಾದ ಭೂಪ್ರದೇಶಗಳು, ಭಾರೀ ಮಳೆಯಿಂದ ಪ್ರವಾಹಗಳಿಗೆ ಈಡಾಗುವ ಹಾಗೂ ಮಳೆಯೇ ಇಲ್ಲದೆ ಕ್ಷಾಮದ ಬೇಗೆಗೆ ತುತ್ತಾಗುವ

ಪ್ರದೇಶಗಳನ್ನು ಕಾಣಬಹುದು. ಸಮಾಜದಲ್ಲಿ ಯಾವತ್ತೂ ಪರಿಪೂರ್ಣವಾದ ವ್ಯವಸ್ಥೆ ರೂಪುಗೊಂಡಿರುವುದಿಲ್ಲ. ಪರಿಪೂರ್ಣತೆಯ ಸಮಾಜ ಅಸಾಧ್ಯವಾದುದು. ಸಾಮಾಜಿಕ ಸಮಸ್ಯೆಗಳು ಕಾಲ, ದೇಶ, ಸನ್ನಿವೇಶ, ಪರಿಸರ ಮತ್ತು ಮೌಲ್ಯಗಳಿಗೆ ಅನುಗುಣವಾಗಿ ಪರಿವರ್ತಿತವಾಗುತ್ತಾ ಇರುತ್ತವೆ.. ಸಮಸ್ಯೆ ರಹಿತ ಸಮಾಜ ಆದರ್ಶ ಕಲ್ಪನೆಯಾಗಿದೆ ಹೊರತು ವಾಸ್ತವಿಕವಾಗಿ ಸಾಧ್ಯವಿಲ್ಲ. ಅಂತೆಯೇ ವೀರಶೈವ ಆಂದೋಲನದ ಪ್ರವರ್ತಕರಾದ ಬಸವೇಶ್ವರರ ಕಾಲಕ್ಕೂ ಮುಂಚೆ ನಮ್ಮ ನಾಡಿನ ಅದರಲ್ಲೂ ಮುಖ್ಯವಾಗಿ ಕರ್ನಾಟಕದ ಸಾಮಾಜಿಕ ಹಾಗೂ ಧಾರ್ಮಿಕ ಪರಿಸ್ಥಿತಿ ತೀರಾ ಅತೃಪ್ತಿದಾಯಕವೂ ಮತ್ತು ಗೊಂದಲಮಯವಾಗಿತ್ತು. ವರ್ಣ ವ್ಯವಸ್ಥೆಯು ಜಾತಿ ಪದ್ಧತಿಗೆ ಕಾರಣವಾಗಿ ಜಾತಿ–ಜಾತಿಗಳ ನಡುವಿನ ಅಸಮಾನತೆ ಮೇರೆ ಮೀರಿತ್ತು. ಉಚ್ಚ– ನೀಚ, ಮೇಲು– ಕೀಳು, ಸ್ಪರ್ಶ ಮತ್ತು ಅಸ್ಪರ್ಶ, ಪವಿತ್ರ–ಅಪವಿತ್ರ ಎಂಬ ವ್ಯತ್ಯಾಸಗಳು ಶೋಷಣೆ ಮತ್ತು ಹಿಂಸಾಚಾರಕ್ಕೆ ಕಾರಣವಾಗಿದ್ದವು. ವಿಧಿನಿಷೇದಗಳಿಂದ ಸಮಾಜದ ಬಹುದೊಡ್ಡ ವರ್ಗವೊಂದು ಅಸಹನೀಯವಾದ ನೋವಿನಿಂದ ಜೀವನ ನಡೆಸುವಂತಾಗಿತ್ತು.

ಕಲ್ಯಾಣ ಕರ್ನಾಟಕವು ಸ್ವಾತಂತ್ರ್ಯ ಪೂರ್ವದಲ್ಲಿ ನಿಜಾಮರ ಆಳ್ವಿಕೆ ಮತ್ತು ಬ್ರಿಟೀಷ್ ಆಳ್ವಿಕೆಯ ಮದ್ರಾಸ್ ಪ್ರಾಂತ್ಯಕ್ಕೆ ಒಳಪಟ್ಟ ಪ್ರದೇಶವಾಗಿದೆ. ಈ ಒಂದು ಪ್ರದೇಶವು ಬೀದರ್, ಯಾದಗಿರಿ, ರಾಯಚೂರು, ಕೊಪ್ಪಳ, ಗುಲ್ಬರ್ಗ, ಬಳ್ಳಾರಿ ಮತ್ತು ವಿಜಯನಗರ ಜಿಲ್ಲೆಗಳನ್ನು ಒಳಗೊಂಡಿದೆ. ಸ್ವಾತಂತ್ರ್ಯ ದೊರೆತ ಏಳು ದಶಕಗಳು ಕಳೆದರೂ ಇನ್ನೂ ಕೂಡ ಅಭಿವೃದ್ಧಿ ಮರೀಚಿಕೆಯಾಗಿ ಉಳಿದಿರುವ ಪ್ರದೇಶಗಳಲ್ಲಿ ಒಂದಾಗಿರುವ ಇತಿಹಾಸದುದ್ದಕ್ಕೂ ಹಲವಾರು ರೀತಿಯ ಸಾಮಾಜಿಕ ಪಿಡುಗುಗಳಿಂದ ಬಂದಿಸಲ್ಪಟ್ಟ ಪ್ರದೇಶವಾಗಿದೆ. ೧೨ ನೇಯ ಶತಮಾನದ ಕಾಲದಲ್ಲಿ ಸಾಮಾಜಿಕ–ಆರ್ಥಿಕ ಸ್ಥಿತಿಗತಿಯನ್ನು ಗಮನಿಸಿದರೆ ಜಡತ್ವದಿಂದ ಕೂಡಿದ ಮೂಢನಂಭಿಕೆಗಳು ಮತ್ತು ಸಾಮಾಜಘಾತುಕ ಅಂಶಗಳು ಚಾಲ್ತಿಯಲ್ಲಿದ್ದವು. ಧನಿಕ ಮತ್ತು ಬಡವರ ನಡುವಿನ ಅಂತರ ಬಹಳವಾಗಿ ಬಡವರು ಶೋಷಣೆಗೆ ಒಳಗಾಗುತ್ತಿದ್ದರು. ಸಮಾಜದ ಅತ್ಯಂತ ಕೆಟ್ಟದಾದ ಆಚರಣೆ ಅಸ್ಪ್ರಶ್ಯತೆ ಜಾರಿಯಲ್ಲಿತ್ತು. ಅಲ್ಲದೇ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯ ಸ್ಥಿತಿ ಅತ್ಯಂತ ಶೋಚನೀಯವಾಗಿತ್ತು. ಇಂತಹ ಸಂದರ್ಭದಲ್ಲಿ ಆಧುನಿಕ ಪರಿಕಲ್ಪನೆಯಾದ ಸರ್ವೋದಯದ ಬೀಜವನ್ನು ಬಿತ್ತಿ ಸಾಮಾಜಿಕ ಕ್ರಾಂತಿಗೆ ಕಾರಣವಾದ ಬಸವೇಶ್ವರ ಚಿಂತನೆಗಳು ಈ ಭಾಗದ ಸಾಮಾಜಿಕ ಪರಿವರ್ತನೆಗೆ ಚಾಲನೆ ನೀಡಿದವು.

**ಬಸವ ಚಿಂತನೆಯ ಸಾಮಾಜಿಕ ಸಮಾನತೆಯ ವಿವಿಧ ಆಯಾಮಗಳು.**

ಬಸವೇಶ್ವರರು ಕೈಗೊಂಡ ಸುಧಾರಣಾಕಾರ್ಯಗಳು ಬಹಳ ವೈಚಾರಿಕತೆಯಿಂದ ಕೂಡಿದ್ದವು. ವ್ಯಕ್ತಿಯು ಸಮಾಜದ ಒಂದು ಭಾಗ, ಸಮಾಜ ವ್ಯಕ್ತಿ ಜೀವನದಷ್ಟೇ ಪ್ರಧಾನವಾದುದು. ವ್ಯಕ್ತಿತ್ವ ಬೆಳವಣಿಗೆಗೆ ಸ್ವಾಸ್ಥ ಸಮಾಜ ತೀರಾ ಅಗತ್ಯವಿದೆ. ಮನುಷ್ಯನ ಮನಸ್ಸಿನ ವಿಚಾರಗಳ ಮಜಲಿನಂತೆ, ಸಾಮಾಜಿಕ ರಚನೆಯಲ್ಲಿಯೂ ಕಟ್ಟು–ಪಾಡುಗಳು ಓರೆ–ಕೋರೆಗಳು, ನ್ಯಾಯ–ಅನ್ಯಾಯಗಳಿಂದ ಆವೃತವಾಗಿವೆ. ಇದರಿಂದ ಸಮಾಜ ಜೀವನವು ಅಶುದ್ಧವಾಗುತ್ತದೆ. ಹೀಗಾಗಿ ಆತ್ಮಶುದ್ಧಿಗೆ ಓಗೊಟ್ಟು ಸಮಾಜಶುದ್ಧಿಯತ್ತ ವಿಸ್ತಾರಗೊಳ್ಳುವುದೆ ಸಮಾನತೆಯನ್ನು ತರುವುದಾಗಿದೆ ಎಂಬುದು ಬಸವಣ್ಣನವರ ವಿಚಾರವಾಗಿತ್ತು. ಬಸವಣ್ಣನವರ ಮುಖ್ಯ ಉದ್ದೇಶ ಸಾಮಾಜಿಕ ಸುಧಾರಣೆಯೇ ಆಗಿತ್ತು. ಅವರ ಆ ಪ್ರಯತ್ನದಲ್ಲಿಯೇ ಹೊಸದೊಂದು ಧಾರ್ಮಿಕ ಪಂಥವಾಗಿ "ವೀರಶೈವಮತ" ವಿಕಾಸಗೊಂಡಿತು. ತನ್ನ ವಿಚಾರಧಾರೆಗಳ ತ್ವಾತಿಕ ಚರ್ಚೆ ನಡೆಸಲು "ಅನುಭವ ಮಂಟಪ"ವನ್ನು ಸ್ಥಾಪಿಸಿ ಜಾತಿ, ಮತ, ಪಂಥ, ಪಂಗಡಗಳ ಭೇದವಿಲ್ಲದೆ "ಅಸ್ಪೃಶ್ಯರ" ಸಹಿತವಾಗಿ ಎಲ್ಲರೂ ಭಾಗವಹಿಸುವಂತೆ ಮಾಡಿದ ಬಸವಣ್ಣನವರ ಸಾಮಾಜಿಕ ಸುಧಾರಣೆಗಳನ್ನು ಈ ಕೆಳಗಿನಂತೆ ನೋಡಬಹುದು.

**ಜಾತಿ–ವರ್ಗಗಳಿಂದ ಮುಕ್ತವಾದ ಸಮಾಜದ ರಚನೆಗೆ ಪ್ರಯತ್ನ.**

ಭಾರತೀಯ ಸಮಾಜವು ಜಾತಿ ಪದ್ದತಿಯ ಆಧಾರದ ಮೇಲೆ ಅಸಮಾನೆಗೊಂಡಿದೆ. ಇದರ ಪರಿಣಾಮ ಪರಸ್ಪರರಲ್ಲಿ ದ್ವೇಷ, ಅಸೂಯೆ ಹಾಗು ಸಂಘರ್ಷಾತ್ಮಕ ಮನೋಭಾವನೆಗಳು ತಲೆದೋರುತ್ತವೆ. ಬಸವಣ್ಣನವರ ಚಿಂತನೆಗಳು ವರ್ಗರಹಿತ ಹಾಗೂ ಜಾತಿ ರಹಿತ ಸಮಾಜದ ಸ್ಥಾಪನೆಯ ಉದ್ದೇಶಗಳನ್ನು ಹೊಂದ್ದಿದ್ದವು. ಈ ಚಿಂತನೆಯು ಸಾಮಾಜಿಕ ಅಸಮಾನತೆಗಳ ಮತ್ತು ಪುರೋಹಿತಶಾಹಿ ಹಿಂದೂ ಧರ್ಮದ ಜಾತಿಯ ಏಣಿ– ಶ್ರೇಣಿ ವ್ಯವಸ್ಥೆಯ ವಿರುದ್ಧ ಬಂಡೆದ್ದು ನಿಲ್ಲುವಂತೆ ಮಾಡಿತು. ಮೇಲ್ಜಾತಿಗಳಿಂದ ಕೆಳಜಾತಿಗಳ ಶೋಷಣೆಗಲಾಗುತ್ತಿದ್ದುದನ್ನು ಬಸವಣ್ಣನವರು ಸಹಿಸಲಿಲ್ಲ. ಜಾತಿವ್ಯವಸ್ಥೆಯ ಭಾಗವಾಗಿದ್ದ ಅಸ್ಪ್ರಶ್ಯತೆಯನ್ನು ಅವರು ಬಲವಾಗಿ ಖಂಡಿಸಿ ಸದಾಚಾರ ಮತ್ತು ಸನ್ನಡತೆಗೆ ಪ್ರಾಮುಖ್ಯತೆಯನ್ನು ನೀಡಿದರು. ಸಮಾಜದಲ್ಲಿ ಮೇಲು–ಕೀಳು ಎಂಬ ಭೇದ ಸಲ್ಲದೆಂದು ಹೇಳಿದ ಅವರು ಹುಟ್ಟಿನಲ್ಲಿ ಬ್ರಾಹ್ಮಣರಿರಲಿ ಅಂತ್ಯಜರಿರಲಿ ಎಲ್ಲರೂ ಸಮಾನರು ಎಂದು ತಿಳಿಯಪಡಿಸುವುದರೊಂದಿಗೆ ಜಾತಿ–ವರ್ಗಗಳಿಂದ ಮುಕ್ತವಾದ ಸಮಾಜದ ನಿರ್ಮಾಣಕ್ಕೆ ಒತ್ತು ನೀಡಿದರು.

**ಕಾಯಕ/ವೃತ್ತಿಯಲ್ಲಿ ಸಮಾನತೆ ಬಗ್ಗೆ ಒತ್ತಾಸೆ.**

ಬಸವಣ್ಣನವರ ದೃಷ್ಟಿಯಲ್ಲಿ ಕಾಯಕ ಮೇಲು ಕೀಳೆಂಬ ಭೇದವಿಲ್ಲ, ಆದರೆ ಮಾಡುವ ಕೆಲಸ ನ್ಯಾಯ ಸಮ್ಮತಿಯಾಗಿರಬೇಕು. ನಿಷ್ಠೆಯಿಂದ ಕೂಡಿರಬೇಕು, ಪ್ರಾಮಾಣಿಕವಾಗಿರಬೇಕು ಮತ್ತು ಸತ್ಯಶುದ್ಧವಾಗಿರಬೇಕು ಎಂಬುದಾಗಿತ್ತು. ಎಲ್ಲಾ ವೃತ್ತಿಗೂ ಒಂದು ವಿಶಿಷ್ಟವಾದ ಸ್ಥಾನವಿರುವುದರಿಂದ ನೈತಿಕ ಕಟ್ಟುಪಾಡುಗಳಿಗೆ ಬದ್ಧವಾದ ಯಾವುದೇ ಬಗೆಯ ಮಾನವ ಶ್ರಮವನ್ನು ಗೌರವಿಸಬೇಕು ಎಂದು ಕಾಯಕ ಶ್ರಮದ ಸಮಾನತೆಯ ತತ್ವವನ್ನು ಪ್ರಚಾರ ಮಾಡಿದರು. ಸ್ತ್ರೀಯಿರಲಿ, ಪುರುಷನಿರಲಿ ತಮಗಿಷ್ಟವಾದ ಕೆಲಸವನ್ನು ಆಯ್ಕೆ ಮಾಡುವ ಸ್ವಾತಂತ್ರವನ್ನು ಬಸವೇಶ್ವರರು ನೀಡಿದ ಫಲವಾಗಿ ಆರ್ಥಿಕ ಬೆಳವಣಿಗೆಗೆ ಕಾರಣವಾಯಿತು.

**ಲಿಂಗ ಸಮಾನತೆ/ಸ್ತ್ರೀ ಸ್ವಾತಂತ್ರ್ಯದ ಪ್ರತಿಪಾದನೆ.**

ಮಾತೃದೇವೋಭವ ಎಂದು ಆರಾಧಿಸುವ ಈ ನಾಡಿನಲ್ಲಿ ಮಹಿಳೆಯನ್ನು ಸರಳೀಕರಣಗೊಳಿಸುವ ಸಂಸ್ಕ್ರತಿ ಅವಳ ಅಂತ:ಸತ್ವವನ್ನು ನಾಶಮಾಡಿದೆ. ಹಿಂದಿನ ಕಾಲದಿಂದಲೂ ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯರನ್ನು ಅವಗಣನೆ ಮಾಡುವ ಪರಂಪರೆಯಿಂದ, ಸ್ತ್ರೀಯರು ಪುರುಷರ ಅವಲಂಬಿಗಳಾಗಿ, ಅಡಿಯಾಳಾಗಿ ಯಾವುದೇ ಹೆಚ್ಚಿನ ಸ್ವಾತಂತ್ರ್ಯಗಳಿಲ್ಲದೆ ವಾಸಿಸಬೇಕಾಗಿದ್ದ ದಿನಗಳನ್ನು ಗುರುತಿಸಿದ ಬಸವೇಶ್ವರರು ಸ್ತ್ರೀ ಸ್ವಾತಂತ್ರ್ಯ ಮತ್ತು ಸಮಾನತೆಯ ತತ್ವಗಳನ್ನು ಪ್ರತಿಪಾದನೆ ಮಾಡಿದರು. ಗಂಡು–ಹೆಣ್ಣು ಎನ್ನುವುದು ಕೇವಲ ಬಾಹ್ಯ ಭೇದವೇ ಹೊರತು ಆಂತರಿಕ ಭಿನ್ನತೆಗಳಲ್ಲ ಎಂದು ಹೇಳುವುದರ ಮೂಲಕ ಸ್ತ್ರೀಯರಿಗೆ ಮುಕ್ತವಾದ ಅವಕಾಶ ಕಲ್ಪಿಸಿಕೊಟ್ಟರು. ಮಹಿಳೆಯರಿಗೆ ಸಾಮಾಜಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯದ ಬಗ್ಗೆ ಒತ್ತಾಯಿಸಿದ ಬಸವಣ್ಣನವರು ವಿಧವಾ ಪುನರ್ ವಿವಾಹಕ್ಕೆ ಅವಕಾಶವನ್ನು ನೀಡಬೇಕೆಂದು ಪ್ರತಿಪಾದಿಸಿದರು. ಸ್ತ್ರೀಯರಿಗೂ ಕೂಡ ಪುರುಷರಂತೆ ಧಾರ್ಮಿಕ ವಿಚಾರಗಳಲ್ಲಿ ಮುಕ್ತ ಚರ್ಚೆಮಾಡಲು ಅವಕಾಶ ನೀಡುವಂತೆ ಒತ್ತಾಯಿಸಿದರು ಒಟ್ಟಾರೆ ವೈಜ್ಞಾನಿಕ ಆಧಾರಕ್ಕೆ ಅಂಟಿರುವ ಬಸವೇಶ್ವರರು ಸ್ತ್ರೀ–ಪುರುಷರ ಸಮಾನತೆನ್ನು ಸಾಧಿಸಿ ಮಹಿಳೆಯರ ಸ್ಥಾನಮಾನವನ್ನು ಎತ್ತರಿಸಲು ಅವರು ಕೈಗೊಂಡ ಪ್ರಯತ್ನಗಳು ಬಹಳ ವಿಶೇಷವಾದದ್ದು.

**ಸಾಂಪ್ರದಾಯಿಕತೆ, ಮೂಢನಂಬಿಕೆಗಳು ಮತ್ತು ಕಂದಾಚಾರಗಳನ್ನು ಕಿತ್ತೆಸೆಯಲು ಕರೆ.**

ಸಮಾಜದಲ್ಲಿ ಗಾಢವಾಗಿ ಮನೆಮಾಡಿದ್ದ ಸಾಂಪ್ರದಾಯಿಕತೆ, ಮೂಢನಂಬಿಕೆಗಳು ಮತ್ತು ಕಂದಾಚಾರಗಳು ಜನರನ್ನು ವೈಜ್ಞಾನಿಕ ದೃಷ್ಟಿಕೋನದಿಂದ ದೂರುವಿರಲು ಕಾರಣವಾಗಿದ್ದವು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಎಲ್ಲಾ ಬಗೆಯ ಕೆಟ್ಟ ಆಚರಣೆಗಳನ್ನು ಕೈ ಬಿಡಲು ಮತ್ತು ವಿಚಾರ ರಹಿತ,

ಆಧಾರರಹಿತ, ಹಾಗೂ ತರ್ಕ ರಹಿತವಾದ ಗೊಡ್ಡು ನಂಬಿಕೆಗಳನ್ನು ತೊಡೆದು ಹಾಕಲು ಬಸವಣ್ಣನವರು ಕರೆ ನೀಡಿದರು. ಮೌಢ್ಯತೆ, ಸಂಪ್ರದಾಯ ಶರಣತೆ ಮತ್ತು ಶೂನ್ಯತೆಗಳು ವಿಜೃಂಭಿಸುತ್ತಿದ್ದ ದಿನಗಳಲ್ಲಿ ಬಸವೇಶ್ವರರು ತಮ್ಮ ಅನುಭವ ಮಂಟಪದ ಮೂಲಕ ಅನುಭವಿಗಳು, ಹಿರಿಯರ ಜೊತೆ ಚರ್ಚಿಸಿ ಅವುಗಳನ್ನು ಮೆಟ್ಟಿನಿಲ್ಲಲು ಕರೆಯಿತ್ತರು.

**ಅಸ್ಪೃಶ್ಯತೆಯ ನಿವಾರಣೆಗೆ ಪ್ರಯತ್ನ.**

ಭಾರತೀಯ ಸಮಾಜದಲ್ಲಿ ಅಸ್ಪೃಶ್ಯತೆಯ ಆಚರಣೆಗೆ ಸುಮಾರು ಎರಡು ಸಾವಿರದ ಐದುನೂರು ವರ್ಷಗಳ ಇತಿಹಾಸವಿದೆ. ಅಸ್ಪೃಶ್ಯತೆಯು ಅಮಾನವೀಯವಾದುದು. ಮಾನವರ ಮಧ್ಯೆ ಗೋಡೆಗಳನ್ನು ನಿರ್ಮಿಸುವಲ್ಲಿ ಅಸ್ಪ್ರತೆಯು ಕಾರಣವಾಗಿದೆ. ಜಾತಿ ಪದ್ದತಿಯ ಏಣಿಶ್ರೇಣಿಯ ವ್ಯವಸ್ಥೆಯಲ್ಲಿ ಅಸ್ಪ್ರಶ್ಯರಿಗೆ ಅತ್ಯಂತ ಕೆಳಮಟ್ಟದ ಸ್ಥಾನವನ್ನು ನೀಡಲಾಗಿತ್ತು. ಮಾನವ ಸ್ಪರ್ಶಕ್ಕೂ ಯೋಗ್ಯರಲ್ಲದವರೆಂದು ಪರಿಗಣಿತವಾಗಿ ಸಾಮಾನ್ಯ ಸಾಮಾಜಿಕ ಸಂಪರ್ಕದಿಂದ ಹಲವಾರು ಬಗೆಯ ಅನರ್ಹತೆಗಳಿಂದ ನರಳಾಡಿದ ಒಂದು ವರ್ಗವು ಅಮಾನವೀಯ ಪರಿಸರದಲ್ಲಿ ಬದುಕಬೇಕಾದ ಪರಿಸ್ಥಿತಿ ಇತ್ತು. ೧೨ನೇ ಶತಮಾನದಲ್ಲಿಯೂ ಆಚರಣೆಯಲ್ಲಿದ್ದ ಜಾತಿಪದ್ಧತಿಗೆ ಅಂಟಿಕೊಂಡಿರುವ ಬಹು ದೊಡ್ಡ ಅನಿಷ್ಟ ಪದ್ಧತಿಯಾಗಿರುವ ಅಸ್ಪೃಶ್ಯತೆಯ ವಿರುದ್ಧ ಮೌನಕ್ರಾಂತಿಯನ್ನು ಬಸವೇಶ್ವರರು ನಡೆಸಿದರು. ತಮ್ಮ ವಿಚಾರಧಾರೆಗಳಲ್ಲಿ ಅಸ್ಪೃಶ್ಯತೆಯು ಒಂದು ಮಹಾಪಾಪ ಎಂಬುದನ್ನು ಮನವರಿಕೆ ಮಾಡಿಕೊಟ್ಟವರು ಬಸವೇಶ್ವರರು, ಅಸ್ಪೃಶ್ಯರಿಗೆ ಸಮಾನವಾದ ಧಾರ್ಮಿಕ, ಶೈಕ್ಷಣಿಕ, ಆರ್ಥಿಕ ಹಕ್ಕುಗಳು ಮತ್ತು ಅವಕಾಶಗಳು ದೊರಕುವಂತಾಗಬೇಕೆಂದು ಅವರು ಆಗ್ರಹ ಪಡಿಸಿದರು. ಅಂತರ್ಜಾತೀಯ ವಿವಾಹಗಳಿಗೆ ಪ್ರೋತ್ಸಾಹವನ್ನು ನೀಡಿದ ಬಸವಣ್ಣನವರು ಅಸ್ಪೃಶ್ಯತೆಯ ನಿವಾರಣೆಗೆ ಅಸಾಮಾನ್ಯವಾಗಿ ಪ್ರಯತ್ನಗಳನ್ನು ಕೈಗೊಂಡವರು.

**ಉಪಸಂಹಾರ :**

ಬಸವಣ್ಣನವರ ಕಾಲದಲ್ಲಿ ಕಲ್ಯಾಣ ಕರ್ನಾಟಕದ ಸಾಮಾಜಿಕ ಹಾಗೂ ಧಾರ್ಮಿಕ ಪರಿಸ್ಥಿತಿ ತೀರಾ ಅತೃಪ್ತಿದಾಯಕವೂ ಮತ್ತು ಗೊಂದಲಮಯವಾಗಿತ್ತು. ವರ್ಣ ವ್ಯವಸ್ಥೆಯು ಜಾತಿ ಪದ್ಧತಿಗೆ ಕಾರಣವಾಗಿ ಜಾತಿ-ಜಾತಿಗಳ ನಡುವಿನ ಅಸಮಾನತೆ ಮೇರೆ ಮೀರಿತ್ತು. ಉಚ್ಚ- ನೀಚ, ಮೇಲು- ಕೀಳು, ಸ್ಪರ್ಶ ಮತ್ತು ಅಸ್ಪರ್ಶ, ಪವಿತ್ರ-ಅಪವಿತ್ರ ಎಂಬ ವ್ಯತ್ಯಾಸಗಳು ಶೋಷಣೆ ಮತ್ತು ಹಿಂಸಾಚಾರಕ್ಕೆ ಕಾರಣವಾಗಿದ್ದವು. ವಿಧಿನಿಷೇದಗಳಿಂದ ಸಮಾಜದ ಬಹುದೊಡ್ಡ ವರ್ಗವೊಂದು ಅಸಹನೀಯವಾದ ನೋವಿನಿಂದ ಜೀವನ ನಡೆಸುವಂತಾಗಿತ್ತು. ಹೀಗಾಗಿ ಆತ್ಮಶುದ್ಧಿಗೆ ಓಗೊಟ್ಟು ಸಮಾಜಶುದ್ಧಿಯತ್ತ ವಿಸ್ತಾರಗೊಳ್ಳುವುದೆ ಸಮಾನತೆಯನ್ನು ತರುವುದಾಗಿದೆ ಎಂಬುದು ಬಸವಣ್ಣನವರ ವಿಚಾರವಾಗಿತ್ತು. ಅವರ ಆ ಪ್ರಯತ್ನದಲ್ಲಿಯೇ ಹೊಸದೊಂದು ಧಾರ್ಮಿಕ ಪಂಥವಾಗಿ "ವೀರಶೈವಮತ" ವಿಕಾಸಗೊಂಡಿತು. ತನ್ನ ವಿಚಾರಧಾರೆಗಳ ತ್ವಾತಿಕ ಚರ್ಚೆ ನಡೆಸಲು "ಅನುಭವ ಮಂಟಪ"ವನ್ನು ಸ್ಥಾಪಿಸಿ ಜಾತಿ, ಮತ, ಪಂಥ, ಪಂಗಡಗಳ ಭೇದವಿಲ್ಲದೆ "ಅಸ್ಪೃಶ್ಯರ" ಸಹಿತವಾಗಿ ಎಲ್ಲರೂ ಭಾಗವಹಿಸುವಂತೆ ಮಾಡಿದವರು. ಬಸವಣ್ಣನವರ ಚಿಂತನೆಗಳು ಸರ್ವೋದಯದ ಕಲ್ಪನೆಗಳಾದ ಎಲ್ಲರ ಏಳಿಗೆ, ಎಲ್ಲರ ವಿಕಾಸ, ಎಲ್ಲರ ಉತ್ಕರ್ಷ, ಅಂತಿಮವಾಗಿ ಮನುಷ್ಯನ ಉದ್ಧಾರ ಎನ್ನುವ ಅಂಶಗಳನ್ನು ಒಳಗೊಂಡಿತ್ತು. ಸಮಾನತೆ, ಸಮನ್ವಯತೆ, ಸಾಮರಸ್ಯ ಮತ್ತು ಧಾರ್ಮಿಕ ಜಾಗೃತಿ ಮೂಡಿಸಿ ಜಾತಿ ಸಮಾನತೆ, ವರ್ಗ ಸಮಾನತೆ, ಕಾಯಕ ಸಮಾನತೆ, ಲಿಂಗ ಸಮಾನತೆಗಳನ್ನು ಪ್ರತಿಪಾದಿಸಿದ ಬಸವಣ್ಣನವರ ಚಿಂತನೆಗಳಿಗೆ ಭಾರತೀಯ ಸಾಮಾಜಿಕ ಚಿಂತನೆಯಲ್ಲಿ ಒಂದು ವಿಶಿಷ್ಟ ಸ್ಥಾನವಿದೆ.

**ಆಧಾರ ಗ್ರಂಥಗಳು.**


- ಚ. ನ. ಶಂಕರ್ ರಾವ್. ೨೦೧೩, ಭಾರತೀಯ ಸಮಾಜ, ಜೈ ಭಾರತ್ ಪ್ರಕಾಶನ ಮಂಗಳೂರು.
- ರಾಮಚಂದ್ರ ಜೋಷಿ. ೨೦೧೧, ಸಮಗ್ರ ಸಮಾಜಶಾಸ್ತ್ರ, ಸಿದ್ದಲಿಂಗೇಶ್ವರ ಪ್ರಕಾಶನ ಗುಲ್ಬರ್ಗ.
- ಚ. ನ. ಶಂಕರ್ ರಾವ್. ೨೦೧೩, ಸಾಮಾಜಿಕ ಆಂದೋಲನಗಳ ಪಕ್ಷಿನೋಟ, ಜೈ ಭಾರತ್ ಪ್ರಕಾಶನ ಮಂಗಳೂರು.
- ಫಾಲಾಕ್ಷ. ೨೦೦೭, ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಶಶಿ ಪ್ರಕಾಶನ ತಿಪಟೂರು.
- ಡಾ.ಬಸವರಾಜ ಎನ್. ಅಕ್ಕಿ. ೨೦೧೮, ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ, ಸೋಮೇಶ್ವರ ಪಬ್ಲಿಕೇಶನ್ಸ್, ಧಾರವಾಡ.




# ವಚನ ಕಲ್ಯಾಣ.

**–ಡಾ. ಮಂಜುಳಾ ಹುಲ್ಲಹಳ್ಳಿ,**
ಉಪನಿರ್ದೇಶಕಿ,
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ,
ಜಿಲ್ಲಾ ಶತಮಾನೋತ್ಸವ ಕ್ರೀಡಾಂಗಣ,
ಜ್ಯೋತಿನಗರ, ಚಿಕ್ಕಮಗಳೂರು.

ಗುಲ್ಬರ್ಗಾ, ಹುಮನಬಾದ್, ಅಳಂದ, ಭಾಲ್ಕಿ ಮಣ್ಣುಗಳಿಂದ ಸುತ್ತುವರಿದ ಕಲ್ಯಾಣದ ಪರಿಯೇ ವಿಶಿಷ್ಟ. ಬೆಣ್ಣೆತ್ತೊರೆ, ಗಂಡೋರಿ, ಮುಲ್ಲಮಾರಿ, ಚುಳುಕಿ ನದಿಗಳ ಜೀವಜಲದ ಅನುರಾಗವನ್ನು ದಕ್ಕಿಕೊಂಡಿದ್ದ ತಾಣವಿದು. ಜೋಳ, ಸಜ್ಜೆ, ಶೇಂಗಾ, ಭತ್ತ, ಕಬ್ಬು, ತೊಗರಿ, ಹತ್ತಿ, ತೈಲಬೀಜಗಳ ಬೆಳೆಗೆ ಪೂರಕವಾದ ಫಲವತ್ತಾದ ಕೆಂಪು ಮಿಶ್ರಿತ ಕಪ್ಪು ಮಣ್ಣಿನ ಪ್ರದೇಶದ ಸೊಬಗೇ ಸೊಬಗು. ಇದರ ಜೊತೆಗೆ ಐತಿಹಾಸಿಕ ವಾಗಿಯೂ ಸಮೃದ್ಧ ಮಾಹಿತಿಗಳನ್ನು ತನ್ನೊಳಗಿರಿಸಿಕೊಂಡಿರುವ ' ಕಲ್ಯಾಣ' ಶಬ್ದದಲ್ಲಿರುವ ಮಧುರ್ಯವೇ ಸಾಕು , ಆಯೆಡೆಗೆ ಒಮ್ಮೆಲೆ ಮನಸ್ಸು ಆಕರ್ಷಗೊಳ್ಳುತ್ತದೆ. ಹಾಗಿರುವಾಗ, ಒಂದು ಕಾಲದಲ್ಲಿ 'ಅಪೂರ್ವ ದರ್ಶನ'ದ ಆಡುಂಬೊಲವಾಗಿ, ಎಲ್ಲ ದಾರಿಗಳನ್ನೂ ತನ್ನೆಡೆಗೆ ಸೆಳೆದುಕೊಂಡಿದ್ದ ಒಂದು ವಿಶಿಷ್ಟ ಪಟ್ಟಣದ ಬಗೆಗೆ ಯೋಚಿಸುವುದೆಂದರೆ..!

ಹಳೇ–ಹೊಸ ಶಿಲಾಯುಗದ ಜನಜೀವನದ ಪ್ರಾಚ್ಯ ವಸ್ತುಗಳನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡಿರುವ ಈ ಕಲ್ಯಾಣ ಹತ್ತನೇ ಶತಮಾನದ ಉತ್ತರಾರ್ಧದಲ್ಲಿ ತನ್ನನ್ನು ಅರಸಿಕೊಂಡು ಬಂದ ಚಾಲುಕ್ಯರ ವಂಶಕ್ಕೆ ತನ್ನ ಹೆಸರನ್ನೇ ಕೊಟ್ಟು ಬೆಳಸಿದ ಮಮತಾಮಯಿ. ವ್ಯಾಪಾರ ಕೇಂದ್ರವಾಗಿ, ಸಾಂಸ್ಕೃತಿಕ ಸಂಪನ್ನವಾಗಿ, ಶೈವ ವೈಷ್ಣವ ಜೈನ ಧರ್ಮದ ಕೇಂದ್ರವಾಗಿ ಹೆಸರುವಾಸಿಯಾದ ಈ 'ಕಲ್ಯಾಣ'ದ ಚಿತ್ರ ನಂತರ ೧೨ನೇ ಶತಮಾನದಲ್ಲಿ ಅಭೂತಪೂರ್ವ ಯಶಸ್ಸು ಕಂಡಿತು.

ಶಿವಾಚಾರವನ್ನು ಭೂಮಿಯಲ್ಲಿ ಬಿತ್ತಿ ಬೆಳೆದ; ಎಲ್ಲೆಲ್ಲೂ ಶಿವಭಕ್ತಿಯ ಧ್ವಜವನ್ನು ಹಾರಿಸಿದ; ಮರ್ತ್ಯ ಲೋಕದಲ್ಲಿ ಶಿವಭಕ್ತಿಯ ಸಾರವನ್ನು ಹರಡಿದ; ಯೋಗ ಕರ್ಮ ಭಕ್ತಿ ಜ್ಞಾನ ಮುಂತಾದ ಬೇರೆ ಬೇರೆ ಹಾದಿಗಳನ್ನು ಕೂಡಿಸಿ ಶಿವಭಕ್ತಿಯ ಒಂದು ಸರಳ ಹಾದಿಯನ್ನು ರೂಪಿಸಿದ ಬಸವಣ್ಣನ ಪ್ರವೇಶದಿಂದ ಕಲ್ಯಾಣದ ಭಾಗ್ಯರೇಖೆ ಬದಲಾಯಿತು. ಯಾವೊಂದು ಸಂಗತಿಯೂ ತನಗೆ ತಾನೇ ಪರಿಪೂರ್ಣವಲ್ಲ. ಅಗತ್ಯವಿರುವ ಹಲವು ಅಂಶಗಳು ಏಕತ್ರಗೊಂಡಾಗ ಮಾತ್ರ ಪೂರ್ಣತೆ ಸ್ವಯಂಸಿದ್ಧಿಸುತ್ತದೆ. ಅಂತಹ ಪೂರ್ಣತೆಯನ್ನು ಪಡೆಯುವ ಭಾಗ್ಯ ನಮ್ಮ ಕಲ್ಯಾಣದ್ದಾಗಿತ್ತು.

ಬಸವಣ್ಣನವರನ್ನು ಕಾರಣಪುರುಷ, ಪವಾಡಪುರುಷ ಎಂದೆಲ್ಲ ಕರೆವ ಉತ್ಪ್ರೇಕ್ಷೆಗಳನ್ನು ಒತ್ತಟ್ಟಿಗಿರಿಸಿ ನೋಡಿದರೂ ಅವರೊಬ್ಬ 'ಮಹಾನ್ ಮಾನವತವಾದಿ' ಎಂಬ ಸತ್ಯಸ್ಯ ಸತ್ಯವನ್ನು ಯಾರಿಗೂ ಅಲ್ಲಗಳೆಯಲಾಗುವುದಿಲ್ಲ. ಇವರ ಸಾಧನೆ ಸಿದ್ಧಿಗಳಲ್ಲಿ ಅಂತರಂಗಿಕ ಒತ್ತಡಗಳಿಗೆ, ಭಕ್ತಿ ಅನುಭಾವಗಳಿಗೆ, ಪ್ರಯೋಗ ಪ್ರಯತ್ನಗಳಿಗೆ ಇರುವಷ್ಟೇ ಪ್ರಾಮುಖ್ಯತೆ ಬಹಿರಂಗ ವ್ಯವಸ್ಥೆಗೂ ಇದೆ. ಬಸವಣ್ಣ ಬಾಗೇವಾಡಿಯಿಂದ ಸಿಡಿದು ಸಂಗಮ ಕ್ಷೇತ್ರಕ್ಕೆ ತೆರಳಬೇಕಾದ ಸಂದರ್ಭದಲ್ಲಿ; ಅಲ್ಲಿಂದ ಮಂಗಳವಾಡಕ್ಕೆ ಹೊರಡಬೇಕಾದ ಅವಕಾಶದಲ್ಲಿ; ಅಲ್ಲಿಂದ ಕಲ್ಯಾಣಕ್ಕೆ ಹೋಗಲೇಬೇಕಾದ ಅನಿವಾರ್ಯತೆಯಲ್ಲಿ ಅವರ ಕಾರ್ಯಕ್ಷೇತ್ರ ಕಲ್ಯಾಣವೇ ಆಗಬೇಕೆಂಬ ನಿಯಮದ ಶಕ್ತಿ ಸ್ವರೂಪವನ್ನು ಗುರುತಿಸಬಹುದು. ಈ ಕಾಲದ ಕಲ್ಯಾಣವಾದರೂ ಎಂತಹುದು! **'...ಮರ್ತ್ಯಲೋಕದ ಸಕಲೈಶ್ವರ್ಯದ ಭಂಡಾರದ ನಿಜನಿಲಯ..., ಭೂಮಿಗೆ ಹೃತ್ಕಮಲ ಕರ್ಣಿಕಾ ವಾಸ..., ವಾಣಿಯ ಮುಖ ದರ್ಪಣ..., ಸಕಲ ಧರ್ಮಂಗಳು ತೀವುವ ಕರಂಡಗೆ..., ಸತ್ಯದ ಸಾಗರ, ಭಕ್ತಿಯ ತವರ್ಮನೆ, ಮುಕ್ತಿಗೆ ಮುಖ, ಪುಣ್ಯದ ಪುಂಜ, ಅಭಿನವ ಕೈಲಾಸ...!'** ಇದನ್ನು ಅರಿತೇ ದಾರ್ಶನಿಕ ವಿಜ್ಞಾನೇಶ್ವರ ಹೇಳಿರುವುದು: **'ನಾಸೀತ್ ಅಸ್ತಿ ಭವಿಷ್ಯತಿ, ಕ್ಷಿತಿತಲೇ ಕಲ್ಯಾಣ ಕಲ್ಪಪುರಂ.'**

ಬಸವಣ್ಣನ ಆಗಮನಕ್ಕೆ ಮುನ್ನ 'ಕಲ್ಯಾಣ' ಈ ಅಲಂಕಾರಗಳನ್ನು ಹೊರುವ ಸಾಮರ್ಥ್ಯವನ್ನು ಅನುಗೊಳಿಸಿಕೊಳ್ಳಲು ನಿರಂತರವಾಗಿ ತಪವಿದ್ದಿರಬೇಕು. ಇಲ್ಲಿ ಬಸವಣ್ಣ ಮೂರ್ತಿಗೊಂಡು ನಿಂತ ಬಳಿಕ 'ಕಲ್ಯಾಣ'ದ ಇರುವಿಕೆಯೇ ಬದಲಾಗುತ್ತದೆ. ಈ ಅಂಶವನ್ನು ಬಸವಣ್ಣವರ ಒಂದು ವಚನ ಶ್ರುತಪಡಿಸುತ್ತದೆ:

**'....ಕೂಗಳತೆ ನಾಲ್ಕು ಕೂಡಲು ಒಂದು ಹರಿದಾರಿ,**
**ಹರಿದಾರಿ ನಾಲ್ಕು ಕೂಡಲು ಒಂದು ಯೋಜನ,**
**ಅಂಥ ಯೋಜನ ನಾಲ್ಕು ಚೌಕಕ್ಕೂ ಹನ್ನೆರಡು ಹನ್ನೆರಡು ಕೂಡಲು**
**ಬಳಸಿ ನಲವತ್ತೆಂಟು ಯೋಜನ ಪ್ರಮಾಣಿನ ಕಟ್ಟಳೆಯಾಯಿತ್ತು.**
**ಇಂತಪ್ಪ ಕಟ್ಟಳೆಯಾಗಿದ್ದ ಕಲ್ಯಾಣದೊಳಗಿರುವ ಗಣಂಗಳೆಲ್ಲರನೂ**
**ಕೂಡಲಸಂಗಯ್ಯ ನಿಮ್ಮೊಳು ಕಂಡು ಸುಖಿಯಾಗಿರ್ದೆನು.'**

ಒಂದು ಯೋಜನವೆಂದರೆ ಹನ್ನೆರಡು ಮೈಲಿ ಎಂಬ ಸ್ಥೂಲ ಲೆಕ್ಕವನ್ನು ತೆಗೆದುಕೊಂಡರೂ ಬಸವಣ್ಣನ ಪ್ರಕಾರ ಆಗಿನ ಕಲ್ಯಾಣದ ವಿಸ್ತೀರ್ಣ ೫೭೬ ಚದರ ಮೈಲಿಯಾಗುತ್ತದೆ. ಈ ವಿಸ್ತೀರ್ಣದೊಡನೆ ಸ್ಪರ್ಧಿಸಿದರೆ ಇಂದಿನ ಮಹಾ ಮಹಾನಗರಗಳೂ ಸೋಲೊಪ್ಪಬೇಕಾಗುತ್ತದೆ.

ಇದು ಉತ್ಪ್ರೇಕ್ಷೆಯ ವರ್ಣನೆ ಎನ್ನಿಸಿದರೂ ಕಲ್ಯಾಣದ ಮಹಾ ವಿಸ್ತೀರ್ಣವನ್ನು ಸಾರಾಸಗಟಾಗಿ ನಿರಾಕರಿಸಲೂ ಸಾಧ್ಯವಾಗದು. ಬಸವಣ್ಣ 'ಎನಗಿಂತ ಕಿರಿಯರಿಲ್ಲ' ಎನ್ನುವ ವಿನಮ್ರಿ. ಅವರಿಗೆ ತಮ್ಮ ಕಾರ್ಯಕ್ಷೇತ್ರವನ್ನು ಅವಶ್ಯಕತೆಗೆ ಮೀರಿ ವರ್ಣಿಸುವ ಅನಿವಾರ್ಯತೆಯೂ ಇರಲಿಲ್ಲ. ಅಂದಮೇಲೆ ಕಲ್ಯಾಣ ಸಾಕಷ್ಟು ವಿಸ್ತೀರ್ಣ ಆಗಿದ್ದಿರಲೇಬೇಕು. ಆದರೆ ಎಷ್ಟು? ಚೆನ್ನಬಸವಣ್ಣ ಹೇಳುತ್ತಾರೆ;

**'.....ಆ ಮಹಾ ಕಲ್ಯಾಣದ ವಿಸ್ತೀರ್ಣ ತಾನೆಂತೆಂದಡೆ,**
**ಹನ್ನೆರಡು ಯೋಜನ ಪರಿ ಪ್ರಮಾಣದ ವಿಸ್ತೀರ್ಣಪಟ್ಟಣಕ್ಕೆ**
**ಮುನ್ನೂರರವತ್ತು ಬಾಗಿಲವಾಡ...**
**ಆ ಪಟ್ಟಣಕ್ಕೆ ಬಂದ ಕೋವೆ ನಾಲ್ವತ್ತೆಂಟು ಯೋಜನ ಪರಿಪ್ರಮುಖ**
**ಬಾಹತ್ತರ (ನಿಯೋಗಿಗಳ) ಮನೆ ಲಕ್ಷ; ಮಂಡಳಿಕರ ಮನೆ ಲಕ್ಷ;**
**ಸಾಮಂತರ ಮನೆ ಲಕ್ಷ; ರಾಯ ರಾವುತರ ಮನೆಯೊಳಡಗಿದ ಮನೆಗಳಿಗೆ ಲೆಕ್ಕವಿಲ್ಲ.**
**ದ್ವಾದಶ ಯೋಜನ ವಿಸ್ತೀರ್ಣದ ಸೂರ್ಯವೀಥಿ ನೂರಿಪ್ಪತ್ತು;**
**ದ್ವಾದಶ ಯೋಜನದ ಸೋಮವೀಧಿ ನೂರಿಪ್ಪತ್ತೈದು.**
**ಅದರಿಂ ಮಿಗಿಲಾದ ಒಳಕೇರಿ ಹೊರಕೇರಿಗೆ ಗಣನೆಯಿಲ್ಲ.**
**ಆ ಪಟ್ಟಣದೊಳಗೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಶಿವಾಲಯ**
**ಆ ಶಿವಾಲಯಗಳಿಗೆ ಮುಖ್ಯವಾದ ತ್ರಿಪುರಾಂತಕದೇವರ ಶಿವಾಲಯ**
**ಮುನ್ನೂರರವತ್ತು ಪದ್ಮಪತ್ರ ತೀವಿದ ಸರೋವರಗಳು.**
**ಎರಡು ಲಕ್ಷ ಎಂಬತ್ತೈದು ಸಾವಿರದ ಏಳುನೂರ ಎಪ್ಪತ್ತು ದಾಸೋಹದ ಮಠಂಗಳು...'**

ಇಷ್ಟು ಸಾಕು ಕಲ್ಯಾಣದ ವೈಭವ ಎಷ್ಟಿತ್ತೆಂಬುದನ್ನು ಕಲ್ಪಿಸಿಕೊಂಡು ಸುಖಿಸಲು!

## ಶರಣರ ಕಣ್ಣಲ್ಲಿ ಕಲ್ಯಾಣ.

ಕಲ್ಯಾಣದ ಭಾವದೀಪ್ತಿ ಶರಣರ ಮೇಲೆ ಬೀರಿರುವ ಪ್ರಭಾವವನ್ನು ಗಮನಿಸಿದರೆ ನಿಜಕ್ಕೂ ತುಂಬು ವಿಸ್ಮಯವೆನಿಸುತ್ತದೆ. ನಾಡಿನ ವಿವಿಧ ಮೂಲೆಗಳಿಂದ ಕಲ್ಯಾಣಕ್ಕೆ ಬಂದವರು, ಕಲ್ಯಾಣದಲ್ಲಿ ನೆಲೆನಿಂತವರು, ಕಲ್ಯಾಣದಲ್ಲೇ ಹುಟ್ಟಿ ಬೆಳೆದವರು, ಎಲ್ಲರಿಗೂ 'ಕಲ್ಯಾಣ' ಒಂದು ಅದ್ಭುತ ನೆಲೆ. ಈ ಶರಣರಾರೂ ಬಸವಣ್ಣ ನಿಲ್ಲದ ಕಲ್ಯಾಣವನ್ನು ಕಲ್ಪಿಸಿಕೊಳ್ಳಲಾರರು. ಆದರೆ ಬಸವಣ್ಣನ ಕಲ್ಯಾಣವನ್ನು

ಮನದುಂಬಿ ಅಭಿನಂದಿಸುತ್ತಾರೆ. ಕಲ್ಯಾಣ ಕ್ಷೇತ್ರದ ಉತ್ತರೋತ್ತರ ಅಭಿವೃದ್ಧಿಯನ್ನು ಮೊದಲಿನಿಂದ ಕೊನೆಯವರೆಗೂ ಕಂಡ ಸಮಾನ ಧರ್ಮಿಗಳು, ಕಲ್ಯಾಣದ ಶ್ರೇಯದ ಅಂತ್ಯವನ್ನು ನೋಡಿ ವೇದನೆಪಟ್ಟ ಸಹೃದಯರು, ನಂತರದಲ್ಲಿ ಕಲ್ಯಾಣವನ್ನು ಕುರಿತ ಹಾಡುವ ಭಾವಜೀವಿಗಳು...... ಎಲ್ಲರಲ್ಲೂ ಈ ಅಂಶ ತಾವು ಪಡೆದಿದೆ.

**'ಅನುಭಾವವೆಂಬುದು ಅಂತರಂಗದ ರತ್ನ ಕಾಣಿಭೋ!'** ಎಂದು ಘೋಷಿಸಿದ ಚೆನ್ನಬಸವಣ್ಣರಿಗೆ ಕಲ್ಯಾಣಪುರವನ್ನು ನೆನೆದರೇ ಸಾಕು, ಹೃದಯ ತುಂಬಿ ಬರುತ್ತದೆ. ಕಲ್ಯಾಣದ ವೈಭವವ್ನನು ಮುಕ್ತವಾಗಿ ಪ್ರಶಂಸಿಸುತ್ತಾರೆ.

**'....ಹದಿನಾಲ್ಕು ಭುವನಕ್ಕೆ ಕಳಸವೆಂದೆನಿಸುವ ರುದ್ರ ಲೋಕವೆ**
**ಮರ್ತ್ಯಕ್ಕಿಳಿತಂದು**
**ಕಲ್ಯಾಣವೆಂಬ ಪುರವಾಗಿ ಹುಟ್ಟಿತು ನೋಡಿರಯ್ಯಾ!**
**ಸತ್ಯರು, ಸಾತ್ವಿಕರು, ನಿತ್ಯರು, ನಿಜೈಕ್ಯರು, ಮಹಾಜ್ಞಾನಿಗಳು,**
**ಪರಮಶಿವಯೋಗಿಗಳು, ಶಿವಾನುಭಾವ ಸಂಪನ್ನರು, ಶಿವಲಿಂಗ ಪ್ರಾಣಿಗಳು...**
**ಶಿವಸಮಯ ಪಕ್ಷರುಗಳಲ್ಲದೆ, ಮತ್ತಾರು ಅಲ್ಲಿಲ್ಲ ನೋಡಿರಯ್ಯಾ...**
**ಆ ಕಲ್ಯಾಣವ ನಾಮವಿಡಿದು ವಿವಾಹಕ್ಕೆ ಕಲ್ಯಾಣವೆಂಬ**
**ನಾಮ ಪ್ರಸಿದ್ಧವಾಯಿತ್ತು.**
**ಲೋಕದೊಳಗೆ ಕಲ್ಯಾಣವೆ ಕೈಲಾಸವೆನಿಸಿತ್ತು.**
**ಇಂತಪ್ಪ ಕಲ್ಯಾಣವ ದರುಶನವ ಮಾಡಿದರೆ ಭವಂ ನಾಸ್ತಿ.**
**ಇಂತಪ್ಪ ಕಲ್ಯಾಣದ ಮಹಾತ್ಮೆಯ ಕೇಳಿದರೆ ಕರ್ಮಕ್ಷಯವಹುದು,**
**ಮೋಕ್ಷ ಸಾಧ್ಯವಹುದು.**

'ಬಸವಣ್ಣನಿಗೆ ಭವವಿಲ್ಲ, ಜನ್ಮಾಂತರಗಳಿಲ್ಲ. ಅವರು ಸತ್ಯಶರಣರೆಲ್ಲರನ್ನು ಪಾವನ ಮಾಡಲು ಬಂದವರು. ಸತ್ಯ ಸದಾಚಾರವನ್ನು ಹರಸಿ ಮರ್ತ್ಯರನ್ನು ದೇವತ್ವಕ್ಕೆತ್ತಲು ಆಗಮಿಸಿದವರು. ನಿಜಲಿಂಗ ಸಮಾಧಿಯಲ್ಲಿ ನಿಲ್ಲುವ ನಿಜ ಸಂಪಾದನೆ ಮಾಡಲು ಹುಟ್ಟಿದವರು. ಕರ್ತನ ರೂಪು ಭೃತ್ಯಂಗೆ ಬಂದಾಗ ಆ ಭೃತ್ಯನೇ ಕರ್ತನನ್ನರಸಿ ಭೂಮಿಗೆ ಬಂದಂತೆ ಬಂದವರು...' ಹೀಗೆಲ್ಲಾ ಬಸವಣ್ಣನ ಮಹಿಮೆ ವರ್ಣಿಸುವ ಚೆನ್ನಬಸವಣ್ಣ ಕಡೆಯಲ್ಲಿ ನಿವೇದಿಸಿಕೊಳ್ಳುವುದು, **'ಮರ್ತ್ಯಲೋಕ ಶಿವಲೋಕವೆಂಬುದೊಂದು ನಿಚ್ಚಣಿಕೆಯಾದವು ನೋಡಾ ದೇವ, ನೀವೀ ಕಲ್ಯಾಣಕ್ಕೆ ಬಂದವತರಿಸಿದಲ್ಲಿ.....'**

ಬಸವಣ್ಣನ ಕಲ್ಯಾಣದ ಮಹಿಮೆಯನ್ನು ಮನನ ಮಾಡಿದಷ್ಟೂ ಚೆನ್ನಬಸವಣ್ಣನ ಉಮೇದು ಹೆಚ್ಚುತ್ತಲೇ ಹೋಗುತ್ತದೆ. ಈ ಉತ್ಸಾಹದ ಭರ ಅವರಿಂದ 'ಬಸವ ಕಲ್ಯಾಣ'ದ ಒಂದು ಸಮಗ್ರ ಚಿತ್ರಣವನ್ನೇ ರೂಪಿಸುತ್ತದೆ:

**'ಹರನಟ್ಟಿದಾಗ್ರದ ಬೆಸನ ಗುರು ನಿರೂಪವೆಂದು ಕೈಕೊಂಡು**
**ಕರುಣಿ ಬಸವಣ್ಣ ಕೈಲಾಸದಿಂದ**
**ಗುರುಲಿಂಗ ಜಂಗಮಕ್ಕೆ ಭಕ್ತಿಯ ಮಾಡಬೇಕೆಂದು,**
**ಏಳುನೂರೆಪ್ಪತ್ತು ಅಮರಗಣಂಗಳು ಸಹಿತ**
**ಮರ್ತ್ಯಲೋಕಕ್ಕೆ ತಂದನಯ್ಯಾ. ಶಿವಸಮಯಕ್ಕಾಧಾರವಾದನಯ್ಯಾ.**
**ಲೋಕಾದಿಲೋಕಂಗಳಿಗೆ ಪರಮಗುರುವಾದನಯ್ಯಾ ಬಸವಣ್ಣನು!**
**ಜಡರುಗಳ ಮನದ ಕತ್ತಲೆಯ ಕಳೆಯಬೇಕೆಂದು**
**ಕಟ್ಟಿತ್ತು ಕಲ್ಯಾಣದಲ್ಲಿ ಮಹಾಮಠವು.....'**

ಬಸವಣ್ಣನನ್ನು ಶಿವ ಕೈಲಾಸದಿಂದ ಭೂಮಿಗೆ ಕಳಿಸಿದನೆಂಬ, ಬಸವಣ್ಣ ಏಳುನೂರೆಪ್ಪತ್ತು ಅಮರಗಣಗಳ ಸಹಿತ ಮರ್ತ್ಯಲೋಕಕ್ಕೆ ಬಂದು ಕಲ್ಯಾಣದಲ್ಲಿ ಮಹಾಮಠವನ್ನು ಕಟ್ಟಿದನೆಂಬ, ಪರಮನಟ್ಟಿದ ಓಲೆ ಓದಿ ಅರತವತ್ತಾರು ಕೋಟಿ ವಸ್ತುಗಳನ್ನು ಬಿಜ್ಜಳನ ವಶಮಾಡಿದನೆಂಬ ಈ ಆಶಯ ಮತ್ತೇ ಮತ್ತೇ ಶರಣರ ವಚನಗಳಲ್ಲಿ ಪುನರಾವರ್ತಿತವಾಗುತ್ತಲೇ ಇರುತ್ತದೆ.

ಇಷ್ಟು ಮಾತ್ರವಲ್ಲ, ಲಿಂಗಜಂಗಮ, ಜಂಗಮಲಿಂಗದ ಮುಖವನ್ನು ಬಸವಣ್ಣನಿಗಿಂತ ಬಲ್ಲವರು ಬೇರೆ ಇಲ್ಲ. **'ಅಂಗದ ಮೇಲೆ ಲಿಂಗವುಳ್ಳದೆಲ್ಲವೂ ಸಂಗಮನಾಥ'** ಎಂಬ ಅವರ ನಿಲುವನ್ನು ಒರೆದು ನೋಡಬೇಕೆಂಬ ಆಕಾಂಕ್ಷೆಯಿಂದ ಪರವಾದಿ ಬಿಜ್ಜಳನು ಹಗರಣಿಗರನ್ನು ಕಳಿಸಿದರೆ ಅವರ ಜಂಗಮಮುಖದಲ್ಲಿ ಲಿಂಗವನ್ನು ಮಾಡಿದ ಬಸವಣ್ಣ; ಮರದ ಮಾನಿಸರನ್ನು ಕರೆದು ಓ ಎನಿಸಿ ಉಣಿಸಿ ಉಡಿಸಿದ ಬಸವಣ್ಣ; **'ಜಂಗಮಲಿಂಗ ಪ್ರಾಣಿ ಸಂಗನ ಬಸವಣ್ಣನೆಂಬ ಧ್ವಜವನ್ನೆತ್ತಿ ಮೆರೆದವರಾರು ಹೇಳಾ ಈ ಕಲ್ಯಾಣದಲ್ಲಿ ನೀವಲ್ಲದೆ?...'** ಎಂಬುದು ಚೆನ್ನಬಸವಣ್ಣನ ಭಾವಪೂರ್ಣ ನುಡಿ. **'ಗುಹೇಶ್ವರನ ಶರಣರು ನುಡಿದ ಸೂತಕಿಗಳಲ್ಲಾ ಕೇಳಾ ಮರುಳೆ'** ಎಂಬ ಆತ್ಮವಿಶ್ವಾಸದ ಅಲ್ಲಮಪ್ರಭುಗಳು ಬಸವಣ್ಣನಿಗೆ ವಂದಿಸುವ ಮೊದಲು ಕಲ್ಯಾಣಕ್ಕೆ ತಲೆಬಾಗುತ್ತಾರೆ:

**'ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು**
**ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ**
**ಮುಟ್ಟಿಸಲು ತೊಳಗಿ ಬೆಳಗುತ್ತಿರ್ದುದಯ್ಯಾ ಶಿವನ ಪ್ರತಾಪ.'**

ಬಸವಣ್ಣನ ಅಪೂರ್ವ ಕಲ್ಯಾಣವನ್ನು ಕಂಡಾಗ ಪ್ರಭುದೇವರ ಹೃದಯದಿಂದ ಉಕ್ಕಿದ ಪವಿತ್ರಭಾವದ ಬಣ್ಣದಲ್ಲಿ ಮೂಡಿದ ರಸಚಿತ್ರ ಇದು. ಜೀವನ ಕತ್ತಲೆಯನ್ನು ದಾಟಿಸಿ ಶಿವಬೆಳಗಿನ ಸೀಮೆಗೆ ಕರೆದೊಯ್ಯುವ ಮಹಾಬೆಳಕನ್ನು ಹೊತ್ತಿರುವ ಸಾಧನವೇ ಬಸವಣ್ಣನ ಕಲ್ಯಾಣ. ಇದು ಅರವತ್ತೆಂಟು ಪುಣ್ಯಕ್ಷೇತ್ರಗಳಲ್ಲಿ ಪರಮ ಪುಣ್ಯಕ್ಷೇತ್ರ, ಅವಿಮುಕ್ತ ಕ್ಷೇತ್ರ. **'ಅಲ್ಲಮಪ್ರಭುವನ್ನೇ ತನಗೆ ಮಣಿಯುವಂತೆ ಮಾಡುವ 'ಪಾವನಮಯತೆ' ಕಲ್ಯಾಣದಲ್ಲಿ ತುಂಬಿ ತುಳುಕುತ್ತಿದೆ'**. ಕಲ್ಯಾಣ ಪಟ್ಟಣವನ್ನು ಪ್ರವೇಶಿಸಿ ಮಹಾಮನೆಯ ದಾಸೋಹ ಕೇಂದ್ರವನ್ನು ಮುಟ್ಟಿದಾಗ ಅಲ್ಲಮ ಪ್ರಭುವಿನ ಅಭಿನಂದನಾಭಾವ ಮತ್ತೂ ಹಿರಿದಾಗುತ್ತದೆ. ಮನತುಂಬಿ ಹೇಳುತ್ತಾರೆ:

**'ಮರ್ತ್ಯಲೋಕದ ಮಹಾಮನೆ ಹಾಳಾಗಿಹೋಗಬಾರದೆಂದು**
**ಕರ್ತನಟ್ಟಿದನಯ್ಯಾ ಒಬ್ಬ ಶಿವಶರಣನ.**
**ಆ ಶರಣ ಬಂದು ಕಲ್ಯಾಣವೆಂಬ ಶಿವಪುರವ ಕೈಲಾಸವ ಮಾಡಿ**
**ರುದ್ರಗಣ ಪ್ರಮಥಗಣಂಗಳೆಲ್ಲರ ಹಿಡಿತಂದು...**
**ಅಸಂಖ್ಯಾತರೆಂದು ಹೆಸರಿಟ್ಟು ಕರೆದು,**
**ಭಕ್ತಿಯ ಕುಳಸ್ಥಲವ ಶ್ರುತ, ದೃಷ್ಟಿ ಪವಾಡದಿಂದ ಮೆರೆದು ತೋರಿ,**
**ಜಗವರಿಯಲು ಶಿವಾಚಾರದ ಧ್ವಜವನ್ನೆತ್ತಿಸಿ**
**ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಕೆಯಾದನು.'**

ಅಲ್ಲಮಪ್ರಭು ಯಾರನ್ನೂ, ಯಾವುದನ್ನೂ ಸುಲಭವಾಗಿ ಒಪ್ಪುವವರಲ್ಲ. ಪ್ರತಿಯೊಂದು ವಿಷಯವನ್ನೂ ಒರೆದು, ಅರೆದು, ತಿದ್ದಿ, ತೀಡಿ ನೋಡಿ 'ಕಡೆಯಾಣಿ' ಎಂದು ಕಂಡಾಗ ಮಾತ್ರ ಕೈಗೆತ್ತಿಕೊಳ್ಳುವ ಅದ್ವಿತೀಯ ಮಾರ್ಗದರ್ಶಕ ಗುರು. ಇಂಥ ಮಹಾಶರಣರು ಕಲ್ಯಾಣದ ಬಗೆಗೆ ಮನತುಂಬಿ ಆಡಿರುವ ಮಾತುಗಳಿಗೂ ವಿಶಿಷ್ಟ ತೂಕವಿದೆ. 'ಕಲ್ಯಾಣ'ದ ಸಾರ್ಥಕತೆಯೂ ಈ ನುಡಿಗಳಲ್ಲಿದೆ. **'ವಿದ್ಯೆಯನರಿತು ಜಗದ್ವೇದ್ಯನಾಗಬಲ್ಲಡೆ ಮಹಾ ಪಂಡಿತ ನೋಡಾ'** ಎಂದ, ಸದ್ಭಕ್ತಿ ಸದಾಚಾರಯುಕ್ತ ಮಹಾತ್ಮರ ಪಾದವ ಹಿಡಿದು ಬದುಕಬೇಕೆಂಬ ಹಂಬಲದ ಸಿದ್ಧರಾಮರದು ಅನನ್ಯ ಶರಣ ವ್ಯಕ್ತಿತ್ವ. ಕಲ್ಯಾಣಕ್ಕೆ ಬರಬೇಕೆಂದು, ಕೂಡಲ ಸಂಗನ ಬಸವಣ್ಣನ ಕಾಣಬೇಕೆಂದು, ಆತನ ಮಹಾಮನೆಯಲ್ಲಿ ಹೊಕ್ಕು 'ನಿಜಲಿಂಗಪದ'ದಲ್ಲಿ ನಿಲ್ಲಬೇಕೆಂದು ಅವರು ಹಲವು ಕಾಲಗಳಿಂದಲೂ ತಪ

ನೋಂತಿದ್ದರು. ಆ ಸುಯೋಗ ದೊರಕಿ ಅಲ್ಲಮಪ್ರಭುವಿನೊಂದಿಗೆ ಕಲ್ಯಾಣ ಪ್ರವೇಶಿಸಿದಾಗ, ಮಹಾಮನೆಗೆ ಬಂದು ಬಸವಣ್ಣನ ದರ್ಶನ ಪಡೆದಾಗ ಧನ್ಯತೆಯ ಭಾವ ಅವರ ಮೈಮನಗಳನ್ನು ತುಂಬುತ್ತದೆ. ಆ ಭಾವದೀಪ್ತಿಯಲ್ಲಿ ಅವರ ಮನದುಂಬಿ ಬಂದ ನುಡಿಗಳಿವು:

**'ಅಯ್ಯಾ' ನಿಮ್ಮ ಶರಣರಲ್ಲದವರ ಮನೆ ಕೆಮ್ಮನೆ ಕಂಡಯ್ಯ**
**ನಿಮ್ಮ ಶರಣರ ಮನೆಯೆ ನೆಲೆವನೆ ಎನಗೆ...**
**ನಿಮ್ಮ ಸಂಗನ ಬಸವಣ್ಣ ಬಂದು ಕಲ್ಯಾಣದಲ್ಲಿ ಮನೆ ಕಟ್ಟಿದರೆ**
**ಮರ್ತ್ಯಲೋಕವೆಲ್ಲವೂ ಭಕ್ತಿಸಾಮ್ರಾಜ್ಯವಾಯಿತ್ತು ...'**

'ನಿಶ್ಚಲ ಶರಣರ ಮನೆಯಂಗಳದಲ್ಲಿ ಅಷಷ್ಟಾಷಷ್ಟಿ ತೀರ್ಥಗಳೇ ನೆಲೆಸಿದವೆಲೆ' ಇಡೀ ಭೂಲೋಕವೆಲ್ಲ ಭಕ್ತಿಯ ಸಾಮ್ರಾಜ್ಯವಾಯಿತೆಂದರೆ ಅಚ್ಚರಿಯಿಲ್ಲ. ಆದರೆ ಕಲ್ಯಾಣದ ಬೆಳಕು ಇಡೀ ಲೋಕಕ್ಕೆ ಭಕ್ತಿಯ ಪ್ರಭೆ ಬೀರಿತೆಂಬ ಮಾತಿನಲ್ಲಿ ಸಿದ್ಧರಾಮರ 'ದರ್ಶನ'ವಿದೆ. 'ಎಲ್ಲಿ ಮಹೇಶ್ವರರು ನೆಲೆ ನಿಂತಿರುತ್ತಾರೆ, ಅದೇ ಶಿವಲೋಕ. ಶರಣರು ಮೆಟ್ಟಿನಿಂತ ಧರೆಯೇ ಪಾವನ.' ಈ ಸತ್ಯವಚನ ಕಲ್ಯಾಣ ಗ್ರಾಮವನ್ನು ಮೆಟ್ಟಿದಾಗ ಸಿದ್ಧರಾಮರ ಅರಿವನ್ನು ತುಂಬುತ್ತದೆ.

ಇದೇ ಭಾವ ಭಾವನೆಗಳು ಅಕ್ಕಮಹಾದೇವಿಯ ವಚನಗಳಲ್ಲೂ ಮಡುಗಟ್ಟುತ್ತವೆ. 'ಹಸಿವಾದಡೆ ಭಿಕ್ಷಾನ್ನಗಳುಂಟು, ತೃಷೆಯಾದಡೆ ಕೆರೆ ಹಳ್ಳ ಬಾವಿಗಳುಂಟು, ಶಯನಕ್ಕೆ ಹಾಳುದೇಗುಲವುಂಟು' ಎಂಬ ನಿಜ ನಿರಾಳ ಮನದಿಂದ ಕಲ್ಯಾಣವನ್ನೇ ಅರಸಿ ಬಂದ ಅಕ್ಕ ಆ 'ಮಹಾ ಕಲ್ಯಾಣ'ದ ಬಳಿಗೆ ಬರುತ್ತಿದ್ದ ಹಾಗೇ ಭಾವ ಪುಳಕಿತರಾಗುತ್ತಾರೆ.:

**'ಅಯ್ಯಾ ನಿಮ್ಮ ಶರಣರು ಮೆಟ್ಟಿದ ಧರೆ ಪಾವನ ವಯ್ಯಾ**
**ಅಯ್ಯಾ ನಿಮ್ಮ ಶರಣರು ಇದ್ದ ಪುರವೇ ಕೈಲಾಸಪುರ ವಯ್ಯ**
**ಅಯ್ಯಾ ನಿಮ್ಮ ಶರಣರು ನಿಂದುದೆ ನಿಜನಿವಾಸವಯ್ಯ, ಚೆನ್ನಮಲ್ಲಿಕಾರ್ಜುನ,**
**ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವಾಗಿ**
**ಆನು ಸಂಗನ ಬಸವಣ್ಣನ ಶ್ರೀಪಾದಕ್ಕೆ ನಮೋ ಎನುತಿರ್ದೆನು.'**

ಹೌದು, ಶರಣರು ಮೆಟ್ಟಿದ, ನಿಂತ, ವಾಸಿಸಿದ ನೆಲಪಾವನವಾಗುತ್ತದೆ. ಹಾಗಿರುವಾಗ ಸಾವಿರಾರು ಲಕ್ಷ ಶರಣರು ಇದ್ದ ಕಲ್ಯಾಣ ಅವಿಮುಕ್ತ ಕ್ಷೇತ್ರವೇ ಆಗುವುದರಲ್ಲಿ ಯಾವುದು ಸಂದೇಹ? **'ಬಸವಣ್ಣನ ಕಾರ್ಯಕ್ಷೇತ್ರ ಕಲ್ಯಾಣದಲ್ಲಿ ಪಾವನ ಕೈಲಾಸ ಕ್ಷೇತ್ರವನ್ನು ಕಾಣುವುದು ಅಕ್ಕನ ಅನುಭಾವ ತೀವ್ರತೆಗೆ ಸಹಜವೇ ಆಗಿದೆ.** ಇಷ್ಟೇ ಅಲ್ಲ, ಅಂತರಂಗಶುದ್ಧಿ, ಬಹಿರಂಗ ಶುದ್ಧಿಗಳೆರನ್ನೂ ಅಳವಡಿಸಿಕೊಂಡು ಶಿವಪ್ರಕಾಶದ ಬೆಳಗಿನಲ್ಲಿ ಹೊಳೆದು ಮೆರೆಯುವ ಕಲ್ಯಾಣ ಕೈಲಾಸವೇ ಅಹುದೆಂದು ಸ್ಪಷ್ಟ ನುಡಿಯುತ್ತಾರೆ:

**'ಕಲ್ಯಾಣ ಕೈಲಾಸವೆಂಬ ನುಡಿ ಹಸನಾಯಿತ್ತು**
**ಒಳಗೂ ಕಲ್ಯಾಣ, ಹೊರಗೂ ಕಲ್ಯಾಣ.**
**ಇದರಂತುವನಾರು ಬಲ್ಲರಯ್ಯಾ?**
**ನಿಮ್ಮ ಸತ್ಯ ಶರಣರ ಸುಳುಹು ತೋರುತ್ತಿದೆಯಯ್ಯ..'**

ಇಂಥ ಮಂಗಳ ಮಹಾಬೆಳಗಿನ ಪ್ರಭಾವಲಯವನ್ನು ಪ್ರವೇಶಿಸುವದೆಂದರೆ ಸಾಮಾನ್ಯವೇ? ಎಲ್ಲರಿಗೂ ಈ ಪ್ರಭಾವಲಯಕ್ಕೆ ಪ್ರವೇಶ ದಕ್ಕುವುದೇ? ಮುಗಿದ ಕೈ ಬಾಗಿದ ತಲೆ ಮಣಿದ ಶರೀರದ ಅಕ್ಕ ಹೇಳುವುದು:

**'ಕಲ್ಯಾಣವೆಂಬುದಿನ್ನಾರಿಗೆ ಹೋಗಬಹುದು?**
**ಹೋಗಬಾರದು, ಅಸಾಧ್ಯವಯ್ಯಾ.**
**ಆಸೆ ಆಮಿಷ ಅಳಿದಂಗಲ್ಲದೆ ಕಲ್ಯಾಣದತ್ತಲಡಿಯಿಡಬಾರದು,**
**ಒಳಹೊರಗು ಶುದ್ಧನಾದಂಗಲ್ಲದೆ ಕಲ್ಯಾಣವ ಹೋಗಬಾರದು,**

ನೀನಾನೆಂಬುದು ಹರಿದಂಗಲ್ಲದೆ ಕಲ್ಯಾಣದ ಒಳಗು ತಿಳಿಯಬಾರದು,
ಚೆನ್ನಮಲ್ಲಿಕಾರ್ಜುನಂಗೊಲಿದು ಉಭಯ ಲಜ್ಜೆ ಅಳಿದೆನಾಗಿ
ಕಲ್ಯಾಣವಂ ಕಂಡು ನಮೋ ನಮೋ ಎನುತಿರ್ದೆನು.'

ಶರಣೆ ನೀಲಾಂಬಿಕೆ ಬಸವಣ್ಣ ಕಲ್ಯಾಣಕ್ಕೆ ಕಾಲಿಡುವ ಮುನ್ನವೆ ಕಲ್ಯಾಣದಲ್ಲಿ ಆಡಿ, ಹಾಡಿ ಬೆಳೆದವರು. ಬಸವಣ್ಣರ ಆಗಮನಾನಂತರ ಕಲ್ಯಾಣದ ಬಸವಣ್ಣನವರ ಬದುಕಿನಲ್ಲಿ ಹಾಸುಹೊಕ್ಕಾದವರು. ಅವರು ಬಸವನಾಗಮನದ ನಂತರದ ಕಲ್ಯಾಣ ಚಿತ್ರಣವನ್ನು ಕೊಟ್ಟಿರುವುದನ್ನು ನೋಡಿ:

'ಪಂಚಶಕ್ತಿಯರಿಗೆ ಪಂಚಮೂರ್ತಿಯರ ಕೈಗೊಳಿಸಿದಾತ ನಮ್ಮ ಬಸವಯ್ಯನು
ಆ ಪಂಚಮೂರ್ತಿಗಳಿಂದುತ್ಪತ್ಯವಾದ ಲೋಕವ ನೋಡಲೆಂದು
ಕೈಲಾಸವನೆ ಕಲ್ಯಾಣವ ಮಾಡಿದಾತ ನಮ್ಮ ಬಸವಯ್ಯನು
ಆ ಕೈಲಾಸವೇ ಕಲ್ಯಾಣವಾಗಲಾ ಕಲ್ಯಾಣಕ್ಕೆ
ಪ್ರಮಥಗಣಂಗಳ, ರುದ್ರ ಗಣಂಗಳ, ಅಮರಗಣಂಗಳ,
ಪುರಾತನಗಣಂಗಳ, ಪುಣ್ಯಗಣಂಗಳ...
ತಂದು ನೆರಹಿದಾತ ನಮ್ಮ ಬಸವಯ್ಯನು.....'

ನೀಲಮ್ಮರ ಭಾವ ದೀಪ್ತಿ ಮತ್ತೂ ಉತ್ಕಟಗೊಂಡು ಕಲ್ಯಾಣವನ್ನು 'ಪರಬ್ರಹ್ಮದ ಕಲ್ಯಾಣ' ಎಂದು ಕಲ್ಪಿಸಿ ಸುಖಿಯಾಗಿದ್ದಾರೆ:

'ಇರವಿಲ್ಲದ ವಸ್ತುವ ಕಂಡು
ಪರವಶದ ಮೂರ್ತಿಯಿನರಿದೆನಯ್ಯ.
ಪರಬ್ರಹ್ಮದ ಕಲ್ಯಾಣದಲ್ಲಿ ಪರಮಶಿವತ್ವವ ಕಂಡೆನಯ್ಯ.
ಪರಕಾಯ ಪ್ರವೇಶಿಯಾಗಿ ಪರತರಸುಖವನರಿದು
ಬದುಕಿದೆನಯ್ಯ ಸಂಗಯ್ಯ.'

'ದೇವನೊಬ್ಬನೆ ಜಗವ ಕಾಪಾಡಬಲ್ಲಾತ, ಕೊಲುವಾತ' ಎಂಬ ಕಡುನಂಬಿಕೆಯ ಮಡಿವಾಳ ಮಾಚಯ್ಯರು ಅಕ್ಕಮಹಾದೇವಿ, ನೀಲಾಂಬಿಕೆಯರ ಈ ನಂಬಿಕೆಯನ್ನು ಮತ್ತಷ್ಟು ಪುಷ್ಟಿಗೊಳಿಸಿದ್ದಾರೆ.

'ಹೋಗಬಾರದು ಕಲ್ಯಾಣವನಾರಿಗೆಯೂ.
ಹೊಕ್ಕಡೇನು? ಕಲ್ಯಾಣದ ಸ್ಥಾನಮಾನಂಗಳನರಿಯಬಾರದು.
ಕಲ್ಯಾಣದ ಕಡೆಯ ಕಾಣಬಾರದು.
ಕಲ್ಯಾಣದೊಳಗೆ ಹೊಕ್ಕೆಹೆನೆಂದು, ಕಲ್ಯಾಣಚರಿತ್ರರಾದೆವೆಂದು,
ದೇವದಾನವ ಮಾನವರೆಲ್ಲರೂ ಭಾವಿಸುತ್ತಿರ್ಪರು ನೋಡಾ!
ಕಲ್ಯಾಣವನು ಅನಂಮೂರ್ತಿಗಳು...
ಪೂಜಕರು, ಯೋಗಿಗಳು, ಭೋಗಿಗಳು, ದ್ವೈತರು,
ಅದ್ವೈತರು, ಕಾಮಿಗಳು, ನಿಷ್ಕಾಮಿಗಳು, ಆಶ್ರಿತರು
ಅದೆಂದು ಹೋಗಬಹುದಯ್ಯಾ ಕಲ್ಯಾಣವನು?
ಅದೆಂದು ಕಾಣಬಹುದಯ್ಯಾ ಕಲ್ಯಾಣವನು?
ಲಿಂಗದೃಷ್ಟಂಗಲ್ಲದೆ, ಲಿಂಗವೇದ್ಯಂಗಲ್ಲದೆ, ಲಿಂಗಗಂಭೀರಂಗಲ್ಲದೇ?...
ಆಶೆಗೆಡೆಗುಡದಿಪ್ಪುದೆ ಕಲ್ಯಾಣ.
ಸರ್ವಾಂಗವರ್ಣವಳಿದು, ಕುಲಮದ ತಲೆದೋರದೆ
ಭಕ್ತಿ ನಿತ್ಯವಾದುದೇ ಕಲ್ಯಾಣ.
ಈ ಕಲ್ಯಾಣವೆಂಬ ಮಹಾಘನದೊಳಗೆ
ಬಸವಣ್ಣನು ನಾನು ಕೂಡಿ ಹದುಳಿರ್ದೆವು ಕಾಣಾ ಕಲಿದೇವಯ್ಯ.'

ಕಲ್ಯಾಣದಲ್ಲಿ ಈಗಾಗಲೇ ಸಹಸ್ರಾರು ಜನ ವಾಸವಿದ್ದಾರೆ. ಬಸವಣ್ಣನಿರುವ ಕಲ್ಯಾಣ ಬಸವಕಲ್ಯಾಣವೆಂದೂ, ಅಭಿನವ ಕೈಲಾಸವೆಂದೂ ದೇಶದ ನಾನಾ ಮೂಲೆಗಳಿಂದ ಲಕ್ಷ ಲಕ್ಷ ಜನ ಕಲ್ಯಾಣಕ್ಕೆ ಆಗಮಿಸುತ್ತಾರೆ. ಆದರೆ ಇವರೆಲ್ಲರಿಗೂ ಕಲ್ಯಾಣದ ಸ್ಥಾನಮಾನ ಆಳ ಅಗಲಗಳು ಕಾಣುತ್ತದಲ್ಲದೆ, ನಿಜಕಲ್ಯಾಣ ಅರಿವಿಗೆ ನಿಲುಕುತ್ತದೆಯೇ? ಶಿವಾಕಾಶದಲ್ಲಿ, ಶಿವಪ್ರಕಾಶದಲ್ಲಿ, ಶಿವಪ್ರತಾಪದಲ್ಲಿ ಮೂಡಿ ಬೆಳಗಿ ವ್ಯವಹರಿಸುತ್ತಿರುವ **'ರುದ್ರ ಲೋಕದಿಂದ ಮರ್ತ್ಯಲೋಕಕ್ಕಿಳಿತಂದ' 'ವಿವಾಹದ ಮಾಂಗಲ್ಯಕ್ಕೆ ಕಲ್ಯಾಣವೆಂದು ತನ್ನ ಹೆಸರನ್ನೀ ಆಶೀರ್ವದಿಸಿದ'** ಮಹಾಕಲ್ಯಾಣದ ಮಂಗಳ ಮಹಾದೃಶ್ಯವನ್ನು ಕಾಣಬೇಕಾದರೆ ಲಿಂಗದೃಷ್ಟರಾಗಿರಬೇಕು, ಲಿಂಗವೇದ್ಯರಾಗಿರಬೇಕು, ಲಿಂಗಗಂಭಿರರಾಗಿರಬೇಕು. ಈ ಕಲ್ಯಾಣ ಆಸೆಯ ಹೆಸರಿಲ್ಲದ; ಕಾಮಾದಿಗಳ ಸುಳುಹಿಲ್ಲದ; ಕುಲ, ಜಾತಿ, ವರ್ಣ, ಆಶ್ರಮಧರ್ಮಗಳ ಭೇದಭಾವವಿಲ್ಲದ; ನಿತ್ಯಭಕ್ತಿಯೊಂದೇ ಸದಾಕಾಲದ ನಿರೀಕ್ಷೆಯಾಗಿರುವ ಮಹಾಕಲ್ಯಾಣ. ಮಾನವತೆಯ ಪರಮಕಲ್ಯಾಣ. ಇಂಥ 'ಕಲ್ಯಾಣ'ವೆಂಬ ಘನದೊಳಗೆ ಬಸವಣ್ಣನೊಡಗೂಡಿ 'ಶರಣತೆ'ಯೇ ದಿವ್ಯಕ್ಷೇಮದಲ್ಲಿ ಇದ್ದಿತೆಂಬ ಅವಿನಾಭಾವ ಇಲ್ಲಿದೆ. ಹೌದು, **'ಕಲ್ಯಾಣವೆಂಬುದು ಮಹಾಘನ. ಸರ್ವಶುದ್ಧರಲ್ಲದವರು ಅದ ಸಾಧಿಸಲಾರರು.'** ಈ ಮಹಾಕಲ್ಯಾಣದ ಅಧಿದೈವ ತ್ರಿಪುರಾಂತಕದೇವ. ಈ ದೈವದ ಹೆಸರೇ ಮಾಚಯ್ಯ, ಕೀಲಾರದ ಭೀಮಣ್ಣ, ಕಿನ್ನರಿ ಬ್ರಹ್ಮಯ್ಯ ಮುಂತಾದ ಶರಣರ ಅಂಕಿತವೂ ಹೌದು. ಕಿನ್ನರಿ ಬೊಮ್ಮಯ್ಯ ಹೇಳುವುದು:

**'ಕಲ್ಲೊಳಗಣ ಬೆಲ್ಲವ ಮೆದ್ದವರಿನ್ನಾರೊ? ಕಲ್ಲನೆ ಹಿಡಿದು ಬಿಡದೆ ಹಾರುವಿರಿ.**
**ಕಲ್ಲು ಹಲ್ಲನೆ ಕಳೆಯಿತ್ತು. ಬಲ್ಲವರಿದ ಹೇಳಿ**
**ಕಲ್ಯಾಣದ ತ್ರಿಪುರಾಂತಕ ನೀನೆ ಬಲ್ಲೆಯಯ್ಯಾ'**

ಮತ್ಸರ ರಾಗದ್ವೇಷಗಳು ಯಾರನ್ನೂ ಬಿಟ್ಟಿಲ್ಲ. ಈ ಲೋಕದ ಯಾರೂ ಅದರಿಂದ ಹೊರತಲ್ಲ. ಮತ್ತೇ ಹೇಳಬೇಕೆಂದರೆ ಮನೆಮನಗಳ ಶುದ್ಧಿಯಾಗಬೇಕಾದರೂ ನಿಂದಕರಿರಬೇಕು. ಇಂಥ ನಿಂದಕರು ಮರ್ತ್ಯಕ್ಕೆ ಪ್ರತಿ ಕೈಲಾಸವಾದ ಕಲ್ಯಾಣದಂಥ ಪಟ್ಟಣದಲ್ಲೂ ಇದ್ದರೆಂಬುದನ್ನು ಮಾಚಿದೇವರ ಈ ವಚನ ಸೂಚ್ಯವಾಗಿ ಹೇಳಿದೆ:

**'....ಬಸವಣ್ಣನೆಂಬ ನಾಮಕರಣವಂ ಧರಿಸಿ**
**ಕೂಡಲಸಂಗಮದೇವರ ದಿವ್ಯ ಶ್ರೀಪಾದ ಪದ್ಮಾರಾಧಕನಾಗಿ**
**ಮರ್ತ್ಯಕ್ಕೆ ಪ್ರತಿಕೈಲಾಸವೆಂಬ ಕಲ್ಯಾಣಮಂ ಮಾಡಿ**
**ತನ್ನ ಪರೀಕ್ಷೆಗೆ ಬಿಜ್ಜಳನೆಂಬ ಒರೆಗಲ್ಲ ಮಾಡಿ,**
**ಆ ಸದ್ಭಕ್ತಿ ಬಿನ್ನಹವನು ಒರೆದೊರೆದು ನೋಡುವ**
**ಕೊಂಡೆಯ ಮಂಜಣ್ಣಗಳ ಹುಟ್ಟಿಸಿದ...'**

ಮಹಾಕಲ್ಯಾಣದ ವಿಸ್ತೀರ್ಣವನ್ನು ಈ ಹಿಂದೆಯೇ ನೋಡಿದ್ದೇವೆ. ಆ ನಗರದ ಶರಣರ ಹೊಂದಾಣಿಕೆ ಭಾವವನ್ನು ಮಾಚಿದೇವರು ಹೀಗೆ ನಿರೂಪಿಸುತ್ತಾರೆ:

**'ಕಲ್ಯಾಣವೆಂಬ ಪಟ್ಟಣದೊಳಗೆ ಛತ್ತೀಸಪುರದ ಮಹಾಗಣಂಗಳು.**
**ಒಂದು ಪುರದವರು ಅಗ್ಘಣಿಯ ತರುವರು,**
**ಎರಡು ಪುರದವರು ಸಮ್ಮಾಜನವ ರಂಗವಲಿಯ ಮಾಡುವರು.**
**ಮೂರು ಪುರದವರು ಲಿಂಗಾರ್ಚನೆಗೆ ನೀಡುವರು.**
**ನಾಲ್ಕು ಪುರದವರು ಲಿಂಗಕ್ಕೆ ಬೋನವ ಮಾಡುವರು.**
**ಐದು ಪುರದವರು ಅರ್ಪಿತಕ್ಕೆ ನೀಡುವರು.**
**ಆರು ಪುರದವರು ಪ್ರಸಾದದಲ್ಲಿ ತದ್ಗತರಾಗಿಹರು.**
**ಏಳು ಪುರದವರು ಧ್ಯಾನಾರೂಢರಾಗಿಹರು.**
**ಮುಂದಣ ಪುರದವರು ನಿಶ್ಚಿಂತ ನಿವಾಸಿಗಳಾಗಿಹರು...'**

ಕಲ್ಯಾಣಪಟ್ಟಣದ ಮುವತ್ತಾರುಪುರದ ಮಹಾಗಣಗಳೂ ಲಿಂಗಪೂಜೆಯಲ್ಲಿ ತಲ್ಲೀನರಾಗುವ ಈ ಭಾವಸೌಂದರ್ಯದ ಸ್ಥೂಲಕಲ್ಪನೆಯೂ ಎಷ್ಟು ಉದಾತ್ತವಾದುದು!

ಸೂಕ್ಷ್ಮ ಅವಲೋಕನಕ್ಕೆ ಈ ಎಲ್ಲ ಪುರವರ್ಣನೆಯೂ ಬೇರೆಯದೇ ಆದ ಅಧ್ಯಾತ್ಮದ ಲೋಕದೆಡೆಗೆ ಹೊರಳಿಕೊಳ್ಳುತ್ತದೆ. ಮಡಿವಾಳ ಮಾಚಿದೇವರಲ್ಲಿ ನಿಷ್ಠೆಯಷ್ಟೇ ಕಠೋರತೆಯೂ ಇದ್ದಿತು. ಕಲ್ಯಾಣ ಪಟ್ಟಣದಲ್ಲಿ ನಡೆಯುವ ವೈಚಾರಿಕ ಕ್ರಾಂತಿಯನ್ನು ಒಪ್ಪದ ಜನರನ್ನು ನಿಷ್ಠೂರವಾಗಿ ಬದಿಗಿರಿಸುವ ದಾರ್ಷ್ಟ್ಯ ಅವರದು. ಇಂಥ ಸಮೂಹ ಇದ್ದುದರಿಂದಲೇ ಬಸವಣ್ಣನವರ ಸಂಕಲ್ಪ ಬಲದ ಕಲ್ಯಾಣಕ್ರಾಂತಿ ಅಷ್ಟೊಂದು ಯಶಸ್ವಿ ಮಟ್ಟ ಮುಟ್ಟಿದ್ದು.

**'ಕಲ್ಯಾಣಪಟ್ಟಣದಲ್ಲಿ ಕಲಕೇಯ್ಯಗಳು**
**ಕಿನ್ನರಯ್ಯಗಳ ಸ್ಥಾವರ ದೈವದ ಸೇವೆ, ಯಾಚಕತ್ವವ ಬಿಡಿಸಿ,**
**ಗುರು ಕೊಟ್ಟ ಇಷ್ಟಲಿಂಗದಲ್ಲಿ ನಿಷ್ಟೆಯ ಗಟ್ಟಿಗೊಳಿಸಿ**
**ಘನವೀರಶೈವದ ಬಟ್ಟೆಯನರುಹಿದರೆಂಬುದ ಕೇಳಿ ನಂಬದೆ**
**ಸೃಷ್ಟಿಯ ಪ್ರತಿಷ್ಠೆಗೆ ಶರಣೆಂದರೆ, ಮೆಟ್ಟು ನರಕದಲ್ಲಿ**
**ಕಲಿದೇವಯ್ಯ'**

ಬಸವಣ್ಣನ ಮಡದಿ ನೀಲಲೋಚನೆ ಬಸವಣ್ಣನ ಅನುಭವದ ವಿವರವನ್ನು ಕಂಡು ವಿಚಾರಪತ್ನಿ ಆಗುವುದಷ್ಟೇ ಅಲ್ಲ, ಸ್ವತಃ ಅನುಭವಶೀಲವನರಿತು ಮುಕ್ತ್ಯಂಗನೆಯೂ ಆಗಿದ್ದರು. ಕಲ್ಯಾಣದ ಒಳಹೊರಗುಗಳನ್ನು ಸ್ಪಷ್ಟವಾಗಿ ಕಂಡುಂಡು ಬೆಳೆದ ಅವರು ಬಸವಣ್ಣನ ಆಗಮನದಿಂದ ಕಲ್ಯಾಣದಲ್ಲಾದ ಬದಲಾವಣೆಗಳನ್ನು ಅಣು ಅಣುವಾಗಿ ಅರಿತಿದ್ದರು. ಕಾಯಕಲ್ಯಾಣದೊಳಗೆ ನಿಷ್ಠೆಯ ಇರುವನ್ನು ಅರಿದು ಅಳವಡಿಸಿಕೊಂಡ ಅವರು ತಮ್ಮ ಭಾವಾನುಭಾವಗಳನ್ನು ಹೀಗೆ ಪ್ರಕಟಪಡಿಸಿದ್ದಾರೆ;

**'ನೋಡುವಡೆ ಎನ್ನ ಕಣ್ಣಿಂಗೆ ಗೋಚರವಲ್ಲ**
**ಆ ಕಾಯ ಕಲ್ಯಾಣ.**
**ಆ ಕಾಯ ಕಲ್ಯಾಣದೊಳಗೆ**
**ಸರೋವರದಷ್ಟದಳಂಗಳ ಮಧ್ಯದಲ್ಲಿ ಹೆಟ್ಟಿಗೆಯಿರಲು**
**ಆ ಹೆಟ್ಟಿಗೆಯ ಕುರುಹು ಕಂಡು ಇರುವನರಿದೆನಯ್ಯಾ ಸಂಗಯ್ಯ'**

ಬಸವ ಕಲ್ಯಾಣ ಪ್ರಭುವಿನಾಗಮನದಿಂದ ವಿಶಿಷ್ಟ ಕಾಂತಿ ಪಡೆದು ಕಂಗೊಳಿಸಿತು. ಸ್ವಲ್ಪ ಕಾಲ ಕಲ್ಯಾಣದಲ್ಲಿ ಉಳಿದಿದ್ದ ಪ್ರಭು ಮತ್ತೇ ದೇಶಸಂಚಾರದ ಬಯಕೆ ವ್ಯಕ್ತಪಡಿಸಿದಾಗ ಕಲ್ಯಾಣ ಮಂಕಾಯಿತು. ತಾನು ಮತ್ತೇ ಬೇಗನೇ ಹಿಂದಿರುಗುವ ಆಶ್ವಾಸನೆಯನ್ನು ನೀಡಿದ ಪ್ರಭು ಕಲ್ಯಾಣದಿಂದ ಹೊರ ನಡೆದರು. ಕಲ್ಯಾಣದ ಎಲ್ಲ ಶರಣರು ಬಸವಣ್ಣನವರ ನೇತೃತ್ವದಲ್ಲಿ 'ಶೂನ್ಯ ಸಿಂಹಾಸನ'ವನ್ನು ರಚಿಸಿ ಅದರ ಆರೋಹಕ್ಕಾಗಿ ಪ್ರಭುವಿನಾಗಮನವನ್ನು ಹಂಬಲಿಸಿ ಹಾರೈಸಿ ಕಾಯುತ್ತಿದ್ದರು. ಬಸವಣ್ಣನಂತೂ ದಿನದಿನವೂ ಕಲ್ಯಾಣಪುರವನ್ನು ಸಿಂಗರಿಸಿ ಕ್ಷಣ ಕ್ಷಣಕ್ಕೂ ಪ್ರಭುದೇವನ ಆಗಮನವನ್ನು ನಿರೀಕ್ಷಿಸುತ್ತಾ, **'ಬಂದಹನೆಂದು, ಬಾರದೆಯಿದ್ದರೆ ಬಟ್ಟೆಗಳ ನೋಡುತ್ತಾ, ಕೂಡಲಸಂಗನ ಶರಣರು ಬಾರದಿದ್ದರೆ ಅಚ್ಚುವೆನೆನ್ನ ಹಡಪದ ಅಪ್ಪಣ್ಣ** ತಮ್ಮ ನುಡಿಗಳಲ್ಲಿ ಹಿಡಿದಿಟ್ಟಿದ್ದಾರೆ:

**'ಉಪ್ಪರದ ಗುಡಿ ತೋರಣವ ಕಟ್ಟಿತ್ತು ಕಲ್ಯಾಣದಲ್ಲಿ**
**ಅಷ್ಟ ದ್ವಾರದಂಗಡಿ ರಾಜಬೀದಿಯೊಳೆಲ್ಲಾ**
**ವ್ಯಾಸನ ಬಾಹುಗಳುಪ್ಪರಿಸಿದವು**
**ಎಂಟು ಭಾಗದಲ್ಲಿ ನಡೆ ಮಡಿಯ ಹಾಸಿ...**
**ಸಂಕಲ್ಪ ಸಂತೋಷವನ್ನು ಮಾಡಿದನು ವೃಷಭೇಶ್ವರನು**
**ಬಸವಪ್ರಿಯ ಕೂಡಲಚೆನ್ನಸಂಗಯ್ಯಾ ಬಂದಹನೆಂದು'**

ಕಲ್ಯಾಣದ ಈ ಎಲ್ಲಾ ಘಟನಾವೈವಿಧ್ಯದ, ವಸ್ತುಸ್ಥಿತಿಯನ್ನು ಅರಿತೂ ಅರಿಯದವರಂತೆ ಹನ್ನೆರಡು ವರ್ಷಗಳ ಕಾಲ ಅಲ್ಲಮಪ್ರಭು ದೇಶಸಂಚಾರಿಯಾಗಿರುತ್ತಾರೆ. ಕಲ್ಯಾಣ ವೃಕ್ಷದ ಸಾಧನೆಯ ಫಲ ಪರಿಪಕ್ವತೆಗೆ ಬರಬೇಕೆಂಬುದು ಅವರ ನಿರೀಕ್ಷೆ ಇರಬಹುದು. ಅವರ ಅಂದಿನ ಭಾವ ಈ ಬೆಡಗಿನ ವಚನದಲ್ಲಿ ಅಡಗಿದೆಯೆನ್ನಿಸುತ್ತದೆ:

**'ಕಲ್ಯಾಣವರಿಯೇ ಕಟಕವರಿಯೇ ಬೆಂಟೆಯನಾಡುತ್ತಿದ್ದೆ**
**ಎನ್ನ ಕೈ ನೋಡಿ ಥೋ ಕಲಿ ವೀರಸುಭಟರು...**
**ಕಾವಿ ಗೆಲಿದು ಗುಹೇಶ್ವರಲಿಂಗದಲ್ಲಿ ತಲೆವರಿಗೆಯನಿಕ್ಕಿ ಬಂದೆ**
**ಎನ್ನ ಕೈ ನೋಡಿ ಥೋ...'**

ಆದರೆ, ಭಕ್ತರ ಬಿನ್ನಹವನ್ನು ನಿವಾರಿಸಿಕೊಂಡು ಎಷ್ಟು ಕಾಲ ದೂರವಿರಲು ಸಾಧ್ಯ? ಪ್ರಭು ಕಲ್ಯಾಣಕ್ಕೆ ಬಂದೇ ಬರುತ್ತಾರೆ, ವೇಷಮರೆಸಿಕೊಂಡು. ಆದರೂ ಭಕ್ತ ಭಂಡಾರಿಗೆ ಗುರುತು ಸಿಕ್ಕುತ್ತದೆ. ಮತ್ತೆ ಕಲ್ಯಾಣದ ವೈಭವ ನೂರ್ಮಡಿಗೆ ಏರುತ್ತದೆ. ಭಕ್ತಗಣದ ಸ್ತೋತ್ರ ಮುಗಿಲು ಮುಟ್ಟಿ ಹರಿಯುತ್ತದೆ. ಈ ಮಹಾ ಸನ್ನಿವೇಶವನ್ನು ಜನಪದರೂ ತಮ್ಮ ಮಾತುಗಳಲ್ಲಿ ಹಿಡಿದಿರುವುದನ್ನು ಮರೆತಿಲ್ಲ.

**'ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗಣಗಳ ನಿತ್ಯದ ತೃಪ್ತಿಯಲಿ**
**ಲಕ್ಷ ಚಲಿಸದೆ ಭಕ್ತಿಯ ಮಾಡಿದ ಬಸವೇಶ್ವರ ಕಲ್ಯಾಣದಲ್ಲಿ'**

ಹೌದು, ತನ್ನ ಹಾರೈಕೆ ಸಫಲವಾಗಿ ಆರಾಧ್ಯದೈವ ಮೂರ್ತಿಗೊಂಡು ಬಂದ ಬಳಿಕ ಬಸವಣ್ಣನ ಲಕ್ಷ ಅತ್ತಲಿತ್ತ ಚಲಿಸುವುದಾದರೂ ಹೇಗೆ? ಪ್ರಭುದೇವ **'ಕಲ್ಯಾಣವೆಂಬ ಪ್ರಣತೆಯಲ್ಲಿ...ಬಸವಣ್ಣನೆಂಬ ಜ್ಯೋತಿ...'**ಎಂದರೆ ನಮ್ಮ ಜನಪದರು ಇನ್ನೂ ಮುಂದುವರೆದು ಹೇಳಿರುವುದು ಹೀಗೆ:

**'ಕಲ್ಯಾಣವು ಪ್ರಣತೆಯಾಯ್ತು.**
**ಭಕ್ತಿ ತೈಲವಾದನು ಬಸವಣ್ಣ।**
**ಸಲ್ಲೀಲೆಯಲ್ಲಿ ಪೂರ್ಣಜ್ಞಾನದ**
**ಬತ್ತಿಯಾದ ಚನ್ನಬಸವಣ್ಣ॥'**

**ಬೆಳಗುವ ಹಣತೆ ಕಲ್ಯಾಣ,**
**ಉರಿವ ಎಣ್ಣೆಯು ಬಸವಣ್ಣ.**
**ಬತ್ತಿಯಾದ ಚನ್ನಬಸವಣ್ಣ.**
**ಪ್ರಭುದೇವ ಜ್ಯೋತಿಯಾದನಣ್ಣ॥**

ಇಂಥ ಮಹಾನ್ ಜ್ಯೋತಿ ಸದಾ ಉರಿಯುತ್ತಲೇ ಇರಲಿ ಎಂದು ಹಾರೈಸುವ ಜನಪದ ಮನಸ್ಸು:

**'ಬಸವ ಬೆಳಕು ಬೆಳಗಲಿ**
**ಭವದ ಇರುಳು ಕಳೆಯಲಿ**
**ಎದೆಯು ಕಲ್ಯಾಣವ ನೆನೆಯಲಿ...**

**ಸದಯ ಬಸವನ ನೆನೆಯಲಿ**
**ಕಲ್ಯಾಣ ಬಸವನ ನೆನೆಯಲಿ'.**

ಎಂದು ಹಾಡಿ ತಣಿದಿದೆ.ಹಣ್ಣು ಪಕ್ವವಾದ ಬಳಿಕ ತೊಟ್ಟು ಕಳಚಿ ಕೊಳ್ಳುವಂತೆ ಪಕ್ವಮಾನಿಸರಾದ ಶರಣರು ಬಂದ ಮಣಿಹವನ್ನು ಪೂರೈಸಿಕೊಳ್ಳಬೇಕು ಎಂಬುದನ್ನು ಅರಿತ ಅಲ್ಲಮಪ್ರಭು **'ಸಾವನ್ನಕ್ಕರ ಸರವ ಕಲಿತರೆ ಕಾದುವ ದಿನವಾವುದು? ಆದಿಯಲ್ಲಿ ಪರಶಿವನ ಸದ್ ಸ್ವರೂಪವಾದ ಸ್ಥೂಲ ತತ್ವವೇ ಮರ್ತ್ಯಲೋಕದ ಮಹಾ ಮನೆಯನ್ನುದ್ಧರಿಸಲೆಂದು.... ಐತಂದು ಕಲ್ಯಾಣವೆಂಬ ಕಟಕವ ಶಿವಪುರವ ಮಾಡಿ... ಶಿವಾಚಾರ ಧ್ವಜವನೆತ್ತಿ... ಶಿವಲೋಕಕ್ಕೆ, ಮರ್ತ್ಯಲೋಕಕ್ಕೇ ತಾನೇ ನಿಚ್ಚಣಿಗೆಯಾಗಿ ಮೆರೆದು ಮರ್ತ್ಯವ ಪಾವನ ಮಾಡಿದ ಬಳಿಕ ಇನ್ನು**

**ಮರ್ತ್ಯದ ಹಂಗೇಕೆ?.... ಇನ್ನು ನಿಮ್ಮ ನೀವೇ ತಿಳಿದು ನಿರಾಳದಲ್ಲಿ ನಿಜವನೈದಿ...'** ಎಂದು ನಿರೂಪ ಕೊಡುತ್ತಾರೆ. **'...ಬಸವಣ್ಣ... ನಡೆ ನೀನು, ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡು... ಉಳುವೆಯಲ್ಲಿ ನಿಜವನೆಯ್ದು ನಡೆ ಚನ್ನಬಸವಣ್ಣ. ಮಹವನೊಡಗೊಡು ಮಡಿವಾಳಯ್ಯ, ಸೊಡ್ಡಳ ಬಾಡರಸರು ಮೊದಲಾದ ಪ್ರಥಮರೆಲ್ಲರೂ ನಿಜವಾಗಲಿ ನಿಜವ ನಿರ್ವಯಲ ಸಮಾಧಿಯಲ್ಲಿ...'** ಎಂಬ ನಿರ್ದೇಶನವನ್ನೂ ಕೊಡುತ್ತಾರೆ. ಇದನ್ನು ನೊಂದ ಹೃದಯದ ಬಸವಣ್ಣ ಹೀಗೆ ಕಟ್ಟಿಕೊಟ್ಟಿದ್ದಾರೆ:

**'ನಾನು ಬಂದ ಕಾರ್ಯಕ್ಕೆ ನೀವು ಬಂದಿರಿ.**
**ನೀವು ಬಂದ ಕಾರ್ಯಕ್ಕೆ ನಾನು ಬಂದೆ**
**ನಾನು ನೀವೂ ಬಂದ ಕಾರ್ಯಕ್ಕೆ**
**ಬಂದಾತನಲ್ಲಮಪ್ರಭುದೇವರು.**
**ಮುಂದೆ ಕೆಲವು ದಿವಸಕ್ಕೆ**
**ಕಲ್ಯಾಣವೆಂಬುದು ಪ್ರಣತಿಯಾಯಿತ್ತು, ನಾನು ತೈಲವಾದೆನು**
**ಚಿಕ್ಕ ದಂಡನಾಯಕರು ಬತ್ತಿಯಾದರು**
**ಪ್ರಭುದೇವರು ಜ್ಯೋತಿಯಾದರು.**
**ಪ್ರಣತಿ ಒಡೆಯಿತ್ತು, ತೈಲವರತಿತ್ತು....**
**ಜ್ಯೋತಿ ಬಯಲಾಯಿತ್ತು...'**

ತೈಲವನ್ನೂ, ಬತ್ತಿಯನ್ನೂ ತನ್ನ ಒಡಲಿನಾಳದಲ್ಲಿ ಕಾಪಿಟ್ಟುಕೊಂಡು ನಿರಂತರ ಬೆಳಕು ನೀಡಲು ಹವಣಿಸುವ ದೀಪವೇ ಒಡೆದು ಹೋದ ಬಳಿಕ ತೈಲ ಬತ್ತಿಗಳು ನಿಲ್ಲುವುದು ಎಲ್ಲಿ? ಜ್ಯೋತಿ ಬೆಳಗೀತು ಹೇಗೆ? ಕಲ್ಯಾಣದ ವಿಷಮ ಪರಿಸ್ಥಿತಿಯನ್ನು ನೋಡಿ ತತ್ತರಿಸಿದ ಶರಣರೆಲ್ಲರೂ ಕಲ್ಯಾಣದಿಂದ ಹೊರಹೋಗುವ ಬಗೆಗೆ ಚಿಂತನೆ ನಡೆಸುವುದರಲ್ಲಿ ಕಲ್ಯಾಣದಲ್ಲಿ ನಡೆದ ಅನೂಹ್ಯ ಘಟನೆಗಳೇ ಕಾರಣವಾಗಿ ಬಸವಣ್ಣನವರು ಎಲ್ಲರಿಗಿಂತ ಮೊದಲು ಕಲ್ಯಾಣದಿಂದ ಹೊರನಡೆಯಬೇಕಾಯಿತು. ಬಸವಣ್ಣನವರಿಂದ ಭಾಗ್ಯರೇಖೆ ಪಡೆದು ಉತ್ತುಂಗದಲ್ಲಿ ಮೆರೆದ ಕಲ್ಯಾಣ ಈಗ ಬಸವಣ್ಣನವರ ವಿಯೋಗದಿಂದ ಕುಗ್ಗಿ ಕುಸಿದುಹೋಯಿತು.

ಬಸವಣ್ಣನವರ ವಿಚಾರಪತ್ನಿ ಮುಕ್ತ್ಯಂಗನೆ ನೀಲಲೋಚನೆ ಸಂಗಮಕ್ಕೆ ಪತಿಯ ಜೊತೆಯಲ್ಲಿ ತೆರಳದೆ ಕಲ್ಯಾಣದಲ್ಲೇ ಉಳಿದಿದ್ದರು. ಬಸವಣ್ಣನಿದ್ದ ಕಲ್ಯಾಣದ ವೈಭವವನ್ನು ಕಂಡುಂಡು, ಕಲ್ಯಾಣವೇ ಕೈಲಾಸ ಎಂದು ಸಂಭ್ರಮಿಸಿ ಸುಖಿಸಿ ಸವಿದಿದ್ದ ಅವರಿಗೆ ಬಸವಣ್ಣನಿಲ್ಲದ ಕಲ್ಯಾಣ ಹಾಳು ಕೊಂಪೆಯಾಗಿ ಕಾಣಿಸುತ್ತದೆ:

**'ಕಲ್ಯಾಣವಿಲ್ಲ ಕೈಲಾಸವಿಲ್ಲ ಬಸವಾ**
**ಕಲ್ಯಾಣವಿಲ್ಲದ ಕಾರಣ ಕೈಲಾಸವಿಲ್ಲವೆನಗೆ ಬಸವಾ**
**ಆ ಕಲ್ಯಾಣ ಕೈಲಾಸವಾಯಿತ್ತು ಬಸವಾ**
**ಆ ಕಲ್ಯಾಣವಳಿದ ಬಳಿಕ ಬಸವನ ಮೂರ್ತಿಯಿಲ್ಲ.**
**ಬಸವನ ಮೂರ್ತಿಯನರಿಯದ ಕಾರಣ ಕೈಲಾಸವಿಲ್ಲ,**
**ಕಲ್ಯಾಣವಿಲ್ಲವಯ್ಯಾ ಸಂಗಯ್ಯಾ'**

'ಕಲ್ಯಾಣವೇ ಕೈಲಾಸವಾಗುತ್ತದೆ, ಬಸವಣ್ಣನ ಮೂರ್ತಿ ಇಲ್ಲಿ ನೆಲೆ ನಿಂತಾಗ. ಆ ಬಸವಮೂರ್ತಿಯ ಒಳಗಿನ ಬೆಳಗನ್ನು ಅರಿಯಲಾಗದೆ ಮಹಾಕಲ್ಯಾಣದಿಂದ ಆ ಮಹಾ ತೇಜೋಪುಂಜವನ್ನು ಹೊರಕಳಿಸಿದಾಗ ಕಲ್ಯಾಣವೂ ಇಲ್ಲ ಕೈಲಾಸವೂ ಇಲ್ಲ' ಎಂಬ ಈ ಮೂಕನೋವು ಎದೆಯನ್ನು ಇರಿಯುತ್ತದೆ.

ಕಲ್ಯಾಣದಿಂದ ಬಸವಣ್ಣ ಹೊರನಡೆದಮೇಲೆ ಕಲ್ಯಾಣನಗರವು ಕೈಲಾಸವೆಂಬ ಪದವಿಯಿಂದ ಪತನವಾದುದಷ್ಟೇ ಅಲ್ಲ ಅದರ ಸುಖ, ಶಾಂತಿ, ನೆಮ್ಮದಿ, ಸಮೃದ್ಧಿ ಎಲ್ಲವೂ ಸೂರೆಹೋದುವು. ವಚನ ಭಂಡಾರಿ ಶಾಂತರಸ ಆ ಸಂದರ್ಭವನ್ನು ಹೀಗೆ ಚಿತ್ರಿಸಿದ್ದಾರೆ.

**'...ಅಯ್ಯಾ ನಾ ಹಿಡಿದ ನೀಲಕಂಠನು ಶಕ್ತಿಸಮೇತವ ಬಿಟ್ಟನು.**
**ಕಲ್ಯಾಣ ಹಾಳಾಯಿತ್ತು ಭಂಡಾರ ಸೂರೆಹೋಯಿತ್ತು.**
**ನಿರ್ವಚನವಾಯಿತ್ತು.**
**ಅರಸರು ನಿರ್ಮಾಲ್ಯಕ್ಕೆ ಒಳಗಾದರು.**
**ಆಲೇಖ ನಾಶವಾಯಿತ್ತು. ಪತ್ರ ಹರಿಯಿತ್ತು.**
**ನಾದ ಶೂನ್ಯವಾಯಿತ್ತು...'**

ಪ್ರತಿನಿತ್ಯದ ಸತ್ಯ ಶುದ್ಧ ಕಾಯಕ, ಲಿಂಗಪೂಜೆ, ಜಂಗಮದಾಸೋಹ, ಪ್ರಸಾದ, ಅನುಭವಮಂಟಪದ ವಿಚಾರ ವಿನಿಮಯಗಳಿಂದ ಸಂತೃಪ್ತವಾಗಿದ್ದ ಕಲ್ಯಾಣದಲ್ಲಿ ಮತದ್ವೇಷದ ಮಾತ್ಸರ್ಯದ ಕಿಡಿಗಳು ಸಿಡಿದೇಳತೊಡಗಿದಾಗ ತಪ್ತರಾದ ಬಸವಣ್ಣನವರು ಅನಿವಾರ್ಯವಾಗಿ ಕೆಲಕಾಲದವರೆಗೆ ಕಲ್ಯಾಣದಿಂದ ದೂರವಾಗಬೇಕು ಎಂದುಕೊಂಡು, ಕಲ್ಯಾಣದಲ್ಲಿ ಕಳೆದುಹೋದ ಪ್ರಶಾಂತತೆಯನ್ನು ಹುಡುಕಿಕೊಂಡು ಸಂಗಮಕ್ಕೆ ತೆರಳಿದರು. ಆದರೆ ಅಲ್ಲಿಗೂ ಕಲ್ಯಾಣದ ಮಹಾವಿಪ್ಲವದ ಸುದ್ದಿ ಬೆನ್ನಟ್ಟಿ ಬಂದಾಗ ಅಪಾರ ವೇದನೆಯಿಂದ ಹಿಂಡಿಹೋದರು.

**'ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲಾ ಮಾನವಾ**
**ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು ನೋಡಾ,**
**ಒಬ್ಬ ಜಂಗಮದ ಅಭಿಮಾನದಿಂದ**
**ಚಾಳುಕ್ಯರಾಯನ ಆಳ್ವಿಕೆ ತೆಗೆಯಿತ್ತು.**
**ಸಂದಿತ್ತು ಕೂಡಲಸಂಗಮದೇವಾ ನಿಮ್ಮ ಕವಳಿಗೆಗೆ'**

ಬಾಲ್ಯದಿಂದಲೂ ಅನುಕ್ಷಣವು ಮಂಥಿಸಿ ಮಂಥಿಸಿ ತೆಗೆದಿದ್ದ ವಿಚಾರಧಾರೆಗಳ ನವನೀತ ಧಕ್ಕೆ ಒಂದು ಸ್ಪಷ್ಟ ಚಿತ್ರಣ ನೀಡಲು ಸೂಕ್ತ ಕ್ಷೇತ್ರವೆಂದು ಕಲ್ಯಾಣವನ್ನು ಆರಿಸಿಕೊಂಡ ಬಸವಣ್ಣನವರು ಅದಕ್ಕಾಗಿ ತಮ್ಮನ್ನು ತಾವೇ ಸಂಪೂರ್ಣವಾಗಿ ಸಮರ್ಪಿಸಿಕೊಂಡಿದ್ದರು. ಆದರೆ ಸಾಧನೆಯು ಸಿದ್ಧಿಯ ಸ್ವರೂಪ ಪಡೆಯುವ ಕಾಲ ಸನ್ನಿಹಿತವಾದ ಸಂದರ್ಭದಲ್ಲಿ ಕಲ್ಯಾಣದ ವಾತಾವರಣ ಸಂಪೂರ್ಣ ಕೆಟ್ಟು ಹಾಳಾದಾಗ ದಿಗ್ಭ್ರಮೆಯಾದರು. ಬಸವಣ್ಣನವರ ಸಾಧನೆಯ ಹಾದಿಗೆ ಬಿದ್ದ ಅತಿ ದೊಡ್ಡ ತಡೆಗೋಲು ಇದು. ಈ ವಿಘ್ನವನ್ನು ತಂದೊಡ್ಡಿದ ವಿಘ್ನ ಸಂತೋಷಿಗಳಿಗೆ ಏನು ಸಿಕ್ಕಿತೋ ಅರಿಯದು. ಆದರೆ, ಅದರಿಂದ ಇಡೀ ನಾಡಿಗೆ, ಇಡೀ ಸಮುದಾಯಕ್ಕೆ ಆದ ಅನ್ಯಾಯ ಮಾತ್ರ ಊಹಾತೀತ. ಇಲ್ಲಿ ಕೆಟ್ಟು ಹಾಳಾದ್ದು ಕಲ್ಯಾಣವಷ್ಟೇ ಅಲ್ಲ ಇಡೀ ಮಾನವೀಯ ಬದುಕು. ದಯವೆಂಬ ಧರ್ಮವೇ ನಾಶವಾಯಿತು. ಆದರೂ ವಿಧಿಯಿಲ್ಲ, ಬಸವಣ್ಣನವರು ಸಂಯಮವನ್ನು ಸಾಧಿಸಿಕೊಳ್ಳಲೇಬೇಕಾಯಿತು:

**'ಕರ್ತನಟ್ಟಿದಡೆ ಮರ್ತ್ಯದಲ್ಲಿ ಮಹಾಮನೆಯ ಕಟ್ಟಿದೆ.**
**ಸತ್ಯ ಶರಣರಿಗೆ ತೊತ್ತು ಭೃತ್ಯನಾಗಿ ಸವೆದು ಬದುಕಿದೆನು.**
**ಕರ್ತನ ಬೆಸನು ಮತ್ತೆ ಬರಲೆಂದಟ್ಟಿದಡೆ**
**ಕೂಡಲಸಂಗಮದೇವರ ನಿರೂಪಕ್ಕೆ ಮಹಾ ಪ್ರಸಾದವೆಂದೆನು'**

ಎನ್ನುತ್ತಾ ನಿರುದ್ವೇಗದಿಂದಲೇ ತೆರಳುತ್ತಾರೆ. ಆದರೆ... ಆದರೆ, ಕಲ್ಯಾಣಕ್ಕೆ ಕನ್ನಡಕ್ಕೆ ಕನ್ನಡನಾಡಿಗೆ ಕನ್ನಡ ಸಂಸ್ಕೃತಿಗೆ ಕಲ್ಯಾಣ ಸಂಸ್ಕೃತಿಗೆ ಆದ ನಷ್ಟ...?

ಬಸವಣ್ಣ ತೆರಳಿದ, ಕಲ್ಯಾಣ ಹಾಳಾಗಿಹೋದ, ಭಂಡಾರ ಸೂರೆಹೋದ, ವಚನ ನಿರ್ವಚನವಾಗಿ ನಾದ ಶೂನ್ಯವಾದ ಸಂಗತಿಗಳನ್ನು ಸ್ವತಹ ಅನುಭವಿಸಿದ ಶರಣರು ವಚನಗಳನ್ನು ಕಾಪಾಡಿಕೊಳ್ಳಲು

ಪ್ರಯತ್ನ ಮಾಡುತ್ತಲೇ ಬಯಲಾಗಿ ಹೋದರು. ಎಲ್ಲವನ್ನೂ ಮೌನವಾಗಿ ಸಹಿಸಿಕೊಂಡ ಪರಮಜ್ಞಾನಿ ಚೆನ್ನಬಸವಣ್ಣನ ವಿದಾಯದ ನುಡಿಗಳಿವು:

**'ಹನ್ನೆರಡು ಗಾವುದ ವಿಸ್ತೀರ್ಣದ ಪಟ್ಟಣಕ್ಕೆ**
**ಕಲ್ಯಾಣವೆಂಬ ಪ್ರಣತೆ.**
**ಆ ಪ್ರಣತೆಯಲ್ಲಿ ಮಹತ್ತೆಂಬ ಎಣ್ಣೆಯನೆರೆದು**
**ಜ್ಞಾನವೆಂಬ ಜ್ಯೋತಿಯ ಹೊತ್ತಿಸಿ ಒಪ್ಪುತಿದ್ದಿತಯ್ಯಾ.**
**ಅಲ್ಲಿ ಕಾಳಯ್ಯ, ಚೌಡಯ್ಯ, ಕೋಲಶಾಂತಯ್ಯ,**
**ಮೊಗವಾಡದ ಕೇಶಿರಾಜಯ್ಯ, ಖಂಡೆಯದಬೊಮ್ಮಣ್ಣ,**
**ಮಿಂಡ ಮಲ್ಲಿನಾಥ, ಹಡಪದ ಅಪ್ಪಣ್ಣ, ಮಡಿವಾಳಯ್ಯಗಳು**
**ಅವ್ವೆ ನಾಗಾಯಿಗಳು ಸಹಿತ ಇವರೆಲ್ಲರೂ**
**ಸಂಗನ ಬಸವಣ್ಣನ ಬಯಲ ಕೂಡಿ ಹೋದರು'**

ಶರಣರೆಲ್ಲರೂ ಬಯಲಲ್ಲಿ ಬಯಲಾಗಿ ಹೋದರೂ ಚೆನ್ನಬಸವಣ್ಣನ 'ಕಲ್ಯಾಣಾಭಿಮಾನ' ಸ್ವಲ್ಪವೂ ಕುಂದಲಿಲ್ಲ ಎಂಬುದಕ್ಕೆ ಈ ವಚನ ಸಾಕ್ಷಿಯಾಗಿದೆ! ಕಲ್ಯಾಣವೆಂಬ ಪ್ರಣತಿ ಒಡೆದು ಭಕ್ತಿರಸದ ತೈಲ ಚೆಲ್ಲಿ ಸೂಸಿ ಆಚಾರದ ಬತ್ತಿ ಅಳಿದು ಬಸವಣ್ಣ ಎಂಬ ಜ್ಯೋತಿ ನಂದಿ ಹೋಯಿತು, ನಿಜ. ಆದರೆ, ಒಡೆದ ಪ್ರಣತಿಯ ಚೂರುಗಳು ನಾಡಿನ ನಾನಾ ಮೂಲೆಗಳಿಗೆ ಶರಣರ ಸಂಗಡ ಚೆಲ್ಲುವರಿದ ಕಾರಣ ಬಸವಣ್ಣ ಪ್ರಣೀತ ಆಶಯಗಳು ನಾಡಿನೆಲ್ಲೆಡೆ ಹರಡಿಕೊಂಡವು. ಮುಂದಿನ ಶತಮಾನಗಳಲ್ಲಿ ಕಲ್ಯಾಣದ ಕ್ರಾಂತಿಯ ವಿಷಯಗಳು ಹಲವು ಹಲವು ಸ್ವರೂಪಗಳನ್ನು ಪಡೆದುಕೊಂಡು ಬೆಳೆದವು. ೧೪ – ೧೫ನೇ ಶತಮಾನದ ಪುನರುತ್ಥಾನದಲ್ಲಿ ವಚನಸಾಹಿತ್ಯವನ್ನು ನಾಟಕೀಯ ರೂಪದಲ್ಲಿ ಸಂಪಾದಿಸಿದ ಶೂನ್ಯಸಂಪಾದನೆಕಾರರು ಶರಣರಿಗೆ ಆಸರೆ ನೀಡಿ ಮಾನವೀಯ ಮೌಲ್ಯದ ಧರ್ಮದ ಉಚ್ಛ್ರಾಯ ಸ್ಥಿತಿಗೆ ಕಾರಣವಾದ ಕಲ್ಯಾಣವನ್ನು ಮನತುಂಬಿ ವರ್ಣಿಸಿದ್ದಾರೆ. ಈ ಹಿಂದೆ ಹೇಳಿದ **'ಮರ್ತ್ಯಲೋಕದ ಸಕಲೈಶ್ವರ್ಯದ ಭಂಡಾರದ ನಿಜ ನಿಲಯ, ಸತ್ಯದ ಸಾಗರ, ಭಕ್ತಿಯ ತವರ್ಮನೆ...'** ನುಡಿಗಳು ಅವರದೇ ಆಗಿವೆ.

೧೭ನೇ ಶತಮಾನದ ದೇಶಿಕೇಂದ್ರ ಸಂಗನ ಬಸವಯ್ಯನವರಿಗೆ ಕಲ್ಯಾಣ ಸಾಕಷ್ಟು ಕಾಡಿದೆ. ಅವರ ಭಾವದೃಷ್ಟಿಯಲ್ಲಿ ಕಲ್ಯಾಣ ಇನ್ನೂ ಇದೆ. ಆ ಭಾವನೆಯ ವಚನ ಇದು:

**'ಕಲ್ಯಾಣವೆಂಬ ಪಟ್ಟಣದಲ್ಲಿ ಅಸಂಖ್ಯಾತ**
**ಮಹಾಗಣಂಗಳಿಗಾಶ್ರಯ ತಾಣವಾದ**
**ತ್ರಿಪುರಾಂತಕೇಶ್ವರ ಆಲಯ.**
**ಅಲ್ಲಿ ಲಕ್ಷದ ಮೇಲೆ ತೊಂಬತ್ತಾರುಸಾವಿರ**
**ಜಂಗಮಾರಾಧನೆ ನಿತ್ಯವಾಗಿ ಒಪ್ಪುವುದು. ...**
**ಇಂತೀ ಘನ ದಾಸೋಹದ ಮಹದಾನಂದದುಳುಮೆಯಾದ ಶೇಷಪ್ರಸಾದವುಂಡು**
**ಸುಖಿಸಿ ಪರಮ ಪರಿಣಾಮಿಯಾಗಿರ್ದೆನು**
**ಗುರು ನಿರಂಜನ ಚನ್ನಬಸವಲಿಂಗದಲ್ಲಿ'**

ಕಲ್ಯಾಣಪಟ್ಟಣದಲ್ಲಿ ಅಸಂಖ್ಯಾತ ಜನರಿಗೆ ನಡೆದ ಜಂಗಮಾರಾಧನೆಯ ಶೇಷ ಪ್ರಸಾದವನ್ನು ಇನ್ನೂ ಸವಿದು ಸುಖಿಸುತ್ತಿರುವ ಅವರದು ನಿಜಕ್ಕೂ ಮಹದಾನಂದವೇ! ಕಲ್ಯಾಣದ ಒಳಗಿನ ಎಲ್ಲಾ ಪುರಾತನರನ್ನು ಕೂಡಿಕೊಂಡು ಬಸವಣ್ಣನ ಚೆನ್ನಬಸವಣ್ಣನ ಪ್ರಭುದೇವರ ಮನೆಮನೆಗಳಿಗೆ ಹೋಗಿ ಕೋಟಿ ಶರಣಾರ್ಥಿಗಳನ್ನು ಅರ್ಪಿಸಿ ಆ ಶರಣರು ಉಳಿಸಿದ ಶೇಷಪ್ರಸಾದ ಪಡೆದ ಸಾರ್ಥಕ ಭಾವ ಇಲ್ಲಿ ಇದೆ. ಆದರೆ, ಮತ್ತೊಂದು ವಚನದಲ್ಲಿ ಅವರ ಮನದ ಇನ್ನೊಂದು ನೋವಿನ ಮಿಡಿತ ಹೊಮ್ಮಿದೆ. ಅದು, ಕಲ್ಯಾಣ ನಾಶದ ನೋವು. ಇದು ಇವರ ಮನದಾಳದಿಂದ ಹೀಗೆ ಮಿಡಿದಿದೆ:

**'ಊರು ಕೆಟ್ಟುಹೋಗಿ ಕಲ್ಯಾಣ ಕಾಲು ನಿಂದಲ್ಲಿ**

**ಕೂಡಿದ ಸಂಪತ್ತು ಸಲ್ಲಲಿತದೊಳಿರ್ದೆನಯ್ಯಾ.**
**ಎನ್ನ ಮಠಕ್ಕೆ ಬಂದ ಬಸವಣ್ಣ ನೊಂದುಕೊಂಡ,**
**ಮಡಿವಾಳಯ್ಯ ನೊಂದುಕೊಂಡ, ಚೆನ್ನಬಸವಣ್ಣ ನೊಂದುಕೊಂಡ.**
**ಸಿದ್ದರಾಮಯ್ಯ ನೊಂದುಕೊಂಡ...'**

ಸುಮಾರು ೧೮ನೇ ಶತಮಾನದ ಸಿದ್ಧಗಿರಿ ಮಠದ ಪರಂಪರೆಗೆ ಸೇರಿದ ಪೀಠಾಧಿಕಾರಿ ಕಾಡಸಿದ್ದೇಶ್ವರರಿಗೂ ಕಲ್ಯಾಣಪುರದ ಬಗೆಗೆ ಗೌರವಭಾವ ಉಕ್ಕಿ ಹರಿಯುತ್ತದೆ. ಕಲ್ಯಾಣದ ಕ್ರಾಂತಿ ಆ ವೇಳೆಗೆ ಜನ ಮನದಿಂದ ಮರೆಯಾಗಿ ಹೋಗಿದ್ದಿರಬಹುದು. ಆ ಕಥೆಯನ್ನು ಮತ್ತೇ ಹೇಳಿ ಜನಪ್ರೇರಣೆ ಮಾಡಬೇಕೆಂಬ ಧ್ಯೇಯವನ್ನು ಈ ವಚನದಲ್ಲಿ ಕಾಣಬಹುದು:

**'ಕಲ್ಯಾಣಪುರದೊಳಗೆ ಬಿಜ್ಜಳಾಂಕನೆಂಬ ರಾಜನು**
**ಅಷ್ಟವಿಧ ಪ್ರಧಾನರ ಸಮೂಹದಲ್ಲಿ**
**ಶಿವಭಕ್ತಿ ಇಲ್ಲದೆ ರಾಜ್ಯವನಾಳುತಿರ್ಪನು.**
**ಇಂಗಳೇಶ್ವರನೆಂಬ ಪುರದ ವಿಪ್ರರ ಸಂದಣಿಯಲ್ಲಿ**
**ಬಸವೇಶ್ವರನುದ್ಭವಿಸಿ ಕಲ್ಯಾಣಕ್ಕೈದು**
**ಬಿಜ್ಜಳನ ಅಷ್ಟವಿಧ ಪ್ರಧಾನರ ನಷ್ಟವ ಮಾಡಿ**
**ನವಮ ಪ್ರಧಾನನಾಗಿ ಬಿಜ್ಜಳನ ರಾಜ್ಯವನ್ನಾಳುತ್ತಾ**
**ನಿತ್ಯದಲ್ಲಿ ಹಲವು ಜಂಗಮಕ್ಕೆ ಭೋಜನವ ಮಾಡುತ್ತಾ**
**ಬಸವಣ್ಣ ಇರ್ಪನು ಕಲ್ಯಾಣಪುರದಲ್ಲಿ ನೋಡೆಂದ...'**

'ಕಲ್ಯಾಣನಗರದ ಬಸವೇಶ್ವರನ ಪ್ರಥಮಗಣಂಗಳ ಮಿಕ್ಕ ಪ್ರಸಾದ ಕೊಂಡದಲ್ಲಿ ಮರುಳಶಂಕರದೇವರು ಹನ್ನೆರಡು ವರ್ಷ ಅಡಗಿದ್ದರೆಂದು ವೇದಾಂತಿ, ಸಿದ್ಧಾಂತಿ, ಯೋಗಮಾರ್ಗಿಗಳೇ ಮೊದಲಾದ ಭಿನ್ನಭಾವದ ಶಾಸ್ತ್ರ ಸಂಧಿಗಳು ಹೇಳುವ ಅರ್ಥಭೇದವನ್ನು ತಿಳಿದ ಜ್ಞಾನಿಗಳು ನನಗೆ ಹೇಳಿರಿ. ಇಲ್ಲವಾದರೆ ಅಜ್ಞಾನಿಗಳು ನಮ್ಮ ನಿರ್ಮಾಯ ಪ್ರಭುವಿನ ಶರಣರ ಕೇಳಿರಿ' ಎಂಬ ಪಂಥದ ಆಹ್ವಾನವನ್ನೂ ನೀಡುತ್ತಾರೆ. 'ನಮ್ಮ ಶಿವಗಣಗಳು ಕಲ್ಯಾಣಪುರದಲ್ಲಿ ಕಾಯಕವ ಮಾಡಿ ಜಂಗಮಾರ್ಚನೆ ಮಾಡುತ್ತಿದ್ದರಲ್ಲದೆ ಲೌಕಿಕರ ಹಾಗೆ ಮಣ್ಣು ಕಲ್ಲಿನ ಕಾಮಾಟವ ಮಾಡಿ ನಾಲ್ಕು ಹಾಗದ ಕಾಂಚನವ ತಂದು ಗುರು ಲಿಂಗ ಜಂಗಮಕ್ಕೆ ಬಿನ್ನಹವಿಟ್ಟು ಅರ್ಚಿಸಿ ಫಲಪದವನ್ನು ಪಡೆಯುತ್ತಿರಲಿಲ್ಲ' ಎಂದು ಕಾಡಸಿದ್ದೇಶ್ವರರು ತುಂಬಾ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ.

ಆಧುನಿಕ ಮನಸ್ಸತ್ವಕ್ಕೆ ಬಸವೇಶ್ವರ, ಅಕ್ಕಮಹಾದೇವಿ, ಚೆನ್ನಬಸವಣ್ಣ, ಅಕ್ಕನಾಗಮ್ಮ, ಕಲ್ಯಾಣ, ಶರಣರು, ವಚನ ಸಾಹಿತ್ಯ ಎಂದರೆ ತನು ಮನ ಎರಡರಲ್ಲೂ ಅದಮ್ಯ ರೋಮಾಂಚನ. ಈ ಬಗೆಗೆ ಹಲವು ಹತ್ತು ಕೋಟಿ ನುಡಿಗಳನ್ನು ಹೇಳಿದರು ಅವರ ಭಾವ ಭಾಷೆಗಳಿಗೆ ತಣಿವು ಎಂಬುದಿಲ್ಲ. ಅಂತಹ ಕೆಲವೇ ನುಡಿಗಳು ಇಲ್ಲಿವೆ:

**'ಏಳು ಮಂಗಳವಾಡ ಕೇಳು**
**ಕಲ್ಯಾಣಕ್ಕೆ ಏಳಯ್ಯ ಬೆಳಗಾಯಿತು;**
**ಏರಿಳಿತಗಳ ದಾಟಿ ಶರಣಧರ್ಮದ ಭೇರಿ**
**ಹೊಗರೇರಿ ದುಂದುಮಿಸಿತು...'**

ಬೆಳಕಿನ ಹೊನಲಿನಲ್ಲಿ ಮಿಂದ ಕಲ್ಯಾಣದಲ್ಲಿ ಶರಣಧರ್ಮದ ಭೇರಿ ಹೊಗರೇರಿ ದುಂದುಮಿಸ ತೊಡಗಿದಾಗ,

**'ನಾಡಿನುದ್ದಗಲಕ್ಕೂ ಹರಿದ ಬೆಳಕಿನ ದಾರಿ**
**ಹಿಡಿದು ಬಂದೇ ಬಂತು ಸಾವಿರದ ಶರಣ**
**ಗಣ. ಕಲ್ಯಾಣ ಸೂಜಿಗಲ್ಲಾಯಿತು'**

ಕಲ್ಯಾಣ ಸೂಜಿಗಲ್ಲಾಗಿ ಭಕ್ತ ಲೋಹವನ್ನು ತನ್ನೆಡೆಗೆ ಸೆಳೆದಿರುವುದರಲ್ಲಿ ಸಂದೇಹವೇ ಇಲ್ಲವೆಂದು ಕವಿ ಸಿದ್ದಣ್ಣ ಮಸಳಿಯವರು ಭಾವಪರವಶರಾಗುತ್ತಾರೆ. ಪ್ರೊ॥ ಜಿ. ಎಸ್. ಸಿದ್ದಲಿಂಗಯ್ಯನವರ ಈ ನುಡಿಗಳು ಕಲ್ಯಾಣಕ್ಕೆ ಒಂದು ಭಾವ ಪರಿವೇಷವನ್ನೇ ಕಟ್ಟಿಕೊಡುತ್ತಿವೆ:

**ದೂರ ಎಷ್ಟಿರಬಹುದು ಶ್ರೀಶೈಲಕ್ಕೆ ಕಲ್ಯಾಣ?**
**ನೂರಿನ್ನೂರು ಹರಿ ದಾರಿಗಳು – ಕೂಗಳತೆ?**
**ನಂಬಿ ಕರೆದರೆ ಕಲ್ಯಾಣ ತನ್ನ ಎದೆಯಲ್ಲೇ!'**

ಒಟ್ಟಾರೆಯಾಗಿ ಮಹಾ ಕಲ್ಯಾಣವು ಅವಶೇಷ ಕಲ್ಯಾಣವಾದರೂ ನಮ್ಮ ನಾಡಿನ ಜನಮನ ಅದನ್ನು ಮರೆತಿಲ್ಲ ಮರೆಯುವಂತೆಯೂ ಇಲ್ಲ. ವಿಜಯ ಕಲ್ಯಾಣ, ವಿವಾಹ ಕಲ್ಯಾಣ, ಕಲ್ಯಾಣ ಕರ್ನಾಟಕ ಮುಂತಾದ ಪದ ಸಮೂಹದಲ್ಲಿ ಅದು ಜೀವಂತವಾಗಿ ಮಿಡಿಯುತ್ತಿದೆ. ಅಷ್ಟೇ ಏಕೆ,

**ಕರುಣ ಬಂದರೆ ಕಾಯೋ ಮರಣ ಬಂದರೆ ಒಯ್ಯೋ**
**ಕರುಣಿ ಕಲ್ಯಾಣಿ ಬಸವಣ್ಣ। ಕಾಶಿಲಿಂಗ**
**ಕಡೆತನಕ ಕಾಯೋ ಅಭಿಮಾನ॥**

**ಎಲ್ಲಾ ಬಲಿದನಯ್ಯ ಕಲ್ಯಾಣ ಬಸವಣ್ಣ**
**ಚೆಲ್ಲಿದನು ತಂದು ಶಿವ ಬೆಳಕ। ನಾಡೊಳಗೆ**
**ಸೊಲ್ಲೆತ್ತಿ ಜನಪದ ಹಾಡುವುದು॥**

**ಬಸವ ನಿನಗೊಬ್ಬಣ್ಣ, ಬಸವಗೊಬ್ಬಳೇ ಅಕ್ಕ**
**ಬಸವ ನಿನ್ನ ಹೆಸರು ಅಮರಾಯಿತು। ಜಗಕೆಲ್ಲ**
**ಬಸವ ಕಲ್ಯಾಣ ಹೆಸರಾಯಿತು॥**

ಎಂಬಂಥ ನುಡಿಗಳಲ್ಲಿ ಕಲ್ಯಾಣ ನಿತ್ಯ ಸ್ಮರಣೀಯವಾಗಿದೆ. ಹೀಗೆಲ್ಲಾ ಭಾವ ಪರಿಪೂರ್ಣತೆಯನ್ನು ಮನದಾಳದಲ್ಲಿ ತುಂಬಿಕೊಂಡು ಇಂದಿನ ಬಸವಕಲ್ಯಾಣವನ್ನು ದರ್ಶಿಸಿದಾಗ ಅದು, 'ತಾನು ಮತ್ತೊಮ್ಮೆ ವೈಭವದ ವಿಸ್ತಾರಗಳನ್ನು ಪಡೆಯಲು ಹಾರೈಸಿ ತಪಸ್ಸಿಗೆ ಕುಳಿತಿದೆಯೇನೋ, ತನ್ನನ್ನು ಮತ್ತೇ ಕೈಲಾಸತ್ವಕ್ಕೆ ಏರಿಸುವ ಮಹಾನುಭಾವರ ಆಗಮನಕ್ಕಾಗಿ ತಪಿಸುತ್ತಿದೆಯೇನೋ...' ಎಂಬಂಥ ಭಾವನೆಗಳು ಮನವನ್ನು ಕಾಡುತ್ತವೆ. ಈ ಅರ್ಥದಲ್ಲಿ ಬಸವಕಲ್ಯಾಣ ಎಂಬ ವಚನಕಲ್ಯಾಣ ಸದಾ ವಂದನೀಯ.



## ಬಸವತತ್ವ ಪ್ರಚಾರಕ್ಕೆ ಶ್ರೀ ಶಿವಾನಂದ ಶಿವಯೋಗಿಗಳ ಬಸವಜ್ಯೋತಿ ಸದ್ಭಾವನ ಪಾದಯಾತ್ರೆ.

**–ಶ್ರೀ ರಾಜಶೇಖರ ಶರಣಪ್ಪ ಸಜ್ಜನ,**
ಸಂಶೋಧನಾರ್ಥಿ, ಇತಿಹಾಸ ಅಧ್ಯಯನ ವಿಭಾಗ,
ಗುಲ್ಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ.

ನಿಜಾಮರ ಆಳ್ವಿಕೆಯಿಂದ ಹಿಡಿದು ಈ ಭೂ ಪ್ರದೇಶವನ್ನು ಹೈದ್ರಾಬಾದ ಕರ್ನಾಟಕ ಎಂದು ಕರೆಯುತ್ತಾರೆ. ಇದೀಗ ಕರ್ನಾಟಕ ಸರ್ಕಾರ ಇದಕ್ಕೆ ಕಲ್ಯಾಣ ಕರ್ನಾಟಕವೆಂದು ನಾಮಕರಣಮಾಡಿದೆ. ನಮ್ಮ ಕಲ್ಯಾಣ ಕರ್ನಾಟಕವು ಶರಣರ ನಾಡಾಗಿದ್ದು, ೧೨ ನೇ ಶತಮಾನದಲ್ಲಿ ಬಸವಕಲ್ಯಾಣವನ್ನು ಕೇಂದ್ರ ಸ್ಥಳವನ್ನಾಗಿ ಮಾಡಿಕೊಂಡು ಅಲ್ಲಮಪ್ರಭು, ಬಸವಣ್ಣ, ಅಕ್ಕಮಹಾದೇವಿ ಇತರ ಹಲವಾರು ಶರಣ–ಶರಣೆಯರು ನೆಲೆನಿಂತ ಪುಣ್ಯ ಸ್ಥಳವಾಗಿದೆ. ಸಮಾಜಿಕ, ಧಾರ್ಮಿಕ ಸುಧಾರಣ ಚಳವಳಿಗಳು ನಡೆದು ಜಾತಿವ್ಯವಸ್ಥೆ ಮೂಢನಂಬಿಕೆ ಅಂಧಾನುಕರಣೆ, ಗೊಡ್ಡು ಸಂಪ್ರದಾಯಗಳನ್ನು ಖಂಡಿಸಿದರು. ಸ್ತ್ರೀ–ಪುರುಷರ ಸಮಾನತೆ, ಅಂತರ್ಜಾತಿ ವಿವಾಹ, ವಿಧವಾವಿವಾಹಕ್ಕೆ ಪ್ರೋತ್ಸಾಹ ನೀಡಿದರು. ಕಾಯಕ ಮತ್ತು ದಾಸೋಹಕ್ಕೆ ಹೆಚ್ಚಿನ ಆದ್ಯತೆ ನೀಡಿ ಸರಳ ಜೀವನ ನಡೆಸಲು ಮಾರ್ಗ ತೊರಿಸಿದರು. ಇಂತಹ ತತ್ವ ಸಿದ್ದಾಂತ ಇಂದಿಗೂ ಕಲ್ಯಾಣ ಪರಿಸರದಲ್ಲಿ ಅನೇಕ ಮಠಗಳು ಶರಣರು ಹಾಕಿಕೊಟ್ಟ ಮಾರ್ಗದಲ್ಲಿ ಮುನ್ನಡೆದಿವೆ. ಇಂತಹ ಶರಣರ ನುಡಿಗಳನ್ನು ಸಾರುವ ಸಾಲಿನಲ್ಲಿ ಹುಲಸೂರಿನ ಶ್ರೀಗುರು ಬಸವೇಶ್ವರ ಸಂಸ್ಥಾನ ಮಠವು ಒಂದಾಗಿದೆ.

ಶ್ರೀಗುರು ಬಸವೇಶ್ವರ ಸಂಸ್ಥಾನ ಮಠವು ಬೀದರ ಜಿಲ್ಲೆಯ ಹಿಂದಿನ ಬಸವಕಲ್ಯಾಣ ತಾಲೂಕಿನಲ್ಲಿತ್ತು, ಹುಲಸೂರು ಇಂದು ನೂತನ ತಾಲೂಕು ಕೇಂದ್ರವೆಂದು ಸರ್ಕಾರ ಘೋಷಿಸಿದೆ. ಈ ಹುಲಸೂರು ಪಟ್ಟಣದಲ್ಲಿ ಶ್ರೀಮಠವಿದೆ. ಶ್ರೀಗುರು ಬಸವೇಶ್ವರ ಸಂಸ್ಥಾನ ಮಠವು ಪ್ರಾಚೀನ ಮಠಗಳಲ್ಲಿ ಒಂದು. ಇದಕ್ಕೆ ಹಲವು ಪುರಾವೆಗಳು ದೊರೆಯುತ್ತವೆ. ಇದು ಮೂಲ ಚೌಕಿಮಠವೆಂದು ಕರೆಯುತ್ತಿದ್ದು, ಮಠವನ್ನು ೧೨ನೇ ಶತಮಾನದ ಸುಮಾರಿಗೆ ಶ್ರೀಗುರು ಬಸವೇಶ್ವರ ಎಂಬುವವರು ಅದನ್ನು ವಿರಕ್ತಮಠವೆಂದು ಮರುನಾಮಕರಣಮಾಡಿ ಮಠಕ್ಕೆ ಪ್ರಭುದೇವರನ್ನು ಪ್ರಥಮ ಪೀಠಾಧಿಪತಿಯನ್ನಾಗಿ ನೇಮಕ ಮಾಡಿದರು. ಇವರ ನಂತರ ಶ್ರೀಮಠಕ್ಕೆ ಶ್ರೀ ಚನ್ನಬಸವ ಸ್ವಾಮಿಗಳು, ಶ್ರೀ ತೋಂಟದಾರ್ಯ ಸ್ವಾಮಿಗಳು, ಶ್ರೀ ಪಂಚಾಕ್ಷರಿ ಸ್ವಾಮಿಗಳು, ಶ್ರೀ ಕಲ್ಯಾಣಮರಿ ಮಹಾಂತ ಸ್ವಾಮಿಗಳು, ಶ್ರೀ ನೀಲಕಠ ಸ್ವಾಮಿಗಳು, ಶ್ರೀ ಪ್ರಭು ಸ್ವಾಮಿಗಳು, ಶ್ರೀ ರೇವಣಸಿದ್ದ ಸ್ವಾಮಿಗಳು, ಶ್ರೀ ಚಿಂತಾಮಣಿ ಸ್ವಾಮಿಗಳು, ಶ್ರೀ ಚನ್ನಮಲ್ಲ ಸ್ವಾಮಿಗಳು, ಶ್ರೀ ಗುರುಬಸವ ಸ್ವಾಮಿಗಳು, ಶ್ರೀ ಗುರುಪಾದ ಸ್ವಾಮಿಗಳು, ಶ್ರೀ ಪಂಚಾಕ್ಷರಿ ಸ್ವಾಮಿಗಳು, ಶ್ರೀ ಗುರುಲಿಂಗ ಸ್ವಾಮಿಗಳು, ಶ್ರೀ ಚಂದ್ರಶೇಖರ ಸ್ವಾಮಿಗಳು, ಶ್ರೀ ದೊಡ್ಡ ಗುರುಬಸವ ಸ್ವಾಮಿಗಳು, ಶ್ರೀ ಪಂಚಾಕ್ಷರಿ ಸ್ವಾಮಿಗಳು, ಶ್ರೀ ಗುರುಬಸವ ಸ್ವಾಮಿಗಳು, ಶ್ರೀ ಬಸವಕುಮಾರ ಶಿವಯೋಗಿಗಳು ಸದ್ಯ **ಪೂಜ್ಯಶ್ರಿ ಮ.ನಿ.ಪ್ರ. ಶಿವಾನಂದ ಮಹಾಶಿವಯೋಗಿಗಳು** ಮಠದ ಆಡಳಿತ ಮತ್ತು ಧರ್ಮ ಪ್ರಸಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

**ಶ್ರೀ ಶಿವಾನಂದ ಶಿವಯೋಗಿಗಳು ಜೀವನ:**

ಶ್ರೀ ಶಿವಾನಂದ ಮಹಾಶಿವಯೋಗಿಗಳು ಬಿಜಾಪುರ ಜಿಲ್ಲೆಯ ಮುಧೋಳ ತಾಲೂಕಿನ ನಿಂಗಾಪುರ ಗ್ರಾಮದ ಶ್ರೀ ಗುರುಪಾದಯ್ಯ ಮತ್ತು ಶ್ರೀಮತಿ ಕಾಶಮ್ಮ ದಂಪತಿಗಳ ಉದರದಲ್ಲಿ ದಿನಾಂಕ ೦೨–೧೨–೧೯೫೨ ರಂದು ಜನಿಸಿದರು. ಇವರ ಮೂಲ ಹೆಸರು ಶಿವಯ್ಯ ಇದ್ದು, ನಿಂಗಾಪುರದಲ್ಲಿ ಪ್ರಾಥಮಿಕ ಶಿಕ್ಷಣವನ್ನು, ಮಾಧ್ಯಮಿಕ ಶಿಕ್ಷಣವನ್ನು ಮುಧೋಳದಲ್ಲಿ ಪಡೆಯುತ್ತಾರೆ. ನಂತರ ಗವಿಮಠದ ಶ್ರೀ ಮೃತ್ಯುಂಜಯ ಸ್ವಾಮಿಗಳ ಆಶ್ರಯದಲ್ಲಿ ಪ್ರೌಢ ಶಿಕ್ಷಣ ಪಡೆದರು. ಹುಬ್ಬಳಿಯ ಮೂರು ಸಾವಿರ ಮಠದಲ್ಲಿ ಮೂರು ವರ್ಷಗಳ ಕಾಲ ಸಂಸ್ಕೃತ ಅಭ್ಯಾಸ ಮಾಡಿದರು. ಹಾಗೆಯೆ ಎರಡು ವರ್ಷಗಳ ಕಾಲ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರಾಗಿ ಶಿವಯೋಗ ಮಂದಿರದಲ್ಲೂ ಅಧ್ಯಯನ

ಮಾಡಿದ್ದಾರೆ. ಧರ್ಮಪ್ರಚಾರಕ್ಕಾಗಿ ದೀಕ್ಷೆ ಪಡೆದ ನಂತರ ಚಿಂಚೋಳಿ ತಾಲೂಕಿನ ಮುಕರಾಂಭಾದ ಮಠದಲ್ಲಿ ಸೇವೆಯನ್ನು ಸಲ್ಲಿಸುತ್ತಾರೆ. ಪ್ರಸ್ತುತ ಹುಲಸೂರು ಮಠದ ಶ್ರೀಗಳಾಗಿದ್ದಾರೆ. ೦೯–೦೨–೧೯೮೧ ರಂದು ಶ್ರೀ ಗುರುಬಸವೇಶ್ವರ ಸಂಸ್ಥಾನ ಮಠದ ೨೦ನೇಯ ಪೀಠಾಧಿಪತಿಗಳಾಗಿ ನಿರಂಜನ ಚರಪಟ್ಟಾಧಿಕಾರ ಮಹೋತ್ಸವ ನೇರವೆರಿಸಿದ ನಂತರ ಶ್ರೀಗಳು ಆಧುನಿಕತೆಯ ಜೊತೆಗೆ ಹಳೆಯ ಶರಣರ ವಿಚಾರಧಾರೆಗಳಿಂದ ಶ್ರೀಮಠವನ್ನು ಪ್ರಸ್ತುತತೆಗೆ ತಕ್ಕಂತೆ ಮಠವನ್ನು ಜೀರ್ಣೋದ್ಧಾರಗೊಳಿಸಿದರು ಜೊತೆಗೆ ಸಮಾಜದ ಅಭಿವೃದ್ಧಿ, ಶರಣರ ನಡೆ ನುಡಿಗಳನ್ನು ಚಾಚು ತಪ್ಪದೆ ಪಾಲಿಸಿಕೊಂಡಿರುತ್ತಾರೆ.

**ಬಸವತತ್ವ ಪ್ರಚಾರಕ್ಕೆ ಶ್ರೀಗಳಿಂದ ಬಸವಜ್ಯೋತಿ ಸದ್ಭಾವನ ಪಾದಯಾತ್ರೆ.**

ಬಸವಣ್ಣನವರ ತತ್ವಗಳು ಮತ್ತು ವಚನಗಳು ಶ್ರೀ ಶಿವಾನಂದ ಶಿವಯೋಗಿಗಳ ಮೇಲೆ ಪ್ರಭಾವ ಸಾಕಷ್ಟು ಬೀರಿತು. ಶ್ರೀಗಳು ಬಸವಣ್ಣನವರ ಸಮಾನತೆ, ಸಮಬಾಳು, ಸತ್ಯ, ಶುದ್ಧ ಜೀವನ ಮತ್ತು ಕಾಯಕ, ಜಂಗಮ ದಾಸೋಹದಿಂದ ಸಮಾಜ ಸೇವೆ ಮಾಡುವ ಹಂಬಲ ಮೈಗೂಡಿಸಿಕೊಂಡರು. ಅದರ ಜೊತೆಗೆ ಇಡಿ ಭಾರತದ ಉದ್ದಗಲಕ್ಕೂ ಬಸವಣ್ಣವರ ತತ್ವಗಳ ಪ್ರಚಾರ ಮಾಡುವ ಉದ್ದೇಶವನ್ನು ಹೊಂದಿದರು. ದಿನಾಂಕ ೦೬–೦೩–೨೦೧೧ರಂದು ಅದನ್ನು ಕಾರ್ಯರೂಪಕ್ಕೆ ಬಂದಿತ್ತು. ಇದಕ್ಕೆ **ಬಸವಜ್ಯೋತಿ ಸದ್ಭಾವನ ಪಾದಯಾತ್ರೆ** ಎಂದು ನಾಮಕರಣ ಮಾಡಲಾಯಿತು. ಈ ಯಾತ್ರೆಯು ಬಸವ ಭೂಮಿಯಿಂದ ಕಾಶ್ಮೀರದವರೆಗೆ ಮತ್ತು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಹಾಗೂ ಕನ್ಯಾಕುಮಾರಿಯಿಂದ ಹುಲಸೂರಿನವರೆಗೆ ಸಂಚರಿಸುವ ಮಾರ್ಗವನ್ನು ರೂಪಿಸಿ, ಹಳ್ಳಿಗೆ ಏಕ ರಾತ್ರಿ, ಪಟ್ಟಣಕ್ಕೆ ಪಂಚರಾತ್ರಿಯಂತೆ ಪ್ರಸಾರ ಮತ್ತು ಪ್ರಚಾರ ಹೊಣೆ ಹೊತ್ತು ಯಾತ್ರೆಗೆ ಸಿದ್ದರಾದರು.

ಬಸವಜ್ಯೋತಿ ಸದ್ಭಾವನ ಪಾದಯಾತ್ರೆಯ ಸಮಾರಂಭವು ಚಿತ್ರದುರ್ಗದ ಪೂಜ್ಯಶ್ರೀ ಶಿವಮೂರ್ತಿ ಶರಣರು ಮುರಘಾಮಠ ಹಾಗೂ ಇಳಕಲ್‌ನ ಪೂಜ್ಯಶ್ರೀ ಮಹಾಂತ ಶಿವಯೋಗಿಗಳ ನೇತೃತ್ವದಲ್ಲಿ ದಿನಾಂಕ ೦೬–೦೩–೨೦೧೧ರಂದು ಜರುಗಿತು. ಈ ಸಮಾರಂಭಕ್ಕೆ ಕೇಂದ್ರ ಮಂತ್ರಿಗಳಾದ ಸನ್ಮಾನ್ಯ ಶ್ರೀ ವೀರಪ್ಪಾ ಮೊಯ್ಲಿ ಮತ್ತು ಶ್ರೀ ಸುಶೀಲಕುಮಾರ ಸಿಂಧೆ ಮತ್ತು ಲೋಕನಾಯಕ ಭೀಮಣ್ಣ ಖಂಡ್ರೆ ಭಾಗವಹಿಸುವುದರ ಜೊತೆಗೆ ಪಾದಯಾತ್ರೆಗೆ ಚಾಲನೆ ನೀಡಿದರು. ಅನೇಕ ಮಠಾದೀಶರು ಸಾವಿರಾರು ಸದ್ಭಕ್ತರು ಬಸವಜ್ಯೋತಿ ಸದ್ಭಾವನ ಪಾದಯಾತ್ರೆಯನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಮರು ದಿನ ದಿನಾಂಕ ೦೭–೦೩–೨೦೧೧ ಮುಂಜಾನೆ ೭:೩೦ಕ್ಕೆ ಬಸವಕಲ್ಯಾಣದ ಅಕ್ಕಮಾಹಾದೇವಿ ಕಾಲೇಜಿನ ಆವರಣದಲ್ಲಿ ವಿಜಯಪುರದ ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಸಿದ್ದೇಶ್ವರ ಸ್ವಾಮಿಗಳು ಬಸವಜ್ಯೋತಿ ಸದ್ಭಾವನ ಪಾದಯಾತ್ರೆಗೆ ಶುಭ ಹಾರೈಯಸಿ ಬೀಳ್ಕೋಟ್ಟರು.

ಬಸವಕಲ್ಯಾಣದ ಪುಣ್ಯಕ್ಷೇತ್ರ ಬಸವೇಶ್ವರ ದೇವಸ್ಥಾನದಿಂದ ಬಸವಜ್ಯೋತಿ ಸದ್ಭಾವನ ಪಾದಯಾತ್ರೆ ಪ್ರಾರಂಭವಾಯಿತು. ಹೀಗೆ ಪ್ರಾರಂಭವಾದ ಯಾತ್ರೆಯು ೭ ತಿಂಗಳು ಕಾಲ, ಸುಮಾರು ೯೦೦೦ ಕಿ.ಮೀ ಸಂಚಾರ ಮಾಡಿದರು. ಈ ಪಾದಯಾತ್ರೆಯ ಸಂದರ್ಭದಲ್ಲಿ ಬಸವೇಶ್ವರರ ವಚನಗಳು ಸಮಾಜಕ್ಕೆ ನೀಡಿದ ಕೊಡುಗೆಗಳ ಬಗ್ಗೆ ೫೦೦೦೦ ಕರಪತ್ರಗಳು ಹಿಂದಿ, ಇಂಗ್ಲೀಷ, ಕನ್ನಡ ಭಾಷೆಯಲ್ಲಿ, ೨೫೦೦೦ ಹಿಂದಿಯಲ್ಲಿ ಬಸವಾದಿ ಶರಣರ ವಚನಗಳು ಮತ್ತು ಜೀವನ ಚರಿತ್ರೆ ಹಾಗೂ ಹಿಂದಿಯಲ್ಲಿ ೧೦೦೦೦ ಸಿ.ಡಿ ತಯ್ಯಾರಿಸಿ ಉಚಿತ ವಿತರಣೆ ಮಾಡಿದರು. ಆಶಿರ್ವಚನದ ಮೂಲಕ ಕಾಯಕ ಮತ್ತು ದಾಸೋಹ ತತ್ವಕ್ಕೆ ಮಹತ್ವ ನೀಡುವಂತೆ ಪ್ರಚಾರವನ್ನು ಮಾಡಿದರು. ದೇಶದ ಯುವಕರು ದುಷ್ಚಟಗಳಿಗೆ ಬಲಿಯಾಗುತ್ತಿದ್ದಾರೆ. ಇಂತಹ ದುಷ್ಚಟಗಳಿಂದ ಹೊರ ಬಂದಾಗ ಮಾತ್ರ ದೇಶ ಸದೃಢವಾಗಿ ಬೆಳೆಯಲು ಸಾದ್ಯವಾಗುತ್ತದೆ. ಆದರಿಂದ ನಿಮ್ಮ ದುಷ್ಚಟಗಳನ್ನು ನಮ್ಮ ಜೋಳಿಗೆಯಲ್ಲಿ ಹಾಕಿರೆಂದು ವಿನಂತಿಸಿ, ಯುವಕರಲ್ಲಿ ವ್ಯಸನಗಳನ್ನು ಬಿಡಿಸಲು ಪ್ರಯತ್ನಿಸಿದರು.

**ಅಯ್ಯಾ ತಂಬಾಕು ಬಕ್ಷಣೆ ಮಾಡಿದರೆ**
**ಹಂದಿ ನರಕವ ಕೊಂಡ ಸಮಾನ**

**ನಾಸಿ ಬಕ್ಷಣವ ಮಾಡಿದರೆ**
**ನಾಯಕ ನರಕಕೊಂಡ ಸಮಾನ**
**ಭಂಗಿ ಬಕ್ಷಣವ ಮಾಡಿದರೆ**
**ಮಾರ್ಜಾಲನ ಮಲವ ತಿಂದ ಸಮಾನ**
**ಗಾಂಜ ಬಕ್ಷಣವ ಮಾಡಿದರೆ**
**ಹದಿನೆಂಟುನೂರೊಂದು ಕುಲದ ಮಲವ ತಿಂದ ಸಮಾನ**

ಎಂಬ ಈ ವಚನದ ಮೂಲಕ ವ್ಯಸನ ತ್ಯಜಿಸಲು ಅರಿವು ಮೂಡಿಸಿದರು. ಪಾದಯಾತ್ರೆಯ ಉದ್ದಕೂ ಅನೇಕ ಸಿಹಿ–ಕಹಿ ಅನುಭವಗಳೊಂದಿಗೆ ಹತ್ತು ಹಲವಾರು ಸಮಸ್ಯೆ ಎದುರಿಸಿದರು ರಾತ್ರಿ ಸಮಯದಲ್ಲಿ ತಂಗಲು ಸ್ಥಳ ಸಿಗದಿದ್ದ ಸಂದರ್ಭದಲ್ಲಿ ಆಕಾಶವೇ ಹೊದಿಕೆ, ಭೂಮಿಯೇ ಹಾಸಿಗೆ ಎಂದು ರಸ್ತೆ ಬದಿಯಲ್ಲಿ ತಂಗಿ ತಮ್ಮ ಗುರಿಯೊಡನೆ ಸಾಗಿದರು. ರಸ್ತೆ ಬದಿಯಲ್ಲಿ ಮಲಗಿದರು. ಬಿಸಿಲು, ಮಳೆ, ಗಾಳಿ, ಪಾದಯಾತ್ರೆಗೆ ಅಡ್ಡಿ ಪಡಿಸಿದರು ದುತಿಗೆಡದೆ ಮಾರ್ಗದಲ್ಲಿ ಲಿಂಗಧಾರಣೆ, ಉಪನಯನ, ಸಂಸ್ಕಾರಗಳನ್ನು ಮಾಡುತಾ ಸದ್ಭಾವನ ಪಾದಯಾತ್ರೆ ಮುನ್ನಡೆಸಿದರು.

ಬಸವಜ್ಯೋತಿ ಸದ್ಭಾವನ ಪಾದಯಾತ್ರೆಯು ಕರ್ನಾಟಕ, ಮಹಾರಾಷ್ಟ್ರ, ಮದ್ಯಪ್ರದೇಶ ರಾಜಸ್ಥಾನ ಉತ್ತರಪ್ರದೇಶ, ಹರಿಯಾಣ, ದೆಹಲಿ, ಪಂಜಾಬ, ರಾಜ್ಯಗಳ ಮೂಲಕ ಕಾಶ್ಮೀರಕ್ಕೆ ೦೬–೦೫–೨೦೧೧ರಂದು ತಲುಪಿತು. ಅಂದು ಬಸವೇಶ್ವರ ಜಯಂತಿ ದಿನವಾಗಿದ್ದರಿಂದ ರಾವಿ ನದಿಯ ತಟದ ಆಶ್ರಮದಲ್ಲಿ ಬಸವ ಜಯಂತಿ ಕಾರ್ಯಕ್ರಮ ಹಮ್ಮಿಕೊಂಡು, ಬಸವ ದ್ವಜ ಹಾರಿಸಿ, ಬಸವಣ್ಣನವರ ಭಾವಚಿತ್ರಕ್ಕೆ ಪೂಜೆ ಸಲ್ಲಿಸಲಾಯಿತು. ಈ ಕಾರ್ಯಕ್ರಮದಲ್ಲಿ ಶೀಮತಿ ವಿಜಯಲಕ್ಷ್ಮಿ, ಶ್ರೀಮತಿ ಶಾರದದೇವಿ ಜೊತೆಗೆ ನೂರಾರು ಭಕ್ತರು ಸೇರಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.

ದಿನಾಂಕ ೦೭–೦೫–೨೦೧೧ ರಂದು ಜಮ್ಮು–ಕಾಶ್ಮೀರದಲ್ಲಿ ಬೆಳಗ್ಗೆ ವಿಶ್ರಾಂತಿ ಮಾಡಿ ಸಂಜೆ ೪ ಗಂಟೆಗೆ ಹಿಂದಿರುಗಿ ಪ್ರಯಾಣ ಬೆಳಸಿದರು. ಕಾಶ್ಮೀರದಿಂದ ಪಂಜಾಬ, ಹರಿಯಾಣ, ರಾಜಸ್ಥಾನ, ಮಧ್ಯಪ್ರದೇಶ, ಮಹಾರಾಷ್ಟ್ರ, ಕರ್ನಾಟಕ, ತಮಿಳನಾಡಿನ ಕನ್ಯಾಕುಮಾರಿಗೆ ೧೪–೦೮–೨೦೧೧ರಂದು ಬಂದು ತಲುಪಿದರು. ದಿನಾಂಕ ೧೫–೦೮–೨೦೧೧ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಣೆ ಮಾಡಲಾಯಿತು.

ದಿನಾಂಕ ೧೬–೦೮–೨೦೧೧ರಂದು ಬಸವಜ್ಯೋತಿ ಸದ್ಭಾವನ ಪಾದಯಾತ್ರೆ ಕನ್ಯಾಕುಮಾರಿಯಿಂದ ಹಿಂದಿರುಗಿ ಆಂದ್ರಪ್ರದೇಶದ ಮುಖಾಂತರ ಕರ್ನಾಟಕದ ನಗರಗಳಾದ ಬೀದರ, ಹುಮನಾಬಾದ, ಬಸವಕಲ್ಯಾಣ ಮೂಲಕ ಹುಲಸೂರಿಗೆ ೦೧–೧೦–೨೦೧೧ ರಂದು ಬಂದು ತಲುಪಿತು ಇದರೊಂದಿಗೆ ಪಾದಯಾತ್ರಯು ಸಂಪನ್ನಗೊಳಿಸಲು ಸಹಸ್ರಾರು ಭಕ್ತರು ವೈಭವ ಪೂರಿತವಾಗಿ ಬರಮಾಡಿಕೊಂಡರು. ಮರುದಿನ ಮಾಹಾತ್ಮಗಾಂಧಿ ಜಯಂತಿ ಆಚರಿಸಿ ಸತ್ಯ ಮತ್ತು ಅಹಿಂಸೆಯ ತತ್ವಗಳನ್ನು ಅಳವಡಿಸಿಕೊಳ್ಳಲು ಕರೆ ಕೊಟ್ಟರು. ನಂತರದ ದಿನಗಳಲ್ಲಿ ಶ್ರೀ ಶಿವಾನಂದ ಶಿವಯೋಗಿಗಳಿಗೆ ಅವರ ಸಾಧನೆಗೆ ಸನ್ಮಾನಗಳು, ಅಭಿನಂದನಾ ಸಮಾರಂಭಗಳನ್ನ ಅನೇಕ ಮಠಗಳ ಮಠಾಧೀಶರು, ಭಕ್ತರು ನೀಡಿ ಗೌರವಿಸಿದರು.

**ಉಪಸಂಹಾರ.**

ಶ್ರೀ ಗುರು ಶಿವಾನಂದ ಮಹಾಶಿವಯೋಗಿಗಳು ಬಸವಣ್ಣನವರಲ್ಲಿ ಅತೀವ ಭಕ್ತಿ ಬಸವಣ್ಣನೆ ವಿಶ್ವಗುರು ಎಂಬುದರ ಶ್ರದ್ದೆ ಹೊಂದಿದ ಶ್ರೀಗಳು ಪಾದಯಾತ್ರೆಯ ಮೂಲಕ ಬಸವ ತತ್ವ ಮತ್ತು ಸಂದೇಶಗಳನ್ನು ದೇಶದ ತುಂಬೆಲ್ಲಾ ಪ್ರಸಾರ ಮಾಡುವ ಆಸೆಯನ್ನು ಹೊಂದಿದರು. ಆರಂಭದಲ್ಲಿ ೧೯೮೧ ಹಳ್ಳಿ ಹಳ್ಳಿಗಳಿಗೆ ತೆರಳಿ ಬಸವತತ್ವ ಪ್ರಸಾರ ವ್ಯಸನ ಮುಕ್ತ ಸಮಾಜ ನಿರ್ಮಾಣಕ್ಕೆ ಪಾದಯಾತ್ರೆ ಕೈಗೊಂಡರು. ಹಾಗೆಯೇ ಮಹಾರಾಷ್ಟ್ರ, ಆಂಧ್ರಪ್ರದೇಶ ಕರ್ನಾಟಕ ಗಡಿಭಾಗದಲ್ಲಿ ಪ್ರಚಾರ ಮಾಡಿದರು.

ಅವರ ಪ್ರಮುಖ ಆಸೆ ಭಾರತ ತುಂಬಾ ಸಂಚರಿಸಿ ಬಸವತತ್ವ ಸಂದೇಶ ಸಾರುವ ಇಚ್ಛೆಯೊಂದಿಗೆ ಪಾದಯಾತ್ರೆಯ ಮೂಲಕ ಸುಮಾರು ೭ ತಿಂಗಳು ೯೦೦೦ ಕಿಲೋಮಿಟರ್ ಬಸವಕಲ್ಯಾಣದಿಂದ ಕಾಶ್ಮೀರದವರೆಗೆ ಮತ್ತು ಕಾಶ್ಮೀರದಿಂದ ಕನ್ಯಾಕುಮಾರಿವರೆಗೆ ಸಂಚರಿಸಿ ಬಸವತತ್ವ ಸಂದೇಶ ಸಾರಿದ್ದು ಒಂದು ಅದ್ಭುತವೇ ಸರಿ. ಬಸವತತ್ವದ ಜೊತೆಗೆ ವ್ಯಸನ ಮುಕ್ತ ಸಮಾಜಕ್ಕಾಗಿ ತಮ್ಮ ಜೋಳಿಗೆಗೆ ತಮ್ಮ ಚಟಗಳನ್ನು ಹಾಕಿರೆಂದು ಹೇಳುವುದರ ಮೂಲಕ ಅರ್ಥಪೂರ್ಣ ಪಾದಯಾತ್ರೆ ಕೈಗೊಂಡರು. ಶ್ರೀಗಳ ಪಾದಯಾತ್ರೆಯು ಸೊಲ್ಲಾಪೂರ ಬಂದಾಗ ಕಿರೀಟೇಶ್ವರ ಮಠದಲ್ಲಿ ಸ್ವಾಮಿನಾಥ ಸ್ವಾಮಿಗಳು ಸೊಲ್ಲಾಪುರ ನಾಗರಿಕರು, ಭಕ್ತರು ಸನ್ಮಾನದಲ್ಲಿ **" ರಾಷ್ಟ್ರೀಯ ಸಂತ"** ಪ್ರಶಸ್ತಿ ನೀಡಿ ಗೌರವಿಸಿದರು.

ಶ್ರೀ ಗುರು ಶಿವಾನಂದ ಮಹಾಶಿವಯೋಗಿಗಳು ಹುಲಸೂರಿನ ಮಠಾಧೀಶರಲ್ಲದೆ ಹುಲಕುಂಟಾ, ಮುಕರಂಭಾ ಮಠಗಳ ಮಠಾಧೀಶರಾಗಿ ವಚನಗಳ ರಚನೆಯೊಂದಿಗೆ ಸಮಾಜೋದ್ಧಾರಕ ಕೆಲಸ ಮಾಡುತ್ತಿದ್ದಾರೆ. ಅನಾಥ ಮಕ್ಕಳಿಗೆ ಆಶ್ರಯ ಹಾಗೂ ಅಸ್ಪೃಶ್ಯತೆ ನಿವಾರಣೆ, ಅಂತರ ಜಾತಿ ವಿವಾಹ, ಮುಸ್ಲಿಂರಿಗೆ ಮಠದಲ್ಲಿ ಇಫ್ತಾರ ಕೂಟ ಏರ್ಪಡಿಸಿದ್ದಾರೆ. ಬರಗಾಲದ ಸಂದರ್ಭಗಳಲ್ಲಿ ಗಂಜಿ ಕೇಂದ್ರಗಳ ಸ್ಥಾಪನೆ, ಶ್ರೀಗಳು ತಮ್ಮ ನಿರಂತರ ಪರಿಶ್ರಮದಿಂದ ಹುಲಸೂರಿನಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸಾಧನೆ ಗೈದಿದ್ದಾರೆ. ಅಲ್ಲದೆ ಹುಲಸೂರಿನಲ್ಲಿ ಬೃಹತ್ ಪ್ರಮಾಣದ ಕೆರೆಯ ನಿರ್ಮಾಣ ಕಾರ್ಯಕೈಗೊಂಡಿದ್ದು, ಇದು ಅತಿ ದೊಡ್ಡ ಸಾಧನೆಯೇ ಸರಿ. ಹೀಗೆ ಸಮಾಜಿಕ, ಧಾರ್ಮಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಕೊಡುಗೆಯನ್ನು ನೀಡಿದ್ದಾರೆ. ಶ್ರೀಗಳು ತಮ್ಮ ಅವಿರತ ಪರಿಶ್ರಮದಿಂದ ಧರ್ಮಪ್ರಚಾರ ಕಾರ್ಯವನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ.

**ಆಧಾರ ಗ್ರಂಥಗಳು.**


೧) ಗುರುಲಿಂಗಪ್ಪ ಧಬಾಲೆ(ಸಂ), ೨೦೦೬, **'ಬಸವಯೋಗಿ',** ವಿಶ್ವಗುರು ಬಸವಧರ್ಮ ಪ್ರಚಾರ ಕೇಂದ್ರ, ಶ್ರೀ ಗುರು ಬಸವೇಶ್ವರ ಸಂಸ್ಥಾನ ಮಠ, ಹುಲಸೂರು.

೨) ರಮೇಶ ಮೂಲಗೆ, ೧೯೯೮, **'ಬೀದರ ಜಿಲ್ಲೆಯ ವೀರಶೈವ ಮಠಗಳು ಒಂದು ಅಧ್ಯಯನ',** ಶ್ರೀ ವಿಶ್ವಗುರು ಬಸವಧರ್ಮ ಪ್ರಚಾರ ಕೇಂದ್ರ, ಶ್ರೀ ಗುರು ಬಸವೇಶ್ವರ ಸಂಸ್ಥಾನ ಮಠ, ಹುಲಸೂರು.

೩) ಶಿವಾನಂದ ಮಹಾಸ್ವಾಮಿಗಳು ಪೂಜ್ಯಶ್ರೀ ಮ. ನಿ. ಪ್ರ, ೨೦೧೩**, 'ಬಸವ ಭಾರತ',** ಶ್ರೀ ವಿಶ್ವಗುರು ಬಸವಧರ್ಮ ಪ್ರಚಾರ ಕೇಂದ್ರ, ಶ್ರೀ ಗುರು ಬಸವೇಶ್ವರ ಸಂಸ್ಥಾನ ಮಠ, ಹುಲಸೂರು.

೪) ಬಸವರಾಜ ವಿರಶೇಟ್ಟಿ, **'ಬಿದರ ಜಿಲ್ಲೆಯ ಶರಣ ಸಮರಗಳು'** ೧೧೦೦ ರಿಂದ ೧೪೦೦. ಗುಲಬರ್ಗಾ ವಿಶ್ವವಿದ್ಯಾಲಯ ಕಲಬುರಗಿ. (ಅಪ್ರಕಟಿತ)

೫) ನಳಿನ, **ಹೈದ್ರಾಬಾದ ಕರ್ನಾಟಕ ಮಠಗಳು ಮತ್ತು ಸಮಾಜಿಕ ಬದಲಾವಣೆ ಬೀದರ ಜಿಲ್ಲೆಯನ್ನು ಅನುಲಕ್ಷಿಸಿ,** ೧೯೦೫-೨೦೦೦, ಮೈಸೂರು ವಿಶ್ವವಿದ್ಯಾಲಯ. (ಅಪ್ರಕಟಿತ)

೬) ಆನಂದ ಮಾಣಿಕರಾವ, **ಕಲ್ಯಾಣ ಕ್ರಾಂತಿಯ ಒಂದು ಐತಿಹಾಸಿಕ ಅಧ್ಯಯನ,** ಗುಲಬರ್ಗಾ ವಿಶ್ವವಿದ್ಯಾಲಯ ಕಲಬುರಗಿ. (ಅಪ್ರಕಟಿತ).




## ಕಲ್ಯಾಣ ಕರ್ನಾಟಕದ ಪ್ರಮುಖ ಹಬ್ಬ ಹರಿದಿನಗಳ ಹಿನ್ನಲೆ ಮತ್ತು ಪರಂಪರೆ.

**–ಡಾ. ಸವಿತಾ. ಎಸ್. ಹೊಸಮನಿ,**
ಸಂಶೋಧನಾ ವಿದ್ಯಾರ್ಥಿನಿ, ಇತಿಹಾಸ ಅಧ್ಯಯನ ವಿಭಾಗ,
ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ.

ನಾವಿರುವ ಪ್ರಪಂಚ ಬಹಳ ವಿಶಾಲವಾದದ್ದು, ಆದರೆ ನಮ್ಮಲ್ಲಿ ಹೃದಯ ವಿಶಾಲವಾಗಿಲ್ಲ ಸಂಕುಚಿತವಾಗಿದೆ, ಪರಿಮಿತವಾಗಿದೆ. ಪ್ರಪಂಚದಲ್ಲಿ ಅಂದ, ಸೌಂದರ್ಯ, ವನರಾಶಿ ಹಾಗೂ ನಿಯಮಗಳೆಲ್ಲವೂ ಇವೆ. ಸಿರಿ–ಸಂಪತ್ತುಗಳ ಮಧ್ಯೆ ಸರಿಯಾಗಿ ಜೀವಿಸುವ ಪರಿಸ್ಥಿತಿ ಇದ್ದರೂ ಇದನ್ನು ಸರಿಮಾಡಿಕೊಳ್ಳದ ಮನುಷ್ಯ ಅಶಕ್ತತೆಯಿಂದ ಈ ವಿಶಾಲವಾದ ಪ್ರಪಂಚವನ್ನು ಬಹಳ ಚಿಕ್ಕದಾಗಿ, ಅಲ್ಪವಾಗಿ, ಸ್ವಲ್ಪವಾಗಿ ಕಾಣುತ್ತ ಹೋಗುವನು. ನಮ್ಮ ಜೀವಿತದ ಮೇಲೆ ನಮಗೆ ಹತೋಟಿ ತಪ್ಪುವುದು. ಈ ಕ್ಷಣ ಸುಖವಾಗಿದ್ದರೆ ಮರುಕ್ಷಣ ಹೀಗೆ ಇರುತ್ತೆವೆಂದು ಹೇಳಲಾಗುವುದಿಲ್ಲ. ಆದರೆ ಈ ಜಗತ್ತಿನಲ್ಲಿ ಮನುಷ್ಯನಿಗೆ ಮೀರಿದ ಅದ್ಭುತವಿಲ್ಲ. ಮನುಷ್ಯನೆ ಸತ್ಯ "ಮನುಷ್ಯನು ಆಧುನಿಕ ಜೀವನದ ಜಂಜಾಟಗಳಲ್ಲಿದ್ದರೂ ಕೆಲವು ಕಾರ್ಯಗಳನ್ನು ಮಾಡುವುದರಿಂದ ಆತನ ಮನಸ್ಸಿಗೆ ನೆಮ್ಮದಿ ಸಿಗುತ್ತದೆ. ಆ ಕಾರ್ಯ ಪ್ರತಿದಿನವೂ ಸಾಧ್ಯವಿಲ್ಲ. ಅದನ್ನು ಹಬ್ಬ ಅಥವಾ ಪೂಜೆಯ ರೂಪದಲ್ಲಿ ನೆರವೇರಿಸಿದರೆ ಆ ದಿನ ಇಡೀ ಮನೆಯವರೆಲ್ಲ ಸಂತೋಷವಾಗಿರುತ್ತಾರೆ. ಅದಕ್ಕೆ ಬಹಳ ಪುರಾತನ ಕಾಲದಿಂದ ಅಂದರೆ ಯುಗಯುಗಾಂತರಗಳಿಂದ ಕೆಲವು ಹಬ್ಬಗಳು, ಉತ್ಸವಗಳು ವರ್ಷದಲ್ಲಿ ಅದಕ್ಕೆ ಕೆಲವು ದಿನಗಳನ್ನು ನಿಗಧಿಪಡಿಸಿ ಆ ದಿನ ಆಚರಿಸಬೇಕೆಂಬ ಕಟ್ಟುಪಾಡನ್ನು ಮಾಡಿದ್ದಾರೆ."

"ಹಬ್ಬಗಳು ನಮ್ಮ ಸಂಸ್ಕೃತಿಯ ನಿಧಿಗಳು ಅವುಗಳಲ್ಲಿ ಒಡಮೂಡಿದ ಜನಜೀವನ ನಮ್ಮ ತಲೆಮಾರಿನ ಜನಾಂಗದ ಕುರುಹುಗಳು ವರ್ಷಕ್ಕೊಂದು ಸಲ ಬರುವ ಹಬ್ಬದ ದಿನದಿಂದಲಾದರೂ ನಮ್ಮ ಜನರ ಮನಸ್ಸು ಲೌಕಿಕದಿಂದ ಪಾರಮಾರ್ಥಿಕದೆಡೆಗೆ ಎಳಸಲಿ, ಬಹಿರ್ಮುಖವಾದ ಮನಸ್ಸು ಅಂತರಮುಖಿಯಾಗಲಿ, ಒಳ್ಳೆಯ ಆಚಾರ–ವಿಚಾರ ದೇವಪಾರಾಯಣದಲ್ಲಿ ಮನಮಗ್ನವಾಗಿಸಲಿ ಎನ್ನುವಸದುದ್ದೇಶದಿಂದ ಇವು ಆಚರಣೆಯಲ್ಲಿ ಉಳಿದು ಬಂದಿವೆ ತನ್ನನ್ನು ತಾನು ಅರಿಯುವ; ಅರಿತು ನಡೆಯುವ; ಸಾಮಾಜಿಕ ಕಾರ್ಯಗಳಲ್ಲಿ ತೊಡಗುವ; ದಾನಗುಣಾದಿಗಳನ್ನು ಮೆರೆಯುವ ಪ್ರಚೋದಾತ್ಮಕ ಶಕ್ತಿಗಳು ಹಬ್ಬಗಳಿಂದ ಮಾನವನಿಗೆ ಧಾರೆಯೆರೆದು ಬಂದಿವೆ. ಆಧ್ಯಾತ್ಮಿಕ ಶ್ರದ್ಧೆ ನಿಷ್ಠೆಗೊಳ್ಳಲು, ದೇವರು ಧರ್ಮದ ಮೇಲಿನ ನಂಬಿಕೆ ದೃಢವಾಗಲು, ಬಡವರು–ಬೀಕಾರಿಗಳ ಹಿತಚಿಂತನೆಯ ಕಳಕಳಿ ಮನದಲ್ಲಿ ಮೂಡಲು, ಸರ್ವ ಸಮಾನತೆಯ ಭಾವ ಮೈದೋರಲ ಪವಿತ್ರ–ಪರಿಶುದ್ಧ ಚಾರಿತ್ರ್ಯಶೀಲ ಜೀವನ ಸಾಗಿಸಲು ಹಬ್ಬಗಳು ಕೈದೇವಿಗೆಗಳಾಗಿ ನಿಂತಿವೆ. ಕೇವಲ ಉಂಡುಟ್ಟು ಸುಖದಿಂದಿರುವುದೇ ಹಬ್ಬದ ಗುರಿಯಾಗಿದ್ದರೆ ಅವುಗಳಿಗೆ ಅಷ್ಟೊಂದು ಪ್ರಾಶಸ್ತ್ಯ ದೊರೆಯುತ್ತಿರಲಿಲ್ಲ. ದೈಹಿಕ ಸವಕಳಿಯ ಪೂರೈಕೆಗಾಗಿ ಸಿಹಿ ಊಟ ಅವಶ್ಯಕವಿರಬಹುದು; ಆದರೆ ಅದೇ ಕೊನೆಯಲ್ಲ. ವಿಶಾಲ ಮನೋಭಾವ, ವಿಸ್ತಾರ ವಿಚಾರಗಳ ಅರಳುವಿಕೆಯನ್ನು ಹಬ್ಬಗಳಿಂದ ಪಡೆದದ್ದಾದರೆ ಜೀವನ ಇನ್ನೂ ಸುಂದರವಾಗುತ್ತದೆ". ಹಬ್ಬ–ಹರಿದಿನಗಳು ನಮ್ಮ ಧಾರ್ಮಿಕ ಮತ್ತು ಸಾಮಾಜಿಕ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿರುವ ಒಂದು ಅತಿ ಮುಖ್ಯವಾದ ಮತ್ತು ಅತ್ಯಂತ ಪರಿಚಿತವಾದ ವಿಷಯ ಉತ್ಸವ ಪ್ರಿಯಾ" ಖಲು ಮನುಷ್ಯಾ: ಅಂದರೆ ಹಬ್ಬಗಳು ಮನುಷ್ಯ ಜೀವನದಲ್ಲಿನ ವಿಶೇಷವಾದ ಸಂತೋಷದ ಸಂದರ್ಭಗಳು ಮನುಷ್ಯ ಜೀವನದಲ್ಲಿನ ವಿಶೇಷವಾದ ಸಂತೋಷದ ಸಂದರ್ಭಗಳು. ಬಂಧು–ಬಳಗ, ಇಷ್ಟಮಿತ್ರರು ಮುಂತಾದವರು ಒಂದೆಡೆಯಲ್ಲಿ ಒಟ್ಟಾಗಿ ಸೇರುವುದು. ಯಥಾಶಕ್ತಿಯಾಗಿ ರುಚಿರುಚಿಯಾದ ತಿಂಡಿ ತಿನಿಸುಗಳನ್ನೂ, ಪಾನೀಯಗಳನ್ನೂ ಸೇವಿಸುವುದು, ಆಡುವುದು, ಪಾಡುವುದು, ಮನಸೋ ಇಚ್ಛೆ ಮಾತನಾಡುವುದು, ಇತ್ಯಾದಿ ರೂಪಗಳಲ್ಲಿ ಇಂದ್ರೀಯಗಳ ಆನಂದವನ್ನನುಭವಿಸುತ್ತಾ, ಜೀವನದಲ್ಲಿ ಕಷ್ಟಕಾರ್ಪಣ್ಯಗಳಿದ್ದರೆ ಅವುಗಳನ್ನು ಮರೆಯುವುದು, ಇದು ಸಾಮಾನ್ಯವಾಗಿ ಎಲ್ಲ ದೇಶ, ಜನಾಂಗ, ಸಂಸ್ಕೃತಿಗಳಿಗೆ ಸೇರಿದ ಜನರೂ ಹಬ್ಬಗಳನ್ನು ಆಚರಿಸುವ ವಿಧಾನವಾಗಿದೆ."

ಹರಿದಿನಗಳಂದು ಮನೆಯೇ ದೇಗುಲ ತಳಿರು ತೋರಣಗಳಿಂದ, ಮಕ್ಕಳ ಮಂದಹಾಸಗಳಿಂದ, ಮಡದಿಯ ವ್ರತನಿಯಮದ ಸಡಗರದಿಂದ ಬಂಧು–ಮಿತ್ರರ ಆಗಮನದಿಂದ ಎಲ್ಲರಿಗೂ ಶಾಂತಿ, ಸಂತೋಷ ಲಭಿಸುತ್ತವೆ. ಯುಗಾದಿ, ವಿಜಯದಶಮಿ, ದೀಪಾವಳಿ ಮೊದಲಾದ ಕೆಲವು ಹಬ್ಬಗಳಂದು ಮನೆಮಂದಿಯೆಲ್ಲ ಹೋಸ ಬಟ್ಟೆಗಳನ್ನು ಧರಿಸುವರು. ಉಳ್ಳವರು ಪ್ರತಿಯೊಂದು ಹಬ್ಬದಲ್ಲಿಯೂ ಉಂಟು–ಊಂಡು ನಲಿಯ ಬಹುದು. ಅಂತೆಯೇ ಬಡವರು ಸಹ ಯಥಾಶಕ್ತಿ ಊಟ–ಉಡಿಗೆಗಳಲ್ಲಿ ಸಂತೋಷ ಪಡೆಯುವರು. ದೇವರ ಉತ್ಸವ, ಪಾರಾಯಣ, ನಾಟಕ ಅಥವಾ ಸಾಮೂಹಿಕವಾದ ಗೋಷ್ಠಿಗಳಲ್ಲಿ ಜನ ನಲಿಯುವರು. ವ್ಯಾವಹಾರಿಕ ಜಗತ್ತಿನ ಕ್ಲೇಶ ಕಾರ್ಪಣ್ಯಗಳಿಂದ ಎಲ್ಲರ ಮನಸ್ಸು ಈ ದಿನಗಳಲ್ಲಾದರೂ ಸ್ವಲ್ಪ ದೂರವಿದ್ದು ನೆಮ್ಮದಿ ಪಡೆಯುತ್ತದೆ. ಆದರೆ ಬರೀ ಸಂತೋಷ, ಮನರಂಜನೆಯಲ್ಲಿ ಕಾಲ ಕಳೆಯದೆ ಹಬ್ಬ–ಹರಿದಿನಗಳಂದು ಕೆಲವು ಕಾಲವಾದರೂ ದೈವಸಾನಿಧ್ಯವನ್ನು ಕಾಣಬೇಕೆನ್ನುವುದೇ ಇದರ ಮುಖ್ಯ ಉದ್ದೇಶ.

ಹಬ್ಬಗಳನ್ನು ಅವುಗಳ ವ್ಯಾಪ್ತಿಯ ದೃಷ್ಟಿಯಿಂದ "ರಾಷ್ಟ್ರೀಯ, ಪ್ರಾದೇಶಿಕ, ಗ್ರಾಮೀಣ ಮತ್ತು ಮತೀಯ ಹಬ್ಬಗಳೆಂದು ವಿಂಗಡಿಸಿಕೊಳ್ಳಬಹುದು. ಸ್ವಾತಂತ್ರ್ಯ ದಿನಾಚರಣೆ, ಶಿಕ್ಷಕರ ದಿನಾಚರಣೆ, ನವರಾತ್ರಿ, ದೀಪಾವಳಿ ಇವು ರಾಷ್ಟ್ರೀಯ ಹಬ್ಬಗಳು, ಕೇರಳದ ಓಣಂ ತಮೀಳುನಾಡಿನ ಪೊಂಗಲ್, ಮೈಸೂರಿನ ದಸರಾ, ಬಂಗಾಳದ ದುರ್ಗಾ ಪೂಜೆ ಮುಂತಾದವು ಪ್ರಾದೇಶಿಕ ಹಬ್ಬಗಳು ಊರು ಗ್ರಾಮ ಮಟ್ಟದಲ್ಲಿ ಜರಗುವ ಹಬ್ಬ ಜಾತ್ರೆಗಳೆಲ್ಲ ಜನಪದ (ಗ್ರಾಮೀಣರ) ಹಬ್ಬ ಜಾತ್ರೆಗಳೆನಿಸಿಕೊಳ್ಳುತ್ತವೆ. ಬಸವ ಜಯಂತಿ, ಬುದ್ಧ ಜಯಂತಿ, ಕ್ರಿಸ್ತ ಜಯಂತಿ, ಮಹಾವೀರ ಜಯಂತಿ, ಪೈಗಂಬರ ಜಯಂತಿ ಹಾಗೂ ಗುರುನಾನಕ ಜಯಂತಿ ಇವೇ ಮುಂತಾದವು ಮತೀಯ ಹಬ್ಬಗಳು."

ಜನಪದ ಸಂಸ್ಕೃತಿಯಲ್ಲಿ ವರ್ಷದ ಹನ್ನೆರಡು ತಿಂಗಳು ಕಂಡು ಬರುವ ಹಬ್ಬಗಳು ಆಚರಣೆಗಳ ಗೂಡೆ ಆಗಿವೆ. ಜನಪದರ ದಿನನಿತ್ಯದ ಜೀವನಕ್ಕೆ ನೆರವಾಗುವ ಮಳೆ, ಬೆಳೆ, ಪ್ರಾಣಿ, ಸಮೃದ್ಧಿ ಮುಂತಾದವುಗಳಲ್ಲಿ ಹಬ್ಬಿ ಹರಡಿರುವ ಹಬ್ಬ–ಹರಿದಿನಗಳು, ಅವುಗಳ ಸಂದರ್ಭದಲ್ಲಿ ಆಚರಿಸುವ ವಿಶಿಷ್ಟ ಬಗೆಯ ಆಚರಣೆಗಳು, ಜನಪದ ಸಂಸ್ಕೃತಿಯ ಕೇಂದ್ರ ಬಿಂದುವಾಗಿವೆ. ಕುಂಭ ಪೂಜೆ, ಗಂಗೆ ಪೂಜೆ, ಪ್ರಾರ್ಥನೆ ಸಂಪ್ರದಾಯಾಚರಣೆಗಳಿಂದ ಭೂಮಿಯ ಫಲವತ್ತತೆಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಮಾನವ ಹಬ್ಬಗಳನ್ನು ಆಚರಣೆಯಲ್ಲಿ ತಂದುಕೊಂಡಿದ್ದಿರಬಹುದು" ಒಟ್ಟಾಗಿ "ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನೊಲಿಸಿಕೊಳ್ಳುವ ಸತತ ಪ್ರಯತ್ನಗಳ ಫಲವಾಗಿ ಹಬ್ಬಗಳು ಹುಟ್ಟು ಪಡೆದವು".

ಹಬ್ಬವೆಂದರೆ ಸಾಮಾನ್ಯವಾಗಿ ಉಂಡುಟ್ಟು ನಲಿದಾಡಬಹುದಾದ ಸಮಯ, ಮೈಯುಳಿಸಿಕೊಂಡು ಮೆರೆದಾಡಬಹುದಾದ ಅವಕಾಶ ಎಂಬ ಕಲ್ಪನೆ ಮೊತ್ತಮೊದಲಿಗೆ ಬರುತ್ತಿದೆ. ಇದು ತಪ್ಪೆಂದು ಹೇಳುವುದಕ್ಕೂ ಇಲ್ಲ. 'ದುಡಿದು ದಣಿದರೆ ಜೀವ' ದಣಿದು ದುಡಿದರೆ ಸಾವು; ಬಾಳಿನ ಹೋರಾಟದಲ್ಲಿ ಪ್ರತಿವ್ಯಕ್ತಿಯೂ ನೆತ್ತರೂ ಬೆವರಾಗುವಂತೆ ದುಡಿಯಲೇ ಬೇಕು. ದಣಿದ ಜೀವದಲ್ಲಿ ತಣಿವನ್ನು ತುಂಬಲಿಲ್ಲವಾದರೆ ಅದಕ್ಕೆ ಸಾವು ಸಿದ್ಧ ಸಾವನ್ನು ತಪ್ಪಿಸಬೇಕಾದರೆ ಶ್ರಮಿಸಿದ ಜೀವನಕ್ಕೆ ಒತ್ತಾಯದಿಂದಲಾದರೂ ವಿಶ್ರಾಂತಿ ಸಮಯವನ್ನು ಕಲ್ಪಿಸಬೇಕು. ಇದುವೇ ಹಬ್ಬದ ದಿವಸ ಹಬ್ಬಗಳ ಮಹತ್ವ ಇಷ್ಟಕ್ಕೆ ಮುಗಿಯಲಿಲ್ಲ. ಅದರ ಅಂತರಾಳ ತುಂಬಾ ವಿಶಾಲವಾದದ್ದು.

'ಜೀವ ವಿಕಾಸದ ಘಟ್ಟದಲ್ಲಿ ಮಾನವನ ಅಸ್ತಿತ್ವ ಅತ್ಯಂತ ಪ್ರಮುಖವಾದುದಾಗಿದೆ. ಮಾನವನ ಮತ್ತು ನಿಸರ್ಗದ ಸಂಪರ್ಕ ಗಾಢವಾಗುತ್ತ ಬೆಳೆದಂತೆಲ್ಲ, ನಿಸರ್ಗದ ಎಲ್ಲ ಘಟನೆಗಳು ಬೆರಗು ಮೂಡಿಸಿದವು ಧೀಮ್ಮೆಂದು ಸಿಡಿಯುವ ಜ್ವಾಲಾಮುಖಿ, ದಕ್ಕಿದನ್ನು ಕೊಚ್ಚಿ ಸೆಳೆದೊಯ್ಯುವ ಭೀಕರ ಪ್ರವಾಹ. ಇದ್ದಕ್ಕಿದ್ದಂತೆ ಮೂಡುವ ಸೂರ್ಯ ಮತ್ತು ಕವಿಯುವ ಗಾಢ ಕತ್ತಲೆ ಇತ್ಯಾದಿಗಳು ಯಾವುದೇ ಆದಿಯ ಗುಂಪಿನ ವ್ಯತ್ಯಾಸ ಭಯ ವಿಸ್ಮಯಗಳಾಗಿ ಸೀಮಿತವಾಗದೇ ಇಡೀ ವೃಂದ ಸಾಮೂಹಿಕ ಅನುಭವಗಳಿಗೆ ಕಾರಣವಾಗುತ್ತದೆ. ಇಂತಹ ಅನುಭವಗಳು ಕೇವಲ ಅವರ ಭಾವನಾ ಪ್ರಪಂಚಕ್ಕೆ

ನಿರ್ದಿಷ್ಟಗೊಳ್ಳದೆ, ಅನಿಯಂತ್ರಿಕತ ಶಕ್ತಿಗಳ ಅದ್ಭುತ, ಅಮಾಯಕ ಭಯೋತ್ಪಾದಕ ಕಲ್ಪನೆಗಳಿಗೆ ಪ್ರೇರಣೆಯನ್ನು ಒದಗಿಸುತ್ತವೆ. ಮಾನವನ ಇಚ್ಛೆ ಅಥವಾ ಬಯಕೆಯ ಸಂಕಲ್ಪ ವೃತ ಆ ಇಚ್ಛೆಯ ಪೂರ್ಣತೆಗಾಗಿ ಒಂದು ನಿರ್ದಿಷ್ಟ ಅವಧಿಯಲ್ಲಿ ಕೈಕೊಳ್ಳುವ ಆಚರಣೆಗಳ ರೂಢಿ ಉತ್ಸವಗಳೇ ಹಬ್ಬ ಹೀಗಾಗಿ ಆಚರಣೆ ಮತ್ತು ಹಬ್ಬಗಳಿಗೆ ಬೇರ್ಪಡಿಸಲಾರದ ಸಂಬಂಧವಿದೆ. ಶಿಲಾಪೂರ್ವ ಮಾನವ, ನಾಗರೀಕತೆಯ ಜೀವನ ವಿಕಾಶಗೊಳ್ಳುತ್ತ ಬಂದುದೇ ಒಂದು ರೋಚಕವಾದ ಸಾಹಸಮಯ ಸಂಗತಿಯಾಗಿದೆ."

ಜಾನಪದವು ವಿಶಾಲ ಸಂಸ್ಕೃತಿಯ ಮಹತ್ವದ ಒಂಧು ಭಾಗ. ಸಂಸ್ಕೃತಿಯ ಮೂಲವಿರುವುದು ಜಾನಪದರಲ್ಲಿ, ಒಂದು ಪ್ರದೇಶದ ಜನತೆ ಇರಿಸಿಕೊಂಡ ನಂಬಿಕೆಗಳು, ರೂಢಿಸಿಕೊಂಡು ಬಂದ ಜೀವನ ಪದ್ಧತಿಗಳು, ಸಂಯೋಜನೆಗೊಂಡ ಸೌಕರ್ಯ ಸಲಕರಣೆಗಳು, ರೂಢಿಸಿಕೊಂಡ ನೀತಿ ನಿಯಮಗಳು ಹಾಗೂ ಬೆಳೆಸಿಕೊಂಡ ಕೌಶಲ ಹವ್ಯಾಸಗಳು, ಸಾಹಿತ್ಯ ಇತ್ಯಾದಿಗಳ ಮೂಲಕ ಅವರ ಸಂಸ್ಕೃತಿಯೂ ತಿಳಿದು ಬರುತ್ತದೆ. ಸಂಸ್ಕೃತಿ ಎಂಬುದು ಒಂದೆರಡು ದಿನ, ತಿಂಗಳು, ವರ್ಷದ ಅಲ್ಪಾವಧಿಯಲ್ಲಿ ಬೆಳೆದದ್ದಲ್ಲ. ಅದು ಮಾನವ ಕುಲ ಹುಟ್ಟಿದದಿನದಿಂದ ಜೀವನ ಪರ್ಯಂತರ ನಿರಂತರವಾಗಿ ಬೆಳೆಯುತ್ತಿರುವಂತಹುದು.

ಪ್ರತಿಯೊಂದು ಹಬ್ಬಗಳಲ್ಲಿಯೂ ಭಗವಂತನನ್ನು ವಿಶಿಷ್ಟ ರೀತಿಯಲ್ಲಿ ಆರಾಧಿಸಿ ಅವನ ಅನುಗ್ರಹಕ್ಕೆ ಪಾತ್ರರಾಗಬೇಕು. ನಾಮ ರೂಪಗಳಿಲ್ಲದವನಿಗೆ ವಿವಿಧ ನಾಮರೂಪ ಕಲ್ಪಿಸಿಕೊಂಡುದ್ದರೂ ಆತ್ಮ ಚಿಂತನೆ, ದೈವ ಸಾಕ್ಷಾತ್ಕಾರಕ್ಕೆ ಹಬ್ಬ–ಹರಿದಿನಗಳು ಕಾರಣವಾಗಬೇಕು. ಜನಪದ ಚಾರಿತ್ರ್ಯಶೀಲ ಜೀವನದ ಗುಣಮಟ್ಟವನ್ನು ರೂಪಿಸಲು ಇವು ಸಹಕರಿಸಿವೆ. ದೇವರು ದೈವ–ಧರ್ಮಗಳ ಮೇಲೆ ಐತಿಹಾಸಿಕ, ಪೌರಾಣಿಕ ಸತ್ಪುರುಷರ ಮೇಲೆ ಭಯ, ಭಕ್ತಿ, ನಿಷ್ಠೆಗಳನ್ನು ಮೂಡಿಸಲು ಜನಪದರ ಬದುಕಿನಲ್ಲಿ ಮಹತ್ವದ ಪಾತ್ರವಾಗಿವೆ. ಜನರು ಮನಸ್ಸು ಲೌಕಿಕದಿಂದ ಪಾರಮಾರ್ಥದೆಡೆಗೆ ಎಳೆಸಲು, ಬಹಿರ್ಮುಖವಾದ ಮನಸ್ಸು ಅಂತರ್ಮುಖಿಯಾಗಿಸಲು, ಪವಿತ್ರ ಕಾರ್ಯಗಳಲ್ಲಿ ಮನವೆಳೆಸಲು ಹಬ್ಬಗಳು ಎಚ್ಚರವಹಿಸಿವೆ."

**ಗ್ರಂಥಋಣಿ.**

೧. ಡಾ. ಅಂಬಳಿಕೆ ಹಿರೆಯಣ್ಣ – ಹಬ್ಬ ಜಾತ್ರೆಗಳು
೨. ಶ್ರೀ. ಶ್ರೀ. ರಂಗಪ್ರಿಯ – ಭಾರತೀಯರ ಹಬ್ಬ–ಹರಿದಿನಗಳು
೩. ಪ್ರೊ.ಡಿ.ಟಿ.ರಂಗಸ್ವಾಮಿ – ಭಾರತದ ಹಬ್ಬಗಳು
೪. ಡಾ. ಬಸವರಾಜ ಪೋಲಿಸ್ ಪಾಟೀಲ್ – ಹೈದ್ರಾಬಾದ ಕರ್ನಾಟಕದ ಜನಪದಸಾಹಿತ್ಯ.



# ವೀರಶೈವ ತತ್ವಾನುಸಂಧಾನಿ ಕಲ್ಯಾಣ ಕರ್ನಾಟಕದ ಶ್ರೀ ಶರಣಬಸವೇಶ್ವರರು.

**–ಡಾ. ಭಾಗೀರತಿ ಬಿ. ಕೆ,**
ಪ್ರಾಂಶುಪಾಲರು,
ಶಾರದ ವಿವೇಕ ಕಲಾ ಮತ್ತು ವಾಣಿಜ್ಯ
ಮಹಿಳಾ ಪದವಿ ಮಹಾವಿದ್ಯಾಲಯ, ಕಲಬುರಗಿ.

ಶ್ರೀ ಶರಣಬಸವೇಶ್ವರರು ವಿಶ್ವ ವಿಭೂತಿಗಳ ಬದುಕಿನ ಸಮನ್ವಯದ ಮೂರ್ತಿಯಂತೆ ಇದ್ದಾರೆ. ಧರ್ಮವನ್ನು ತಿಳಿಸುವಲ್ಲಿ, ಉದ್ದಾರ ಮಾಡುವಲ್ಲಿ, ಪ್ರಸಾರ ಕಾರ್ಯದಲ್ಲಿ ಬುದ್ಧ, ಕ್ರೈಸ್ತ, ಬಸವಾದಿಗಳ ಸಮಾನವಾಗಿದ್ದಾರೆ. ಶರಣರು ಯಾವುದೇ ಧರ್ಮವನ್ನು ಸ್ಥಾಪಿಸಲಿಲ್ಲ. ಅವರು ನುಡಿದದ್ದೇ ಧರ್ಮ, ಅದುವೇ ಮಾನವ ಧರ್ಮ. ಬುದ್ಧನಂತೆ ಮಹಾ ಅಹಿಂಸಾವಾದಿಗಳಾಗಿದ್ದರು. ಶರಣಬಸವರು ಸಸ್ಯಗಳಲ್ಲೂ ಜೀವ ಇರುವುದೆಂದು ಭಾವಿಸಿ, ಹೂ ಪತ್ರಿಗಳನ್ನು ಗಿಡದಿಂದ ಹರಿಯಲಿಲ್ಲ ಕೆಳಗೆ ಬಿದ್ದವುಗಳನ್ನು ಮಾತ್ರ ಆರಿಸಿ ತಂದು ಲಿಂಗಕ್ಕರ್ಪಿಸಿದರು. ಇವರು ಇದು ಹೀಗೆ, ಅದು ಹಾಗೇ ಎಂದು ಉಪದೇಶ ಮಾಡಲಿಲ್ಲ. ತಾವು ಮೊದಲು ನಡೆದರು. ತಮ್ಮಲ್ಲಿದ್ದ ಜ್ಞಾನವನ್ನು ಜನ ಹಿತಕ್ಕಾಗಿ ನುಡಿದರು. ನುಡಿದಂತೆ ನಡೆದರು ವೀರಶೈವ ಧರ್ಮದ ಮಹಾಪುರುಷರಾದ ಶರಣಬಸವರು ವೀರಶೈವ ಧರ್ಮವೇನೆಂಬುದನ್ನು ತೋರಿಸಲು ತಮ್ಮ ಜೀವನವನ್ನೇ ಪ್ರತ್ಯಕ್ಷಾನುಭೂತಿಯಾಗಿಸಿಕೊಂಡರು. ಶರಣಬಸವರ ಜೀವನ ಸಂಪುಟ ವೀರಶೈವ ತತ್ವಾನುಸಂಧಾನದ ಸಾಧನೆಯಿಂದ ಕೂಡಿದೆ.

ವೀರಶೈವ ಧರ್ಮಕ್ಕೆ ಅಷ್ಟಾವರಣಗಳು ಅಂಗವಾಗಿದೆ. ಪಂಚಾಚಾರಗಳು ಅವರ ಪ್ರಾಣವಾಗಿವಾಗಿವೆ. ಷಟಸ್ಥಲಗಳು ಆತ್ಮವಾಗಿವೆ ಇವುಗಳ ರೂಪವೇ ವೀರಶೈವ ಧರ್ಮವಾಗಿದೆ. ಈ ತತ್ವಗಳ ಆಚರಣೆಯೇ ವೀರಶೈವ ಧರ್ಮಾಚರಣೆಯಾಗುತ್ತಿದೆ. ಶರಣಬಸವರು ಇವುಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡು ಹೇಗೆ ಆಚರಿಸತೋರಿದರೆಂಬುವುದನ್ನು ಇಲ್ಲಿ ಮುಖ್ಯವಾಗಿ ಗಮನಿಸಿದೆ.

**ಅಷ್ಟಾವರಣಗಳು.**

ಒಟ್ಟು ಎಂಟು ಅಷ್ಠಾವರಣಗಳು ಬರುತ್ತವೆ. ಅವುಗಳು ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ ಇವೇ ಆ ಎಂಟು ಆವರಣಗಳು. ಗುರು, ಲಿಂಗ, ಜಂಗಮ ಇವು ವೀರಶೈವ ಸಾಧಕನಿಗೆ ಪೇರಕ ಶಕ್ತಿಗಳು. ಇವು ಶಿವನ ಮೂರು ರೂಪಗಳು ನಮಃ ಶಿವಾಯ ಎಂಬ ಪಂಚಾಕ್ಷರ ಮಹಾಮಂತ್ರದ ಮುಖಾಂತರವೇ ಧ್ಯಾನಿಸಬೇಕು.

**೧. ಗುರು.**

ಗುರು ಎಂಬುವವನು ಅಜ್ಞಾನವನ್ನು ಕಳೆಯುವ ಜ್ಞಾನರೂಪನಾಗಿ ಕಾಣುತ್ತಾನೆ, ನಾಮ ರೂಪ ಕ್ರೀಯಾ ತೀತನು, ಮಾಯಾ ರಹಿತನೂ, ಭವಹರನೂ, ಸಾಧನೆಗೆ ಪ್ರೇರಕ ಶಕ್ತಿಯೂ ಆದ ಗುರುದೇವನ ಆಜ್ಞೆಯನ್ನು ಪಾಲಿಸಿದರಿಂದ ಶರಣಬಸವರು ಮಹಾಶರಣತ್ವದ ಪದವಿಗೇರಿದರು. ಮನುಷ್ಯನ ಜೀವನದ ಉದ್ದಾರಕ್ಕೆ ಗುರು ಬಹಳ ಮುಖ್ಯ ಗುರುವಿನ ಗುಲಮನಾಗುವ ತನಕ ದೊರೆಯದಣ್ಣ ಮುಕುತಿ ಎನ್ನುವಂತೆ ನಾವು ಗುರುವಿಗೆ ಗುಲಾಮನಾಗಬೇಕು ಅಂದಾಗ ನಮಗೆ ಮುಕ್ತಿ ಸಿಗುತ್ತದೆ ಅಂತೆಯೇ ಶರಣಬಸವರು ಗುರುಕಲಕೇರಿ ಮರುಳಾಧ್ಯರ ಅಣತಿಯಂತೆ ಶರಣಬಸವರು ವಿದ್ಯಾಭ್ಯಾಸಕ್ಕೆ ತೊಡಗಿದರು. ಶರಣ ಧರ್ಮವನ್ನು ವಚನಗಳ ಮುಖಾಂತರ ಹುಡುಕಿದ್ದರು ಗುರುವಿಗೆ ಭಕ್ತಿ ತೋರಿಸಬೇಕಾದರೇ ನಮಗೆ ಶಕ್ತಿ ಬೇಕು ಎಂದು ಹೇಳಿದರು. ಬದುಕಿನ ಒಂದೊಂದು ದಿನ, ಕ್ಷಣವೂ ಗುರು ಸೇವೆಯಲ್ಲಿ ಗುರುಸ್ಮರಣೆಯಲ್ಲಿ ಕಾಲ

ಕಳೆಯುತ್ತಿದ್ದುದರಿಂದ ಮರುಳಸಿದ್ದರು ಶರಣಬಸವರನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದರು. ಗುರು ಶಿಷ್ಯರು ಇಬ್ಬರು ಪ್ರೀತಿಯಿಂದ ದೇಹ ಎರಡು ಜೀವ ಒಂದೇ ಎಂಬಂತೆ ಇದ್ದರು. ಇವರ ಜ್ಞಾನದ ಸಾಧನೆ ಹೆಚ್ಚಿದಂತೆ ಜನ ಸಾಮಾನ್ಯರಿಗೆ ಲೀಲಾ ಪುರುಷರಾಗಿ ತೋರಿದರು ಹಲವಾರು ಶರಣರು ಇವರ ಹತ್ತಿರ ಬಂದು ತಮ್ಮ ಕಷ್ಟಗಳನ್ನು ಹೇಳಿಕೊಂಡು ಪರಿಹರಿಸುವಂತೆ ಬೇಡಿಕೊಳ್ಳುತ್ತಿದ್ದರು. ಅವರ ಪಾದಕ್ಕೆ ನಮಿಸುತ್ತಿದ್ದರು ಇದು ಅವರಿಗೆ ಇಷ್ಟವಾಗಲಿಲ್ಲ ಏಕೆಂದರೆ ಅವರಿಗೆ ತಾನೊಬ್ಬ ಭಕ್ತ ಎಂದು ತಿಳಿದುಕೊಂಡಿದ್ದರು. ಗುರು ಎಂದು ತಿಳಿದಿರಲಿಲ್ಲ. ಶರಣೆಂದವರಿಗೆ ಶರಣು ಶರಣಾರ್ಥಿ, ಮಹಾ ಶರಣಾರ್ಥಿಯೆಂದೇ ಹೇಳುತ್ತಿದ್ದರು. ಪಾದ ಮುಟ್ಟಿ ನಮಸ್ಕರಿಸಲು ಬಂದ ಭಕ್ತರಿಗೆ "ನಿಮ್ಮ ತಲೆಗಳು ಆ ಶಿವನ ಸಾನಿಧ್ಯಕ್ಕೆ ಮಾತ್ರ ಮಣಿಯಲಿ" ಎಂದು ಹೇಳುತ್ತಿದ್ದರು. ಆದರೇ ಜನರು ಶರಣರಿಗೆ ಪಾದ ಮುಟ್ಟಿ ನಮಸ್ಕರಿಸುವುದನ್ನು ಬಿಡಲೇ ಇಲ್ಲ. ಅದಕ್ಕಾಗಿ ಶರಣರು ಯಾವಾಗಲೂ ತಮ್ಮ ಜೋತೆಯಲ್ಲಿ ಗುರುಗಳನ್ನು ಇರಿಸಿಕೊಳ್ಳುತ್ತಿದ್ದರು. ಶರಣರು ಗುರು ಸೇವೆಗೆ ಬಹಳ ಆದ್ಯತೆ ನೀಡಿದರು.

**೨. ಲಿಂಗ.**

"ಲಿಂಗ ಮಧ್ಯೆ ಜಗತ್ ಸರ್ವಂ", ಎಂಬಂತೆ ಲಿಂಗದಲ್ಲಿ ಇಡಿ ಬ್ರಹ್ಮಾಂಡವೇ ಇದೆ ಎಂದು ತಿಳಿದು ಶರಣರು ಲಿಂಗ ಪೂಜೆಯನ್ನು ಮಾಡುತ್ತಿದ್ದರು. ಲಿಂಗ ಪ್ರೇಮಿಗಳಾಗಿದ್ದರು. ಇಷ್ಟಲಿಂಗ ಪೂಜೆಯಿಂದ ಎಕದೇವೊಪಾಸನೆಯನ್ನು ಪ್ರಚುರಗೊಳಿಸಿದರು. ಶರಣಣಬಸವರು ಪ್ರತಿನಿತ್ಯ ಮೂರು ಬಾರಿ ಲಿಂಗ ಪೂಜೆ ಮಾಡಿಕೊಳ್ಳುತ್ತಿದ್ದರು. ಲಿಂಗವು ಮನಸ್ಸಿನ ಏಕಾಗ್ರತೆಗೆ ಸಹಾಯಕಾರಿ ಅಲ್ಲದೇ ಸಾಧಕನ ಜ್ಞಾನಕ್ಕೆ ಸಾಕ್ಷಿಯಾಗಿದೆ. ಪಂಚೇಂದ್ರೀಯಗಳಿಂದಾದ ಈ ದೇಹವು ಲಿಂಗದ ಆವಾಸವಾಗಿರುತ್ತದೆ. ಕಂಗಳಲ್ಲಿ ಶಿವಲಿಂಗ, ನಾಸಿಕದಲ್ಲಿ ಆಚಾರ ಲಿಂಗ, ತ್ವಕ್ಕಿನಲ್ಲಿ ಜಂಗಮಲಿಂಗ, ಹೃದಯದಲ್ಲಿ ಮಹಾಲಿಂಗ ಹೀಗೆ ಲಿಂಗಗಳ ಸ್ಥಾನಗಳು ಈ ಅಂಗದಲ್ಲಿಯೇ ಅಡಕವಾಗಿರುವವು. ಈ ರಹಸ್ಯವನ್ನು ವೀರಶೈವ ಧರ್ಮವು ಸಾಧಕನಿಗೆ ತಿಳಿಸಿ ಕೊಟ್ಟಿರುವದು, ನೋಡುವ ನೋಟವು ಶಿವಲಿಂಗಕ್ಕರ್ಪಿಸಿದಲ್ಲಿ ಅದು ಮಂಗಳ ದೃಷ್ಠಿಯಾಗುತ್ತದೆ ಸಾಧಕನಿಗೆ ಲಿಂಗವು ಅತಿ ಅವಶ್ಯಕವಾಗಿರುವುದರಿಂದ ಸಾಧಕ ಜೀವಿಯಾದ ಕಡಕೊಳ್ಳ ಮಡಿವಾಳಪ್ಪ ಲಿಂಗದೀಕ್ಷೆಯನ್ನು ಬಯಸಿ ಬಂದಾಗ ಶರಣಬಸವರು ಸಮಾಜದ ವಿರೋಧವನ್ನು ಲೆಕ್ಕಿಸದೇ ಲಿಂಗದಿಕ್ಷೇ ಮಾಡಿಸಿದರು.

**೩. ಜಂಗಮ.**

ಶರಣಬಸವರು ಜಂಗಮ ಪ್ರೇಮಿಗಳಾಗಿದ್ದು ಜಂಗಮರ ಬಗ್ಗೆ ಬಹಳ ಗೌರವವಿತ್ತು ಶರಣಬಸವರು ಅಚಲಮನಸ್ಸಿನಿಂದ ಜಂಗಮರ ಸೇವೆಯಲ್ಲಿ ತೊಡಗಿಸಿಕೊಂಡವರಾಗಿದ್ದರು. ಜಂಗಮರ ಸೇವೆಯಾಗಿರಬಹುದು ದಾಸೋಹ ಕಾರ್ಯವಾಗಿರಬಹುದು ಇವೆರಡಕ್ಕೂ ಎಂದು ತಡ ಮಾಡುತ್ತಿರಲಿಲ್ಲ ಜಂಗಮರಲ್ಲಿ ಇಟ್ಟಂತಹ ದೃಢನಿಷ್ಠೆಯಿಂದಲೇ ಶರಣವಬಸವರಿಗೆ ದಾಸೋಹ ಕಾರ್ಯದಲ್ಲಿ ಯಾವುದೇ ತೊಂದರೆಗಳು ಬರಲಿಲ್ಲ. ಬಂದರೂ ಅವು ಸರಳವಾಗಿ ನಿವಾರಣೆಯಾಗುತ್ತಿದ್ದವು. ಏನಾದರೂ ದಾಸೋಹ ಕಾರ್ಯದಲ್ಲಿ ಕಷ್ಟಗಳು ಬಂದರೆ ಭಯಪಡುತ್ತಿರಲಿಲ್ಲ. ಶ್ರೀಮಂತರಲ್ಲಿ ಹಣ ತಂದು ದಾಸೋಹ ಕಾರ್ಯವನ್ನು ಸರಳಗೊಳಿಸುತ್ತಿದ್ದರು. ಬೇಡಿದವರಿಗೆ ಬೇಕಾದ ಇಷ್ಠಾರ್ಥಗಳನ್ನು ನೀಡುವ ವ್ಯಕ್ತಿಯಾಗಿದ್ದರು.

**೪. ವಿಭೂತಿ–ರುದ್ರಾಕ್ಷಿ.**

ಶಿವಭಕ್ತರಾದ ಶರಣಬಸವರಿಗೆ ವಿಭೂತಿ ರುದ್ರಾಕ್ಷಿಗಳೇ ಆಭರಣಗಳು. ಯಾವಾಗಲೂ ಹಣೆಯ ಮೇಲೆ ವಿಭೂತಿ ಮತ್ತು ಕೊರಳಲ್ಲಿ ರುದ್ರಾಕ್ಷಿ ಸರವಿರುತ್ತಿತ್ತು. ತಮ್ಮ ದರ್ಶನಕ್ಕೆ ಬರುವ ಜನರಿಗೆ ವಿಭೂತಿಯನ್ನು ಪ್ರಸಾದ ರೂಪದಲ್ಲಿ ನೀಡುತ್ತಿದ್ದರು. ಜನರು ಈ ಪ್ರಸಾದವನ್ನು

ತೆಗೆದುಕೊಂಡು ತಮ್ಮ ಸಂಸಾರದ ಕಷ್ಟಗಳನ್ನು ಕಳೆಯುತ್ತಿದ್ದರು. ಭಸ್ಮ ನೀಡುವ ಮೂಲಕ ಸಾಕಷ್ಟು ಸಮಸ್ಯೆಗಳನ್ನು ಬಗೆಹರಿಸುತ್ತಿದ್ದರು. ಭಸ್ಮದಲ್ಲಿನ ಶಕ್ತಿಯನ್ನು ಅರಿತಿದ್ದರು, ಭಸ್ಮವನ್ನು ಭಕ್ತಿಯಿಂದ ಧರಿಸಿಕೊಳ್ಳುವುದರಿಂದ ಸಕಲ ಇಷ್ಟಾರ್ಥಗಳು ಈಡೇರಿಸುತ್ತಿದ್ದವು. ರುದ್ರಾಕ್ಷಿಯೂ ಸಹ ಧರಿಸಲೇಬೇಕೆಂದು ಹೇಳಿದರು. ಧರಿಸುವುದರಿಂದ ರುದ್ರಾ ಸ್ವರೂಪವು ಪ್ರಾಪ್ತವಾಗುತ್ತದೆ ಮತ್ತು ಚರ್ಮರೋಗಗಳು ದೂರವಾಗುತ್ತವೆ ಎಂದು ನಂಬಿದರು ಇಂದಿಗೂ ಶರಣರ ದರ್ಶನಕ್ಕಾಗಿ ಬಂದವರಿಗೆ ವಿಭೂತಿಯನ್ನು ಪ್ರಸಾದವಾಗಿ ಕೋಡಲಾಗುತ್ತಿದೆ.

**೫. ಮಂತ್ರ.**

ನಮಃಶಿವಾಯ ಎಂಬ ಪಂಚಾಕ್ಷರಿ ಮಂತ್ರವು ಎಲ್ಲಾ ಮಂತ್ರಗಳಿಗೂ ಗುರುಮಾತೆಯಾಗಿದೆ ಈ ಮಂತ್ರ ಹೇಳುವುದರಿಂದ ರೋಗಗಳು ದೂರಾಗುತ್ತವೆ ಮಂತ್ರವನ್ನು ಪಠಣ ಮಾಡುವುದರಿಂದ ಮನುಷ್ಯನ ಮನಸ್ಸು ಏಕಾಗ್ರತೆಯಿಂದ ಕೂಡಿರುತ್ತದೆ. ಚಂಚಲತೆ ಇರುವುದಿಲ್ಲ ಮನಸ್ಸು ಹಿಡಿತದಲ್ಲಿರುತ್ತದೆ ಜ್ಞಾಪಕ ಶಕ್ತಿಯೂ ಹೆಚ್ಚುತ್ತದೆ ಶರಣಬಸವರು ಪಂಚಾಕ್ಷರಿ ಮಂತ್ರದ ಸಾಧನೆ ಗೈದುದಲ್ಲದೇ ಸಾಧನೆಯ ಫಲವನ್ನು ಸಾರ್ವತ್ರಿಕವಾಗಿ ಹಂಚಿಕೊಂಡಿರುವರು.

**೬. ಪಾದೋದಕ.**

ಶರಣಬಸವರು ಪ್ರತಿದಿನ ಮೂರು ಬಾರಿ ಲಿಂಗ ಪೂಜೆ ಮಾಡಿಕೊಂಡು ಪಾದೋದಕ ಪಡೆದುಕೊಳ್ಳುತ್ತಿದ್ದರು. ಪಾದೋದಕ ಪಡೆದುಕೊಂಡೇ ಪ್ರಸಾದ ಸೇವಿಸುತ್ತಿದ್ದರು. ಈ ನಿಯಮ ವೀರಶೈವ ಧರ್ಮಿಯರು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದಿದ್ದಾರೆ ಪ್ರತಿ ನಿತ್ಯ ಮುಂಜಾನೆ ಸ್ನಾನ ಮಾಡಿ ಲಿಂಗ ಪೂಜೆ ಮಾಡಿಕೊಂಡು ಪಾದೋದಕ ಸೇವಿಸಿ ನಂತರ ಪ್ರಸಾದವನ್ನು ತೆಗೆದುಕೊಳ್ಳುತ್ತಾರೆ, ಶರಣಬಸವರು ಪಾದೋದಕ ಸೇವಿಸುವುದರಿಂದ ಪಾಪಮಾಯವಾಗುತ್ತದೆ ಎಂದಿದ್ದಾರೆ. ಕಷ್ಟದಿಂದ, ರೋಗದಿಂದ ಬಂದ ಅನೇಕ ಭಕ್ತರಿಗೆ ಪಾದೋದಕವನ್ನು ಕುಡಿಸಿ ರೋಗಗಳನ್ನು ಗುಣಪಡಿಸಿದ್ದಾರೆ ನಮ್ಮ ಶರಣಬಸವರು. ಉದಾ: ಚಳಿ, ಜ್ವರ, ಕೆಮ್ಮು, ಇತ್ಯಾದಿ.

**೭. ಪ್ರಸಾದ.**

ಶರಣಬಸವರಿಗೆ ಸೇವಿಸುವ ಅನ್ನವು ಕೇವಲ ಅನ್ನವಾಗಿರದೇ, ಊಟವಾಗಿರದೇ, ಅದು ಅವರಿಗೆ ಮಹಾಪ್ರಸಾದವಾಗಿತ್ತು. ಈ ಪ್ರಸಾದವನ್ನು ಎಲ್ಲರಿಗೂ ಹಂಚುವುದಕೊಸ್ಕರ ದಾಸೋಹ ಕಾರ್ಯವನ್ನೇ ಮಾಡುತ್ತಿದ್ದರು. ಆ ಕಾರ್ಯ ಇಂದಿಗೂ ಮಹಾ ಮನೆಯಲ್ಲಿ ಮುಂದುವರೆಯುತ್ತಿದೆ. ಈಗ ಅದು ಮಹಾದಾಸೋಹ ಪ್ರಸಾದವೆನಿಸಿದೆ ಒಂದೊಂದು ಅನ್ನದ ಅಗುಳಿನಲ್ಲಿ ಶಿವನ ಶಕ್ತಿ ಅಡಕವಾಗಿದೆ ಎಂದಿದ್ದಾರೆ. ಅದಕ್ಕಾಗಿ ಆ ಪ್ರಸಾದವನ್ನು ಊಟಮಾಡುವಾಗ ಹಾಳು ಮಾಡಬಾರದೆಂದು ಹೇಳುತ್ತಿದ್ದರು. ಒಮ್ಮೆ ಭಕ್ತರು ಪ್ರಸಾದ ಸೇವಿಸಲು ಬಂದಾಗ ಪ್ರಸಾದ ಸೇವಿಸಿ ಹೆಚ್ಚಾದ ತಟ್ಟೆಯಲ್ಲಿಯ ಪ್ರಸಾದವನ್ನು ಹಾಗೇ ಬಿಟಿದ್ದರು. ಇದನ್ನು ನೋಡಿದ ಶರಣಬಸವರು ಪ್ರಸಾದವನ್ನು ತಾವೆ ಸೇವಿಸಿದರು ಮತ್ತು ನೀಡಿ ಪ್ರಸಾದವನ್ನು ಅನೇಕ ಹೆಣ್ಣು ಮಕ್ಕಳ ಬಂಜೇತನವನ್ನು ನಿವಾರಿಸಿದರು.

ಹೀಗೆ ಶರಣಬಸವರು ತಮ್ಮ ಜೀವನದಲ್ಲಿ ಅಷ್ಟಾವರಣಗಳನ್ನು ಭಕ್ತಿಯಿಂದ ಅನುಕರಣೆ ಮಾಡಿಕೊಂಡು ಭಕ್ತರಿಗೆ ಅನುಕರಣೆ ಮಾಡಿಸಿ ಅದರ ಮಹತ್ವವನ್ನು ತಿಳಿ ಹೇಳಿ ಜೀವನವನ್ನು ಸ್ವಾರ್ಥಕ ಪಡಿಸಿದ್ದಾರೆ.



## ಕಲ್ಯಾಣ ಕರ್ನಾಟಕದ ಕಲಬುರಗಿ ಶ್ರೀಶರಣಬಸವೇಶ್ವರರು ನೀಡಿದ ವಿಶ್ವ ಸಂದೇಶ.

**–ಶ್ರೀ ಹಣಮಂತರಾಯ ಜಿ. ಗುಡ್ಡೇವಾಡಿ,**
ಉಪನ್ಯಾಸಕರು,
ಶಾರದ ವಿವೇಕ ಕಲಾ ಮತ್ತು ವಾಣಿಜ್ಯ
ಮಹಿಳಾ ಪದವಿ ಮಹಾವಿದ್ಯಾಲಯ, ಕಲಬುರಗಿ.

ಮನುಕುಲದ ಉದ್ಧಾರಕ್ಕಾಗಿಯೇ ಹುಟ್ಟಿರುವ ಕಲಬುರಗಿಯ ಶ್ರೀ ಶರಣಬಸವೇಶ್ವರರು ನುಡಿದಂತೆ ನಡೆದರು ಮೊದಲು ನಡೆದರು ಆಮೇಲೆ ನುಡಿದರುಅವರು ನೀಡಿದ ಸಂದೇಶ ಬರಿ ಮಾತಿನ ಮಾಲೆಯಲ್ಲ. ಅದು ಪಾಲನೆ. ಅನೇಕ ಶರಣರ ಪರಂಪರೆಯಲ್ಲಿ ಸಾಗಿ ಬಂದ ಶರಣಬಸವೇಶ್ವರರು ತಮ್ಮ ಬದುಕನ್ನು ಸಾಕಾರ ಗೊಳಿಸಿ ಲೋಕವನ್ನೆ ಉದ್ಧಾರ ಮಾಡಿ ಅಮರರಾಗಿರುವ ಇವರು ನೀಡಿದ ಸಂದೇಶಗಳು ಇಂದಿನ ಕಾಲಕ್ಕಂತೂ ಬಹು ಅವಶ್ಯಕವೆನಿಸುತ್ತವೆ. ಅವರು ನೀಡಿದ ಸಂದೇಶಗಳು ಈ ರೀತಿಯಾಗಿವೆ.

**೧. ಧರ್ಮವೆನ್ನುವದು ನುಡಿಯುವದಲ್ಲ; ನಡೆಯುವುದು:**

ಹನ್ನೆರಡನೆಯ ಶತಮಾನದ ಶಿವಶರಣರ ನಂತರದಲ್ಲಿ ಮತ್ತೆ ಧಾರ್ಮಿಕ ಪರಿಸರ ರೂಪಗೊಳ್ಳುದಕ್ಕೆ ಇತಿಹಾಸವೆ ಪ್ರಮಾಣಭೂತವಾಗಿದೆ. ಶರಣಬಸವರ ಕಾಲದಲ್ಲಿದ್ದ ಧರ್ಮೋಪದೇಶಕರು, ಧರ್ಮವನ್ನು ಉಪದೇಶದ ಬಂಡವಾಳ ಮಾಡಿಕೊಂಡು, ಜನತೆಯನ್ನು ಮರಳುಮಾಡಿ, ತಮ್ಮ ಬೊಜ್ಜು ಬೆಳಸಿಕೊಳ್ಳುವ ಕಾರ್ಯದಲ್ಲಿ ತೊಡಗಿದ್ದರು. ಸಂಪ್ರದಾಯ, ಕುರುಡು ನಂಬುಗೆಗಳಿಗೆ ಬಲಿಯಾಗಿ ವಿಶಾಲ ತತ್ವಗಳನ್ನು ಎಂದೋ ಗಾಳಿಗೆ ತೂರಿಬಿಟ್ಟಿದ್ದರು. ಧರ್ಮವು ಹೀಗಾಗಿ ವೈಶಾಲ್ಯ ಮನೋಭಾವವನ್ನು ಕಳೆದುಕೊಂಡು ಸಂಕುಚಿತಗೊಳ್ಳುತ್ತಿತ್ತು. ಶರಣಬಸವರ ಧರ್ಮದ ಈ ಸ್ಥಿತಿಯನ್ನು ಕಂಡು, ವ್ಯಥೆಗೊಂಡರು. ಇದು ನಿಜವಾದ ಧರ್ಮವೇ ಅಲ್ಲವೆಂದು ನುಡಿದರು. ಮಹಾನುಭಾವಿ ಕಡಕೊಳ್ಳ ಮಡಿವಾಳರ ಲಿಂಗ ದೀಕ್ಷಾ ಪ್ರಸಂಗದಲ್ಲಿ ಇಂತಹ ಸಂಪ್ರದಾಯಿಕ ಧರ್ಮಗೋಡೆಯೇ ಅಡ್ಡ ಬಂದಾಗ, ಶರಣಬಸವರು ಅದನ್ನು ಬಹಿರಂಗವಾಗಿಯೇ ಧಿಕ್ಕರಿಸಿದರು. ಇಂತಹ ಧರ್ಮದ ಅಡ್ಡ ಗೋಡೆಯನ್ನು ಒಡೆಯಬೇಕೆಂದು ಸಾರಿದರು. "ಧರ್ಮವು ಯಾರೊಬ್ಬರ ಸ್ವತ್ತಲ್ಲ; ಅದು ಸಕಲರ ಹಿತಕ್ಕಾಗಿ ಇರುವಂತಹದ್ದು, ಮತ್ತು ಹಿತವನ್ನೇ ಸಾಧಿಸುವಂತಹದ್ದು " ಎಂದು ಹೇಳಿ ಶಿವಶರಣರ ಧರ್ಮದ ವಿಚಾರ ಪ್ರಣಾಲಿಯ ಆಧಾರದ ಮೇಲೆ ಧರ್ಮ ಜಿಡ್ಡುತನವನ್ನು ಬಯಲಗೊಳಿಸಿ, ಧರ್ಮಕ್ಕೆ ಮತ್ತೆ ಹೊಸ ಹುಟ್ಟನ್ನು ನೀಡಿದರು.

**೨. ಜೀವವಿದ್ದಲ್ಲಿ ಶಿವನಿಹನು:**

ಶರಣಬಸವರು ನಂಬಿದ್ದ ಈ ಭಾವನೆಯು ಉಪಮಾತೀತವಾದುದಾಗಿತ್ತು. ಜೀವವಿದ್ದಲ್ಲಿ ಶಿವನಿಹನೆಂದು ಅವರು ತಿಳಿದಿದ್ದರಿಂದಲೇ ಯಾವ ಜೀವಿಯನ್ನೂ ನೋಯಿಸುತಿರಲ್ಲಿಲ್ಲ. 'ಅವುಗಳ ನೋವು ಶಿವನ ನೋವು' ಎಂಬುದು ಅವರ ಭಾವನೆಯಾಗಿತ್ತು. ಮಾನವರೆಲ್ಲರೂ ಶಿವನರೂಪವೇ ಆಗಿರುವದರಿಂದ, ಮೇಲು–ಕೀಳು, ಭೇದ ಭಾವಗಳನ್ನು ತಂದುಕೊಳ್ಳದೆ ಒಂದಾಗಿ, ಸಹೋದರರಂತೆ ಬಾಳಬೇಕೆಂದು ಬೋಧಿಸಿದರು. ಜೀವರಲ್ಲಿ ಬೇದವೆಣಿಸುವದೆಂದರೆ ಅದು ಶಿವನಲ್ಲಿ ಭೇದವೆಣಿಸಿದಂತೆ ಎಂದು ಬಗೆದ ಶರಣರು ಅದನ್ನೇ ಭಕ್ತರಿಗೆ ಅರುಹಿದರು. ಕುರುಡನಿಗೆ ಸಹಾಯ ಮಾಡಿದರು ; ರೋಗಿಗಳ ಸೇವೆಗೈದರು, ದೀನ ದಃಖಿತರನ್ನು ನೋಡಿ ಮರಮರನೆ ಮರಗಿ, ಅವರ ಕಷ್ಟ ಪರಿಹಾರ ಮಾಡುವುದಕ್ಕಾಗಿ ತಾವೇ ಕಷ್ಟ ಪರಂಪರೆಯಲ್ಲಿ ಸಿಕ್ಕಿಹಾಕಿಕೊಳ್ಳುತ್ತಿದ್ದರು. ಧಾನ್ಯ ತಿನ್ನಲು ಬಂದ ಹಕ್ಕಿ–ಪಕ್ಕಿಗಳನ್ನೂ, ಪಶು–ಪ್ರಾಣಿಗಳನ್ನು 'ಶಿವನ' ಸಾಕಾರ ಮೂರ್ತಿಗಳೇ ಎಂದು ಭಾವಿಸಿ ಅವುಗಳಿಗೂ 'ಅನ್ನದಾಸೋಹ' ಮಾಡಿದರು. ಸರ್ವತ್ರವ್ಯಾಪಿಯಾದ ಶಿವ ನಿರ್ಮಿತ ಈ ಜಗದಲ್ಲಿ ಶಿವರೂಪರಾದ ಜೀವರು ಸಹ ಅದೇ ಎಚ್ಚರಿಕೆಯಿಂದಲೇ ಬದುಕಬೇಕಾದುದು ಬಹು

ಅವಶ್ಯವಾಗಿದೆ. ಒಬ್ಬರಿಗೆ ನಾವು ಹಿತವು ಮಾಡುವುದು ಎಂದರೆ ಆ ಶಿವನಿಗೇ ಹಿತವು ಮಾಡಿದಂತೆ. ಒಬ್ಬರ ಬಗೆಗೆ ನಾವು ಕೆಡಕನ್ನು ಬಯಸಿದರೆ, ಅದು ಆ ಶಿವನಿಗೇ ಮುಟ್ಟುತ್ತದೆ. ಹೀಗಾಗಿ ನಾವು ಯಾರ ಬಗೆಗೇ ಆಗಲಿ ಕೆಟ್ಟ ಭಾವನೆಗಳನ್ನು ಇರಿಸಿಕೊಳ್ಳದೆ, 'ಶಿವಭಾವದಿಂದ ಹಿತವನ್ನೇ ಬಯಸುತ್ತಾ ನಮ್ಮ ದೈನಂದಿನ ಬದುಕಿನಲ್ಲಿ ತೊಡಗಿದರೆ ನಮಗೆ ಒಳ್ಳೆಯದೇ ಆಗುತ್ತದೆ. ಆದ್ದರಿಂದಲೇ ಹಿರಿಯರು "ಯತ್ರಭಾವ ತತ್ರಶಿವ ಎಂದು ಹೇಳಿರುವರು" ಎಂದು ಮುಂತಾಗಿ ಬರೆಯುತ್ತಿದ್ದರು. ಅದನ್ನು ಶರಣಬಸವರು ತಪ್ಪದೆ ಪರಿಪಾಲನೆಯೂ ಮಾಡಿದರು. ಸಕಲ ಜೀವರ ಚೈತನ್ಯದಲ್ಲಿ ಶರಣಬಸವರು ಶಿವನನ್ನು ಗುರುತಿಸಿದರು.

**೩. ಕಾಯಕ– ದಾಸೋಹಗಳಿಂದ ನೀನು ನಿನ್ನ ಸ್ವರೂಪ ಕಾಣು:**

ಎಷ್ಟೋ ಭಕ್ತರು, ಆಧ್ಯಾತ್ಮವಾದಿಗಳು, ಅನುಭಾವಿಗಳು ಶರಣಬಸವರಲ್ಲಿಗೆ ಬಂದು ದೇವರು ಧರ್ಮವನ್ನು ಕುರಿತಂತೆ ಬಹು ವಿವರವಾಗಿ ಮಾತಾಡುತ್ತಿದ್ದರು. ಶರಣಬಸವರು ಮಹಾ ಮೌನಿಗಳಾಗಿಯೇ ಎಲ್ಲವನ್ನೂ ಆಲಿಸುತ್ತಿದ್ದರು. ಅವರಲ್ಲಿ ಇನ್ನೂ ಸ್ವಸ್ವರೂಪಜ್ಞಾನ ಆಗದೆ ಇರುವದನ್ನು ಗುರುತಿಸಿಕೊಳ್ಳುತ್ತಿದ್ದರು. ಬಂದವರು "ತಾವು ಏನಾದರೂ ಹೇಳಬೇಕು" ಎಂದು ಕೇಳಿದಾಗ "ಇನ್ನೂ ನಿನ್ನ ಸ್ವರೂಪ ನಿನಗೆ ಚೆನ್ನಾಗಿ ತಿಳಿದಿಲ್ಲ. ಕಾಯಕ–ದಾಸೋಹಗಳ ಮೂಲಕ ನೀನು ನಿನ್ನ ಸ್ವರೂಪವನ್ನು ಕಾಣುವುದಕ್ಕೆ ಸಾಧ್ಯ. ಅದನ್ನು ನಡೆಸು" ಎಂದು ಹೇಳತ್ತಿದ್ದರು ಶರಣರು. ಬಹುಶಃ ಭಕ್ತರಿಗೆ ಇದು ಎಷ್ಟರ ಮಟ್ಟಿಗೆ ಅರ್ಥವಾಗುತ್ತಿತ್ತೋ ಗೊತ್ತಿಲ್ಲ. ಶರಣಬಸವರು ಅವರ ಮುಖವನ್ನು ದಿಟ್ಟಿಸುತ್ತಿದ್ದರು. ಅವರ ಮುಖದ ಮೇಲಿನ ಭಾವವನ್ನು ಗುರುತಿಸಿಕೊಂಡು ಮತ್ತೆ ಮುಂದುವರೆದು ಹೇಳುತ್ತಿದರು "ಆಕಾಶದಲ್ಲಿ ಇರುವ ಒಬ್ಬನೇ ಸೂರ್ಯನ ಪ್ರತಿಬಿಂಬವು ಬಾವಿಯಲ್ಲಿ ಬೀಳುತ್ತದೆ. ಕೆರೆಯಲ್ಲಿ ಬೀಳುತ್ತದೆ, ನದಿಯಲ್ಲಿ ಬೀಳುತ್ತದೆ, ಹಳ್ಳ–ಕೊಳ್ಳದಲ್ಲಿ ಬೀಳುತ್ತದೆ, ಸಮುದ್ರದಲ್ಲಿಯೂ ಬೀಳುತ್ತದೆ. ನೀರು ತುಂಬಿಟ್ಟಿರುವ ನೂರಾರು ಕೊಡ, ಪಾತ್ರೆ, ಮಡಿಕೆ–ಕುಡಿಕೆಗಳಲ್ಲೂ ಬಿಂಬಿತಗೊಳ್ಳುತ್ತದೆ. ಆದರಂತೆ ಆ ಏಕಮೇವನಾದ ಶಿವನ ಅಂಶವು ಜಗದ ಜೀವರೆಲ್ಲರಲ್ಲಿಯೂ ಇದೆ. ಆದರೆ ಅವನಲ್ಲಿ 'ನಾನು', 'ನನ್ನದು' ಎಂಬ ಮಾಯೆ–ಮಮಕಾರ–ಮೋಹಗಳಿರುವರಿಂದ, ಅದು ಕಾಣದಂತಾಗಿ ಇನ್ನೂ "ತಾನು" "ಅವನಾಗದೆ" ತಾನು ತಾನೇ ಆಗಿ ಉಳಿದಿರುವನು.

**೪. ಸದಾಚಾರ–ಸದ್ಭಕ್ತಿವುಳ್ಳವರೆ ಕುಲಜರು:**

ಶರಣಬಸವರು ತಮ್ಮಲ್ಲಿ ಬರುವ ಭಕ್ತರ ನಾಮ–ಸೀಮೆ, ಜಾತಿ–ಮತ ಪಂಥ, ಅಂತಸ್ತು–ಅಧಿಕಾರಗಳನ್ನು ಪರಿಗಣಿಸಲಿಲ್ಲ. ಅವರಲ್ಲಿನ ಸದ್ಭಕ್ತಿ–ಸದಾಚಾರಗಳನ್ನು ಪರಿಗಣಿಸಿ ಅವರನ್ನು ಸ್ವೀಕರಿಸಿದರು, ಪುರಸ್ಕರಿಸಿದರು. ಸತ್ ಶೀಲವುಳ್ಳ ವೀರಶೈವರನ್ನು, ಬ್ರಾಹ್ಮಣರನ್ನು ಗೌರವಿಸಿದಷ್ಟೇ ಶರಣಬಸವರು ಸದಾಚಾರಿಗಳಾಗಿದ್ದ ಕೀಳು ಕುಲದವರನ್ನೂ ಗೌರವಿಸುತ್ತಿದ್ದರು, ಅವರ ಶಿಷ್ಯಸಮೂಹದಲ್ಲಿ ಎಲ್ಲ ಜಾತಿ–ಮತ–ಪಂಥದವರೂ ಇದ್ದರೆಂಬದನ್ನು ಇಲ್ಲಿ ನೆನಪಿಸಿಕೊಳ್ಳುವುದು ಅವಶ್ಯಕ. ಶರಣಬಸವರ ದೃಷ್ಟಿಯಲ್ಲಿ ಒಬ್ಬ ಮಾನವನ ವ್ಯಕ್ತಿತ್ವದ ಅಳತೆಗೋಲು ಅವನ ನಡವಳಿಕೆ ಸಚ್ಚಾರಿತ್ರವಾಗಿರುತ್ತಿತ್ತು. ಅದರಿಂದಲೇ ಅವರು ಅಂಥವರನ್ನು ತನ್ನವರೆಂದು ಒಪ್ಪಿಕೊಳ್ಳುತ್ತಿದ್ದರು. ಹೀಗೆಂದರೆ ಶರಣಬಸವರು ದುರಾಚಾರಿಗಳನ್ನು, ದುರ್ಗುಣಿಗಳನ್ನು ತಿರಸ್ಕರಿಸಿದರು, ಹಳಿದು ದೂರವಿರಿಸಿದರೆಂದೂ ಅರ್ಥವಲ್ಲ. ಅಂಥವರನ್ನೂ ಅವರು ತಿದ್ದಿ ಸನ್ಮಾರ್ಗಕ್ಕೆ ಹಚ್ಚಿದ ಹಲವಾರು ಘಟನೆಗಳಿಗೆ ಅವರ ಬದುಕಿನಲ್ಲಿ.

**೫. ದುರ್ಗುಣಗಳನ್ನು ದೂರವಿಡಿ; ದುರ್ಗುಣಿಗಳನಲ್ಲ:**

ದುರ್ಮಾರ್ಗಿಗಳನ್ನು ಸನ್ಮಾರ್ಗಿಗಳಾಗಿಸುವಲ್ಲಿಯೇ ನಿಜವಾದ ಲೋಕದ ಉದ್ಧಾರವಿದೆಯೆಂದು ಭಾವಿಸಿದ್ದ ಶರಣಬಸವರು ಮಾನವನಲ್ಲಿರುವದುರ್ಗುಣ ದುಷ್ಕರ್ಮಗಳನ್ನು ನಿಂದಿಸಿದರೇ ಹೊರತು,

ದುರ್ಗುಣಿ, ದುಷ್ಕರ್ಮಿಗಳನ್ನು ಎಂದೂ ಬೈದು ದೂರವಿಡಲಿಲ್ಲ. ಅವರು ತಾವಾಗಿಯೇ ಬಳಿಗೆಬಂದರಂತೂ ಒಳ್ಳೇಯದೇ ಆಯಿತು. ಅವರಲ್ಲಿ ಪರಿವರ್ತನೆ ತರುವದಕ್ಕಾಗಿ ಪ್ರಯತ್ನಿಸುತ್ತಿದ್ದರು. ಸುಲಿದುಕೊಳ್ಳುವದಕ್ಕಾಗಿ ಕಳ್ಳರು ತಾವಾಗಿಯೇ ಬಂದರು; ಕೊಲೆ ಮಾಡುವದಕ್ಕಾಗಿ ಕೊಲೆಗಡುಕರು ತಾವಾಗಿಯೇ ಬಂದರು. ಅವರೆಲ್ಲ ಶರಣಬಸವರ ಸದ್ಭಾವಸನ್ನಿಹಿತದಿಂದ ಸುಮಾರ್ಗಿಗಳಾಗಿ, ಸದ್ವರ್ತನೆಯುಳ್ಳವರಾಗಿ ಮರಳಿದರು. ಕೆಲವು ಸಲ ಶರಣರೇ ಹೋಗಬೇಕಾಯಿತು; ಹೋದರು. ಹಿಂಸೆಯಲ್ಲಿ ತೊಡಗಿದ್ದ ಕಟುಕರಿಗೆ ಹಿಂಸೆ ಬಿಡಿಸುವುದಕ್ಕಾಗಿ ಅವರಲ್ಲಗೆ ಹೋಗಬೇಕಾಯಿತು. ಧರ್ಮಾಂಧತೆ ಅಜ್ಞಾನಾದಿಗಳನ್ನು ನಿವಾರಿಸಲು, ಅಂತಹ ಜನರಲ್ಲಿಗೆ ಹೋಗಲೇಬೇಕಾದ ಪ್ರಸಂಗಗಳು ಶರಣಬಸವರಿಗೆ ಬಂದವು. ಶರಣರು ಸುಲೇಪೇಟಿಗೆ ಹೋದುದು ಅಂತಹ ಒಂದು ಪ್ರಸಂಗದಲ್ಲಿಯೇ ಎಂಬುದನ್ನು ಸ್ಮರಿಸಿಕೊಂಡರೆ ಸಾಕು. ಸುರಪುರದ ಹೇಮಯ್ಯ ಮಹಾ ಕಳ್ಳನಾಗಿದ್ದನು. ಸುತ್ತಮುತ್ತಲಿನ ಪ್ರದೇಶದಲ್ಲಿ ಅವನ ಹೆಸರು ಕೇಳೀದರೆ ಸಾಕು ಜನರು ಗಡಗಡ ನಡುಗುತ್ತಿದ್ದರು. ಅವನಿಗೆ ಶರಣಬಸವರಲ್ಲಿ ಅತೀವ ಭಕ್ತಿಭಾವ. ದರೋಡೆಯಲಿ ಸಿಕ್ಕು ಹಾಕಿಕೊಂಡಿದ್ದ ಹೇಮಯ್ಯನಿಗೆ ಸರಕಾರ ಮರಣ ದಂಡನೆ ವಿಧಿಸಿತು. ಆಗ ಶರಣಬಸವರು ಅಧಿಕಾರಿಗಳಿಗೆ ಹೇಮಯ್ಯನನ್ನು ಬಿಡುಗಡೆ ಮಾಡುವಂತೆ ಹೇಳೀದರು. ಶರಣಬಸವರ ಮಹಿಮೆಯನ್ನು ಅರಿತಿದ್ದ ಅವರು ಬಿಡುಗಡೆ ಮಾಡಿದರು. ಹೇಮಯ್ಯನಿಗೆ ಬಹು ಪಶ್ಚಾತ್ತಾಪವೆನಿಸಿತು. 'ಶರಣಬಸವರು ಭಕ್ತನುರಾಗಿಗಳು' ಎಂಬುದು ಮನವರಿಕೆಯಾಯಿತು. ಶರಣರ ಶ್ರೀಪಾದಗಳಿಗೆ ಬಿದ್ದು ತನ್ನ ತಪ್ಪುಗಳನ್ನೆಲ್ಲ ಒಪ್ಪಿಕೊಂಡು, ಅಂದಿನಿಂದ ಸನ್ಮಾರ್ಗಿಯಾಗಿ ಬದುಕತೊಡಗಿದನು. ಬುದ್ದನು ಮಹಾ ಕ್ರೂರಿಯಾಗಿದ್ದ, ಹಿಂಸಾವಾದಿಯಾಗಿದ್ದ ಅಂಗುಲಿ ಮಾಲಾ ಎಂಬುವವನನ್ನು ಪರಿವರ್ತನೆ ಮಾಡಿದಂತೆ, ವಿನೋಬಾ ಭಾವೆಯವರು ಚಂಬಲ್‌ಕಣಿವೆಯ ದರೋಡೆಕೋರರನ್ನು ಸುಧಾರಿಸಿದಂತೆ, ಶರಣಸವರು ತಮ್ಮ ಜೀವಿತ ಕಾಲದಲ್ಲಿ ಇಂತಹ ಎಷ್ಟೋ ಕಳ್ಳರು, ಕೊಲೆಗಡುಕರು, ಹಿಂಸಾವಾದಿಗಳನ್ನು ಸುಧಾರಿಸುವುದರ ಮೂಲಕವಾಗಿ, ದುರ್ಗುಣಿಗಳನ್ನು ತಿರಸ್ಕರಿಸಿ ದುರ್ಗುಣಿಗಳನ್ನು ಮಾತ್ರ ಪ್ರೀತಿಸಿರಿ, ಪರಿವರ್ತನೆಗೊಳ್ಳುವದಕ್ಕೆ ಅವಕಾಶ ಮಾಡಿಕೊಡಿರಿ ಎಂದು ಸಾರಿದರು.

೬. **ದಯೆ ಹೃದಯದಲ್ಲಿರಲಿ, ಅಹಿಂಸೆ ನಡೆಯಲ್ಲಿರಲಿ:**

ಶರಣಸವರು ಮಹಾ ದಯಾಘನರಾಗಿದ್ದರು. ಅವರ ಹೃದಯವು ಕರುಣಾಸಾಗರದಿಂದ ಯಾವಾಗಲೂ ಒದ್ದೆ ಯಾಗಿಯೇ ಇರುತ್ತಿತ್ತು. ಭಕ್ತ ಮನಸ್ಸಿನ ಶರಣಬಸವರು ಅತಿಮೃದು ಸ್ವಭಾವದವರು. ಜೀವಿಗಳ ನೋವು ಲಿಂಗದ ನೋವೆಂದು ತಿಳಿದುಕೊಂಡು ಯಾವ ಜೀವಿಯನ್ನು ಅವರು ನೋಯಿಸಲು ಹೋಗುತ್ತಿರಲಿಲ್ಲ. ಸಸ್ಯಗಳಲ್ಲೂ ಜೀವವಿದೆಯೆಂದು ತಿಳಿದಿದ್ದ ಶರಣಬಸವರು ತಮ್ಮ ಜೀವಮಾನ ಪೂರ್ತಿ ಎಂದೂ ಗಿಡಗಳಿಂದ ಹೂ ಪತ್ರಿಗಳನ್ನು ಹರಿಯಲಿಲ್ಲ. ತಮ್ಮ ಪೂಜೆಗೆ ಹೂ ಪತ್ರಿಗಳನ್ನು ತಾವೇ ತಂದು ಕೊಳ್ಳುತ್ತಿದ್ದರು. ಗಿಡದ ಕೆಳಗೆ ತಾವಾಗಿಯೇ ಉದುರಿ ಬಿದ್ದರೆ ಮಾತ್ರ ಅವುಗಳನ್ನು ತೆಗೆದುಕೊಂಡು ಬಂದು ಲಿಂಗಕ್ಕೆ ಏರಿಸುತ್ತಿದ್ದರು, ಇಲ್ಲದಿದ್ದರೆ ಇಲ್ಲವೇ ಇಲ್ಲ. ಅವರಲ್ಲಿ ಅಹಿಂಸೆಯ ಬಗೆಗೆ ಎಂತಂಹ ನಿಷ್ಠೆ ಇತ್ತೆಂಬುದಕ್ಕೆ ಒಂದೆರಡು ಘಟನೆಗಳನ್ನು ಇಲ್ಲಿ ಹೇಳಬೇಕು. ಬಂದಾನವಾಜರ ದರ್ಶನ ಮಾಡಿಕೊಂಡು ಹೊರಟಿದ್ದರು. ಕೆಲವು ಕಟುಕರು ಒಂದೆರಡು ಬಡಕಲು ಆಕಳುಗಳನ್ನು ಹೊಡೆದುಕೊಂಡು ತಮ್ಮ ಪಾಡಿಗೆ ತಾವು ನಡೆದಿದ್ದರು. ಆಕಳುಗಳಿಗೆ ನಡೆಯಲು ಶಕ್ತಿಯಿಲ್ಲ. ಅವುಗಳನ್ನೂ ಒಂದೇ ಸವನೆ ಹೊಡೆಯುತ್ತಾ, ಎಳೆದುಕೊಂಡು ಒಯ್ಯುತ್ತಿದ್ದರೆ, ಆ ದೃಶ್ಯವನ್ನು ಕಂಡು ಶರಣಬಸವರ ಹೃದಯವೇ "ಚುರ್" ಎಂದಿತು. ಒಡೋಡಿ ಅವರನ್ನು ಹಿಂಬಾಲಿಸಿದ್ದರು ತಡೆದು ನಿಲ್ಲಿಸಿದರು. "ಆಕಳುಗಳನ್ನು ಎಲ್ಲಿಗೆ ತೆಗೆದುಕೊಂಡು ನಡೆದಿರುವಿರಿ?" ಎಂದು ಪ್ರಶ್ನಿಸಿದರು. ಅವರು ದಿಟ್ಟತನದಿನದಿಂದ "ಕಟುಕರ ಕೇರಿಗೆ ಒಯ್ಯುತ್ತಿದ್ದೇವೆ, ನಾವು ಕಟುಕರು" ಎಂದು ಉತ್ತರವಿತ್ತರು. ಆಗ ಶರಣಬಸವರು ಅವುಗಳಿಗೆ ಹಣತೆತ್ತು, ತಾವು ಕೊಂಡು ತಂದು ದಾಸೋಹದಲ್ಲಿ ಸಲುಹಿದರು.

**೭. ನಿಮ್ಮ ಮಕ್ಕಳನ್ನು ಪ್ರೀತಿಸುವಂತೆ ಅನ್ಯರಮಕ್ಕಳನ್ನೂ ಪ್ರೀತಿಸಿರಿ:**

ಶರಣಬಸವರಿಗೆ ಮಕ್ಕಳೆಂದರೆ ಬಹು ಪ್ರೀತಿ. ಅವು ದೇವಲೋಕದಲ್ಲಿ ಅರಳಿದ ಹೂಗಳೆಂದು ಅವರು ತಿಳಿಯುತ್ತಿದ್ದರು. ಮಕ್ಕಳನ್ನು ಎಂದೂ ಅವರು ಗದರಿಸಲಿಲ್ಲ ; ಪೀಡಿಸಲಿಲ್ಲ, ದರ್ಶನಕ್ಕೆ ಬರುವ ಜನಕ್ಕೂ ಅದನ್ನೇ ಅವರು ಹೇಳುತ್ತಿದ್ದರು. ಶರಣಬಸವರಿಗೆ ಮಕ್ಕಳ ಬಗೆಗಿದ್ದ ಭಾವವನ್ನು ತಿಳಿದುಕೊಳ್ಳುದಕ್ಕಾಗಿ ಎರಡು ಘಟನೆಗಳನ್ನು ಗಮನಿಸಿದರೆ ಸಾಕು. ಒಂದುದಿನ ಮಕ್ತಂಪುರ ಯುವತಿಯೊಬ್ಬಳು ಶರಣಬಸವರ ದರ್ಶನಾಶೀರ್ವಾದ ಪಡೆದುಕೊಳ್ಳಲು ಹಾರೈಸಿ ಬರುತ್ತಿದ್ದಳು. ಅವಳ ಎದುರಿಗೆ ಇನೊಬ್ಬಳು ಒಂದು ಮಗುವನ್ನು ಎತ್ತಿಕೊಂಡು ಬರುತ್ತಿದ್ದಳು. ಮಗು ಸೀರೆಯ ಮೇಲೆಯೇ ಮಲವಿಸರ್ಜನೆ ಮಾಡಿತ್ತು. ಆ ತಾಯಿ ಅದನ್ನು ತೊಳೆದು ಕೊಳ್ಳಲು ಬಯಸಿ ಮಕ್ತಂಪುರದ ಯುವತಿಗೆ ಸ್ವಲ್ಪಮಗುವನ್ನು ಎತ್ತಿಕೊಳ್ಳಲು ಕೇಳಿದಳು. ಆಗ ಆ ಯುವತಿಯೂ "ಸಿರಿಗೇಡಿ ಕರಿಯಾಡಿನಂತಿದೆ, ಸುಂಬಳಜೊಲ್ಲು ಒಂದೇ ಸವನೇ ಸುರಿಯುತ್ತಿದೆ, ನಾನೆತ್ತಿಕೊಳ್ಳಲಾರೆ ; ಮಣ್ಣಿನಲ್ಲಿ ಇಳಿಸು ಎಂದು ಹೇಳಿ ಮುಂದೆ ಹೊರಟಳು. ಶರಣಬಸವರಲ್ಲಿಗೆ ಅವಳು ಬಂದು ತನಗೆ ಸಂತತಿ ಕರುಣಿಸುವಂತೆ ಬೇಡಿದಳು. ಶರಣಬಸವರು, ಅವಳಲ್ಲಿದ್ದ ಮಕ್ಕಳ ಬಗೆಗಿನ ಭಾವವನ್ನು ಗುರುತಿಸಿ ಕೊಂಡಿದ್ದರು. ಆಗ ಅವರು ಹೇಳಿದ್ದರು "ತಾಯಿ, ಯಾರು ಅನ್ಯರ ಮಕ್ಕಳನ್ನು ಪ್ರೀತಿಯಿಂದ ಕಾಣುವುದಿಲ್ಲವೋ ಅವರಿಗೆ ಮಕ್ಕಳಾಗುವದಾದರೂ ಹೇಗೆ ? ಎಲ್ಲರ ಮಕ್ಕಳೂ ಒಂದೇ ಅಲ್ಲವೇನು? ಎಲ್ಲಿಯವರೆಗೆ ನಿನ್ನ ಹೃದಯವು ಅನ್ಯರ ಮಕ್ಕಳನ್ನು ಕಂಡರೆ ಮುದುಡಿಕೊಳ್ಳುತ್ತದೆಯೋ ಅಲ್ಲಿಯವರೆಗೆ ಬಂಜೆತನವೇ ಗತಿ" ಎಂದು ಮರಳಿ ಕಳುಹಿಸಿ ಕೊಟ್ಟರು.

ಹೀಗೆ ಶರಣಬಸವರು ಸಾಧಕರ ಬದುಕಿಗೆ ಬೋಧಕವೆನಿಸುವ ಹಲವಾರು ಉನ್ನತ ತತ್ವಗಳನ್ನು ವಿಶ್ವಕ್ಕೆ ಸಂದೇಶವಾಗಿ ಕೊಟ್ಟವರು. ಅವರು ಸಾಧಿಸಿದ್ದ ಮಹಾದಾಸೋಹದಲ್ಲಿಯೇ ಎಲ್ಲವೂ ಅಡಕಗೊಳಿಸಬಹುದಾಗಿದೆ. ಆದುದರಿಂದ ಅವರು ವಿಶ್ವಕ್ಕೆ ನೀಡಿರುವ ಮಹಾ ಸಂದೇಶವೆಂದರೆ "ಮಹಾದಾಸೋಹಿ" ಯಾಗಿ ಬದುಕಬೇಕೆಂಬುದೇ ಆಗಿದೆ.



# ಗವಿಸಿದ್ದಯ್ಯಪ್ಪನ ಜಾತ್ರೆ.

–ಜಿ. ವಿ. ಶಶಿಕಲಾ,
ಸಂಶೋಧನಾ ವಿದ್ಯಾರ್ಥಿನಿ, ದೃಶ್ಯಕಲಾ ವಿಭಾಗ,
ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ.

ಭಾರತೀಯರದೃಷ್ಠಿಯಲ್ಲಿ ಮತಗಳನ್ನು ಧರ್ಮಗಳೆಂದೇ ಕರೆಯುವುದುಂಟು. ಒಂದೊಂದು ಧರ್ಮವೂ ವಿಶ್ವಧರ್ಮದ ಅಂಗವೇ ಆಗಿದೆ. ಜೀವ–ಈಶ್ವರ ಸಂಬಂಧವನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಬಣ್ಣಿಸಿದೆ. ಶಿಲ್ಪ, ಸಾಹಿತ್ಯ, ಸದಾಚಾರ, ಸಂಸ್ಕೃತಿಗಳೆಲ್ಲದರಲ್ಲಿಯೂ ಧರ್ಮದ ಪರಿಶುದ್ಧ ಭಾವನೆಯನ್ನು ಕಾಣಬಹುದಾಗಿದೆ. ಸತ್ಯಕ್ಕಿಂತ ಶ್ರೇಷ್ಠವಾದ ಧರ್ಮವಿಲ್ಲವೆಂದು ಸತ್ಯೋಪಾಸಕರೂ, ಅಹಿಂಸೆಯೇ ಶ್ರೇಷ್ಠವಾದ ಧರ್ಮವೆಂದು ಜೈನರೂ, ದಯೆಯೇ ನಿಜವಾದ ಧರ್ಮವೆಂದು ಕಾರುಣಿಕ ಯೋಗಿಗಳೂ, ಯಜ್ಞ, ದಾನ, ಅಧ್ಯಯನತಪಸ್ಸು, ಬ್ರಹ್ಮಚರ್ಯಗಳು ಧರ್ಮವೃಕ್ಷದ ಕೊಂಬೆಗಳೆಂದು ಛಾಂದೋಗ್ಯವೂ, ಧೈರ್ಯ, ತಾಳ್ಮೆ, ಸಂಯಮ, ಜಿತೇಂದ್ರಿಯತ್ವ, ಕದಿಯದಿರುವಿಕೆ, ಶುಚಿಯಾಗಿರುವಿಕೆ, ಕೋಪಗೊಳ್ಳದಿರುವಿಕೆ, ಸತ್ಯವನ್ನೇ ಹೇಳುವುದು, ವಿಧ್ಯೆ, ಬುದ್ಧಿ ಇವು ಧರ್ಮದ ಲಕ್ಷಣಗಳೆಂದು ಮನು ಧರ್ಮಶಾಸ್ತ್ರವೂ ಹೇಳಿರುವುದು ನೋಡಬಹುದು.ಇಲ್ಲಿ ಕೇವಲ ಸಂಕುಚಿತತನದಿಂದಜಾತಿಯ ಪ್ರತಿಷ್ಠೆ, ಅನ್ಯಮತ ಅವಹೇಳನ ಮಾಡುವುದು ಸೂಕ್ತವಲ್ಲ. ಅವಿನಾಶಿಯಾದ ಅನಂತತೆಯ ಕಡೆಗೆ ಧರ್ಮದ ಜ್ಯೋತಿ ಬೆಳಕು ತೋರುವುದನ್ನು ನಾವೆಲ್ಲರು ಕಾಣಬೇಕು.

ಜಾತ್ರೆಗಳನ್ನು ಆಚರಿಸುವುದು ನಮ್ಮಲ್ಲಿ ವಿಶೇಷವಾಗಿ ಸಾಂಪ್ರದಾಯಿಕವಾಗಿ ಬಂದಿದೆ.ಅವರವರ ಶ್ರೇಷ್ಠ ನಂಬಿಕೆಯೇ ಅವರ ನಾಕ ಇಲ್ಲವೇ ನರಕಗಳಗೆ ಕಾರಣ. ಜೀವನದಲ್ಲಿ ಉತ್ತಮ ನಂಬಿಕೆಗಳು ಅಗತ್ಯ. ದಯವಿಲ್ಲದೆ ನೆಮ್ಮದಿ, ಅತ್ಮಶಾಂತಿಯಿಲ್ಲ. ವಿಚಾರ ಪೂರ್ವಕವಾದ ನಂಬಿಕೆಗಳು ಬೇಕು. ನಮ್ಮಜೀವನವು ಕೇವಲ ಯಾಂತ್ರಿಕ ರೀತಿಯದಲ್ಲ. ಜ್ಞಾನ ಮತ್ತು ಶಕ್ತಿಗಳು ಇದರಕೊನೆಯಲ್ಲ. ನಮ್ಮ ಅನೇಕ ಧಾರ್ಮಿಕ ಹಾಗೂ ನೈತಿಕ ಕ್ರಿಯೇಗಳು ನಮ್ಮ ನಂಬಿಕೆಗಳನ್ನು ಅನುಸರಿಸಿವೆ. ಪ್ರಾಚೀನ ಕಾಲದಲ್ಲಿಯೇ ಮಹರ್ಷಿಗಳು ನಮ್ಮ ಪ್ರತಿಯೊಂದು ಜಾತ್ರೆ ಹಾಗೂ ಹಬ್ಬಗಳಿಗೆ ಖಗೋಳಿಕ ನಿತ್ಯಸತ್ಯಗಲ ಪ್ರೇರಕಾಂಶಗಳನ್ನು ಸಮ್ಮಿಲಿತಗೊಳಿಸಿ ಜಗತ್ತಿನ ಸೂತ್ರದ ಕೊಂಡಿಯನ್ನು ಸುಂದರವಾಗಿ ಹೆಣೆದಿದ್ದಾರೆ ಎನ್ನಬಹುದು. ಹಿಂದೂ ಪಂಚಾಂಗದ ಪ್ರಕಾರ ನಾವು ಸೂರ್ಯಚಂದ್ರರ ಗತಿಗಳನ್ನು ವಿಶಿಷ್ಠ ತಿಥಿ, ನಕ್ಷತ್ರಗಳನ್ನು ವಿಶೇಷವಾದವುಗಳೆಂದು ಅಂಗೀಕರಿಸುವುದುಂಟು. ಇಂಥ ವಿಶೇಷ ದಿನಗಳೇ ಈ ಜಾತ್ರೆ ಹಬ್ಬ ಹರಿದಿನಗಳಾಗಿವೆ. ಗುಡಿಯಿಲ್ಲದ ಊರು ಇಲ್ಲವೆಂಬಂತೆ, ಕ್ಯಾಲೆಂಡರು–ಪಂಚಾಂಗವಿಲ್ಲದ ಅಥವಾ ಪಂಚಾಂಗವಿಲ್ಲದ ಮನೆಯೇ ಇಲ್ಲವೆನ್ನಬಹುದು. ನಮ್ಮ ಅನ್ನದಾತನಿಗೂ ಮಳೆಯ ನಕ್ಷತ್ರ, ಮಾಸಗಳು, ಹುಣ್ಣಿಮೆ ಮತ್ತು ಅಮವಾಸ್ಯೆಗಳು ತಿಳಿದಿರುವುದುಂಟು.

ಹೈದ್ರಾಬಾದ ಕರ್ನಾಟಕ ಪ್ರದೇಶಕ್ಕೆ ಅದ್ಭುತವಾದ ಸಾಹಿತ್ಯ ಪರಂಪರೆಯಿದೆ. ಕನ್ನಡದ ಮೊದಲ ಕೃತಿ"ಕವಿರಾಜ ಮಾರ್ಗ"ಹುಟ್ಟಿದ್ದೇ ಈ ನಾಡಿನಲ್ಲಿ. ಕವಿಗಳು, ವಚನಕಾರರು, ಕೀರ್ತನಕಾರರು, ತತ್ವಪದಕಾರು ಈ ಪ್ರದೇಶದಲ್ಲಿ ಹೇರಳವಾದ ಕೃಷಿ ಮಾಡಿದ್ದಾರೆ. ಧಾರ್ಮಿಕ ಹಬ್ಬಗಳು, ಜಾತ್ರೆಗಳಂತಹವು ಪ್ರಮುಖವಾಗಿ ಭಕ್ತಿ, ಧರ್ಮ, ಸಂಸ್ಕೃತಿಗಳಿಗೆ ಸಂಬಂಧಿಸಿದ ವ್ರತಗಳಾಗಿದಲ್ಲಿ, ಮಹಾಪುರುಷರು ಜಯಂತೊತ್ಸವಗಳು ಇಡೀ ಸಮಾಜದ ಜಾಗೃತಿಗೆ, ವಿವೇಕೋದಯಕ್ಕೆ ಕಾರಣವಾಗಿದೆ. ಮಾನವಕೋಟಿಯ ಕಲ್ಯಾಣಕ್ಕಾಗಿ ಶ್ರಮಿಸಿದ ಕೆಲವರು ಪುಣ್ಯಾತ್ಮರೇ ಮಹಾಪುರುಷರು. ಲೋಕದ ಅಜ್ಞಾನ, ಮೌಢ್ಯ, ಅನಕ್ಷರತೆ, ಅನಾರೋಗ್ಯ, ಅವೈಜ್ಞಾನಿಕತೆ, ದಾಸ್ಯ ಮೊದಲದ ಬೃಹತ್ ಸಮಸ್ಯೆಗಳ ನಿವಾರಣೆಯಲ್ಲಿ ನಿಃಸ್ವಾರ್ಥ ಸೇವೆಯನ್ನು ಸಲ್ಲಿಸಿ ಲೋಕ ಕಲ್ಯಾಣ ತಮ್ಮನ್ನು ತೋಡಗಿಸಿಕೊಂಡತಹ ಮಹಾಪುರುಷರು ಪ್ರಾತಃಸ್ಮರಣೀಯರೆನಿಸುವರು. ಲೋಕೋನ್ನತವಾದ ತಮ್ಮ ನಡೆ–ನುಡಿ, ಆಚಾರ–ವಿಚಾರ, ಮಾರ್ಗದರ್ಶನ, ಶಾಶ್ವತಸೇವೆ, ಮೊದಲಾದವುಗಳ ಮೂಲಕ ಇವರು ಲೋಕಹಿತಕಾಗಿ ಶ್ರಮಿಸಿದಂತಹ ಸಿದ್ದಯ್ಯಪ್ಪನವರು ಸಹಒಬ್ಬರಾಗಿದ್ದಾರೆ. ಇವರುಕಲಬುರಗಿಯ ಸುತ್ತಮುತ್ತಲಿನ ಜನಗಳ

ಪಾಲಿನ ಯುಗದ ಸಿರಿಯಾಗಿ ನೆಲದ ಸಿರಿ ಮಡಿಲಿನ ಈ ನಾಡಿನಲ್ಲಿ ಬೀಡು ಬಿಟ್ಟಿದ್ದಾರೆ. ಶ್ರೀ ಸಿದ್ದಯ್ಯಪ್ಪಯವರು ಬೇಡಿ ಬಂದ ಭಕ್ತರಿಗೆ ಕಾಮಧೇನು ಆಗಿದ್ದರು. ಎಲ್ಲಾರ ಮನವೆಂಬ ಹೊಲದಲ್ಲಿ ಭಕ್ತಿ ಬೀಜ ಬಿತ್ತಿ ಸುಖ–ಶಾಂತಿ–ನೆಮ್ಮದಿಯ ಬೆಳೆ ಬೆಳೆದ ಕೃಷಿಕರಾಗಿದ್ದರು. ತನುವನ್ನು ಶ್ರೀಗಂಧದಂತೆ ತೇದು, ಭಕ್ತರ ಸಂತೋಷವೇತಮ್ಮ ಸಂತೋಷಎಂಬಂತೆ ಬದುಕಿದ್ದರು. ಜಾತಿ–ಕುಲ–ಗೋತ್ರಗಳೆಂಬ ಭೂತಗಳಿಗೆ ಅವಕಾಶ ನೀಡದೆ ಎಲ್ಲಾರನ್ನು ಅಪ್ಪಿಕೊಂಡಿದರು. ಪ್ರಸ್ತುತ ಗವಿಸಿದ್ದೇಶ್ವರ ಎಂಬ ಹೆಸರಿನಿಂದ ಮಂದಿರವಾಗಿದೆ. ಮೊಟ್ಟ ಮೊದಲು ಸಿದ್ದಯ್ಯಪ್ಪ ಸ್ಥಳವಿದ್ದದು (ಕಲಬುರಗಿಯ ಖಾಜಾ ಬಂದಾ ನವಾಜದರ್ಗಾದ ಸ್ಥಳದಲ್ಲಿ) ಖಾಜಾ ಬಂದಾ ನವಾಜರ ಕಲಬುರಗಿಯತ್ತ ಪ್ರಯಾಣ ಬೇಳೆಸಿಕೊಂಡು ಬಂದಾಗ ಇರಲಿಕ್ಕೆ ಸ್ಥಳವನ್ನು ಕೇಳಿದಾಗ ಇಲ್ಲಎಂದು ಹೇಳದೆ ತಮ್ಮ ಉದಾರ ಮನಸ್ಸಿನಿಂದ ಒಪ್ಪಿಕೊಂಡರು. ನವಾಬರು ಹೆಸರುವಾಸಿಯಾದ ಸಂತರೊಬ್ಬರಾದ್ದರಿಂದ ದಿನ ನಿತ್ಯ ಬಂದು ಹೋಗುವವರ ಭಕ್ತರ ಸಂಖ್ಯೆ ಹೆಚ್ಚಾಗುತ್ತಲೇ ಹೋಯಿತು.

ಸಿದ್ದಯ್ಯಪ್ಪ ಅವರುಕೊಟ್ಟ ಜಾಗದಿಂದ ಹಾಗೇ ಒತ್ತುತ್ತ ಮುಂದೆ ಬಂದು ಮಠದ ಆವರಣವನ್ನು ಆಕ್ರಮಿಸಿಕೊಂಡರು. ಇಸ್ಲಾಂ ಧರ್ಮದ ಸಂಸ್ಕೃತಿ ಆಚಾರಕ್ಕೂ, ಸಿದ್ದಯ್ಯಪ್ಪ ಅವರ ಸಂಸ್ಕೃತಿ ಆಚಾರಕ್ಕೂ ಸರಿಹೊಂದಲಿಲ್ಲ ಮಠದ ಆವರಣದಲ್ಲಿ ಮಾಂಸದ ಊಟ ತಿಂಡಿಗಳನ್ನು ತಯಾರಿಸಲು ಪ್ರಾರಂಭಿಸಿದಾಗ ಸಹಿಸಿಕೊಳ್ಳಲು ಆಗಲಿಲ್ಲ. ಹಾಗಂತ ನೇರವಾಗಿ ಹೇಳದೆ, ಅವರಜೊತೆ ಅಸಹ್ಯಪಟ್ಟುಕೊಳ್ಳದೇ ತಾವೆ ತಮ್ಮ ಸ್ಥಳವನ್ನು ಸಂಪೂರ್ಣವಾಗಿ ಬಿಟ್ಟುಊರ ಹೊರಗೆ ನಡೆದುಕೊಂಡು ಹೋರಟರು. ಇಗಿರುವ ಹೆಸರು ಕುಸುನೂರು, ಮೊದಲು ಇದಕ್ಕೆ ಕೂಳ್ಳು ಮಾರುವ ಊರು ಎನ್ನುತ್ತಿದ್ದರು. ಇಲ್ಲಿ ಆನಾರೋಗ್ಯದಿಂದ ಕುಸೂ ಸತ್ತಿತ್ತು. ಆಗ ತಮ್ಮ ದಿವ್ಯ ಶಕ್ತಿಯಿಂದ ಮಗುವನ್ನು ಬದುಕಿಸಿದಾಗ ಇದಕ್ಕೆ ಕುಸುನೂರುರಾಗಿದೆ. ಪುರಾಣದಲ್ಲಿ ಕೂಸಿನೂರು ಎಂಬುದು ದೊರಕುತ್ತಾದೆ. ಗುಡ್ಡದಲ್ಲಿನ ಗವಿಯಲ್ಲಿ ಬಂದು ನೆಲೆಸಿದರು. ತಾವು ನಡೆದುಕೊಂಡು ಹೋಗುವ ದಾರಿ ಮಧ್ಯದಲ್ಲಿ ಇವರ ಪಾದ ಪೂಜೆ ಮಾಡಿದ ಜಾಗವನ್ನು ಪಾದಗಟ್ಟೆಯನ್ನು ನಿರ್ಮಿಸಿ ಶ್ರದ್ಧ ಭಕ್ತಿಯಿಂದ ಪೂಜಿಸುತ್ತಾರೆ. ಇತ್ತಾ ನವಾಬರು ಮಠದಲ್ಲಿ ಸಿದ್ದಯ್ಯಪ್ಪನವರು ಕಾಣದಿದ್ದಾಗ ತಮ್ಮ ಶಿಷ್ಯರನ್ನು ಹುಡುಕಲು ಕಳಿಸಿದಾಗ ಅವರು ಹುಡುಕುತ್ತಾ ಕುಸುನೂರ ಕಡೆ ಬಂದರು ಆಗ ಸಿದ್ದಯ್ಯಪ್ಪರು ಜೋತೆ ಹೋಗಲು ನಿರಾಕರಿಸಿದಾಗ ಬಂದಹ ಮುಸ್ಲಿಂ ಶಿಷ್ಯರು ಸಹ ದರ್ಗಾಕ್ಕೆ ಹಿಂದಿರಗದೆ ಕುಸುನೂರಿನಲ್ಲಿಯೇ ಗುರುಗಳಿಗೆ ಸೇವೆ ಸಲ್ಲಿಸುತ್ತಾ ನೆಲೆ ನಿಂತರು. ಈಗಲೂ ಇವರ ಮನೆಗಳನ್ನು ನೋಡಬಹುದಾಗಿದೆ. ತಮ್ಮಿಂದ ಆದ ತಪ್ಪಿನಿಂದಾಗಿ ಖಾಜಾ ಬಂದಾ ನವಾಜದರ್ಗಾದವರಿಂದ ಎರಡು ರೂಪಾಯಿ ಐವತ್ತು ಪೈಸೆಗಳನ್ನು ಸರಿ ಸುಮಾರು ಇಪ್ಪತ್ತು ವರ್ಷಗಳ ಕಾಲ ಕೊಟ್ಟಿರುವ ದಾಖಲೆಗಳನ್ನು ನಾವು ಗಮನಿಸಬಹುದಾಗಿದೆ. ನಂತರದ ದಿನಗಳಲ್ಲಿ ದರ್ಗಾದ ಮೇಲ್ವಿಚಾರಕರು ಬದಲಾದಂತೆ ದುಡ್ಡು ಕೋಡುವುದು ನಿಂತಿದೆ. ಪ್ರಸ್ತುತ ಪೂಜೆ ಸಲ್ಲಿಸುತ್ತಿರುವ ರವಿಯವರಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಇಂದಿಗೂ ಬಂದೇ ನವಾಜ ದರ್ಗಾದಲ್ಲಿ ಸಿದ್ದಯ್ಯಪ್ಪನಿಗೇ ಮೊದಲ ಪೂಜೆ ಸಲ್ಲಿಸುತ್ತಾರೆ. ತದನಂತರ ದರ್ಗಾದ ನವಾಜ ಉರುಸ್ ಪ್ರಾರಂಭವಾಗುತ್ತದೆ.

ಸಿದ್ದಯ್ಯಪ್ಪನ ಮಂದಿರವು ವಿಶಾಲವಾದ ಸ್ಥಳದಲ್ಲಿ ನೆಲೆಯಾಗಿದೆ ಸುತ್ತಲುಗುಡ್ಡ ಅಚ್ಚ ಹಸಿರಿನ ಹೊಲಗಳು ಸುಂದರವಾದ ತಾಣವದಾಗಿದೆ. ಇಲ್ಲಿ ಧ್ಯಾನಕ್ಕೆ ಕುಳಿತ ಸ್ಥಳವನ್ನು ಮೂಲ ಗದ್ದುಗೆಯೊಂದಕ್ಕೆ ಲಿಂಗದಕಲ್ಲನ್ನು ಪ್ರಾತಿಷ್ಠಾಪಿಸಿ ಇದಕ್ಕೆ ಏಳು ಹೆಡೆಯ ಸರ್ಪದ ಹಾವೊಂದನ್ನು ನಿರ್ಮಿಸಿ, ಮುಂಭಾಗದಲ್ಲಿ ಪಾದರಕ್ಷೆಗಳಿರುದನ್ನು ನೋಡಬಹುದಾಗಿದೆ. ಗುಡ್ಡದ ಕೆಳಭಾಗಕ್ಕೆ ಗರ್ಭಗುಡಿ ಇರುವುದರಿಂದ ತಲೆಯನ್ನು ತಗ್ಗಿಸಿಕೊಂಡು ದರ್ಶನ ಪಡೆಯಬೇಕಾಗುತ್ತದೆ. ಇಲ್ಲಿ ಇಕ್ಕಟ್ಟಾದ ಜಾಗವಿರುವುದರಿಂದ ಸ್ವಲ್ಪ ಜನರು ಮಾತ್ರ ಒಳಗಡೆ ಹೋಗಬಹುದು ಮತ್ತೆ ಅವರು ಒರಗಡೆ ಬಂದ ಮೇಲೆ ಒಳಗಡೆ ಪ್ರವೇಶ ಮಾಡಲು ಸಾಧ್ಯವಿದೆ. ಈ ಮಂದಿರವನ್ನು ವಿಶಾಲವಾಗಿ ಕಟ್ಟಿಸಲುಗದ್ದುಗೆಯನ್ನು ಮುಟ್ಟಲು ಹೋದಾಗಲೆಲ್ಲಕರಿಯ ಚೇಳುಗಳು, ಹಾವುಗಳು ಸಾಕಷ್ಟು ಕಾಣಿಸಿ ಕೊಂಡುಅಪಾಯವನ್ನುಂಟು ಮಾಡಿದ್ದರಿಂದಇರುವ ಮೂಲ ಸ್ಥಳಕ್ಕೆ ಪೂಜೆಯನ್ನು ಸಲ್ಲಿಸುತ್ತಿದ್ದಾರೆ. ಹೊರ ಭಾಗದಲ್ಲಿ ವಿಶಾಲವಾದ ಪ್ರಾಂಗಣವಿದೆ.

ಕರ್ನಾಟಕದಲ್ಲಿ ಸಂತರು, ಶಿವಯೋಗಿಗಳು ಕರ್ಮಯೋಗ ಲೋಕಸಂಗ್ರಹ, ಸಮದರ್ಶನ, ಸ್ಥಿತಪ್ರಜ್ಞ ದರ್ಶನಾದಿಗಳೇ ಇವರಜೀವನದಧ್ಯೇಯ. ಲೋಕಜೀವನದ ವಿಶಾಲಸಾಗರದಲ್ಲಿ ಇವರು ನಾವಿಕರಾಗಿ ತಮ್ಮ ಅಮೂಲ್ಯ ವಿಚಾರಧಾರೆ ನಾವೆಯಲ್ಲಿ ಜನಗಳನ್ನು ದಡ ಮುಟ್ಟಿಸಲು ಸಾಕಷ್ಟು ಶ್ರಮಿಸಿದ್ದಾರೆ. ಇವರು ನಂದಾದೀವಿಗೆಯ, ಸಮಾನತೆ, ರಾಜಕೀಯ ಸ್ವಾತಂತ್ರ್ಯವನ್ನು ದೊರಕಿಸುವುದರಲ್ಲಿ, ಧಾರ್ಮಿಕ ಜಾಗೃತಿಯನ್ನುಂಟು ಮಾಡುವುದರಲ್ಲಿ, ಸಮಾಜದ ಸುಧಾರಣೆಯಲ್ಲಿ, ಕಲೆ–ಸಾಹಿತ್ಯಗಳ ಉದಯೋನ್ಮುಖ ಯಾತ್ರೆಯಲ್ಲಿ ಆಯಾ ಮಹಾನ್ ವ್ಯಕ್ತಿಗಳು ಪ್ರಮುಖವಾಗಿ ಶ್ರಮಿಸಿರುವುದನ್ನು ಪರಿಶೀಲಿಸಿದರೆ ಅವರನ್ನು ಯಾವ ಕಾಲ, ದೇಶದವರೂ, ಜನಾಂಗದವರೂ ಮರೆಯುವಂತಿಲ್ಲ. ಇತಂಹ ಮಹಾಪುರುಷರಿಗೆ ಕಾಲ ಮತ್ತು ದೇಶಾದಿಗಳ ಎಲ್ಲೆಯಿಲ್ಲ. ಅವರ ಕಾಲ ಅನಂತ, ಅವರಿಗೆ ವಿಶ್ವವೇ ಕುಟುಂಬ, ಮನುಕುಲದ ಉದ್ಧಾರವೇ ಮುಖ್ಯಗುರಿ. ಲೋಕದ ಹಿತವನ್ನು ಕಾಪಡುವುದೇ ಅವರ ದೃಷ್ಠಿ ಹಾಗೂ ಜೀವನಯಾತ್ರೆಯಲ್ಲಿ ಸಕಲರಿಗೂ ಸನ್ಮಾರ್ಗ ದರ್ಶನ ನೀಡುವುದಾಗಿದೆ. ಇಂತಹ ಮಹಾಪುರುಷರ ಹೆಸರಿನಲ್ಲಿ ಜಾತ್ರೆಗಳು, ಹಬ್ಬಗಳು, ಜಯಂತೋತ್ಸವಗಳನ್ನು ವಿಶಿಷ್ಟ ರೀತಿಯಲ್ಲಿಆಚರಿಸಬೇಕು. ಆಳವಾದ ನಂಬಿಕೆ, ಉತ್ತಮಆಚಾರ, ವಿಚಾರಗಳು ಅನುಭವದಿಂದ ಸತ್ಯಧರ್ಮದರ್ಶನ ಪಡೆಯಬೇಕು. ತಿರುಳನ್ನರಿಯದ ಆಚಾರವು ಬರಿಯ ಸಿಪ್ಪೆಯನ್ನು ಅಗಿದಂತೆ. ಇದು ಅಂಧಾಚಾರವಾಗಿ ಕ್ರಮೇಣ ಅನಾಚಾರವಾಗಿಯೂ ಪರಿಣಮಿಸುವುದುಂಟು. ಜಗತ್ತಿನಲ್ಲಿ ಶಾಂತಿ, ಸೌಖ್ಯಗಳು ನೆಲೆಸಿ ನೀತಿಯು ಉಳಿಯಬೇಕಾದರೆ ಧರ್ಮ–ಸಂಪ್ರದಾಯಗಳ ಶ್ರೇಷ್ಠ ಅವಲಂಬನೆ ಅಗತ್ಯವೆಂಬುದುಎಲ್ಲಆಚಾರ್ಯರ ಮತ.

**ಜಾತ್ರೆಯ ವಿಶೇಷತೆ**

ಕಲಬುರಗಿಯಲ್ಲಿ ವೀರಶೈವ, ವೈದಿಕ, ಮುಸ್ಲಿಂ, ಬೌದ್ಧ, ಜೈನ, ಕ್ರೈಸ್ತ ಹೀಗೆ ಹಲವ ನಡೆದುಕೊಂಡು ಬಂದಿವೆ ಎನ್ನುವುದನ್ನು ಗಮನಿಸಬಹುದಾಗಿದೆ. ಹಿಂದಿನ ಕಾಲದಲ್ಲಿ ಇಂದಿನ ಮಾರ್ಕೇಟ್, ಬಜಾರುಗಳು ಹಾಗೂ ಅಂಗಡಿಗಳಂತಹ ವ್ಯವಸ್ಥೆ ಇಲ್ಲದಿರುವುದರಿಂದ ಜನರು ಜಾತ್ರೆಗಳಲ್ಲಿ ವ್ಯಾಪಾರ ವ್ಯವಹಾರಗಳನ್ನು ಮಾಡುತ್ತಿದ್ದರು. ಜಾತ್ರೆಗಳು ಆರ್ಥಿಕ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತವೆ. ಇವುಗಳು ಜರುಗುವ ಸುತ್ತ ಮುತ್ತಲಿನ ಪ್ರದೇಶದ ಜನರು ಕೊಡುಕೊಳ್ಳುವಿಕೆಯನ್ನು ನೋಡಬಹುದು. ರೈತಾಪಿ ವರ್ಗದ ಜನರು ತಾವು ಬೇಳೆದ ದವಸ ಧಾನ್ಯಗಳನ್ನು ಮಾರಾಟ ಮಾಡುವುದಲ್ಲದೆ, ಗೃಹ ಬಳಕೆಯ ವಸ್ತುಗಳು, ಕೃಷಿ ಸಲಕರಣೆ ಮುತಾಂದ ದೈನಂದಿನ ಸಾಮಾನುಗಳನ್ನು ಹಾಗೂ ಇತರೆ ತಮಗೆ ಬೇಕಾದ ಅವಶ್ಯಕ ವಸ್ತುಗಳನ್ನು ಖರೀದಿಸುತ್ತಿದ್ದರು. ಜಾತ್ರೆಗಳು ಕೇವಲ ಮನಸ್ಸಿನ ಹಗುರಗೊಳಸುವ ಕೆಲಸವನ್ನಷ್ಟೆ ಮಾಡುವುದಿಲ್ಲ, ಇವುಗಳು ಜನರಿಗೆಜ್ಞಾನದ ಹಸಿವನ್ನು ಉಣಿಸುತ್ತವೆ. ವಿವಿಧ ಕ್ಷೇತ್ರದ ಕಲಾವಿದರು ಅದರಲ್ಲಿ ಭಾಗಿಯಾಗುತ್ತಾರೆ. ಜಾತ್ರೆಗಳ ಕಾರಣದಿಂದಾಗಿಯೇ ಇಂದಿಗೂ ಅನೇಕ ಕಲಾ ಪ್ರಕಾರಗಳು ಉಳಿದು ಬಂದಿವೆ. ಇವು ಸಾಹಿತ್ಯದ ಮೂಲಕ ಜ್ಞಾನದ ವಿಸ್ತಾರವನ್ನು ಹೆಚ್ಚಿಸಲು ಸಹಕಾರಿಯಾಗುತ್ತಾವೆ.

ಗವಿ ಸಿದ್ದೇಶ್ವರ ಜಾತ್ರೆಯು ಶ್ರಾವಣಮಾಸದ ತಿಂಗಳಿನಲ್ಲಿ ಐದು ಸೋಮವಾರಗಳು ನಡೆಯುತ್ತದೆ. ಕುಸುನೂರು ಗ್ರಾಮದ ಎಲ್ಲಾ ಜನರು ಒಟ್ಟುಗೂಡಿ ಸಂಭ್ರಮದಿಂದ ಆಚರಿಸುವರು. ನಾವು ವಾಸಿಸುತ್ತಿರು ಪ್ರಪಂಚವು ಧರ್ಮಕ್ಷೇತ್ರವೂ ಹೌದು, ಕರ್ಮಕ್ಷೇತ್ರವೂ ಹೌದು. ಸೃಷ್ಟಿ, ಸ್ಥಿತಿ, ಲಯ, ಸೂತ್ರಗಳೇಲ್ಲವೂ ಈ ಧರ್ಮ–ಕರ್ಮಗಳೇ ಕೇಂದ್ರವರ್ತಿಗಳು. ಇಲ್ಲಿಯೇ ಸಮೀಪದಲ್ಲಿ ಮಾಲಿಂಗರಾಯನ ದೇವಾಸ್ಥನದ ಪಲ್ಲಿಕ್ಕಿಉತ್ಸವು ಇದರ ಜೊತೆಯಲ್ಲಿ ನಡೆಯುವುದರಿಂದ ಜೋಡಿ ಪಲ್ಲಕ್ಕಿಯನ್ನು ನೊಡಬಹುದು. ಕೊನೆಯ ಸೋಮವಾರದಂದು ಭಕ್ತರಿಗೆಅನ್ನ ಸಂತರ್ಪಣೆ, ರುದ್ರಭೀಷೆಕಇಲ್ಲಿ ವಿಶೇಷವಾಗಿರುತ್ತಾದೆ. ಸೋಲ್ಲಾಪುರ, ಪುಣೆ, ಬೀದರ, ಬಸವಕಲ್ಯಾಣ, ಬಾಲ್ಕಿ, ಹುಮಾನಬಾದ್ ಇನ್ನೂ ಸಾಕಷ್ಟು ಹೊರ ರಾಜ್ಯಗಳ ಕಡೆಯಿಂದಲೂ ಜಾತ್ರೆಗೆ ಭಕ್ತರದಂಡು ಬರುತ್ತದೆ. ಕುಸ್ತಿ ಪಂದ್ಯ ವಿಶೇಷವಾಗಿರುತ್ತದೆ. ಗೆದ್ದವರಿಗೆ ಬೆಳ್ಳಿ ಕಡಗಇಲ್ಲವೇ ಹಣದರೂಪದಲ್ಲಿ ಬಹುಮಾನಗಳನ್ನು ನೀಡುತ್ತಾರೆ. ವಿವಿಧ ಬಗೆಯ ಆಟಿಕೆಗಳು,

ತಿಂಡಿ ತಿನುಸುಗಳು ಹಲವು ಬಗೆಯ ಚಿತ್ತಾರಗಳನ್ನು ನೋಡಬಹುದು. ಜಾತ್ರೆಯ ನೆಪದಲ್ಲಿದೂರದೂರಿನಲ್ಲಿ ನೆಲೆಸಿರುವ ಭಕ್ತಾದಿಗಳು, ಬಂಧುಗಳು, ಸ್ನೇಹಿತರುಒಟ್ಟು ಸೇರುತ್ತಾರೆ. ಸಣ್ಣ ವ್ಯಾಪಾರಿಗಳಿಗೆ ಇದರಿಂದ ಜೀವನೋಪಾಯ ಲಭಿಸುತ್ತದೆ. ಬಂದಿರುವ ಜನರ ಅವಶ್ಯಕತೆಗಳನ್ನು ಪೂರೈಸುತ್ತದೆ. ಒಟ್ಟಿನಲ್ಲಿ ಈ ಜಾತ್ರೆಯು ಸಡಗರ, ಸಂಭ್ರಮ, ಹಬ್ಬ. ಭಕ್ತರಿಗೆತನ್ನಇಷ್ಟದೈವವನ್ನುಕಾಣುವ ಭಾಗ್ಯ ಆಗಾಗ ಲಭಿಸಲು ಅವಕಾಶವಾಗುತ್ತದೆ. ದೇವರಜೊತೆಗಿನ ಬಾಂಧವ್ಯ ಬಲಗೊಳ್ಳುತ್ತದೆ ಹಾಗೂ ದಿವ್ಯವಾಗುತ್ತದೆ.

ಭಾವೈಕ್ಯತೆಕೊರತೆಯನ್ನು ನೀಗುವಲ್ಲಿ ಜಾತ್ರೆಗಳು ಪರಿಣಾಮಕಾರಿಯಾದ ಪ್ರಭಾವನ್ನು ಬೀರಿವೆ. ಪ್ರಾಚೀನ ಕಾಲದಿಂದ ಈ ರಾಷ್ಟ್ರವನ್ನು ಅನೇಕ ಪೀಡೆಗಳು ಕಾಡುತ್ತಿವೆ. ಜಾತೀಯತೆ, ಮೂಢನಂಬಿಕೆ, ಅಸ್ಪೃಶ್ಯತೆ, ಮಡಿವಂತಿಕೆ, ಕಂದಾಚಾರ, ಅನಾಚಾರ, ಅನೈತಿಕತೆ, ಜಾತಿ-ಕುಲ-ಗೋತ್ರಗಳ ಕೀಳರಿಮೆ, ಮೇಲರಿಮೆಗಳೇ ಕಾಡುವ ಪೀಡೆಗಳೆಂದು ಬೇರೆ ಹೇಳಬೇಕಿಲ್ಲ. ಇವು ಸಮಾಜವನ್ನು ಅಭದ್ರಗೊಳಿಸಿವೆ. ಭಾವೈಕ್ಯತೆಗೆ ಮಾರಕವಾಗಿ. ಇದನ್ನು ಮನಗಂಡ ಕೆಲ ಮಠಾಧೀಶರು, ಗುರುವರ್ಯರು ಈ ಸಮಾಜದಲ್ಲಿರುವಇಂತಹ ಪೀಡೆಗಳನ್ನು ನಿರ್ನಾಮ ಮಾಡಲು ಪಣತೊಟ್ಟು ಸಾಕಷ್ಟು ಹೋರಾಟವನ್ನು ಮಾಡಿದ್ದಾರೆ. ಮನುಷ್ಯ-ಮನುಷ್ಯರ ನಡುವೆ ಅಡ್ಡಗೋಡೆಗಳನ್ನು ಕಿತ್ತೆಸೆಯಲು ನಿರ್ಧರಿಸಿದರು. ಅವರ ಸಂಕಲ್ಪದ ಮೊದಲ ಫಲವಾಗಿ ಈ ಜಾತ್ರೆಗಳು ಆರಂಭಗೊಂಡವು. ಹೀಗಾಗಿ ವರ್ಷಕ್ಕೊಮ್ಮೆಯಾದರೂ ಜನರು ಒಗ್ಗೂಡಬೇಕು. ಜಾತಿ-ಕುಲ-ಗೋತ್ರಗಳನ್ನು ಮರೆಯಬೇಕು. ಮಡಿ-ಮೈಲಿಗೆ, ಬಡವ-ಬಲ್ಲಿದ, ಮೇಲು-ಕೀಲು ಮುಂತಾದಭಾವನೆಗಳನ್ನು ಬಿಡಬೇಕು. ಭಕ್ತಿ ಎಂಬ ಗಂಗೆಯಲ್ಲಿ ಮಿಂದು ಮಡಿಯಾಗಬೇಕು ಪುಣ್ಯಕ್ಷೇತ್ರದ ಹಿರಿಮೆಇಟ್ಟುಕೊಂಡು ಭಕ್ತರಾಗಿ ಪಾಲ್ಗೊಳ್ಳಬೇಕು. ಜಾತ್ರೆಯಲ್ಲಿಎಲ್ಲರೊಡಗೂಡಿ ಬೆರೆಯಬೇಕು. ಅಲ್ಲಿನಧಾರ್ಮಿಕ, ಸಾಮಾಜಿಕ, ನೈತಿಕತ್ರಿವೇಣಿ ಸಂಗಮದಲ್ಲಿ ಸ್ಪಂದಿಸಬೇಕು. ಕತ್ತಲಿನಿಂದ ಬೆಳಕಿನತ್ತ ಸಾಗುವಂತಾಗಬೇಕು. ಮಾನವತ್ವದಿಂದದೇವತ್ವಕಡೆಗೆ ನಡೆಯುವಂತಾಗಬೇಕು ಎಂದು ಸಾಕಷ್ಟು ಹಿರಿಯ ಹೃದಯಗಳು, ಗುರುವರ್ಯರು ನಿರ್ಧರಿಸಿದರು. ತತ್ಫಲವಾಗಿ ಜಾತ್ರೆಗಳು ಆರಂಭವಾದವು.

ಜಾತ್ರೆಗಳು ಮೊದಲಿನಿಂದ ಧಾರ್ಮಿಕ ಆಚರಣೆಗಳ ನೆಲೆಯಿಂದ ನಡೆದುಕೊಂಡು ಬಂದಿವೆಯಾದರು ಬರುಬರುತ್ತಾ ಅವು ಗೌಡ, ಕುಲಕರ್ಣಿ ಹಾಗೂ ಪ್ರಮುಖ ಮುಖಂಡತ್ವದಲ್ಲಿ ನಡೆದುಕೊಂಡು ಬಂದಿವೆ. ಸಾಮಾಜಿಕ ಕೇಂದ್ರಗಳಾಗಿ ತಮ್ಮತನವನ್ನು ನಿರೂಪಿಸುತ್ತವೆ. ನಾಟಕ, ಬಯಲಾಟ, ಕುಸ್ತಿ, ಕುಣಿತ, ಜಾನಪದ ಹಾಡುಗಾರರು, ಪಂದ್ಯಾಟಗಳು, ತಿಂಡಿಗಳು ಹಾಗೂ ಆಟಿಕೆಗಳು ಇತ್ಯಾದಿಗಳು ಜಾತ್ರೆಯಲ್ಲಿ ಕಾದಿರಿಸುತ್ತವೆ. ಇವು ಅಬಾಲ ವೃದ್ಧರೆಲ್ಲರಿಗೂ ಮನರಂಜನೆಯನ್ನು ಒದಗಿಸಿಸುತ್ತಾವೆ. ಜನಪದರಿಗೆ ಮನರಂಜನೆಯ ನೀಡುವು ವಿಧಾನ ಹಾಗೂ ವೈವಿದ್ಯತೆಗಳ ಜೊತೆಗೆ ಸಾಮಾಜಿಕ ಶಿಕ್ಷಣವನ್ನು ನೀಡುತ್ತವೆ. ವಿವಿಧ ಧರ್ಮ, ಜನರ ಹಾಗೂ ಜಾತಿಗಳ ಸಮ್ಮಿಲನಗೊಳಿಸುವಲ್ಲಿ ಯಶಸ್ಸು ಸಾಧಿಸಿವೆ. ಮನ-ಮನಗಳನ್ನು ಒಗ್ಗೂಡಿಸುವ ಸುವರ್ಣ ಸೇತುವೆಯಾಗಿದೆ. ಭಾವೈಕ್ಯತೆಯ ಬೀಜವನ್ನು ಬಿತ್ತುವಲ್ಲಿ ಸಫಲವಾಗಿವೆ.

ಕಲಬುರಗಿ ಜಿಲ್ಲೆಯ ಹಲವಾರು ಜಾತ್ರೆಗಳು ಮಠಮಾನ್ಯಗಳ ಮೂಲಕ ಜರುಗುತ್ತವೆ. ಇವುಗಳಲ್ಲಿ ಸಾಮಾಜಿಕ ಸಮಾನತೆ ಆಚಾರ ವಿಚಾರಗಳು ಅಭಿವ್ಯಕ್ತವಾಗುತ್ತವೆ. ಜಾತ್ರೆಗಳು ಸಾಮಾಜಿಕ ಸಮಾನತೆ ತರಲು ಪ್ರಯತ್ನಿಸುತ್ತವೆ. ಧಾರ್ಮಿಕ, ಸಂಸ್ಕೃತಿಕ ಕಾರ್ಯಕ್ರಮಗಳಿಗೆ ಹೊಸದೊಂದು ರೂಪ ನೀಡುತ್ತಿವೆ. ಭಕ್ತ ಸಮುದಾಯಗಳು ದೇವರುಗಳಿಗೆ ತಮ್ಮ ಇಷ್ಟಾರ್ಥಗಳ ಸಿದ್ಧಿಗಾಗಿ ಹರಕೆಗಳನ್ನು ಸಲ್ಲಿಸುತ್ತಾರೆ. ಧರ್ಮದ ಮೂಲಕ ಜನರಲ್ಲಿ ಭಕ್ತಿಯನ್ನು ಮೂಡಿಸಿ ಅವುಗಳ ಮೂಲಕ ಹೃದಯ ವೈಶಾಲ್ಯತೆ ಮನೋಭಾವನೆಯು ಬೆಳೆಯುತ್ತದೆ. ಅಲ್ಲದೆ ಜನರಲ್ಲಿ ಭಕ್ತಿ ಭಾವವನ್ನು ಜಾಗೃತಗೊಳಿಸುತ್ತವೆ. ಜನಪದರ ಮಾನಸಿಕ ಶುದ್ಧತೆಯ ಜೊತೆಗೆ ಅವರಲ್ಲಿ ತ್ಯಾಗ, ಪ್ರೀತಿ, ಸ್ನೇಹ, ಸೌಹಾರ್ದತೆಯ ಭಾವನೆಗಳನ್ನು

ಬೆಳೆಸುತ್ತವೆ. ಪ್ರತಿಯೊಬ್ಬ ಭಕ್ತನಲ್ಲೂಏಕಾಗ್ರತೆ ಹಾಗೂ ಸಕಾರಾತ್ಮಕ ಮನೋಭಾವ ವೃದ್ಧಿಸುತ್ತದೆ. ಇತಂಹ ಕಾರ್ಯದಲ್ಲಿ ಕುಸುನೂರಿನ ಗವಿ ಸಿದ್ದೇಶ್ವರ ಜಾತ್ರೆಯ ಪಾತ್ರವು ಒಂದಾಗಿದೆ.



ಶ್ರೀ ಗವಿಸಿದ್ಧೇಶ್ವರ ದೇವಾಲಯದ ಹೊರ ನೋಟ



ಮೂಲ ಗದ್ದುಗೆ



ಕುಸುನೂರಿನಲ್ಲಿರುವ ಪಾದಗಟ್ಟೆ

**ಗ್ರಂಥಋಣ.**

೧. ಹೈದ್ರಾಬಾದ ಕರ್ನಾಟಕದ ವಚನಕಾರರು, ಡಾ. ಬಸವರಾಜ ಸಬರದ. ಪ್ರಸಾರಂಗ ಗುಲಬರ್ಗಾ ವಿಶ್ವವಿದ್ಯಾಲಯ, ೨೦೧೨.

೨. ಭಾರತದ ಹಬ್ಬಗಳು, ಪ್ರೊ. ಡಿ.ಟಿ. ರಂಗಸ್ವಾಮಿ, ಸಮಾಜ ಪುಸ್ತಕಾಲಯ, ಧಾರವಾಡ, ೨೦೦೩.

೩. ಖಾಜಾಬಂದಾನವಾಜ, ಡಾ. ಜಯಶ್ರೀ ದಂಡೆ, ಪ್ರಸಾರಂಗ ಗುಲಬರ್ಗಾ ವಿಶ್ವವಿದ್ಯಾಲಯ ೨೦೦೮.



## ಕಲ್ಯಾಣ ಕರ್ನಾಟಕದ ಮೇಲೆ ಯೋಗದ ಪ್ರಭಾವ ಮತ್ತು ಆಚರಣೆ.

**-ಶ್ರೀ ನಾಗರಾಜ ಆರ್. ಸಾಲೋಳ್ಳಿ**
ಯೋಗ ಉಪನ್ಯಾಸಕ,
ಭೂಮಿ ಯೋಗ ಫೌಂಡೇಶನ್ ಟ್ರಸ್ಟ್, ಕಲಬುರಗಿ.

**ಯೋಗವು ಪುರಾತನ ಕಾಲದಿಂದಲೂ ಒಂದಿಲ್ಲೊಂದು ರೀತಿಯಲ್ಲಿ ಭಾರತೀಯ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿದೆ. ಯೋಗ ವಿಜ್ಞಾನವು ಆತ್ಮವಾದದ ಬದಲಿಗೆ ದೇಹವಾದಕ್ಕೆ ಮಹತ್ವ ನೀಡಿದೆ**. ಜೀವನ ಸಾಕ್ಷಾತ್ಕಾರದ ಒಂದು ಆಧ್ಯಾತ್ಮಿಕ ಹಾಗೂ ಆರೋಗ್ಯ ವಿಜ್ಞಾನ ಹಾಗೂ ಭಾರತೀಯ ದರ್ಶನಗಳಲ್ಲಿ ಒಂದಾಗಿರುವ ಯೋಗವು ಸಹಸ್ರಾರು ವರ್ಷಗಳ ಇತಿಹಾಸವನ್ನು ಹೊಂದಿದೆ. ವಿಶ್ವಕ್ಕೆ ಭಾರತವು ನೀಡಿದ ಕೊಡುಗೆಗಳಲ್ಲಿ ಯೋಗವು ಒಂದು. ಹಿರಣ್ಯಗರ್ಭ, ಪಶುಪತನಾಥ ಅಥವಾ ನಟರಾಜನೇ (ಶಿವ) ಯೋಗಕ್ಕೆ ಮೂಲ ಎಂದು ಪ್ರತಿಪಾದಿಸಿದರು, ಮುನಿ ಶ್ರೇಷ್ಠರಾದ**ಪತಂಜಲಿ ಮಹರ್ಷಿ** ಇದನ್ನು **೧೯೫ ಯೋಗ ಸೂತ್ರ**ಗಳೆಂಬ ಬೃಹತಗ್ರಂಥದಲ್ಲಿ ಸಂಶೋಧಿಸಿ ಸಂಯೋಜಿಸಿದ್ದಾರೆ ಎಂದು ಹಾಗೂ ಇವರ**ಕಾಲ ಕ್ರಿ. ಪೂ.೨ನೆ ಶತಮಾನ**ಎಂದು ನಂಬಲಾಗಿದೆ. ಹೀಗಾಗಿ **ಮಹರ್ಷಿ ಪತಂಜಲಿಯನ್ನು ಯೋಗದ ಪಿತಾಮಹ** ಎಂದು ಕರೆಯಲಾಗುತ್ತದೆ.

ಒಂದು ಪ್ರದೇಶದಭಾಷೆ, ನಡೆ-ನುಡಿ, ಸಾಂಪ್ರದಾಯಿಕ ಆಚರಣೆಗಳು, ಕ್ರೀಡೆಗಳು, ಹಬ್ಬ-ಹರಿದಿನಗಳು, ಉಡುಗೆ-ತೊಡುಗೆಗಳು ಹಾಗೂ ಆಹಾರ ಪದ್ಧತಿ ಇತ್ಯಾದಿಗಳು ಇನ್ನೊಂದು ಪ್ರದೇಶದ ಮೇಲೆ ತನ್ನ ಪ್ರಭಾವ ಬೀರುವುದು ಸಹಜ ಸಂಗತಿಯಾಗಿದೆ. ಅದೇ ರೀತಿಯಾಗಿ ಯೋಗದ ಪ್ರಭಾವವು ಕೂಡಾ ಕಲ್ಯಾಣ ಕರ್ನಾಟಕದ ಮೇಲೆ ಬೀರಿರುವುದು ೧೨ನೆಯ ಶತಮಾನದ ಶರಣರ ನಡೆ-ನುಡಿಗಳಲ್ಲಿ ಹಾಗೂ ಅವರಿಂದ ರಚಿಸಲ್ಪಟ್ಟ ವಚನಗಳಲ್ಲಿ ನಾವು ಕಾಣಬಹುದಾಗಿದೆ. ಯೋಗಕ್ಕೆ ಋಷಿಗಳು, ಮುನಿಗಳು, ಸಂತರು, ಬಿಕ್ಕುಗಳು ಅಷ್ಟೇ ಅಲ್ಲದೇ ೧೨ನೆ ಶತಮಾನದ ವಚನಕಾರರು - ಶರಣರು ಕೂಡಾ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ ಎಂಬುದಕ್ಕೆ ನಮ್ಮಲ್ಲಿ ಸಾಕಷ್ಟು ಪುರಾವೆಗಳು ದೊರೆಯುತ್ತವೆ.

ಯೋಗವೆಂದರೆ **"ಚಿತ್ತವೃತ್ತಿಗಳ ನಿರೋಧ"** ಎಂದು ಪತಂಜಲಿ ಮುನಿ ವಿವರಣೆ ಕೊಟ್ಟಿದ್ದಾರೆ. ಇದನ್ನು ಮನಸ್ಸಿನ ವಿವಿಧ ವೃತ್ತಿಗಳನ್ನು ಹತೋಟಿಯಲ್ಲಿ ಇಡುವುದೆಂದೂ, ಚಿತ್ತದ ಅಥವಾ ಮನಸ್ಸಿನ ಚಂಚಲತೆಯನ್ನು ಹೋಗಲಾಡಿಸುವುದೆಂದು ಹೇಳಲಾಗಿದೆ. ಯೋಗದ ನಿಜವಾದ ಅರ್ಥ ದೈಹಿಕ ಮತ್ತು ಮಾನಸಿಕ **"ನೋವು ಮತ್ತುದುಃಖದ ಸ್ಪರ್ಶದಿಂದ ಬಿಡುಗಡೆ ಹೊಂದುವುದಾಗಿದೆ."** ಪತಂಜಲಿಯು ಜೀವನ ಸಾಧನೆಗಾಗಿ ಅಷ್ಟ ಅಂಗಗಳಿರುವ ಯೋಗವನ್ನು ಹೇಳಿದ್ದಾರೆ, ಅದನ್ನೇ ಪತಂಜಲಿಯ **ಅಷ್ಟಾಂಗ ಯೋಗ** ಎನ್ನುತ್ತೇವೆ.

- **ಯಮ** : ಸಾರ್ವತ್ರಿಕ ನೀತಿ ನಿಯಮಗಳು (ನೈತಿಕ ಸೂತ್ರಗಳು)
- **ನಿಯಮ** : ವೈಯಕ್ತಿಕ ಹಾಗೂ ಸಾಮಾಜಿಕ ಶಿಸ್ತು
- **ಆಸನ** : ದೇಹದ ನಿಲುವುಗಳು
- **ಪ್ರಾಣಾಯಾಮ** : ಕ್ರಮಬದ್ಧವಾದ ಉಸಿರಾಟ ಕ್ರೀಯೆ
- **ಪ್ರತ್ಯಾಹಾರ** : ಇಂದ್ರಿಯಗಳಿಂದ ಬಿಡುಗಡೆ
- **ಧಾರಣ** :ಕೇಂದ್ರೀಕರಣ
- **ಧ್ಯಾನ** :ಏಕಾಗ್ರತೆ
- **ಸಮಾಧಿ** : ಸತ್ಯದ ಸಾಧನೆಯಲ್ಲಿ ಸಾಧಕನು ಮುನ್ನಡೆಯುವುದು.

ಇದನ್ನು ೧೨ನೆ ಶತಮಾನದಲ್ಲಿ ಲಿಂಗಾಂಗ ಯೋಗ ಸಾಧನೆಯ ಮೆಟ್ಟಿಲುಗಳೆಂದು ವಚನಕಾರರಾದ ಆದಯ್ಯನವರು ತಮ್ಮ ವಚನದಲ್ಲಿ ಹೀಗೆ ಹೇಳಿದ್ದಾರೆ.

**"ಬೀಜವೃಕ್ಷಯೋಗದಂತೆ ಭಕ್ತಸ್ಥಲ,**
**ಆಲಮೌಕ್ತಿಕಯೋಗದಂತೆ ಮಾಹೇಶ್ವರಸ್ಥಲ,**
**ಅನಲಕ್ಷಯೋಗದಂತೆ ಪ್ರಸಾದಿಸ್ಥಲ,**
**ಕೀಟಭ್ರಮರಯೋಗದಂತೆ ಪ್ರಾಣಲಿಂಗಿಸ್ಥಲ,**
**ಕರಕವಾರಿಯೋಗದಂತೆ ಶರಣಸ್ಥಲ,**
**ಶಿಖಿಕರ್ಪುರ ಯೋಗದಂತೆಐಕ್ಯಸ್ಥಲ,**
**ಇಂತು ನಿರ್ಭಾವ ನಿರ್ಭೇದ್ಯವಾದಂಗೆ**
**ಸೌರಾಷ್ಟ್ರ ಸೋಮೇಶ್ವರನಲ್ಲೆ ಲಿಂಗೈಕ್ಯವು."**
**– ಆದಯ್ಯ**

ಯೋಗ ಸಾಧನೆಯಿಂದ ಮನಸ್ಸಿನ, ಬುದ್ಧಿಯ, ಅಹಂಕಾರದ ಚಂಚಲತೆಯನ್ನು ಯಾವಾಗ ತಡೆಯಬಹುದೋ ಆಗ ಯೋಗಿಯು ಸತ್ಯದ ಕಾಯಕ ಮತ್ತು ಪ್ರಸಾದದಿಂದ ಸಂತೃಪ್ತನಾಗುತ್ತಾನೆ. ಆಗ ಬುದ್ಧಿ–ತರ್ಕ ಹಿಡಿತಕ್ಕೆ ಸಿಗದ, ಇಂದ್ರಿಯಗಳ ಶಕ್ತಿಗೆ ಅತೀತವಾದ, ಆನಂದವನ್ನು ಅರಿಯುತ್ತಾನೆ. ಯೋಗದ ನಿಜವಾದ ಅರ್ಥ ನಾವು ಮಾಡುವ ಪ್ರತಿಯೊಂದು ಕಾಯಕದಲ್ಲಿ ಬೆರೆಯುವುದು ಅಥವಾ ಕೂಡುವುದಾಗಿದೆ. ಇದನ್ನು ಮೂಲ ನಾಥ ಪಂಥದಿಂದ ಬಂದ ಸಿದ್ಧರಾಮೇಶ್ವರರು ತಮ್ಮ ವಚನದಲ್ಲಿ ಕಾಯಕದಲ್ಲಿ ಕೂಡುವುದನ್ನು ಅಥವಾ ಬೆರೆಯುವುದನ್ನು ಈ ರೀತಿಯಾಗಿ ಹೇಳುತ್ತಾರೆ.

**"ಯೋಗವ ಸಾಧ್ಧಿಸಿದವನೊಬ್ಬ ನಿಜಗುಣ;**
**ಯೋಗವ ಸಾಧ್ಧಿಸಿದವನೊಬ್ಬ ವೃಷಭಯೋಗಿಶ್ವರ;**
**ಯೋಗವ ಸಾಧ್ಧಿಸಿದವನೊಬ್ಬ ಶಿವನಾಗಮಯ್ಯ;**
**ಯೋಗವ ಸಾಧ್ಧಿಸಿದೆ ನಾನೊಬ್ಬ**
**ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಕೂಡುವಯೋಗವ."**

**– ಸಿದ್ಧರಾಮೇಶ್ವರ**

ಅಷ್ಟಾಂಗ ಯೋಗದ ಮೊದಲನೆಯ ಮೆಟ್ಟಿಲುಯಮ.ಅಂದರೆ ನೈತಿಕ ಸೂತ್ರಗಳು ಅಥವಾ ಸಾರ್ವತ್ರಿಕ ನೀತಿ ನಿಯಮಗಳು.ಅವು ಸ್ಥಳ, ಸಮಯ, ಜನಾಂಗಗಳಿಗೆ ಅತೀಯವಾದವುಗಳು.ಇವುಗಳ ಪಾಲನೆಯಿಂದಾಗಿ ಮನುಷ್ಯನಲ್ಲಿ ಅಡಗಿರುವ ದುರ್ಬುದ್ಧಿ ಅಥವಾ ಕೆಡುಕುಗಳ ನಾಶವಾಗಿ ಒಳಿತುಗಳಿಗೆ ನಾಂದಿಯಾಗುತ್ತದೆ. ಯಮವನ್ನು ವಿವರಿಸುವಾಗ ಅದರಲ್ಲಿ ಈ ಕೆಳಗಿನ ಐದು ಅಂಶಗಳನ್ನು ನೀಡಿ ಸಾಧನೆಯಲ್ಲಿ ಅನುಸರಿಸುವಂತೆ ಹೇಳಿದ್ದಾರೆ.

**ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾ ಪರಿಗ್ರಹಾಯಮಾ:**

- **ಅಹಿಂಸಾ**
- **ಸತ್ಯ**
- **ಅಸ್ತೇಯ**
- **ಬ್ರಹ್ಮಚರ್ಯ**
- **ಅಪರಿಗ್ರಹ**

ಕಳ್ಳತನ, ದುರಾಚಾರ, ಹಿಂಸೆ, ದುರ್ನಡತೆ, ಇತ್ಯಾದಿಗಳಿಗೆ ಸಂಬಂಧಿಸಿದಂತೆ ಸುಮಾರುಕ್ರಿ. ಶ. ೧೨ನೆ ಶತಮಾನದಖ್ಯಾತ ವಚನಕಾರರಾದ ಬಸವಣ್ಣನವರು ಕೂಡಾ ತಮ್ಮ ವಚನದಲ್ಲಿ ತುಂಬಾ

ಸರಳವಾಗಿ ಎಲ್ಲರಿಗೂ ಮನಮುಟ್ಟುವಂತೆ ಹೇಳಿದ್ದಾರೆ. ಇವುಗಳ ಪಾಲನೆಯಿಂದ ವ್ಯಕ್ತಿಯ ಅಂತರಂಗ ಹಾಗೂ ಬಹಿರಂಗ ಶುದ್ಧಿಯಾಗಿ, ಆತನ ಜೀವನ ಹಸನಾಗಬಹುದೇ ಹೊರತು ಬೇರೆ-ಬೇರೆ ರೀತಿಯ ಮೂಢಭಕ್ತಿ, ಢಾಂಬಿಕ ಆಚರಣೆಗಳಿಂದಲ್ಲ ಎನ್ನುತ್ತಾರೆ.

**ಕಳಬೇಡ, ಕೊಲಬೇಡ, ಹುಸಿಯ ನುಡಿಯ ಬೇಡ,**
**ಮುನಿಯಬೇಡ, ಅನ್ಯರಿಗೆಅಸಹ್ಯಪಡಬೇಡ,**
**ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ,**
**ಇದೇಅಂತರಂಗ ಶುದ್ಧಿ,ಇದೇ ಬಹಿರಂಗ ಶುದ್ಧಿ**
**ಇದೇ ನಮ್ಮಕೂಡಲಸಂಗಮದೇವನೊಲಿಸುವ ಪರಿ.**

**– ಬಸವಣ್ಣ.**

ಸತ್ಯದ ಅಥವಾ ನಾವು ಆಡುವ ಮಾತಿನ ಅಥವಾ ನುಡಿಗಳ ಬಗ್ಗೆ ವಿವರಿಸುತ್ತ ಪತಂಜಲಿಯು **'ಸತ್ಯಪ್ರತಿಷ್ಠಾಯಂ ಕ್ರಿಯಾಫಲಶ್ರಯತ್ವಮ್'** ಬದುಕಿನಲ್ಲಿ ನಮ್ಮ ನಡತೆಯ ಅತಿ ಉನ್ನತ ಮಟ್ಟ ತಿಳಿಯಬೇಕೆಂದರೆ ಅದು ಸತ್ಯದಿಂದ ಮಾತ್ರ ಸಾಧ್ಯ ಎನ್ನುತ್ತಾರೆ. "ಸತ್ಯ ಎಂದರೆ ದೇವರು, ದೇವರು ಎಂದರೆ ಸತ್ಯ." ನಾವು ಅಸತ್ಯ ನುಡಿದರೆ ಅದು ನಾವು ದೇವರಿಗೆ ಮಾಡಿದ ದ್ರೋಹವೆ ಸರಿ. ಸತ್ಯವು ವ್ಯಕ್ತಿಯಲ್ಲಿ ಅಡಗಿರುವ ಕಲ್ಮಶವನ್ನು ಅಥವಾ ಕೊಳಕನ್ನು ಸುಟ್ಟು ಆತನನ್ನು ಪರಿಶುದ್ಧಗೊಳಿಸುತ್ತದೆ.

**'ಮಾತು'** ಅಥವಾ ನಮ್ಮ **'ನುಡಿಗಳು'** ಹೇಗಿರಬೇಕೆನ್ನುವುದರ ಬಗ್ಗೆ ಬಸವಣ್ಣನವರು ಈ ಕೆಳಗಿನ ವಚನದಲ್ಲಿ ಸರಳವಾಗಿ ಮತ್ತು ಸುಂದರವಾಗಿ ನಿರೂಪಿಸಿದ್ದಾರೆ.

**ನುಡಿದಡೆ ಮುತ್ತಿನ ಹಾರದಂತಿರಬೇಕು**
**ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು**
**ನುಡಿದಡೆ ಸ್ಫಟಿಕದ ಸಲಾಕೆಯಂತಿರಬೇಕು**
**ನುಡಿದಡೆ ಲಿಂಗಮೆಚ್ಚಿಅಹುದಹುದೆನಬೇಕು**
**ನುಡಿಯೊಳಗಾಗಿ ನಡೆಯದಿದ್ದಡೆ**
**ಕೂಡಲಸಂಗಮದೇವನೆಂತೊಲೆವನಯ್ಯಾ?**

**– ಬಸವಣ್ಣ**

ನಾವಾಡುವ ಮಾತು ಮುತ್ತುಗಳಂತೆ ಆಕರ್ಷಕವಾಗಿರಬೇಕು. ಒಮ್ಮೆ ನೋಡಿದ ಮಾಣಿಕ್ಯದಕಾಂತಿಯ ಹಾಗಿರಬೇಕು. ನುಡಿದ ಪ್ರತಿಯೊಂದು ನುಡಿಯು ಸತ್ಯದಿಂದ ತುಂಬಿರಬೇಕು. ನುಡಿದ ನುಡಿ ಸ್ಫಟಿಕದಂತೆ ಪಾರದರ್ಶಕವಾಗಿರಬೇಕು. ಪ್ರತಿಯೊಬ್ಬರ ಮನಸ್ಸಿಗೆ ಹಿತವಾಗಿ ಹಿಡಿಸುವಂತಿರಬೇಕು. ಮತ್ತು ಯಾರಿಗೂ ನೋವಾಗದಂತಿರಬೇಕು. ನಮ್ಮ ನುಡಿಗೆ ಸತ್ಯವೇ ತಲೆಬಾಗಬೇಕು ಇದುವೆ ಜೀವನದ ಸಾರ್ಥಕತೆ ಎಂದಿದ್ದಾರೆ.

ಪ್ರತ್ಯಾಹಾರವು ಅಷ್ಟಾಂಗ ಯೋಗದಐದನೇ ಮೆಟ್ಟಿಲಾಗಿದ್ದು, ಇಂದ್ರಿಯಗಳನ್ನು ನಿಯಂತ್ರಣಕ್ಕೆ ಅಥವಾ ಹಿಡಿತಕ್ಕೆತರುವಲ್ಲಿ ಪ್ರತ್ಯಾಹಾರ ತುಂಬಾ ಮಹತ್ವವಾದ ಪಾತ್ರವಹಿಸುತ್ತದೆ. **'ಸ್ವವಿಷಯಾ ಸಂಪ್ರಯೋಗೇ ಚಿತ್ತಸ್ಯ ಸ್ವರೋಪಾನುಕಾರ ಇವೇಂದ್ರಿಯಾಣಾಂ ಪ್ರತ್ಯಾಹಾರ'** ಇಂದ್ರಿಯಗಳ ಅಧೀನಕ್ಕೆ ಬುದ್ಧಿ ಸಿಲುಕಿದರೆ ಮನುಷ್ಯನು ನಾಶವಾಗುವುದರಲ್ಲಿ ಯಾವುದೇ ಸಂದೇಹವಿಲ್ಲ. ಮನಸ್ಸನ್ನು ವಿಷಯಾಕಾರದಿಂದ ತಡೆಹಿಡಿದು ಹೊರಗಿನ ವಿಷಯಗಳ ಕಡೆ ಗಮನ ಹರಿಯದಂತೆ ಅಂತರ್ಮುಖಿಯನ್ನಾಗಿಸುವುದೇ ಪ್ರತ್ಯಾಹಾರ. ಇದರ ಸತತ ಅಭ್ಯಾಸದಿಂದ ಇಂದ್ರಿಯಗಳು ಬಲಗೊಳ್ಳುತ್ತವೆ.

- **ಸತ್ವ (ಸಾತ್ವಿಕ)**
- **ರಜಸ (ರಾಜಸಿಕ)**
- **ತಮಸ (ತಾಮಸಿಕ)**

ಇದಕ್ಕೆ ಸೂಕ್ತವೆನಿಸುವಂತೆ ಸರ್ವಜ್ಞನುತಮ್ಮ ವಚನದಲ್ಲಿ ಪ್ರಸಾದ ಹಾಗೂ ಆರೋಗ್ಯಕ್ಕೂ ಇರುವ ನಂಟಿನ ಕುರಿತು ಈ ಕೆಳಗಿನ ವಚನದಲ್ಲಿ ಹೀಗೆ ವಿವರಿಸುತ್ತಾನೆ.

**"ಹಸಿವಿಲ್ಲದುಣಬೇಡ**
**ಹಸಿದುಮತ್ತಿರಬೇಡ**
**ಬಿಸಿಗೂಡಿಸಿ ತಂಗಳುಣಬೇಡ**
**ವೈದ್ಯನ ಸಂಗವೇ ಬೇಡ ಸರ್ವಜ್ಞ"**
**–ಸರ್ವಜ್ಞ**

ಆಹಾರದ ವಿಚಾರದಲ್ಲಿ ಶರಣೆಅಕ್ಕಮಹಾದೇವಿ ತಮ್ಮ ವಚನದಲ್ಲಿ ಹೀಗೆ ಹೇಳಿದ್ದಾರೆ.
**"ಆಹಾರವಕಿರಿದು ಮಾಡಿರಯ್ಯ**
**ಆಹಾರದಿಂ ವ್ಯಾಧಿ ಹಬ್ಬಿ ಬಲಿಯುವದಯ್ಯ**
**ಆಹಾರದಿಂ ನಿದ್ರೆ, ತಾಮಸ, ಮೈಮರೆವು**
**ತಾಮಸದಿಂ, ಅಜ್ಞಾನ ಹೆಚ್ಚಿಕಾಯವಿಕಾರ**
**ಮನೋವಿಕಾರ, ಭಾವವಿಕಾರ, ಇಂದ್ರಿಯ ವಿಕಾರ**
**ವಾಯುವಿಕಾರ, ಇಂಥ ಪಂಚ ವಿಕಾರಗಳನ್ನುಂಟು ಮಾಡಿ**
**ಸೃಷ್ಟಿಗೆ ತಂದಾದಕಾರಣಕಾಯದಅತಿ ಪೋಷಣೆ**
**ಮೃತ್ಯುವಾದುದು**
**ಜಪ, ತಪ, ಧ್ಯಾನ, ಧಾರಣ, ಪೂಜೆಗೆ ಸೂಕ್ಷ್ಮದಿಂದ**
**ತನು ಮಾತ್ರವಿದ್ದರೆ ಸಾಲದೆ? ತನುವ ಪೋಸಿಸುವ**
**ಆಸೆ ಅತೀತ್ವಕ್ಕೆ ವಿಘ್ನವೆಂಬುದು**
**ತನು ಪೋಷಣೆಯಿಂದ**
**ತಾಮಸ ಹೆಚ್ಚಿಅಜ್ಞಾನದಿಂದ ವಿರಕ್ತಿ ಹಾನಿ**
**ಅರಿವು ನಷ್ಟಪರವುದೂರ, ನೀರಕೆ**
**ನಿಲುವಿಲ್ಲದಕಾರಣಚೆನ್ನಮಲ್ಲಿಕಾರ್ಜುನನ**
**ಒಲಿಸ ಬಂದಕಾಯವಕೆಡಿಸದೆ ಉಳಿಸಿಕೊಳ್ಳಿರಯ್ಯ."**
**– ಅಕ್ಕಮಹಾದೇವಿ**

ಈ ಮೇಲಿನ ವಚನದಲ್ಲಿ ಅವರು ದೈಹಿಕ ಹಾಗೂ ಮಾನಸಿಕ ಆರೋಗ್ಯವನ್ನು ರಕ್ಷಿಸಿಕೊಳ್ಳಲು ಎಚ್ಚರಿಸಿದ್ದಾರೆ. ಮಿತಿ ಮೀರಿತಿನ್ನುವುದು ತರವಲ್ಲ. ಈ ರೀತಿ ತಿನ್ನುವ ಹವ್ಯಾಸ ಶರೀರಕ್ಕೆ ಅಪಾಯ ತಂದೊಡ್ಡುವುದು. ಅತಿ ಆಹಾರದಿಂದ ನಿದ್ರೆ ಹೆಚ್ಚಾಗುವುದು, ಇದರಿಂದ ತಾಮಸ ಪ್ರವೃತ್ತಿ ವರ್ತಿಸುವುದು, ಅದರಿಂದ ಮನಸ್ಸು ವಿಕಾರಕ್ಕೆ ತಿರುಗುವವುದು, ಮೈಮರೆವು ಮತ್ತು ದೇಹದಲ್ಲಿ ಕಾಯಿಲೆಗಳು ಮನೆ ಮಾಡುವವು ಎಂದಿದ್ದಾರೆ. ಮನೋವಿಕಾರದಿಂದ ಮನೋ ಒತ್ತಡ ಹೆಚ್ಚಾಗುವುದು, ಸಂಧಿವಾತ, ರಕ್ತದೊತ್ತಡ, ಬೊಜ್ಜು ಶೇಖರಣೆಯಾಗುವುದು ಹಿಗೆ ನಾನಾ ಸಮಸ್ಯೆಗಳಿಗೆ ಎಡೆಮಾಡಿಕೊಡುತ್ತದೆ ಆದ್ದರಿಂದ ಆಹಾರ ಅತಿಯಾಗದೆ ಮಿತಿಯಿರಲ್ಲಿ ಎಂದಿದ್ದಾರೆ.

ವ್ಯಕ್ತಿಯ ಗುಣಾವಗುಣಗಳಿಗೆ ಸೇವಿಸುವ ಆಹಾರವೂ ಕಾರಣವೆಂದು ನಂಬಲಾಗಿದೆ. **'ತಿನ್ನುವುದುಏನೆಂದು ನೀನು ಹೇಳು, ಎಂಥವನು ನೀನೆಂದು ನಾ ಹೇಳುವೆ'**ಎನ್ನುವ ನಾಣ್ನುಡಿ ನಮ್ಮ ನಂಬಿಕೆಯನ್ನು ದೃಢಪಡಿಸುತ್ತದೆ. ಆದ್ದರಿಂದಲೇ ಸರ್ವಜ್ಞರು ತಮ್ಮ ವಚನದಲ್ಲಿ ಹೀಗೆ ಹೇಳಿದ್ದಾರೆ.
**"ಒಮ್ಮೆಯುಂಡವತ್ಯಾಗಿ**
**ಇಮ್ಮೆಯುಂಡವ ಭೋಗಿ**
**ಬಿಮ್ಮಗುಂಡವ ನೆರೆರೋಗಿಯೋಗಿತಾ**
**ಸುಮ್ಮಗಿರುತಿಹನು ಸರ್ವಜ್ಞ"**

ಹೊಟ್ಟೆ ಹಸಿದಾಗ ಮಾತ್ರ ಸೇವಿಸಬೇಕು, ಸೇವಿಸುವಾಗಿ ಸಮಾಧಾನದಿಂದಿರಬೇಕು. ಆಹಾರ ಸೇವಿಸುವಾಗ ಸೇವಿಸುವ ಆಹಾರದಕಡೆಗೆಗಮನವಿರಬೇಕು.ಬೇಕಾದ್ದನ್ನು ಮಾತ್ರತಿನ್ನಬೇಕು, ಬೇಡವಾದುದನ್ನುತ್ಯಜಿಸಬೇಕು ಮತ್ತುಆಹಾರವನ್ನು ಸೇವಿಸುವಾಗ ಮನಸ್ಸು ಶಾಂತವಾಗಿರಬೇಕು.

ಯೋಗ ಮುನಿ ಪತಂಜಲಿ ಮಹರ್ಷಿ ಹೇಳುವಂತೆ ಹಾಗೂ ಹಠಯೋಗದಲ್ಲಿ ಶರೀರ ಶುದ್ಧಿಗೆ **ಸಾತ್ವಿಕ ಆಹಾರ**ಗಳ ಸ್ವೀಕಾರಅವಶ್ಯಕವೆಂದು ಪರಿಗಣಿಸಲಾಗಿದೆ.ಇವು ಸ್ಥೂಲ ಶರೀರವನ್ನು ಶುದ್ಧೀಕರಿಸಬಹುದಾದುದರಿಂದ ಶರೀರ ಶುದ್ಧಿಗೆ ವಚನಕಾರರುಯೋಗಿಯು ಪ್ರಪಂಚ ಮತ್ತುತನ್ನ ಶರೀರದ ಬಗೆಗೆ ಒಂದು ವಿಶಿಷ್ಟ ಕಾಯಕಧೋರಣೆ ತಳೆಯಬೇಕು ಎನ್ನುತ್ತಾರೆ.

**'ಪ್ರಸಾದ'** ಎಂಬ ಪದಕ್ಕೆ ಶರಣರಲ್ಲಿ ವಿಶೇಷವಾದಅರ್ಥವಿದೆ.ತಾವು ಸೇವಿಸುವ ಎಲ್ಲಆಹಾರವನ್ನೂ ಪ್ರಸಾದವೆಂದು ಸ್ವೀಕರಿಸುತ್ತಾರೆ.ಇನ್ನೂಒಂದು ಹೆಜ್ಜೆ ಮುಂದೆ ಹೋಗಿ, ಸೇವಿಸುವ ಆಹಾರ, ಕುಡಿಯುವ ನೀರು, ಹಾಲು, ಜೇನು ಇತ್ಯಾದಿಗಳಷ್ಟೇ ಅಲ್ಲ, ನಮ್ಮ ಶರೀರ, ಇಂದ್ರಿಯ, ಅಂತಃಕರಣಗಳೂ ನಾವು ಅನುಭವಿಸುವ ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳೂ ಪ್ರಸಾದವೇಎನ್ನುತ್ತಾರೆ.

**"ಇಂದ್ರಿಯ ನಿಗ್ರಹವ ಮಾಡಿದಡೆ ಹೊಂದುವವು ದೋಷಂಗಳು**
**ಮುಂದೆ ಬಂದುಕಾಡುವು ಪಂಚೇಂದ್ರಿಯಗಳು!**
**ಸತಿಪತಿರತಿ ಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು?**
**ಸತಿಪತಿರತಿ ಭೋಗೋಪಭೋಗ ವಿಳಾಸದ ಬಿಟ್ಟನೆ ಸಿಂಧು ಬಲ್ಲಾಳನು?**
**ನಿಮ್ಮ ಮುಟ್ಟಿ ಪರಧನ – ಪರಸತಿಯರಿಗೆಳಸಿದಡೆ**
**ನಿಮ್ಮಚರಣಕ್ಕೆದೂರ, ಕೂಡಲಸಂಗಮದೇವಾ."**

**– ಬಸವಣ್ಣ**

ಯೋಗದ ಪ್ರಕಾರಮಾನವನದೇಹದಲ್ಲಿ ವಿವಿಧ ಭಾಗಗಳಲ್ಲಿ ಇರುವ ಚಕ್ರಗಳು ಏಳುಎನ್ನಲಾಗಿದೆ.ಅವು ಈ ಕೆಳಗೆನಂತೆ ತಿಳಿಸಲಾಗಿದೆ.

- **ಮೂಲಾಧಾರಚಕ್ರ**
- **ಸ್ವಾಧಿಷ್ಠಾನ ಚಕ್ರ**
- **ಮಣಿಪೂರಚಕ್ರ**
- **ಅನಾಹತಚಕ್ರ**
- **ವಿಶುಧಿಚಕ್ರ**
- **ಆಜ್ಞಾ ಚಕ್ತ**
- **ಸಹಸ್ರಾರಚಕ್ರ**

**ಅಲ್ಲಮ ಪ್ರಭುವಿನಂತ ಯೋಗಿಗಳು ಮನುಷ್ಯನ ಬೆನ್ನು ಹುರಿಯಲ್ಲಿ೭ ಚಕ್ರಗಳಿದ್ದು, ಅವುಗಳ ಮಧ್ಯದಲ್ಲಿ ಲಿಂಗಗಳಿವೆಯೆನ್ನುತ್ತಾರೆ.** ಎಲ್ಲಕ್ಕಿಂತ ಕೆಳಗಿರುವ ಆಧಾರಚಕ್ರದಲ್ಲಿ **ಆಚಾರಲಿಂಗ,** ಅದರ ಮೇಲಿರುವ ಸ್ವಾಧಿಷ್ಠಾನ ಚಕ್ರದಲ್ಲಿ **ಗುರುಲಿಂಗ,** ಅದಕ್ಕಿಂತ ಮೇಲಿರುವ ನಾಭಿಯ ಹಿಂದಿರುವ ಮಣಿಪೂರ ಕಚಕ್ರದಲ್ಲಿ **ಶಿವಲಿಂಗ,** ಹೃದಯ ಸ್ಥಾನದಲ್ಲಿರುವ ಅನಾಹತ ಚಕ್ರದಲ್ಲಿ **ಜಂಗಮಲಿಂಗ,** ಕಂಠಸ್ಥಾನದಲ್ಲಿರುವ ವಿಶುದ್ಧಿ ಚಕ್ರದಲ್ಲಿ **ಪ್ರಸಾದಲಿಂಗ,** ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರದಲ್ಲಿ **ಮಹಾಲಿಂಗ** ಮತ್ತು ನೆತ್ತಿಯೆಲ್ಲಿರುವ ಸಹಸ್ರಾರದಲ್ಲಿ **ಶೂನ್ಯಲಿಂಗ** ಇರುವುದಾಗಿ ನಂಬುತ್ತಾರೆ. ಪ್ರಾಣ ಹೇಗೆ ಶರೀರದ ಎಲ್ಲ ಕಡೆಯೂ ಇದೆಯೋ ಹಾಗೆ **ಲಿಂಗ** ಶರೀರದ ತುಂಬೆಲ್ಲ ಇದೆ ಎನ್ನುತ್ತಾರೆ.

ಶರಣನು ಲಿಂಗದಲ್ಲಿ ಒಂದಾಗಿರುವ ಅನಭವವನ್ನು ಅವನು ಹೂವು–ದುಂಬಿ ಸೇರುವುದಕ್ಕೂ, ಮಳೆ–ಬೆಳೆ ಒಂದಾಗುವುದಕ್ಕೂ ಹೋಲಿಸುತ್ತಾರೆ. ಇಲ್ಲಿ ಅಂಗ–ಲಿಂಗಗಳೆರಡೂ ಸ್ವರೂಪದಲ್ಲಿ ಚಿತ್ತೇ ಆಗಿರುವುದರಿಂದ, ಅವು ವ್ಯತ್ಯಾಸವಿಲ್ಲದಂತೆ ಬೆರೆಯಲು ಸಾಧ್ಯ. ಇದನ್ನೆ ಶರಣರು **ಲಿಂಗಾಂಗ ಸಾಮರಸ್ಯ** ಎಂದು ಕರೆದಿದ್ದಾರೆ. ಲಿಂಗಾಂಗ ಸಾಮರಸ್ಯ ಪಡೆದವನ ಜೀವನ ನಿಜಕ್ಕೂ ಸಾರ್ಥಕ ಮತ್ತು ಪಾವನ ಎಂದಿದ್ದಾರೆ.

**"ದಕ್ಷಿಣಜ್ಯೋತಿಮಂಡಲದ ಮಧ್ಯದಲ್ಲಿ**
**ಪ್ರತ್ಯಕ್ಷನಾಗಿರ್ಪ ಪರಮಾತ್ಮನೆ ಪತಿ,**
**ವಾಮಜ್ಯೋತಿಮಂಡಲದ ಮಧ್ಯದಲ್ಲಿ**
**ಬೆಳಗುತಿರ್ಪ ಜೀವಾತ್ಮನೆ ಸತಿ.**
**ಈ ಮಂಡಲಗಳ ಯೋಗವೇ**
**ತತ್ವಮಸಿಯೆಂಬ ಮಹಾವಾಕ್ಯಾರ್ಥಮಾದ**
**ಜೀವಪರಮರೈಕ್ಯವದೇ ಲಿಂಗಾಂಗ ಸಂಯೋಗವದೇ**
**ಶಿವಾತ್ಮರ ಸಮರಸವದೇ ನೋಡಾಅಖಂಡೇಶ್ವರಾ."**

**– ಷಣ್ಮುಖಸ್ವಾಮಿ**

ಇವೆಲ್ಲವೂ ವ್ಯಕ್ತಿಯ ಅಂತರಂಗ ಸಾಧನೆಗಾಗಿ ಮಾಡುವ ಯೋಗವೆಂದು ಹಾಗೂ ಬಹಿರಂಗ ಸಾಧನೆಗಾಗಿ ಸಾಮಾಜಿಕ ಸಮಾನತೆಯನ್ನು ಅಳವಡಿಸಿಕೊಳ್ಳವುದೇ ನಿಜವಾದ ಯೋಗ ಎಂದು ಶರಣರು ಹೇಳುತ್ತಾರೆ.

**"ಅರಿವೆಗುರು, ಆಚಾರವೆ ಶಿಷ್ಯ**
**ಜ್ಞಾನವೆ ಲಿಂಗ, ಪರಿಣಾಮವೆತಪ**
**ಸಮತೆಯೆಂಬುದೇಯೋಗದಾಗು ನೋಡಾ**
**ಈಸುವನರಿಯದೆ ವೇಷವ ಧರಿಸಿ,**
**ಲೋಚು ಬೋಳಾದಡೆ ಮಹಾಲಿಂಗ ಕಲ್ಲೇಶ್ವರದೇವರು ನಗುವರು."**

ಎಂದು ಅಂತರಂಗ ಮತ್ತು ದೈಹಿಕ ವಿಕಾಸಕ್ಕೆ ಯೋಗವಾದರೆ ಬಹಿರಂಗ ಮತ್ತು ಸಮಷ್ಠಿಯ ವಿಕಾಸಕ್ಕೆ ಸಮತೆಯ ದೃಷ್ಟಿಯೇ ಯೋಗವೆಂದು ಶರಣರು ನಂಬಿ ಅದನ್ನು ಜಾರಿಗೆ ತಂದಿದ್ದನ್ನು ನಾವು ಇಲ್ಲಿ ಸ್ಮರಿಸಬಹುದು. ಈ ರೀತಿಯಾಗಿ ಕಲ್ಯಾಣ ಕರ್ನಾಟಕದ ಮೇಲೆ ಯೋಗವು ತನ್ನ ಪ್ರಭಾವವನ್ನು ಬೀರಿದೆ ಎಂಬುದನ್ನು ನಾವು ಈ ಮೇಲಿನ ಎಲ್ಲಾ ಅಂಶಗಳಿಂದ ಗಮನಿಸಬಹುದಾಗಿದೆ.



# ದಕ್ಷಿಣ ಕಾಶಿ – ಮೈಲಾರಲಿಂಗೇಶ್ವರ.

**–ಡಾ. ಚನ್ನಮ್ಮ ಎಸ್. ಬಿರಾದಾರ,**
ಇತಿಹಾಸ ಅಧ್ಯಯನ ವಿಭಾಗ,
ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ.

ಉತ್ತರ ಕರ್ನಾಟಕದ ತುತ್ತತುದಿಯಲ್ಲಿರುವ ಬೀದರ ಜಿಲ್ಲೆ ಸಾಂಸ್ಕೃತಿಕವಾಗಿ, ಚಾರಿತ್ರಿಕವಾಗಿ ಮಹತ್ವದ ಸ್ಥಾನವನ್ನು ಗಳಿಸಿದೆ. ಮೈಲಾರಲಿಂಗನ ಸಂಪ್ರದಾಯ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ಆಚರಣೆಗಳಿಗೆ ಅತ್ಯಂತ ಪ್ರಸಿದ್ಧನಾಗಿದ್ದಾನೆ. ಬೀದರ ಜಿಲ್ಲೆಯ ಖಾನಾಪುರ ಅಥವಾ ಮೈಲಾರ ಗ್ರಾಮಗಳಲ್ಲಿ ನೆಲೆಸಿ ಮೈಲಾರಲಿಂಗ, ಮೈಲಾರ, ಖಂಡೋಬಾ ಎಂಬ ನಾಮಗಳಿಂದ ಅತ್ಯಂತ ಪ್ರಸಿದ್ಧನಾಗಿರುವ ದೇವನು ಹಾಗೂ ಕರ್ನಾಟಕ ಪ್ರಸಿದ್ಧ ಜನಪದ ದೈವನಾಗಿದ್ದಾನೆ. ಮೈಲಾರಲಿಂಗ ಕರ್ನಾಟಕಕ್ಕೆ ಅಷ್ಟೇ ಸೀಮಿತವಾಗದೆ ಬೇರೆ ರಾಜ್ಯಗಳಿಂದಲೂ ಅಂದರೆ ಆಂಧ್ರ ಪ್ರದೇಶ, ಗೋವಾ ಮಹಾರಾಷ್ಟ್ರಗಳಲ್ಲಿ ಪ್ರಚಲಿತವಾಗಿರುವ ಮೈಲಾರನ ಸಂಪ್ರದಾಯ ತುಂಬಾ ವಿಶಿಷ್ಟವಾಗಿದೆ.

**ಮೈಲಾರಲಿಂಗನ ಚರಿತಾಮೃತ:–**

ಸಪ್ತ ಋಷಿಗಳ ತಾಣವಾದ ಚಂಪಾಕಲಿ ಸರೋವರದ ಮೇಲೆ ತಪ್ಪಸ್ಸು ಅನುಷ್ಠಾನ ನಡೆಸುತ್ತಿದ್ದರು. ಇಂದಿನ ಬೀದರ ಜಿಲ್ಲೆಯ ಭಾಗಅಂದು ಚಂಪಾಕಲಿ ಸರೋವರ ಎಂದು ಕರೆಯಲಾಗುತ್ತಿತ್ತು.ಇದೇ ಸಮಯದಲ್ಲಿ ಈಗಿನ ರಾಯಚೂರು ಜಿಲ್ಲೆಯ ಆಸು ಪಾಸಿನಲ್ಲಿ ಅಂದು ಬೃಹತ್ ಅರಣ್ಯ ಪ್ರದೇಶವಿತ್ತು. ಅಲ್ಲಿ ಮನಿಸುರ ಮತ್ತು ಮಲ್ಲಾಸುರ ಎಂಬ ರಾಕ್ಷಸರ ಜನ್ಮವಾಗುತ್ತದೆ. ಈ ಅಸುರರು ಮನಿಮಲ್ಯಾ ಎಂಬ ಹೆಸರಿನಿಂದಲೇ ಪುರಾಣಗಳಲ್ಲಿ ಉಲ್ಲೇಖಿತಗೊಂಡಿದೆ. ಈ ಅಸುರರು ಚಂಪಾಕಲಿ ಸರೋವರಕ್ಕೆ ಬಂದು ಅಲ್ಲಿ ತಪ್ಪಸ್ಸಿನಲ್ಲಿರುವ ಋಷಿಗಳಿಗೆ ಹಿಂಸೆ ಕೊಟ್ಟು ಅವರ ಹೋಮ–ಹವನ, ಯಜ್ಞಗಳಿಗೆ ಅಡ್ಡಿಪಡಿಸಿ ಕಪಿಚೆಷ್ಟೇ ಮಾಡಿ ಹಾಳು ಮಾಡುತ್ತಿದ್ದರು. ಇದರಿಂದ ಋಷಿಗಳು ಶಂಕರನನ್ನು ಈಗಿನ ಜ್ಯೋತಿರ್ಲಿಂಗ ಮಂದಿರದಿಂದ ಪ್ರಾರ್ಥಿಸುತ್ತಾರೆ. ಆಗ ಭೈರವರೂಪದ ಅವತಾರ ತಾಳಿದ ಮೈಲಾರಿ ಮನಿಮಲ್ಯಾದೈತ್ಯರನು ಸಂಹರಿಸಲು ಜ್ಯೋತಿರ್ಲಿಂಗ ಸ್ಥಾಪನೆ ಮಾಡಿ ಪೂಜಿಸಿ ಶಿವನ ಆರ್ಶೀವಾದ ಪಡೆದು ಹೊರಡುತ್ತಾನೆ. ಮೈಲಾರಿ ಶಂಕರನ ೧೨ನೇ ಪುತ್ರರಲ್ಲಿ ಓರ್ವ ಅಷ್ಟೇ ಭೈರವರೂಪ ಮೈಲಾರಿ ಮಲ್ಲಾಪುರ ಮತ್ತು ಮನಿಸೂರ ದೈತ್ಯರೊಂದಿಗೆ ಸೆಣಸಾಡಿ ಮನಿಸೂರ ತಮ್ಮನನ್ನು ಕೊಲ್ಲುತ್ತಾನೆ. ಮಲ್ಲಾಸೂರ ಶರಣಾಗುತ್ತಾನೆ. ಮೋಕ್ಷ ಸಾಧನೆಯ ಮಾರ್ಗ ಕಂಡುಕೊಳ್ಳಲು ವರದಾನ ಬೇಡುತ್ತಾನೆ. ಮಲ್ಲಾಸುರನ್ನು ವಧಿಸಿದ ಮೈಲಾರಿಯನ್ನು ಮಲ್ಲ+ಹಾರಿ= ಮಲ್ಲಾರಿ. ಮಲ್ಲಿನ ಅರಿ ಮಲ್ಲಾರಿ ಎಂಬ ಪದದಿಂದ ಉದ್ಭವವಾಗಿದೆ. ಹಾಗೆಯೇ ಮಾರ್ತಂಡ ಭೈರವ ಅವತಾರ ತಾಳಿದನು ಎನ್ನಲಾಗಿದೆ. ಮಹಾರಾಷ್ಟ್ರದಲ್ಲಿ ಖಡ್ಗದಿಂದ ಹಿಡಿದು ಯುದ್ಧ ಮಾಡಿ ದೈತ್ಯರನ್ನು ಸಂಹರಿಸಿದಕ್ಕೆ ಖಂಡೋಬಾ ಎಂದು ಕರೆಯುತ್ತಾರೆ.

ಮೈಲಾರಲಿಂಗನ ಇನ್ನೊಂದು ಹೆಸರೇ ಮಲ್ಲಾರಿ ಈ ಹೆಸರನ್ನೇ ಒಂದು ಕಥೆಯನ್ನು ಹೆಣೆದುಕೊಂಡಿದೆ. ಮಲ್ಲಾರಿ ಮಹಾತ್ಮೆ ಎಂಬ ಸಂಸ್ಕೃತ ಕಾವ್ಯ. ಮಲ್ಲ ಅಥವಾ ಮಲ್ಲಾಸುರ ಎಂಬುವನು ಒಬ್ಬದೈತ್ಯ ಅವನ ಸಂಹಾರಕನೂ ಆದವನೇ ಮಲ್ಲಾರಿ. ಅಸುರರ ನಾಶದ ನಂತರ ಅಲ್ಲಿಯ ಲಿಂಗ ರೂಪದಲ್ಲಿ ನೆಲೆಸುತ್ತಾನೆ. ಮಾರ್ಗ ಶಿರ್ಷ ಮಾಸದ ಶುದ್ಧ ಷಷ್ಠಿ ರವಿವಾರದಂದು ಶತತಾರಾ ನಕ್ಷತ್ರದ ಸಮಯದಲ್ಲಿತನ್ನ ಶಕ್ತಿ ಸ್ವರೂಪಿಯಾದ ಮಾಳಚಿದೇವಿಯೊಂದಿಗೆ ಎರಡು ಲಿಂಗಗಳ ರೂಪದಲ್ಲಿ ಉದ್ಭತನಾದನು. ಈ ವಿಷಯವೇ ಪುರಾಣದ ಶೈಲಿಯಲ್ಲಿ ಬರೆದ ಈ ಮಹಾತ್ಮೆಯಕಥಾವಸ್ತು.

ಮೈಲಾರಲಿಂಗನಿಗೆ ವಿವಿಧ ಹೆಸರುಗಳಿಂದ ಕರೆಯುವ ವಾಡಿಕೆಯಿದೆ.ಖಂಡೋಬಾ, ಮಲ್ಲಣ್ಣ, ಮೈಲಾರ, ಮಲ್ಲರಿ, ಮಾರ್ತಾಂಡ, ಮಲ್ಲಿಕಾರ್ಜುನ, ಮಾಲತೇಶ, ರಾವುತರಾಯ, ಮಲ್ಲಯ್ಯ ಹೀಗೆ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ.

ಕರ್ನಾಟಕದಲ್ಲಿ ಮೈಲಾರಲಿಂಗನಿಗೆ ಮಲ್ಲಣ್ಣ, ಮಲ್ಲಯ್ಯ ಎಂದು ಕರೆದರೆ ಮಹಾರಾಷ್ಟ್ರದಲ್ಲಿ ಖಂಡೊಬಾ ಎಂದು ಕರೆಯುತ್ತಾರೆ. ಕನ್ನಡದಲ್ಲಿ ಖಂಡೊಬಾ, ಖಂಡೆರಾಯ ಎಂದರೆ ಆಯುಧವೆಂದು ಅರ್ಥ ನೀಡುತ್ತದೆ.ಈ ದೇವತೆಯ ಕೈಯಲ್ಲಿ ಖಡ್ಗವೇ ಪ್ರಧಾನವಾಗಿರುವುದುರಿಂದ ಖಂಡೇರಾಯ ಎಂಬ ಹೆಸರು ಪ್ರಸಿದ್ಧ ಪಡೆದುಕೊಂಡಿದೆ. ಮರಾಠಿಯಲ್ಲಿ ಖಂಡಾ ಎಂದರೆ 'ಖಡ್ಗ'ವೆಂದೇ ಅರ್ಥ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟನಲ್ಲಿ ಸಂಸ್ಕೃತ ಖಡ್ಗ ಪ್ರಕೃತ ಖಂಡು ಎಂದು ಹೇಳಿದೆ.

**ಸಂತ ಶರಣರ ದೃಷ್ಟಿಯಲ್ಲಿ ಮೈಲಾರಲಿಂಗ:–**

ಸಂತರು, ಶರಣರು, ಇವರು ಭಗವದ್ಭಕ್ತರು ಎಂದು ಹೇಳುತ್ತಾರೆ. ಇವರು ದೇವನೊಬ್ಬನೆಂದು ಪ್ರತಿಪಾದಿಸಿದವರು. ಆಸರೂ ಅವರವರ ಮಾರ್ಗ ವಿಚಾರಧಾರೆ ಭಿನ್ನ ಭಿನ್ನವಾಗಿದೆ. ಮಹಾರಾಷ್ಟ್ರದಲ್ಲಿ ಸಂತರ ದೃಷ್ಟಿಯಲ್ಲಿ ಮೈಲಾರಲಿಂಗನಿಗೆ ಶಿವನ ಅವತರವಾಗಿದ್ದಾನೆ ಎನ್ನುತ್ತಾರೆ. ಸಮರ್ಥ ರಾಮದಾಸರು ಮೈಲಾರನ ಪರಮ ಭಕ್ತರು ಅವನು ಶಿವನ ಅವತಾರವೆಂದು ಈ ಕೆಳಗಿನ ಪದದಲ್ಲಿ ವರ್ಣಣೆಯನ್ನು ಮಾಡಿದ್ದಾರೆ.

**ದೇವ ಶವಾಚಾ ಅವತಾರ । ಜಾಲೂನಿ ಒಲಸಾ ಗಡಾವರ ॥**
**ಏಕನೀಳ್ಯಾ ಘೋಡ್ಯಾವರ । ಏಕ ಢವಳ್ಯಾ ನಂದೇವರ ॥**
**ಏಕ ವಿಭೊತೀ ಚೇ ತೀಣೆ । ಏಕ ಭಂಡಾರ ಭೊಷಣೆ ॥**
**ರಾಮದಾಸೀ ಏಕ ಜಾಲಾ । ಬೇದ ಭಾವತೋಉಡಾಲಾ ॥**

ಖಂಡೋಬಾ ಶಿವನ ಅವತಾರದವನು, ಇವನು ಗುಡ್ಡದಲ್ಲಿಯೇ ವಾಸವಾಗಿದ್ದಾನೆ. ಮೈಲಾರಲಿಂಗನ ಒಂದೂಂದು ರೂಪವು ಬೇರೆ ಬೇರೆ ರೀತಿಯಲ್ಲಿ ಇವೆ. ಒಂದು ರೂಪ ನೀಲವರ್ಣದ ಆಶ್ವಾರೂಢ ಮತ್ತೊಂದು ರೂಪ ಶ್ವೇತ ವರ್ಣದ ನಂದಿವಾಹನ. ಒಬ್ಬ ಭಸ್ಮಧಾರಿ ಮತ್ತೊಬ್ಬನು ಭಂಡಾರಬೂಷಣ ಇವರಿಬ್ಬರಲ್ಲಿ ಭೇಧಭಾವಗಳನ್ನು ತೊಡೆದು ಹಾಕಿ ರಾಮದಾಸ ಎಂಬುವರು ಇದರ ಭಾವ ಎಂಬುದುರಾ. ಚಿಂ. ಡೇರೆ ಖಂಡೋಬನಲ್ಲಿ ಉಲ್ಲೇಖಿಸಿದಾರೆ. ಕರ್ನಾಟಕದ ಸಂತರಾದ ಶಿಶುನಾಳ ಶರಿಫ ಸಾಹೇಬರು ಮೈಲಾರನನ್ನು ಮಹಾದೇವನೆಂದೂ, ಕೈಲಾಸಪತಿಯೆಂದು ಸ್ತುತಿಗೈಯ್ದಿದ್ದಾರೆ.

**ಮೈಲಾರ ಮಹಾದೇವಾ । ಕೈಲಾಸಪತಿಯೇ**
**ನಯಭಯದಲ್ಲಿ ಮೈ । ಇಕ್ಕುವೆ ಚರಣಕ್ಕೆ**

ಭಕ್ತಗೆ ಪ್ರಧಾನರಾದ ಶರನರು, ಸಂತರು ಮೈಲರಲಿಂಗಮ್ಮೆಲಾರಲಿಮಗನು ಶಿವನೆಂದು ಪೂಜಿಸುತ್ತಾರೆ. ೧೨ನೇ ಶತಮಾನದಲ್ಲಿ ಬಸವಣ್ಣಅಂದರೆ ಶರಣರ ವಚನಗಳಲ್ಲಿ ಕೂಡ ಮೈಲಾರ ಲಿಂಗನನ್ನು ಕಾಣುತ್ತೇವೆ.

**ಬಳ್ಳಿಹ ಮೈಲಾರನವೊಳಗೆಲ್ಲಾ ಸಣಬು**
**ಹೊರಗಣ ಬಣ್ಣಕರಲೇ ಸಾಯಿತ್ತಯ್ಯ**

೧೨ನೇ ಶತಮಾನದಲ್ಲಿ ಬಸವಣ್ಣನ ವಚನಗಳಲ್ಲಿ ನಮಗೆ ತಿಳಿದು ಬರುತ್ತದೆ.ಮೈಲಾರಲಿಂಗನಿಗೆ ಪೂರ್ವದಿಂದಲೂ ಶಿವನೆಂದು ಕರೆಯುತ್ತಾ ಬಂದಿದ್ದಾರೆ.

ಸಂತ ಶರಣರ ದೃಷ್ಟಿಯಲ್ಲಿ ಮೈಲಾರಲಿಂಗನ ಶಿವನ ಅವತಾರ ಪುರುಷ ಎನ್ನುತ್ತಾರೆ. ಜನರಿಗೆ ಅವನಿಗೆ ಶಿವನ ಅವತಾರಗಳಲ್ಲಿ ಇದು ಕೊಡ ಒಂದಾಗಿದೆ ಎಂದು ಭಕ್ತರು

ಮೈಲಾರಲಿಂಗ ದೇವಾಲಯದ ಸುತ್ತ ಹರಿಯುವ ಹಳ್ಳದಲ್ಲಿ ಹಲವು ಚೆಲುಮೆಗಳಿವೆ. ಹಾಗೂ ಅವುಗಳಿಗೆ ಸಂದಿಕುಂಡ, ಗಣಪತಿಕುಂಡ ಪಾಪನಾಸಿನಿ ತೀರ್ಥ ಮುಂತಾದ ಹೆಸರುಗಳಿವೆ ಇಂತಹವು ಒಟ್ಟು ೧೦೮ ಲಿಂಗಗಳಿವೆ ಎಂತಲೇ ಇದನ್ನು ದಕ್ಷಿಣ ಕಾಶಿ ಎನ್ನುವರು. ಮೈಲಾರ ಮಲ್ಲಣ್ಣ ಇಲ್ಲವೆ ಮುರ್ತಾಂಡರ್ ಖಂಡೋಬಾ ಎಂದು ಅನೇಕ ಹೆಸರುಗಳಿಂದ ಕರೆಯುತ್ತಾರೆ. ಬೀದರ ಜೀಲ್ಲೆಯ ಖಾನಾಪುರ ಕ್ಷೇತ್ರದಲ್ಲಿ ಪ್ರಮುಖವಾದ ತೀರ್ಥ ಕ್ಷೇತ್ರಗಳಲ್ಲಿ ಅಂತ್ಯಂತ ಪ್ರಮುಖವಾದ ತೀರ್ಥಗಳು ಎಂದರೆ.

**೧) ಶಕ್ತಿ ತೀರ್ಥ** **೬) ಅಂಬುಧರಂತೀರ್ಥ**
**೨) ಗಾಯಮುಖ** **೭) ರಾಮತೀರ್ಥ**
**೩) ಗುಪ್ತ ಮಲ್ಲೇಶ್ವರಿ** **೮) ಏಕಾದಶಿತಿರ್ಥ**
**೪) ನಂದಿಕುಂಡತೀರ್ತ** **೯) ಶತತೀರ್ಥ**
**೫) ರುದ್ರಕುಂಡ** **೧೦) ಪಾರ್ವತಿತೀರ್ಥ**

ಕರ್ನಾಟಕದಲ್ಲಿ ಹಲವಾರು ಮೈಲಾರಲಿಂಗನ ಕ್ಷೇತ್ರಗಳು ಇವೆ ಆದರೆ ಖಾನಾಪುರ ಮೈಲರಲಿಂಗ ದೇವಸ್ಥಾನದಲ್ಲಿ ಒಂದು ನೂರಾಒಂದು ತೀರ್ಥಕೇತ್ರದಲ್ಲಿ ಹಾಗೂ ಅನೇಕ ಲಿಂಗಗಳು ಇರುವುದನ್ನು ಇಲ್ಲಿ ಕಾಣುತ್ತೇವೆ ಹಿಗಾಗಿ ಇದಕ್ಕೆ ದಕ್ಷಿಣ ಕಾಶಿ ಎಂದು ಹೆಸರು ಬಂದಿದೆ. ಇಲ್ಲಿ ಹರಿಯುವ ಝುರಿಗಳು ಹಾಗೂ ಗಾಯ ಮುಖಗಳಿಂದ ಅತ್ಯಂತ ಪ್ರಸಿದ್ಧಿ ಹೊಂದಿದ ಪುಣ್ಯಕ್ಷೇತ್ರವಾಗಿದೆ. ಇಲ್ಲಿ ಅನೇಕ ಜನ ಭಕ್ತಬಳಗವೂ ಹೊಂದಿದೆ. ಗಂಗಾಧರನು, ಮಹೇಶ್ವರನು ಅದು ಏಳು ಕೊಟಿ ಮಲ್ಲಣ್ಣನ ಭಕ್ತರ ಕೋರಿಕೆಯನ್ನು ಇಡೆರೀಸುತ್ತಾ ಸರ್ವಶಕ್ತನಾಗಿ ನೀಂತಿರುವ ಕಾರಣ ದಕ್ಷಿಣದವರಿಗೆ ಇದು ಕಾಶಿಯಾಗಿ ಪರಿಣಮಿಸಿದೆ.

**ಆಧಾರ ಗ್ರಂಥಗಳು.**

೧. ಬೀದರ ಜಿಲ್ಲಾ ದರ್ಶನ.
೨. ದಕ್ಷಣ ಕಾಶಿ ಮೈಲಾರ; ಕೃಷ್ಣಮೂರ್ತಿ.
೩. ಶ್ರೀ ಮೈಲಾರ ಮಹಾತ್ಮೆ; ಕೃಷ್ಣಾಜಿ ಶ್ರೀಪಾದರಾವ.
೪. ಸಾಂಸ್ಕೃತಿಕ ಪದಕೋಶ; ಬೇವಿನಕಟ್ಟಿ ಮಂಜುನಾಥ.
೫. ದ್ವಾದಶ ಖಂಢೋಬಾ; ಕಾಂತಿಲಾಲ ರಾಜಕುಮಾರ.



# ಕಲ್ಯಾಣ ಕರ್ನಾಟಕದ ಪ್ರಮುಖ ಜಾತ್ರೆಗಳ ಚರಿತ್ರೆ ಮತ್ತು ಪರಂಪರೆ.

**–ಡಾ. ಕಾಶಿನಾಥ ಡಿ.**
ಅತಿಥಿ–ಉಪನ್ಯಾಸಕರು, ದೃಶ್ಯಕಲಾ ಅಧ್ಯಯನ ವಿಭಾಗ,
ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ.

ಜನಪದರಲ್ಲಿ ದೈವಿಕಲ್ಪನೆ ಅಗಾಧವಾದುದು. ಕಲ್ಲು, ಗಿಡ, ಮರ, ಹೊಳೆ, ಭೂಮಿ, ಸೂರ್ಯ, ಚಂದ್ರ, ಶಿವ, ಗಣಪತಿ, ಬೆಂಕಿ, ಬಸವ... ಇತ್ಯಾದಿಗಳನ್ನು ಪೂಜ್ಯತೆಯಿಂದ ಆರಾಧಿಸಿಕೊಂಡು ಬಂದಿರುವರು ನಮ್ಮ ಜನಪದರು. 'ಜನಪದ' ಎಂದರೆ ಇಡೀ ಜನ ಸಮುದಾಯವಾಗಿದೆ. ಮನುಷ್ಯನ ನಾಗರಕತೆ ಬೆಳವಣಿಗೆಯ ದಿನದಿಂದಲೇ ಜನಪದ ಸಂಸ್ಕೃತಿ ಬೆಳವಣಿಗೆಯ ಬೆಳಕು ಕಾಣುತ್ತಿದೆ. ಹಾಗೆಯೇ 'ಸಂಸ್ಕೃತಿ' ಎಂದಾಗ ಎಲ್ಲಾ ಗುಣಗಳು ಅದರಲ್ಲಿ ಸೇರ್ಪಡೆಗೊಳ್ಳುತ್ತವೆ. ಸಂಸ್ಕೃತಿಯಲ್ಲಿ 'ಜಾತ್ರೆಗಳು' ಪ್ರಮುಖ ಭಾಗವಾಗಿ ಸೇರಿಕೊಂಡಿವೆ. ಜನಪದರ ಅಂಗಳದಲ್ಲಿ ಜರುಗುವ ಜಾತ್ರೆಗಳು ಹತ್ತು ಹಲವು ವೈಶಿಷ್ಟ್ಯಗಳಿಂದ ಕೂಡಿವೆ. ಜಾತ್ರೆಗಳು ಮೊದಲು ಧಾರ್ಮಿಕ ಆಚರಣೆಗಳ ಹಿನ್ನೆಲೆಯಲ್ಲಿ ನಡೆದು ನಂತರ ಜನಸಮ್ಮುಖವನ್ನ ಪಡೆದುಕೊಂಡವು. ಜನಪದ ಜಾತ್ರೆಗಳು, ಭಯ, ಭಕ್ತಿ, ಸಡಗರ, ಸಂಭ್ರಮದ ಸಂಕೇತವಾಗಿ ಹುಟ್ಟಿಕೊಂಡು ಧಾರ್ಮಿಕ ಸಂಪ್ರದಾಯ ಆಚರಣೆಯ ಪರಂಪರೆಯಾಗಿ ಬೆಳೆದು ತಮ್ಮ ವಿಶಿಷ್ಟತೆಯನ್ನು, ಅನನ್ಯ ಸಂಸ್ಕೃತಿಯನ್ನು ಬಿಚ್ಚಿಡುವ ಕೇಂದ್ರಗಳಾಗಿವೆ.

**ಜಾತ್ರೆಯ ಉದ್ದೇಶ.**

"ಜಾತ್ರೆಯ ಸಮಷ್ಟಿಯ ಸಂಪತ್ತು, ಕ್ಷೇಮಾಭಿವೃದ್ಧಿಗಾಗಿ, ಒಂದು ನಿಗದಿತ ಅವಧಿಯಲ್ಲಿ ಒಂದು ದೇವತೆ ಇಲ್ಲವೆ ಮಹಾಪುರುಷರ ಹೆಸರಿನಲ್ಲಿ ಧಾರ್ಮಿಕ ಕ್ಷೇತ್ರವೊಂದರಲ್ಲಿ ಸಾಮೂಹಿಕವಾಗಿ ಆಚರಿಸುವ ಧಾರ್ಮಿಕ ವಿಧಿಯಾಗಿ ಇಂದು ರೂಢಿಯಲ್ಲಿದೆ" ಎಂಬ ಡಾ. ಎನ್.ಆರ್. ನಾಯಕ ಹೇಳಿಕೆ ನಿಜವಾಗಿದೆ. ಇದು ಹಲವು ರೂಢಿ, ಸಂಪ್ರದಾಯಗಳನ್ನು ಅನೇಕ ಜಾನಪದ ಅಂಶಗಳನ್ನು ತನ್ನಲ್ಲಿ ಗರ್ಭಿಕರಿಸಿಕೊಂಡು ಒಂದು ಸಂಕೀರ್ಣ ಸಮುಚ್ಚಯವಾಗಿದೆ. ಜಾತ್ರೆಯ ಮೂಲ ಉದ್ದೇಶ ಸಮುಷ್ಟಿಯ ಹಿತ, ಚತುರ್ವಿಧ ಪುರುಷಾರ್ಥದೆಡೆಗೆ ಸಾಮಾಜಿಕ ಮನಸ್ಸು ಅಭಿಮುಖವಾಗುವಂತೆ ಮಾಡುವ ಹವಣಿಕೆ ಜಾತ್ರೆಯಲ್ಲಿ ಹುದುಗಿದೆ. ಅನಾಧಿ ಕಾಲದಿಂದಲೂ ಮಾನವನ ಲೌಕಿಕ ಹಾಗೂ ಧಾರ್ಮಿಕ ಬದುಕಿನಲ್ಲಿ ಒಂದು ಬಗೆಯ ಸಾಮರಸ್ಯವಿದೆ. ಈ ಸಾಮರಸ್ಯ ಜಾತ್ರೆಯಲ್ಲಿದೆ. ಜಾತ್ರೆಯಿಂದ ಸಾಮಾನ್ಯ ಜನರ ಮನಸ್ಸು ಧಾರ್ಮಿಕತೆಯ ಪನ್ನೀರಿನಲ್ಲಿ ಮಿಂದು, ಲೌಕಿಕ ಸುಖ, ಸಂತೋಷವುಂಡು ನಿರಂತರ ದುಡಿಮೆಯ ದಣಿವಿನಿಂದ ಅಲ್ಪವಿರಾಮ ಪಡೆಯುತ್ತದೆ. ಅವರ ಮನಸ್ಸು ಹಸನಾಗಿ, ರಸಾರ್ದ್ರವಾಗಿ ಸಂಯಮ ಶಕ್ತಿಯನ್ನ ಹೆಚ್ಚಿಸಿ ವಿವೇಕಯುತವಾಗಿ ಬದುಕಲು ನಾಂದಿಯಾಡುತ್ತದೆ. ಜಾತ್ರೆಗಳಲ್ಲಿ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಸಂಘಟನೆ ಕಂಡು ಬರುತ್ತದೆ.

ಧಾರ್ಮಿಕ ಜಾತ್ರೆಗಳ ಪ್ರಧಾನ ಅಂಶ ನಮ್ಮ ಧಾರ್ಮಿಕ ಜಿವನವನ್ನ ರೂಪಿಸುವಲ್ಲಿ ಪೋಷಿಸಿ ಪಾಲಿಸುವಲ್ಲಿ ಜಾತ್ರೆಗಳ ಪಾತ್ರ ಹಿರಿದಾಗಿದೆ ಬದುಕಿನಲ್ಲಿ ವಸಿ ಅನಾಹುತ ನಡೆದರೂ ಅದರ ಪರಿಹಾರವು ಇಷ್ಟ ದೇವತೆಯನ್ನು ನಂಬಿ ಶರಣಾಗುವುದರಿಂದ ಮಾತ್ರ ಸಾಧ್ಯವೆಂಬ ನಂಬಿಕೆ ಜನ ಸಾಮಾನ್ಯರದು. ಈ ನೆಲೆಯಲ್ಲಿ ಜಾತ್ರೆಗಳು ಅಂತವರಿಗೆ ಪ್ರಧಾನ ವೇದಿಕೆಯಾಗಿದೆ.

**ಸಾಮಾಜಿಕ ಮುಖ.**

ಜಾತ್ರೆಗಳಲ್ಲಿ ಅಸ್ಪೃಶ್ಯನಿಂದ ಮೊದಲು ಮಾಡಿ, ಬ್ರಾಹ್ಮಣನವರೆಗೂ ತಾರತಮ್ಯ ಭಾವವಿಲ್ಲದೆ ಸರ್ವರೂ ಬೆರೆತು, ಜಾತ್ರೆಯ ಸುಖವನ್ನ ಅನುಭವಿಸುತ್ತಾರೆ. ಜಾತ್ರೆಯಲ್ಲಿ ತೇರನ್ನು ಎಳೆಯುವುದು, ಪಾನಕ ಸೇವೆ, ಅನ್ನ ಸಂತರ್ಪಣೆ... ಮುಂತಾದವುಗಳು ಸಮೂಹ ಬದುಕನ್ನು ಬಲಗೊಳಸುತ್ತವೆ.

ರಾಷ್ಟ್ರೀಯ ಭಾವೈಕ್ಯತೆಯೆಡೆಗೆ ಸಮಾಜ, ಜನರನ್ನ ಕೊಂಡೊಯ್ಯುತ್ತದೆ. ಜನರ ಬದುಕಿನ ಜಡತೆಯನ್ನು ಹೋಗಲಾಡಿಸಿ, ಅವರಲ್ಲಿ ಚೈತನ್ಯವನ್ನ ತುಂಬಿ ಕ್ರಿಯಾಶೀಲರನ್ನಾಗಿಸುತ್ತದೆ.

**ಕಲೆಗಳ ಅನಾವರಣ.**

ಜಾತ್ರೆಗಳು ಹಳ್ಳಿಗರ ಕಲಾಭಿಜ್ಞತೆ ಹಾಗೂ ಕಲಾ ರಸಿಕತೆಗಳನ್ನು ಕನ್ನಡಿಸುತ್ತವೆ. ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತ ಅನೇಕ ಮನೋರಂಜಕ ಹಾಗೂ ಪ್ರಾಯೋಜಕ ಕಲೆಗಳಿಗೆ ಜಾತ್ರೆಗಳು ಆಶ್ರಯ ಸ್ಥಾನಗಳಾಗಿವೆ ಧಾರ್ಮಿಕ ಸ್ವರೂಪದ ಜಾತ್ರೆಗಳಿಗೆ ಸಾಂಸ್ಕೃತಿಕ ಪಕ್ಕ ಮೂಡುವುದು ಕಲೆಗಳ ಅನಾವರಣದಿಂದಲೆ! ಜಾತ್ರೆಗಳು ಕಲಾವಿದರಿಗೆ ಕಲಾ ಪ್ರದರ್ಶನಕ್ಕೆ ಅವಕಾಶ ಕಲ್ಪಿಸಿ ಕೊಡುವುದರ ಜೊತೆಗೆ, ಅವರ ಉಪಜೀವನಕ್ಕೆ ಮಾರ್ಗದರ್ಶಿಗಳೂ ಆಗಿವೆ. ಕಲಾ ಪ್ರದರ್ಶನದಿಂದ ಬಂದ ಆದಾಯದಿಂದ ಕಲಾವಿದ ಜೀವನ ಸುಗಮವಾಗಿ ಸಾಗಲು ಅನುಕೂಲ ಆಗುತ್ತದೆ. ಜಾತ್ರೆಯ ಉತ್ಸವ ಮೂರ್ತಿಗಳ ತಯಾರಿಕೆ, ತೇರಿನ ಸೊಗಸಾದ ಕಟ್ಟುಣ, ಭೂತದೈವಗಳ ಅಲಂಕಾರ, ಅವುಗಳಿಗಾಗಿ ತಯಾರಿಸಿದ ಅಣಿಗಳು, ಜಾತ್ರೆಯಲ್ಲಿ ಮಾರಾಟಕ್ಕೆ ಇಟ್ಟಿರುವ ಕುಶಲ ಕೈಗಾರಿಕೆಯ ವಸ್ತು, ಒಡವೆಗಳು ಜಾನಪದರ ಉನ್ನತ ಮಟ್ಟದ ಕಲೆಗಾರಿಕೆಗೆ ನಿದರ್ಶನಗಳಾಗಿ ನಿಲ್ಲುತ್ತವೆ.

ಜನಪದರಿಗೆ ಜಾತ್ರೆ ಬಹು ಉಪಯೋಗಿ ಸಂಸ್ಥೆಯಾಗಿದ್ದು, ಅದನ್ನೆ ನಾವು ಅಂದಿನಿಂದ ಇಂದಿನವರೆಗೆ ಹಲವು ವಿಧವಾಗಿ ದುಡಿಸಿಕೊಂಡಿದ್ದೇವೆ. "ಜಾತ್ರೆಗಳು ನಿರ್ದಿಷ್ಠ ಪುರಾಣಗಳ ಪುನರಭಿನಯ ರೂಪಗಳು ಈ ಪುನರಭಿನಯ ತನ್ನೊಳಗಿನ ಜಾನಪದೀಯ ಮೂಲ ದ್ರವ್ಯವಾದ ನಂಬಿಕೆಯನ್ನ ಉಳಿಸಿಕೊಂಡು ಬದುಕಿನ ಸ್ಥಿತಿಗತಿಗನುಗುಣವಾಗಿ ರೂಪ ಪುನರ್ ರೂಪಗಳನ್ನು ಪಡೆಯುತ್ತ ನಡೆಯುತ್ತದೆ" ಎಂಬ ಎಸ್.ಜಿ. ಸಿದ್ಧರಾಮಯ್ಯರವರ ಮಾತು ಇಲ್ಲಿ ಉಲ್ಲೇಖನಿಯ!

"ಜನ ಪ್ರಾಚೀನ ಕಾಲದಿಂದಲೂ ನಂಬಿಕೊಂಡು ಬಂದಿದ್ದ ದೇವ-ದೇವತೆಗಳನ್ನು (ಗ್ರಾಮೀಣ ಹಾಗೂ ಶಿಷ್ಟ) ಭಯ ಭಕ್ತಿಯಿಂದ ಸಾಮೂಹಿಕವಾಗಿ ಪೂಜಿಸಿ, ಪ್ರಾರ್ಥಿಸುವ, ಸಂಭ್ರಮದ ಜನ ಸಮೂಹವೇ 'ಜಾತ್ರೆ' ಎಂದನಿಸಿದೆ" ಎನ್ನುತ್ತಾರೆ. ಡಾ. ಎಮ್.ಎಸ್. ಲಠ್ಠೆಯವರು ಸಮಾಜದೊಂದಿಗೆ ಬಂದಾಗ ಬದುಕು ಸಾಗಿಸುತ್ತ ಬಂದಿರುವ ಮಾನವನ ವೈಯಕ್ತಿಕ ಮತ್ತು ಸಾಂಗಿಕ ಜೀವನದ ಹಿತ ರಕ್ಷಣೆಗಾಗಿಯೂ, ಮೂಲ ಪ್ರಾಣಿಗಳ ಸುಖಕ್ಕಾಗಿಯೂ ರೋಗ-ರುಜಿನಗಳು ಬಾರದಂತೆ, ಮಳೆ-ಬೆಳೆ ಸರಿಯಾಗಿ ಬರುವಂತೆ ಪ್ರಾರ್ಥಿಸುವ ಧ್ಯೇಯ ಈ ಜಾತ್ರೆಗಳದ್ದು!

ಜಾತ್ರೆಗಳು ಎಲ್ಲ ದೇಶ-ಜನಾಂಗದವರಲ್ಲೂ ನಡೆದುಕೊಂಡು ಬರುತ್ತಿವೆ. ಕಲ್ಯಾಣ ಕರ್ನಾಟಕದ ಜಾತ್ರೆಗಳು ತಮ್ಮದೆಯಾದ ಪ್ರದೇಶಿಕ ವೈಶಿಷ್ಟ್ಯದಿಂದ ಕೂಡಿರುತ್ತವೆ. ಬಳ್ಳಾರಿ, ವಿಜಯನಗರ, ಕೊಪ್ಪಳ, ರಾಯಚೂರು, ಯಾದಗಿರಿ, ಕಲಬುರಗಿ ಮತ್ತು ಬೀದರ ಈ ಜಿಲ್ಲೆಗಳಿಂದ ಕೂಡಿದ ಕಲ್ಯಾಣ ಕರ್ನಾಟಕದ ಈ ಪ್ರದೇಶ ಬಯಲು ಸೀಮೆಯೆನಿಸಿದೆ. ಈ ಪ್ರದೇಶದ ಜನರ ಊಟ, ಉಡಿಗೆ-ತೊಡುಗೆ, ಆಚಾರ-ವಿಚಾರ, ಉದ್ಯೋಗ-ವ್ಯವಸಾಯ... ಮೊದಲಾದ ಜೀವನ ಕ್ರಮ ಹೆಚ್ಚು ಕಡಿಮೆ ಒಂದೇಯಾಗಿರುತ್ತದೆ. ಉಳಿದೆಡೆಗಳಂತೆ ಇಲ್ಲಿಯೂ ಗ್ರಾಮೀಣ ದೇವತೆಗಳ ಹಾಗೂ ಶಿಷ್ಠ ದೇವತೆಗಳ ಪೂಜೆ-ಪ್ರರ್ಥನೆ, ಜಾತ್ರೆಗಳು ನಡೆಯುತ್ತಲಿವೆ. ಈ ಜಾತ್ರೆಗಳಲ್ಲಿ ಪ್ರಮುಖವಾಗಿ ಗುಡಿ ಜಾತ್ರೆ-ಮಠದ ಜಾತ್ರೆ ಎಂದು ವಿಂಗಡಿಸಬಹುದು.

**ಗುಡಿ ಜಾತ್ರೆಗಳು.**

ತಾವು ನಂಬಿಕೊಂಡು ಬಂದಿದ್ದ ದೇವ-ದೇವತೆಗಳ ಹೆಸರಿನಲ್ಲಿ ಗುಡಿ ಗುಂಡಾರಗಳನ್ನು ಕಟ್ಟಿಸಿ ವರುಷಕೊಮ್ಮೆ ಇಲ್ಲವೆ ತಮಗೆ ಅನುಕೂಲವಾದಾಗ ಜಾತ್ರೆ ನೆರವೇರಿಸುವರು. ಮಳೆ ಹತ್ತಿದಾಗ, ಸುಗ್ಗಿ ಕಾಲದಲ್ಲಿ ಹೊರತುಪಡಿಸಿ ಉಳಿದ ಅವಧಿಯಲ್ಲಿ ಗುಡಿ ಜಾತ್ರೆಗಳನ್ನ ನೆರವೇರಿಸುವರು. ದೇವ-ದೇವತೆಗಳನ್ನ ಕೂಡಿಸಿ

ಜಾತ್ರೆ ಮಾಡುವ ಪರಿಪಾಠವಿದೆ ಪ್ರಭಾವಿ ದೇವರುಗಳ ಜಾತ್ರೆಗಳು, ಹಣ ಹೆಚ್ಚು ಸಂದಾಯವಾಗುತ್ತ ಬಂದಿರುವುದರಿಂದ, ತೇರಿನ ಜಾತ್ರೆಗಳಾಗಿಯೂ ಜರುಗುತ್ತ ಬಂದಿವೆ. ನಮ್ಮ ಕಲ್ಯಾಣ ಕರ್ನಾಟಕದಲ್ಲಿ ಹೆಣ್ಣು ದೇವರ ಜಾತ್ರೆಗಳೆ ಹೆಚ್ಚು! ಕಲ್ಯಾಣ ಕರ್ನಾಟಕದ ಪ್ರಮುಖ ಜಾತ್ರೆಗಳನ್ನು ಇಲ್ಲಿ ಹೆಸರಿಸಬಹುದು. (ಪ್ರತಿನಿಧಿಕವಾಗಿ...)

೦೧. ನಾಗಾವಿ ಯಲ್ಲಮ್ಮ
೦೨. ಚುಂಚುರು ಮಾಪುರತಾಯಿ
೦೩. ಘತ್ತರಗಿ ಭಾಗಮ್ಮ
೦೪. ಚಿಣಮಗೇರಿ ಕಾಳಮ್ಮ
೦೫. ಸಂತಿ ಚೆನ್ನಮ್ಮ
೦೬. ಜೇವರ್ಗಿ ಲಕ್ಷ್ಮೀ
೦೭. ಶಿರಸಂಗಿ ಕಾಳಮ್ಮ
೦೮. ದಂಡಗುಂಡ ಬಸವಣ್ಣ
೦೯. ಕಲಬುರಗಿಯ ಶರಣಬಸವೇಶ್ವರ
೧೦. ಹಲಕಟ್ಟಿ ವೀರಭದ್ರ
೧೧. ಹುಮನಬಾದ ವೀರಭದ್ರ
೧೨. ಗಾಣಗಪುರ ದತ್ತಾತ್ರೇಯ
೧೩. ಮೈಲಾಪುರ ಮೈಲಾರಲಿಂಗ
೧೪. ಸೂಗೂರ ಸೂಗುರೇಶ್ವರ
೧೫. ಬೀದರ ಪಾಪನಾಶಿ.....

ಈ ಜಾತ್ರೆಗಳ ಸಂದರ್ಭದಲ್ಲಿ ಆ ದೇವರ ಗುಡಿಗಳನ್ನು ಸ್ವಚ್ಛಗೊಳಸಿ, ಸುಣ್ಣ–ಬಣ್ಣದಿಂದ ಅಲಂಕರಿಸಿ, ದೇವರಿಗೆ ಹೊಬಟ್ಟೆ ತೊಡಿಸಿ, ಆಭರಣ ಹಾಕಿ, ತರತರದ ನೈವೇದ್ಯ ಅರ್ಪಿಸಿ ಸಂತೋಷ ಪಡುತ್ತಾರೆ. ವೈಯಕ್ತಿಕ ಹರಕೆಗಳ ಜೊತೆಗೆ ಸಾಮಾಹಿಕವಾಗಿ ಹರಕೆಗಳನ್ನ ತೀರಿಸುವ ಸಂಪ್ರದಾಯವನ್ನು ಗಮನಿಸಬಹುದು ಈ ಜಾತ್ರೆಗಳಲ್ಲಿ ಖಾಂಡ, ಪ್ರಸಾದದಂತಹ ಅನ್ನದಾಸೋಹದ ಕಾರ್ಯಕ್ರಮಗಳೂ ಜರುತ್ತವೆ. ಅಗ್ಗಿಯ ಕುಣಿತ, ಪುರವಂತರ ಕುಣಿತ, ಶಸ್ತ್ರ ಹಾಕುವುದು, ತೇರು ಜಗ್ಗುವುದು..... ಮೊದಲಾದ ವಿಧಾಯಕ ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಿದ್ದಾರೆ.

**ಮಠದ ಜಾತ್ರೆಗಳು.**

ಮಠದ ಶಿವಯೋಗಿಗಳ ಇಲ್ಲವೆ ಶರಣರ ನಂತರ ಅಂದರೆ ಅವರವರ ಮತಧರ್ಮಕ್ಕೆ ಸಂಬಂಧಿಸಿದ ಸಂತರು ಮಹಾತ್ಮರ, ಶಿವಯೋಗಿಗಳ ಸ್ಮರಣಾರ್ಥವಾಗಿ ನಡೆಯುತ್ತ ಬಂದಿರುವ ಜಾತ್ರೆಗಳೇ ಮಠದ ಜಾತ್ರೆಗಳು. ಜನತೆಗೆ ಒಳ್ಳೆಯದರ ತಿಳುವಳಿಕೆ ಮೂಡಿಸಿ, ಅಂಧಶ್ರದ್ಧೆಯನ್ನ ಹೊಡಿದು ಹಾಕಿ ಸುಜ್ಞಾನಿಗಳನ್ನಾಗಿ ಮಾಡಿದ ಮಹಾತ್ಮರ ಮರಣ ನಂತರ ಅವರ ಪುಣ್ಯತಿಥಿಯಂದು ಜಾತ್ರೆಗಳನ್ನು ಆಚರಿಸುತ್ತಾ ಬಂದಿದ್ದಾರೆ. ಆ ಪುಣ್ಯತಿಥಿಯ ದಿನ ವರುಷಕ್ಕೊಮ್ಮೆ ಪಲ್ಲಕ್ಕಿ ಇಲ್ಲವೆ ತೇರಿನಲ್ಲಿ ನಡೆಯುತ್ತದೆ. ಅರಿವಿನ ಆಗರಕ್ಕೆಂದು ಮಠಗಳ ಸ್ಥಾಪನೆಯಾಗಿದ್ದರೂ ಅವು ಬರುಬರುತ್ತ ಸಂಪ್ರದಾಯಕ್ಕೆ ಜೋತು ಬಿದ್ದಿರುವುದು ದುರಂತ. ಆದಾಗ್ಯೂ ಕೆಲವೊಂದು ಮಠಗಳು ಅನ್ನದಾಸೋಹದ ಜೊತೆಗೆ ಜ್ಞಾನದಾಸೋಹದ ಕಾರ್ಯಕ್ರಮಗಳನ್ನ ಹಮ್ಮಿಕೊಂಡು ಜನಜಾಗೃತಿ ಮಾಡುತ್ತ ಬಂದಿವೆ. ಹಿಂದೂ, ಮುಸಲ್ಮಾನ, ಸಿಖ್, ಕ್ರೈಸ್ತ–ಯಾವುದೇ ಮತ ಪಂಥದವರಿರಲಿ ತಮ್ಮ ತಮ್ಮ ಮತಧರ್ಮದ ಮಹಾತ್ಮರ–ಸಂತರ–ಶಿವಯೋಗಿಗಳ–ಶರಣರ ಪುಣ್ಯತಿಥ ಆಚರಿಸುತ್ತ ಬಂದಿದ್ದಾರೆ.

ಕಲ್ಯಾಣ ಕರ್ನಾಟಕದಲ್ಲಿ ಹಲವಾರು ಮತ, ಪಂಥದ ಜನರು ವಾಸವಾಗಿದ್ದಾರೆ. ಆಯಾ ಸಂತರ ಮಂದಿರಗಳಿಗೆ ಮಠಗಳಿಗೆ ಇಲ್ಲಿ ಸಾರ್ವಜನಿಕ ಮನ್ನಣೆಯಿದೆ. ಸಮಷ್ಠ ಪ್ರಜ್ಞೆ, ಅವು ಎಲ್ಲರ ಸೊತ್ತು ಎನ್ನುವ ಅಭಿಮಾನ. ವೈಷ್ಣವ ಸಂತರ ಜಾತ್ರೆಗಳನ್ನು ಉತ್ಸವ, ಆರಾಧನೆ ಎಂದು ಕರೆದರೆ, ಮುಸಲ್ಮಾನ ಸಂತರ ಜಾತ್ರೆಗಳನ್ನು 'ಉರುಸ್' ಎಂದು ಕರೆಯುತ್ತಾರೆ. ಅವುಗಳಲ್ಲಿ ಕೆಲವೊಂದನ್ನು ಇಲ್ಲಿ ದಾಖಲಿಸಿಬಹುದು.

೧. ಬೀದರ ಖಾಜಾಯಿ ನಲ್ಲಾ
೨. ರಾಯಚೂರ ಶಮ್ ಸಾಲಮ್ ಹುಸೇನಿ
೩. ಗುಲಬರ್ಗಾದ ಬಂದೇ ನವಾಜ್
೪. ಚಿತ್ತಾಪೂರ ಚಿತಾವಲಿ
೫. ಆಳಂದ ಶೇಖ ಮಹಮದ್...

ವೀರಶೈವ ಮಠದ ಶಿವಯೋಗಿಗಳ ಮಠದ ಜಾತ್ರೆಗಳೇ ಅಧಿಕವಾಗಿವೆ ಇಲ್ಲಿ. ಜಾತ್ರೆಗಳಲ್ಲಿ ದೇವರ ಮೆರವಣಿಗೆಗೆ ಮೊದಲ ಆದ್ಯತೆ. ತೇರಿಗೆ 'ರಥ' ಎಂದು ಕರೆಯುವರು ಪಲ್ಲಕಿಯನ್ನು ಹೆಗಲ ಮೇಲೆ ಹೊರುವರು. ರಥಕ್ಕೆ ಗಾಲಿಗಳಿರುವದರಿಂದ ಭಾಗವಾಗದ್ದ ಅದನ್ನು ಹಗ್ಗಗಳಿಂದ ನೂರಾರು ಜನ ಸೇರಿ ಎಳೆಯುವರು. ತೇರು, ರಥ ಆಧ್ಯಾತ್ಮಕ ಸಂಕೇತವಾಗಿದೆ. ತೇರು ದೇಹದ ಪ್ರತೀಕ ಸ್ಥೂಲ, ಸೂಕ್ಷ್ಮ,ಕಾರಣ ಶರೀರಗಳಿಂದ ಕೂಡಿದ ದೇಹದಂತಿರುವ ಈ ತೇರಿಗೂ ಮೂರು ಭಾಗ, ಕೆಲವು ಕಡೆಗೆ ಷಟಸ್ಥಲಗಳಿಗೆ ಸಂಕೇತವಾಗಿ ಆರು ಭಾಗಗಳು ಕಟ್ಟಿಗೆಯಿಂದ ಇದನ್ನು ವರುಷ ವರುಷಕ್ಕೆ ರಚಿಸುತ್ತಾರೆ. ಕೆಲ ಕಡೆಗೆ ಬಹಳ ವರುಷಗಳವರೆಗೂ ಉಪಯೋಗಿಸುವರು. ತೇರಿನ ತುದಿಗೆ ಕಳಸ ಹೊಳೆಯುತ್ತದೆ. ಅಲ್ಲಿಂದ ಗಾಲಿಗಳ ಮಧ್ಯದಲ್ಲಿ ಹಲವಾರು ಚಟ್ಟುಗಳಲ್ಲಿ ಸಿದ್ಧಗೊಳಿಸದ ರಥದಲ್ಲಿ ಕೆತ್ತನೆಯ ಕೆಲಸವಿರುತ್ತದೆ. ಕಾಮ ಭಾವನೆಯನ್ನು ಕಳೆದುಕೊಂಡು ಒಳಗೆ ದೇವರ ದರ್ಶನ ಪಡೆಯಬೇಕು ಎನ್ನುದನ್ನು ಪ್ರತಿನಿಧಿಸುತ್ತದೆ. ಇಹಲೋಕದಿಂದ ಪರಲೋಕಕ್ಕೆ ಸೇರುವ ಪ್ರತೀಕವೇ ಈ ರಥ, ಕೆಲವು ಮಠದ ಜಾತ್ರೆಗಳು...

೦೧. ಕೊಪ್ಪಳದ ಗವಿಸಿದ್ದೇಶ್ವರ
೦೨. ಮುಗಳನಾಗಾಯಿ ಸಿದ್ಧಲಿಂಗೇಶ್ವರ
೦೩. ಸೊನ್ನ ಶಿವಯೋಗಿ
೦೪. ಆಂದೋಲದ ಕರಣೇಶ್ವರ
೦೫. ಬಬಲಾದಿ ಮುತ್ತ್ಯ
೦೬. ಸಾವಳಗಿ ಶಿವಲಿಂಗೇಶ್ವರ
೦೭. ರಾವೂರ ಸಿದ್ಧಲಿಂಗೇಶ್ವರ
೦೮. ಬಸವಕಲ್ಯಾಣ ಬಸವಣ್ಣ
೦೯. ತಾಳಿಕೋಟೆ ಬಸವೇಶ್ವರ
೧೦. ಮಳಖೇಡ ಜೀತಾಚಾರ್ಯರು...

ಇತ್ತೀಚಿನ ಮಠದ–ಗುಡಿಯ ಯಾವುದೇ ಜಾತ್ರೆಯಿರಲಿ ಅಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತ ಬರುತ್ತಿದ್ದಾರೆ. ಅರ್ಚನೆ–ಅರ್ಪಣೆ, ದರ್ಶನ–ಆಶೀರ್ವಾದಗಳೊಂದಿಗೆ ಉಪದೇಶಪರ ನುಡಿಗಳನ್ನು ಕೇಳುವ ಅವಕಾಶ ಕಲ್ಪಿಸಿಕೊಡುತ್ತಿರುವುದು ಪ್ರಸ್ತುತವಾದುದು. ಜನಪದ ಬದುಕಿಗೂ ಜಾತ್ರೆಗೂ ಇರುವ ಸಂಬಂಧದ ಮಹತ್ವದ ಕೊಂಡಿ ಎಂದರೆ ಜನಪದರ ಶ್ರದ್ಧೆ, ಧರ್ಮ ಅದಕ್ಕೆ ಸಂಬಂಧಿಸಿದ ಹಬ್ಬಗಳು. ಜಾತ್ರೆ ನೆರವೇರದ ಯಾವ ಗ್ರಾಮವೂ ಇಲ್ಲ. ಇಂದಿನ ಮಿಶ್ರ ಸಂಸ್ಕೃತಿಯಲ್ಲಿಯೂ ನಗರಗಳಲ್ಲಿಯೂ ಜಾತ್ರೆಗಳು ನಡೆಯುತ್ತಿವೆ.

**ಆಕರಗಳು.**

೧) ಸಿದ್ಧಲಿಂಗಯ್ಯ, ಗ್ರಾಮ ದೇವತೆಗಳು, ಅಂಕಿತ ಪುಸ್ತಕ ಪ್ರಕಾಶಕರು, ಬೆಂಗಳೂರು, ೧೯೯೭.
೨) ಚಿ.ಸಿ. ನಿಂಗಣ್ಣಾ, ಜಾತ್ರೆಗಳು, ರೇಣುಕಾ ಪ್ರಕಾಶನ, ಕಲಬುರಗಿ, ೨೦೦೩.



# ಕಲ್ಯಾಣ ಕರ್ನಾಟಕದ ಚಿತ್ರ ಕಲಾವಿದರ ಪರಂಪರೆ : ವಿಠ್ಠಲ ಬಂಕೂರಕರ್.

–ಡಾ. ಕಾಶಿನಾಥ ಡಿ.
ಅತಿಥಿ–ಉಪನ್ಯಾಸಕರು, ದೃಶ್ಯಕಲಾ ಅಧ್ಯಯನ ವಿಭಾಗ,
ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ.

ವಿಠ್ಠಲ್ ಬಂಕೂರಕರ್ ಯಾರು? ಅವರ ಚಿತ್ರಗಳೆಂಥವು? ಅವರ ಸಾಧನೆ ಏನು? ಅವರ ಕಲಾ ಶಿಕ್ಷಕ ವೃತ್ತಿ ಹೇಗಿತ್ತು? ಇದು ಗುಲಬರ್ಗಾದ ಜನರಿಗೆನೇ ಗೊತ್ತಿಲ್ಲದಿರುವುದು ವಿಷಾದನೀಯ.

ಬಂಕೂರಕರ್ ಎಲೆಮರೆಯ ಹೂವಿನಂತಿದ್ದರು. ಪ್ರತಿಭೆ ಇದ್ದರೂ ಇಲ್ಲದಂತಿದ್ದರು, ಅಸಮಾನ್ಯ ವ್ಯಕ್ತಿತ್ವ ಹೊಂದಿದ್ದರೂ ಸಾಮಾನ್ಯರಂತಿದ್ದರು. ಅವರ ಮನಸ್ಸು ಶುಭ್ರ, ಮನಸ್ಸನ್ನು ವಿಚಲಗೊಳಿಸುವ ಲೋಕದ ಬೇರೆ ಬೇರೆ ಯಾವ ಹವ್ಯಾಸಗಳೂ ಅವರಿಗಿರಲಿಲ್ಲ. ಕಷ್ಟ ದುಃಖ ನಿರಾಶೆಗಳ ಕುಲುಮೆಯಲ್ಲಿ ಬೆಂದು ಬಂದವರು. ಸ್ಥಿತ ಪ್ರಜ್ಞ ಜೀವನವನ್ನು ಬದುಕಿದವರು. ಕತ್ತಲೆಯ ಮನೆಯಲ್ಲುಳಿದು ವಿದ್ಯಾರ್ಥಿಗಳಿಗೆ ಬೆಳಕುಕೊಟ್ಟರು. ನೀತಿ ನ್ಯಾಯ ಧರ್ಮಗಳ ತಳಹದಿಯ ಮೇಲೆ ಬದುಕು ಕಟ್ಟಿಕೊಂಡು ಸಂಪ್ರದಾಯದ ದಾರಿಯಲ್ಲಿ ನಡೆದು ಬಂದರು. ಈ ನಾಡಿನಲ್ಲಿ ಅನೇಕ ಜನ ಕಲಾ ಶಿಕ್ಷಕರನ್ನು ನಾವು ನೋಡಿರಬಹುದು. ಆದರೆ ಬಂಕೂರಕರ್ ಅವರಂಥ ಅಸಮಾನ್ಯ, ಅಸಧಾರಣ ಕಲಾಶಿಕ್ಷಕರು ಸಿಗುವುದು ಅಪರೂಪ.

ಗುಲಬರ್ಗಾದ ಶರಣಬಸವೇಶ್ವರ ಪ್ರೌಢ ಶಾಲೆಯಲ್ಲಿ ಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಂಕೂರಕರ್ ನಿಷ್ಕಾಮ ಕರ್ಮಯೋಗಿ, ಚಿತ್ರಕಲಾ ಕ್ಷೇತ್ರದಲ್ಲಿ ತಮ್ಮ ಪಾಡಿಗೆ ತಾವು ಕಾರ್ಯ ನಿರ್ವಹಿಸಕೊಂಡು ಬಂದವರು. ಆನರು ತಮ್ಮನ್ನು, ತಮ್ಮ ಕಲಾ ಕೃತಿಗಳನ್ನು ಗುರುತಿಸಲಿ ಬಿಡಲಿ ಅದರ ಬಗ್ಗೆ ಯೋಚಿಸಿದವರಲ್ಲ. ಪ್ರಶಸ್ತಿ ಪಾರಿತೋಷಕಗಳಿಗೆ ಹಪಹಪಿ ಪಟ್ಟವರಲ್ಲ. ಪ್ರಾಮಾಣಿಕವಾಗಿ ದುಡಿಯುವದೊಂದೇ ಅವರ ಕೆಲಸವಾಗಿತ್ತು. ತಮ್ಮನ್ನು ತಾವು ತೊಡಗಿಸಿಕೊಂಡು ದುಡಿದರು. ಅಂತಃಕರಣ ಪೂರ್ವಕ ದುಡಿದರು. ಅವರ ಕ್ರಿಯಾಶೀಲತೆ, ಸಂಕಲ್ಪ ಶಕ್ತಿ ಇನ್ನೊಳಿದ ಶಿಕ್ಷಕರಿಗೆ ಮಾದರಿಯಾಗಿತ್ತು. ಅವರು ವಿದ್ಯಾರ್ಥಿಗಳಿಗೆ ಹೇಳುತ್ತಿದ್ದುದನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿದ್ದರು. ಹಾಗಂತಲೇ ಅವರ ಬದುಕಿಗೆ ಅರ್ಥ ಬಂದಿತು.

ಬಂಕೂರಕರ್ ಎಂದೂ ಆಡಂಬರ ಬಯಸಿದವರಲ್ಲ. ತಮ್ಮ ಕ್ಷೇತ್ರದಲ್ಲಿ ತಮ್ಮ ಬದುಕಿನಲ್ಲಿ ಮುಂದೊತ್ತಿಕೊಂಡು ಹೋಗಿ ತಮ್ಮನ್ನು ತಾವು ತೋರಿಸಿಕೊಂಡವರಲ್ಲ. ತಮ್ಮ ಬಗ್ಗೆ ತಾವೇ ಎಲ್ಲಿಯೂ ಹೇಳಿಕೊಂಡವರಲ್ಲ. ಆತ್ಮ ಗೌರವದ ಬದುಕುಬದುಕಿದವರು. ತಮ್ಮ ಗೌರವಕ್ಕೆ ಧಕ್ಕೆ ಬರುವಂತಿದ್ದರೆ ಯಾವುದಾದರೊಂದಿಗೂ ಒಪ್ಪಂದ ಮಾಡಿಕೊಳ್ಳುತಿದ್ದಿಲ್ಲ. ಪ್ರತಿಭೆ ಅನುಭವವಿದ್ದರೂ ಅಹಂಕಾರ ಪಡಲಿಲ್ಲ ಸರಳ ಸುಂದರ ಬದುಕು ಅವರದಾಗಿತ್ತು.

ಈ ನಾಡಿನ ಹೆಸರಾಂತ ಕಲಾವಿದರಾದ ಶ್ರೀ ಜಿ.ಎಸ್. ಖಂಡೇರಾವ, ಶ್ರೀ ವಿ.ಜಿ. ಅಂದಾನಿ ಅವರು ಬಂಕೂರಕರ ಅವರ ವಿದ್ಯಾರ್ಥಿಗಳೆಂದಾಗಲೇ ಅವರ ಕಲಾ ಜೀವನದ ಹರವು ಗೊತ್ತಾಗುತ್ತದೆ. ಅವರದೆಲ್ಲ ಜೀವನದ ಹಲವು ಗೊತ್ತಾಗೊತ್ತು, ಇಂಥ ಪ್ರತಿಭಾನ್ವಿತ ಕಲಾ ವಿದ್ಯಾರ್ಥಿಗಳಿಂದ ತಮ್ಮ ಶಿಕ್ಷಕ ವೃತ್ತಿಯನ್ನು ಸಾರ್ಥಕ ಮಾಡಿಕೊಂಡವರು. ಅವರ ವಿದ್ಯಾರ್ಥಿಗಳಿಂದು ರಾಷ್ಟ್ರಮಟ್ಟದ ಅಂತರ ರಾಷ್ಟ್ರಮಟ್ಟದವರೆಗೂ ಬೆಳೆದಿದ್ದಾರೆ. ತಮ್ಮ ಕಲಾ ವಿದ್ಯಾರ್ಥಿಗಳು ಬೆಳೆದಷ್ಟು ಸಂತೋಷ ಅವರಿಗೆ. ಒಬ್ಬ ನಿಷ್ಠಾವಂತ ಪ್ರಾಂಜಲ ಮನಸ್ಸಿನ ಶಿಕ್ಷಕನಿಗೆ ಇದಕ್ಕಿಂತಲೂ ಹೆಚ್ಚಿನ ಭಾಗ್ಯ ಯಾವುದಿದೆ?

ಬಂಕೂರಕರ್ ಅವರಿಗೆ ಯಾರ ಬಗೆಗೂ ಮತ್ಸರವಿರಲಿಲ್ಲ, ದ್ವೇಷವಿರಲಿಲ್ಲ. ಹಾಗಂತಲೇ ಅವರಿಗೆ ವೈರಿಗಳೂ ಇರಲಿಲ್ಲ. ಅವರು ಎಲ್ಲರನ್ನು ಪ್ರೀತಿಸುವ, ಗೌರವಿಸುವ ಹಿರಿಯ ಗುಣ ಹೊಂದಿದ್ದರು.

ಪ್ರತಿಭಾನ್ವತರ ಯಾರೇ ಇರಲಿ, ಸಣ್ಣವರೇ ಇರಲಿ, ದೊಡ್ಡವರೇ ಇರಲಿ, ತಮ್ಮ ವಿದ್ಯಾರ್ಥಿಯೇ ಆಗಲಿ ಗೌರವಿಸುತ್ತಿದ್ದರು. ಬಂಕೂರಕರ್ ಈ ಭಾಗದ ಜನರಿಂದ ಪಡೆದುದ್ದು ತೀರ ಕಡಿಮೆ. ಈ ಭಾಗಕ್ಕೆ ಕೊಟ್ಟುದುದೇ ಹೆಚ್ಚು. ಬಡತನ ಕಷ್ಟ ಅವರಿಗೆ ಹುಟ್ಟಿನಿಂದ ಸಾಯುವವರೆಗೂ ಜೊತೆಯಾಗಿದ್ದವು. ಅವರ ಆಸ್ತಿ ವಿದ್ಯಾರ್ಥಿ ಬಳಗ.

ಬಂಕೂರಕರ್ ಚಿತ್ರಕಲಾವಿದರಾಗಿ ವಿದ್ಯಾರ್ಥಿಗಳನ್ನು ಬೆಳೆಸುತ್ತ ತಾವು ಬೆಳೆದರು, ಚಿತ್ರಕಲಾ ಕ್ಷೇತ್ರಕ್ಕೆ ತಮ್ಮದೇ ಆದ ಅಳಿಲು ಸೇವೆ ಸಲ್ಲಿಸಿದರು. ಅವರಿಗೆ ನಿಸರ್ಗ ಸೌಂದರ್ಯ ಬಹಳಷ್ಟು ಆಕರ್ಷಿಸಿತ್ತು. ನಿಸರ್ಗವನ್ನು ಮನಸಾರೆ ಪ್ರೀತಿಸುತ್ತಿದರು. ಆ ಸೌಂದರ್ಯವನ್ನು ಶ್ರೀಮಂತ ವರ್ಣ ವೈಭವದಿಂದ ಚಿತ್ರಗಳ ಮೂಲಕ ಹಿಡಿದಿರಿಸಿದರು. ಅವರ ಅನೇಕ ನಿಸರ್ಗ ಚಿತ್ರಗಳು ಕಲಾತ್ಮಕವಾಗಿ ಮೂಡಿ ಬಂದು ಸಹೃದಯಗಳ ಮನ ಸೂರೆಗೊಂಡವು. ನಿಸರ್ಗ ಹಾಗೂ ವ್ಯಕ್ತಿ ಚಿತ್ರಗಳೇ ಅವರ ಕಲಾ ವಸ್ತುಗಳಾಗಿದ್ದವು. ಜಲ ವರ್ಣ ತೈಲ ವರ್ಣದ ಅವರ ಅನೇಕ ಚಿತ್ರಗಳನ್ನು ಗುಲಬರ್ಗಾ ಜಿಲ್ಲೆಯ ಹಲವಾರು ಕಡೆ ನೊಡಬಹುದು.

ಬಂಕೂರಕರ್ ತಮ್ಮ ನಲವತ್ತೆಂಟು ವರ್ಷದ ಬದುಕಿನಲ್ಲಿ ಹೆಚ್ಚು ಚಿತ್ರಗಳನ್ನು ಬಿಡಿಸದಿದ್ದರೂ ಬಿಡಿಸಿದ ಬಹುಪಾಲು ಚಿತ್ರಗಳು ಆಕರ್ಷಿಸಿವೆ. ಆ ಕಾಲ್ಲಿ ಅವರಿಗೆ ದೊರೆತ ಅವಕಾಶ ಅವರ ಸ್ಥಿತಿ ಗತಿಯ ಹಿನ್ನಲೆ ಗ್ರಹಿಸಿದಾಗ ಅವರು ಹೆಚ್ಚು ಚಿತ್ರ ಬಿಡಿಸಲು ಸಾಧ್ಯವಾಗಿಲ್ಲವೆನಿಸುತ್ತದೆ. ಅವರು ಬಿಡಿಸಿದ ಚಿತ್ರಗಳನ್ನು ಅವರ ಪ್ರತಿಭೇಯನ್ನು ಗುರುತಿಸಿ ಪ್ರೊತ್ಸಾಹಿಸುವ ಕೆಲಸವಾಗಲಿಲ್ಲ. ಆ ಸಮಯದಲ್ಲಿ ಈಗಿನಷ್ಟು ಆ ಕ್ಷೇತ್ರಕ್ಕೆ ಅವಕಾಶಗಳಿರಲಿಲ್ಲ. ನಿಜಾಮ ಆಡಳಿತದ ಪರಂಪರೆಯಲ್ಲಿ ಬಂದ ಹೈದ್ರಾಬಾದ್ ಕರ್ನಾಟಕ ಕಲೆ ಸಾಂಸ್ಕೃತಿಕ ಅವಕಾಶಗಳಿಗೆ ವಂಚಿತವಾಗಿತ್ತೆನಿಸುತ್ತಿದೆ. ಅವರ ಚಿತ್ರಗಳಲ್ಲಿ ಶರಣವಸವೇಶ್ವರ ಚಿತ್ರಗಳು ಒಂದು ಘಟ್ಟವಾಗಿ ನಿಲ್ಲುತ್ತವೆ. ಗುರುಗಳಾದ ಶಂಕರರಾವ ಆಳಂದಕರ್ ಅವರು ಚಿತ್ರಸಿದ ಶರಣಬಸವೇಶ್ವರರ ಚಿತ್ರಗಳ ಪ್ರಭಾವದಿಂದ ಸಿದ್ಧಗೊಳಿಸಿದ ಬಂಕೂರಕರ್ ಅವರ ಈ ಮಾಲಿಕೆಯ ಚಿತ್ರಗಳು ಆಕರ್ಷಿಸುತ್ತವೆ. ಅವರು ರಚಿಸಿದ ರಾಷ್ಟ್ರನಾಯಕರ ಚಿತ್ರಗಳಲ್ಲಿ ಮಹಾತ್ಮ ಗಾಂಧಿ, ಸುಭಾಷಚಂದ್ರ ಬೋಸ್, ವಲ್ಲಭಬಾಯಿ ಪಟೇಲ, ರವೀಂದ್ರನಾಥ ಠಾಕೂರರ ಚಿತ್ರಗಳು ಅವರ ಪ್ರತಿಭೆಗೆ ನಿದರ್ಶನಗಳಾಗುತ್ತಿದೆ.

**ಶರಣಬಸವೇಶ್ವರರ ಜೀವನದ ಮಾಲಿಕೆಯ ಚಿತ್ರಗಳು.**

ಈ ಮಾಲಿಕೆಯ ಚಿತ್ರಗಳಲ್ಲಿ ಶರಣಬಸವೇಶ್ವರರ ಬದುಕಿನ ವಿವಿಧ ಚಿತ್ರಗಳು ಮೂಡಿ ಬಂದಿವೆ. ಶರಣಬಸವೇಶ್ವರರ ಜೀವನವನ್ನು ಗ್ರಹಿಸುವ, ಅರ್ಥೈಸುವ ಹಾಗೂ ವಿವೇಚಿಸು ವೀ ಚಿತ್ರಗಳು ಎಂತಹ ನಾಸ್ತಿಕನ ಹೃದಯವನ್ನು ಗೆದ್ದು ಭಕ್ತಿ ಮಾಡುವಂತೆ ಮಾಡುತ್ತವೆ. ಶರಣಬಸವೇಶ್ವರರ ಬದುಕಿನ ಕೇಂದ್ರ ಬಿಂಧುವಾದ ದಾಸೋಹ, ಪಶು ಪಕ್ಷಿಗಳಿಗೆ ಆಹಾರ ಒದಗಿಸುವರು, ಬೇಸಾಯ ಕೆಲಸಗಳಂಥ ಚಿತ್ರಗಳು ಪ್ರೇಕ್ಷಕರನ್ನು ಮಂತ್ರ ಮುಗ್ಧರನ್ನಾಗಿ ಮಾಡುತ್ತವೆ. ರಚನೆಯಲ್ಲಿ ತಮ್ಮದೇ ಆದ ವೈಕ್ತಿತ್ವನ್ನು, ಆಧ್ಯಾತ್ಮಿಕ ಬದುಕನ್ನು ಅಕ್ಷರಸ್ಥರಿಂದ ಅನಕ್ಷರಸ್ಥರವರೆಗೂ ತಿಳಿಯುವಂತೆ ಮಾಡಿ ತಮ್ಮ ಕಲಾ ಬದುಕನ್ನು ಸಾರ್ಥಕ ಮಾಡಿಕೊಂಡಿದ್ದಾರೆ.

ಈ ಭಾಗದ ಸಾಧು ಸಂತ ಪುರುಷರ, ದೇವರ ಚಿತ್ರಗಳನ್ನು ಕೂಡ ಅವರು ರಚಿಸಿದ್ದಾರೆ. ಗುಲಬರ್ಗಾ ಜಿಲ್ಲೆಯ ಸಾವಳಿಗಿಯ ಶಿವಲಿಂಗೇಶ್ವರ ದೇವಸ್ಥಾನದಲ್ಲಿ, ನರುಣ ಕ್ಷೇತ್ರದಲ್ಲಿ, ಗುಲಬರ್ಗಾ ನಗರದ ನಗರೇಶ್ವರ ಮಂದಿರದಲ್ಲಿ, ಅವರ ಇಂಥ ಚಿತ್ರಗಳನ್ನು ನೋಡಬಹುದು.

**ವ್ಯಕ್ತಿ ಚಿತ್ರಗಳು.**

ಈ ಭಾಗದ ಅನೇಕ ಗಣ್ಯ ವ್ಯಕ್ತಿಗಳ ಚಿತ್ರಗಳನ್ನು ರಚಿಸಿ ಜನ ಮೆಚ್ಚಿಕೆ ಪಡೆದಿದ್ದಾರೆ. ಪೂಜ್ಯ ದೊಡ್ಡಪ್ಪ ಅಪ್ಪ ಅವರ ಚಿತ್ರವನ್ನು ಬಹಳಷ್ಟು ಶ್ರದ್ಧೆಯಲ್ಲಿ ರಚಿಸಿದ್ದಾರೆ. ಗುಲಬರ್ಗಾ ಜಿಲೆಯ ಅನೇಕ ಕಡೆ ಅವರ ಭಾವ ಚಿತ್ರಗಳನ್ನು ಕಾಣಬಹುದು. ಗುಲಬರ್ಗಾದ ದೇಶಮುಖ ಮನೆಯಲ್ಲಿ ಅವರ ತೈಲವರ್ಣದ ಚಿತ್ರ ಇಂದಿಗೂ ಭವ್ಯ ಕಟ್ಟಡದ ಹೊರಾಂಗಣದಲ್ಲಿ ವಿರಾಜಿಸುತ್ತಿದೆ. ಸೇಡಂ ತಾಲೂಕಿನ ದಿಬ್ಬಳ್ಳಿ ಗ್ರಾಮದಲ್ಲಿ ಮಾಲಿಗೌಡರಾದ ರಾಯಪ್ಪನವರ ಚಿತ್ರ, ಮೇಳಕುಂದಿಯಲ್ಲಿ ಬಸಮ್ಮ ಗೌಡತಿಯ ಚಿತ್ರ ಉತ್ತಮ ಪೊಟ್ರೇಟ್‌ಗಳಿಗೆ ಸಾಕ್ಷಿ ಆಗಿವೆ. ಜೆ.ಜೆ. ಸ್ಕೂಲ್ ಆಫ್ ಆರ್ಟ್‌ದ ಭಾವಚಿತ್ರದ ಶೈಲಿಯ ಪ್ರಭಾವ ಪರಿಣಾಮ ಇಲ್ಲಿ ಗುರುತಿಸಲು ಸಾಧ್ಯವಾಗುತ್ತದೆ.

ಬಂಕೂರಕರ್ ಅವರು ರಚಿಸಿದ ಲಕ್ಷ್ಮೀ, ಸರಸ್ವತಿ, ಗಣಪತಿಗಳಂಥ ದೇವತೆಗಳ ಚಿತ್ರಗಳಲ್ಲಿ ತೀಕ್ಷಣವಾದ ನೈಪುಣ್ಯತೆ ಕಾಣದ ಕಲ್ಪನೆಗಳು ಹೆಚ್ಚು ಒತ್ತು ಪಡೆದಿವೆ ಎನಿಸುತ್ತದೆ. ಕೆಲವು ಪೌರಣಿಕ ಚಿತ್ರಗಳಲ್ಲಿ ರವಿವರ್ಮ ಹಾಗೂ ಅವನ ಸಮಕಾಲೀನ ಚಿತ್ರಕಾರರ ಪ್ರಭಾವ ಕಾಣಬಹುದು.

ಅವರು ಬಿಡಿಸಿದ ಡ್ರಾಯಿಂಗ್ ಇಂದು ನೋಡಲು ಸಿಗುತ್ತಿಲ್ಲ. ಎಷ್ಟೋ ಉತ್ತಮ ರೇಖಾ ಚಿತ್ರಗಳು ಹಾಗೂ ಹಾಫ್ ಟೋನ್ ಕಪ್ಪು ಬಿಳುಪಿನ ಭಾವ ಚಿತ್ರಗಳು ಮನೆಯವರ ಆಲಕ್ಷ್ಯತನದಿಂದ ಕಳೆದು ಹೋಗಿವೆ. ಅನೇಕ ಅವರ ಕಲಾ ವಿದ್ಯಾರ್ಥಿಗಳು, ಸ್ನೇಹಿತರು ಅವುಗಳ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸುತ್ತಾರೆ. ಈಗ ಉಳಿದ ಎಲ್ಲೋ ಒಂದೆರಡು ಪೆನ್ಸಲ್ ಸ್ಕೆಚ್ಚಿನಿಂದ ಸಮಗ್ರವಾಗಿ ಅಳೆಯಲು ಸಾಧ್ಯವಾಗದು.

**ಹುಟ್ಟು-ಬಾಲ್ಯ-ಶಿಕ್ಷಣ.**

ಗುಲಬರ್ಗಾದ ಬ್ರಹ್ಮಪೂರ ನಗರದ ಹಿಂದುಳಿದ ಜನಾಂಗದ ಶರಣಪ್ಪ ಬಸಮ್ಮ ದಂಪತಿಗಳ ಹಿರಿಯ ಮಗನಾಗಿ ದಿನಾಂಕ: ೩೧.೦೮.೧೯೩೧ ರಂದು ವಿಠಲ ಬಂಕೂರಕರ್ ಜನ್ಮ ಪಡೆದರು. ಗುಲಬರ್ಗಾದ ಎಂ.ಎಸ್.ಕೆ.ಮಿಲ್ ನಲ್ಲಿ ತಂದೆ ಕಾರ್ಮಿಕರಾಗಿದ್ದರೆ ತಾಯಿ ಕೂಲಿ ಕೆಲಸ ಮಾಡಿಕೊಂಡು ಮನೆಯನ್ನು ನಿಭಾಯಿಸುತ್ತಿದ್ದಳು. ವಿಠಲ ಅವರು ಮಾಣಿಕ ಹಾಗೂ ಸದಾಶಿವ ಎನ್ನುವ ಇಬ್ಬರು ಸಹೋದರರನ್ನು ಮಲ್ಲಮ್ಮ, ಕಲಾವತಿ, ದಯಯಂತಿ ಎಂಬ ಮೂರು ಜನ ಸಹೋದರಿಯರನ್ನು ಪಡೆದು ಬೆಳೆದರು. ಬಾಲ್ಯ ಬರೀ ಕಷ್ಟಗಳಲ್ಲಿ, ಕನಸುಗಳಲ್ಲಿ ಕರಗಿ ಹೋಯಿತು. ತಂದೆ ತಾಯಿಗಳು ಮಾತ್ರ ಮಕ್ಕಳು ವಿದ್ಯಾವಂತರಾಗಬೇಕೆಂದು ಆತಿಸಿ ಉಪವಾಸ ವನವಾಸದಲ್ಲಿ ಓದಿಸಿದರು. ವಿಠಲ ಪ್ರಾಥಮಿಕ ಅಭ್ಯಾಸ ಮುಗಿಸಿ ನೂತನ ವಿದ್ಯಾಲಯದ ಪ್ರೌಢ ಶಾಲೆ ಹತ್ತಿದಾಗ ತಂದೆ ತಾಯಿಗಳಿಗೆ ಎಲ್ಲಿಲ್ಲದ ಆನಂದ ವಿದ್ಯೆ ಎಂಬುದು ಅವರಿಗೆ ಅಪರೂಪದ ಸಂಗತಿ. ಶಾಲೆಯನ್ನೇ ಅರಿಯದ ಈ ತಂದೆ ತಾಯಿಗಳಿಗೆ ಮಗ ಪ್ರೌಢ ಶಾಲೆ ಪ್ರವೇಶಿಸಿದ ಎಂದಾಗ ಅದು ಅವರ ಬದುಕಿನಲ್ಲಿ ಒಂದು ಮಹತ್ವದ ಘಟ್ಟವಾಯಿತು. ತಮ್ಮ ತ್ಯಾಗ ಜೀವನದಿಂದ, ಸತತ ಕಾರ್ಯದಿಂದ, ಸೋತಾಗಲೂ ಅವರು ಈ ಮಕ್ಕಳಿಗಾಗಿ ಆಶಾವಾದಿಯಾಗಿದ್ದರು. ಮಗನ ಫೀ ಹಣಕ್ಕಾಗಿ ಶ್ರೀಮಂತರ ಬಾಗಿಲುಗಳಲ್ಲಿ ತಾಯಿ ಕೈ ಜೊಡಿಸಿ ನಿಲ್ಲುವುದು ಸ್ವಾಭಿಮಾನದ ವಿಠಲ್ ಬಂಕೂರಕರ್ ಅವರಿಗೆ ಸಹಿಸಲಾಗಲಿಲ್ಲ. ಬಡತನ, ಕಷ್ಟಗಳು ಹೆಚ್ಚುತ್ತಲೆ ಸಾಗಿದಾಗ ಬಂಕೂರಕರ್ ಬದುಕುವ ದಾರಿಗಾಗಿ ಹುಡುಕಾಟ ನಡೆಸಿದರು.

ಬಂಕೂರಕರ್ ಅವರಿಗೆ ಪ್ರಾಥಮಿಕ ಶಾಲೆಯಿಂದಲೇ ಚಿತ್ರ ಬಿಡಿಸುವ ಹುಚ್ಚು. ಅದರಲ್ಲಿಯೇ ಹೆಚ್ಚು ಆಸಕ್ತಿ ಹೊಂದಿ ಹೆಚ್ಚು ಗುನಗಳನ್ನು ಪಡೆಯುತ್ತಿದ್ದರು. ಈ ವಿದ್ಯಾರ್ಥಿಯ ಕಲಾಶಕ್ತಿ ಗಮನಿಸಿದ ನೂತನ ವಿದ್ಯಾಲಯದ ಶ್ರೀ ಶಂಕರರಾವ ಆಳಂದಕರ್, ಶ್ರೀ ಶರಣಪ್ಪ ಮಾಸ್ತರ ಆ ನಿಟ್ಟಿನಲ್ಲಿ ಪ್ರೋತ್ಸಾಹಿಸಿದರು. ಸಂಬಂಧಪಟ್ಟ ಪರೀಕ್ಷೆಗಳಿಗೆ ಕೂಡಿಸಿ ಉತ್ತಮ ಗುನಗಳಲ್ಲಿ ಉತ್ತೀರ್ಣನಾಗುವಂತೆ ಸಹಕರಿಸಿದರು. ಪ್ರೌಢ ಶಾಲೆಯಲ್ಲಿ ಅವರ ಕಲಾ ಪ್ರತಿಭೆ ಇಡೀ ಶಾಲೆಯ ಅಧ್ಯಾಪಕರ ಗಮನ ಸೆಳೆಯುವಂತೆ ಮಾಡಿತು.

ಬಂಕೂರಕರ್ ಒಮದು ದಿನ ತಮ್ಮ ಮನೆಯ ಪರಿಸ್ಥಿತಿನ್ನೆಲ್ಲ ನೆಚ್ಚಿನ ಗುರುಗಳಾದ ಶರಣಪ್ಪ ಮಾಸ್ತರರಲ್ಲಿ ಹೇಳಿ ತಮಗೆ ಎಲ್ಲಿಯಾದರೂ ಬದುಕುವ ದಾರಿ ತೋರಿಸಬೇಕೆಂದರು. ಶರಣಪ್ಪ ಮಾಸ್ತರ ಬಂಕೂರಕರ್ ಅವರನ್ನು ಶ್ರೀ ಶರಣಬಸವೇಶ್ವರ ಶಿಕ್ಷಣ ಸಂಸ್ಥೆಯ ಅಧ್ಯಕ್ಷರು ಸಂಸ್ಥಾಪನದ ಪೂಜ್ಯರೂ ಆದ ದೊಡ್ಡಪ್ಪ ಅಪ್ಪ ಅವರಲ್ಲಿ ಕರೆದುಕೊಂಡು ಹೋಹಿ ಪರಿಸ್ಥಿತಿಯನ್ನು ವಿವರಿಸಿ ತಮ್ಮ ಶಾಲೆಯಲ್ಲಿ ಅಧ್ಯಾಪಕರನ್ನಾಗಿ ನೇಮಿಸಿಕೊಳ್ಳಬೇಕೆ ಓದು ಕೇಳಿಕೊಂಡರು. ದಯಾಳುಗಳಾದ ಪೂಜ್ಯ ದೊಡ್ಡಪ್ಪ ಅಪ್ಪ ಬಂಕೂರಕರ್ ಅವರ ಹೈಸ್ಕೂಲ್ ಶಿಕ್ಷಣ ಕೂಡ ಮುಗಿಯದಿದ್ದರೂ ಕೇವಲ ಡ್ರಾಯಿಂಗ ಪರೀಕ್ಷೆಗಳ ಮೇಲೆ ಪ್ರೌಢ ಶಾಲೆಯಲ್ಲಿ ಅಧ್ಯಾಪಕನೆಂದು ಆ ಬಡ ಕುಟುಂಬಕ್ಕೆ ಅನ್ನದಾತರಾದರು.

ಬಂಕೂರಕರ್ ಅವರ ಒಟ್ಟು ಚಿತ್ರಕಲಾ ಬದುಕನ್ನು ಸೇವೆಯನ್ನು ಅವಲೋಕಿಸಿದಾಗ ಚಿತ್ರಗಳ ರಚನೆಗಿಂತ ವಿದ್ಯಾಥಿಗಳ ಬೆಳವಣಿಗೆಯಲ್ಲಿ ಹೆಚ್ಚು ಒತ್ತು ಕೊಟ್ಟಿದ್ದಾರೆ ಎನಿಸುತ್ತಿದೆ. ಚಿತ್ರಗಳ ನಿರ್ಮಾಣದಲ್ಲಿ ಹೆಚ್ಚು ತೊಡಿಸಿಕೊಳ್ಳದಿದ್ದುದಕ್ಕೆ ಬಲವಾದ ಕಾರಣ ಸದಾ ಕಾಡುತ್ತಿದ್ದ ಬಡತನ ಕಷ್ಟ ಮನೆಯ ಹತ್ತಾರು ಸಮಸ್ಯಗಳಿಗೂ ಹೌದು, ಸಂಪ್ರದಾಯದ ಹಾದಿಯಲ್ಲೆ ನಡೆದು ಬಂದುದರಿಂದ ಸೃಜನಾತ್ಮಕ ಕಲೆಯತ್ತವಾಗಲಿಲ್ಲ. ನವ್ಯ ಚಿತ್ರಗಳಲ್ಲಿ ಗಮನ ಹರಿಸಲಿಲ್ಲ. ಬದುಕಿನಲ್ಲಿ ದೊರೆತ ಸಮಯದಲ್ಲಿಯೇ ತಮ್ಮ ಇತಿಮಿತಿಗಳಲ್ಲಿ ಚಿತ್ರಗಳನ್ನು ರಚಿಸಿದ್ದಾರೆ. ಒಮ್ಮೆ ಮಾತ್ರ ಅವರು ಏಕ ವ್ಯಕಿ ಚಿತ್ರದರ್ಶನ ಮಾಡಿದ್ದುಂಟು ಅದೇ ಪ್ರೌಢ ಶಾಲೆಯಲ್ಲಿ ಶರಣಬಸವೇಶ್ವರ ಜೀವನ ಮಾಲಿಕೆಯ ಚಿತ್ರಗಳ ಪ್ರದರ್ಶನ ಕೆಲವು ಸಲ ಗುಂಪು ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ. ನಾಡಿನ ಪ್ರಮುಖ ಸ್ಥಳಗಳಲ್ಲಾಗಲಿ, ಹೊರಗಡೆಯಾಗಲಿ ಅವರ ಚಿತ್ರಗಳು ಬೆಳಕು ಕಾಣಲಿಲ್ಲ. ಪ್ರತಿಭೆ ಇದ್ದರು ಆಸಕ್ತಿಯಿಂದ ಆ ಕ್ಷೇತ್ರದಲ್ಲಿ ದುಡಿದರೂ ಅವರನ್ನು ಗುರುತಿಸದಿದ್ದುದ್ದು ದುರದೃಷ್ಟಕರ. ಅವರ ಆತ್ಮೀಯ ಸ್ನೇಹಿತರಾದ ನರಸಪ್ಪನವರು ಇದೇ ಮಾತು ವ್ಯಕ್ತಪಡಿಸುತ್ತಾರೆ.

ಬಂಕೂರಕರವರು ನನ್ನ ಸ್ನೇಹಿತರು ಎನ್ನವ ಮೊದಲು ನಾನು ಅವರ ವಿದ್ಯಾರ್ಥಿ. ಅವರ ವಿದ್ಯಾರ್ಥಿಯಾಗಿ ಬೆಳೆದು ಮುಂದೆ ಒಂದು ದಿನ ನಾನೇ ಅವರ ಡ್ರಾಯಿಂಗ ಇನ್ಸಪೆಕ್ಟರಾಗಿ. ಇನ್ಸಪೆಕ್ಷನ್‌ಗೆ ಹೋಗುವ ಪ್ರಸಂಗ ಬಂದಿತೆಂದು ನಾನು ನಿರೀಕ್ಷಿಸರಲಿಲ್ಲ. ಹಾಗೆ ಇನ್ಸಪೆಕ್ಷನಗೆ ಹೋದಾಗ ಅವರಿಗೆ ಬಹಳ ಸಂತೋಷ. ನನ್ನ ವಿದ್ಯಾರ್ಥಿಯೊಬ್ಬ ನನ್ನ ಮೇಲಿನ ಅಧಿಕಾರಿಯಾಗಿ ಬಂದಿದ್ದಾನೆಂದು ಅವರಿಗೆ ಹೆಮ್ಮೆ, ಅಭಿಮಾನ, ನಾನು ಇನ್ಸಪೆಕ್ಷನಗೆ ಹೋದಾಗ ಕಂಡು ಕೊಂಡದ್ದು ಅವರ ವಿದ್ಯಾರ್ಥಿಗಳೊಂದಿಗೆ ಕೆಲಸ ಮಾಡುತ್ತಿದ್ದುದ್ದು, ಕಲಿಸುವ ವಿಧಾನ ವಿಧ್ಯಾರ್ಥಿಗಳ ಜೊತೆ ಇರುವಂತಹ ಬಾಂಧವ್ಯ. ಅವರು ತತ್ವಕ್ಕಂಟಿಕೊಂಡು ನಿಷ್ಟೆಯಿಂದ ದುಡಿದವರು. ದುದೈವವೆಂದರೆ ಅವರ ಪ್ರತಿಭೆಯನ್ನು ಆಗ ಯರು ಗುರುತಿಸಲಿಲ್ಲ. ಹಾಗಂತ ಅವರೇನೂ ನೊಂದುಕೊಂಡಿರಲಿಲ್ಲ. ಆದರೆ ಅವರಿಗೆ ಮಕ್ಕಳಾಗಲಿಲ್ಲ ಎಂಬ ಕೊರಗು ಮಾತ್ರ ಇತ್ತು. ಆಗಾಗ ನನ್ನ ಮುಂದೆ ಅದನ್ನು ವ್ಯಕ್ತಪಡಿಸಿದ್ದುಂಟು. ಕೊನೆ ಕೊನೆಗೆ ಅವರು ಹೆಚ್ಚು ಚಿಂತಾಕ್ರಾಂತರಾಗಿರುತ್ತಿದ್ದರು. ಕಷ್ಟಗಳಲ್ಲಿಯೇ ಕೊನೆಯುಸಿರೆಳೆದರು.

ನರಸಪ್ಪನವರ ಮೇಲಿನ ಮಾತುಗಳನ್ನು ಕೇಳಿದಾಗ ಯಾಕೆ ಹೀಗಾಯಿತೆಂದು ಪ್ರಜ್ಞಾವಂತರು ಕೆಲವು ಕ್ಷಣ ಯೋಚಿಸಬೇಕಾಗುತ್ತದೆ. ಅವರಿಗೆ ಆರ್ಥಿಕ ತೊಂದರೆ ತಪ್ಪಿಸಿ ಅವಕಾಶಗಳನ್ನು ಕಲ್ಪಿಸಿಕೊಡುತ್ತಾ ಪ್ರೊತ್ಸಾಹಿಸಿದ್ದರೆ ಇನ್ನೂ ಹೆಚ್ಚು ಕಲಾ ಕ್ಷೇತ್ರಕ್ಕೆ ಅವರ ಕೊಡುಗೆ ಇರುತ್ತಿತ್ತೇನೋ?

**ನಿಸರ್ಗ ಚಿತ್ರಗಳು.**

ಗುಲಬರ್ಗಾ ಜಿಲ್ಲೆಯ ಪ್ರಮುಖ ಸ್ಥಳಗಳಲ್ಲಿಯ ನಿಸರ್ಗವನ್ನು ಕಲ್ಲು ಬಂಡಗಳನ್ನು ಅವರು ತಮ್ಮ ಕುಂಚದಿಂದ ಜೀವಂತ ಇರಿಸಿದ್ದಾರೆ. ಕೋಟೆ, ಗಿಡ, ಮರ, ಹೂಬಳ್ಳಿ ಹಾಗೂ ನಗರದ ಕೇಂದ್ರ ಬಿಂದುವಾದ ಉಧ್ಯಾವ ಎಲ್ಲವೂ ಅವರ ವಸ್ತುಗಳಾಗಿವೆ. ಜಲವರ್ಣಗಳಲ್ಲಿಯೇ ಹೆಚ್ಚು ಚಿತ್ರಗಳಿವೆ. ಅವರ ಶಾಲೆಯಿಂದ ಪ್ರಕಟಗೊಳ್ಳುತ್ತಿದ್ದ ಹೂ ಗೊಂಚಲು ಸಂಚಿಕೆಗೆ ಇವರದೇ ಮುಖ ಚಿತ್ರ ರಚಿಸವಾಗುತ್ತಿತ್ತು.

ಈಗಲೂ ಹಳೆಯ ಸಂಚಿಕೆಗಳಲ್ಲಿ ಮುಖ ಪುಟದ ಹಾಗೂ ಒಳಗಡೆಯಲ್ಲಿ ನಿಸರ್ಗ ಚಿತ್ರಗಳ ಪೋಟೋ ನಾವು ನೋಡಬಹುದು.

ಬಂಕೂರಕರ್ ಒಬ್ಬ ಉತ್ತಮ ಪೋಟೋಗ್ರಾಫರ್ ಕೂಡ ಹೌದು, ಅವರ ಕ್ಯಾಮರ ಅನೇಕ ಚಿತ್ರಗಳನ್ನು ಸೆರೆ ಹಿಡಿದು ಅವರ ಪ್ರತಿಭೆಯನ್ನು ಅಲ್ಲಿಯು ಗುರುತಿಸುವಂತೆ ಮಾಡಿದೆ.

ಬಂಕೂರಕರ್ ಅವರ ಕೆಲಸವನ್ನು, ಪ್ರತಿಭೆಯನ್ನು ಸ್ಮರಿಸಿಕೊಳ್ಳುತ್ತಾ ಅವರ ಸಮಕಾಲೀನ ಚಿತ್ರಕಲಾವಿದರು ಸಾಹಿತಿಗಳು ಆದ ಶ್ರೀ ರೇವಣಸಿದ್ದಯ್ಯ ರುದ್ರಸ್ವಾಮಿ ಮಠ ಅವರು ತಮ್ಮ ಅನಿಸಿಕೆಯನ್ನು ಹೀಗೆ ವ್ಯಕ್ತಪಡಿಸುತ್ತಾರೆ. ಬಂಕೂರಕರ್ ಅವರ ಸ್ಟಿಲ್ ಲೈಫ್ ಬಹಳ ಉತ್ತಮವಾಗಿರುತ್ತಿದ್ದವು. ಅವರ ಪೆನ್ಸಿಲ್ ಸ್ಕೆಚ್ಚಕೂಡ ಹಾಗೆ. ಸುಂದರವಾದ ರೇಖೆಗಳಲ್ಲಿ ಒಬ್ಬ ವ್ಯಕ್ತಿಯ ಚಿತ್ರವನ್ನು ಅವರ ಸ್ಕೆಚ್ಚ ವರ್ಕ ಪುಸ್ತಕದಲ್ಲಿ ನಾನು ನೋಡಿದ್ದೆ. ಆ ಚಿತ್ರ ಈಗಲೂ ನನ್ನ ಕಣ್ಣು ಮುಂದಿದೆ. ಆ ಚಿತ್ರದ ವ್ಯಕ್ತಿಯನ್ನು ಜೀವಂತ ನೋಡಿದ್ದರಿಂದ ಮೂಗು, ಕಣ್ಣು, ತುಟಿ ಎಲ್ಲವೂ ತದ್ರೂಪವಾಗಿದ್ದವು. ನೈಜ ಹಾಗೂ ವಾಸ್ತವ ಅಪ್ಪಟ ಚಿತ್ರಗಾರ ಆತ. ಅವರಲ್ಲಿ ಯಾವ ಇಜೆಮ್ಸಗಳು ಸುಳಿದು ಬಂದಿರಲಿಲ್ಲ. ಇಜೆಮ್ಸಗಳ ಪರಿಕಲಪ್ನೆ ಅವರಿಗಿರವಿಲ್ಲವೆಂದು ಹೇಳಲಿಕ್ಕೂ ಆಗುತ್ತಿದ್ದಿಲ್ಲ. ಅವರು ಪೊಸ್ಟರ ಕಲರ್ ಹೆಚ್ಚಾಗಿ ಉಪಯೋಗಿಸುತ್ತಿದ್ದರು. ರೆಡ್ ಬ್ರೌನ ಎಲ್ಲೋ ಬಣ್ಣಗಳನ್ನು ಹೆಚ್ಚು ಬಳಸುತ್ತಿದ್ದರು. ಆ ಕವರು ರಿಪ್ರೊಡೆಕ್ಷನ್ ಕೆಲಸ ಹೆಚ್ಚು ಮಾಡಿದ್ದಾರೆ. ವಸ್ತು ಆಯ್ಕೆಗಿಂತ ಕಲರ್ ಸ್ಕೀಮಿಗೆ ಹೆಚ್ಚು ಆಧ್ಯತೆ ಕೊಡುತ್ತಿದ್ದರು. ಚಿತ್ರದಲ್ಲಿ ಬಣ್ಣ ತುಂಬುವ ಕೆಲಸ ಹೆಚ್ಚು ಆಕರ್ಷಕವಾಗಿರುತ್ತಿತ್ತು. ಮೊದ ಮೊದಲು ಅವರ ಕೆಲಸಗಲ್ಲಿ ರಿಪಿಟೇಶನ್ ಹೆಚ್ಚಾಗುತ್ತಿತ್ತು. ನಂತರ ಅವರ ಕೈ ಬಹಳಷ್ಟು ಪಳಗಿತ್ತು. ನಾನು ಬಿ.ಎಡ್. ಕ್ಲಾಸ್‌ಗೆ ಪಾಠ ಮಡಲು ಹೋಗುತ್ತಿದ್ದಾಗ ಒಂದು ದಿನ ಅವರಿಗೆ ಚೆನ್ನಮ್ಮನ ಚಿತ್ರ ರಚಿಸಿಕೊಡಲು ಹೇಳಿದ್ದೆ. ಅವರು ಅಲಕ್ಷಿಸುತಲೇ ಬಂದರು. ಕೊನೆಗಳಿಗೆಯಲ್ಲಿ ನನ್ನನ್ನು ಕೂಡಿಸಿಕೊಂಡು ಇದೀಗ ಕೊಟ್ಟುಬಿಟ್ಟೆ ಎಂದು ನೇರವಾಗಿ ಬ್ರಶ್ ನಿಂದ ಕೆಲಸ ಪ್ರಾರಂಭಿಸಿಯೇ ಬಿಟ್ಟರು. ಬ್ರಶ್ ತೊಳೆಯದೆ ಬೇರೆ ಬೇರೆ ಬಣ್ಣಗಳಳ್ಳಿ ಎದ್ದುತ್ತ ಚಿತ್ರ ಮುಗಿಸಿದಾಗ ಮಾಚದ ಬಣ್ಣದಿಮದ ನನಗದು ಅದ್ಭುತ ಎನಿಸಿ ಭಾರಿ ಖುಷಿ ಕೊಟ್ಟಿತ್ತು. ಅವರಿಗೆ ಹೆಸರು ಬಂದದ್ದು ಅವರ ಚುರುಕಾದ ವಿದ್ಯಾರ್ಥಿಗಳಿಂದ, ವಿ.ಜಿ. ಅಂದಾನಿ, ಬಸವರಾಜ ಉಪ್ಪಿನ, ಎಂ.ಬಿ. ಲೋಹಾರ, ಎ.ಎಸ್. ಪಾಟೀಲ್ ಈ ಎಲ್ಲ ಕಲಾವಿದರು ಕಲಾ ಕ್ಷೇತ್ರದಲ್ಲಿ ಹೊಸ ಗಾಳಿ ಎಬ್ಬಿಸಿದ್ದಾಗ ಬಂಕೂರಕರ್ ಅವರಿಗೆ ಹೆಚ್ಚು ಹೆಸರು ಬಂದಿತು.

ಹದಿನೆಂಟರ ಹರೆಯದಲ್ಲಿ ಬಂಕೂರಕರ್ ಬಹು ಜವಾಬ್ದಾರಿಯ ಹೊರೆ ಹೊತ್ತರು. ಶಿಕ್ಷಕ ವೃತ್ತಿ, ಮನೆಯ ಹಿರಿತನ ಇವೆರಡರಲ್ಲಿಯೇ ಅವರು ತಮ್ಮನ್ನು ತಾವು ತೊಡಗಿಸಿಕೊಂಡು ದುಡಿಯ ಹತ್ತಿದರು. ಆದರೂ ಅಪೂರ್ಣಗೊಂಡಿದ್ದ ಚಿತ್ರಕಲಾ ಶಿಕ್ಷಣದ ಡಿಪ್ಲೋಮಾ ಪುರ್ತಿಗೊಳಿಸಿಕೊಳ್ಳುವ ಆಶೆ ಮಾತ್ರ ಕಾಡುತ್ತಲೇ ಇತ್ತು. ಡಿಪ್ಲೋಮಾ ಮುಗಿಸಿಕೊಳ್ಳುವ ನೆಪದಲ್ಲಿ ಹೆಚ್ಚು ಹೆಚ್ಚು ತಿಳಿದುಕೊಳ್ಳಲು ಸಾಧ್ಯವನ್ನು ವದನ್ನರಿತು ಆ ನಿಟ್ಟಿನಲ್ಲಿ ಪ್ರಯತ್ನಿಸಿದರು. ಪರೀಕ್ಷೆಗಾಗಿ ಮುಂಬೈಗೆ ಹೋಗುವುದು ಬಂಕೂರಕರ್ ಬಂದರು. ಆದರೆ ದೈವ ಅವರಿಗೆ ಸದರಳ ಮಾತಾಗಿರಲಿಲ್ಲ. ಕಷ್ಟ ತೊಂದರೆಗಳಲ್ಲಿಯೇ ಒಂದೆರಡು ಸಲ ಪರೀಕ್ಷೆ ಕೊಟ್ಟು ಬಂದರು. ಆದರೆ ದೈವ ಅವರಿಗೆ ಪ್ರತಿಕೂಲಗಳನ್ನು ನಿರ್ಮಿಸಿ ಅವರ ಶಿಕ್ಷಣ ಪೂರ್ತಿಗೊಳ್ಳದಂತೆ ಮಾಡಿತು. ಎರಡನೆ ಸಲ ಪರೀಕ್ಷೆಗೆ ಹೋದಾಗಲಂತೂ ಹದಿನಯದು ಇಪ್ಪತ್ತು ದಿನ ಮುಂಬೈಯಲ್ಲಿ ಅನಾರೋಗ್ಯದಿಂದ ಬಳಲಿ ಗುಡಿ ಗುಂಡಾರಗಳಲ್ಲಿ ವಾಸಿಸಿ ಬಂದರು. ಅವರು ಜೀವನದಲ್ಲಿ ಸೋಲನ್ನೇ ಬರೆದುಕಂಡು ಬಂದಿದ್ದರೆನಿಸುತ್ತದೆ.

**ಕೌಟುಂಬಿಕ ಬದುಕು.**

ಬಂಕೂರಕರ್ ಅವರಿಗೆ ನೌಕರಿ ದೊರೆತ ಒಂದೆರಡು ವರ್ಷಗಳಲ್ಲಿ ತಂದೆ ತಾಯಿಗಳು ಮದುವೆ ಮಾಡಿದರು. ಗುಲಬರ್ಗಾ ಜಿಲ್ಲೆಯ ಸೇಡಂ ತಾಲೂಕಿನ ದಿಬ್ಬಳ್ಳಿ ಗ್ರಾಮದ ಮಧ್ಯಮ ವರ್ಗದ ಬದ್ರಪ್ಪ–ಬದ್ರವ್ವ ದಂಪತಿಗಳ ಮಗಳಾದ ರತ್ನವ್ವ ಬಂಕೂರಕರ್ ಅವರಿಗೆ ಪತ್ನಿಯಾಗಿ ಬಂದಳು. ಬಂಕೂರಕರ್

ಅವರ ತಮ್ಮನ ಪತ್ನಿಯ ಹೆಸರು ರತ್ನವ್ವವಿದ್ದುದರಿಂದ ಅವರ ಪತ್ನಿಯ ಹೆಸರನ್ನು ಲಕ್ಷ್ಮೀಬಾಯಿ ಎಂದು ಹಿರಿಯರು ಬದಲಿಸಿದರು. ಲಕ್ಷ್ಮೀಬಾಯಿ ಪತ್ನಿಯ ಕಲಾ ಬದುಕಿಗೆ ಚೇತನವಾದಳು. ಶಿಕ್ಷನ ಪಡೆಯದಿದ್ದರೂ, ಚಿತ್ರಕಲೆಯ ಬಗ್ಗೆ ತಿಳಿಯದಿದ್ದರು ತನ್ನ ಪತಿ ಒಬ್ಬ ಕಲಾವಿದ ಎನ್ನುವ ಅಭಿಮಾನ ಮಾತ್ರ ಇತ್ತು. ಹಾಗಂತಲೇ ಅವರ ಕಲಾ ಬದುಕಿಗೆ ಪುರಕವಾದಳು. ಬಂಕೂರಕರ್ ಅವರ ಬದುಕಿನ ಏರು ಯಾವುದನ್ನೂ ಬೇಡಿ ಕಾಡಲಿಲ್ಲ. ಎಷ್ಟೋ ಸಲ ಬಂಕೂರಕರ್ ಪತ್ನಿಯನ್ನು ಕುರಿತು "ಲಕ್ಷ್ಮೀ ನೀನು ಕೂಲಿ ಮಾಡೋದು ಯಾವಾಗ ತಪ್ಪುತ್ತೋ ಎನೋ ನನ್ನಂಥ ಬಡವನ ಕಯ ಹಿಡಿದು ನೀನು ಯಾವ ಸುಖವು ಕಾಣಲಿಲ್ಲ. ಎಂದಾಗ ಲಕ್ಷ್ಮೀಬಾಯಿ ನನ್ನ ಕೂಲಿ ಕೆಲಸಕ್ಕಿಂತ ನಿಮ್ಮ–ನೆಮ್ಮದಿ ಮುಖ್ಯ ನನಗೆ." ನೀವು ನಿಮ್ಮ ಕಲೆಯಲ್ಲಿ ಇನ್ನೂ ಇತ್ತರಕ್ಕೆ ಹೋಗಬೇಕು. ನೀವೊಬ್ಬ ಪ್ರಸಿದ್ಧ ಕಲಾವಿದರೆನಿಸಿಕೊಳ್ಳಬೇಕು. ಹೀಗೆ ದಂಪತಿಗಳು ಬಡತನದಲ್ಲಿಯೂ ಪರಸ್ಪರ ಪ್ರೀತಿ ವಿಶ್ವಾಸ, ಅಂಥ ಕರಣೆಯಲ್ಲಿ ಬದುಕಿರುವುದು ನೋಡಿದಾಗ ಕವಿಯ ಸಾಲುಗಳು ಸುಳಿದು ಹೋಗುತ್ತಿವೆ.

**ಬಡವ ನಾನು ಬಡವಿ ನೀನು**
**ಒಲವೇ ನಮ್ಮ ಬದುಕು**

ಬಂಕೂರಕರ್ ಅವರ ಶಿಕ್ಷಣ ವೃತ್ತಿ ನಲವತ್ತು ರೂಪಾಯಿ ಸಂಬಳದಿಂದ ಪ್ರಾರಂಭಗೊಂಡಿತ್ತು. ಇಡೀ ಕುಟುಂಬದ ಭಾರ ಇವರಿಗೆನೆ ಬಿದ್ದಾಗ ನಿಭಯಿಸುವುದು ಬಹು ಕಷ್ಟವಾಯಿತು. ತಮ್ಮಂದಿರು ವಿದ್ಯಾವಂತರಾಗಲಿಲ್ಲ. ಒಬ್ಬರು ಎಂ.ಎಸ್.ಕೆ.ಮಿಲ್ ನಲ್ಲಿ ಕೆಲಸಕ್ಕೆ ಹೋದರೆ ಇನ್ನೊಬ್ಬರು ಸೈಕಲ್ ರಿಪೇರಿ ವೃತ್ತಿ ಮಾಡುತ್ತಿದ್ದರು. ಇವರು ತಮ್ಮ ದುಡಿಮೆಯಲ್ಲಿ ಮನೆಗೆ ಕೊಟ್ಟಷ್ಟೇ ನಿಜ. ಈ ದಂಪತಿಗಳು ಮಾತ್ರ ಸಂಸಾರದ ರಥದ ಚಕ್ರಗಳಾಗಿ ಉರುಳಿದರು. ಬಂಕೂರಕರ್ ಇಡೀ ದಿನ ಶಾಲೆಯಲ್ಲಿ ದುಡಿದರೆ ಲಕ್ಷ್ಮೀಬಾಯಿ ಹೊಲದಲ್ಲಿ (ಕೂಲಿ ಕೆಲಸದಲ್ಲಿ) ದುಡಿಯಬೇಕು. ಇಷ್ಟು ದುಡಿಯುವ ಈ ದಂಪತಿಗಳು ಹಲವಾರು ಸಲ ನೀರು ಕುಡಿದು ಮಲಗಿದ ಪ್ರಸಂಗಗಳುಂಟು. ಲಕ್ಷ್ಮೀಬಾಯಿ ಪತಿಯನ್ನು ಕುರಿತು "ಇವತ್ತು ನೀವು ಉಪವಾಸ ಮಲಗಿಕೊಳ್ಳೊ ಪರಿಸ್ಥಿತಿ ಬಂತಲ್ಲರೀ" "ಎಂದಾಗ ಏನಾಗುತ್ತದೆ ಒಂದು ದಿನ ಉಪವಾಸ ಮಲಗಿದ್ರೆ ಶರಣಬಸವೇಶ್ವರರೇ ಎಷ್ಟೋ ಸಲ ಉಪವಾಸಿವಿದ್ದು ನುಚ್ಚುಂಡು ಕಾಲ ತಳ್ಳತಿದ್ರು ಅನ್ನೊದು ನಿನಗ ಗೊತ್ತಿಲ್ಲೇನು" ಎಂದು ಸಮಾಧಾನ ಹೇಳುತ್ತಿದ್ದ ವಿಠ್ಠಲ ಬಂಕೂರಕರ್ ನಿಜವಾಗಿಯೂ ಆದರ್ಶ ವ್ಯಕ್ತಿ.

ಬಂಕೂರಕರ್ ಅವರ ಬದುಕಿನಲ್ಲಿ ವಿಧಿ ಪೆಟ್ಟು ಹಾಕುತ್ತಲೇ ಬಂದಿತು. ತಂದೆ ತಾಯಿಗಳನ್ನು ಕಳೆದುಕೊಂಡು ಕೆಲವೇ ವರ್ಷಗಳಲ್ಲಿ ಒಬ್ಬಸಹೋದರನನ್ನೂ ಕಳೆದಕೊಂಡರು. ಇವೆಲ್ಲಕ್ಕಿಂತಲೂ ಹೆಚ್ಚಿನ ಅಘಾತ ಅವರ ದೇಹದ ಉಸಿರಿನಂತಿದ್ದ ಶಾಲೆಯ ಚಿತ್ರ ಕೋಣೆಗೆ ಆಕಸ್ಮಿಕ ಬೆಂಕಿ ಹತ್ತಿ ಅವರ ಬಹುಪಲು ಚಿತ್ರಗಳು, ದಾಖಲೆಗಳು ಪೋಟೊಗಳು ಸುಟ್ಟು ಹೋದಾಗ, ಅವರ ಚಿತ್ರ ಕೋಣೆ ಒಂದು ಮಿನಿ ಆರ್ಟ ಗ್ಯಾಲರಿಯಾಗಿ ಅವರ ಹಾಗೂ ವಿದ್ಯಾರ್ಥಿಗಳ ಸಂಪತ್ತಾಗಿತ್ತು. ಅ ಕೋಣೆಯಲ್ಲಿದ್ದಾಗ ಅವರ ಬದುಕಿನ ಎಲ್ಲ ಜಂಜಾಟಗಳಿಂದ ಮುಕ್ತರಾಗಿ ತಮ್ಮದೇ ಆದ ಲೋಕದಲ್ಲಿರುತ್ತಿದ್ದರು. ಅದು ಅವರ ಬದುಕಿನ ಉಸಿರಾಗಿತ್ತು. ಬಂಕೂರಕರ್ ಬರುವದೆಲ್ಲವನ್ನು ಶರಣನ ಪ್ರಸಾದವೆಂದು ಸ್ವೀಕರಿಸುತ್ತಾ, ಎಲ್ಲವನ್ನು ಸಹಿಸಿಕೊಳ್ಳುತ್ತ ಸ್ಥಿತಪ್ರಜ್ಞರಾದರು. ಅವರ ಕೌಟುಂಬಿಕ ಬದುಕಿನ ಎಳೆ ಎಳೆಗಳನ್ನು ನೋಡುತ್ತ ಹೋದಾಗ ಹಲವಾರು ಜೀವಂತ ಸಮಸ್ಯೆಗಳು ಅವರನ್ನು ಕಾಡಿವೆ. ಬಡತನ ಕರಾಳ ರೂಪ ತಾಳಿ ಕಷ್ಟಕ್ಕೆ ಗುರಿ ಮಾಡಿದೆ.

**ಶ್ರಮ ಜೀವಿ.**

ಬಂಕೂರಕರ್ ಅವರ ಕೆಲಸದ ಬಗ್ಗೆ ಪರಿಶ್ರಮದ ಬಗ್ಗೆ ಶ್ರದ್ಧೆಯ ಬಗ್ಗೆ ಎಷ್ಟು ಹೇಳಿದರು ಕಡಿಮೆ. ಬೆಳಗ್ಗೆ ಎಂಟು ಗಂಟೆಗೆ ಶಾಲೆಗೆ ಹೋದರೆ ರಾತ್ರಿ ಎಂಟು ಗಂಟೆಗೆನೆ ಬರುತ್ತಿದ್ದರು. ಬೆಳಗಿನ ಊಟ ಸ್ಕೂಲಿಗೆನೇ ಯಾರಾದರು ಒಯ್ದು ಕೊಡಬೇಕು. ಚಿತ್ರ ಬಿಡಿಸುವ ಕೆಲಸದಲ್ಲಿ ನಿರತರಾದರೆ ಊಟದ ಅರಿವೇ ಇರುತ್ತಿದ್ದಿಲ್ಲ. ಚಹಾ ಸಿಗರೇಟು ಮಾತ್ರ ಆಗಾಗ ಬೇಕೆ ಬೇಕಾಗುತ್ತಿತ್ತು. ಅವರ ನೆಚ್ಚಿನ ವಿದ್ಯಾರ್ಥಿ

ವಿ.ಜಿ. ಅಂದಾನಿ ಅವರಿಗೆ ಸಿಗರೇಟು ತರುವ ಕೆಲಸ ಕಾಯಂ ಆಗಿರುತ್ತಿತ್ತು. ಸ್ಕೂಲಿಗೆ ಬಂದ ತಕ್ಷಣ ಅದೇ ಕೆಲಸ ಹಚ್ಚುತ್ತಾರೆಂದು ಅಂದಾನಿ ಒಂದೊಂದು ಸಲ ಮನೆಯವರಿಂದ ಹಣ ಪಡೆದು ಮೊದಲೇ ಒಯ್ದು ಕೊಟ್ಟು ಬಿಡುತ್ತಿದ್ದರು. ಬಂಕೂರಕರ್ ಅವರ ಕಾರ್ಯವೈಖರಿ ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರಿ ಅವರ ಬಗ್ಗೆ ಗೌರವ ಹುಟ್ಟುವಂತೆ ಮಾಡಿತ್ತು. ಶಾಲೆಯ ಮುಖ್ಯೋಪಾಧ್ಯಾಯರು ಕೂಡ ಅವರ ಕೆಲಸಕ್ಕೆ ಸಮಯಕ್ಕೆ ಯಾವುದೇ ರೀತಿಯ ನಿಬಂಧ ಹಕುತ್ತಿರಲಿಲ್ಲ. ಕಲಾವಿದರ ಮನಸ್ಸು ಅರಿತಿದ್ದ ಅವರು ಬಂಕೂರಕರ್ ಅವರಿಗೆ ನಿಯಮಗಳನ್ನು ಸಡಿಲಿಸಿ ಒಂದು ರೀತಿಯ ರೀಯಾಯಿತಿ ನೀಡಿದ್ದರು.

ಶರಣಬಸವೇಶ್ವರರ ಜೀವನದ ಮಾಲಿಕೆಯ ಚಿತ್ರಗಳನ್ನು ನಿರ್ಮಿಸುವಾಗ ಕೆಲವು ಸಲ ಇಡೀ ರಾತ್ರಿ ಕುಳಿತಿದ್ದುಂಟು. ಹಾಗಲೆಲ್ಲ ಶಾಲೆಯ ಕೆಲಸ ಮಾಡಿ ಶಾಲೆಯ ಕೆಲಸದ ಅವಧಿ ಮುಗಿದ ನಂತರ ಮನೆಗೆ ಹೋಗಿ ಸ್ನಾನ ಮಾಡಿ ಒಂದು ಲೋಟ ಹಾಲು ಕುಡಿದು ಬಂದು ಕುಳಿತರೆ ಯಾವುದರ ಪ್ರಜ್ಞೆಯೂ ಇರುತ್ತಿರಲಿಲ್ಲ. ಹಾಗಂತಲೇ ಇಪ್ಪತ್ತೊಂದು ದಿನಗಳಲ್ಲಿ ಇಡೀ ಜೀವನ ಮಾಲಿಕೆಯ ಚಿತ್ರಗಳು ಸಿದ್ದಗೊಂಡವು. ಬಹಳಷ್ಟು ಶ್ರದ್ಧೆಯಲ್ಲಿ ಆ ಚಿತ್ರಗಳನ್ನು ರಚಿಸಿ ಕೃತಾರ್ಥರಾದರು.

ಈಗಲೂ ಗುಡಿಗೆ ಬಂದ ಭಕ್ತರನ್ನು, ಪ್ರವಾಸಿಗರನ್ನು ಗುಡಿಯಲ್ಲಿ ಮೊದಲು ಆಕರ್ಷಿಸುವುದು ಈ ಚಿತ್ರಗಳೇ, ಚಿತ್ರಗಳ ಮುಂದೆ ಹೋಗಿ ನಿಂತಾಗ ದೇವರ ಮುಂದೆಯೇ ನಿಂತಂತೆ ಹೃದಯವನ್ನು ತೆರೆದು ಅಂತರ್ಯವನ್ನು ನಿರ್ಮಲಗೊಳಿಸಿ ಅನ್ಯ ಯೋಚನೆಗಳಿಂದ ಮುಕ್ತರಾಗಿ ನೋಡುವ ಪ್ರೇಕ್ಷಕರಿಗೆ ಆ ಚಿತ್ರಗಳಲ್ಲಿ ಶರಣಬಸವೇಶ್ವರರು ಜೀವಂತ ಕಂಡಂತೆ. ಚಿತ್ರಗಳನ್ನು ನೋಡುತಾ ನಿಂತಾಗ ಆಗುವ ಸಂತೋಷ ಹೇಳಲು ಸಾಧ್ಯವಾಗದು. "ಮನುಷ್ಯ ಯಾವುದೇ ಕೆಲಸ ಮಾಡಲಿ ಅದರಲ್ಲಿ ಅವನು ಕಾಣಬೇಕು" ಎನ್ನುವ ಅನುಭವಿಗಳ ಮಾತು ಇಲ್ಲಿ ಸಾರ್ಥಕತೆ ಪಡೆದಿದೆ. ಅವರು ತಮ್ಮ ಕೆಲಸದಲ್ಲಿ ಕಾಣಿಸಿಕೊಂಡಿದ್ದಾರೆ. ಅವರು ಯಾವುದೇ ಕೆಲಸ ಕೈಗೆತ್ತಿಕೊಳ್ಳಲು ಮನಸ್ಸು ಕೊಟ್ಟು ಮಾಡುತ್ತಿದ್ದರು. ತಮ್ಮ ಶಕ್ತಿ ಸಾಮರ್ಥ್ಯ ಪ್ರತಿಭೆ ಎಲ್ಲವನ್ನು ಧಾರೆಯೆರೆಯುತ್ತಿದ್ದರು. ಶುದ್ಧ ಕಾಯಕದಿಮದ ಕಲಾಕ್ಷೇತ್ರಕ್ಕೆ ಸೇವೆ ಸಲ್ಲಿಸಿದರು.

**"ನಿರ್ಮಲ ಕರ್ಮವಿದು ಸದ್ಗತಿಗೆ ಸಾಧ್ಯ ನೋಡಾ**
**ನಿರ್ಮಲ ಕರ್ಮವಿದು ಜ್ಞಾನಕ್ಕೆ ವರ್ಧನ ನೋಡಾ**
**ನಿರ್ಮಲ ಕರ್ಮವಿದು ಕಪಸಿದ್ಧ ಮಲ್ಲಿಕಾರ್ಜುನನ**
**ಕೊಡುವ ಕೂಟ ನೋಡಾ"**

ಎನ್ನುವ ಅಕ್ಕನ ವಚನದ ಸಾಲುಗಳು ಬಂಕೂರಕರ್ ಅವರ ನಿರ್ವಂಚನೆಯ, ನಿರ್ಮಲ ಮನಸ್ಸಿನ ಕಾಯಕ ಅರಿತಾಗ ನೆನಪಾಗುತ್ತದೆ. ಕೆಲಸದಲ್ಲಿ ಎಂದು ಉದಾಸೀನತೆ ತೋರಿಸಿದವರಲ್ಲ. ಹಗಲಿರುಳೆನ್ನದೆ ದುಡಿದರು. ಹಸಿವು ನೀರಡಿಕೆಯನ್ನದೇ ದುಡಿದರು, ಮನೆಯನ್ನು ಮರೆತು ದುಡಿದರು. ಆ ದುಡಿಮೆ ಅವರನ್ನು ಜೀವಂತ ಇರಿಸಿದೆ. ಆ ದುಡಿಮೆ ಅವರನ್ನು ಕಲಾ ಇತಿಹಾಸದಲ್ಲಿ ಗುರುತಿಸುವಂತೆ ಮಾಡಿದೆ.

ಬಂಕೂರಕರ್ ಅವರ ಸಾವು ಕೂಡ ಬಹು ಆಕಸ್ಮಿಕ ಬಹು ವಿಚಿತ್ರ. ಅವರು ಹಾಸಿಗೆ ಒಡಿಯಲಿಲ್ಲ. ಯಾರಿಂದಲೂ ಆರೈಕೆ ಮಾಡಿಸಿಕೊಳ್ಳಲಿಲ್ಲ. ಸಂಗೀತಗಾರನೊಬ್ಬ ತನ್ಮಯನಾಗಿ ತಂಬುರಿ ನುಡಿಸುತ್ತಿದ್ದಾಗ ಇದ್ದಕ್ಕಿದ್ದಂತೆ ತಂಬೂರಿಯ ತಂತಿಯೊಂದು ಜೆಟ್ ಎಂದು ಹರಿದಂತೆ. ಒಂದೇ ಒಂದು ಕ್ಷಣದಲ್ಲಿ ಇಲ್ಲವಾದರು. ಅವರು ತಮ್ಮ ಸೇವಾ ಅವಧಿಯಲ್ಲಿ ಸೇವೆ ಸಲ್ಲಿಸುತ್ತಲೇ ಕೊನೆಯುಸಿರೆಳೆದರು. ದಿನಾಂಕ ೨೧.೧೨.೧೯೭೬ ರಂದು ಬಂಕೂರಕರ್ ಅವರ ಕುಟುಂಬಕ್ಕೆ, ಶಾಲೆಯ ವಿದ್ಯಾರ್ಥಿ ವೃಂದಕ್ಕೆ, ಸಹೋದ್ಯೋಗಿಗಳ ಬಳಗಕ್ಕೆ ಅಷ್ಟೇ ಏಕೆ ಚಿತ್ರಕಲಾ ಪ್ರಪಂಚಕ್ಕೆ ಕರಾಳ ದಿನವಾಗಿತ್ತು. ಶಾಲೆಯಲ್ಲಿ ಕೆಲಸ ಮಾಡುತ್ತಿದ್ದಾಗ ಒಂದು ಕ್ಷಣ ಎದೆ ನೋವು ಕಾಣಿಸಿಕೊಂಡಾಗ ಶಾಲೆಯ ಹತ್ತಿರದ ಸಹೋದರಿ ಕಲಾವತಿಯವರ ಮನೆಗೆ ಹೋಗಿ ವಿಶ್ರಾಂತಿ ಪಡೆದು ಬರುತ್ತೇನೆಂದು ಹೋಗುತ್ತಿದ್ದಂತೆ ಶರಣನ ಗುಡಿಯ ಪಕ್ಕದಲ್ಲಿಯೇ ಕುಸಿದು ಬಿದ್ದರು. ಹಗೆ ಸುಧಾರಿಸಿಕೊಂಡು ಹೋಗಿ ಮಂಚದ ಮೇಲೆ ಮಲಗುತ್ತಿದ್ದಂತೆ ಅವರ ಪ್ರಾಣ ಪಕ್ಷಿ ಹಾರಿ ಹೋಗಿತ್ತು. ಇದ್ದಕ್ಕಿದ್ದಂತೆ ಇಲ್ಲವಾದರು. ಅವರ ಸಾವಿನ ಸುದ್ದಿ ಯಾರೂ

ನಂಬುವಂತಿಲ್ಲ. ಇಂದೇ ಬೆಳಗ್ಗೆ ಅವರ ಜೊತೆ ಮಾತನಾಡಿದ್ದೇನೆಂದು ಕೆಲವು ಜನ ಹೇಳಿದರೆ, ಅವರ ಸಹೋದ್ಯೋಗಿಗಳು ಇದೀಗ ಅರ್ಧ ಗಂಟೆಯ ಹಿಂದೆ ನಮ್ಮ ಜೊತೆ ಕೆಲಸ ಮಾಡಿದ್ದರು ಎಂದರು. ಯಾರು ನಿರೀಕ್ಷಿಸದಿದ್ದರು ಒಂದು ಕ್ಷಣದಲ್ಲಿ ಬಂಕೂರಕರ್ ಎಲ್ಲವಾಗುತ್ತಾರೆಂದು "ಮಳೆ ಮತ್ತು ಮರಣ ಯಾರೂ ಅರಿಯರು" ಎನ್ನುವ ಗಾದಿನೇ ಇದೆ. ಒಂದರ್ಧ ಗಂಟೆ ವಿಶ್ರಮಿಸುತ್ತೇನೆಂದು ಹೋದ ಬಂಕೂರಕರ್ ಶರಣನ ಸನ್ನಿಧಿಯಲ್ಲಿ ನಿರಂತರ ವಿಶ್ರಾಂತಿ ಪಡೆದರು. ಹುಟ್ಟಿದ ಮನುಷ್ಯ ಸಾಯಲೇಬೇಕು ನಿಜ. ಆದರೆ ಸಾಯುವ ಮಯಸ್ಸಿನಲ್ಲಿ ಸತ್ತರೆ ಯಾರೂ ಅಷ್ಟೊಂದು ದುಃಖ ಪಡುವುದಿಲ್ಲ. ಅವರಿನ್ನೂ ಸಾಧಿಸಬೇಕಾದುದ್ದು ಬಹಳಷ್ಟಿತ್ತು. ಇನ್ನೂ ಗುರಿಯ ದಾರಿ ಕ್ರಮಿಸಬೇಕಿತ್ತು. ವಿಧಿ ಅದಕ್ಕೆ ಅವಕಾಶ ಕೊಡಲಿಲ್ಲ.

ಬಂಕೂರಕರ್ ಅವರ ಸಾವಿನ ಸುದ್ದಿ ಹರಡುತ್ತದ್ದಂತೆ ಶರಣಬಸವೇಶ್ವರ ಶಿಕ್ಷಣ ಸಂಸ್ಥೆಯ ಶಾಲೆಗಳು ಅವರ ಗೌರವಾರ್ಥ ರಜೆ ಘೋಷಿಸಿದವು. ಅವರ ವಿದ್ಯಾರ್ಥಿಗಳು ಸಾಲು ಸಾಲು ಬಂದು ಅಂತಿಮ ದರ್ಶನ ಪಡೆದರು. ನಗರದ ಐಡಿಯಲ್ ಫೈನ್ ಆರ್ಟ ಸಂಸ್ಥೆಯ ವಿದ್ಯಾರ್ಥಿಗಳು, ಶಿಕ್ಷಕರು ಅವರ ಆತ್ಮಕ್ಕೆ ಶಾಂತಿ ಕೋರಿ ಅಂತಿಮ ಯಾತ್ರೆಯಲ್ಲಿ ಪಾಲ್ಗೊಂಡರು. ಹಳೆಯ ವಿದ್ಯಾರ್ಥಿಗಳ ಬಳಗ ಧಾವಿಸಿತು. ಎಲ್ಲವೂ ಕೆಲವೇ ಘಂಟೆಗಳಲ್ಲಿ ಮುಗಿದು ಹೋಯಿತು.

ವಿಠ್ಠಲ ಬಂಕೂರಕರ್ ಅಗಲಿ ಇಂದಿಗೆ ಎಡರು ದಶಕಗಳು ಗತಿಸಿದವು. ಅವರಿನ್ನು ಈ ನೆಲದ ಮೇಲೆ ಓಡಾಡಿದಂತೆ, ವಿದ್ಯಾರ್ಥಿಗಳ ಜೊತೆ ಕೆಲಸ ಮಾಡಿದಂತೆ ಎನಿಸುತ್ತದೆ. ಅವರು ತಮ್ಮ ಚಿತ್ರಗಳಲ್ಲಿನ್ನೂ ಕಾಣುತ್ತಾರೆ. ಅವರು ತಮ್ಮ ಕಲಾ ಚಿತ್ರಗಳಿಂದ ಅಮರ.



**ಪೂಜ್ಯ ಶ್ರೀ ದೊಡ್ಡಪ್ಪಾ ಅಪ್ಪ ಅವರ ಭಾವಚಿತ್ರ.**



**ಹೊಡೆಯಲು ಬಂದವರನ್ನು ಮಹಾದಾಸೋಹಿ ಶರಣಬಸವೇಶ್ವರವರು ಕ್ಷಮಿಸಿ ದೃಶ್ಯ**



ದಿ. ಕಲಾವಿದ ವಿಠಲ್ ಬಂಕೂರಕರ್



ವಿಠಲ್ ಬಂಕೂರಕರ್ ಅವರ ಪತ್ನಿ ಲಕ್ಷ್ಮೀಬಾಯಿ

ಕಲಾವಿದ ವಿಠಲ್ ಬಂಕೂರಕರ್‌ರವರ ರಚಿಸಿದ ಕಲಾಕೃತಿಗಳು



ನಂದಿಯ ಅವತಾರ ಶರಣಬಸವರ ಜನನ ದೃಶ್ಯ



**ಬಾಲಕ ಶರಣಬಸವೇಶ್ವರರ ಲಿಂಗದೀಕ್ಷೆ ಸನ್ನಿವೇಶ**



**ಶರಣಬಸವೇಶ್ವರವರು ಗುರುಕುಲದಲ್ಲಿ ವಿದ್ಯಾಭ್ಯಾಸ ಪಡೆಯುತ್ತಿರುವ ದೃಶ್ಯ**



ಮಹಾದಾಸೋಹಿ ಶರಣಬಸವೇಶ್ವರವರು ಮಹಾದೇವಿ ಅಮ್ಮನವರೊಂದಿಗೆ ವಿವಾಹ ಸನ್ನಿವೇಶ



ಮಹಾದಾಸೋಹಿ ಶರಣಬಸವೇಶ್ವರವರು ಮತ್ತು ಅವರ ಸಹೋದರರು
ಪಾಲು ಹಂಚಿಕೊಳ್ಳುತ್ತಿರುವ ದೃಶ್ಯ.



# ಶರಣರ ಆರ್ಥಿಕ ವಿಚಾರಗಳು.

– ಡಾ.ಬಿ.ಆರ್. ಅಣ್ಣಾಸಾಗರ,
ಸಹ ಪ್ರಾಧ್ಯಾಪಕರು,
ಅರ್ಥಶಾಸ್ತ್ರ ಅಧ್ಯಯನ & ಸಂಶೋಧನಾ ವಿಭಾಗ,
ಸ.ಪ್ರ.ದ.ಕಾಲೇಜು ಹಾಗೂ ಸ್ನಾತಕೋತ್ತರ ಕೇಂದ್ರ, ಸೇಡಂ.

**ಸಾರಾಂಶ.**

ಪಾಶ್ಚಿಮಾತ್ಯ ತತ್ವಜ್ಞಾನಕ್ಕೆ ಭಿನ್ನವಾಗಿ ಭಾರತೀಯ ತತ್ವಜ್ಞಾನವು ಮುಖ್ಯವಾಗಿ ಆಧ್ಯಾತ್ಮಿಕ, ಪಾರಮಾರ್ಥಿಕ ವಿಷಯಗಳಿಗೆ ಹೆಚ್ಚಿನ ಒತ್ತನ್ನು ನೀಡಿದೆ. ಇದರಿಂದ ಇಂದಿಗೂ ಜನಮಾನಸವು ಇಹಕ್ಕಿಂತ ಪರಕ್ಕೆ, ಇಲ್ಲಿನ ಪರಿಸರಕ್ಕಿಂತ ಅಲ್ಲಿನದಕ್ಕೆ, ಭೌತಿಕಕ್ಕಿಂತ ಅಭೌತಿಕಕ್ಕೆ ಗಮನ ಕೊಡುತ್ತದೆ. ಹಲವು ವಿಚಾರ ಧಾರೆಗಳ ಪ್ರವಾಹವನ್ನು ಭಾರತೀಯ ಇತಿಹಾಸದುದ್ದಕ್ಕೂ ಕಾಣುತ್ತೇವೆ. ಈ ದಿಶೆಯಲ್ಲಿ ಇಂದಿನ ಕಲ್ಯಾಣ ಕರ್ನಾಟಕ ಭಾಗದಲ್ಲಿ ಆಗಿಹೋದ ವಚನ ಕ್ರಾಂತಿ ಜಾಗತಿಕ ಸಾಹಿತ್ಯಿಕ ಇತಿಹಾಸದಲ್ಲಿಯೇ ಅಪೂರ್ವ. ವಚನಕಾರರು ಅನುಭವ ಮಂಟಪದಲ್ಲಿ ಪ್ರಜಾಪ್ರಭುತ್ವ ತತ್ವಗಳ ಅಡಿ ಮಂಡಿಸಿದ ವಿಚಾರಗಳು ಜೀವನ ಸಮಗ್ರತೆಯ ಪ್ರತೀಕ. ಜೀವನ ಎಂದರೆ ಕೇವಲ ಅರ್ಥಶಾಸ್ತ್ರ,ಸಮಾಜಶಾಸ್ತ್ರ, ರಾಜ್ಯಶಾಸ್ತ್ರವಲ್ಲ ಅದು ಎಲ್ಲದರ ಕೂಟ. ೧೨ನೇ ಶತಮಾನ ಕ್ಲಿಷ್ಟ ಆರ್ಥಿಕ, ಸಾಮಾಜಿಕ,ಧಾರ್ಮಿಕ ಕಾಲಘಟ್ಟ ಹೊಂದಿತ್ತು. ಅಂಥ ಸಂದರ್ಭದಲ್ಲಿ ಕಗ್ಗತ್ತಲೆಯಲ್ಲಿ ಹೊರಹೊಮ್ಮಿದ ಬೆಳಕಿನ ಕಿರಣಗಳೇ ಈ ವಚನಗಳು. ಅವು ಮಾತೂ ಹೌದು, ಶಪಥವೂ ಹೌದು. ನುಡಿದಂತೆ ನಡೆದ, ನಡೆದಂತೆ ನುಡಿದ ಶರಣರ ಅನುಭಾವ ಅಮೃತ ಸಿಂಚನ. ಆದ್ದರಿಂದ ಶರಣರ ವಚನಗಳ ಆರ್ಥಿಕ ಬುನಾದಿಯ ಪರಿಶೀಲನೆ ಅವಶ್ಯ. ಈ ಹಿನ್ನೆಯಲ್ಲಿ ಅವರ ಕಾಯಕ, ಪ್ರಸಾದ, ದಾಸೋಹ ಪರಿಕಲ್ಪನೆಗಳು ಇಂದಿನ ಅರ್ಥಶಾಸ್ತ್ರ ಮತ್ತು ಆರ್ಥಿಕತೆಯ ಬೀಜಾಂಕುರಗಳು. ಗುರು–ಲಿಂಗ–ಜಂಗಮ ಕಲ್ಪನೆಗಳು ಅಷ್ಟೇ ಮುಖ್ಯ.

ಕಾಯಕವೆಂದರೆ ಕೆಲಸ,ವೃತ್ತಿ. ಇದರಲ್ಲಿ ತಾರತಮ್ಯ,ಭೇದ ಭಾವಕ್ಕೆ ಅವಕಾಶ ಇಲ್ಲ. ದೊಡ್ಡದು, ಸಣ್ಣದು ಎಂಬುದಿಲ್ಲ. ಯಾವುದೇ ಕೆಲಸ ನಿಷ್ಠೆಯಿಂದ, ಭಕ್ತಿಯಿಂದ, ಶ್ರದ್ಧೆಯಿಂದ ಮಾಡಿದರೆ ಅದರಿಂದ ಹೊರಬರುವ ಫಲ ಪ್ರಸಾದವಾಗುತ್ತದೆ. ಇದನ್ನು ಆರ್ಥಿಕ ಪರಿಭಾಷೆಯಲ್ಲಿ ಸರಕುಗಳ ಉತ್ಪಾದನೆ–ಆದಾಯ ಎನ್ನುತ್ತೇವೆ. ಪ್ರಸಾದ ಕಲ್ಪನೆ ಬಂದಾಗ ಪೋಲು ಕಡಿಮೆಯಾಗುತ್ತದೆ. ನೈಸರ್ಗಿಕ ಸಂಪನ್ಮೂಲಗಳ ಉಳಿತಾಯವಾಗುತ್ತದೆ. ಪರಿಸರ ಸಂರಕ್ಷಣೆಯಾಗುತ್ತದೆ. ಮಾನವನ ಕಲ್ಯಾಣ ಆಗುತ್ತದೆ. ಇಂದಿನ ಆಧುನಿಕ ಸಿದ್ಧಾಂತಗಳು ಇದನ್ನೇ ಸಾರುತ್ತವೆ. ಹೆಗೆಲ್, ಕೇನ್ಸ್, ಅಮರ್ತ್ಯ ಸೇನ್ ಮಾನವನ ಒಳಿತಿಗೆ ಒತ್ತು ನೀಡುತ್ತಾರೆ. ಉತ್ಪಾದನೆ, ವಿತರಣೆ ಮತ್ತು ಪದಾರ್ಥಗಳ ಬಳಕೆಯ ತತ್ವಗಳನ್ನು ವಚನಕಾರರು ಪರಿಣಾಮಕಾರಿಯಾಗಿ ಮಂಡಿಸುತ್ತಾರೆ. ದಾಸೋಹವು ಸಂಪತ್ತಿನ ಸಂಗ್ರಹಕ್ಕೆ ಅವಕಾಶ ಕೊಡದೆ ಸಹಜೀವಿಗಳೊಂದಿಗೆ ಹಂಚಿಕೊಳ್ಳುವುದನ್ನು ಕಲಿಸುತ್ತದೆ. ಕಾಯಕದಿಂದ ಬಂದಿರುವುದನ್ನು ನಮಗಾಗಿಯೇ ವ್ಯಯ ಮಾಡದೆ ಸಾಮಾಜಿಕ ಜವಾಬ್ದಾರಿಯನ್ನು ಸಮರ್ಪಣಾ ಭಾವದಿಂದ ನಿಭಾಯಿಸುವ ದಾಸೋಹಕ್ಕೆ ವಿನಿಯೋಗಿಸಬೇಕು. ಯೋಗ್ಯ ಉತ್ಪಾದನೆ,ಯೋಗ್ಯ ಬಳಕೆ ಮತ್ತು ಯೋಗ್ಯ ವಿತರಣೆ ಇವು ಬಸವಣ್ಣನವರ ಅರ್ಥಶಾಸ್ತ್ರದ ಪ್ರಮುಖ ಅಂಶಗಳು. ಈ ಪ್ರಬಂಧವನ್ನು ಮಾಧ್ಯಮಿಕ ದತ್ತಾಂಶ ಬಳಸಿ ಸಿದ್ಧಪಡಿಸಲಾಗಿದೆ. ಶರಣರ ವಚನಗಳಲ್ಲಿನ ಆರ್ಥಿಕ ಕಿರಣಗಳನ್ನು ಹೆಕ್ಕುವುದು ಈ ಲೇಖನದ ಪ್ರಯತ್ನ.

**ಮುಖ್ಯ ಪದಗಳು:** ವಚನಗಳು, ಕಾಯಕ, ಪ್ರಸಾದ, ದಾಸೋಹ, ಗುರು, ಲಿಂಗ, ಜಂಗಮ,ಉತ್ಪಾದನೆ, ಬಳಕೆ, ವಿತರಣೆ, ಅರ್ಥಶಾಸ್ತ್ರ, ಆರ್ಥಿಕತೆ.

**"ಇತಿಹಾಸವನ್ನು ಮರೆತವರು ಇತಿಹಾಸ ಸೃಷ್ಟಿಸಲಾರರು – ಡಾ॥ ಬಿ.ಆರ್. ಅಂಬೇಡ್ಕರ"**

ವಿಶ್ವ ಸಾಹಿತ್ಯೇತಿಹಾಸದಲ್ಲಿ ಕರ್ನಾಟಕದ ಉತ್ತರದಲ್ಲಿ, ನಿರ್ದಿಷ್ಟವಾಗಿ ಕಲ್ಯಾಣ ಕರ್ನಾಟಕದಲ್ಲಿ, ೧೨ನೇ ಶತಮಾನದಲ್ಲಿ ನಡೆದ ವಚನ ಚಳುವಳಿ ಅಥವಾ ಕ್ರಾಂತಿ ಅತ್ಯಂತ ವಿನೂತನ ಪ್ರಯೋಗ. ಜನರಾಡುವ ಭಾಷೆಯಲ್ಲಿಯೇ ವಿಚಾರ ಕ್ರಾಂತಿ ಆದದ್ದು. ದೇವರನ್ನು ಜನರಿಂದ ದೂರ ಮಾಡಿದಾಗ ದೇವರನ್ನೆ ಜನತೆಯಲ್ಲಿಗೆ ತಂದ ಘನತೆ ವಚನ ಚಳುವಳಿಯದ್ದು. ದೇವರು ಎಲ್ಲೋ ಇದ್ದಾನೆ ಎನ್ನದೇ, ತಾನಿದ್ದಲ್ಲಿಯೇ ದೇವರಿದ್ದಾರೇ ಎಂದು ಎತ್ತಿ ಹಿಡಿದದ್ದು ಈ ಮಾತುಗಳೇ. ಬಸವಣ್ಣ ಈ ಕ್ರಾಂತಿಯ ರೂವಾರಿ. ಇವರು ಹಾಗೂ ಇವರೊಂದಿಗಿನ ೭೭೦ ಅಮರ ಗಣಂಗಳು ತಮ್ಮ ಪಲುಕುಗಳ ಮೂಲಕ ಜನ ಸಾಮಾನ್ಯರ ಹೃದಯ ತೆರೆದರು, ತಟ್ಟಿದರು. ಅಲ್ಲಮ ಪ್ರಭು, ಬಸವಣ್ಣ, ಅಕ್ಕಮಹಾದೇವಿ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಿದೇವ ಹಾಗೂ ವಿವಿಧ ಜಾತಿ, ವರ್ಗ, ಪ್ರದೇಶ, ವರ್ಣ, ವೃತ್ತಿಯವರು ತಮ್ಮ ವಿಚಾರಗಳನ್ನು ಸರಳ ಭಾಷೆಯಲ್ಲಿ ಮಂಡಿಸಿದರು. ಅನುಭವ ಮಂಟಪ ಸಕಲ ಜೀವಾತ್ಮರಿಗೆ ಲೇಸನ್ನೆ ಬಯಸುವ ಕಮ್ಮಟವಾಗಿತ್ತು.

ವಚನಗಳ ಮೂಲಕ ಜನರ ಆರ್ಥಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಬದುಕಿನಲ್ಲಿ ಅಮೂಲಾಗ್ರ ಬದಲಾವಣೆ ತರಲು ಪ್ರಯತ್ನಿಸಿದರು. ಮಾನಸಿಕ ನೆಮ್ಮದಿಯ ಸೆಲೆಯಾಗಿ ಸಹ ವಚನಗಳು ಪರಿಣಮಿಸಿದವು. ವಚನಕಾರರು ಯಾವುದೇ ಆರ್ಥಿಕ, ರಾಜಕೀಯ, ಸಿದ್ಧಾಂತ ಪ್ರತ್ಯೇಕವಾಗಿ ಮಂಡನೆ, ಪ್ರತಿಪಾದನೆ ಮಾಡದಿದ್ದರೂ ಅವರ ವಚನಗಳಲ್ಲಿ ಅಡಗಿರುವ ವಿಚಾರಗಳನ್ನು ಪ್ರತ್ಯೇಕಿಸಿ ಭಿನ್ನ ನೆಲೆಗಟ್ಟಿನಲ್ಲಿ ಪರಿಶೀಲನೆ ಮಾಡಲು ಸಾಧ್ಯವಿದೆ. ಅವರು ಜನರ ಜೀವನವನ್ನು ಬಿಡಿಯಾಗಿ ನೋಡದೇ ಇಡಿಯಾದ – ಸಮಗ್ರ ದೃಷ್ಟಿಕೋನ ಅನುಸರಿಸಿದ್ದರು. ಅನುಭವ ಮಂಟಪದಲ್ಲಿ ಲೋಕವೇ ತಾನಾದವನು ಅಂದರೇ ಸಕಲ ಜೀವಾತ್ಮರಿಗೆ ಲೇಸನ್ನೆ ಬಯಸುವವನು ಮಾತ್ರ ಗಣ ಎಂದು ಕರೆಯಿಸಿಕೊಳ್ಳುತ್ತಾನೆ.

ಬಸವಣ್ಣನವರು ಇಷ್ಟ ಲಿಂಗದ ಮೂಲಕ ದೇವರನ್ನು ಖಾಸಗೀಕರಣಗೊಳಿಸಿದರು. ಜಂಗಮ ಲಿಂಗದ ಮೂಲಕ ಮನುಷ್ಯನನ್ನು ಸಾಮಾಜೀಕರಣ ಗೊಳಿಸಿದರು. ಸಾಮಾಜೀಕರಣಗೊಂಡ ಮನುಷ್ಯ ಜೀವ ಕಾರುಣ್ಯದಿಂದ ತುಂಬಿದ ಸರ್ವಸಮಾನತೆಯ ಪ್ರಜ್ಞೆಯುಳ್ಳ ಶರಣನೆಂದೆನಿಸಿಕೊಳ್ಳುತ್ತಾನೆ. ೧೯ನೇ ಶತಮಾನದಲ್ಲಿ ಕಾರ್ಲಮಾರ್ಕ್ಸ್ "Workers of the world unite, you lose nothing except the chains that are binding the hands" ಶರಣರು ಶ್ರಮ ಸಂಸ್ಕೃತಿಗೆ ಬುನಾದಿ ಹಾಕಿದರು. ಮಾನವನ ಆರ್ಥಿಕ ಚಟುವಟಿಕೆಗಳಿಗೆ ಸ್ಪಷ್ಟ ನಿಲುವು ಪ್ರಕಟಿಸಿದರು. ಸಾಂಸ್ಕೃತಿಕ, ರಾಜಕೀಯ, ಆರ್ಥಿಕ ಜೀವನದ ಪರಸ್ಪರ ಸಂಬಂಧ ಅವರು ಅರಿತಿದ್ದರು. ಅದಕ್ಕೆ ಅವರು ಜೀವನಕ್ಕೆ ಸಮಗ್ರ ದೃಷ್ಟಿ ನೀಡಿದರು. ನಮ್ಮೊಳಗೆ ನಾವು ಬಯಲಾಗುವ ಕ್ರಮ ಅರಿಯಲು ಬಸವಣ್ಣ ಮಾರ್ಗದರ್ಶನ ಮಾಡಿದ್ದಾರೆ. ಗುರು ಲಿಂಗ ಜಂಗಮ ಮತ್ತು ಕಾಯಕ ಪ್ರಸಾದ ದಾಸೋಹ ಬಹು ಮುಖ್ಯ ವಿಚಾರಗಳು.

ಮಾನವನ ದೈನಂದಿನ ಆರ್ಥಿಕ ಚಟುವಟಿಕೆಗಳ ಕುರಿತು ವಚನಕಾರರು ಸಾಕಷ್ಟು ವಿಚಾರ ಮಂಡನೆ ಮಾಡಿದ್ದಾರೆ. ಅವರ ಆರ್ಥಿಕ ವಿಚಾರಗಳನ್ನು ಪ್ರಮುಖವಾಗಿ ಕಾಯಕ ಪ್ರಸಾದ, ದಾಸೋಹ, ಪರಿಕಲ್ಪನೆಗಳ ಮೂಲಕ ತಿಳಿದುಕೊಳ್ಳಬಹುದು. ಗುರು ಲಿಂಗ ಜಂಗಮ ಭಾವನೆಗಳು ಇಹ–ಪರ ಎರಡನ್ನು ಬೆಸೆಯುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಐಹಿಕ ಜೀವನ ಮತ್ತು ಆಧ್ಯಾತ್ಮಿಕ ಜೀವನ ಪರಸ್ಪರ ಬೆಸೆದುಕೊಂಡಿವೆ ಎಂದು ಪ್ರತಿಪಾದಿಸುವ ಮೂಲಕ ಆರ್ಥಿಕ ಮತ್ತು ದೈವಿಕ ವಿಚಾರಗಳು ಅವಿನಾಭಾವ ಸಂಬಂಧ ಹೊಂದಿವೆ ಎಂದರು.

**ಕಾಯಕ ಪ್ರಸಾದ ದಾಸೋಹ.**

ಸಕಲ ಜೀವಾತ್ಮರಿಗೆ ಒಳಿತು ಬಯಸುವವನು ಭಕ್ತನಾದರೆ ಸಕಲ ವಸ್ತುಗಳನ್ನು ತನ್ನ ಆಶೇಗಳ ಈಡೇರಿಕೆಗಾಗಿ ಬಯಸುವವನು ಭವಿ. ಮಾನವನ ವ್ಯಕ್ತಿತ್ವ ವಿಕಸನಗೊಳ್ಳಬೇಕಾದರೆ ಮೊದಲು ಕಾಯಕ

ಮಾಡಬೇಕು. ಅಂತರಂಗ ಶುದ್ದಿಗಾಗಿ ಸಮರ್ಪಣಾಭಾವ ಧ್ಯಾನ ಅಂದರೆ ಇಷ್ಟ ಲಿಂಗ ಪೂಜೆ ಮತ್ತು ಬಹಿರಂಗ ಶುದ್ಧಿಗಾಗಿ ಕಾಯಕ ದಾಸೋಹದ ಮೂಲಕ ಜಂಗಮ ಲಿಂಗದ ಪೂಜೆ ಮಾಡಬೇಕು. ಅಂತರಂಗ ಶುದ್ಧಿಯಿಂದ ಆತ್ಮ ಕಲ್ಯಾಣವಾದರೆ ಬಹಿರಂಗ ಶುದ್ಧಿಯಿಂದ ಲೋಕ ಕಲ್ಯಾಣವಾಗುತ್ತದೆ. ಆತ್ಮ ಕಲ್ಯಾಣ ಸ್ವಾತಂತ್ಯ, ಆನಂದ ನೀಡಿದರೆ ಲೋಕ ಕಲ್ಯಾಣ ಜವಾಬ್ದಾರಿಯ ಪ್ರಜ್ಞೆ ಮೂಡಿಸುವುದು.

**ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು**

**ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು**

**ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು**

ಎನ್ನುವಲ್ಲಿ ಕಾಯಕ ಸ್ವಾವಲಂಬನೆಗಾಗಿ ಅಲ್ಲ ಅದಕ್ಕೆ ತ್ರಿವಿಧ ದಾಸೋಹಗಳಿವೆ ಎಂಬುದನ್ನು ತೋರಿಸುವುದುರ ಜೊತೆಗೆ ಆಧುನಿಕ ಆರ್ಥಿಕ ಚಟುವಟಿಕೆಗಳಾದ ಕೃಷಿ, ಕೈಗಾರಿಕೆ, ಮತ್ತು ಸೇವಾ ವಲಯಗಳನ್ನು ಕುರಿತು ಅಣ್ಣನವರ ಈ ವಚನ ತಿಳಿಸುತ್ತದೆ.

ಕಾಯಕ ಪ್ರತಿಯೊಬ್ಬರ ಆದ್ಯ ಕರ್ತವ್ಯ. ದುಡಿಮೆ, ಕೆಲಸ ಅಥವಾ ಕಾಯಕ ಎಲ್ಲರಿಗೂ ಅನಿವಾರ್ಯ. ಕಾಯಕದಿಂದ ಫಲವನ್ನು ಪ್ರಸಾದವಾಗಿ ಸ್ವಿಕರಿಸಿದರೆ ಗಳಿಕೆಯ ಅಹಂನಿಂದ ಹೊರಬಂದಂತಾಗುತ್ತದೆ. ಆ ಗಳಿಕೆ ಕೇವಲ ನಮಗಾಗಿಯೇ ಖರ್ಚು ಮಾಡದೇ ಸಾಮಾಜಿಕ ಜವಾಬ್ದಾರಿಯನ್ನು ಸಮರ್ಪಣಾಭಾವದಿಂದ ನಿಭಾಯಿಸುವ ದಾಸೋಹಕ್ಕೆ ಬಳಸಬೇಕು. ಯೋಗ್ಯ ಉತ್ಪಾದನೆ, ಯೋಗ್ಯ ಬಳಕೆ ಮತ್ತು ಯೋಗ್ಯ ವಿತರಣೆ ಇವು ಬಸವಣ್ಣನವರ ಆರ್ಥಿಕ ವಿಚಾರಗಳ ಮುಖ್ಯ ಅಂಶಗಳು. ಆಧುನಿಕ ಅರ್ಥಶಾಸ್ತ್ರದಲ್ಲಿ ಉತ್ಪಾದನೆ, ಹಂಚಿಕೆ ಮತ್ತು ಬಳಕೆಗೆ ಒತ್ತನ್ನು ಕೊಟ್ಟರೆ ವಚನಕಾರರು ಇವುಗಳ ಗುಣಮಟ್ಟ ಕುರಿತು ಪ್ರಾಧಾನ್ಯತೆಯನ್ನು ನೀಡುತ್ತಾರೆ. ಕಾಯಕವೆಂದರೆ ಯೋಗ್ಯ ಉತ್ಪಾದನೆ. ದಾಸೋಹವೆಂದರೆ ಯೋಗ್ಯ ವಿತರಣೆ ಮತ್ತು ಪ್ರಸಾದವೆಂದರೆ ಯೋಗ್ಯ ಬಳಕೆ.

ಕಾಯಕ ಮಾಡದವನಿಗೆ ಹಸಿವು, ರುಚಿ, ವಿಶ್ರಾಂತಿ ಹಾಗೂ ನಿದ್ದೆಯ ಮಹತ್ವ ಗೊತ್ತಾಗುವದಿಲ್ಲ. ಕಾಯಕ ಜೀವಿಯ ಹಸಿವು ಎಲ್ಲಾ ಪದಾರ್ಥಗಳನ್ನು ಪ್ರಸಾದವಾಗಿಸುತ್ತದೆ. ರುಚಿಕರವಾಗಿಸುತ್ತದೆ. ಕಾಯಕ ಜೀವಿಗೆ ವಿಶ್ರಾಂತಿ ಮತ್ತು ನಿದ್ದೆಗಳ ಸುಖ ಸಹಜವಾಗಿ ಲಭಿಸುತ್ತದೆ. ಸತ್ಯ ಶುದ್ಧ ಕಾಯಕದಿಂದ ಮನಸ್ಸು ಪವಿತ್ರವಾಗುತ್ತದೆ. ಆದ್ದರಿಂದ ಕಾಯಕ ತತ್ವವು ವಿಶ್ವಮಾನ್ಯವಾಗಿದೆ.

**ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ**

**ಚಿತ್ತಶುದ್ಧದಲ್ಲಿ ಕಾಯಕ ಮಾಡುವಲ್ಲಿ**

**ಸದ್ಭಕ್ತಂಗೆ ಎತ್ತ ನೋಡಿದರತ್ತ ಲಕ್ಷ್ಮಿ ತಾನಾಗಿಪ್ಪಳು**

**ಮಾರಯ್ಯಪ್ರಿಯ ಅಮರೇಶ್ವರ ಲಿಂಗದ ಸೇವೆಯುಳ್ಳನ್ನಕ್ಕರ**

ಕಾಯಕದ ಮೂಲಕ ಬಸವಣ್ಣನವರು 'ಶ್ರಮಗೌರವ' (ಟಾಲಸ್ಟಾಯ್ ಅವರ (Bread labour) ಕುರಿತು ಪ್ರತಿಪಾದಿಸುತ್ತಾರೆ. ಶ್ರಮಕ್ಕಿಂತ ಮಿಗಿಲು ಯಾವುದು ಇಲ್ಲ. ವಚನಕಾರರ ಪ್ರಕಾರ ಆಧ್ಯಾತ್ಮ ಮತ್ತು ಧರ್ಮ ಸಮಾಜದ ತಳಹದಿ. ದೇವರು ಶ್ರೇಷ್ಠ ಆಧ್ಯಾತ್ಮಿಕ ಮೌಲ್ಯ. ಇದರ ಮೂಲಕ ವ್ಯಕ್ತಿ ಮತ್ತು ಸಮಾಜದ ಒಳಿತು ಸಾಧಿಸಬೇಕೆನ್ನುತ್ತಾರೆ. ಕಾಯಕತತ್ವ ಸ್ವಂತ ದುಡಿಮೆಯ ಮೇಲೆ ನಿಂತಿದೆ.

**ಛಲಬೇಕು ಶರಣಂಗೆ ಪರ ಧನವನೊಲ್ಲೆನೆಂಬ....**

**ಉರಿ ಬರಲಿ ಸಿರಿ ಬರಲಿ ಮಾನವರ ಬೇಡೆನು**

ಎಂಬ ವಚನದಲ್ಲಿ ಪರರ ಸಂಪತ್ತು, ಪದಾರ್ಥಕ್ಕೆ ಆಸೆ ಪಡೆಬಾರದು ಮತ್ತು ಬೇಡುವ ಪ್ರವೃತ್ತಿಯಿಂದ ದೂರವಿರಬೇಕೆನ್ನುತ್ತಾರೆ. ಕಾಯಕವು ಪ್ರಮಾಣಿಕವಾಗಿರಬೇಕೆಂದು ಪ್ರತಿಪಾದಿಸುತ್ತಾರೆ. ಶ್ರದ್ಧೆಯಿಂದ ಬೆವರು ಹರಿಸಿ ದುಡಿಯಬೇಕೆನ್ನುತ್ತಾರೆ.

**ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ**

**ಸಿರಿಯೆಂಬುದು ಸಂತೆಯ ಮಂದಿ ಕಂಡಯ್ಯ**

### ಇದನೆಚ್ಚಿ ಕೆಡಬೇಡ

ಲಂಚ ರುಶುವತ್ತು ಮತ್ತು ಭ್ರಷ್ಟಚಾರದ ಸಂಪಾದನೆ ಸಲ್ಲದು. ಕಾಯಕವು ಸಮಾನತೆಯನ್ನು ಪ್ರತಿಪಾದಿಸುತ್ತದೆ.

**ಕಾಯಕದಲ್ಲಿ ನಿರತನಾದೆಡೆ ಗುರು ದರುಶನವಾದರೂ ಮರೆಯಬೇಕು**
**ಲಿಂಗ ಪೂಜೆಯಾದರೂ ಮರೆಯಬೇಕು**

ವಾನರನಿಂದ ನರನಾಗುವ ಪ್ರಕ್ರಿಯೆಯಲ್ಲಿ ಕಾಯಕದ ಪಾತ್ರ ಮಹತ್ವದ್ದಾಗಿದೆ ಎಂದು ಕಾರ್ಲ್‌ಮಾರ್ಕ್ಸ್ ಅವರ ಆಪ್ತ ಫ್ರೆಡರಿಕ್ ಎಂಜೆಲ್ಸ್ ಅವರು ತಮ್ಮ "ಪಾರ್ಟ ಪ್ಲೇಯ್ಡ್ ಬೈ ಲೇಬರ್ ಇನ್ ದಿ ಟ್ರಾನ್ಸಿಷನ್ ಫ್ರಾಂ ಏಪ್ ಟು ಮ್ಯಾನ್" ಎಂಬ ಹೊತ್ತಿಗೆಯಲ್ಲಿ ತಿಳಿಸಿದ್ದಾರೆ. ಕಾಯಕ ಮಾನವನ ಏಕತೆ ಸಾರುವ ಮೂಲ ಮಂತ್ರ. ಭೂಲೋಕದ ಮಹತ್ವ ತಿಳಿಸುತ್ತದೆ. ಭೂಮಿ ಬದುಕಲು ಯೋಗ್ಯವಾಗುವಂತೆ ಮಾಡುತ್ತದೆ. ಕಾಯಕ ಮಾನವರ ನಡುವಿನ ತರತಮಗಳನ್ನು, ಅಂತಸ್ತುಗಳನ್ನು ಒಡೆದು ಹಾಕುತ್ತದೆ. ಕಂದಕ ತುಂಬುತ್ತದೆ. ಕಾಯಕ ಮಾಡುವುದೆಂದರೆ ಬದುಕನ್ನು ಪ್ರೀತಿಸುವುದು.

**ದೇವ ಸಹಿತ ಮನೆಗೆ ಬಂದಡೆ**
**ಕಾಯಕವಾವುದೆಂದು ಬೆಸಗೊಂಡೆನಾದೆಡೆ**
**ನಿಮ್ಮಾಣೆ ! ನಿಮ್ಮ ಪುರಾತನರಾಣೆ**
**ತಲೆದಂಡ ! ತಲೆದಂಡ ಕೂಡಲ ಸಂಗಮದೇವ ಭಕ್ತರಲ್ಲಿ**
**ಕುಲವನರಸಿದಡೆ  ನಿಮ್ಮ ರಾಣಿವಾಸದಾಣೆ**

ಎಲ್ಲಾ ವೃತ್ತಿಗಳಿಗೂ ಸಮಾನ ಗೌರವ ನೀಡುವುದು ಅಗತ್ಯ. ಯಜಮಾನ–ಶ್ರಮಿಕ ಎಂಬ ವ್ಯತ್ಯಾಸ ಇಲ್ಲವಾಗುತ್ತದೆ. ಯಾವ ಕಾಯಕವು ಚಿಕ್ಕದಲ್ಲ. ದೊಡ್ಡದೂ ಅಲ್ಲ. ಎಲ್ಲವೂ ಸಮಾನ.

**ಆವ ಕಾಯಕವಾದರೂ ಸ್ವಕಾಯಕವ ಮಾಡಿ**
**ಗುರುಲಿಂಗ ಜಂಗಮ ಮುಂದಿಟ್ಟು**
**ಒಕ್ಕುದ ಹಾರೈಸಿ ಮಿಕ್ಕುದ ಕೈಕೊಂಡು**
**ವ್ಯಾಧಿ ಬಂದಡೆ ನರಳು ಬೇನೆ ಬಂದಡೆ ಒರಲು**
**ಜೀವ ಹೊದೆಡೆ ಸಾಯಿ ಇದಕ್ಕೆ ದೇವರ ಹಂಗೇಕೆ**
**ಭಾಷು ಲದ್ದೆಯ ಸೋಮ**

ಎಂದು ಹುಲ್ಲು ಹೊರೆ ಹೊರುವ ಕಾಯಕದ ಸೋಮಯ್ಯ ಬದುಕೊಂದು ಜೈವಿಕ ಕ್ರಿಯೆ ಎನ್ನುತ್ತಾನೆ.

ನಾವು ಗಳಿಸಿದ್ದೆಲ್ಲಾ ದೇವರ ಕೃಪೆ ಎಂಬ ಅರಿವಾದಾಗ ಅದನ್ನು ಪ್ರಸಾದವೆಂದು ಜೋಪಾನವಾಗಿಟ್ಟುಕೊಂಡು ಸುವ್ಯವಸ್ಥಿತವಾಗಿ ಬಳಸುತ್ತೇವೆ. ಸತ್ಕಾರ್ಯಗಳಿಗಾಗಿ ವ್ಯಯಿಸುತ್ತೇವೆ. ಆ ವಸ್ತುವಿನ ಮಹತ್ವ ಅರಿತು ಅನ್ಯಾಯವಾಗಿ ದುಂದುವೆಚ್ಚ ಮಾಡದಂತೆ ಎಚ್ಚರಿಕೆ ವಹಿಸುತ್ತೇವೆ. ಸೇವಾ ಮನೋಭಾವ ತಾಳುತ್ತೇವೆ. ಜಗತ್ತಿನ ಬಗ್ಗೆ ತೀವ್ರ ಕಾಳಜಿ ಹೊಂದುತ್ತೇವೆ.

ಕಾಯಕವು ಸರ್ವರಿಗೆ ಸಮಪಾಲು ಸರ್ವರಿಗೆ ಸಮ ಬಾಳು ಎನ್ನುತ್ತದೆ. ಕಾಯಕ "ಸರ್ವೇಜನ ಸುಖಿನೋ ಭವಂತು" ಎನ್ನುತ್ತದೆ. ಸಾಮೂಹಿಕ, ಸಹಕಾರಿ ಜೀವನಕ್ಕೆ ಕಾಯಕ ನಾಂದಿ ಹಾಡುತ್ತದೆ.

**ಕಾಗೆಯೊಂದಗುಳ ಕಂಡರೆ ಕರೆಯದೆ**
**ತನ್ನ ಬಳಗವನು**
**ಕೋಳಿ ಒಂದು ಕುಟುಕ ಕಂಡರೆ**
**ಕೂಗಿ ಕರೆಯದೆ ತನ್ನ ಕುಲವನೆಲ್ಲವ**

ಕಾಯಕ ಸ್ವಾರ್ಥಪರವಾಗಿರಕೂಡದು. ಕಾಯಕದಿಂದ ಬಂದದ್ದನ್ನು ಕೂಡಿಡಬಾರದು ಅಥವಾ ಸಂಗ್ರಹಿಸಬಾರದು

**ಹೊನ್ನಿನೊಳಗೊಂದೆರೆಯ ಸಿರಿಯೊಳಗೊಂದೆಳೆಯ**
**ಅನ್ನದೊಳಗೊಂದಗುಳ ಇಂದಿಂಗೆ ನಾಳಿಂಗೆ ಬೇಕೆಂದನಾದರೆ**
**ನಿಮ್ಮಾಣೆ ನಿಮ್ಮ ಪ್ರಮಥರಾಣೆ**
**ನಿಮ್ಮ ಶರಣೆಂಗಿಲ್ಲದೆ ಮತ್ತೊಂದನರಿಯೆ ಕೂಡಲ ಸಂಗಮದೇವಾ**

ಇದನ್ನೇ ಆಯ್ದಕ್ಕಿ ಲಕ್ಕಮ್ಮ ಹೀಗೆ ಹೇಳುತ್ತಾಳೆ

**ಆಸೆ ಎಂಬುದು ಅರಸಂಗಲ್ಲದೆ**
**ಶಿವಭಕ್ತರಿಗುಂಟೆ ಅಯ್ಯಾ**
**ರೋಷವೆಂಬುದು ಯಮಧೂತರಿಗಲ್ಲದೆ**
**ಅಜಾತರಿಗುಂಟೇ ಅಯ್ಯಾ**
**ನಮಗೆ ಎಂದಿನದೆ ಸಾಕು**
**ಮತ್ತೆ ಕೊಂಡು ಹೋಗಿ ಅಲ್ಲಿಯೇ ಸುರಿ**
**ಮಾರಯ್ಯ ಪ್ರೀಯ ಅಮರೇಶ್ವರ ಲಿಂಗ ಕೊಟ್ಟು**
**ಕಾಯಕವೇ ಸಾಕು ಮಾರಯ್ಯ**

ಕಾಯಕವೆಂದರೆ ಜೀವನೋಪಾಯಕ್ಕಾಗಿ ಕೈಕೊಂಡ ಕೆಲಸ. ಎಲ್ಲಾ ವೃತ್ತಿಗಳು ಸಮಾನ. ಯಾವುದೇ ಹೆಚ್ಚು ಕಡಿಮೆ ಇಲ್ಲ.

**ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ**
**ಹಾಸನಿಕ್ಕಿ ಸಾಲಿಗನಾದ ವೇದವನೋದಿ ಹಾರುವನಾದ**
**ಇದಕಾರಣ ಕೂಡಲ ಸಂಗಮದೇವಾ ಲಿಂಗ**
**ಸಂಗವನರಿತವನೇ ಕುಲಜನು.**

ಕಾಯಕ ಎಲ್ಲರಿಗೂ ಬೇಕು ಅದರಲ್ಲಿ ತರತಮ ಧೋರಣೆ ಸಲ್ಲದು

**ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ**
**ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುಲ ಹರಿವುದು**
**ಜಂಗಮನಾದರೂ ಕಾಯಕದಿಂದಲೇ ವೇಷ ಪಾಶ ಹರಿವುದು**
**ಇದು ಚನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು**
**ಎಂದು ನುಲಿಯ ಚಂದಯ್ಯ ನುಡಿಯುತ್ತಾನೆ.**

ವಚನಕಾರರು ಶ್ರೀಸಾಮಾನ್ಯನ ಕಲ್ಯಾಣ ತಮ್ಮ ಧ್ಯೇಯವೆಂದು ತಿಳಿದು ಅದೇ ದಾರಿಯಲ್ಲಿ ನಡೆದರು. ಅನ್ನ ದಾಸೋಹ ಮತ್ತು ಜ್ಞಾನ ದಾಸೋಹ ವಿತರಣೆಯ ಮುಖ್ಯ ಮಾರ್ಗಗಳಾಗಬೇಕಂದರೆ. ಅದನ್ನು ಅಳವಡಿಸಿಕೊಂಡು ಸಮಾಜದಲ್ಲಿ ನಂತರ ಜಾರಿಗೊಳಿಸಿದರು.

ಮಾನವನ ಜೀವನಕ್ಕೆ ಹಣಕಾಸು ಮುಖ್ಯ ಅದು ಸಮಾಜದ ಉತ್ಪಾದನೆ, ವಿನಿಮಯ, ಹಂಚಿಕೆಗೆ ಸಂಭಂಧಪಟ್ಟಿದ್ದಲ್ಲದೇ ಉದ್ಯೋಗ ಮತ್ತು ಆದಾಯಕ್ಕೂ ಆಧಾರ. ದೇಶದ ಇತಿಹಾಸದಲ್ಲಿಯೇ ಮೊಟ್ಟ ಮೊದಲ ಬಾರಿಗೆ ಆರ್ಥಿಕ ವ್ಯವಸ್ಥೆ ಜಾರಿಗೊಳಿಸುವ ಜವಾಬ್ದಾರಿ ಕೈಕೊಂಡವರು ಶಿವಶರಣರು. ಅರ್ಥಕ್ಕೆ ನಿರ್ಣಾಯಕ ಪಾತ್ರವಿದೆ ಎಂದು ಗುರುತಿಸಿ ಅದನ್ನು ಜಾರಿಗೆ ತರಲು ಭಕ್ತಿ ಮಾರ್ಗ ಅನುಸರಿಸಿದರು. ಹೆಗೆಲ್, ಮಾರ್ಷಲ್, ಕೇನ್ಸ್, ಗಾಂಧೀಜಿ, ಅಮರ್ತ್ಯಸೇನ್ ಪ್ರಚಾರಕ್ಕೆ ತಂದ ವಿಚಾರಗಳನ್ನು ೮೦೦ ವರ್ಷಗಳ ಹಿಂದೆಯೆ ಶಿವಶರಣರು ಅಳವಡಿಸಿಕೊಳ್ಳುವಂತೆ ಪ್ರೇರೇಪಿಸಿದರು. ಅಲ್ಲಮ ಪ್ರಭುಗಳ ಮಾನವ ಆಸೆ ಪೂರೈಸಿಕೊಳ್ಳುವ ಮೂಲಭೂತ ಅಂಶಗಳ ಕುರಿತು ತಮ್ಮ ವಚನದಲ್ಲಿ

**ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ**
**ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ**

**ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ.**

ಈ ರೀತಿ ವಚನಕಾರರು ಕಾಯಕ, ಪ್ರಸಾದ ಮತ್ತು ದಾಸೋಹಗಳು ಒಂದು ವ್ಯವಸ್ಥೆಯ ಜೀವನಾಡಿಗಳಂತೆ ಕೆಲಸ ಮಾಡುತ್ತವೆ. ಉತ್ಪಾದನೆ ಹಂಚಿಕೆ ಮತ್ತು ಬಳಕೆ ಪರಸ್ಪರ ಸಂಬಂಧ ಇರುವುದನ್ನು ತೋರಿಸಿದ್ದಾರೆ. ಅವರ ವಿಚಾರಗಳು ಇಂದಿನ ಸಂದರ್ಭದಲ್ಲಿಯೂ ಹೆಚ್ಚು ಪ್ರಸ್ತುತವಾಗಿವೆ. ಎಲ್ಲಾ ದೇಶಗಳ ಆರ್ಥಿಕ ಅಭಿವೃದ್ಧಿಯ ಚಾಲಕ ಮತ್ತು ಪ್ರೇರಕ ಶಕ್ತಿಯೆಂದರೆ ಆಯಾ ದೇಶಗಳ ಸಂಸ್ಕೃತಿ, ಪರಂಪರೆ, ಸಾಮಾಜಿಕ ವ್ಯವಸ್ಥೆ ಮತ್ತು ಸಂಪ್ರದಾಯಗಳೆಂಬುದನ್ನು ಮರೆಯಕೂಡದು. ವಚನಕಾರರ ಆಚಾರ ವಿಚಾರಗಳನ್ನು ಅಳವಡಿಸಿಕೊಂಡು ಜಾರಿಗೆ ತಂದರೆ ಈ ಜಗತ್ತು ವಾಸಯೋಗ್ಯ ಆಗುವದರಲ್ಲಿ ಸಂದೇಹವಿಲ್ಲ. ಸಂಪತ್ತು ಎಲ್ಲಿಯೂ ಸಂಗ್ರಹವಾಗದೆ ನಿರಂತರತೆ ಪಡೆಯುವುದರಲ್ಲಿ ಅನುಮಾನವಿಲ್ಲ.



**ಗುಲಬರ್ಗಾ ಜಿಲ್ಲೆಯ ಉತ್ತರಭಾಗದ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿ. (ಶಾಸನಗಳನ್ನು ಮತ್ತು ದೇವಾಲಯಗಳನ್ನು ಅನುಲಕ್ಷಿಸಿ).**

**–ಡಾ. ಶಾಮಲಾ ಧುರೇಂದ್ರ,**
ಜೋಷಿಗಲ್ಲಿ, ಮು॥ಪೋ॥ ಚಿಂಚೋಳಿ,
ಕಲಬುರಗಿ ಜಿಲ್ಲೆ.

**ಸಾಮಾಜಿಕ ಸ್ಥಿತಿಗತಿ.**

ಗುಲಬರ್ಗಾ ಜಿಲ್ಲೆಯ ಉತ್ತರ ಭಾಗದಲ್ಲಿ ದೊರಕುವ ಶಾಸನಗಳು, ದೇವಾಲಯಗಳು ಮತ್ತು ಮೂರ್ತಿ ಶಿಲ್ಪಗಳ ವಿವರಗಳು ಪ್ರಾಚೀನ ಸಮಾಜದ ಸ್ವರೂಪವನ್ನು ಕಟ್ಟಿಕೊಡುವ ಆಕಾರಗಳಾಗುತ್ತವೆ. ಅವುಗಳಲ್ಲಿ ಆಯಾ ಕಾಲದ ಸಮಾಜವು ಹೇಗಿದೆಂಬುದು ಕಾಣಬಹುದು. ಈ ಮೂಲ ಆಕರಗಳ ಮೂಲಕ ಸಾಮಾಜಿಕ ಧಾರ್ಮಿಕ ವಿವರಗಳನ್ನು ಇಲ್ಲಿ ನೀಡುವ ಪ್ರಯತ್ನ ಮಾಡಲಾಗಿದೆ. ಸಮಾಜವನ್ನು ವೇದಕಾಲದಲ್ಲಿ ವೃತ್ತಿಗನುಸಾರ ಭೇಧಿಸಿರಲಿಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಈ ಮೂರು ವರ್ಗಗಳಿಗೆ ವಿವಾಹದ ವಿಷಯಗಳಲ್ಲಿ ಖಚಿತ ನಿರ್ಬಂಧಗಳಿರಲಿಲ್ಲ.[೧] ಋಗ್ವೇದದ ಕಾಲದಲ್ಲಿ ವೃತ್ತಿಭೇದಗಳುಂಟಾಗಿದ್ದರೂ ಅವುಗಳಲ್ಲಿ ಮೇಲು ಕೀಳೆಂಬ ಮನೋಭಾವವಿರಲಿಲ್ಲ. ಆದರೆ ಅಥರ್ವವೇದ ಕಾಲದ ಕೊನೆಯ ವೇಳೆಗೆ ಈ ವೃತ್ತಿಭೇದವು ಆ ವೃತ್ತಿಗಳನ್ನು ಸರಿಸುವವರ ಸಾಮಾಜಿಕ ಸ್ಥಾನಮಾನಗಳಲ್ಲಿಯು ವ್ಯತ್ಯಾಸಗಳುಂಟಾಗಲು ಕಾರಣವಾಯಿತು.[೨] ವರ್ಣವ್ಯವಸ್ಥೆಯಲ್ಲಿ ಈಗಿನ ಜಾತಿ ಪದ್ದತಿಯಂತೆ ಯಾವುದೇ ನಿಷೇಧವಿರಲಿಲ್ಲ. ಬೇರೆ ವರ್ಣದವರು ವರಿಸಿ ವಿವಾಹವಾಗಬಹುದಿತ್ತು. ಇಂತಹ ಉಲ್ಲೇಖಗಳು ಜಾತಕಗಳಲ್ಲಿವೆ. ವೃತ್ತಿಗಳಲ್ಲಿ ಮುಂದೆ ಅನೇಕ ಭೇದ ಉಂಟಾಗಿ ಅದು ಸಾಮಾಜಿಕ ಮೇಲು–ಕೀಳು ಭಾವನೆಗಳಿಗೆಡೆ ಮಾಡಿ ಚಾತುರ್ವಣಗಳಿಗೆ ದಾರಿ ಮಾಡಿದ್ದಂತಾಯಿತು. ಈ ವ್ಯವಸ್ಥೆಯು ಬ್ರಾಹ್ಮಣಕಗಳ ಕಾಲಕ್ಕೆ ಮತ್ತಷ್ಟು ಬಿಗಿಗೊಂಡು ವೃತ್ತಿ ವ್ಯತ್ಯಾಸವು ಹಿಂದುಳಿದ ವ್ಯಕ್ತಿಯ ಹುಟ್ಟು ವರ್ಣವನ್ನು ನಿರ್ಣಯಿಸುವಂತಾಯಿತು.[೩]

**ಸಾಮಾಜಿಕ ಸ್ತರ, ಜಾತಿ ಮತ್ತು ಧರ್ಮದ ಉಲ್ಲೇಖ.**

ಶಾಸನಗಳ ಶಾಪಾಶಯಗಳಲ್ಲಿ ಚಾಂಡಾಲರು, ಸೂದ್ರರ ಉಲ್ಲೇಖಗಳಿವೆ. ಬ್ರಾಹ್ಮಣರು ಉಚ್ಚ ಸ್ಥಾನದಲ್ಲಿದ್ದರು. ಅನಂತರ ಗೌಡ, ಒಕ್ಕಲಿಗ, ಸೆಟ್ಟಿ, ತಂಬುಲಿಗ, ಜೇಡ, ಗಾಣಿಗ, ಅಗಸ, ಕಂಚಿಗೊರವ, ಕಂಚಗಾರ, ಕಮ್ಮಾರ, ಕಂಬಾರ, ಬಡಿಗ ಇವರಿಗೆ ಊರಿನಲ್ಲಿ ಪ್ರತ್ಯೇಕ ಕೇರಿಗಳಿದ್ದವು. ಶಾಸನದಲ್ಲಿ ದೇವಾಲಯ ಪೂಜೆ ಬ್ರಾಹ್ಮಣರಿಗಲ್ಲದೆ ಗೊರವುಗಳಿಗೆ ಸಲ್ಲದು ಎಂದು ಉಲ್ಲೇಖಿತವಾಗಿದೆ. ಕ್ರಿ.ಶ.೧೧೮೫ರ ಮಡಿಹಾಳ ಶಾಸನದಲ್ಲಿ ಬ್ರಾಹ್ಮಣರು ಉನ್ನತ ಸ್ಥಾನದಲ್ಲಿದ್ದರೆಂದು ಉಲ್ಲೇಖಿಸಿದೆ. ಕ್ರಿ.ಶ೧೧೦೩ರ ರುದ್ರವಾಡಿಯ ಶಾಸನದಲ್ಲಿ ಅಗ್ರಹಾರದ ಪ್ರಭು ವಾಸುದೇವ ಭಟ್ಟೋಪಧ್ಯಾಯರು ಎಂದು ಸೂಚಿಸುತ್ತದೆ. ಅಂದರೆ ಅಗ್ರಹಾರವನ್ನು ಬ್ರಾಹ್ಮಣರಲ್ಲದೆ ಬೇರೆಯವರು ಉಸ್ತುವಾರಿ ಮಾಡುತ್ತಿರಲಿಲ್ಲ ಎಂಬುದು ಸ್ಪಷ್ಟಗೊಳ್ಳುತ್ತದೆ.

ಕುರುಬಗೇರಿ (ಅಂದೋಲ ಕ್ರಿ.ಶ.೧೩೮೮) ಸೂಳೆಗೇರಿಗಳು, ದೇವಾಲಯಗಳಿಗೆ ಹೊಂದಿ ವಾಸಗೊಂಡಿದ್ದರು. ಅದಕ್ಕೆ ಅಂದಿನ ಸಮಾಜದಲ್ಲಿ ಅಭ್ಯಂತರವಿರಲಿಲ್ಲ ಎಂಬುದಕ್ಕೆ ಅಂಥವರ ನಿವೇಶನಗಳನ್ನು, ದಂಡ ದೋಷ, ಮುಕ್ತಗೊಳಿಸಿ ಸಮಾಜದ ವಿವಿಧ ವೃತ್ತಿಯವರು ಮಾನ್ಯ ಮಾಡಿರುವ ಉಲ್ಲೇಖ ಮಾಡಿಹಾಳದ ಕೋಟಿ ಶಂಕರ ದೇವಸ್ಥಾನದ ಕಂಬದ ಶಾಸನದಲ್ಲಿದೆ (ಮಾಡಿಹಾಳ ಕ್ರಿ.ಶ.೧೧೮೫).[೪] ಮಡಿಹಾಳ ಶಾಸನದಲ್ಲಿ ಮಡಿವಾಳ, ಬಡಗಿ, ಸಿಪ್ಪಿಗ, ಕಮ್ಮಾರ, ಇನಿತುಮಂ ಎಂದು ಉಲ್ಲೇಖಿಸಿದೆ.[೫] ಮಡಿವಾಳ ಎಂದರೆ ಈಗ ನಾವು ಅಗಸರು ಎಂದು ಕರೆಯುವ ಜನರು. ಇವರ

ಕಾಯಕ ಬಟ್ಟೆ ತೊಳೆಯುವುದು. ಸಾಮಾನ್ಯವಾಗಿ ಪುರೋಹಿತ ವರ್ಗ ರಾಜ ವರ್ಗ ಮತ್ತು ಆಡಳಿತ ವರ್ಗಗಳ ಸೇವೆಗೆ ಮಡಿವಾಳರು, ಚಾಣ್ಡಲರು, ದೇವದಾಸಿ, ಸೂಳೆಯರಿದ್ದರು. ಬಡಿಗರು ರೈತಾಪಿ ಜನರ ಕೃಷಿ ಸಲಕರಣೆಗಳನ್ನು ತಯ್ಯಾರಿಸುವದಲ್ಲದೆ, ಮನೆ ಕಟ್ಟುವಲ್ಲಿ ಮತ್ತು ಮನೆಯ ಉಪಕರಣಗಳನ್ನು ತಯ್ಯಾರು ಮಾಡುತ್ತಿದ್ದರು. ಕುಂಬಾರರು ಮಡಿಕೆ ಮತ್ತು ಗೃಹ ಉಪಯೋಗಿ ವಸ್ತುಗಳನ್ನು (ಪಾತ್ರೆ, ಗ್ಲಾಸು ಇತ್ಯಾದಿ) ತಯ್ಯಾರಿಸುತ್ತಿದ್ದರು. ಕಮ್ಮಾರರು ಲೋಹದ ಸಾಮಾನುಗಳನ್ನು ಮತ್ತು ಕೃಷಿ ಉಪಯೋಗಿ ವಸ್ತುಗಳನ್ನು ತಯ್ಯಾರಿಸುತ್ತಿದ್ದರು. ಕ್ರಿ.ಶ.೧೨ನೆಯ ಶತಮಾನದ ಮಡಿಹಾಳ ಶಾಸನದಲ್ಲಿ ಗಾಣಿಗರು ಗಾಣದಿಂದ ಎಣ್ಣೆಯನ್ನು ತೆಗೆಯುವ ಉಲ್ಲೇಖವಿದೆ. ಪಡಸಾವಳಿ ಶಾಸನದಲ್ಲಿ ಅರುವತ್ತೊಕ್ಕಲು ಎಂದು ಉಲ್ಲೇಖಿಸಿದೆ. ಅರುವತ್ತೊಕ್ಕಲು ಎಂಬುದು ಕೃಷಿ ಪ್ರಧಾನವಾಗಿರುವ ಜನಾಂಗದ ವಂಶ? ಜಾತಿ? ಉಲ್ಲೇಖಿಸುವಂತಿದೆ. ನಿಂಬರ್ಗಾ ಶಾಸನದ ಶಾಪಾಶಯದಲ್ಲಿ ಚಾಂಣ್ಡಾಲರ ಉಲ್ಲೇಖವಿದೆ. ಬ್ರಾಹ್ಮಣರು ಉಚ್ಚಸ್ಥಾನದಲ್ಲಿದ್ದರು. ಅನಂತರ ಗೌಡ, ಒಕ್ಕಲಿಗ, ಸೆಟ್ಟಿ, ತಂಬುಲಿಗ, ಜೇಡ, ಗಾಣಿಗ, ಅಗಸ, ಕಂಚಿಗೊರವ, ಕಂಚಗಾರ, ಕಮ್ಮಾರ, ಕಂಬಾರ, ಬಡಿಗ ಇವರಿಗೆ ಊರಿನಲ್ಲಿ ಪ್ರತ್ಯೇಕ ಕೇರಿಗಳಿದ್ದವು.

ವೀರಬಣಂಜಗರ ಧರ್ಮ (ಚಿನಮಳ್ಳಿ–ಕ್ರಿ.ಶ೧೧೭೫). ಕುರುಬಗೇರಿ (ಅಂದೋಲಕ್ರಿ.ಶ.೧೩೮೮), ಕುರುಬ ಜನಾಂಗದವರಾದ ಬಕ್ಕಯ್ಯ, ಸೋವಿಮಯ್ಯ, ಮುದ್ದಯ್ಯ(ಬಿಂಗೋಳಿ ಕ್ರಿ.ಶ.೧೦೭೮). ಹಾಡುವವರು, ಪಾತ್ರದವರು, ಹಳವಿಗ ಬಿಕ್ಕೋಜ(ಸರಡಗಿ ಕ್ರಿ.ಶ.೧೦೧೧). ಗಣಿಕೆಯರ ಉಲ್ಲೇಖ(ನಿಂಬರ್ಗಾ ಕ್ರಿ.ಶ.೧೦೫೫). ಮಡಿವಾಳ, ಬಡಿಗ, ಸಿಪ್ಪಿಗ, ಕಮ್ಮಾರರು, ಸೂಳಿಗೆರಿಯ ಉಲ್ಲೇಖ (ಮಡಿಹಾಳ ಕ್ರಿ.ಶ.೧೧೮೪). ಹೊಲಗೇರಿಯ ಉಲ್ಲೇಖ (ಮಡಿಹಾಳ ಕ್ರಿ.ಶ.೧೨ನೆಯ ಶತಮಾನ). ತಾಮಾಮಂಡಲದ ವಿಶ್ವಕರ್ಮ ಏಕವಲ್ಲಿ ಎಂದು ಉಲ್ಲೇಖಿಸಲಾಗಿದೆ (ಮೋಘಾ ಕ್ರಿ.ಶ.೧೧೭೦). ಹೂ ಮಾರುವವರು ಎಂದು ಕ್ರಿ.ಶ. ೧೦೧೧ರ ಸರಡಗಿ ಶಾಸನ ಉಲ್ಲೇಖಿಸುತ್ತದೆ. ಪ್ರಸ್ತುತ ಅವರನ್ನು ಹೂಗಾರರು ಎಂದು ಕರೆಯುವರು. ಅಳಂದ ಸಾಸಿರದ ಶಾಸನಗಳಲ್ಲಿ ತುಂಬಲಿಗರು ಎಂದು ಉಲ್ಲೇಖಿಸಿವೆ. ಬಹುಶಃ ಇವರು ಎಲೆಯ ಕೃಷಿ ಮತ್ತು ವ್ಯಾಪಾರ ಮಾಡುವವರಿದ್ದರು.

ಆಳುವ ವರ್ಗ, ಅಧಿಕಾರಿ ವರ್ಗ, ವ್ಯಾಪಾರಿ ವರ್ಗ, ರೈತ ವರ್ಗ ಮತ್ತು ಶ್ರಮಿಕ ವರ್ಗವೆಂದೂ ಸಹ ನಾವು ವಿಗಡಿಸಬಹುದಾಗಿದೆ. ಆಳುವ ವರ್ಗದಲ್ಲಿ ಅರಸರು, ರಾಣಿಯರು, ಯುವರಾಜರು, ಪುರೋಹಿತರು, ಸಾಮಂತರು, ಮಹಾ ಮಂಡಳೇಶ್ವರರು ಮಂಡಳೇಶ್ವರರಿದ್ದರು. ಅಧಿಕಾರಿವರ್ಗದಲ್ಲಿ ಮಹಾಜನರು, ಸ್ಥಾನಾಚಾರ್ಯರು, ಗಾವುಂಡರು, ಸಂಧಿವಿಗ್ರಹಿಗಳು ಬರುತ್ತಾರೆ. ವ್ಯಾಪಾರಿವರ್ಗದಲ್ಲಿ ಸೆಟ್ಟಿ ಗುತ್ತರು, ಮುಮ್ಮರಿ ದಂಡರಿದ್ದಾರೆ. ಶ್ರಮಿಕ ವರ್ಗದಲ್ಲಿ ಕೃಷಿಕರು, ಕುಂಬಾರ, ಕಂಬಾರ, ಮಡಿವಾಳ, ಬಡಿಗ, ಸಿಪ್ಪಿಗ ಇತ್ಯಾದಿ ಜನ ಸಮುದಾಯಗಳಿವೆ.

**ಕುಟುಂಬ ವ್ಯವಸ್ಥೆ ಮತ್ತು ವಿವಾಹ ಪದ್ದತಿ.**

'ಸಾಧುಸಂಯುತ ವಿದ್ವಾಂಸನಾಗಿರ್ದ್ದೆವಕೆಯ್ಗು ಮನೆಗೆ ವೊಡೆಯನಾಗಿರ್ಪ್ಪಂತಲ್ಲದೆ ದುಶ್ಚರಿತ್ತನಾದ ನಿರವೀಯದೆ ಪೊಡಮಡಿಸುಪ್ಪದು' ಎಂದು ರುದ್ರವಾಡಿ ಶಾಸನ ತಿಳಿಸುತ್ತದೆ. ಕುಟುಂಬದ ಒಡೆಯ ಮತ್ತು ಸಮಾಜದ ಒಡೆಯನಾದವನ ಅರ್ಹತೆಗಳ ಬಗ್ಗೆ ವಿವರಿಸುತ್ತದೆ. ಶಾಸನಗಳಲ್ಲಿ ಹೆಚ್ಚಾಗಿ ಕುಟುಂಬ ವ್ಯವಸ್ಥೆಯ ಬಗ್ಗೆ ಹೆಚ್ಚಾಗಿ ಉಲ್ಲೇಖ ಸಿಗದಿದ್ದರೂ ಶಾಸನ ಶಿಲ್ಪಗಳಲ್ಲಿ, ಮಾಸ್ತಿಗಲ್ಲುಗಳಲ್ಲಿ ಮತ್ತು ಮೂರ್ತಿ ಶಿಲ್ಪಗಳಲ್ಲಿ ವಿವಾಹದ ಮತ್ತು ಪತಿ– ಸತಿಯರ ಸಂಬಂಧ ಹೇಗಿರುತ್ತೆ ಎಂಬುದರ ಬಗ್ಗೆ ವಿವರಿಸುತ್ತವೆ. ಎಕಪತ್ನಿತ್ವ ಮತ್ತು ಬಹು ಪತ್ನಿತ್ವ ಜಾರಿಯಲ್ಲಿತ್ತು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ವಿಕ್ರಮಾದಿತ್ಯನು ಬಹು ಪತ್ನಿತ್ವ ಹೊಂದಿದ್ದನೆಂದು ಮತ್ತು ೧೬ ರಾಣಿಯರಿದ್ದದ್ದು ಶಾಸನಗಳು ಉಲ್ಲೇಖಿಸುತ್ತವೆ. ಪಿರಿಯರಸಿ, ಪಟ್ಟ ಮಹಿಷೆ, ಪಟ್ಟದರಸಿ, ಪಟ್ಟ ಎಂದು ಉಲ್ಲೇಖಿಸಿವೆ. ಪಿರಿಯರಸಿ ಪಟ್ಟ ಮಹಾದೇವಿ ಎಂದು ಶಾಸನ ಉಲ್ಲೇಖಿಸಿವೆ.[೬] ಪಟ್ಟ ಮಹಾದೇವಿ, ಚಂದಲದೇವಿಯರ ಉಲ್ಲೇಖ ಅಳಂದ ಶಾಸನಗಳಲ್ಲಿವೆ.[೭] ಪೆರ್ಮ ಜಗದೇಕಮಲ್ಲನ ರಾಣಿ ಅಭಿನವ ಸರಸ್ವತಿ ಎಂಬ ಬಿರುದಾಂಕಿತಳಾದ ಮಲಯವತಿದೇವಿಯನ್ನು

ಬೋದನ ಶಾಸನ ಉಲ್ಲೇಖಿಸುತ್ತದೆ. ಹೀಗಿರುವಾಗ ಪರಸ್ಪರ ರಾಣಿಯರಲ್ಲಿ ಜಗಳಗಳು ಆಗದಂತೆ ದೂರವಿಟ್ಟು ಅವರಿಗೆ ಕೆಲವು ಪ್ರಾಂತ್ಯಗಳನ್ನು ಆಳಲು ಬಿಟ್ಟ ಉದಾಹರಣೆ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ನೋಡಬಹುದು. ತ್ರಿಭುವನ ಮಲ್ಲನ ಮಡದಿ ಚಂದಲದೇವಿ 'ದುಷ್ಟದರ್ಪೆಷ್ಟ' ಸವತಿ ಶಿರೋವಜ್ರಮುಷ್ಟೆ' ಎಂಬ ಉಲ್ಲೇಖ ಅಳಂದ ಶಾಸನ ಮಾಡುತ್ತದೆ.[೮] ರಾಣಿಯರು ತಮ್ಮ ಸವತಿ ಮತ್ಸರದಿಂದಲೋ, ಅಥವಾ ಪರಸ್ಪರ ಪ್ರತಿಸ್ಪರ್ಧೆಯಿಂದಲೋ ತಮ್ಮ ಪ್ರಾಂತ್ಯದ ಆಡಳಿತ ಇನ್ನೊಬ್ಬ ರಾಣಿಯರಿಗಿಂತಲೂ ಚೆನ್ನಾಗಿ ನೋಡಿಕೊಳ್ಳ ಬೇಕೆಂಬ ಮತ್ತು ರಾಜನಿಗೆ ಹತ್ತಿರವಾಗುವ ಆಶಯದಿಂದ ಚೆನ್ನಾಗಿ ಆಳ್ವಿಕೆ ಮಾಡುವ ಪ್ರಯತ್ನ ಮಾಡಿತ್ತಿದ್ದರು. ಇದರಿಂದ ರಾಜನ ಆಳ್ವಿಕೆಯು ಉತ್ತಮವಾಗಿ ನಡೆಯುತ್ತಿತ್ತು.

**ಸತಿಪದ್ಧತಿ.**

ಪ್ರಾಚೀನ ಮಹಾಭಾರತ ಕಾಲದಿಂದಲೂ ಸತಿ ಪದ್ಧತಿ ಜಾರಿಯಲ್ಲಿರುವುದು ಉಲ್ಲೇಖಗಳಿವೆ. ಪಾಂಡು ರಾಜನ ಎರಡನೆಯ ಪತ್ನಿ ಮಾಧವಿಯ ಸತಿಯಾಗಿದ್ದಳು. ಅನೇಕ ಶಾಸನಗಳು ಮತ್ತು ಮಾಸ್ತಿಗಲ್ಲುಗಳು ಸಹ ಸತಿ ಪದ್ಧತಿ ಆಚರಣೆಯಲ್ಲಿರುವುದಕ್ಕೆ ಪುಷ್ಟಿಯಾಗಿವೆ. ಗುಲಬರ್ಗಾ, ಯತ್ಬಾಪೂರ, ಸೋಮನಿಂಗದಳ್ಳಿ, ರುಮ್ಮನಗೂಡು, ಹಲ್ಚೇರಾ, ಖಜೂರಿ, ತಡಕಲ್ ಹೀಗೆ ಹಲವು ಮಾಸ್ತಿಗಲ್ಲುಗಳು ಇಲ್ಲಿ ದೊರೆತ್ತಿದ್ದು ನಮಗೆ ಆ ಕಾಲದ ಸತಿಪದ್ಧತಿಯ ವಿವರಣೆ ತಿಳಿಸುತ್ತವೆ. ಸಾಮಾನ್ಯವಾಗಿ ಮೊದಲ ಹೆಂಡತಿ ಅಥವಾ ಪಟ್ಟದ ರಾಣಿ ಪತಿಯೊಂದಿಗೆ ಸತಿ ಹೋಗುತ್ತಿದ್ದಳು. ಉಳಿದವರು ಸತಿ ಪದ್ಧತಿಯಾಚರಿಸುತ್ತಿರಲಿಲ್ಲ. ಅವರು ಮಕ್ಕಳನ್ನು ನೋಡಿಕೊಳ್ಳುತ್ತಿದ್ದರು ಮತ್ತು ಕಠಿಣ ವ್ರತ ಆಚರಿಸುತ್ತ, ಆಗಿನ ನಿಯಮಗಳಿಗನುಸಾರವಾಗಿ ಸಮಾಜದಲ್ಲಿರುತ್ತಿದ್ದರು. ಸತಿ ಪದ್ಧತಿಯಲ್ಲಿ ಸತಿ ಸಹಗಮನ ಮತ್ತು ಅನುಗಮನ ಪದ್ಧತಿ ಎಂದು ಎರಡು ಪದ್ಧತಿಗಳಿವೆ. ಪತಿಯೊಂದಿಗೆ ಸಾಯುವುದು ಸತಿ ಸಹಗಮನ ಎಂದೆನಿಸಿಕೊಂಡರೆ, ಪತಿಯ ಸಾವು ಬೇರೆಲ್ಲಿಯೋ ಆಗಿದೆ ಎಂಬ ವಿಷಯ ಗೊತ್ತಾದ ಮೇಲೆ ಚಿತೆಗೆ ಹಾರುವುದನ್ನು ಅನುಗಮನ ಎನ್ನುತ್ತಿದ್ದರು. ಹೆಚ್ಚಾಗಿ ಅನುಗಮನ ಆಚರಿಸುತ್ತಿದ್ದವರು ಸೈನಿಕರ ಹೆಂಡತಿಯರಾಗಿದ್ದರು.

**ಸಾಮಾಜಿಕ ಆಚರಣೆಯ ಉಲ್ಲೇಖ.**

ಓಂ ಖಡ್ಗ ಧಾರಿಣೇ ದೇವಹಿ ಬಲಿವಿತ್ಯಂ ತಿಸ್ಮರಯ್ಯೇ ವಿಶ್ವಂ ಶ್ರೀ ಶ್ರೀ ಶ್ರೀ–ಬಲಿ ನೀಡಿದ ಉಲ್ಲೇಖ? (ಕ್ರಿ.ಶ೧೪೦ ಚಿಂಚನಸೂರು ಶಾಸನ). ಬಲಿ ನೀಡುವ ಪದ್ದತಿ ಸಾಮಾಜಿಕ ಅಂಧ ಶ್ರದ್ಧೆಗಳಲ್ಲೊಂದು ಎಂಬುದು ನಮಗೆಲ್ಲಾ ತಿಳಿದ ವಿಷಯ. ಆದರೆ ಇದರ ಆಚರಣೆ ಪ್ರಾಚೀನ ಕಾಲದಿಂದಲೂ ಪ್ರಚಾರದಲ್ಲಿದೆ.

**ದಾನ, ವ್ರತ, ಪಾಪ ಮತ್ತು ಪುಣ್ಯದ ಪರಿಕಲ್ಪನೆ.**

ಹಬ್ಬ ಹರಿದಿನ, ಸೂರ್ಯಗ್ರಹಣ, ಚಂದ್ರಗ್ರಹಣ, ಸಂಕ್ರಾಂತಿಯ ದಿನಗಳಲ್ಲಿ ದಾನ ಮಾಡುತ್ತಿದ್ದರು. ಈ ಭಾಗದ ಶಾಸನಗಳಲ್ಲಿ ಚಿಂಚನಸೂರು, ಕಡಗಂಚಿ, ತಡಕಲ್, ಅಳಂದ, ಸುಲೇಪೇಟೆ, ದೇಗಲ್ಮಡಿ, ಬೆಳಗುಂಪಾ(ಕೆ) ಶಾಸನಗಳು ದಾನ ಶಾಸನಗಳಾಗಿವೆ. ದೇವಾಲಯದಲ್ಲಿ ಧರ್ಮ ಕಾರ್ಯ ಮಾಡುವುದನ್ನು ಸೂಚಿಸುತ್ತವೆ. 'ಯಿರ ಸಂಗಪ್ಪನ ಮಗ ಮಾಯಂಣ್ಣನು ಶ್ರೀ ಮಹೇಶ್ವರ ದೇವರಿಗೆ ದಂಡವೆತ್ತವನ್ನು' ಮಾನ್ಯ ಮಾಡಿದ್ದಾಗಿ ಚಿಂಚನಸೂರ ಶಾಸನ ತಿಳಿಸುತ್ತದೆ.[೯] ಹೊಡಲ ಶಾಸನದಲ್ಲಿ 'ದೇವರಿಗೆ ಹರಕೆ ರೂಪದಲ್ಲಿ ೧೦೦ ಕೋಣ, ೧೦೦ ಎತ್ತುಗಳನ್ನು ಬಿಟ್ಟ' ಉಲ್ಲೇಖವಿದೆ.

**ಶಾಪಾಶಯಗಳಲ್ಲಿ ಸಮಾಜಿಕ ಸ್ಥಿತಿಗತಿ.**

‘ಸಾಧುಸಂಯುತ ವಿದ್ವಾಂಸನಾಗಿರ್ದ್ದೇವಕೆಯ್ಗು ಮನೆಗೆ ಪೊಡೆಯನಾಗಿರ್ಪ್ಪಂತಲ್ಲದೆ ದುಶ್ಚರಿತ್ತನಾದ ನಿರವೀಯದೆ ಪೊಡಮಡಿಸುಪ್ಪದು’ ಎಂದು ರುದ್ರವಾಡಿ ಶಾಸನ ತಿಳಿಸುತ್ತದೆ. ಸಮಾಜದ ಸ್ವತ್ತು ಅರ್ಹರಾದವರ ಕೈಯಲ್ಲಿರಬೇಕು ಎಂದು ಶಾಸನಗಳು ಉಲ್ಲೇಖಿಸಿವೆ. ಸ್ಥಾನಾಚಾರ್ಯರು ದಾನದ ದುರುಪಯೋಗ ಮಾಡಿಕೊಂಡಾಗ ಅವರನ್ನು ಸ್ಥಾನದಿಂದ ತೆಗೆಯುವಂತೆ ಅವರು ಸತ್ತಾಗ ಹಂದಿ, ನಾಯಿ, ಕತ್ತೆಗೆ ಸಮಾನ ಎಂದು ತಿಳಿಸುವ ಭೋದನ ಶಾಸನವು ಜಾತಿ ವ್ಯವಸ್ಥೆಯ ವಿವರಣೆ ನೀಡುತ್ತದೆ. ಕ್ರಿ.ಶ.೧೧೩೪ರ ನಿಂಬರ್ಗಾ ಶಾಸನದಲ್ಲಿ ನೈಷ್ಠಿಕರು ತಮ್ಮ ಕಾರ್ಯ ಸರಿಯಾಗಿ ಮಾಡದಿದ್ದದರೆ, ತಮ್ಮ ಇಪ್ಪತ್ತೊಂದು ತಲೆಯ ಪಿತೃಗಳು ನೇರ ಪುನ್ನರಕಕ್ಕೆ ಹೋಗುವರು ಎಂದು ಉಲ್ಲೇಖಿಸುತ್ತದೆ. ಪೂಜೆಗ ಅರ್ಹ ಇಲ್ಲಿ ಬ್ರಾಹ್ಮಣರಲ್ಲದೆ, ಶೂದ್ರರಲ್ಲ ಎಂದು ಉಲ್ಲೇಖ ನೀಡುತ್ತದೆ. ಬಣಂಜಿಗರು ಮತ್ತು ಚಾಂಡಾಲರ ವಿವರಣೆ ನೀಡುತ್ತದೆ. ಮರ್ತೂರು ಶಾಸನದಲ್ಲಿ ಉಗ್ರಮುನೀಂದ್ರರನ್ನು, ಪಶುಗಳನ್ನು, ವೇದಾಭ್ಯಾಸ ಮಾಡಿದವರನ್ನು ಕೊಂದ ಪಾಪ ಹತ್ತುತ್ತದೆ ಎಂದು ಉಲ್ಲೇಖಿಸಿದೆ. ಅಂದರೆ ಇಲ್ಲಿ ಪ್ರಾಣಿ ಮತ್ತು ನರ ಬಲಿ ಪಾಪದ ಕೆಲಸವಾಗಿತ್ತೆಂದು ತಿಳಿಸುತ್ತದೆ. ಭೀಮರಥಿ, ಗಂಗೆ, ಯಮುನೆ, ನರ್ಮದಾ, ತುಂಗಭದ್ರಾ, ಗೋದಾವರಿ ನದಿಗಳ ಉಲ್ಲೇಖವನ್ನು ನೀಡುತ್ತವೆ. ಶಾಪಾಶಯಗಳಲ್ಲಿ ಮಹಿಳೆಯರನ್ನು ತೀರಾ ಕೀಳು ಮಟ್ಟದಲ್ಲಿಟ್ಟಂತೆ ಮೇಲ್ನೋಟಕ್ಕೆ ಕಂಡು ಬರುತ್ತದೆ. ಆದರೆ ಸಮಾಜ, ಕುಟುಂಬದ ಮರ್ಯಾದೆ ಎಂದರೆ ಮಹಿಳೆ ಎನ್ನುವ ಅರ್ಥ ಇಲ್ಲಿ ಕಂಡು ಬರುತ್ತದೆ.

**ದೇವಾಲಯಗಳ ಸಾಮಾಜಿಕ ವ್ಯವಸ್ಥೆ.**

ದೇವಾಲಯಗಳು ಸಮಾಜದ ವಿವಿಧೋನ್ಮುಖ ಬೆಳವಣಿಗೆಗೆ ಕಾರಣವಾದವು. ಬ್ರಹ್ಮಚಾರಿಗಳಿಗೆ ಅಲ್ಲದೆ ಕುಟುಂಬದಲ್ಲಿ ಹೇಗಿರಬೇಕು ಎಂಬುದು ತಿಳಿಸುತ್ತವೆ. ಪತಿ–ಪತ್ನಿಯರಿಗೂ ಲೈಂಗಿಕ ಶಿಲ್ಪಗಳು ಅಥವಾ ದೃಷ್ಟಿ ಶಿಲ್ಪಗಳ ಮೂಲಕ ಸಂಸಾರ ವೃದ್ಧಿಸುವ ಶಿಕ್ಷಣ ನೀಡುತ್ತಿದ್ದವು. ನನ್ನ ದೃಷ್ಟಿಕೋನದಲ್ಲಿ ಜಾತಿ ಪದ್ಧತಿ ಹುಟ್ಟಿಕೊಂಡಿದ್ದು ಸಮಾಜದಿಂದಲ್ಲ. ಸಮಾಜದಲ್ಲಿ ಆಚರಣೆಗಳು, ಭಯ–ಭಕ್ತಿ ಮತ್ತು ಜಾತಿ ವ್ಯವಸ್ಥೆ ಹುಟ್ಟಿದ್ದು ದೇವಾಲಯಗಳ ಆಚರಣೆಯಿಂದ ಎನ್ನಬಹುದು. ದೇವದಾಸಿ ಪದ್ದತಿ, ಅಂಧ ಶ್ರದ್ಧೆಗಳಾದ ಸತಿ ಪದ್ದತಿ, ಬಲಿ ಪದ್ದತಿ, ಆತ್ಮಬಲಿದಾನ ಪದ್ದತಿ, ಇವೆಲ್ಲವೂಗಳು ಧಾರ್ಮಿಕ ಹಿನ್ನೆಲೆಯಿಂದ ದೇವಾಲಯಗಳಲ್ಲಿ ಆಚರಣೆಗೆ ಬಂದವು.

**ವೇಷಭೂಷಣ ಮತ್ತು ಆಭರಣಗಳು.**

ಜನ ಜೀವನ, ಆರ್ಥಿಕ ವ್ಯವಸ್ಥೆ, ಅಲಂಕಾರಿಕತೆ, ಉಡುಗೆ–ತೋಡುಗೆಗಳು, ಕೇಶಾಲಂಕಾರ ಅಲ್ಲಿನ ಸಾಮಾಜಿಕ, ಧಾರ್ಮಿಕ ಜೀವನ ತಿಳಿಸುವದು. ಇವುಗಳ ಅಧ್ಯಯನದಿಂದ ನಮಗೆ ಸಾರ್ವಜನಿಕರ ಜೀವನ ಶೈಲಿ ತಿಳಿಯಲು ಸಹಾಯಕವಾಗಿವೆ.

**ಸ್ತ್ರೀಯರ ವೇಷಭೂಷಣ.**

ಸೊಂಟದಿಂದ ತೊಡೆಯ ಭಾಗದವರೆಗೆ (ಮಿನಿಸ್ಕರ್ಟ್ ನಂತಹ) ಮತ್ತು ಮೇಲ್ಭಾಗಕ್ಕೆ ಕುಪ್ಪಸ ಧರಿಸುತ್ತಿದ್ದರು. ಉದ್ದನೆಯ ಜರಿ ರೀತಿಯ ಬಟ್ಟೆಯನ್ನು ಕೊರಳ ಭಾಗದಿಂದ ಮೊಳಕಾಲಿನ ಕೆಳಭಾಗದವರೆಗೂ ಧರಿಸುತ್ತಿದ್ದರು. ಕಟಿವಸ್ತ್ರ, ತೊಳ್ಬಂದಿ, ಪೈಜಾಮ (ಕಾಲಿಗೆಹಾಕುವ ಆಭರಣ) ಕಾಲ್ಗಡಗ, ಕಾಲ್ಗೆಜ್ಜೆ, ಬಳೆಗಳು, ಸೊಂಟಪಟ್ಟಿ, ಡಾಬು, ಕಿವಿ ಓಲೆ, ಕಂಠಹಾರ, ಕೊರಳ ಹಾರ, ತುರುಬಕ್ಕೆ ಹಾಕುವ ಹೂವಿನ ಅಲಂಕಾರದ ಆಭರಣ ಮತ್ತು ಕೈ ಬೆರಳುಂಗುರ, ಕಾಲ್ಬೆರಳುಂಗುರ, ಸಿಂಧೂರ, ಭುಜಬಂದಿ, ಬಾಹುವಲ್ಯ, ಸ್ತನಹಾರ, ಕುಚಹಾರ ಧರಿಸುತ್ತಿದ್ದರು.

**ಪುರುಷರು ವೇಷಭೂಷಣ.**

'ವಿ' ಆಕಾರದ ಮತ್ತು ಮಿನಿಸ್ಕರ್ಟ್‌ನಂತಹ ಉಡುಪು ಧರಿಸುತ್ತಿದ್ದರು. ತೋಳ್ಬಂದಿ, ಬಾಹುವಲ್ಯ, ವಕ್ಷಬಂಧ, ಕಟಿವಸ್ತ್ರ, ಸೊಂಟಪಟ್ಟಿ, ಕರ್ಣಕುಂಡಲ, ಹಾರ, ಸರ, ಕಂಠಹಾರ, ಕಾಲ್ಗಡಗ, ಕೈ ಉಂಗುರ ಧರಿಸುತ್ತಿದ್ದರು. ರಾಜವರ್ಗದವರು ಮತ್ತು ಶ್ರೀಮಂತರು ಧೋತರ (ಜರಿ ಮತ್ತು ರೇಷ್ಮೆ) ಪಂಚೆ, ಕಿರೀಟ, ಪೇಟಕೆಯನ್ನು ಮತ್ತು ಅಲಂಕಾರಿಕ ಹಣೆಪಟ್ಟಿ ಧರಿಸುತ್ತಿದ್ದರು. ಮಣಿಕಂಠ, ಮುತ್ತಿನಹಾರ ಮತ್ತು ಕೈಯೂರ ಧರಿಸುತ್ತಿದ್ದರು. ವೀರರು ಮುಡಿ ಧರಿಸುತ್ತಿದ್ದರು.

**ಆಯುಧಗಳು:–** ಭರ್ಚಿ, ಖಡ್ಗ, ಚಾಕು, ಚೂರಿ, ಗುರಾಣಿ, ಬಿಲ್ಲು, ಬಾಣ, ತೋಪು ಇತ್ಯಾದಿ ಯೋಧರ ಆಯುಧಗಳಾಗಿದ್ದವು.

**ಪ್ರಾಣಿಗಳು ಉಲ್ಲೇಖ:–** ಕೋಣ, ಎತ್ತು, ಕಪಿಲೆ, ಕುದುರೆ, ಕತ್ತೆ, ಆಕಳು, ಕರು, ಆನೆ, ಸಿಂಹ, ಹುಲಿಗಳಿದ್ದವು.

**ಆಹಾರ ಮತ್ತು ಪಾನೀಯ:–** ಹಾಲು, ಹಾಲಿನ ಉತ್ಪಾದನೆಗಳು, ತರಕಾರಿಗಳು, ಹಣ್ಣುಗಳು, ಜೋಳದ ರೊಟ್ಟಿ, ಅನ್ನ, ಗೋಧಿ ಹಿಟ್ಟಿನ ರೊಟ್ಟಿ ಉಪಯೋಗಿಸುತ್ತಿದ್ದರು. ನಿಂಬರಗಾ ಶಾಸನದಲ್ಲಿ ಗೋದುವೆ, ಅನ್ನ, ಆಹಾರ, ಜಿರಿಗೆ, ಕಂಗೊ, ತೆಂಗು, ಅಲ್ಲ, ಅರಶಿಣ, ಬಾಳೆಹಣ್ಣು, ಈಳೆ, ಖಜೂರ, ಪಂಕೇರುಹ, ಪಾದರಿಗಳ ಉಲ್ಲೇಖಗಳಿವೆ. ಅಡಕೆ, ಎಲೆಯ ಉಲ್ಲೇಖ ಮಡಿಹಾಳ ಶಾಸನದಲ್ಲಿದೆ. ಘೃತ ಪಾಯಸ ದಾನ ಮಾಡಿದ ಉಲ್ಲೇಖ ಶಾಸನದಲ್ಲಿದೆ.

**ಹಬ್ಬಗಳು:–** ಪರ್ವ ಎಂಬುವ ಸಂಸ್ಕೃತ ಶಬ್ದವು ಅಪಬ್ರಂಶವಾಗಿ ಪಬ್ಬ, ಹಬ್ಬವಾಗಿ ಕನ್ನಡದಲ್ಲಿ ರೂಪವಾಯಿತು. ಅಳಂದ ಶಾಸನದಲ್ಲಿ 'ದುಂದುಭಿ ಸಂವತ್ಸರದ ಪುಷ್ಯ ಶುದ್ಧ ೫ ಆದಿವಾರದ ಉತ್ತರಾಯಣ ಸಂಕ್ರಾತಿ ಪರ್ವ' ಎಂದು ಉಲ್ಲೇಖಿಸಿದೆ.

**ಶೈಕ್ಷಣಿಕ ವ್ಯವಸ್ಥೆ.**

**ದೇವಸ್ಥಾನದ ಆಚಾರ್ಯ ಮತ್ತು ಗುರುಗಳು:–** ಮನ್ನೆದಡಿ ಸಾಸಿರದ ಆಚಾರ್ಯ ಮತ್ತು ಗುರುಗಳು ರಾಮೇಶ್ವರರು (ಹೊಡಲ ಕ್ರಿ.ಶ೧೨೬೭). ವಾಸುದೇವ ಭಟ್ಟೋಪಧ್ಯಾಯರು (ರುದ್ರವಾಡಿ ಕ್ರಿ.ಶ.೧೧೦೩). ಮುನೀಂದ್ರ–ಸುರೇಶ್ವರ, ಮಾಡಿಫಳದ ಆಚಾರ್ಯ–ಧ್ರುವೇಶ(ನಿಂಬರ್ಗಾ ಕ್ರಿ.ಶ೧೨ನೆಯ ಶತಮಾನ). ಸ್ಥಾನಪತಿ ಪಂಡಿತರು ಮತ್ತು ಶೇಷ ಪಂಡಿತರು (ಮೋಘಾ ಕ್ರಿ.ಶ.೧೧೭೦) ಎಂದು ಆಗಿನ ಕಾಲದ ಗುರುಗಳ ಮತ್ತು ಆಚಾರ್ಯರ ಹೆಸರುಗಳನ್ನು ಉಲ್ಲೇಖಿಸಿವೆ. ಮೋಘಾನಂದಿ (ಗಡಿಕೇಶಾವರ ಶಾಸನ), ಶರೀರಪ್ಪ ಮಾತರಂಡೋಜ್ಜಳ (ಶಿರೋಳ ಶಾಸನ), ಗುರುಗಳು ಮೀಮಾಂಸೆ ಶಾಸ್ತ್ರ, ಹದಿನೆಂಟು ಪುರಾಣ ಯಜನ, ಯಾಜನ, ದಾನ, ಪ್ರತಿಗ್ರಹ, ಷಟ್ಕರ್ಮದಲ್ಲಿ ನಿರತರಾಗಿದ್ದರು. ಅಗ್ನಿ, ಸೋಮ, ವಾಜಪೇಯ ಯಜ್ಞಾವಭೃತಾವಗಾಹನ, ಪವಿತ್ರೀಕೃತ ಶರೀರಪ್ಪ ಎಂದು ಶಿರೋಳ್ಳಿ ಶಾಸನ ತಿಳಿಸುತ್ತದೆ. ಶಿರೋಳ್ಳಿ ಶಾಸನದ ಉಪಾಧ್ಯಾಯರಿಗೆ ಮತ್ತು ಅಲ್ಲಿಯ ಪಟ್ಟಹ ವಿದ್ಯಾರ್ಥಿ ಮಣಿಯರ ಗ್ರಾಸಕ್ಕೆಂದು ಭೂದಾನ ನೀಡಿದ ವಿವರವಿದೆ. ಕೇಶಾವರ(ಗಡಿ)–ಕುಂಬಾರ ದೇಗುಲದ ಶಾಸನ ಮತಿಸೆಟ್ಟಿಯ ಗುರು ಮಾಘನಂದಿ ಎಂದು ಸೂಚಿಸುತ್ತದೆ.

**ಶಿಕ್ಷಣ ಕೇಂದ್ರಗಳು.**

ಶಿರೋಳ್ಳಿ, ಸುಲೇಪೇಟೆ, ತೋನಿಪಲ್ಲಿ, ಮೋಘಾ, ಹರಸೂರು, ರುಮ್ಮನ ಗೂಡು, ದೇಗಲ್ಮಡಿ, ಮಿರ್ಯಾಣ, ಗಡಿಕೇಶಾವರಗಳಾಗಿದ್ದವು. ಶಿಕ್ಷಣವನ್ನು ದೇವಾಲಯಗಳಲ್ಲಿ, ಅಗ್ರಹಾರಗಳಲ್ಲಿ, ಘಟಿಕಸ್ಥಾನಗಳಲ್ಲಿ ಮತ್ತು ಮಠಗಳಲ್ಲಿ ನೀಡಲಾಗುತ್ತಿತ್ತು. ದೇವಾಲಮಗಳಲ್ಲಿ ಸಮಾನ್ಯ ಶಿಕ್ಷಣ ಮತ್ತು ಅಕ್ಷರ ಜ್ಞಾನ ನೀಡುತ್ತಿದ್ದರು.

**ಅಗ್ರಹಾರಗಳು.**

ಶಿರೋಳ್ಳಿ, ಸುಲೇಪೇಟೆ, ಮೋಘಾ, ತೋನಿಪಲ್ಲಿ, ಹರಸೂರುಗಳಾಗಿದ್ದವು. ಮಹಾಜನರು ಅಗ್ರಹಾರಗಳಲ್ಲಿ ವಾಸಿಸುತ್ತಿದ್ದು ಊರಲ್ಲಿ ಕರಗಳನ್ನು ನಿಗದಿ ಪಡಿಸುತ್ತಿದ್ದರು. ಕುಂಬಾರರಿಗೆ ಹಲವು ಕರಗಳನ್ನು ನಿಗದಿಸಿದ್ದರು (ಮುದ್ದೂರು ಶಾಸನ).[೧೦]

**ಶಿವಪುರಿಗಳು.**

ಶೈವರ ದೇವಸ್ಥಾನಗಳ ಪರಿಸರದಲ್ಲಿ ಶಿವಾರ್ಚಕರು ಶೈವಾಗಮ, ಕೋವಿದರ ಮತ್ತು ಶಿವಭಕ್ತ ಪ್ರಜೆಗಳ ವಾಸಸ್ಥಾನವಾಗಿತ್ತು.[೧೧]

**ಬ್ರಹ್ಮಪುರಿಗಳು.**

ಬ್ರಾಹ್ಮಣರು ವಾಸಿಸುವ ಓಣಿಗಳಾಗಿದ್ದವು. ಬ್ರಹ್ಮಪ್ರರಿಯ ಬ್ರಾಹ್ಮಣವರ್ಗ್ಗೆ (ಮಂದ ಕ್ರಿ.ಶ.೧೧೦೮), ನಿಂಬರಗಿ (ಕ್ರಿ.ಶ.೧೧೩೪), ಬ್ರಹ್ಮಪುರಿಯಲ್ಲಿ ಅಗ್ಗಿಷ್ಟಿಗೆಯನ್ನು ನಿಯಮಿತವಾಗಿ ಕಾಯ್ದು ಕೊಂಡಿರಲು ಬಿಟ್ಟ ವೃತ್ತಿಗಳು ಉಲ್ಲೇಖ ಹಿರೇಮುದುನೂರು ಶಾಸನದಲ್ಲಿದೆ. ಬ್ರಾಹಾಣರು ಉಂಬವಂತಾಗಿ ಮಾನ್ಯಮಾಡಿದ ಉಂಬಳಿ ಗ್ರಾಮಮನ್ನು ಬ್ರಹ್ಮಪುರಿಯೆಂದಿರುವುದು ರುದ್ರವಾಡಿ ಶಾಸನದಲ್ಲಿ ಕಂಡುಬರುತ್ತದೆ.[೧೨]

**ಅಗ್ರಹಾರ ಮತ್ತು ಬ್ರಹ್ಮಪುರಿ.**

ಬ್ರಾಹ್ಮಣ ವಿದ್ವಾಂಸರು ನೆಲೆಸುವ ಪ್ರದೇಶವನ್ನು ಬ್ರಹ್ಮಪುರಿ ಎಂದು ಕರೆಯುತ್ತಿದ್ದರು. ಅಗ್ರಹಾರಗಳು ಬ್ರಾಹ್ಮಣರು ನೆಲೆಸುವ ಸ್ಥಳಗಳಾಗಿದ್ದರು, ವಿದ್ಯಾರ್ಥಿಗಳು ನೆಲೆಸುತ್ತಿದ್ದರು. ಬೀಚವಳ್ಳಿಯನ್ನು **ಬ್ರಹ್ಮಪುರಿ**ಯನ್ನಾಗಿ ಮಾಡಿದ ಉಲ್ಲೇಖವಿದೆ (ಅಫ್‌ಜಲ್‌ಪುರ ಶಾಸನ–ಕ್ರಿ.ಶ.೧೧೦೭). ಬಂದರವಾಡ ಅಗ್ರಹಾರ (ಬಂದರವಾಡ ಕ್ರಿ.ಶ.೧೧೧೮). ರುದ್ರವಾಡಿ ಅಗ್ರಹಾರ (ರುದ್ರವಾಡಿ ಕ್ರಿ.ಶ.೧೧೦೩). ಜಯಂತಿಪುರದ ಮನ್ನೆಯಕೆರೆ ಅಗ್ರಹಾರ ಮತ್ತು ಬ್ರಹ್ಮಪುರ ಎಂದು ಉಲ್ಲೇಖಿತವಾಗಿದೆ (ರುದ್ರವಾಡಿ ಕ್ರಿ.ಶ.೧೧೦೩). ಸುಲ್ಯಗ್ರಾಮ ಅಗ್ರಹಾರ (ಸುಲೆಪೇಟೆ ಕ್ರಿ.ಶ.೧೦–೧೧ನೆಯ ಶತಮಾನ). ಎನಗುಂಟೆ ಅಗ್ರಹಾರ (ಎನಗುಂಟೆ ಕ್ರಿ.ಶ.೧೧೨೨). ಹಿರಿದಾದ ಅಗ್ರಹಾರ ಮತ್ತು ಮದನಂದಿಯ ಅಗ್ರಹಾರ ಮೈಗೆಹ (ಮೋಘಾ) ಎಂದಿದೆ (ಮೋಘಾ ಕ್ರಿ.ಶ.೧೧೭೦). ಬಾಡಂ ರುದ್ರವಾಡಿ ಬ್ರಹ್ಮಪುರಿ ಎಂದಿದೆ (ರುದ್ರವಾಡಿ ಕ್ರಿ.ಶ೧೧೫೪).

**ಮಠಗಳು.**

ನಿರ್ಗತಿಕರಿಗೆ, ಅನಾಥರಿಗೆ, ಬಡವರಿಗೆ, ಸನ್ಯಾಸಿಗಳಿಗೆ, ಬಿಕ್ಷುಕರಿಗೆ ಮತ್ತು ಪ್ರವಾಸಿಗರಿಗೆ, ಆಹಾರದಾನ ಮಾಡುವ ಸ್ಥಳವಾಗಿತ್ತು.[೧೩] ಮುಂದೆ ವಿದ್ಯಾಕೇಂದ್ರಗಳಾಗಿ ಸತ್ರಗಳಾಗಿ, ವೈದ್ಯಶಾಲೆಗಳಾಗಿ ಸಕಲರ ಹಿತರಕ್ಷಿಸುವ ಕಾಮಧೇನುಗಳಂತಿದ್ದವು. ಶಾಸನಗಳಲ್ಲಿ ಮಠ ಎಂದರೆ ಶಾಲೆಗಳೆಂಬ ಅರ್ಥದಲ್ಲಿದೆ. ಉದಾ–ಕಾಳಗಿ. ನಿಂಬರ್ಗಾದ ಕ್ರಿ.ಶ೧೧೯೮ರ ಶಾಸನದಲ್ಲಿ ಅಹವಮಲ್ಲನ ಬಿನ್ನಪದಿಂದ ಮಾಡಿಫಳದ ಸ್ವಯಂಭೂ ಕೋಟಿಶಂಕರ ದೇವಾಲಯದ ಮಠದ ಸರ್ವೇಶ್ವರ ಆಚಾರ್ಯರಿಗೆ ೨೦೦ ಮತ್ತರು ಭೂಮಿದಾನ ಕೊಟ್ಟ ವಿಷಯ ತಿಳಿಸುತ್ತದೆ. 'ನೈಷ್ಠಿಕ ಮಠ'ದ ಉಲ್ಲೇಖವಿದೆ. ಕಾಳಾಮುಖ ನೈಷ್ಠಿಕ ಮಠದಾಚಾರ್ಯರು ಮಿನಿತುಮಂ ತಪೋದನಲಾಗವೇಳ್ಕಂ ಮಠದಾಚಾರ್ಯರು ಮಿನಿತುಮಂ ನಡೆಯಿಸುವರು (ಕಿ.ಶ.೧೦೮೨) ಅಲಂದೆಯಲ್ಲಿ 'ಪಂಚಮಠ'ಗಳಿದ್ದ ಉಲ್ಲೇಖಗಳಿವೆ. ಶಾಸನಗಳಲ್ಲಿ ಮಠ ಎಂದರೆ ಶಾಲೆಗಳೆಂಬ ಅರ್ಥದಲ್ಲಿದೆ. ಉದಾ:–ಕಾಳಗಿ. ನಿಷ್ಠೆಯಿಂದ ಮಠವನ್ನು ನಡೆಸಿಕೊಂಡು ಹೊಗುವ ಮಠದ ಆಚಾರ್ಯರು ಸಕಲ ಶಾಸ್ತ್ರಗಳಲ್ಲಿ ಪಾರಂಗತರಾಗಿರುತ್ತಿದ್ದರು.

**ಘಟಿಕಾಸ್ಥಾನಗಳು.**

ಉನ್ನತ ಶಿಕ್ಷಣ ಕೇಂದ್ರವಾಗಿತ್ತು. 'ಗಳಿಗೆಯ ಬಟ್ಟಲುಗಳನ್ನು' ಸಮಯ ತಿಳಿಯಲು ಇಡುತ್ತಿದ್ದುದರಿಂದ ಘಟಕಾಸ್ಥಾನಗಳೆಂದು ಕರೆಯತ್ತಿದ್ದರು. ನಾಗಾವಿ ಪ್ರಮುಖ ಘಟಿಕಸ್ಥಾನವಾಗಿತ್ತು.[೧೪] ರಟ್ಕಲ್, ಮಿರ್‍ಯಾಣ, ಕೇಶಾವರ್(ಗಡಿ), ರುಮ್ಮನಗೂಡು, ಶಿರೋಳ್ಳಿ, ಮೋಘಾ ಇವುಗಳಲ್ಲಿ ಕೆಲವು ಘಟಿಕಸ್ಥಾನಗಳಾಗಿದ್ದವು. ಇಲ್ಲಿ ಉನ್ನತ ಶಿಕ್ಷಣ ನೀಡಲಾಗುತ್ತಿತ್ತು.[೧೫]

**ಸ್ತ್ರೀ ವಿದ್ಯಾಭ್ಯಾಸ.**

ಕಲ್ಯಾಣ ಚಾಲುಕ್ಯರ ಜಗದೇಕಮಲ್ಲ ದೇವರ ವಿಶಾಳ ವೃಕ್ಷ ಸ್ಥಳ ನಿವಾಸಿ ಸುಗ್ಗಲದೇವಿ ರೂಪ ವಿದ್ಯಾಧರಿಯಾಗಿರುವುದರೊಂದಿಗೆ ಕಲಿಕಾಲ ಸರಸ್ವತಿ ಎಂದು ಶಾಸನ ವಿಶ್ಲೇಷಿಸಿದೆ. ತ್ರಿಭುವನ ಮಲ್ಲ ಆರನೆಯ ವಿಕ್ರಮಾದಿತ್ಯನ ಪಟ್ಟ ಮಹಾದೇವಿ ಮೈಳಲ ಮಹಾದೇವಿ ಕಲಿಕಾ ಸರಸ್ವತಿ, ಸಾಹಸ ವಿದ್ಯಾಧರಿ, ಸಕಳ ಕಲಾವತಿ ಎನಿಸಿದ್ದಳು ಎಂದು ಶಾಸನಗಳು ಉಲ್ಲೇಖಿಸಿವೆ.[೧೬]

**ಶಾಸನ, ಕವಿಗಳು, ಭಾಷೆ, ಶೈಲಿ, ವಿಚಾರ.**

ಕವಿಗಳು– ಕ್ರಯದಾನವಾಗಿಕೊಂಡ ಕಾಲ್ಗರ್ಚಿ, ಕರ್ನಾಟಕ, ಸಂಸ್ಕೃತ, ಆಂಧ್ರ ಕವಿಯೆಂದು ಮತ್ತು ಕವಿರತ್ನ ಭೂಷಣನೆಂದು ವಿಷ್ಣುಭಟ್ಟರಿಗೆ ಕರೆಯಲಾಗಿದೆ (ರುದ್ರವಾಡಿ ಕ್ರಿ.ಶ.೧೧೦೩). ಭುವನಗಿರಿಯ ಕವಿರತ್ನ ಭೂಷಣ ವಿಷ್ಣುಭಟ್ಟರ ಕಾವ್ಯ ಜಯಂತಿಪುರದ ಮನ್ನೆಯಕೆರೆ ಅಗ್ರಹಾರ ಮತ್ತು ಬ್ರಹ್ಮಪುರ ಎಂದು ಉಲ್ಲೇಖಿತವಾಗಿದೆ(ರುದ್ರವಾಡಿ ಕ್ರಿ.ಶ.೧೧೦೩). ಚಿಂಚನಸೂರ ಕ್ರಿ.ಶ.೧೩೦೨ರ ಶಾಸನ ಶಿಕ್ಷಣ, ವೇದಭ್ಯಾಸ ಮತ್ತು ಮಹಾಕಾವ್ಯಗಳ ಬಗ್ಗೆ ವಿವರಿಸುತ್ತದೆ. ಉಪಾಧ್ಯಾಯರಿಗೆ ಉತ್ತಮ ಸ್ಥಿತಿಯಲ್ಲಿದೆ. ಅಗ್ರಹಾರದಲ್ಲಿನ ವಿದ್ಯಾರ್ಥಿಗಳಿಗಾಗಿ ಭೂದಾನ ಬಿಟ್ಟ ವಿಷಯ ಉಲ್ಲೇಖಿಸುತ್ತದೆ (ಶಿರೋಳ್ಳಿ ಕ್ರಿ.ಶ.೧೨ನೆಯ ಶತಮಾನ). ವಿದ್ಯಾದಾನಕ್ಕೆ ಮತ್ತರು ೩೦ ಬಿಟ್ಟ ಉಲ್ಲೇಖ(ಸರಡಗಿ ಕ್ರಿ.ಶ.೧೦೧೧). ವಿದ್ಯಾ ದಾನಕ್ಕೆ ಮತ್ತರು ೩೦ ಬಿಟ್ಟ ವಿಷಯ ಕ್ರಿ.ಶ.೧೦೧೧ರ ಸರಡಗಿ ಶಾಸನ ತಿಳಿಸುತ್ತದೆ. ಕಲ್ಯಾಣ ಚಾಲುಕ್ಯರ ಕಾಲಾವಧಿಯಿಂದ ಶೈಕ್ಷಣಿಕ ವಿಷಯಕ್ಕೆ ಸಂಬಂಧಿಸಿದಂತೆ ಹೆಚ್ಚಿನ ದಾನಗಳಾಗಿರುವುದು ಕಂಡು ಬರುತ್ತದೆ. ಇದಕ್ಕಿಂತ ಮುಂಚಿನ ಶಾಸನಗಳು ದೇವಾಲಯಗಳಿಗೆ ನೀಡಿದ ದಾನ ಮತ್ತು ಧಾರ್ಮಿಕ ಕಾರ್ಯಗಳಿಗೆ, ರಾಜರ ಸೇವೆಗೆ ಹೆಚ್ಚಾಗಿ ದಾನ, ಉಂಬಳಿ ನೀಡುತ್ತಿದ್ದರು.

ಕ್ರಿ.ಶ.೧೧೪೩ರ ಭೋಧನ ಶಾಸನದಲ್ಲಿ ವಾಶ್ರೀಧವ ಅವಧಾನ ನಿಧಾನ ಮಾಧವ ಕವಿ ಎಂದು ಉಲ್ಲೇಖವಿದೆ. ಕ್ರಿ.ಶ.೧೧೪೬ ಹಂದರ್ಕಿ ಶಾಸನದಲ್ಲಿ ಬಾಚಲದೇವಿ ಅತ್ಯಾನಂದದಿ ಇತ್ತು ಶಾಸನಮಂ ಬರೆಯಸಿದಳ್ ಎಂಬ ಉಲ್ಲೇಖವಿದೆ. ಕುಣಲಂಗೇರಿಯ ಹಂಪ ಕವಿಯ ಮಹಾದೇಮಣ್ಣನ ಒಕ್ಕಣಿಕೆಯ ಧರ್ಮಕ್ಕೆ ಧಾರಾಪೂರ್ವಕ ಮಾಡಿ (ಕುಳಿಗೇರಿ ಕ್ರಿ.ಶ.೧೧೦೫) ಎಂದು ಉಲ್ಲೇಖಿಸಿದೆ. ಕ್ರಿ.ಶ.೧೩೮೦ ಅಂದೇಲಿ ಶಾಸನದಲ್ಲಿ, "ಈ ಶಾಸನಂ ಬರೆದಾತ ಬಿರಿಮಾಳ ರುದ್ರವಾಡಿಗೆಯ ಪ್ರಭುಗಿಂಪಾದ ಸುತಂ ಗುರುಚರಣಾಂಬೋಜ ಬೃಂಗಂ ಮಹಾಗಣಂಗಳ ಕುಮಾರ ರಾಮದೇವ ಇಳತಕ್ಕುದಾತ ಶ್ರೀ ಆನೆದೆಲೆಯ ಕಂಮಾರಿಕೆ ರಾಜನ ಮಗ ಭೋಜಯ್ಯನು" ಎಂದಿದೆ. ಭೋಧನದ ಮಾಧವ ರಚಿಸಿದ ಶಾಸನ ಚಂಪೂ ಕಾವ್ಯಗಳಂತಿದ್ದು ಅವರ ಶೈಲಿ ಪ್ರೌಢ್ಯವಾಗಿದೆ.[೧೭] 'ಶ್ರೀಮತ್ಕೈಳಾಸದಿನಖಿಳಾಮರ ಮಣಿ ಮುಕುಟ ಖಚಿತ ಚರಣಾಂಭೋಜಂ ಸೋಮೇಶ್ವರ ನವತರಿಸಿದ ನೀ ಮಹೀತರ ತಿಳಕಮನಿಪ್ಪಲನ್ದಾರ್ಪುದೊಳ್' (ಅಲಂದೆ ಶಾಸನ ಕ್ರಿ.ಶ.೧೦೮೨) ಅಲನ್ದಾ ಪುರ ವರ್ಣನೆಯಿದೆ.

**ಕವಿಯ ಉಲ್ಲೇಖ:–** ಕ್ರಯದಾನವಾಗಿಕೊಂಡ ಕಾಲ್ಗರ್ಚಿ, ಕರ್ನಾಟಕ, ಸಂಸ್ಕೃತ, ಆಂಧ್ರ ಕವಿಯೆಂದು ಮತ್ತು ಕವಿರತ್ನ ಭೂಷಣನೆಂದು ವಿಷ್ಣುಭಟ್ಟರಿಗೆ ಕರೆಯಲಾಗಿದೆ (ರುದ್ರವಾಡಿ ಕ್ರಿ.ಶ.೧೧೦೩). ಭುವನಗಿರಿಯ ಕವಿರತ್ನ ಭೂಷಣ ವಿಷ್ಣುಭಟ್ಟರ ಕಾವ್ಯ ಜಯಂತಿಪುರದ ಮನ್ನೆಯಕೆರೆ ಅಗ್ರಹಾರ ಮತ್ತು

ಬ್ರಹ್ಮಪುರ ಎಂದು ಉಲ್ಲೇಖಿತವಾಗಿದೆ(ರುದ್ರವಾಡಿ ಕ್ರಿ.ಶ.೧೧೦೩). ಚಿಂಚನಸೂರ ಕ್ರಿ.ಶ.೧೩೦೨ರ ಶಾಸನ ಶಿಕ್ಷಣ, ವೇದಭ್ಯಾಸ ಮತ್ತು ಮಹಾಕಾವ್ಯಗಳ ಬಗ್ಗೆ ವಿವರಿಸುತ್ತದೆ. ಉಪಾಧ್ಯಾಯರಿಗೆ ಉತ್ತಮ ಸ್ಥಿತಿಯಲ್ಲಿದೆ. ಅಗ್ರಹಾರದಲ್ಲಿನ ವಿದ್ಯಾರ್ಥಿಗಳಿಗಾಗಿ ಭೂದಾನ ಬಿಟ್ಟ ವಿಷಯ ಉಲ್ಲೇಖಿಸುತ್ತದೆ (ಶಿರೋಳ್ಳಿ ಕ್ರಿ.ಶ.೧೨ನೆಯ ಶತಮಾನ).

| ವಿದ್ವಾಂಸರು | ಧರ್ಮ | ಶಾಸನ | ಕಾಲ |
|---|---|---|---|
| ಜಗದ್ಗುರು ಕೇಶವ 'ದ್ವೇದಿ' | ವೈದಿಕ | ನಿಂಬರಗಿ | ಕ್ರಿ.ಶ೧೧೩೪ |
| ಧುರ್ವೇಶ್ವರ ಪಣ್ಡಿತ | ವೈದಿಕ | ನಿಂಬರಗಿ | ಕ್ರಿ.ಶ.೧೧೩೪ |
| 'ವಾಗ್ವಧೂ ಪ್ರೀಯ' ಶ್ರೀಮದಾಚಾರ್ಯ | ಶೈವ | ಹಂದರಕಿ | ಕ್ರಿ.ಶ. ೧೧೧೮ |
| ಅಘೋರಶಕ್ತಿ ಪಂಡಿತ ಗಂಗರಾಸೀಜೀಯರು | ಶೈವ | ಮಣ್ಣೂರು | ಕ್ರಿ.ಶ. ೧೦೭೮ |
| 'ರಾಯರಾಜಗುರು' ವೀರ ಕೇದಾರದೇವ | ಶೈವ | ಚಿನಮಳ್ಳಿ | ಕ್ರಿ.ಶ. ೧೨೯೨ |
| ರುದ್ರೇಶ್ವರ ಶಿವದೇವ ಯಾರೇಶ್ವರಪಂಡಿತದೇವ | ಶೈವ | ಹೊಡಲ | ಕ್ರಿ.ಶ.೧೨೦೦ |
| 'ವಾದಿದೇವ' | ವೈದಿಕ | ಅಲಂದೆ | ಕ್ರಿ.ಶ.೧೦೮೨ |

(ಕ.ಜಿ.ಶಿ.ಶಾ.೧೯೭೮. ಪು.ಸಂ–೪೫–೪೬).

**ಶೈಕ್ಷಣಿಕ ವ್ಯವಸ್ಥೆಗೆ ನೀಡಿದ ದಾನದ ಉಲ್ಲೇಖ.**

'ಅರಲು ಮುನ್ನೂರ' ಹಂದರಕಿ (ಪಂದಿರ್ಕೆ) ಶಾಸನದಲ್ಲಿ (ಕ್ರಿ.ಶ.೧೧೧೮) ಲೋಕರಸ ಮಂತ್ರಿ ಲೋಕೇಶ್ವರ ದೇವಾಲಯಕ್ಕೆ ಬಿಟ್ಟದತ್ತಿಯಲ್ಲಿ 'ಕಂನದಡವಕ್ಕರವೋದುವ ವಿದ್ಯಾರ್ಥಿ ಮಾಣಿಗಳಿಗೆ ವೋದಿಸುವ ಉಪಾಧ್ಯಾಯರ್ಗಂ' ಎಂದು ತಿಳಿಸಿದೆ.[೧೮] ಈ ಶಾಸನದಲ್ಲಿ 'ನೈಷ್ಠಿಕ ಮಠ'ದ ಉಲ್ಲೇಖವಿದೆ. ಕಾಳಾಮುಖ ನೈಷ್ಠಿಕ ಮಠದಾಚಾರ್ಯರು ಮಿನಿತುಮಂ ತಪೋದನಲಾಗವೇಳ್ಕಂ ಮಠದಾಚಾರ್ಯರು ಮಿನಿತುಮಂ ನಡೆಯಿಸುವರು (ಕಿ.ಶ.೧೦೮೨) ಅಲಂದೆಯಲ್ಲಿ 'ಪಂಚಮಠ'ಗಳಿದ್ದ ಉಲ್ಲೇಖವಿದೆ.[೧೯] ಶಿರೋಳ್ಳಿ ಅಗ್ರಹಾರದಲ್ಲಿ ವಿದ್ಯಾರ್ಥಿಗಳಿಗಾಗಿ ಭೂದಾನ ಬಿಟ್ಟರು (ಶಿರೊಳ್ಳಿ ಕ್ರಿ.ಶ.೧೨ನೆಯ ಶತಮಾನ). ತೋನಿಪಲ್ಲಿ ಅಗ್ರಹಾರ ಮಾಡಿ ಬ್ರಾಹ್ಮಣರಿಗೆ ದಾನಕೊಟ್ಟ ಉಲ್ಲೇಖವಿದೆ (ಪಸ್ತಾಪುರ ಕ್ರಿ.ಶ ೧೧–೧೨ನೆಯ ಶತಮಾನ). ವಿದ್ಯಾದಾನಕ್ಕೆ ಮತ್ತರು ೩೦ ಬಿಟ್ಟ ಉಲ್ಲೇಖ (ಸರಡಗಿ ಕ್ರಿ.ಶ.೧೦೧೧). ವಿದ್ಯಾದಾನಕ್ಕೆ ಮತ್ತರು ೩೦ ಬಿಟ್ಟ ವಿಷಯ ಕ್ರಿ.ಶ.೧೦೧೧ರ ಸರಡಗಿ ಶಾಸನ ತಿಳಿಸುತ್ತದೆ. ಕಲ್ಯಾಣ ಚಾಲುಕ್ಯರ ಕಾಲಾವಧಿಯಿಂದ ಶೈಕ್ಷಣಿಕ ವಿಷಯಕ್ಕೆ ಸಂಬಂಧಿಸಿದಂತೆ ಹೆಚ್ಚಿನ ದಾನಗಳಾಗಿರುವುದು ಕಂಡು ಬರುತ್ತದೆ. ಇದಕ್ಕಿಂತ ಮುಂಚಿನ ಶಾಸನಗಳು ದೇವಾಲಯಗಳಿಗೆ ನೀಡಿದ ದಾನ ಮತ್ತು ಧಾರ್ಮಿಕ ಕಾರ್ಯಗಳಿಗೆ, ರಾಜರ ಸೇವೆಗೆ ಹೆಚ್ಚಾಗಿ ದಾನ, ಉಂಬಳಿ ನೀಡುತ್ತಿದ್ದರು.

**ಶಾಸನಗಳಲ್ಲಿ ವಾರದ ಉಲ್ಲೇಖ.**

ದೇಗಲ್ಮಡಿ ಶಾಸನದ ೧೨ನೆಯ ಸಾಲಿನಲ್ಲಿ ಆದಿತ್ಯವಾರ ಎಂದು ಉಲ್ಲೇಖಿತವಾಗಿದೆ. ನವಕೋಟಿ ನಾರಾಯಣ ಗುಡಿಯ ಶಾಸನದ ನಾಲ್ಕನೆಯ ಸಾಲಿನಲ್ಲಿ ಸೋಮವಾರ ಎಂದು ಉಲ್ಲೇಖಿಸಿದೆ. ನೀಡಗುಂದಿ ಕಾಳಮ್ಮನ ದೇವಾಲಯದಲ್ಲಿ ನಾಲ್ಕನೆಯ ಸಾಲಿನಲ್ಲಿ ಬೃಹಸ್ಪತಿ ವಾರ ಎಂದು ಉಲ್ಲೇಖಿಸಿದೆ. ಶಿರೋಳ್ಳಿ ೫೭ನೆಯ ಸಾಲು ಮತ್ತು ಮೋಘಾದ ೮೮ನೆಯ ಸಾಲು ಸೋಮವಾರ ಎಂಬುದು ಉಲ್ಲೇಖಿಸಿದೆ. ಅಲ್ಲದೆ ವಿಕ್ರಮಶಕೆ ಉತ್ತರಾಯಣ ಸಂಕ್ರಮಣ ಬಹುಳದಮಾವಸ್ಯೆ, ಸೂರ್ಯಗ್ರಹಣದ

ಬಗ್ಗೆ ಚಾಳುಕ್ಯ ವಿಕ್ರಮ ವರ್ಷವೆಂದು ಪರಾಭವ ಸಂವತ್ಸರ, ಅಷಾಢ ವಿಕ್ರಮ ಸಂವತ್ಸರ ನೃಪಕಾಳಾತೀತ ಸಂವತ್ಸರ, ವಿಕಾರಿ ಸಂವತ್ಸರ, ಇತ್ಯಾದಿ ಶಾಸನಗಳಲ್ಲಿ ಉಲ್ಲೇಖವಾಗಿವೆ.

**ಶಾಸನೋಕ್ತ ವಾರಗಳ ಸೂಚಿ.**

| ವಾರಗಳು | ಶಾಸನ | ಪು.ಸಂ. | ಸಾಲುಗಳು | ಪ್ರಕಟಣೆ |
|---|---|---|---|---|
| ಆದಿವಾರ | ದೇಗಲ್ಮಡಿ<br>ತಡಕಲ್–೧೧–೧೨ನೆಯ ಶತಮಾನ | –<br>–೪೫ | ೧೨ನೆಯ ಸಾಲು<br>೧೧ನೆಯಸಾಲು | ಕ.ಜಿ.ಶಾ. ಹನುಮಾಕ್ಷಿಗೋಗಿ.೧೯೯೬ |
| ಸೋಮವಾರ | ಶ್ರೀನಿವಾಸ ಸರಡಗಿ ಕ್ರಿ.ಶ.೧೦೧೧ | –೯೯ | ೦೮ನೆಯ ಸಾಲು | ಕ.ಜಿ.ಶಾ. ಹನುಮಾಕ್ಷಿಗೋಗಿ.೧೯೯೬ |
| ಮಂಗಳವಾರ | ಮಣೂರು ಕ್ರಿ.ಶ.೧೧೨೦ | –<br>೧೧೮–೧೧೯ | – | ಹೈ.ಕ.ಭಾ.ಕ.ಶಿ.ಶಾ– ವ್ಹಿ.ಶಿವಾನಂದ ೧೯೯೨. |
| ಬುಧುವಾರ– | ಚಿಂಚನಸೂರು ಕ್ರಿ.ಶ.೧೩೦೨ | –೧೭ | ೦೧ನೆಯ ಸಾಲು | ಗು.ಜಿ.ಇ ಮತ್ತು ಪು–ಸಂ.ಡಾ.ಆರ್.ಗೋಪಾಲ್ |
| ಬೃಹಸ್ಪತಿವಾರ | ನಿಂಬರಗಿಕ್ರಿ.ಶ.೧೯೯೮ | –೫೪ | ೦೭ನೆಯ ಸಾಲು | ಕ.ಜಿ.ಶಾ. ಹನುಮಾಕ್ಷಿಗೋಗಿ.೧೯೯೬ |
| ಸುಕ್ರವಾರ | ಪಡಸಾವಳಗಿಕಿ.ಶ.೧೧೧೦ | –೬೦ | ೦೮ನೆಯ ಸಾಲು | ಕ.ಜಿ.ಶಾ. ಹನುಮಾಕ್ಷಿಗೋಗಿ.೧೯೯೬ |
| ಬೃಹವಾರ?–<br>ವಡ್ಡವಾರ– | ಹರಸೂರುಕ್ರಿ.ಶ.೧೯೯೭,<br>ರುದ್ರವಾಡಿಕ್ರಿ.ಶ.೧೧೦೩<br>ಮರ್ತೂರುಕ್ರಿ.ಶ.೧೧೨೪ | –೧೧೯<br>–೭೧<br>–೧೨೭ | –೪೨ನೆಯ ಸಾಲು<br>–೨೧ನೆಯ ಸಾಲು<br>–೨೬ನೆಯ ಸಾಲು | ಕ.ಜಿ.ಶಾ. ಹನುಮಾಕ್ಷಿಗೋಗಿ.೧೯೯೬<br>ಹೈ.ಕ.ಭಾ.ಕ.ಶಿ.ಶಾ– ವ್ಹಿ.ಕೆ.ಶಿವಾನಂದ–೧೯೯೨ |

**ಶಾಸನಗಳಲ್ಲಿ ಸ್ತ್ರೀ ಸಮಾಜ.**

ಪ್ರಾಚೀನ ಭಾರತದಲ್ಲಿ ಸ್ತ್ರೀಯರು ಬಹಳಷ್ಟು ಸ್ವತಂತ್ರರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಅದಕ್ಕೆ ವೇದಗಳು ಸಾಕ್ಷಿಯಾಗಿವೆ. ಗಾರ್ಗಿ, ಮೈತ್ರಿಯರಂಥಹ ವಿದ್ವಾಂಸರಿದ್ದರು. ಮಹಿಳೆಯರಿಗೆ ವಿವಾಹದ ಆಯ್ಕೆಯ ಸ್ವಾತಂತ್ರ್ಯವಿತ್ತು. ನಂತರದ ದಿನಗಳಲ್ಲಿ ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಎಂದು ಮನುಸ್ಮೃತಿಯಲ್ಲಿ ತಿಳಿಸಿದನು. ಅದು ಮುಂದೆ ಕಠೋರವಾಗಿ ಮಹಿಳೆ ಕತ್ತಲೂ ಅಡುಗೆ ಮನೆಯಲ್ಲಿರುವಂತೆ ಮಾಡಿತು. ಅದು ಎಷ್ಟರ ಮಟ್ಟಿಗೆ ಬೇರೂರಿದೆ ಎಂದರೆ, ಅದನ್ನು ಇಂದಿಗೂ ಕಿತ್ತು ಹಾಕುವ ಎಷ್ಟೇ ಪ್ರಯತ್ನ ಮಾಡಿತ್ತಿದ್ದಾರೆ. ಮಹಿಳೆಯರ ಹಕ್ಕು ಭಾಧ್ಯತೆಗೆ ಅನೇಕ ಕಾನೂನಾತ್ಮಕ ಕ್ರಮ ಕೈಗೊಂಡಿವೆ. ಸುಮಾರು ೧೧ನೆಯ ಶತಮಾನದಿಂದ ಇಚಿಗೆ ಮಹಿಳೆಯರಿಗೆ ಉನ್ನತ ವರ್ಗದಲ್ಲಿ ಕಠಿಣ ಕ್ರಮಗಳಿಂದ ಮುಕ್ತಗೋಳಿಸುವ ಪ್ರಯತ್ನ ಮಾಡಲಾಗಿತ್ತು. ಅದಕ್ಕೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ರಾಣಿಯರಿಗೆ ಆಡಳಿತ ಮಾಡಲು ಮತ್ತು ಧಾರ್ಮಿಕ, ಶೈಕ್ಷಣಿಕ ವಿಷಯಗಳಿಗೆ ದಾನ ದತ್ತಿ ನೀಡುವ ಸ್ವಾತಂತ್ರ್ಯ ನೀಡಲಾಗಿತ್ತು. ಶಾಸನದಲ್ಲಿ ಬರ್ಮಲದೇವಿ ನಿಂಬರಗೆ ಆಳುವ ಉಲ್ಲೇಖವಿದೆ. ಮಹಾಮಂಡಲೇಶ್ವರ ಸೋಮರಸನ ಪತ್ನಿ ಎಂಗಲದೇವಿಯನ್ನು ಬೆಳಮಗಿ ಶಾಸನ ಉಲ್ಲೇಖಿಸುತ್ತದೆ.

ಆರನೆಯ ವಿಕ್ರಮಾದಿತ್ಯನ ರಾಣಿ ಚಂದಲದೇವಿ ಅಳಂದೆ ಸಾಸಿರವನ್ನು ಆಳುವ ಉಲ್ಲೇಖ ನೀಡುತ್ತದೆ. ಜಗದೇಕಮಲ್ಲನ ರಾಣಿ ಅಭಿನವ ಸರಸ್ವತಿ ಮಲಯವತಿ ದೇವಿಯ ಬಗ್ಗೆ ಕ್ರಿ.ಶ.೧೧೪೩ರ ಬೋಧನ ಶಾಸನ ಉಲ್ಲೇಖಿಸುತ್ತದೆ.

ಮೋಘಾ ಶಾಸನದಲ್ಲಿ ಸಾವಿತ್ರಿ ಪುತ್ರ ವೆಸಮಯ್ಯ ದಂಡಾಧೀಶ ಎಂದು ಹೇಳಿರುವುದು ಇಲ್ಲಿ ತಾಯಿ ಸ್ಥಾನ ಪ್ರಮುಖವಾಗಿತ್ತೆಂದು ತಿಳಿಯುತ್ತದೆ. ಮೋಘಾ ಶಾಸನವು ಮಹೇಶ್ವರಿ ಮೈಲಳದೇವಿ ದಾನ ನೀಡಿದ ವಿಷಯ ತಿಳಿಸುತ್ತದೆ. ಹುಣಸಿ ಹಡಗಲಿ ಶಾಸನವು ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಚಂದಲದೇವಿ ಅಲಂದೆ–೧೦೦೦ ಆಳುತ್ತಿದ್ದಳು.[೨೦] ಕೆಳಸ್ತರದಲ್ಲಿರುವ ಸ್ತ್ರೀಯರನ್ನು ಪ್ರಸ್ತುತ ತಳ ಸಮುದಾಯದವರೆಂದು ಕರೆಯಲಾಗುತ್ತದೆ. ಅವರಲ್ಲಿ ದೇವದಾಸಿಯರು, ಕಂಬದ ಸೂಳೆಯರು ಬರುತ್ತಾರೆ. ಮಡಿಹಾಳ ಶಾಸನದಲ್ಲಿ ಸೂಳೆಗೆರೆಯ ಪ್ರಸ್ತಾಪವಿದೆ. ಅವರಿಗೆ ಒಂದು ಪ್ರತ್ಯೇಕ ಸ್ಥಾನ ಆ ಕಾಲದಲದಲ್ಲಿತ್ತು. ಶಾಸನಗಲ್ಲಿ ಅಭ್ಯಸುವಾಗ ಕ್ರಿ.ಶ.೧೧೯೯ರ ಹಂದರ್ಕೆ ಶಾಸನದಲ್ಲಿ ಕಂಬದ ಸೂಳೆಯರ ಪ್ರಸ್ತಾಪವನ್ನು ನೊಡಬಹುದಾಗಿದೆ. ದೇವದಾಸಿಯರು ಎಂದರೆ ದೇವರ ಸೇವೆಗೆ ಮೀಸಲಿರುವರು ಎಂಬರ್ಥವಿದೆ. ಈ ಪದ್ದತಿ ಹುಟ್ಟಿಕೊಂಡಿದ್ದೇ ಅಂಗ ಭೋಗ ಮತ್ತು ರಂಗ ಭೋಗದ ನೃತ್ಯಗಾರ್ತಿಯರಿಂದ ಎನ್ನಬಹುದು. ಆರಂಭದಲ್ಲಿ ಪೂಜಾದಿ ವೇಳೆಯಲ್ಲಿ ದೇವರ ಸೇವೆಗೆ ಬರುತ್ತಿದ್ದ ನೃತ್ಯಗಾರ್ತಿಯರು ಮುಂದಿನ ದಿನಗಳಲ್ಲಿ ದೇವಸ್ಥಾನದ ಅಧಿಕಾರಿಗಳು, ಪೂಜಾರಿಗಳು ಧರ್ಮದ ಹೆಸರಲ್ಲಿ ತಮ್ಮ ಸೇವೆಗೆ ಅಣಿಗೊಳಿಸಿದರು. ದೇವಾಲಯಗಳಲ್ಲಿ ದಾನದಿಂದ ಬಂದಂಥ ಭೂಮಿ, ಧ್ಯಾನ್ಯಗಳು ಮತ್ತು ಹಣದಿಂದ ಆರ್ಥಿಕವಾಗಿ ಸಬಲರಾಗಿದ್ದ ಇವರನ್ನು ಎದುರಿಸಲಾಗದೆ ಅವರ ಸೇವೆಗೂ ಮುಂದಾದರು. ಹೀಗೆ ದೇವದಾಸಿಯರು ಧರ್ಮದ ಹೆಸರಲ್ಲಿಯೂ, ಅಂಧ ಶ್ರದ್ಧೆಯಿಂದಲೂ ಆರ್ಥಿಕವಾಗಿ ಸಬಲರಾಗಿರುವವರ ತುಳಿತಕ್ಕೊಳಗಾದರು. ಮುಂದೆ ಅವರ ಬಯಕೆಗಳು ಹೆಚ್ಚಾದಂತೆ ದೇವಾಲಯದ ಕಂಬಕ್ಕೆ ಒಬ್ಬೊಬ್ಬರಂತೆ ಕಂಬದ ಸೂಳೆಯರ ಹೆಸರಲ್ಲಿ ನೇಮಕ ಮಾಡಿಕೊಂಡು ತಮ್ಮ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲಾರಂಭಿಸಿದರು. ಮುಂದಿನ ದಿನಗಳಲ್ಲಿ ದೇವದಾಸಿ ಎಂಬ ಪವಿತ್ರ ಅರ್ಥ ಹೊಂದಿರುವ ಪದ್ದತಿ ಸೂಳೆಯರ ಅರ್ಥಕ್ಕೆ ತಲುಪಿತು. ಅವರಿಗೆ ಹುಟ್ಟಿದ ಮಕ್ಕಳು ದೇವರ ಮಕ್ಕಳು ಎಂದು ಕರೆಯಲಾರಂಭಿಸಿದರು. ಅವರನ್ನು ಸಹ ಈ ಪದ್ದತಿಗೆ ತಳ್ಳಿದರು. ಮುಂದೆ ಅವರ ವಂಶಪಾರಂಪರ್ಯವಾಯಿತು?

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕ್ರಿ.ಶ.೧೦೫೫ತ ನಿಂಬರ್ಗಾ ಶಾಸನದಲ್ಲಿ 'ಸ್ತನಯುಗಯೆನಿಪ ಚಂದಲ ದೇವಿಯರುಂ' ಹೆಣ್ಣಿನ ಆಳ್ವಿಕೆ ಕಾಲ ಬಂದಿತು ಎಂಬ ವ್ಯಂಗ್ಯವಾದ ಧ್ವನಿಯಿಲ್ಲಿ ತೋರಿದಂತೆ ಕಾಣುತ್ತದೆ. ಆರನೆಯ ವಿಕ್ರಮಾದಿತ್ಯನು ತನ್ನ ಬ್ರಹತ್ ಸಾಮ್ರಾಜ್ಯ ಸಾಂಮಂತರು, ಅಧಿಕಾರಿ ವರ್ಗಗಳಿಂದ ರಕ್ಷಿಸಿಕೊಳ್ಳಲು ತನ್ನ ರಾಣಿಯರಿಗೆ ಅಧಿಕಾರಕ್ಕೆ ತಂದು ಆಳ್ವಿಕೆಗೆ ಪ್ರೊತ್ಸಾಹಿಸಿದನು. ದಕ್ಷ ಅಧಿಕಾರಿಗಳ ಕೊರತೆ ಕಂಡುಕೊಂಡ ವಿಕ್ರಮಾದಿತ್ಯ ತನ್ನ ಪತ್ನಿಯರು ತನಗೆ ವಿಧೆಯರಾಗಿರುತ್ತಾರೆ ಎಂದು ಆಡಳಿತಕ್ಕೆ ನೇಮಿಸಿದನು.

**ಮಾಸ್ತಿಗಲ್ಲು ಮತ್ತು ಮೂರ್ತಿ ಶಿಲ್ಪಗಳಲ್ಲಿ ಮಹಿಳೆಯರ ಸ್ಥಿತಿಗತಿ.**

ಕಲಬುರಗಿಯ ಮ್ಯೂಸಿಯಂನಲ್ಲಿರುವ ಶಿಲ್ಪಗಳಲ್ಲಿ ಸ್ತ್ರಿ ಶಿಲ್ಪಗಳು ಪ್ರಾಚೀನ ಕಾಲದ ಸ್ತ್ರೀಯರ ಸ್ಥಿತಿಗತಿ ತಿಳಿಸುತ್ತವೆ. ಜನ ಸಾಮಾನ್ಯ ಸ್ತ್ರೀಶಿಲ್ಪಗಳು, ದಂಪತಿಯರ ಶಿಲ್ಪಗಳು, ಮಗುವನ್ನೆತ್ತಿಕೋಂಡ ತಾಯಿಯ ಶಿಲ್ಪ, ನಾಟ್ಯವಾಡುವ ನೃತ್ಯಗಾರ್ತಿಯರ ಶಿಲ್ಪ, ತೋರಣ ಸುಂದರಿಯರ ಶಿಲ್ಪ, ಲತಾಸುಂದರಿಯರ ಶಿಲ್ಪ, ಸ್ಥಂಭದಲ್ಲಿ ನಿಂತಿರುವ ಶಿಲ್ಪ, ಸತಿ ಹೋದ ಮಹಿಳೆಯರ ಶಿಲ್ಪ, ಹೀಗೆ ವಿವಿಧ ರೂಪಗಳಲ್ಲಿ ಸ್ತ್ರೀಯರ ಸ್ಥಾನಮಾನ ವಿವರಿಸುವ ಪ್ರತಿ ಶಿಲ್ಪಗಳು ಸ್ತ್ರೀಯರ ಜೀವನ, ವೇಷಭೂಷಣ, ಅಲಂಕಾರ, ಆ ಕಾಲದ ಸಾಮಾನ್ಯ ಸ್ತ್ರೀಯರ ಬಗ್ಗೆ ತಿಳಿಯಲು ಇವುಗಳು ನಮಗೆ ಸಹಾಯಕವಾಗಿವೆ. ಮಹಿಳೆಯರು ಪ್ರಾಚೀನ

ಕಾಲದಲ್ಲಿ ಯಾವ ರೀತಿಯ ಜೀವನ ನಡೆಸುತ್ತಿದ್ದರೆಂಬುದು ಇವು ತಿಳಿಸುತ್ತವೆ. ಕೌಟುಂಬಿಕ ಜೀವನ, ಧಾರ್ಮಿಕ ಜೀವನ, ಆರ್ಥಿಕ ಸ್ಥಿತಿಗತಿ, ಸಾಮಾಜಿಕ ಜೇವನ ಬಗ್ಗೆ ಈ ಶಿಲ್ಪಗಳು ಬೆಳಕು ಚೆಲ್ಲುತ್ತವೆ.

ಸಾಮಾನ್ಯವಾಗಿ ಕಲಬುರಗಿ ಜಿಲ್ಲೆಯ ಶಾಸನಗಳು ಅಧ್ಯಯನಕ್ಕೊಳಪಡಿಸಿದಾಗ ಅವುಗಳು ನಮಗೆ ಮಹಿಳೆಯರ ಜೀವನದಲ್ಲಿ ಹೆಚ್ಚಾಗಿ ಧಾರ್ಮಿಕ. ಕೌಟುಂಬಿಕ ಜೀವನದಲ್ಲಿ ಅವಳ ಅಸ್ತಿತ್ವ ಕಾಣಬಹುದಾಗಿದೆ. ಸುಮಾರು ೧೧ನೆಯ ಶತಮಾನದಿಂದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅವರ ರಾಣಿಯರು ರಾಜಕೀಯದಲ್ಲಿ ಪ್ರಾಂತ್ಯಾಧಿಕಾರಿಗಳಾಗಿ ಆಡಳಿತ ನಡೆಸಿರುವ ಬಗ್ಗೆ ಮಾಹಿತಿ ದೊರೆಯುತ್ತದೆ. ಕಲ್ಯಾಣ ಚಾಲುಕ್ಯರ ಆರನೇಯ ವಿಕ್ರಮಾದಿತ್ಯನ ಕಾಲವನ್ನು ನಾವು ಇಲ್ಲಿ ಉದಾಹರಿಸಬಹುದಾಗಿದೆ. ಇನ್ನು ಕರ್ನಾಟಕದ ವೀರಗಲ್ಲುಗಳನ್ನು ಅಧ್ಯಯನ ಮಾಡಿದಾಗ ಅನೇಕ ಮಹಿಳೆಯರು ತುರುಗೋಳ್ ಕಾಳಗದಲ್ಲಿ ಆಕಳುಗಳನ್ನ ರಕ್ಷಿಸಿ ವೀರ ಮರಣ ಹೋಂದಿದ ಉದಾಹರಣೆಗಳುಂಟು. ಅದೇ ರೀತಿ ಆಕಳುಗಳನ್ನ ಕದ್ದು ಶತ್ರುಗಳನ್ನು ಯುದ್ದಕ್ಕೆ ಆಹ್ವಾನಿಸಿರುವರು. ಇಂತಹ ವೀರ ಧೀರ ಮಹಿಳೆಯರ ಜೀವನಕ್ಕೆ ಅವಕಾಶಗಳ ಕೋರತೆ ಆ ಕಾಲದಲ್ಲಿ ಎದ್ದು ಕಾಣುತ್ತಿತ್ತು. ಒಂದು ವೇಳೆ ಅವರಿಗೆ ಎಲ್ಲಾ ಸ್ವಾತಂತ್ರ್ಯಗಳು ದೋರೆತಿದ್ದರೆ ಅವರ ಸ್ಥಾನಮಾನ, ಸ್ಥಿತಿಗತಿ ಉತ್ತಮವಾಗಿರುತ್ತಿತ್ತು. ಇನ್ನು ಅವರ ಧಾರ್ಮಿಕ ಜೀವನವನ್ನು ನೋಡಿದರೆ ಅವರು ತಮ್ಮ ಜೀವನದ ಹೆಚ್ಚಿನ ಭಾಗ ಧಾರ್ಮಿಕ ಕಾರ್ಯಗಳಲ್ಲಿ ತೋಡಗಿಸಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಪ್ರಾಚೀನ ಕಾಲದ ಸ್ತ್ರೀಯರೂ ಸಹ ಅಲಂಕಾರ ಪ್ರೀಯರಾಗಿದ್ದರೆಂಬುದು ಈ ಶಿಲ್ಪಗಳಿಂದ ತಿಳಿದುಬರುತ್ತದೆ. ಅವರು ಧರಿಸಿರುವ ಆಭರಣಗಳು, ಕಟ್ಟಿಕೊಂಡ ಕೂದಲಿನ ವಿನ್ಯಾಸ, ನಿಂತ ಭಂಗಿ, ವೇಷ ಭೂಷಣ ಇವೆಲ್ಲವೂ ಅವರು ಸೌಂದರ್ಯಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಿದ್ದರೆನ್ನುವದಕ್ಕೆ ಇವುಗಳು ಉದಾಹರಣೆಯಾಗಿವೆ.

ಕಲಬುರಗಿಯ ಶಾಸನಗಳಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಆಳಿದ ರಾಣಿಯರು, ಸಾಮಂತರ, ಪ್ರಾಂತ್ಯಾಧಿಕಾರಿಯರ ಪತ್ನಿಯರು ನೀಡಿದ ದಾನಗಳ ಬಗ್ಗೆ ಅಧ್ಯಯನ ಮಾಡಿದಾಗ ಅವರು ಶಿಕ್ಷಣಕ್ಕಾಗಿ ದೇವಾಲಯಗಳಿಗೆ ಮತ್ತು ಧಾರ್ಮಿಕ ಕಾರ್ಯಗಳಿಗೆ ದಾನ ನೀಡಿರುವ ಬಗ್ಗೆ ತಿಳಿದುಬರುತ್ತದೆ. ನಿಂತಿರುವ ಮಹಿಳೆಯ ಶಿಲ್ಪ ಇದು ಸೇಡಂನಿಂದ ಕಲಬುರಗಿಯ ಮ್ಯೂಸಿಯಂಗೆ ತರಲಾಗಿದೆ. ಇದು ಸುಮಾರು ೧೩ನೆಯ ಶತಮಾನದ್ದಾಗಿದ್ದು ಕಲಚೂರಿಗಳ ಅವಧಿಯಲ್ಲಿ ಕೆತ್ತಲ್ಪಟ್ಟಿದೆ. ಇದು ಪ್ರಸ್ತುತ ತ್ರುಟಿತವಾಗಿದೆ. ಕಿವಿ ಓಲೆ, ತುರುಬ ಕಟ್ಟಿರುವುದು, ಸೋಂಟಪಟ್ಟಿ, ಕಾಲ್ಗಡಗ, ಕೈಬಳೆ ಧರಿಸಿರುವ ಕೆತ್ತನೆ ಇದೆ.

ನಾಯಕದಲ್ಲಿ ದೋರೆತಿರುವ ಈ ಶಿಲ್ಪ ಕಲ್ಯಾಣ ಚಾಲುಕ್ಯರ ಕಾಲದ್ದಾಗಿದೆ. ಇದು ಪ್ರಸ್ತುತ ಕಲಬುರಗಿಯ ಮ್ಯೂಸಿಯಂನಲ್ಲಿದೆ. ತ್ರುಟಿತವಾಗಿರುವ ಶಿಲ್ಪದಲ್ಲಿ ಜಡೆ, ಜಡೆಯಲ್ಲಿ ಅಲಂಕಾರಿಕ ಆಭರಣ, ಉದ್ದನೆಯ ಶಾಲು, ಕೊರಳಿನ ಹಾರ, ಸೋಂಟಪಟ್ಟಿ, ಸೋಂಟಕ್ಕೆ ಅಲಂಕಾರಿಕ ಡಾಬು, ಕೈಬಳೆ, ತೋಳ್ಬಂದಿ, ನೆಕ್ಲೇಸ್, ಕಿವಿ ಓಲೆ ಧರಿಸಿರುವ ಕೆತ್ತನೆಯಿದೆ.

ವೀರ ಮಾಸ್ತಿಗಲ್ಲು ಶಿಲ್ಪವು ಕಲ್ಯಾಣ ಚಾಲುಕ್ಯರ ಕಾಲದ್ದಾಗಿದೆ. ಇದರಲ್ಲಿ ಪತಿ ಯುದ್ಧದಲ್ಲಿ ಹೋರಾಡಿ ವೀರ ಮರಣ ಹೋಂದಿರುವ ಕುರಿತು ತಿಳಿಸುತ್ತದೆ. ಇದರಲ್ಲಿ ಆ ವೀರ ಯೋಧನ ಪತ್ನಿಯೂ ತನ್ನ ಪತಿಯೋಂದಿಗೆ ಸಹಗಮನ ಹೋಂದಿರುವ ಬಗ್ಗೆ ಮತ್ತು ಪತಿಯೋಂದಿಗೆ ಪತ್ನಿಯೂ ಸ್ವರ್ಗದಲ್ಲಿ ಕುಳಿತಂತೆ ಈ ಶಿಲ್ಪದಲ್ಲಿ ಚಿತ್ರಿಸಲಾಗಿದೆ. ಪತ್ನಿಯಾದವಳು ಪತಿಗಾಗಿಯೇ ಜೀವಿಸಬೇಕು. ಪತಿಯಿಂದಲೇ ಅವಳ ಬದುಕು, ಅವನಿಲ್ಲದೇ ಅವಳ ಬದುಕಿಗೆ ಅರ್ಥವಿಲ್ಲ, ಅವನೊಂದಿಗೆ ಬದುಕಿ ಅವನು ಸತ್ತಮೇಲೆ ಸತಿಹೋದರೆ ದೇವಲೋಕದಲ್ಲಿಯೂ ಮತ್ತು ಭೂಲೋಕದಲ್ಲಿ ಅವಳು ದೇವತೆಯಾಗಿ ಯೋಗ್ಯ ಸ್ಥಾನಮಾನ ಹೋಂದುವಳು. ಇಲ್ಲದಿದ್ದರೆ ಅವಳಿಗೆ ಉತ್ತಮ ಗೌರವ ದೋರೆಯದು ಎಂಬಂತೆ ಈ ಶಿಲ್ಪ ಮೇಲ್ನೋಟದಲ್ಲಿ ತೋರಿಸುತ್ತದೆ. ಆದರೆ ಇದರಲ್ಲಿ ಪತಿಯ ಮರಣದ ನಂತರ ಕುಟುಂಬದಲ್ಲಿ ವಿಧವೆಯಾದವಳಿಗೆ ಯಾವ ಸ್ಥಾನವೂ ಇರದೇ ಅವಳು ಪತಿಯೋಂದಿಗೆ ಸಾಯುವುದು ಉತ್ತಮ

ಎನ್ನುವುದು ತಿಳಿದು ಬರುತ್ತದೆ. ಕುಟುಂಬದಿಂದ, ಸಮಾಜದಿಂದ ಆಕೆ ವಿವಿಧ ಧಾರ್ಮಿಕ ಕಾರ್ಯಗಳಿಂದ ಕಡೆಗಣಿಸಲ್ಪಟ್ಟಿರುತ್ತಾಳೆ. ಸಮಾಜದಲ್ಲಿ ಆಕೆಗೆ ಯಾವುದೇ ರಕ್ಷಣೆ ಇಲ್ಲದೇ ಅವಳ ಪಾವಿತ್ರ್ಯತೆ ಕಾಪಾಡಿಕೊಂಡು ಪತಿವೃತೆಯಾಗಿ ಸಾಯುವುದು ಉತ್ತಮ ಎಂಬುದು ಇದರಲ್ಲಿ ಕಂಡುಬರುತ್ತದೆ. ಈ ಪದ್ದತಿ ಸ್ತ್ರೀಯರ ಸ್ಥಾನಮಾನ, ನೈಜ ಸ್ಥಿತಿಗತಿಯನ್ನು ತಿಳಿಸುತ್ತದೆ. ಮದುವೆಯಾದ ನಂತರ ಪತಿಯ ರಕ್ಷಣೆಯಲ್ಲಿರುವ ಆಕೆ ಪತಿ ಮರಣದ ನಂತರ ಸಮಾಜದಲ್ಲಿರುವ ಕಾಮುಕರ ಬಲಿಯಾಗಬಾರದೆಂಬುದು, ಸಮಾಜದಲ್ಲಿ ಅವಳ ಜೀವನ ದುಸ್ಥರವಾಗುವುದು.

ಸಮಾಜದಲ್ಲಿನ ಸಮಸ್ಯೆಗಳು, ಅಂಧ ಆಚರಣೆಗಳು, ಮಹಿಳೆಯರನ್ನು ಇನ್ನಷ್ಟು ಬಲಿಪಶುಗಳಾಗಿ ಮಾಡಿದವು. ಅವರು ಸಮಾಜದಲ್ಲಿನ ಕಾಮುಕರ ತಪ್ಪಿಗೆ ಮಹಿಳೆಯರಿಗೆ ಶಿಕ್ಷಿಸಿದವು. ಮಹಿಳೆಯರು ಯಾವ ತಪ್ಪು ಮಾಡದೇ ಧರ್ಮದ ಹೆಸರಲ್ಲಿ, ದೇವರ ಹೆಸರಲ್ಲಿ ಪತಿವೃತೆಯಾಗಿರುವಂತೆ, ಪತಿಯ ಸತಿಯಾಗುವಂತೆ ಪ್ರೇರೆಪಿಸಿದವು. ಆಕೆಯ ಅಸ್ಥಿತ್ವ ಕೇವಲ ಕುಟುಂಬಕ್ಕಾಗಿ, ಧಾರ್ಮಿಕ ಕಾರ್ಯಕ್ಕಾಗಿಯೇ ಸೀಮಿತಗೊಳಿಸಲಾಗಿತ್ತು ಅಲ್ಲಿ ಆಕೆಯ ಭಾವನೆಗಳಿಗಾಗಲಿ, ಆಸೆಗಳಿಗಾಗಲಿ ಯಾವುದೇ ಬೆಲೆಯಿರಲಿಲ್ಲ.

೧೨ನೆಯ ಶತಮಾನದ ಚಾಲುಕ್ಯ ಕಾಲದ ಶಿಲ್ಪ ನಾಯಕಿಯ ಶಿಲ್ಪವಾಗಿದ್ದು ಇದರಲ್ಲಿ ಮೂರು ಸುತ್ತಿನ ತುರುಬು, ಅಲಂಕಾರಿಕ ಆಭರಣ, ತೋಳಬಂದಿ, ಕೈಬಳೆ, ಸೋಂಟದ ಆಭರಣ, ಕಿವಿಓಲೆ, ಕೊರಳ ಹಾರಗಳ ಧರಿಸಿರುವ ಚಿತ್ರಣವಿದೆ. ೧೨ನೆಯ ಶತಮಾನದಲ್ಲಿ ಕೆತ್ತಲ್ಪಟ್ಟ ಈ ಶಿಲ್ಪವೂ ಪುರುಷ ಮತ್ತು ಸ್ತ್ರಿ ರತಿ ಲೀಲೆಯಲ್ಲಿ ತೊಡಗಿರುವಂತೆ ಕೆತ್ತಲಾಗಿದೆ. ಶಿಲ್ಪದಲ್ಲಿ ಕೂದಲುಗಳನ್ನು ವಿವಿಧ ವಿನ್ಯಾಸದಲ್ಲಿ ಕಟ್ಟಿ ಅದಕ್ಕೆ ಆಭರಣಗಳಿಂದ ಅಲಂಕಾರವಿದೆ. ವಿವಿಧ ರೀತಿಯ ಆಭರಣಗಳನ್ನ ಧರಿಸಿರುವಂತೆ ಕೆತ್ತಲಾಗಿದೆ. ಪತಿ ಪತ್ನಿಯರ ಸಂಬಂಧಗಳ ಬಗ್ಗೆ ವಿವರಿಸುತ್ತದೆ. ಸುಮಾರು ೨ನೆಯ ಶತಮಾನದ ಶಾತವಾಹನರ ಕಾಲದ ಬಿಳಿಶಿಲೆಯಲ್ಲಿ ಕೆತ್ತಲ್ಪಟ್ಟ ಈ ಶಿಲ್ಪವು ತಾಯಿಯ ತೊಡೆಯ ಮೇಲೆ ಮಲಗಿರುವ ಮಗುವಿನ ಶಿಲ್ಪವಿದೆ. ಒಂದು ಪೀಠದ ಮೇಲೆ ಕುಳಿತ ತಾಯಿ ಮತ್ತು ಅವಳ ಪೀಠದ ಕೆಳಗೆ ಕುಳಿತಿರುವ ಮಹಿಳೆಯರ ಶಿಲ್ಪಗಳ ಕೆತ್ತನೆ ಅದು ತಾಯಿ–ಮಗುವಿನ ಕಾರ್ಯಕ್ರಮದ ಬಗ್ಗೆ ತಿಳಿಸುವಂತೆ ತೋರುತ್ತದೆ?

ಕಲಬುರಗಿಯ ಮ್ಯೂಸಿಯಂನಲ್ಲಿರುವ ಶಾಸನ ಶಿಲ್ಪವು ಶಾತವಾಹನರ ಕಾಲದ್ದಾಗಿದೆ. ರಾಜದಂಪತಿಗಳು ಕುಳಿತಿರುವ ಮತ್ತು ಅವರಿಗೆ ಸೇವಕಿಯರು ಚಾಮರ ಬೀಸುತ್ತಿರುವಂತೆ ಕೆತ್ತಲಾಗಿದೆ. ಇದರಲ್ಲಿ ರಾಜನ ಪತ್ನಿಯ ಮತ್ತು ಸೇವಕಿಯರ ವಿವರಣೆ ನೀಡಲಾಗಿದೆ. ಮೇಲ್ ಸ್ಥರದಲ್ಲಿ ರಾಜ ಮತ್ತು ರಾಣಿಯ ಮುಖಗಳ ಕೆತ್ತನೆಯಾಗಿದೆ. ರಾಣಿಯ ಅಲಂಕಾರಿಕ ಆಭರಣಗಳು, ಸೇವಕಿಯರ ಅಲಂಕಾರಿಕ ಆಭರಣಗಿಂತ ವಿಭಿನ್ನವಾಗಿವೆ. ರಾಣಿಯ ಭುಜಕ್ಕೆ ಎತ್ತರದ ಆಭರಣವೊಂದು ಧರಿಸಿದ್ದು, ಅದರಲ್ಲಿ ಬಟ್ಟೆ ಸೇರಿಸಿ ಉದ್ದನೆಯ ಬಟ್ಟೆ ಬೀಡುವಂತೆ ತೋರುತ್ತದೆ? ತೋಳ್ಬಂದಿ, ಕೈಬಳೆಗಳು ಎದೆಬಂದಿ, ಕೋರಳ ಹಾರ, ಸೋಂಟಪಟ್ಟಿ, ಕಾಲ್ಗಡಗ, ತಲೆಗೆ ಹಾಕಿರುವ ಮುತ್ತಿನ? ಆಭರಣ, ಕಾಲ್ಗೇಜ್ಜೆ, ಸೋಂಟದಿಂದ ತೋಡೆಯವರೆಗೂ ಧರಿಸಿರುವ ತೆಳುವಾದ ಬಟ್ಟೆ ಇದು ೨ನೆಯ ಶತಮಾನದ ರಾಣಿಯರು ಧರಿಸುವ ವೇಷಭೂಷಣಗಳನ್ನ ಚಿತ್ರಿಸುತ್ತದೆ. ಸೇವಕಿಯರಲ್ಲಿ ಚಾಮರಧಾರಿಣಿಯು ಸೋಂಟದಿಂದ ತೆಳುವಾದ ಬಟ್ಟೆ, ಆಭರಣಗಳಲ್ಲಿ ಕೋರಳ ಹಾರ, ಕೈಬಳೆ, ಧರಿಸಿದೆ. ರಾಜನ ಹಿಂದೆ ನಿಂತಿರುವ ಚಾಮರಧಾರಿಣಿ ಮತ್ತು ಹಣ್ಣಿನ ತಟ್ಟೆ ಹಿಡಿದಿರುವ ಸೇವಕಿಯರ ಶಿಲ್ಪದಲ್ಲಿ ಹಣೆಪಟ್ಟಿ, ಕೈಬಳೆ, ಎದೆ ಬಂದಿ, ಸೋಂಟದ ಪಟ್ಟಿ,ಡಾಬು, ಭುಜದ ಎತ್ತರಕ್ಕಿರುವ ಆಭರಣದಲ್ಲಿ ಬಟ್ಟೆ ಅದರೋಳಗೆ ಸೇರಿಸಿದ್ದು ಎದೆಬಂದಿ ಧರಿಸಿದ ಚಿತ್ರಣವಿದೆ.

ಬಂದರವಾಡದಲ್ಲಿ ದೊರೆತಿರುವ ಹಲವು ಶಿಲ್ಪಗಳು ಸ್ತ್ರೀಯರ ಬದಕು ಯಾವ ರೀತಿಯಾಗಿತ್ತು ಎಂದು ಚಿತ್ರಿಸುತ್ತವೆ. ರುಮ್ಮನಗೂಡಿನ ಶಂಕರನಾರಾಯಣ ದೇವಾಲಯದ ಭಿತ್ತಿ ಭಾಗದಲ್ಲಿರುವ ಶಿಲ್ಪಗಳು, ಮಾಸ್ತಿಗಲ್ಲು, ಸೇಡಂನ ಪಂಚಲಿಂಗೇಶ್ವರ ದೇವಾಲಯದ ಶಿಲ್ಪಗಳು, ಚಿತಾಪೂರ ತಾಲೂಕಿನ, ಆಳಂದ,

ಅಫ್ಜಲ್‌ಪೂರದ ಹಲವು ದೇವಾಲಯಗಳ ಶಿಲ್ಪಗಳು ಮಹಿಳೆಯರ ಸ್ಥಿತಿಗತಿಯ ಬಗ್ಗೆ ತಿಳಿಸುತ್ತವೆ. ಇವು ಹೆಚ್ಚಾಗಿ ಸಾಂಸ್ಕೃತಿಕ ಜೀವನದ ಬಗ್ಗೆ ತಿಳಿಸುತ್ತದೆ. ಮಹಿಳೆಯರು ನೃತ್ಯ, ಸಂಗೀತದಲ್ಲಿ ಆಸಕ್ತಿ ತೋರಿಸುವ ಚಿತ್ರಣಗಳು ಶಿಲ್ಪಗಳು ವಿವರಿಸುತ್ತವೆ. ಚಿಂಚೋಳಿ ತಾಲೂಕಿನ ರುಮ್ಮನಗೂಡಿನ ಶಂಕರನಾರಾಯಣ ದೇವಾಲಯದ ಭಿತ್ತಿ ಭಾಗದ ಶುಕ ಸುಂದರಿಯರ ಶಿಲ್ಪಗಳು ಆ ಕಾಲದ ವೇಷ–ಭೂಷಣಗಳ ಬಗ್ಗೆ ವಿವರಿಸುತ್ತವೆ.

**ಶಾಪಾಶಯಗಳಲ್ಲಿ ಸ್ತ್ರೀಯರು.**

ಚಿನಮಳ್ಳಿ ಶಾಸನ ಕ್ರಿ.ಶ.೧೨೬೦ ಲಿಂಗ, ರಾಜಚಿಹ್ನೆ, ಗಂಟೆ, ಧೂಪಾರತಿ ಬೆಳಗುವ ಕನ್ಯೆ, ಪಕ್ಕದಲ್ಲಿ ತಾಳ–ಮದ್ದಳೆ ಬಾರಿಸುವವರು, ಒಬ್ಬಳು ನಾಟ್ಯ ಸೇವೆಯಲ್ಲಿರುವ ಶಿಲ್ಪಗಳ ಕೆತ್ತಲ್ಪಟ್ಟಿದೆ. ಕಲಬುರ್ಗಿ ಶಾಸನ ಕ್ರಿ.ಶ.೧೬೦೦ರ ಶಾಸನದ ಕೆಳಭಾಗದಲ್ಲಿ ಕತ್ತೆ ಹಾಗೂ ನಿಂತ ಸ್ತ್ರೀ ಗೊಂಬೆ.[೨೧] ಶಾಪಾಶಯಗಳುಳ್ಳ ಶಿಲ್ಪಗಳ ಉದ್ದೇಶವೂ ದಾನದ ಧರ್ಮ ಉಳಿಯಲಿ ಎಂಬುದಾಗಿತ್ತು.

ಅನೇಕ ಶಾಸನಗಳಲ್ಲಿ ಮಹಿಳೆಯರನ್ನು ಅವಾಚ್ಯ ಶಬ್ದಗಳಿಂದ ಬೈದಿರುವುದು, ಶಾಸನಗಳ ರಕ್ಷಣೆಗೋಸ್ಕರ ಮಹಿಳೆಯರನ್ನು ಈ ರೀತಿ ಉಪಯೋಗಿಸಿಕೋಂಡಿರುವುದು ಕಂಡುಬರುತ್ತದೆ. ಇದರಿಂದ ಆ ಕಾಲದಲ್ಲಿ ಮಹಿಳೆಯರು ಕುಟುಂಬದ ಮಾನ, ಗೌರವವಾಗಿದ್ದರೆಂದು, ತಿಳಿದುಬರುತ್ತದೆ. ಅಲ್ಲದೆ ಹಲವು ವೇಳೆ ಶತ್ರುಗಳು ಯುದ್ಧಕ್ಕೆ ಕೆರಳಿಸಲು ತಮ್ಮ ಶತ್ರುಗಳ ಊರಿನ ಮಹಿಳೆಯರ ಮಾನ ಹಾನಿ ಮಾಡುವ ವಿವರಗಳು ನಮಗೆ ಶಾಸನ ಮತ್ತು ಶಿಲ್ಪಗಳಲ್ಲಿ ದೋರೆತಿವೆ. ಇವುಗಳ ಅಧ್ಯಯನದಿಂದ ಮಹಿಳೆಯರು ಊರಿನ, ಸಮಾಜದ ಗೌರವ ಘನತೆಯಾಗಿದ್ದರು ಎನ್ನುವುದು ಸ್ಪಷ್ಟವಾಗುತ್ತದೆ.

**ವೇಶ್ಯಾಪದ್ಧತಿ**

ಪ್ರಾಚೀನ ಭಾರತದಲ್ಲಿ ವೇಶ್ಯಾಪದ್ಧತಿ ಆಚರಣೆಯಲ್ಲಿತ್ತು ಮತ್ತು ಅದಕ್ಕೆ ಅದರದೇಯಾದ ಸ್ಥಾನ ಮಾನಗಳಿದ್ದವು. ಆಮ್ರಪಾಲಿಯೆನ್ನುವ ವೇಷ್ಯೆಯೂ ಆರಂಭದಲ್ಲಿ ರಾಜನ ಮಗಳಾಗಿದ್ದು ನಂತರ ದಿನಗಳಲ್ಲಿ ಅವಳಿಗೆ ರಾಜಕೀಯ ಕುಂತಂತ್ರಗಳಿಂದ ವೇಷ್ಯಯನ್ನಾಗಿ ಮಾಡಲಾಯಿತು ಎಂಬುದನ್ನು ರೇಡಿಯೋದ ನಾಟಕದಲ್ಲಿ ಆಲಿಸಿದ್ದೆನು. ಆಕೆಯು ಹಲವು ಷರತ್ತುಗಳನ್ನು ಪುರುಷರಿಗೆ ವೀಧಿಸಿ ಅಷ್ಟು ಹಣ ನೀಡಿದವರಿಗೆ ಮಾತ್ರ ತಾನೂ ಸಿಗುವುದಾಗಿ ತಿಳಿಸಿರುತ್ತಾಳೆ. ಋಗ್ವೇದದ ಕಾಲದಲ್ಲಿ ವೇಶ್ಯೆಯರಿಗೆ ಗಣಿಕೆಯರೆಂದು ಉಲ್ಲೇಖಿಸಿದೆ? ಪುರಾಣಗಲ್ಲಿ, ಮಹಾ ಕಾವ್ಯಗಳಲ್ಲಿ, ಐತಿಹಾಸಿಕ ಕಥನಗಳಲ್ಲಿ, ಸ್ಮೃತಿಗಳಲ್ಲಿರುವ ಉಲ್ಲೇಖಗಳಿವೆ. ಕರ್ನಾಟಕದಲ್ಲಿ ಕ್ರಿ.ಶ.೬–೯ನೆಯ ಶತಮಾನದಲ್ಲಿ ಸೂಳೆಯರಿಗೆ ದೊಡ್ಡಿ, ಪೋಟಿ, ಬೊಡ್ಡಿ ಎಂದು ಕರೆಯುತ್ತಿದ್ದರು ಮತ್ತು ಇವರು ಆರ್ಥಿಕವಾಗಿ ಸಬಲರಾಗಿದ್ದರು.[೨೨] ಪ್ರಾಚೀನ ಮತ್ತು ಮಧ್ಯಕಾಲದಲ್ಲಿ ಅರಸರು ವೇಶ್ಯೆಯರನ್ನು ಹೊಂದುವುದು ವೈಭವದ ವಿಷಯವಾಗಿತ್ತು. ಇವರು 'ವೇಶಾಭಜಂಗ, ವಾರವನಿತಾರಾಮ' ಎಂಬ ಬಿರುದುಗಳಿಂದ ಅರಸರನ್ನು ಕರೆಯುವುದು ಶಾಸನಗಳು ಉಲ್ಲೇಖಿಸಿವೆ.[೨೩] ಈ ಭಾಗದ ಶಾಸನಗಳಲ್ಲಿ ಸೂಳೆಯರು ಮಾಡುವುದು ಒಂದು ವೃತ್ತಿ, ಅದು ಒಂದು ಜನಾಂಗವಾಗಿ ಅವರಿಗಾಗಿಯೇ ಕೇರಿಗಳಿದ್ದದ್ದು ಉಲ್ಲೇಖಿಸಿವೆ. ಮಡಿಹಾಳ ಶಾಸನದಲ್ಲಿ 'ಸೂಳೆಗೇರಿ ಭೂಮಿಯು ಆ ದೇವರ ಪುರದಲು ದಂಡದೋಷವಾಗಿ ಮಾಡಿಕೊಟ್ಟರು' ಎಂದಿದೆ. ಶಾಸನಗಳಲ್ಲಿ ಗಣಿಕೆಯರು, ಕಂಬದ ಸೂಳೆಯರು, ದೇವದಾಸಿಯರು, ಸೂಳೆಯರು ಎಂದು ಉಲ್ಲೇಖಿಸಿವೆ. ವೇಶ್ಯೆಯರು ಸಾರ್ವಜನಿಕರ ಭೋಗಕ್ಕೆ ಸೀಮಿತವಾಗಿರಬಹುದು. ಸೂಳೆಯರು ನಿರ್ದಿಷ್ಟ ಅಧಿಕಾರಿಗಳ ಸೇವೆಗೆಯಿರುತ್ತಿದ್ದರು. ದೇವದಾಸಿಯರು ದೇವರ ಸೇವೆಯ ಜೊತೆಗೆ ಧಾರ್ಮಿಕ ಪುರೋಹಿತ, ಪೂಜಾರಿಗಳ ಸೇವೆ ಕೈಗೊಳ್ಳುತ್ತಿದ್ದರು. ಕಂಬದ ಸೂಳೆಯರು ನೃತ್ಯದಿಂದ ದೇವರ ಸೇವೆ ಮಾಡುತ್ತಿದ್ದು, ಧಾರ್ಮಿಕ ಅಧಿಕಾರಿಗಳ ಮತ್ತು ಪುರೋಹಿತರ ಸೇವೆಯೂ ಮಾಡುತ್ತಿದ್ದರು. ಗಣಿಕೆಯರು ರಾಜಕೀಯ ಕಾರ್ಯಗಳಿಗೆ, ರಾಜ್ಯ ರಕ್ಷಣಾ ಕಾರ್ಯ ಮತ್ತು ಇತರ ರಾಜ್ಯ ಮತ್ತು ರಾಜರ, ಆಡಳಿತ ವಿಷಯ, ಗೌಪ್ಯಗಳನ್ನು ತಿಳಿಯಲು ಈ ವೃತ್ತಿ ಕೈಗೊಂಡು ದೇಶ ಸೇವೆ ಮಾಡುತ್ತಿದ್ದರು. ಇವರು ಉನ್ನತ

ಸ್ಥಾನದಲ್ಲಿದ್ದರು. ಶತೃಗಳ ನಾಶಕ್ಕೆ ವಿಷ ಕನ್ಯೆಯರನ್ನು ಬಿಡುತ್ತಿರುವ ಉದಾಹರಣೆಗಳನ್ನು ನೋಡಬಹುದು. ಶಾಸನಗಳಲ್ಲಿ ವಿವಿಧ ಹೆಸರುಗಳಿಂದ ಕರೆಯುವ ಕಾರಣ ಅವರ ಉದ್ದೇಶ ಮತ್ತು ವೃತ್ತಿ ಧರ್ಮ ಬೇರೆಯಾಗಿದ್ದಿರಬಹುದು. ದೇವಾಲಯಗಳಲ್ಲಿ ದೇವದಾಸಿಯರು ಮತ್ತು ಕಂಬದ ಸೂಳೆಯರಿದ್ದರು. ಅದಕ್ಕಾಗಿ ಅವರ ಓಣಿಗಳು ದೇವಾಲಯಕ್ಕೆ ಹತ್ತಿರವಾಗಿಯೇ ಇರುತ್ತಿದ್ದವು. ಮಡಿಹಾಳ ಶಾಸನದ ಉಲ್ಲೇಖದಿಂದ ಮತ್ತು ಹಲವು ಶಾಸನಗಳು ಸಹ ಇದಕ್ಕೆ ಪುಷ್ಟಿ ನೀಡುತ್ತವೆ. ವೇಶ್ಯಾವೃತ್ತಿಯ ಮೇಲೆ ತೆರಿಗೆಗಳಿದ್ದವು. 'ಸೂಳೆದೆರೆ, 'ಸೂಳೆಯರಲ್ಲಿನ ಕನ್ನಡಿವಣ' ಎಂದಿದ್ದವು.[೨೪] 'ದೇವಿಗೇರಿಯ ಜರಿದೇರಿಯಂ ಕಟ್ಟಲು ಹೊಕ್ಕ ಮಣ್ಣಂ ಕಳೆಯಲು' ಎಂದು ಮಡಿಹಾಳ ಶಾಸನ ಉಲ್ಲೇಖಿಸಿದೆ. ದೇವಿಗೇರಿ ಎಂದರೆ ದೇವದಾಸಿಯರ ಕೇರಿಯಾಗಿರಬಹುದು. ಜರಿದೇರಿ ಎಂದರೆ ಜಾರಣಿಯರು? ಎಂಬುದಾಗಿರಬಹುದು.

**ಲೋಕೋಪಯೋಗಿ ಕಾರ್ಯಗಳು.**

ಕುಡಿಯುವ ನೀರಿನ ವ್ಯವಸ್ಥೆ, ಅನ್ನ ಛತ್ರಗಳು, ತಂಪಾದ ನೀರು ಕುಡಿಯಲು ಗಡುಗೆಗಳ ವ್ಯವಸ್ಥೆ ಮಾಡುತಿದ್ದರು. ಅರವಟ್ಟಿಗೆ, ಮಠಗಳಲ್ಲಿ ವಿದ್ಯಾಥಿಗಳಿಗೆ ಅನ್ನ ದಾನ ಮಾಡಲಾಗುತಿತ್ತು.

**ಪಡೆವೊಡೆರಕ್ಕಸನಂತಿರೆ ಪಡೆವುದು**
**ಪುರುಷಾರ್ಥಮಂ ಮಹಾಪುರುಷನವಂ**
**ಕುಡುದ ಚತುರ್ವಿಧ ದಾನಂ**
**ಕುಡುಗುಂ ಸ್ವಾರ್ಗಾಪವರ್ಗ ಸುಖಸಂಪದಮಂ**
**(ಹುಣಸಿ ಹಡಗಲಿ ಕ್ರಿ.ಶ.೧೯೯).**[೨೫]

ಅನ್ನಸತ್ರ-ಅರವಟ್ಟಿಗೆ ಮಠದಲ್ಲಿಪ್ಪವರ ಗ್ರಾಸಕ್ಕಂ ಮತ್ತರು (ಅಂದೇಲಿ ಕ್ರಿ.ಶ.೧೦೫೦), ಶೀತಳ ಗಡುಗೆಯ ಅರವಟ್ಟಿಗೆ (ನಿಂಬರಗಿಕ್ರಿ.ಶ.೧೧೩೪), ನಂದನಾಳಿಗಳು ಮಾವಿನ ಅರವೆ (ಅಲಂದೆಕ್ರಿ.ಶ.೧೦೮೨), ಪಡುವಣಿ ಬಲದೇವನಾರವೆಯಲು ನಾಲ್ಕು ಮಾವಿನ ಮರಬಿಟ್ಟುದು (ಅಲಂದೆಕ್ರಿ.ಶ.೧೦೮೨), ಮಹಾಮಂಡಲೇಶ್ವರ ಮಲ್ಲಿದೇವರಸರು ಮುಖವಾಗಿ (ಅಂದೇಲಿ ಕ್ರಿ.ಶ.೧೩೩೮) ಶಾಸನಗಳಲ್ಲಿ ಉಲ್ಲೇಖಿತವಾಗಿದೆ. ಇವುಗಳಿಂದ ತಿಳಿದು ಬರುವುದೆನೆಂದರೆ ವಿದ್ಯಾರ್ಥಿಗಳಿಗೆ ಅನ್ನ-ಛತ್ರ ಮತ್ತು ನೀರಿನ ವ್ಯವಸ್ಥೆ ಮಾಡಲಾಗಿತ್ತು. ತಂಪಾದ ಕುಡಿಯುವ ನೀರಿನ ವ್ಯವಸ್ಥೆಗೆ ಗಡುಗೆಗಳಲ್ಲಿ ನೀರು ತುಂಬಿಡುತ್ತಿದ್ದರು. ಈ ಪ್ರದೇಶದಲ್ಲಿ ಬಿಸಿಲು ಹೆಚ್ಚಾಗಿತ್ತು ಎಂಬುದು ಇದರಿಂದ ತಿಳಿದು ಬರುತ್ತದೆ. ಅಲ್ಲದೆ ನೀರನ್ನು ಅರವಟ್ಟಿಗೆಗಳಲ್ಲಿ ತುಂಬಿಡುತ್ತಿದ್ದರು.

**ಧಾರ್ಮಿಕ ಸ್ಥಿತಿಗತಿ.**

ಧರ್ಮೋ ರಕ್ಷತಿ ರಕ್ಷಿತಃ ಎಂಬ ಅಂಶ ನಮಗೆಲ್ಲಾ ತಿಳಿದಿರುವ ವಿಚಾರವಾಗಿದೆ. ಪ್ರಾಚೀನ ಭಾರತೀಯರು ಧರ್ಮಕ್ಕೆ ಹೆಚ್ಚಿನ ಪ್ರಾಧ್ಯಾನ್ಯತೆ ಕೊಟ್ಟಿದ್ದರು. ಧರ್ಮ ಎನ್ನುವ ಪದ 'ಧೃ' ಎನ್ನುವ ಧಾತುವಿನಿಂದ ಹುಟ್ಟಿತು. 'ಧೃ' ಎಂದರೆ ಧರಿಸು, ಧಾರಣೆ ಮಾಡು ಎಂದರ್ಥ ಹೊಂದಿವೆ. ಇದು ಮಾನವ ಜೀವನಕ್ಕೆ ನೈತಿಕ ನೆಲೆಗಟ್ಟನ್ನು ನೀಡುತ್ತದೆ. ಧರ್ಮವು ಮಾನವ ಸಮಾಜ ಜೀವಿ ಎಂದು ತೋರಿಸುವ ಒಂದು ಒಳ್ಳೆಯ ಉದಾರಣೆ ಎಂತಲೂ ಹೇಳಬಹುದು. ಮೊದಲಿಗೆ ಅಲೆಮಾರಿಯಾಗಿದ್ದ ಮಾನವನು ತನ್ನ ಅಸ್ಥಿತ್ವ ಒಗ್ಗಟ್ಟಾಗಿ ಬಾಳುವ ನೆಲೆಯನ್ನು ಹುಡಿಕಿ, ಕುಟುಂಬ, ಸಮಾಜದಲ್ಲಿರಲಾರಂಭಿಸಿದನು. ತನ್ನ ಪರಿಚಯ ಅಥವಾ ತನ್ನ ಸಮಾಜದ ಪರಿಚಯ ಧಾರ್ಮಿಕ ಆಚರಣೆಯ ಮೂಲಕ ತೋರಿಸಲಾರಂಭಿಸಿದನು. ಈ ಮೂಲಕ ದೇವರ ಪೂಜೆಗಳು, ಆಚರಣೆಗಳು ಮತ್ತು ಧರ್ಮ ವ್ಯವಸ್ಥೆ ಜನಾಂಗದಿಂದ ಜನಾಂಗಕ್ಕೆ ಭಿನ್ನವಾಗಿ ಬೆಳೆಯಿತು. ಹೀಗೆ ಧಾರ್ಮಿಕ ವ್ಯವಸ್ಥೆ

ಬೆಳೆಯಿತು. ಪ್ರಸ್ತುತ ನಾನು ಧಾರ್ಮಿಕ ಸ್ಥಿತಿಗತಿಯನ್ನು ಶಾಸನಗಳು, ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳ ಅಧ್ಯಯನದಲ್ಲಿ ಕಂಡು ಕೊಂಡಂತೆ ವಿವರಿಸುವ ಪ್ರಯತ್ನ ಮಾಡಿದ್ದೆನೆ.

**ವೈದಿಕ ಧರ್ಮ.**

ಚಾಲುಕ್ಯರು ವೈದಿಕ ಧರ್ಮದವರಾಗಿದ್ದರು.–ಚೆನ್ನಮಾದವ (ಅಂದೇಲಿ ಕ್ರಿ.ಶ. ೧೧೫೦), ಗ್ರಾಮ ದೇವ್ವೋಪಾಸನೆ ಬಟ್ಟೆಯ ಭೈರವ (ಹಂದಿರ್ಕೆಕ್ರಿ.ಶ.೧೧೧೯), ಶ್ರೀಗಿರಿ ಮಲ್ಲಿಕಾರ್ಜನ (ಚಿನಮಳ್ಳಿ).[೨೬] ಎಂಬುದಾಗಿ ಶಾಸನಗಳು ಉಲ್ಲೇಖಿಸಿವೆ.

**ಬೌದ್ಧ ಧರ್ಮ.**

ಗುಲಬರ್ಗಾ ಜಿಲ್ಲೆಯ ಉತ್ತರ ಭಾಗದ ಶಾಸನಗಳು, ದೇವಾಲಯಗಳು ಮತ್ತು ಮೂರ್ತಿ ಶಿಲ್ಪಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಬೌದ್ಧ ಧರ್ಮದ ಕುರುಹುಗಳು ನಮಗೆ ಗುಲಬರ್ಗಾದ ಮ್ಯೂಸಿಯಂನಲ್ಲಿ ಸಿಗುತ್ತವೆ. ವಿವಿಧ ಸ್ಥಳಗಳಿಂದ ತಂದ ಹಲವು ಮೂರ್ತಿ ಶಿಲ್ಪಗಳು ಪ್ರಾಚೀನ ಕಾಲದಲ್ಲಿ ಬೌದ್ಧ ಮತ್ತು ಜೈನ ಧರ್ಮ ಇಲ್ಲಿ ಪ್ರಚಲಿತದಲ್ಲಿತ್ತು ಎಂದು ತಿಳಿದು ಬರುತ್ತದೆ. ಮೌರ್ಯರ ಕಾಲದಲ್ಲಿ ಪ್ರಚಲಿತದಲ್ಲಿರುವ ಬೌದ್ಧ ಧರ್ಮವು ನಂತರದ ದಿನಗಳಲ್ಲಿ ಹೆಚ್ಚು ಪ್ರಚುರಗೊಳ್ಳದೇ ಅವಸಾನ ಹೊಂದಿತು. ಶಾತವಾಹನರ ಕಾಲದಲ್ಲಿ ವೈದಿಕ ಧರ್ಮ ಬೆಳವಣಿಗೆ ಕಂಡಿತು.

**ಜೈನ ಧರ್ಮ.**

ಕೈವಲ್ಯ (ಕೇವಲ) ಜ್ಞಾನ ತಮ್ಮ ಜೀವನದಲ್ಲಿ ಪಡೆಯುವ ಗುರಿಯಿಂದ ಹುಟ್ಟಿದ ಧರ್ಮವಿದಾಗಿದೆ. ದಕ್ಷಿಣ ಭಾರತದಲ್ಲಿಯ ಕರ್ನಾಟಕದಲ್ಲಿ ಜೈನಧರ್ಮ ಅತ್ಯಂತ ಪ್ರಬಲವಾದ ಧರ್ಮವಾಗಿತ್ತು. ಜೈನ ಧರ್ಮವು ಪರಮಾತ್ಮನ ಅಸ್ತಿತ್ವವನ್ನು ಒಪ್ಪದಿದ್ದರೂ, ಪರಿಪೂರ್ಣವಾದ ದಿವ್ಯಾತ್ಮದ ಭಾವನೆಯನ್ನೊಳಗೊಂಡಿದೆ. ಕರ್ಮದಿಂದ ಬಂಧಿತನಾದವನನ್ನು ತಡೆಯುವುದುರಿಂದ ಕರ್ಮದ ಸಂಸ್ಕಾರ ಅಳಿದು ಹೋಗುವುದು. ಈ ಮೂಲಕ ಮಾನವ ಮೋಕ್ಷವನ್ನು ಪಡೆಯುವನು ಎಂಬ ಸಿದ್ಧಾಂತವಿದೆ. ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ, ಜೀವ ಮತ್ತು ಅಜೀವಗಳ ಸಪ್ತ ತತ್ವಗಳನ್ನು ಜೈನ ಧರ್ಮ ಒಳಗೊಂಡಿದೆ.[೨೭] ಜೈನ ಧರ್ಮದ ದಿಗಂಬರ ಪಂಥದಲ್ಲಿ ಸಂಘ, ಗಣ, ಗುಚ್ಚ, ಅನ್ವಯ, ಬಳಿ ಎಂಬ ಭೇದಗಳಿದ್ದವು. ಅವುಗಳ ಹುಟ್ಟು ಮತ್ತು ವೈವಿಧ್ಯತೆಯ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.[೨೮] ದಿಗಂಬರ ಪರಂಪರೆಯಲ್ಲಿ ಅತ್ಯಂತ ಪ್ರಾಚೀನ ಮತ್ತು ಪ್ರಥಮ ಸಂಘವೆಂದರೆ ಮೂಲ ಸಂಘವಾಗಿದೆ. ತಡಕಲ್ ಶಾಸನದಲ್ಲಿ ಮೂಲಸಂಘದ ಉಲ್ಲೇಖವಿದೆ.

ಈ ಭಾಗದ ಹಲವು ಶಾಸನಗಳು ಜೈನ ಧರ್ಮದ ಬಗ್ಗೆ ಉಲ್ಲೇಖಿಸಿವೆ. ತಡಕಲ್ ಕ್ರಿ.ಶ೧೬೦೧, ೧೬೨೭ರ ಶಾಸನದಲ್ಲಿ "ಶ್ರಿ ಮೂಲಸಂಘದೇಸಿಮಯ್ಯ......ಬಾನು ಚಂದ್ರದೇವ" ಎಂದು ಉಲ್ಲೇಖಿಸಿದೆ. ಕ್ರಿ.ಶ.೧೬–೧೭ನೆಯ ಶತಮಾನದ ಶಾಸನದಲ್ಲಿ ಪಾರ್ಶ್ವನಾಥನ ಪ್ರಭಾವಳಿಗಳಿವೆ. ಸು.೧೧ನೇ ಶತಮಾನದ ಶಾಸನ ಮಸಣಯ್ಯನು ಈ ಪಾರ್ಶ್ವನಾಥನ ಚೈತ್ಯಾಲಯವನ್ನು ನಿರ್ಮಿಸಿದನೆಂದು ತಿಳಿಸುತ್ತದೆ (ಕೇಶಾವರ್ ಗಡಿ ಕ್ರಿ.ಶ.೧೧–೧೨ನೆಯ ಶತಮಾನ). ವಿಕ್ರಮಾದಿತ್ಯನ ರಾಣಿ ಜಾಕಲದೇವಿ ಬರೆಸಿದ ೧೧೯೪ರ ಶಾಸನವು ಜೈನ ಧರ್ಮದ ವೈಭವವನ್ನು ತಿಳಿಸುತ್ತದೆ.[೨೯] ತಡಕಲ್ ಶಾಸನದಲ್ಲಿ ಜೈನ ಮಂದಿರುದ ತೀರ್ಥಂಕರರ ಪೀಠವನ್ನು ಬಾದಾಮಿಯ ಮಲ್ಲಿಶೆಟ್ಟಿ ಮಾಡಿಸಿದನೆಂದು ತಿಳಿಸುತ್ತದೆ.[೩೦] ಮೂಲ ಸಂಘದೇಸೀಗಣ ಪುಸ್ತಕ ಗುಚ್ಚದ ಜೈನಾಚಾರ್ಯರುಗಳ ಗುರು–ಶಿಷ್ಯ ಸೂತ್ರಾನ್ವಯದ ಹೆಸರುಗಳನ್ನು ಕ್ರಿ.ಶ.೧೧೯೯ ಹುಣಸಿಹಡಗಲಿ ಶಾಸನದಲ್ಲಿ ಉಲ್ಲೇಖವಾಗಿದೆ. ಕಾಳಾಮುಖದ ಅಘೋರ ಶಕ್ತಿ ಪಂಡಿತ (ಪಂದಿರ್ಕೆ), ರಾಮೇಶ್ವರ ಗುರು (ಹೊಡಲು ಕ್ರಿ.ಶ.೧೨೮೧), ಕೇದಾರದೇವ ಆಚಾರ್ಯ ಹಾಗೂ ಕೇತಿದೇವಯ್ಯ (ಚಿನಮಳ್ಳಿ ಕ್ರಿ.ಶ.೧೧೭೪) ಎಂಬ ಉಲ್ಲೇಖವಿದೆ. ಅಳಂದದಲ್ಲಿ ಪಾರ್ಶ್ವನಾಥನ

ಬಸದಿಯಲ್ಲಿ ಚೌವ್ವೀಸ್ ತೀರ್ಥಂಕರ ಶಿಲ್ಪಗಳಿವೆ. ಕಡಗಂಚಿ, ಕೇಶಾವರ್(ಗಡಿ), ನೀಡಗುಂದ, ದೇಗಲ್ಮಡಿ, ಸುಲೇಪೇಟೆ, ಚಿಂಚೋಳಿ, ಮಿರ್‍ಯಾಣ, ಮಡಿಹಾಳ, ಹೊನ್ನ ಕಿರಣಗಿ, ತಿಳಗೊಳ, ಹಾಗರಗುಂಡಗಿ, ಕಲಬೆನ್ನೂರು ಹೀಗೆ ಹಲವು ಸ್ಥಳಗಳಲ್ಲಿ ಜೈನ ಮೂರ್ತಿ ಶಿಲ್ಪಗಳು ದೊರತಿವೆ. ಅಲ್ಲದೆ ಜೈನ ದೇವಾಲಯಗಳು ಶೈವ ದೇವಾಲಯಗಳಾಗಿ ಮಾರ್ಪಟ್ಟಿವೆ. ಚಿಂಚೋಳಿ, ಸುಲೇಪೇಟೆ, ನಿಂಬರ್ಗಾ, ಕೇಶಾವರ್(ಗಡಿ), ದೇಗಲ್ಮಡಿ, ಮಿರ್‍ಯಾಣ, ಆಳಂದ, ತಡಕಲ್‌ಗಳಲ್ಲಿ ಜೈನ ಬಸದಿಗಳಿವೆ. ಇವೆಲ್ಲವೂ ಜೈನ ಧರ್ಮ ಈ ಭಾಗದಲ್ಲಿ ಹೆಚ್ಚಿನ ಮಟ್ಟದಲ್ಲಿ ಬೆಳವಣಿಗೆ ಹೊಂದಿದ್ದವು ಎನ್ನುವುದಕ್ಕೆ ಸಾಕ್ಷಿಗಳಾಗಿವೆ.

**ವೈಷ್ಣವ ಧರ್ಮ.**

ವಿಷ್ಣುವು ವೇದಗಳಲ್ಲಿ ಮೊದಲಿಗೆ ಪ್ರಧಾನ ದೇವತೆಯಾಗಿರಲಿಲ್ಲ. ಋಗ್ವೇದದಲ್ಲಿ ವಿಷ್ಣು ತನ್ನ ಮೂರು ಹೆಜ್ಜೆಗಳಿಂದ ಈಡಿ ಪ್ರಪಂಚವನ್ನೇ ಅಳೆದನು ಎಂದು ಉಲ್ಲೇಖಿಸುತ್ತದೆ. ನಂತರ ಬ್ರಾಹ್ಮಣಕಗಳಲ್ಲಿ ವಿಷ್ಣುವಿನ ಸ್ಥಾನ ಹೆಚ್ಚಿತು. ಆರಂಭದಲ್ಲಿ ಅಗ್ನಿ ವರಿಷ್ಠ ದೇವತೆಯಾಗಿದ್ದನು. ಆದರೆ ಬ್ರಾಹ್ಮಣಕಗಳಲ್ಲಿ ವಿಷ್ಣು ವರಿಷ್ಠ ಸ್ಥಾನಕ್ಕೇರಿದ ಮತ್ತು ಅಗ್ನಿ ಕೊನೆಯ ಸ್ಥಾನಕ್ಕಿಳಿದನು. ಅಸುರರನ್ನು ಸೋಲಿಸಲು ಮಹತ್ವದ ಪಾತ್ರ ವಿಷ್ಣುವಹಿಸಿದ್ದನು ಮತ್ತು ದೇವತೆಗಳಿಗೆ ಅಸುರರಿಂದ ರಕ್ಷಣೆ ನೀಡುತ್ತಿದ್ದ ಎಂದು ತಿಳಿಸುತ್ತವೆ.[೧೧] ಭಕ್ತಿ ಭಾವಕ್ಕೆ ಹೆಚ್ಚಿನ ಮಹತ್ವ ನೀಡಿರುವ ವೈಷ್ಣವ ಧರ್ಮ ಭಾಗವತ ಧರ್ಮ ಎಂದು ಭಾರತದಲ್ಲಿ ಪ್ರಚಲಿತದಲ್ಲಿತ್ತು. ನಾನಾಘಾಟ ಶಾಸನದಿಂದ ದಕ್ಷಿಣ ಭಾರತದಲ್ಲಿ ಸುಮಾರು ಕ್ರಿಸ್ತಶಕ ಪೂರ್ವದಲ್ಲಿ ಪ್ರವೇಶ ಪಡೆದಿತ್ತು ಎಂದು ತಿಳಿದು ಬರುತ್ತದೆ. ಹಲ್ಮಿಡಿ ಶಾಸನದಲ್ಲಿ ವಿಷ್ಣುವಿನ ಪ್ರಾರ್ಥನೆಯಿದೆ. ಹರಸೂರು ಕ್ರಿ.ಶ.೧೧೩೭ರ ಶಾಸನ, ರುದ್ರವಾಡಿ ಕ್ರಿ.ಶ.೧೧೧೭ರ ಶಾಸನ, ರುದ್ರವಾಡಿ ಕ್ರಿ.ಶ.೧೧೦೩ರ ಶಾಸನಗಳಲ್ಲಿ ಪ್ರಾರ್ಥನೆ ವಿಷ್ಣು ಸ್ತುತಿಯೊಂದಿಗೆ ಆರಂಭವಾಗುತ್ತದೆ.

**ಶಾಸನಗಳಲ್ಲಿ ವೈಷ್ಣವ ಧರ್ಮ.**

ಹರಸೂರು ಕ್ರಿ.ಶ.೧೧೩೭ರ ಶಾಸನ, ರುದ್ರವಾಡಿ ಕ್ರಿ.ಶ.೧೧೧೭ರ ಶಾಸನ, ರುದ್ರವಾಡಿ ಕ್ರಿ.ಶ.೧೧೦೩ರ ಶಾಸನಗಳಲ್ಲಿ ಪ್ರಾರ್ಥನೆ ವಿಷ್ಣು ಸ್ತುತಿಯೊಂದಿಗೆ ಆರಂಭವಾಗುತ್ತದೆ. ಬೆಳಂಬಗಿ ಶಾಸನವು ವಿಷ್ಣು ಸ್ತುತಿಯೊಂದಿಗೆ ಆರಂಭವಾಗುತ್ತದೆ. ಭಾರತದಲ್ಲಿ ವೈಷ್ಣವ ಧರ್ಮ ಭಾಗವತ ಧರ್ಮವೆಂದು ಆರಂಭದಲ್ಲಿ ಪ್ರಚಲಿತದಲ್ಲಿತ್ತು. ಶಾಸನಗಳಲ್ಲಿ ಭಾಗವತ ಮತ್ತು ವೈಷ್ಣವ ಧರ್ಮ ಎಂಬ ಉಲ್ಲೇಖಗಳಿವೆ. ಕನ್ನಡ ಭಾಷೆಯ ಪ್ರಾಚೀನ ಶಾಸನವಾದ ಹಲ್ಮೀಡಿ ಶಾಸನವು ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ.[೩೨] ಇದು ಕರ್ನಾಟಕದಲ್ಲಿಯೂ ಅದರ ಪ್ರಾಚೀನತೆಯಿತ್ತು ಎಂಬುದು ಶಾಸನಗಳ ಮೂಲಕ ತಿಳಿಯಲು ಸಾಧ್ಯವಾಗಿದೆ. ಶಾಸನಗಳಲ್ಲಿ ಭಾಗವತ ಮತ್ತು ವೈಷ್ಣವ ಎಂಬ ಉಲ್ಲೇಖಗಳು ದೊರೆಯುತ್ತವೆ.

"ಜಯತ್ಯಾವಿಷ್ಕತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣವಂ। ದಕ್ಷಿಣೋನ್ನತದಷ್ಟಾಗ್ರ ವಿಶ್ರಾನ್ತ ಭುವನಂವಪ್ಪು" ಎಂದು ಶಾಸನಗಳಲ್ಲಿ ಉಲ್ಲೇಖಿತಗೊಂಡಿವೆ. ಬ್ರಾಹ್ಮಣರೆಲ್ಲರೂ ವೈಷ್ಣವ ಧರ್ಮ ಪ್ರತಿಪಾಲಕರಾಗಿದ್ದರು. ಹೀಗಾಗಿ ಇಲ್ಲಿ ದೊರೆತ ಹಲವು ಅಗ್ರಹಾರಗಳು ವೈಷ್ಣವ ಧರ್ಮದ ಉನ್ನತಿಯ ಪ್ರತೀಕವಾಗಿವೆ. ಅಗ್ರಹಾರ ರುದ್ರವಾಡಿ ಅಲಂದೆ ಸಾಸಿರಕ್ಕೆ ಸೇರಿದ್ದು ಇಲ್ಲಿ ಐವತ್ತು ಮಹಾಜನರಿದ್ದರು. ವಿಕ್ರಮಾದಿತ್ಯನ ರಾಣಿ ಚಂದಲದೇವಿಯ ಬೇಡಿಕೆಯಂತೆ ದಂಡನಾಯಕ ಮಲ್ಲಿ ದಂಡನಾಥರು ರುದ್ರವಾಡಿಯಲ್ಲಿ ತ್ರಿಕೂಟ ಲಕ್ಷೀಶನ ದೇವಾಲಯ ಮತ್ತು ಚತುರ್‌ವ್ಹಿಂಶತಿಯ ವಿಷ್ಣುವಿನ ಮೂರ್ತಿಗಳ ಸೇವೆಗೆ ದಾನ ಬಿಟ್ಟ ವಿಷಯ ಕ್ರಿ.ಶ.೧೧೦೩ರ ಶಾಸನ ತಿಳಿಸುತ್ತದೆ. ಕ್ರಿ.ಶ.೧೧೯೯ರ ರುದ್ರವಾಡಿಯ ಶಾಸನದಲ್ಲಿ ಸೋಮಯಾಜಿ ಪಂಡಿತರ ವಿನಂತಿಯ ಮೇರೆಗೆ ರುದ್ರವಾಡಿಯ ಚೆನ್ನಕೇಶವ ದೇವರು ಮತ್ತು ಚತುರ್‌ವ್ಹಿಂಶತಿ ಮೂರ್ತಿಗಳ ಪೂಜಾ ವಿಧಿಗೆಂದು ಬ್ರಹ್ಮಪುರಿಯ ೫೦ ಮಹಾಜನರ ಕೈಯಲ್ಲಿ ಒಟ್ಟು ೬೦೦ ಮತ್ತರು ಭೂಮಿ ಜವಳಿಗೆ ಮತ್ತು ಬಿಬ್ಬಲೇಶ್ವರ ಗ್ರಾಮಗಳನ್ನು ದಾನ ಕೊಟ್ಟ ವಿಷಯವನ್ನು ಉಲ್ಲೇಖಿಸುತ್ತದೆ.[೩೩]

**ಶೈವ ಧರ್ಮ.**

ಪ್ರಾರ್ಥನೆ ಮತ್ತು ಶಾಸನ ಲಲಾಟ ಬಿಂಬಗಳಲ್ಲಿರುವ ಕೆತ್ತನೆಗಳ ಮೂಲಕ ಅವು ತಮ್ಮ ಧಾರ್ಮಿಕ ವಿವರಗಳನ್ನು ತಿಳಿಸುತ್ತವೆ. ಮೋಘಾ ಕ್ರಿ.ಶ.೧೧೭೦ರ ಶಾಸನದ ಲಲಾಟ ಬಿಂಬದ ಕೆತ್ತನೆಯು ಲಿಂಗ, ನಂದಿ, ಮತ್ತು ಚಂದ್ರರನ್ನೊಳಗೊಂಡಿದೆ. ಪ್ರಾರ್ಥನೆ ಶೈವ ಧರ್ಮಕ್ಕೆ ಸಂಭಂಧಿಸಿದ್ದ ಕಾರಣ ಇದು ಶೈವ ಶಾಸನವಾಗಿದೆ.

ಫಿರೋಜಾಬಾದ್ ಕ್ರಿ.ಶ.೧೨ನೆಯ ಶತಮಾನ, ಮರ್ತೂರು ಕ್ರಿ.ಶ.೧೧೨೩ ಶಾಸನ ಶಿವನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ. ಸತ್ಯ ಶಿವಚಾರ ಚಾರಿತ್ರ್ಯ ಹೊಂದಿರುವ ವೀರ(ಶೈವ?) ಧರ್ಮ ಪ್ರತಿಪಾಲಕರಾದ ಮುದನೂರಿನ ಸ್ವಾಮಿಗಳು ಎಂದಿದೆ (ಚಿನಮಳ್ಳಿ ಶಾಸನ).

ಕ್ರಿ.ಶ.೧೦೪೬ ಮತ್ತು ೧೦೫೫ರ ಶಾಸನಗಳು ಮಹಾ ಮಂಡಳೇಶ್ವರ ದೇವ ನಾಗರಸರು ತಾನೇ ನಿರ್ಮಿಸಿದ ಮಾಡಿಘಳದಲ್ಲಿ ಸ್ವಯಂಭೂ ಕೋಟಿಶಂಕರ ದೇವಾಲಯಕ್ಕೆ ನಿಂಬರಗಿ ಗ್ರಾಮವನ್ನು ದಾನ ಬಿಟ್ಟ ವಿಷಯ ತಿಳಿಸುತ್ತದೆ. ೧೯೮ರ ನಿಂಬರ್ಗಾ ಶಾಸನ ಅಹವಮಲ್ಲನ ಬೇಡಿಕೆಯಂತೆ ಕೋಟಿಶಂಕರ ಗುಡಿಯ ಮಠದ ಸರ್ವೇಶ್ವರ ಆಚಾರ್ಯರಿಗೆ ೨೦೦ ಮತ್ತರು ಭೂಮಿಯನ್ನು ದಾನ ಕೊಟ್ಟ ವಿಷಯವನ್ನು ತಿಳಿಸುತ್ತದೆ. ಅಮೋಘವರ್ಷ ನೃಪತುಂಗನ ತಡಕಲ್ ಶಾಸನವು ಬೀಳೇಶ್ವರ ದೇವರಿಗೆ, ಪೂಜಾರಿಗೆ ಮತ್ತು ಗುಡಿಯ ನೃತ್ಯ ಸೇವೆಗೆಂದು ದಾನಕೊಟ್ಟ ವಿಷಯವನ್ನು ಉಲ್ಲೇಖಿಸುತ್ತದೆ.[೩೪]

**ಕಾಳಾಮುಖ ಶೈವ ಧರ್ಮ.**

ಪಾಶುಪತ ಶಾಖೆಯ ಸ್ಥಾಪಕನು ಲಕುಲೀಶನು ಶಿವಪುರಾಣ, ವಾಯುಪುರಾಣ, ಲಿಂಗಪುರಾಣಗಳಲ್ಲಿ ಸೂತ ಸಂಹಿತೆಗಳಲ್ಲಿ ಉಕ್ತನಾದವನು ರುದ್ರನ ಒಂದು ಅವತಾರವಾಗಿ ಗುಜರಾತಿನ ಕಾಯೋರೋಹಣದಲ್ಲಿ ಹುಟ್ಟಿದವನೆಂದು ತಿಳಿದು ಬರುತ್ತದೆ. ಮಹಾಭಾರತದ ಶಾಂತಿ ಪರ್ವದಲ್ಲಿ ಪಾಶುಪತ ಸಿದ್ಧಾಂತವನ್ನು ಪ್ರತಿಪಾದಿಸಿದವನು ಶ್ರೀ ಕಂಠನೆಂದು ಹೇಳಲಾಗಿದೆ. ಕ್ರಿ.ಶ.೧೦೦ದ ಅಭಿನವ ಗುಪ್ತನ ತಂತ್ರಾಲೋಕವು ಶ್ರೀಕಂಠನ ಜೊತೆಯಲ್ಲಿಯೇ ಲಕುಲೀಶನನ್ನು ಹೆಸರಿಸಿ ಇವರಿಬ್ಬರೂ ಶಿವಶಾಸದ ಪ್ರತಿಪಾದನೆಗೆ ಅಧಿಕಾರಿಗಳೆಂದು ಅಭಿಪ್ರಾಯಪಟ್ಟಿದೆ. ಕ್ರಿ.ಶ.೬ನೆಯ ಶತಮಾನದಷ್ಟು ಹಿಂದೆ ಪ್ರಾಚೀನದಲ್ಲಿ ಕರ್ನಾಟಕದಲ್ಲಿತ್ತೆಂಬುದಕ್ಕೆ ನಿದರ್ಶನಗಳಾಗಿವೆ.[೩೫] ಕಾಳಾಮುಖ ಪಾಶುಪತರು ರಾಜಕೀಯ ಪೋಷಣೆ ಮತ್ತು ಉನ್ನತ ಸ್ಥಾನ ಪಡೆದಿದ್ದರು. ಇವರು ಸಾರ್ವಜನಿಕರಿಗೆ ಶೈಕ್ಷಣಿಕ ಮತ್ತು ಸಾಮಾಜಿಕ, ನೈತಿಕ ಕಟ್ಟಳೆಗಳನ್ನು ತಿಳಿಸುವ ಮೂಲಕ ಜನರ ನಿಕಟವರ್ತಿಗಳಾದರು. ಶೈವ ದೇವಾಲಯಗಳ ಪೂಜೆ, ದೇವರ ಅಂಗಭೋಗ, ರಂಗಭೋಗ, ಖಂಡಸ್ಪುಟಿತ, ಜೀರ್ಣೋದ್ಧಾರ, ತಪೋಧನ ವಿದ್ಯಾರ್ಥಿಗಳ ಆಹಾರ, ಔಷಧ ಮೊದಲಾದವುಗಳಿಗೆ ದಾನ ಬಿಡುವ ಅನೇಕ ಶಾಸನಗಳ ವಿವರಣೆ ಈ ಭಾಗದಲ್ಲಿನ ಶಾಸನಗಳಲ್ಲಿವೆ. ಕ್ರಿ.ಶ.೧೦೮೨ರ ಶಾಸನವು ಯುವರಾಜ ಮಲ್ಲಿಕಾರ್ಜುನನು ಅಲಂದೆ ಸಾಸಿರದ ಆಡಳಿತ ನಡೆಸುತಿದ್ದನು. ಆರನೆಯ ವಿಕ್ರಮಾದಿತ್ಯನ ರಾಣಿ ಚಂದಲದೇವಿಯ ವಿನಂತಿಯ ಮೇರೆಗೆ ನಾಚಣ ದಂಡನಾಥನು ಅಲಂದಾಪುರದಲ್ಲಿ ನಿರ್ಮಿಸಿದ ಸ್ವಯಂಭೂ ಸೋಮೇಶ್ವರ ದೇವರ್ಗೆ ೧೦೦೦ ಹೇರು ಎತ್ತಿನ ಪೆರ್ಜುಂಕ, ಬಿಲ್ಕೊಡೆ ವಡ್ಡರಾವುಳ್ಳ ಮುಂತಾದ ಸುಂಕಗಳನ್ನು ದೇವರ ಸ್ಥಾನಾಚಾರ್ಯರಾದ ಸರೇಶ್ವರ ಪಂಡಿತರಿಗೆರ ಧಾರೆ ಎರೆದು ಕೊಟ್ಟಾಗ ಯುವರಾಜನನ್ನೂ ಸೇರಿದಂತೆ ಇತರರು ವಿವಿಧ ಸುಂಕಗಳನ್ನು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ. ದೇವರ ನಂದಾ ದೀಪಕ್ಕೆ ಅಲಂದೆಯ ಮುದ್ರಾವಣದಲ್ಲಿ ತಿಂಗಳು ತಿಂಗಳಿಗೆ ೧೦ ಪಣಗಳನ್ನು ದಾನ ಬಿಟ್ಟ ವಿಷಯ ತಿಳಿಸುತ್ತದೆ.[೩೬] ಗುಲಬರ್ಗಾ ಜಿಲ್ಲೆಯ ಅಂದೇಲಿ ಶಾಸನವು ಪಾಶುಪತ ಕಾಳಾಮುಖರ ವಿವರಣೆ ನೀಡುತ್ತದೆ. ಕ್ರಿ.ಶ.೧೧೩೪ರ ನಿಂಬರ್ಗಾ ಶಾಸನ, ಭೋಧನದ ಕ್ರಿ.ಶ.೧೧೪೨ರ ಶಾಸನ ಮತ್ತು ಕ್ರಿ.ಶ.೧೯೩ರ ಬೆಳಂಬಗಿ ಶಾಸನಗಳು ಕಾಳಾಮುಖರ ವಿವರಣೆ ನೀಡುತ್ತವೆ.

ಶೈವ ಸಂಪ್ರದಾಯದ ಪಾಶುಪತ ಕಾಳಾಮುಖ ಪಂಥಕ್ಕೆ ಸೇರಿದ ದೇವಸ್ಥಾನ, ಮಠಗಳ ಆಚಾರ್ಯರೇ ಸ್ಥಾನಾಚಾರ್ಯರು ಅಥವಾ ಸ್ಥಾನ ಪತಿಗಳಾಗಿದ್ದರು. ಹತ್ತನೆಯ ಶತಮಾನದ ಕೊನೆಯಲ್ಲಿ ಜೈನರ ಪ್ರಭಾವವು ಕಡಿಮೆಯಾಗಿ ಶೈವರ ಪ್ರಭಾವ ಹೆಚ್ಚಿತು. ರಾಜರು, ರಾಣಿಯರು, ಯುವರಾಜರು, ಸಾಮಂತರು, ಮಂಡಳೇಶ್ವರರು, ದಂಡನಾಥರಲ್ಲದೇ ಜನಸಾಮಾನ್ಯರು ಇವರಿಗೆ ದಾನ ನೀಡಿರುವ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ನೈಷ್ಠಿಕ ಸ್ಥಾನಾಚಾರ್ಯರಿಗೆ ಮಾತ್ರ ದೇವಾಲಯ ಪೂಜೆಗೆ ಅರ್ಹರು ಎಂದು ವಿಧಿವತ್ತಾಗಿ ಶಾಸನಗಳು ತಿಳಿಸುತ್ತವೆ. ಅಂದರೆ ಕಠೋರ ಬ್ರಹ್ಮಚಾರ್ಯ ಆಚರಿಸುವವರು ಮಾತ್ರ ದೇವಾಲಯ ಪೂಜೆಗೆ ಅರ್ಹರೆಂದು ತಿಳಿಸುತ್ತವೆ. ಮನ್ನೆದಡಿ ಸಾಸಿರದ ದೇವಸ್ಥಾನದಾಚಾರ್ಯರು ರಾಮೇಶ್ವರ ಗುರುಗಳಿಗೆ ಧಾರಾಪೂರ್ವಕವಾಗಿ ದಾನ ಮಾಡಿದ ವಿಷಯ ತಿಳಿಸುತ್ತದೆ (ಹೊಡಲ ಕ್ರಿ.ಶ.೧೨೬೭).

**ವೀರಶೈವ ಧರ್ಮ.**

ಹಿರೇಝುಳಕಿಯ ಶಾಸನವು ಭೋಗೇಶ್ವರ ದೇವರಿಗೆ ಬಿಟ್ಟ ದತ್ತಿಯ ವಿಷಯ ಹೇಳುವುದು. ದುತ್ತರಗಾಂವದ ವೀರೇಶ್ವರ ಶರಣರು ಮಹಾಪವಾಡ ಪುರುಷರಾಗಿದ್ದರು. ಇವರು ವೀರಶೈವ ಧರ್ಮವನ್ನು ಪ್ರತಿಪಾದಿಸಿದರು. ದಿನ ನಿತ್ಯ ತಪ್ಪದೇ ಇಷ್ಟ ಲಿಂಗಾರ್ಚನೆ– ಅರ್ಪಣೆ–ಅನುಭಾವ ಮಾಡುತ್ತಿದ್ದರು.[೩೭] ಏಕಾಂತ ರಾಮಯ್ಯ ಅಳಂದದ ಪೋತೆದಾರ ಮನೆತನದವನೆಂದು ಅಬ್ಬಲೂರು ಶಾಸನ ತಿಳಿಸುತ್ತದೆ.[೩೮] ಇವನು ಜನಿಸಿದ ಎಂದು ಹೇಳುವ ಸ್ಥಳದಲ್ಲಿ ಏಕಾಂತ ರಾಮಯ್ಯನ ದೇವಾಲಯವಿದೆ. ೧೨ನೆಯ ಶತಮಾನದಲ್ಲಿದ್ದ ಶಿವಶರಣ ಅಂಗಜೇಶ್ವರ ಮಸಣಯ್ಯ ದಂಪತಿಗಳು ಮುನ್ನಳ್ಳಿಯಲ್ಲಿದ್ದು ಕಲ್ಯಾಣ ಕ್ರಾಂತಿಯಲ್ಲಿ ತೊಡಗಿದ್ದರು. ಬಳ್ಳೇಶ ಮಲ್ಲಯ್ಯನು ಮೊದಲು ಜೈನನಾಗಿದ್ದು ನಂತರ ವೀರಶೈವ ಧರ್ಮವನ್ನು ಸ್ವೀಕರಿಸಿದನು. ತನ್ನ ಆರಾಧ್ಯ ದೇವರು ಬಳ್ಳೇಶ್ವರನಾದುದ್ದರಿಂದ ತನ್ನ ವಚನಗಳಿಗೆ 'ಬಳ್ಳೇಶ್ವರ' ಎಂಬ ಅಂಕಿತ ನಾಮವಿಟ್ಟು ವಚನ ರಚಿಸುತ್ತಿದ್ದನು. ತಡಕಲ್ ಶಾಸನವು ಬಳ್ಳೇಶ್ವರ ದೇವರಿಗೆ ಬಿಟ್ಟ ದತ್ತಿಯ ಕುರಿತು ವಿವರಿಸುತ್ತದೆ.[೩೯]

**ಶಾಕ್ತ ಧರ್ಮ.**

ಶಾಕ್ತ ಧರ್ಮ ಹೆಚ್ಚು ಪ್ರಚಾರದಲ್ಲಿರದಿದ್ದರು ಕೆಲವು ಶಾಸನಗಳಲ್ಲಿ ಭಾಗಲದೇವಿಯ ಉಲ್ಲೇಖ ಕಾಣಬಹುದಾಗಿದೆ. ಕಾಳಿಕಾ ದೇವಿಯ ದೇವಾಲಯಗಳು, ಗ್ರಾಮ ದೇವತೆಗಳು, ಅಧಿದೇವತೆಗಳು, ಮಹಿಷಾಸುರ ಮರ್ದಿನಿ, ಭೈರವಿ, ನಾಟ್ಯಭೈರವಿಯರ ಶಿಲ್ಪಗಳು ಅಲ್ಲಲ್ಲಿ ಶಾಕ್ತ ಧರ್ಮದ ಆಚರಣೆಯಲ್ಲಿರುವುದಕ್ಕೆ ಕುರುಹುಗಳಾಗಿವೆ.

ಸುಮಾರು ೧೦ನೆಯ ಶತಮಾನದಲ್ಲಿ ಜೈನ ಮತ್ತು ವೈಷ್ಣವ ಧರ್ಮಗಳ ಪ್ರಭಾವ ಹೆಚ್ಚಾಗಿತ್ತು. ಕ್ರಿ.ಶ.೧೧–೧೩ನೆಯ ಶತಮಾನದಲ್ಲಿ ಶೈವ ಧರ್ಮದ ಪ್ರಾಬಲ್ಯತೆ ಹೆಚ್ಚಾಗಿತ್ತು. ಶಿವದೇವಾಲಯ ಅಳಿದುದಕ್ಕೆ ತನ್ನ ಅಧಿಕಾರಿಯನ್ನು ಕೊಂದು ಗಂಗರಾಸಿಜೀ ತಾನೂ ಪ್ರಾಣ ಬಿಟ್ಟ ಬಗ್ಗೆ ಕ್ರಿ.ಶ.೧೧೨೧ ಮಾಶಾಳ ಶಾಸನ ವಿವರಿಸುತ್ತದೆ. ಸುಮಾರು ೧೧ನೆಯ ಶತಮಾನದ ಕೊನೆಯಲ್ಲಿ ೧೨ನೆಯ ಶತಮಾನದ ಆರಂಭದಲ್ಲಿ ಮಠಗಳು ಹುಟ್ಟಿಕೊಂಡಿದ್ದವು. ಮಠದ ಉಲ್ಲೇಖ(ಮಡಿಹಾಳ ಕ್ರಿ.ಶ೧೩ನೆಯ ಶತಮಾನ). ಕ್ರಿ.ಶ.೧೧೫೪ರ ಶಿರೋಳ್ಳಿ ಶಾಸನವು ಪ್ರಶಸ್ತಿ ಸಹಿತ ದಾನ ಶಾಸನವಾಗಿದೆ. ಶಾಸನ ದಂಡನಾಯಕ ವಿಮಲಾದಿತ್ಯ ಮತ್ತು ಅವನ ಸೋದರ ಚಂದ್ರಾದಿತ್ಯ ಸಿರಿವೋಳಲಲ್ಲಿ ಮೂರು ದೇವಾಲಯಗಳನ್ನು ಮತ್ತು ಒಂದು ಕೆರೆಯನ್ನು ನಿರ್ಮಿಸಿ ದಾನ ಬಿಟ್ಟ ವಿಷಯ ತಿಳಿಸುತ್ತದೆ. ನಿಂಬರಗಿ ಶಾಸನಗಳಲ್ಲಿ ಸೂರ್ಯನಾರಾಯಣನ ಪ್ರತಿಷ್ಠೆ ಮಾಡಿದ ವಿಷಯ ವಿರುವುದರಿಂದ ಸೂರ್ಯರಾಧನೆಯೂ ಸಹ ಶಾಕ್ತ ಪಂಥದಲ್ಲಿ ಬಹುಕಾಲ ರೂಢಿಯಲ್ಲಿದ್ದಿರಬೇಕು.[೪೦]

**ದೇವಾಲಯಗಳ ಧಾರ್ಮಿಕ ಕೊಡುಗೆ.**

ದೇವಾಲಯಗಳಲ್ಲಿ ಧಾರ್ಮಿಕ ಪ್ರಭಾವ ಹೇಗಿತ್ತು ಎಂದರೆ, ಮಾಶಾಳ ಶಾಸನವು ತಿಳಿಸುವಂತೆ ಗಂಗರಾಸಿಜೀಯವರು ಶಿವ ದೇವಾಲಯ ನಾಶವಾಗಿದ್ದಕ್ಕೆ ಅಧಿಕಾರಿಯನ್ನ ಕೊಂದರು. ಅಲ್ಲಿನ ಅಧಿಕಾರಿ ವರ್ಗದವರಿಗೆ, ಜನಸಮುದಾಯಕ್ಕೆ ಕ್ಷಮೆಯನ್ನು ಕೇಳಿ ಆತ್ಮಬಲಿದಾನ ಮಾಡಿಕೊಂಡರು. ಇದನ್ನು ಸೂಕ್ಷ್ಮವಾಗಿ ಗಮನಿಸಿದರೆ ಧಾರ್ಮಿಕ ಪ್ರಭಾವದ ಜೊತೆಗ ಅದರ ಒತ್ತಡವೆಷ್ಟಿತ್ತು ಎನ್ನುವುದು ನಮ್ಮ ಗಮನಕ್ಕೆ ಬರುತ್ತದೆ.  ಶೈವ, ವೈಷ್ಣವ, ಜೈನ, ಶಾಕ್ತ್ಯ, ಇವೆಲ್ಲವೂಗಳ ಬೆಳವಣಿಗೆಯಾದವು.  ತಮ್ಮ ಪ್ರಭಾವ ಬೀರಲು ಎಷ್ಟರ ಮಟ್ಟಿಗೆ ಪ್ರಯತ್ನಿಸಲು ಪ್ರಾರಂಭಿಸಿದವೆಂದರೆ, ಧಾರ್ಮಿಕ ಕಲಹಗಳಿಗೂ ನಾಂದಿಯಾಯಿತು. ಈ ಕಲಹಗಳನ್ನು ತೀರ್ಮಾನಿಸುವಲ್ಲಿ ಆಡಳಿತ ವರ್ಗದವರು, ರಾಜರು ಭಯಪಡುತ್ತಿದ್ದರು. ಒಂದನೆಯ ಬುಕ್ಕರಾಯನ ಶಾಸನ, ಶೃಂಗೇರಿ, ಕಲ್ಯಾ ಶಾಸನಗಳು ಇಲ್ಲಿ ನಾವು ಉದಾಹರಿಸಬಹುದು.

**ದೇವಸ್ಥಾನ–ದೇವಾಲಯ ಆಡಳಿತ.**

**ಸ್ಥಾನಪತಿ ಗೋರವನಕ್ಕೀ**
**ಸ್ಥಾನದ ಸಮಯಂಗಳಕ್ಕೆ ರತಿಲಂಪಟನೀ**
**ಸ್ಥಾನದೋಳಿರಲಾಗವನಂ**
**ಸ್ಥಾನಮುಮನರಸುಗಳು ಮಿಳ್ದೆ ಕಳೆಯತ್ವೀಳ್ಳುಂ**

ಅಂದೇಲಿ ಕಿ.ಶ.೧೩೩೮ ಶಾಸನಂತ್ಯ ಉದ್ದರಣೆ ಇಂತುಹುದೆ ನಿಯಮ ದೇವಸ್ಥಾನದಲ್ಲಿದ್ದ ಎಂಬುದಕ್ಕೆ ಆಧಾರವಾಗಿವೆ.

ಆಯಾ ಧರ್ಮದ ದೇಗುಲಗಳಲ್ಲಿ ಪೂಜಾ ಸಿಬಂದ್ದಿಯಲ್ಲದೆ ದೇವರ ಸೇವೆಗಾಗಿ ಎಂತಹ ತ್ಯಾಗಕ್ಕೂ ಸಿದ್ದರಾಗಿರುತ್ತಿದ್ದ ಲೆಂಕ, ಗರುಡ, ದೇವರುಣುಗ, ತೋತ್ತು, ಗೊತ್ತಳಿ, ಅಲ್ಲದೆ ಗಡ್ಡ ಹೆಸರಿನ ಶಿಷ್ಯರಿದ್ದುದಾಗಿ ಇಲ್ಲಿನ ಶಾಸನಗಳಿಂದ ಗೊತ್ತಾಗುತ್ತದೆ.[೬೧] ರಾಷ್ಟ್ರಕೂಟ ಆಳ್ವಿಕೆಯ ಅಂದೇಲಿ ಶಾಸನದಲ್ಲಿ(ಅಂದೇಲಿ ೯೩೯–೯೬೬)ಪೇರ್ಗಡೆ ಗುಣ್ಡಮಯ್ಯನ ಹೆಸರಿನಲ್ಲಿ ಅವನ ಮಗ ಹಾಗೂ ನಾಲ್ವರು ಅಧಿಕಾರಿಗಳು ಗುಣ್ಡೇಗೇಶ್ವರ ಲಿಂಗ ಪ್ರತಿಸ್ಥಾಪಿಸಿದ ಸಂಗತಿಯಿದೆ. ಶ್ರೀ ಪರ್ವತದ ಮಲ್ಲಿಕಾರ್ಜುನ ದೇಗುಲ ಮಾಡಿಸಿದ ವಿಷಯ ಕ್ರಿ.ಶ.೧೨೯೨ ಚಿನಮಳ್ಳಿ ಶಾಸನದಲ್ಲಿದೆ. ಶಿವಾಲಯವಳಿಯಲು ಗಂಗರಾಸಿಜೀಯರು ಸತ್ತ ಸಂಬಂಧದೋಳ್ ದೇವಾಲಯ ನಾಶವಾದಾಗ ಆತ್ಮ ಬಲಿದಾನ ಪ್ರಕರಣವಿದೆ. ಅಲ್ಲಿನ ಅಧಿಕಾರಿಗಳು ಕ್ಷಮೆಯಂಗೋಟ್ಟು ಆ ಧಾರ್ಮಿಕ ವೀರನ ಸ್ಮಾರಕವಾಗಿ ದತ್ತಿಯನ್ನು ನೆಲೆಗೊಳಿಸಿದ್ದಾಗಿ ಮಣೂರ ಶಾಸನ ತಿಳಿಸುತ್ತದೆ (ಕ್ರಿ.ಶ.೧೧೨೦).[೬೨] ವೈದಿಕ ಧರ್ಮಶಾಸ್ತ್ರಾಭ್ಯಾಸದ ಪ್ರಮುಖ ವಿದ್ಯಾಪೀಠ ಮಣೂರಿನಲ್ಲಿದೆ.[೬೩] ಹಂದರಕಿ (ಕ್ರಿ.ಶ.೧೧೧೮) ಶಾಸನದಲ್ಲಿ ನೈಷ್ಠಿಕ ವರದಾಚಾರ್ಯರಾದ ಕಾಳಾಮುಖ ತಪೋಧನರಾದ ಅಘೋರ ಶಕ್ತಿ ಪಂಡಿತ ಎಂದು ಉಲ್ಲೇಖಿಸಿದೆ. ಕ್ರಿ.ಶ.೧೨೮೮–೧೨೯೮ರಲ್ಲಿ ಲಿಖಿತವಾದ ಭೀಮರಥೀ ತೀರದ ಅಭಿನವ ಕೈಲಾಸವೆಂದು ವರ್ಣಿತವಾದ ಚಿನಮಳ್ಳಿ ಶಾಸನದ ಆಭಿನವ ಮಲ್ಲಿಕಾರ್ಜನ ದೇವರ ಸ್ಥಾನಿಕಾಚಾರ್ಯರಾದ ಶಿವದೇವಯ್ಯ ಹಾಗೂ ರಾಯ ರಾಜಗುರು ವೀರ ಕೇದಾರದೇವ ಮೊದಲಾದವರು ಶೈವಧರ್ಮದ ಕಟ್ಟೂಗ್ರ ಮೂರ್ತಿಗಳಾಗಿ ಪ್ರಭಾವ ಬಿರಿದ್ದವು[೬೪] ಎಂದಿದೆ.

**ದೇವಸ್ಥಾನಗಳಲ್ಲಿನ ಉತ್ಸವ ಆಚರಣೆಗಳು.**

ದೇವರಿಗೆ ಪಟ್ಟೆ (ರೇಶ್ಮೆದುಕೂಲ) ಹೊನ್ನ ಹರಿವಾಣ ಹಾಗೂ ಕಪಿಲೆಯನ್ನು ದಾನ ಮಾಡಿರುವದು ಚಿನಮಳ್ಳಿ ಕ್ರಿ.ಶ.೧೨೯೨ ಶಾಸನ ಉಲ್ಲೇಖಿಸುತ್ತದೆ. ದೇವರಿಗೆ ಹರಕೆ ರೂಪದಲ್ಲಿ ೧೦೦ಕೋಣ ಹಾಗೂ ಎತ್ತುಗಳನ್ನು ಬಿಟ್ಟುಕೊಟ್ಟ ಸಂಗತಿ ಹೊಡಲು ಶಾಸನದಲ್ಲಿದೆ (ಕ್ರಿ.ಶ.೧೧೮೧).

**ತೀರ್ಥಕ್ಷೇತ್ರಗಳು.**

ದಕ್ಷಿಣ ವಾರಣಾಸಿ ಮುದುನೂರಿನ ರಾಮೇಶ್ವರ–ಲಕ್ಷಣೇಶ್ವರ ತೀರ್ಥಗಳು ತ್ರಿಭುವನ ಮಲ್ಲದೇವರು ಗೋದಾವರಿ ತೀರದ ಕೋಟಿ ತೀರ್ಥದಲಿ ತುಲಾ ಪುರಿಷ ದಾನಂಗಳನ್ನು ಮಾಡಿದ ಉಲ್ಲೇಖ ಕ್ರಿ.ಶ. ೧೯೯ರ ಹುಣಸೀಹಡಗಲಿ  ಶಾಸನದಲ್ಲಿದೆ. ಚಂದ್ರಾದೇವಿಯ ತಡಿ (ಕುಳಗೇರಿ ಕ್ರಿ.ಶ.೧೧೦೫) ಶಾಸನದಲ್ಲಿ ಉಲ್ಲೇಖಿಸಿದೆ. ಪಶ್ಚಿಮಾಭಿಮುಖವಾಗಿ ಹರಿವ ತೊರೆಯ ಕೂಡಲು (ಹರಸೂರು ಕ್ರಿ.ಶ.೧೧೭೨) ಎಂದಿದೆ.  'ಯರಡು ಹಳ್ಳದ ಕೂಡಲು ಮೊದಲು ಕಟ್ಟೆಯಲು ಗರ್ದೆಯ ಕಾಲಡಿಯ ಮತ್ತರು'(ಹೊಡಲು ಕ್ರಿ.ಶ.೧೧೮೧)[೪೫] ಎಂದು ಉಲ್ಲೇಖವಿದೆ. ಎರಡು ಅಥವಾ ಮೂರು ನದಿಗಳು ಸೇರುವ ಸ್ಥಳಗಳಿಗೆ ಪವಿತ್ರವೆಂದು ಅಲ್ಲಿ ಅದು ತೀರ್ಥ ಸ್ಥಳವಾಗಿ ದೇವಾಲಯ ಕಟ್ಟಲಾಗುತ್ತಿತ್ತು. ಅಭಿನವ ಶ್ರೀಶೈಲ ಎಂದು ಚಿನಮಳ್ಳಿಗೆ ಕರೆಯಲಾಗುತ್ತಿತ್ತು. ಗಂಗಾ ನದಿಯಲ್ಲಿ ಸ್ನಾನ ಮಾಡಿದ ಪುಣ್ಯ ಸಿಗಲಿ ಎಂದು ಶಾಪಾಶಯಗಳಲ್ಲಿ ತಿಳಿಸಲಾಗಿದೆ. ಕ್ರಿ.ಶ೧೧೮೧ರ ಹೊಡಲು ಶಾಸನದಲ್ಲಿ ಶ್ರೀ ರಾಮ–ಸೀತೆಯರ, ಲಂಕೆ ಮತ್ತು ದಶಾನನ ಉಲ್ಲೇಖವಿದೆ.

**ಶಾಸನೋಕ್ತ ದೇವಾಲಯ.**

ಮಲ್ಲಿಕಾರ್ಜುನ ದೇವಾಲಯ ಕಡಗಂಚಿಯ ಗೋವಿಂಜಿಯರ ಅಧೀನದಲ್ಲಿತ್ತು (ಕಡಗಂಚಿ ಕ್ರಿ.ಶ.೧೧೧೮). ತ್ರಿಕೂಟ ದೇವಾಲಯ–ಲಕ್ಷ್ಮೀಶರಾವಾಸಮಂ, ಚೆನ್ನಕೇಶವ ದೇವಾಲಯ ಮತ್ತು ಚತುರ್ವಿಂಶತಿ ಮೂರ್ತಿಯ ಉಲ್ಲೇಖ (ರುದ್ರವಾಡಿ ಕ್ರಿ.ಶ.೧೧೦೩). ಕೇಶವಪುರದ ಪಾರ್ಶ್ವನಾಥನ ಚೈತ್ಯಾಲಯ (ಗಡಿ ಕೇಶಾವರ್ ಕ್ರಿ.ಶ೧೪ನೆಯ ಶತಮಾನ).  ಧರ್ಮ ಕ್ಷೇತ್ರವಾದ ಭಾಗಲದೇವಿ ಮತ್ತು ಬಿಬ್ಬರ ದೇವದ ಉಲ್ಲೇಖ(ಮೋಘಾ ಕ್ರಿ.ಶ.೧೧೭೦). ರಾಮತೀರ್ಥ ಪರಿಛತ್ರದ ಉಲ್ಲೇಖ (ಮೋಘಾ ಕ್ರಿ.ಶ.೧೧೭೦).  ಸಿರವಳ್ಳಿಯ ಪಶ್ಚಿಮ ದಿಕ್ಕಿಗೆ 'ಹರಿಹರ ಭವನ ತ್ರಯಮಲ' (ತ್ರಿಕೂಟ ದೇವಾಲಯ), ವಜ್ರಘಟಿತ ಪ್ರಾಕಾರ ಮತ್ತು ನಿರ್ಮಲ ತೀರ್ಥ ಚಂದ್ರಾದಿತ್ಯ ಕಟ್ಟಿಸಿದನು(ಶಿರೋಳ್ಳಿ ಕ್ರಿ.ಶ.೧೧೫೪). ಸರಸ್ವತೀವರಹಸ್ತಿಮುಖೆ ಎಂದು ಪ್ರಾರ್ಥನೆಯೊಂದಿಗೆ ಹರಸೂರು ಕ್ರಿ.ಶ.೧೯೯೭ರ ಶಾಸನದಲ್ಲಿ ಉಲ್ಲೇಖವಾಗಿದೆ.

**ಧಾರ್ಮಿಕ ಸಂಹಿಷ್ಣುತೆ.**

ಕರ್ನಾಟಕದ ದಕ್ಷಿಣ ಹಾಗೂ ದಕ್ಷಿಣ ಪೂರ್ವಭಾಗಗಳಲ್ಲಿ ಪ್ರಗಲ್ಪಸ್ಥಿತಿಯಲ್ಲಿದ್ದ ವೈಷ್ಣವ ಧರ್ಮ ಉತ್ತರ ಭಾಗದ ಶೈವಧರ್ಮದೊಂದಿಗೆ ಹೊಂದಾಣಿಕೆ ಮತ್ತು ಅನುಸಂಧಾನ ನಡೆಸಿತ್ತು. ಶಿರೋಳ್ಳಿ ಶಾಸನದ ಲಲಾಟದ ಮಧ್ಯದಲ್ಲಿ ನಾರಾಯಣ ಮತ್ತು ಶಿವಲಿಂಗಗಳ ಕೆತ್ತನೆಯಿದೆ. ಪ್ರಾರ್ಥನೆಯೂ ಆರಂಭಿಕ ಸಾಲುಗಳು ವಿಷ್ಣುವಿನ ಸ್ತುತಿ ಮತ್ತು ನಂತರ ಶಿವನ ಸ್ತುತಿಯನ್ನು ವಿವರಿಸುತ್ತದೆ (ಶಿರೋಳ್ಳಿ ಕ್ರಿ.ಶ.೧೧೫೪).

**ಶಾಪಾಶಯಗಳಲ್ಲಿ ಧರ್ಮ.**

ಕ್ರಿ.ಶ.೧೧೯೯ರ ಮಾಶಾಳ ಶಾಸನದ್ಲಲಿ ಲಿಂಗ ಪೂಜಿಸುವವರನ್ನು ಕೊಂದ ಪಾಪಬರುವುದು ಎಂದು ತಿಳಿಸುತ್ತದೆ. ಕ್ರಿ.ಶ.೧೨೬೦ರ ಚಿನಮಳ್ಳಿಯ ಶಾಸನ ಶತ ಸಹಸ್ರ ಲಿಂಗಮಂ ಪೂಜಿಸಿದ ಪುಣ್ಯಮಕ್ಕು ಎಂದು ತಿಳಿಸುತ್ತದೆ. ಶಾಸನದ ಶಾಪಾಶಯದಲ್ಲಿ ಶೈವ ಧರ್ಮದ ಪ್ರಾಬಲ್ಯ ನೋಡಬಹುದಾಗಿದೆ.

**ಸಾಂಸ್ಕೃತಿಕ ವ್ಯವಸ್ಥೆ.**

ಗೀತ, ವಾದ್ಯ ಮತ್ತು ನೃತ್ಯದ ಉಲ್ಲೇಖ (ಹೊಡಲ ಕ್ರಿ.ಶ೧೨೬೨ ಮತ್ತು ಕ್ರಿ.ಶ.೧೧ನೆಯ ಶತಮಾನದ ತಡಕಲ್ ಶಾಸನ).  ಕ್ರಿ.ಶ೧೦೧೧ರ ಸರಡಗಿ ಶಾಸನ ಹಳವಿಗ ಬಿಕ್ಕೋಜನಿಗೆ, ಹಾಡುವ, ಪಾತ್ರ ಮಾಡುವರಿಗೆ ದಾನ ಬಿಟ್ಟ ವಿಷಯ ತಿಳಿಸುತ್ತದೆ. ಶಾಸನಗಳಲ್ಲಿ ಸಾಂಸ್ಕೃತಿಕತೆಯ ಉಲ್ಲೇಖ

ದೇವಾಲಯಗಳಿಗೆ ಸಂಬಂಧಿಸಿದ ದಾನ–ದತ್ತಿ ಶಾಸನಗಳಿಂದ ಕಂಡು ಬರುತ್ತದೆ. ದೇವರ ಪೂಜೆಯ ಸಮಯದಲ್ಲಿ ದೇವರಿಗೆ ಸಂತೈಸಲು ಸಂಗೀತ, ವಾದ್ಯಗಳು ಭಾರಿಸುತ್ತಿದ್ದರು. ನೃತ್ಯದ ಮೂಲಕ ದೇವರಿಗೆ ತಮ್ಮ ಭಕ್ತಿ ತೋರಿಸುತ್ತಿದ್ದರು.

ಆಭರಣಗಳ ಉಲ್ಲೇಖ–ಬೆಳ್ಳಿಯ ಹಾಗ ಎಂಬ ಆಭರಣದ ಉಲ್ಲೇಖ (ಹರಸೂರು ೧೧೭೨). ಈ ಭಾಗದ ಶಾಸನಗಳಲ್ಲಿ ಮತ್ತು ಅಧಿಕ ಶಾಸನಗಳಲ್ಲಿ ಆಭರಣಗಳ ಉಲ್ಲೇಖ ಕಂಡುಬರುವುದಿಲ್ಲ, ಪ್ರಾಚೀನ ಕಾಲದ ಇತಿಹಾಸ ಅಧ್ಯಯನದಲ್ಲಿ ಹಾಗ ಎನ್ನುವ ನಾಣ್ಯದ ಮಾಹಿತಿಯಿತ್ತು. ಆದರೆ ಶಾಸನದಲ್ಲಿ ಮೊಟ್ಟ ಮೊದಲ ಬಾರಿಗೆ ಇದರ ಉಲ್ಲೇಖವಾಗಿದೆ.

**ದೇವಾಲಯಗಳ ಸಾಂಸ್ಕೃತಿಕ ಕೊಡುಗೆ.**

ಸಾಂಸ್ಕೃತಿಕ ಹಿನ್ನೆಲೆಯಲ್ಲಿ ನೋಡಿದಾಗ ದೇವಾಲಯಗಳು ಸಂಗೀತಗಾರರಿಗೆ, ನೃತ್ಯಗಾರರಿಗೆ ಪ್ರೇರಕವಾದವು. ಕೋಳಲು–ಷೆಹನಾಯಿ ಊದುವವರು, ಜಾಗಟೆ, ತಬಲ ಬಾರಿಸುವ, ಪಾತ್ರದವರ ಹುಟ್ಟಿಗೆ ಮೂಲ ನೆಲೆ ದೇವಾಲಯಗಳಾದವು. ಇದಕ್ಕಿಂತ ಮುಂಚೆ ಸಂಗೀತ, ನೃತ್ಯ ಎಲ್ಲಿ ಮಾಡುತ್ತಿದ್ದರು? ಎಂಬ ಪ್ರಶ್ನೆ ಹಾಕಿ ಕೊಂಡರೆ ರಾಜರು ತಮ್ಮ ವಿಲಾಸಕ್ಕಾಗಿ ತಮ್ಮ ಆಸ್ಥಾನದಲ್ಲಿ ಮಾಡಿಸುತ್ತಿದ್ದರು. ಆದರೆ ಅಷ್ಟು ಪ್ರಚುರವಾಗಿರಲಿಲ್ಲ. ಅದು ರಾಜರಿಗೆ ಮಾತ್ರ ಸೀಮಿತವಾಗಿತ್ತು. ದೇವಾಲಯಗಳ ಪೂಜಾ ಸಂದರ್ಭದಲ್ಲಿ ಭಕ್ತಿ ಈ ಮೂಲಕ ತೋರಿಸುವ ಪದ್ದತಿ ಬಂದಿತು. ಹೀಗೆ ಕಲೆ ಸಾರ್ವಜನಿಕರಿಗೆ ಪ್ರೇರಕವಾಗಿದ್ದು, ಸಾಂಸ್ಕೃತಿಕ ಬೆಳವಣಿಗೆಗೆ ಕಾರಣವಾಯಿತು. ಪ್ರಾಥಮಿಕ ಹಂತದ ವಿದ್ಯಾದಾನ, ಆಧ್ಯಾತ್ಮಿಕತೆಯ ಶಿಕ್ಷಣ ದೇವಾಲಯಗಳಲ್ಲಿ ನೀಡುತ್ತಿದ್ದರು.

**ಮೂರ್ತಿ ಶಿಲ್ಪಗಳಲ್ಲಿ ಕಂಡು ಕೊಂಡ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿ.**

ದೇವಾಲಯಗಳ ಬಾಗಿಲು, ತೋರಣ, ಭಿತ್ತಿ, ಅಧಿಷ್ಠಾನ ಮತ್ತು ದೇವ ಕೋಷ್ಠದಲ್ಲಿರುವ ಹಲವು ಶಿಲ್ಪಗಳು ಮತ್ತು ಮೂರ್ತಿ ಶಿಲ್ಪಗಳು ನಮಗೆ ಇತಿಹಾಸ ತಿಳಿಸುತ್ತವೆ. ಆ ಕಾಲದ ಜನ ಜೀವನ, ವೇಷ–ಭೂಷಣ ಉಪಯೋಗಿಸುವ ವಸ್ತುಗಳು, ಪ್ರಾಣಿ, ಪಕ್ಷಿಗಳ ಬಗ್ಗೆ ತಿಳಿಸುತ್ತವೆ. ದಂತ ಕಥೆಗಳು, ಕಾಲ್ಪನಿಕ ಪ್ರಾಣಿ–ಪಕ್ಷಿಗಳು, ಪೌರಾಣಿಕ, ಪಂಚತಂತ್ರ, ರಾಮಾಯಣ, ಮಹಾಭಾರತದ ಕಥೆಗಳನ್ನು ವಿವರಿಸುತ್ತವೆ. ಕಥಾ ಹಂದರ ಕಟ್ಟುವಲ್ಲಿ ಶಿಲ್ಪಗಳು ಪ್ರೇರಕವಾದವು. ವೆಯ್ಯಾವಳಿಗಳು, ಗಂಡಭೇರುಂಡ, ನಾಲ್ಕು ತಲೆಯ ಸಿಂಹ, ಅರ್ಧ ಪ್ರಾಣಿ ಮತ್ತು ಅರ್ಧ ಮನುಷ್ಯನ ಕೆತ್ತನೆಗಳು, ಹತ್ತು ಕೈಯಿರುವ ದೇವರುಗಳ ಶಿಲ್ಪಗಳು ಹೀಗೆ ಹಲವು ಕಾಲ್ಪನಿಕತೆಯಿಂದ ತಮ್ಮ ಭಾವನೆಗಳೊಂದಿಗೆ ತಮ್ಮ ಧರ್ಮ ದೇವರು ಹೆಚ್ಚು ಬಲಶಾಲಿ ಎಂದು ತೋರಿಸುತ್ತಿದ್ದರು.

ಸೈನ್ಯ ಪದ್ದತಿಯಲ್ಲಿ ಕಾಲ್ದಳ, ಅಶ್ವದಳ, ರಥದಳ, ಗಜದಳವಿರುವ ಬಗ್ಗೆ ಅವರ ಆಯುದ್ಧಗಳ ಬಗ್ಗೆ ನಿಖರವಾಗಿ ತಿಳಿಸುತ್ತವೆ. ಅವರು ಹಾಕಿಕೊಂಡ ಆಭರಣ, ವಸ್ತ್ರ–ಕೇಶ ವಿನ್ಯಾಸ ತಿಳಿಸುತ್ತವೆ. 'ವಿ' ಆಕಾರದ ವಸ್ತ್ರ, ವೀರ ಮುಡಿ ಕಟ್ಟುತ್ತಿರುವುದು ಸಾಮಾನ್ಯವಾಗಿ ಈ ಭಾಗದಲ್ಲಿ ಕಾಣುತ್ತೆವೆ. ಖಡ್ಗ, ಗುರಾಣಿ, ಬಿಲ್ಲು–ಬಾಣ, ಭರ್ಜಿ, ಚಾಕು, ಚೂರಿಗಳನ್ನು ಬಳಸುತ್ತಿದ್ದರು.

ನೃತ್ಯ ಮಾಡುವ ಭಂಗಿಗಳು, ನೃತ್ಯಗಾರರ ಅಲಂಕಾರಿಕ ಆಭರಣ, ವಸ್ತ್ರ ವಿನ್ಯಾಸ, ಕೇಶಾಲಂಕಾರದ ಕೆತ್ತನೆಗಳಿಂದ ನೃತ್ಯದ ಬೆಳವಣಿಗೆ, ನೃತ್ಯಗಾರರ ಅಲಂಕಾರದ ವಿಧಾನ ತಿಳಿಯಬಹುದಾಗಿದೆ. ಕೊರಳಾಭರಣ–ಹಾರ, ಕುತ್ತಿಗೆ ಹಾರ(ನೆಕ್ಲೇಸ್), ಸ್ತನ ಬಂಧ, ವಕ್ಷ ಬಂಧ, ತೋಳ್ಬಂದಿ, ಕಿವಿ ಓಲೆಯಲ್ಲಿ (ಮಕರ, ಕುಮುದ) ಹಲವು ರೀತಿಯ ವಿನ್ಯಾಸಗಳಿದ್ದವು. ಕೈ–ಉಂಗುರ, ಕಾಲುಂಗುರ, ಕಾಲ್ಗಡಗ, ಪೈಜಾಮ, ಕಾಲ್ಗೆಜ್ಜೆ ಹಾಕುತ್ತಿದ್ದರು. ಸ್ತ್ರೀಯರು ಕೇಶಾಲಂಕಾರದಲ್ಲಿ ತುರುಬ,

ಜಡೆ, ವೃತ್ತಾಕಾರದ ತುರುಬ, ಪ್ರಭಾವಳಿಯಂತೆ ತುರುಬದೊಂದಿಗೆ ಜಡೆ ಹೀಗೆ ವಿವಿಧ ವಿನ್ಯಾಸದ ಜಡೆ ಹಾಕುತ್ತಿದ್ದರು.

ಶಿಲ್ಪಗಳ ಕೆತ್ತನೆಗಳಿಂದ ಧಾರ್ಮಿಕ ಮನೋಭಾವ, ಉನ್ನತ ವರ್ಗದವರ ಮತ್ತು ಸಾಮಾನ್ಯ ಜನರ, ತಳ ಮಟ್ಟದವರ ಜೀವನ ವೈಖರಿ ತಿಳಿಯಸುತ್ತವೆ. ಸಂಗೀತದ ಸಾಧನಗಳಾದ ಕೋಳಲು, ಷಹನಾಯಿ, ಡೋಲು, ತಬಲ, ಶಂಖ, ತಮಟೆ, ಡಮರು, ಪಾಳ್ಯಗಳ ವಿವರಣೆ ಸಿಗುತ್ತದೆ.

**ಅಡಿ ಟಿಪ್ಪಣಿಗಳು.**

೧. ನಾಗಯ್ಯ.ಜೆ.ಎಂ–ನಾಗರಖಂಡ–೭೦ ಒಂದು ಅಧ್ಯಯನ ಪು.ಸಂ೧೫೪
೨. ಪೂರ್ವೋಕ್ತ ಪು.ಸಂ೧೫೪
೩. ಚೆನ್ನಬಸವಯ್ಯ ಹಿರೇಮಠ ಕುರುಗೋಡು ಸಿಂಧರು. ಪು.ಸಂ.೧೮೧
೪. ಶಿವಾನಂದ.ವಿ.ಹೈ.ಕ.ಭಾ.ಶಿ.ಶಾ.೧೯೯೨,ಪು.ಸಂ೪೦–೪೧
೫. ಹನುಮಾಕ್ಷಿ ಗೋಗಿ–ಕಲಬುರ್ಗಿ ಜಿಲ್ಲೆಯ ಶಾಸನಗಳು ಪು.ಸಂ.೬೨
೬. ಚೆನ್ನಕ್ಕ ಎಲಿಗಾರ–ಶಾಸನಗಳಲ್ಲಿ ಕರ್ನಾಟಕ ಸ್ತ್ರೀ ಸಮಾಜ, ಪು.ಸಂ೨೪
೭. ಹನುಮಾಕ್ಷಿ ಗೋಗಿ, ಕಲಬುರ್ಗಿ ಜಿಲ್ಲೆಯ ಶಾಸನಗಳು, ಪು.ಸಂ.೨೯
೮. ಪೂರ್ವೋಕ್ತ ಪು.ಸಂ.೩೭
೯. ಶಿವಾನಂದ.ವಿ–ಹೈದ್ರಾಬಾದ ಕರ್ನಾಟಕದ ಶಿಲಾ ಶಾಸನಗಳು, ಪು.ಸಂ–೨೫೮.
೧೦. ಪೂರ್ವೋಕ್ತ ೧೯೯೨ ಪು.ಸಂ.೨೦
೧೧. ಪೂರ್ವೋಕ್ತ ಪು.ಸಂ.೨೦
೧೨. ಗೋಪಾಲ್.ಆರ್.ಗು.ಜಿ.ಇ ಮತ್ತು ಪು–೨೦೦೭ಪು.ಸಂ,೧೦೪ ಮತ್ತು ೧೦೫
೧೩. ಹನುಮಾಕ್ಷಿಗೋಗಿ.ಕ.ಜಿ.ಶಾ,೧೯೯೬,ಪು.ಸಂ.೨೩
೧೪. ಗೋಪಾಲ್.ಆರ್.ಗು.ಜಿ.ಇ ಮತ್ತು ಪು–೨೦೦೭,ಪು.ಸಂ.೩೦೧
೧೫. ಶಿವಾನಂದ.ವಿ.ಕ.ಜಿ.ಶಿ.ಶಾ೧೯೭೮,ಪು.ಸಂ.೪೩
೧೬. ಕೊಪ್ಪಾ.ಎಸ್.ಕೆ–ತರ್ದವಾಡಿ ನಾಡು ಒಂದು ಅಧ್ಯಯನ ಪು.ಸಂ.೧೮೪
೧೭. ಶಿವಾನಂದ.ವಿ.ಹೈ.ಕ.ಭಾ.ಶಿ.ಶಾ.೧೯೯೨,ಪು.ಸಂ೨೩–೨೮
೧೮. ಶಿವಾನಂದ.ವಿ.ಕ.ಜಿ.ಶಿ.ಶಾ೧೯೭೮ ಪು.ಸಂ–೪೪
೧೯. ಹನುಮಾಕ್ಷಿಗೋಗಿ.ಕ.ಜಿ.ಶಾ.೧೯೯೬,ಪು.ಸಂ.೨೯
೨೦. ಶಿವಾನಂದ.ವಿ.ಹೈ.ಕ.ಭಾ.ಶಿ.ಶಾ.೧೯೯೨,ಪು.ಸಂ.೩೯–೪೦
೨೧. ಪೂರ್ವೋಕ್ತ ಪು.ಸಂ.೨೬೨
೨೨. ಕೊಪ್ಪಾ.ಎಸ್.ಕೆ–ತರ್ದವಾಡಿ ನಾಡು ಒಂದು ಅಧ್ಯಯನ, ಪು.ಸಂ.೧೬೬
೨೩. ಚೆನ್ನಬಸವಯ್ಯ ಹಿರೇಮಠ–ಕುರುಗೋಡು ಸಿಂಧರು, ಪು.ಸಂ.೧೯೧
೨೪. ಪೂರ್ವೋಕ್ತ ಪು.ಸಂ.೧೯೧
೨೫. ಶಿವಾನಂದ.ವಿ.ಹೈ.ಕ.ಭಾ.ಶಿ.ಶಾ.೧೯೯೨,ಪು.ಸಂ೨೩–೨೮
೨೬. ಪೂರ್ವೋಕ್ತ ಪು.ಸಂ. ಅಂದೇಲಿ ಕ್ರಿ.ಶ.೧೦೫೦, ಹುಣಸೀಹಡಗಲಿ ಕ್ರಿ.ಶ.೧೧೯೮
೨೭. ಚಿದಾನಂದ ಮೂರ್ತಿ.ಎಂ.ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು.ಸಂ.೭೪
೨೮. ಚೆನ್ನಬಸವಯ್ಯ ಹೀರೆಮಠ ಕುರುಗೋಡು ಸಿಂಧರು ಪು.ಸಂ೨೪೬
೨೯. ಹನುಮಾಕ್ಷಿ ಗೋಗಿ೧೯೯೬ ಕಲಬುರ್ಗಿ ಜಿಲ್ಲೆಯ ಶಾಸನಗಳು ಪು.ಸಂ೨೧
೩೦. ಪಾಟೀಲ್.ಎಂ.ಬಿ. ಗುಲಬರ್ಗಾ ಜಿಲ್ಲೆಯ ಗ್ಯಾಸೆಟಿಯರ್ ಪು.ಸಂ.೭೨೪
೩೧. ಚಿದಾನಂದ ಮೂರ್ತಿ.ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ

ಪು.ಸಂ.೧೭೯

೩೨. ಪೂರ್ವೋಕ್ತ ಪು.ಸಂ.೧೮೨

೩೩. ಹನುಮಾಕ್ಷಿ ಗೋಗಿ ೧೯೯೬ ಕಲಬುರ್ಗಿ ಜಿಲ್ಲೆಯ ಶಾಸನಗಳು ಪು.ಸಂ.೭೫

೩೪. ಪೂರ್ವೋಕ್ತ ಪು.ಸಂ.೭೮

೩೫. ಚೆನ್ನಬಸವಯ್ಯ ಹೀರೆಮಠ ಕುರುಗೋಡು ಸಿಂಧರು ಪು.ಸಂ೨೪೮

೩೬. ಪಾಟೀಲ್.ಎಂ.ಬಿ. ಗುಲಬರ್ಗಾ ಗೆಜೆಟಿಯರ್ ಪು.ಸಂ.೬೮೨

೩೭. ಹೀರೆಮಠ.ಎಸ್.ಎಂ.ಸಾವಿರದ ಆಳಂದ– ಸಾಂಸ್ಕೃತಿಕ ಸಮೀಕ್ಷೆ ಪು.ಸಂ.೧೫

೩೮. ಪಾಟೀಲ್.ಎಂ.ಬಿ. ಗುಲಬರ್ಗಾ ಗೆಸೆಟಿಯರ್ ಪು.ಸಂ.೬೮೨

೩೯. ಹೀರೆಮಠ.ಎಸ್.ಎಂ.ಸಾವಿರದ ಆಳಂದ– ಸಾಂಸ್ಕೃತಿಕ ಸಮೀಕ್ಷೆ ಪು.ಸಂ.೦೪

೪೦. ಹನುಮಾಕ್ಷಿಗೋಗಿ.ಕ.ಜಿ.ಶಾ.೧೯೯೬ಪು.ಸಂ.೨೪

೪೧. ಶಿವಾನಂದ.ವಿ.ಹೈ.ಕ.ಭಾ.ಶಿ.ಶಾ.೧೯೯೨,ಪು.ಸಂ.೩೦–೩೨

೪೨. ಶಿವಾನಂದ.ವಿ. ಕ.ಜಿ.ಶಿ.ಶಾ೧೯೭೮ ಪು.ಸಂ.೩೩

೪೩. ಪೂರ್ವೋಕ್ತ,ಪು.ಸಂ.೩೫–೩೬

೪೪. ಶಿವಾನಂದ.ವಿ.ಹೈ.ಕ.ಭಾ.ಶಿ.ಶಾ.೧೯೯೨,ಪು.ಸಂ.೩೩–೩೪

೪೫. ಶಿವಾನಂದ.ವಿ.ಕ.ಜಿ.ಶಿ.ಶಾ.೧೯೭೮,ಪು.ಸಂ.೩೮

೪೬. ಚೆನ್ನಬಸವಯ್ಯ ಹಿರೇಮಠ ಕುರುಗೋಡು ಸಿಂಧರು ಪು.ಸಂ.೨೪೯.



# ಸುರಪುರ ಸಂಸ್ಥಾನದ ಸೈನ್ಯ ಮತ್ತು ನ್ಯಾಯಾಡಳಿತ.

**–ಡಾ. ಸಿದ್ದಣ್ಣ ಸುಭಾಸಚಂದ್ರ,**
ಪ್ರತೀಕ್ಷಾ ನಿಲಯ #೩–೫೦
ಕುಂಬಾರ ಓಣಿ, ಶಹಾಪುರ, ಯಾದಗಿರಿ.

ಸುರಪುರ ಎಂದಾಕ್ಷಣ ನೆನಪಾಗುವುದೇ ದೆಹಲಿ ಸೈನ್ಯವನ್ನು ನಡುಗಿಸಿದ್ದು ಇಲ್ಲಿನ ಧೈರ್ಯಶಾಲಿ ಸೈನಿಕರ ಕೇಚ್ಚೆದೆಯನ್ನು. ಬ್ರಿಟಿಷರ ವಿರುದ್ಧ ಸಿಡಿದೆದ್ದು ಹೋರಾಡಿದ ನಾಲ್ವಡಿ ವೆಂಕಟಪ್ಪನಾಯಕ, ೧೮೫೭ರ ಸಂಗ್ರಾಮದಲ್ಲಿ ಮುಂದಾಳತ್ವವನ್ನು ವಹಿಸಿದ್ದು ಕಂಡುಬರುತ್ತದೆ. ಇದು ಕಂಡುಬರುವುದು ಕೃಷ್ಣ–ಭೀಮಾ ನದಿಗಳ ಮಧ್ಯಭಾಗದ ಭೂ ಪ್ರದೇಶವನ್ನು ನಾಗರಾಜ ಕವಿಯ 'ಪುಣ್ಯಾಸ್ರವ' ಕಾವ್ಯದಲ್ಲಿ ಸಗರನಾಡಿನ ವರ್ಣನೆ ಇದ್ದು, ಅದು ಸುರಪುರ ಸಂಸ್ಥಾನದ ಅಧಿಕಾರ ವ್ಯಾಪ್ತಿಯಲ್ಲಿಯ ಒಂದು ಭಾಗವಾಗಿತ್ತೆಂದು, ಗೋಸಲವಂಶದ ಗಡ್ಡಿಪಿಡ್ಡನಾಯಕ ಸಂಸ್ಥಾನದ ಸ್ಥಾಪನೆಯ ಮೂಲಪುರುಷನೆಂದು ತಿಳಿದುಬರುತ್ತದೆ.

ಸುರಪುರದ ಅರಸರು ಅಸಮಾನ್ಯ ಶೂರರು, ಮಹಾದಾನಿಗಳು, ಪಂಡಿತಗುಣಜನ ಪೋಷಕರು, ಕರುಣಾಳುಗಳು ಹಾಗೂ ನ್ಯಾಯಪ್ರೀಯರು ಆಗಿದ್ದರು. ಸುರಪುರದ ಇತಿಹಾಸ ಹಾಗೂ ಶೌರ್ಯಗಳ ವೃತ್ತಾಂತವು ಕೇವಲ ಸುರಪುರದ ಪಂಡಿತರ ಸಂಗ್ರಹ ಅಲ್ಲ ; ಬದಲಾಗಿ ಅದು ಅವರ ಶತ್ರುಗಳೇ ಬರೆದ ಮೆಚ್ಚುಗೆಯ ನುಡಿಗಳು ಕಂಡುಬರುತ್ತದೆ.

ಜೊತೆಗೆ ಬಿಜಾಪುರದ ಆದಿಲ್ ಶಾಹಿಗಳಿಂದ ಹಿಡಿದು ಹೈದರಾಬಾದ ನಿಜಾಮರು, ಬ್ರಿಟಿಷರ ಆಳ್ವಿಕೆಯ ಸಂದರ್ಭದಲ್ಲಿ ಸ್ವತಂತ್ರ್ಯ ಸಂಸ್ಥಾನವನ್ನು ಬೆಳೆಸಿ ಪೋಷಿಸಿರುವುದು ಇವರ ಸಾಹಸಕ್ಕೆ ಹಿಡಿದ ಕನ್ನಡಿಯಂತಿದೆ. ಅಂತೆಹೆ ಮೊಘಲ್ ದೊರೆ ಔರಂಗಜೇಬ ಮತ್ತು ಪ್ರೆಂಚರನ್ನು ಸೋಲಿಸಿದ ಕೀರ್ತಿ ಈ ಸೈನ್ಯಕ್ಕೆ ಸಲ್ಲುತ್ತದೆ. ಇವರ ಧೈರ್ಯ, ಸಾಹಸ ಶೌರ್ಯಗಳಿಂದಾಗಿ ಈ ಸೈನ್ಯವು ಭಾರತದ ಚರಿತ್ರೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

**ಸುರಪುರ ಸಂಸ್ಥಾನದ ನ್ಯಾಯಾಡಳಿತ.**

ಸುರಪುರದ ನ್ಯಾಯಾಂಗ ವ್ಯವಸ್ಥೆಯು, ಸುರಪುರ ಭದ್ರಕೋಟೆಯಷ್ಟೇ ಭದ್ರವಾಗಿದ್ದು, ನ್ಯಾಯಾಂಗ ವ್ಯವಸ್ಥೆಯಲ್ಲಿ ರಾಜನೆ ಪ್ರಧಾನವಾಗಿದ್ದುಕೊಂಡು ಅಧಿಕಾರವನ್ನು ವಿವಿದ ಭಾಗಗಳಲ್ಲಿ ಹಂಚಿಕೆ ಮಾಡಿದ್ದರು.

ಗುರಿಕಾರನ ಅಧೀನದಲ್ಲಿ ಕಟ್ಟಿಮನಿಗಳು, ಪಟ್ಟಣಶೆಟ್ಟಿಗಳು, ಗೌಡ ಮುಂತಾದವರು ಇರುತ್ತಿದ್ದರು. ಕಟ್ಟಿಮನಿಗಳು ಆಯಾ ಜಾತಿಗಳಲ್ಲಿ ಮುಂಚುಣಿಯಲ್ಲಿರುವ ವ್ಯಕ್ತಿಯೆ ನೇಮಕಗೊಳ್ಳುತ್ತಿದ್ದರು. ಇವರು ತಮ್ಮ ಜಾತಿ–ಜನಾಂಗದ(೧೨ ಕುಲ ಕಸುಬಿನವರಿಗೆ ಮಾತ್ರ) ನ್ಯಾಯ ಮತ್ತು ವ್ಯಾಜ್ಯಗಳನ್ನು ಸಾರ್ವಜನಿಕರ ಸಮ್ಮುಖದಲ್ಲಿ ಸಾರ್ವಜನಿಕವಾಗಿ ವಿಚಾರಣೆ ನಡೆಸುತ್ತಿದ್ದರು ಮತ್ತು ಅವುಗಳಿಗೆ ಪರಿಹಾರ ಹಾಗೂ ದಂಡಗಳನ್ನು ವಿಧಿಸುವ ಅಧಿಕಾರವನ್ನು ಇವರು ಹೊಂದಿದ್ದರು. ಹಾಗೆಯೇ ಪಟ್ಟಣಶೆಟ್ಟಿಯವರು ಲಿಂಗಾಯತರ ವ್ಯಾಜ್ಯಗಳನ್ನು ಪರಿಹರಿಸುತ್ತಿದ್ದರು ಹಾಗೂ ಗೌಡ(ಪಂಚಾಳ)ರು ಪಂಚಾಳ, ವಿಶ್ವಕರ್ಮ ಇತರ ಜನಾಂಗಗಳ ನ್ಯಾಯ ಪಂಚಾಯಿತಿಯನ್ನು ನೋಡಿಕೊಳ್ಳುತ್ತಿದ್ದರು.

ಉಪ್ಪಾರ, ಗೊಲ್ಲ ಜನಾಂಗದ ನ್ಯಾಯ ನಿರ್ಣಯಗಳನ್ನು ಮತ್ತು ವೇಶ್ಯಾಂಗನೆಯರಿಗೆ(ಸ್ತ್ರೀ ಪ್ರಧಾನವಾಗಿರುವುದರಿಂದ) ಸೇರಿದ ವ್ಯಾಜ್ಯಗಳನ್ನು ಸಂಸ್ಥಾನದ ರಾಜರು ತಮ್ಮ ಗುರುಗಳ ಮೂಲಕ ಸೂಕ್ಷ್ಮವಾಗಿ ಪರಿಶೀಲಿಸಿ ಸ್ತ್ರೀ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಯಾವುದೇ ಶೋಷಣೆಗೆ ಒಳಪಡದ

ರೀತಿಯಲ್ಲಿ ನ್ಯಾಯದಾನಗಳನ್ನು ನೀಡುತ್ತಿದ್ದರು, ಇದರಿಂದ ಬರುವ ಆದಾಯವು ಗುರುವಿಗೆ ಸಂದಾಯವಾಗುತ್ತಿತ್ತು. ಬ್ರಹ್ಮಸಭೆಯ ಅಧ್ಯಕ್ಷತೆಯನ್ನು ರಾಜನೆ ವಹಿಸಿಕೊಳ್ಳುತ್ತಿದ್ದು ಇದರಲ್ಲಿ ಸ್ಥಳೀಯ ಪಂಡಿತರು ಸದಸ್ಯರಾಗಿರುತ್ತಿದ್ದರು. ಬ್ರಾಹ್ಮಣರು ತಮ್ಮ ಸಮಸ್ಯೆಗಳಿಗೆ ಬ್ರಹ್ಮಸಭೆಯ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತಿದ್ದರು ಎಂದು ತಿಳಿದುಬರುತ್ತದೆ.

**ವ್ಯಾಜ್ಯಗಳ ವರ್ಗೀಕರಣ.**

೦೧. ಕುಲದ ಜಗಳಗಳು

೦೨. ಸಣ್ಣ ಪುಟ್ಟ ಊರ ತಂಟೆಗಳು

೦೩. ವತನಿ ಜಗಳಗಳು (ನಾಪಿತ, ಬಡಿಗ, ಅಕ್ಕಸಾಲಿಗ, ಕಂಬಾರ, ಕುಂಬಾರ, ಅಗಸ, ಹೊಲೆಯ, ಮಾದಿಗ,

ಗೌಡ, ಕುಲಕರ್ಣಿ, ಜೋಯಿಸ, ಮಠಪತಿಯವರಿಗೆ ಸಂಬಂಧಿಸಿದ ಜಗಳಗಳನ್ನು ವತನಿ ಎಂದು ಕರೆಯುತ್ತಾರೆ)

೦೪. ಕೊಲೆ ಇತ್ಯಾದಿ ಘನ ಅಪರಾಧಗಳು.

ಪ್ರತಿಯೊಂದು ವ್ಯಾಜ್ಯವನ್ನು ಮೌಖಿಕವಾಗಿ ವಿಚಾರಣೆ ನಡೆಸುತ್ತಿದ್ದರು ಆದರೆ ನ್ಯಾಯ ನಿರ್ಣಯಗಳನ್ನು ಲಿಖಿತ ರೂಪದಲ್ಲಿ ದಾಖಲಿಸುತ್ತಿದ್ದರು. ಇದನ್ನು ಸುರಪುರ ಸಂಸ್ಥಾನದಲ್ಲಿ 'ತಾಕೀದಿ' ಎಂದು ಕರೆಯುತ್ತಿದ್ದರು. ತಾಕೀದಿಯನ್ನು ಯಾರು ಉಲ್ಲಂಘಿಸುವಂತಿರಲಿಲ್ಲ ಹಾಗೇನಾದರೂ ಉಲ್ಲಂಘಿಸಿದರೆ ಬಹಿಷ್ಕಾರದಂತಹ ಶಿಕ್ಷೆಯನ್ನು ನೀಡುತ್ತಿದ್ದರು. ಪ್ರತಿ ಜಾತಿಯವರು ವಾರ್ಷಿಕ ೪ ಆಣೆಯಿಂದ ೧ ರೂಪಾಯಿವರೆಗೆ ಶುಲ್ಕವನ್ನಾಗಿ ಭರಿಸಬೇಕಾಗಿತ್ತು, ಈ ದಂಢದಿಂದ ಸಂಗ್ರಹವಾದ ಹಣದಲ್ಲಿ ಗುರಿಕಾರನಿಗೆ ಸ್ವಲ್ಪ ಭಾಗವನ್ನು ಹಂಚಿ ಉಳಿದ ಮೊತ್ತವು ರಾಜ ಬೊಕ್ಕಸಕ್ಕೆ ಸೇರುತಿತ್ತು.

ಇಲ್ಲಿನ ಆಡಳಿತದ ಇನ್ನೊಂದು ವಿಶೇಷವೆಂದರೆ ಪ್ರತಿಯೊಂದು ಕುಟುಂಬವು ಭೂ ಸಹಿತ ಕುಟುಂಬವಾಗಿದ್ದವೆ ವಿನಃ ಭೂ ರಹಿತ ಕುಟುಂಬವಿರಲಿಲ್ಲ. ಏಕೆಂದರೆ ಪ್ರತಿ ಕುಟುಂಬದಲ್ಲಿ ಜನಿಸಿದ ಪ್ರತಿ ಗಂಡಿಗೆ ಒಂದು ಹಾಲು ಕೊಡುವ ಆಕಳು ಮತ್ತು ಭೂಮಿಯನ್ನು ನೀಡುವ ಪದ್ಧತಿ ಸಂಸ್ಥಾನದಲ್ಲಿತ್ತು. ಅದು ಪ್ರತಿಯೊಬ್ಬರು ವಯಸ್ಕರಾದ ಮೇಲೆ ಜನ್ಮ ಭೂಮಿಯ ಋಣವನ್ನು ತೀರಿಸಲು ಯುದ್ಧಕ್ಕೆ ಹೋಗಬೇಕೆನ್ನುವ ಪದ್ದತಿಯನ್ನು ರಾಜರು ಇಟ್ಟುಕೊಂಡಿದ್ದರು. ಇಲ್ಲಿ ರಾಜಾಶ್ರಯ ವ್ಯವಸ್ಥೆಯಲ್ಲಿ ಮೇಲೂ-ಕೀಳು ಎಂಬ ಭಾವನೆಯನ್ನು ರಾಜರು ಹೊಂದಿರಲಿಲ್ಲ, ಆದ್ದರಿಂದಲೇ ತಮ್ಮ ಅಂಗರಕ್ಷರನ್ನಾಗಿ ಕೊಟಗಾರ ಎಂಬ ಹೊಲೆಯ, ಗಾರ್ದಿ ಎಂಬ ಮಾದಿಗರನ್ನು ನೇಮಿಸಿಕೊಂಡಿದ್ದರು.

ಸುರಪುರ ಸಂಸ್ಥಾನದಲ್ಲಿ ಪ್ರತಿಯೊಬ್ಬರು ಬೇಡ, ಹಿಂದುಳಿದ ಹಾಗೂ ದಲಿತ ಜನಾಂಗದವರು ಶಸ್ತ್ರಾಸ್ತ್ರಗಳನ್ನು ಹೊಂದಿರುತ್ತಿದ್ದರು. ಆದರೆ ಎಂತಹ ಸಂದರ್ಭದಲ್ಲಿಯೇ ಆಗಲಿ ಆವೇಶಕ್ಕೆ ಒಳಗಾಗಿ ಒಂದೇ ಒಂದು ಗುಂಡು ಹಾರುತ್ತಿರಲಿಲ್ಲವೆಂದು ಟೇಲರ್ ತಮ್ಮ 'ದಿ ಸ್ಟೋರಿ ಆಫ್ ಮೈ ಲೈಫ್'ನಲ್ಲಿ ವಿವರಿಸಿದ್ದಾರೆ.

**ಸುರಪುರ ಸಂಸ್ಥಾನದ ನ್ಯಾಯದ ನುಡಿಗಟ್ಟುಗಳು.**

**೦೧. ಕಟ್ಟೆಕಲ್ಲು ಕಟ್ಟೆಗೆ:** ಮುರಿದುಹೋದ ಕುಟುಂಬ ವ್ಯವಸ್ಥೆಯನ್ನು ನ್ಯಾಯಮಾಡಿ ಕೂಡಿಸಿದಾಗ ಹೇಳುವ ಮಾತು.

**೦೨. ಶಾಪುರ ನ್ಯಾಯ:** ಸಗರನಾಡಿನ ಮಧ್ಯಭಾಗದಲ್ಲಿರುವ ಊರು ಶಹಾಪುರ, ಯಾರೂ ಸೋಲದೆ ಯಾರೂ ಗೆಲ್ಲದೆ ರಾಜಿಯಾಗುವ ನ್ಯಾಯ ಶಾಪುರ ನ್ಯಾಯ ಎಂದು ಪ್ರಸಿದ್ಧಿ.

**೦೩. ಸೂಗೂರಿಗೂ ನೆಂಟ ಬಾಗೂರಿಗೂ ನೆಂಟ:** ಯಾರಿಗೂ ಕೆಟ್ಟಾಗದೆ ಎರಡು ದಡದ ಮೇಲೆ ಕೈ ಇಟ್ಟವ.

**೦೪. ತೊಡೆ ಹೇಸಿಗೆ ಆಗಿಲ್ಲ:** ಒಂದು ಹೆಣ್ಣು ಇನ್ನೊಬ್ಬ ಗಂಡಿನ ಜೊತೆ ಹೋದಾಗ ಅವರಿಬ್ಬರಲ್ಲಿ ಲೈಂಗಿಕ ಸಂಬಂಧ ಆಗಿಲ್ಲ ಎನ್ನುವ ಮಾತು.

**೦೫. ಆಳು ನೋಡಿ ಜೀತ ಬರಿ:** ದಂಡ ಮುಂತಾದ ಪ್ರಸಂಗಗಳಲ್ಲಿ ಅವನ ಆರ್ಥಿಕ ಸ್ಥಿತಿ ನೋಡಿ ಭಾರವಾಗದ ಹಾಗೇ ಮಾಡುವುದು.

ಹೀಗೆ ಸುರಪುರ ಸಂಸ್ಥಾನದ ನ್ಯಾಯಾಂಗ ವ್ಯವಸ್ಥೆಯು ಜನತಾ ನ್ಯಾಯಾಂಗ ವ್ಯವಸ್ಥೆಯಾಗಿತ್ತು ಎಂದು ತಿಳಿದುಬರುತ್ತದೆ.

**ಸುರಪುರ ಸಂಸ್ಥಾನದ ಸೈನ್ಯ.**

ಸುರಪುರ ಸಂಸ್ಥಾನದ ಸೈನ್ಯದಲ್ಲಿ ಬೇಡರು, ಮರಾಠರು, ದಖನಿಗಳು, ಮಾದಿಗರು, ಕೊಟಗಾರರಿಂದ(ಹೊಲೆಯ) ಕೂಡಿದ ಸುಸರ್ಜಿತವಾದ ಸೈನ್ಯವಿತ್ತು. ಪ್ರಾರಂಭದ ದಿನಗಳಲ್ಲಿ ಈ ಕೊಟಗಾರರನ್ನು ಕೋಟೆಯ ಕಾವಲುಗಾರರನ್ನಾಗಿ ನೇಮಿಸಿಕೊಳ್ಳುತ್ತಿದ್ದರು. ಅಂತೆಹೆ ಪ್ರತಿ ಪ್ರವೇಶ ದ್ವಾರಕ್ಕೆ ಹೊಂದಿಕೊಂಡಂತೆ ಇವರ ಮನೆಗಳಿದ್ದು, ಇವರ ಸಾಹಸ ಪ್ರವೃತ್ತಿ ಮತ್ತು ನಂಬಿಕೆಯನ್ನು ಕಂಡ ಅರಸರು ಇವರನ್ನು ತಮ್ಮ ಅಂಗರಕ್ಷಣಾ ಪಡೆಯ ರಕ್ಷಕರನ್ನಾಗಿ ನೇಮಿಸಿಕೊಂಡರು, ಇವರು ಬೃಹತ್ ಗಾತ್ರದ ದೇಹಸಿರಿಯನ್ನು ಹೊಂದುವುದರ ಜೊತೆಗೆ ಶಸ್ತ್ರಾಸ್ತ್ರರಹಿತವಾಗಿ ಯುದ್ಧಮಾಡುವುದನ್ನು ಕರಗತ ಮಾಡಿಕೊಂಡಿದ್ದರು. ಅರಸರು ಇವರಿಗೆ ಕೋಣದ ಚಪ್ಪೆಯನ್ನು ಊಟಕ್ಕಾಗಿ ನೀಡುತ್ತಿದ್ದರು.

೧೯೦೦ಜನ ಕೊಟಗಾರರು ಸೈನ್ಯದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದರು, ಇವರ ಮೇಲ್ವಿಚಾರಣೆಯನ್ನು ಸ್ವತಃ ಅರಸರೆ ನೋಡಿಕೊಳ್ಳುತ್ತಿದ್ದರು. ಕೊಟಗಾರ ಸೈನಿಕರು ತುಂಬಾ ಕ್ರೂರಿಗಳಾಗಿದ್ದರು, ಇವರು ಬೃಹದಾಕಾರದ ದೇಹವನ್ನು ಆನೆ–ಕುದುರೆಗಳಿಂದ ತುಳಿಸಿದರು ಯಾವುದೇ ತೊಂದರೆಯಾಗುತ್ತಿರಲ್ಲಿಲ್ಲ. ಇಂತಹ ಕೊಟಗಾರರು ಯುದ್ಧದಲ್ಲಿ ಭಾಗವಹಿಸಿದರೆ ವೈರಿಗಳು ಸ್ತಬ್ಧರಾಗುತ್ತಿದ್ದರು, ನಿರಾಯುದರಾಗಿರುತ್ತಿದ್ದ ಇವರು ವೈರಿಪಡೆಯ ಸೈನಿಕರನ್ನು ಬರಿಗೈಯಲ್ಲಿ ನಾಶ ಮಾಡುವ ಸಾಹಸಿಗರಾಗಿದ್ದರು.

ಪಿತಾಂಬರ ಬಹರಿ ಪಿಡ್ಡನಾಯಕ ರಾಜ್ಯದಾನಿಯನ್ನು ವಾಗಣಗೇರಿಯಿಂದ ಸುರಪುರಕ್ಕೆ ವರ್ಗಾಯಿಸಿದಾಗ ೧೪ ಕೇರಿಗಳನ್ನಾಗಿ ವಿಭಾಗಿಸಿದನ್ನು. ಇವುಗಳ ಕಾವಲಿಗಾಗಿ ಪ್ರತಿಯೊಂದು ಕೇರಿಗಳಿಗೂ ಕೊಟಗಾರ ಸೈನಿಕರನ್ನು ನೇಮಿಸಿದನು, ಇವರನ್ನು ದಾಟಿ ಕೋಟೆಯನ್ನು ಪ್ರವೇಶಿಸುವುದು ಸಾಹಸದ ವಿಷಯವಾಗಿತ್ತು.

ಮೊಂಡಗೈ ವೆಂಕಟಪ್ಪ ನಾಯಕನ ಅಧಿಕಾರವಧಿಯ ಸಂದರ್ಭದಲ್ಲಿ ಪಾಂಡಿಚೇರಿಯು ಪ್ರೆಂಚರ ವಶದಲ್ಲಿತ್ತು, ಇದನ್ನು ವಶಪಡಿಸಿಕೊಳ್ಳಲು ಹೈದರಾಬಾದ ನಿಜಾಮರು ನಾಲ್ಕು ಬಾರಿ ಮುತ್ತಿಗೆ ಹಾಕಿದರು ಸಹ ಪಾಂಡಿಚರಿಯನ್ನು ವಶಪಡಿಸಿಕೊಳ್ಳಲು ಸಾದ್ಯವಾಗದಿದ್ದಾಗ, ನಿಜಾಮನು ನಾಯಕನ ಸಹಾಯವನ್ನು ಅಪೇಕ್ಷಿಸುತ್ತಾನೆ. ನಾಯಕನು ನಿಜಾಮನ ಆಸೆಯಂತೆ ಪಾಂಡಿಚರಿಗೆ ಸೈನ್ಯವನ್ನು ರವಾನೆ ಮಾಡಲು ಆದೇಶಿಸುತ್ತಾನೆ. ನಾಯಕನ ಆಜ್ಞೆಯಂತೆ ೧೨,೦೦೦ ವೀರ ಸೈನಿಕರು ಪಾಂಡಿಚರಿಯನ್ನು ತಲುಪಿ, ಪಾಂಡಿಚರಿ ಕೋಟೆಯ ಹಿಂಬದಿಯ ಕಂದಕದ ಮೂಲಕ ಕೋಟೆಯನ್ನು ಪ್ರವೇಶಿಸಲು ನಾಯಕ ಆದೇಶಿಸುತ್ತಾನೆ. ಕೊಟಗಾರ ಸೈನಿಕರು ನಾಯಕನ ಆಜ್ಞೆಯಂತೆ ಕಂದಕದಲ್ಲಿ ಹಾರಿ ಕಣಕಿಯ(ಜೋಳದ ದಂಟು) ಹೊರೆ ಮತ್ತು ಹಗ್ಗದ ಸಹಾಯದಿಂದ ಕೋಟೆಯನ್ನು ಮುತ್ತಿಗೆ ಹಾಕುತ್ತಾರೆ. ಇನ್ನು ಕೇಲವರು ಕಂದಕದಲ್ಲಿಯ ನೀರಿನಲ್ಲಿ ಈಜಿ ಕೋಟೆಯನ್ನು ಪ್ರವೇಶಿಸುತ್ತಾರೆ. ಕೋಟೆಯನ್ನು ಪ್ರವೇಶಿಸಿದ ಸೈನಿಕರು ಮದ್ದು–ಗುಂಡುಗಳಿಗೆ ಬೆಂಕಿಯನ್ನು ಹಚ್ಚುತ್ತಾರೆ. ಇದರಲ್ಲಿ ಪ್ರೆಂಚ್ ಸೈನಿಕರ ಜೊತೆ ಸುರಪುರದ ಸೈನಿಕರು ಆಹುತಿಯಾಗುತ್ತಾರೆ. ಇದನ್ನು ಲೆಕ್ಕಿಸದ ಪ್ರೆಂಚರು ದಾಳಿಯನ್ನು ಮುಂದುವರಿಸುತ್ತಾರೆ. ಈ ವೀರ ಕೊಟಗಾರರ ಮುಂದೆ ಮದ್ದು–ಗುಂಡುಗಳು ಮುಗಿದು ಪ್ರೆಂಚರು ಶರಣಾಗತರಾಗುತ್ತಾರೆ. ಇದನ್ನು ತಿಳಿದ

ನಿಜಾಮನು ನಾಯಕನಿಗೆ ಶುಭಾಶಯವನ್ನು ತಿಳಿಸಲು ಬರುತ್ತಾನೆ. ಆಗ ನಿಜಾಮನು ನಾಯಕನಿಗೆ ನಮ್ಮ ಹತ್ತಿರ ಲಕ್ಷಗಟ್ಟಲೇ ಸೈನಿಕರಿದ್ದರು ಯುದ್ಧದಲ್ಲಿ ಜಯಗಳಿಸಲು ಸಾಧ್ಯವಾಗಿರುವುದಿಲ್ಲ. ನೀವು ಕೇವಲ ೧೨,೦೦೦ ವೀರ ಸೈನಿಕರ ಸಹಾಯದಿಂದ ಅದು ಒಂದೇ ಬಾರಿಗೆ ಯುದ್ಧದಲ್ಲಿ ಜಯಗಳಿಸಿದ್ದಿರಿ ಅದು ಹೇಗೆ ಸಾದ್ಯ ಎಂದು ಪ್ರಶ್ನಿಸುತ್ತಾನೆ. ನಿಮ್ಮ ಸೈನಿಕರು ವಿಶ್ವಾಸ, ನಿಷ್ಠೆ ಆಜ್ಞಾಪಾಲಕರಲ್ಲ ಆದುದ್ದರಿಂದ ನೀವು ಗೆಲ್ಲಲಾಗಲಿಲ್ಲ, ನಮ್ಮ ಸೈನಿಕರು ಸ್ವಾಮಿ ನಿಷ್ಠೆ, ವಿಶ್ವಾಸ, ಆಜ್ಞಾಪಾಲಕರಾಗಿರುವುದರಿಂದ ನಾವು ಯುದ್ಧದಲ್ಲಿ ಗೆಲ್ಲಲ್ಲು ಸಾಧ್ಯವಾಯಿತು ನನ್ನ ಒಬ್ಬ ಕೊಟಗಾರ ಸೈನಿಕನ ಮುಂದೆ ನಿಮ್ಮ ಲಕ್ಷ ಸೈನ್ಯ ವ್ಯರ್ಥ ಎಂದು ವರ್ಣಿಸುತ್ತಾನೆ ಇದರಿಂದಾಗಿ ಇವರುಗಳನ್ನು 'ಆತ್ಮ ಹತ್ಯೆಯ ದಳ'ವೆಂದು ಕರೆಯುತ್ತಾನೆ.

ಇಂತಹ ಶೂರತ್ವದ ಸಂಕೇತವಾಗಿದ್ದ ಈ ಕೊಟಗಾರರ ಜನಾಂಗದಲ್ಲಿ ಗಂಡು ಮಗು ಜನಿಸಿದರೆ ಆ ಮಗುವಿನ ಲಾಲನೆ-ಪಾಲನೆ-ಪೋಷಣೆಗಾಗಿ ಹಾಲು ಮತ್ತು ಹಣವನ್ನು ಖಜಾನೆಯಿಂದ ನೀಡಲಾಗುತ್ತಿತ್ತು. ಅಲ್ಲದೆ ಆ ಮಗು ತರುಣಾವಸ್ಥೆಗೆ ಬಂದಾಗ ಸಕಲ ವಿದ್ಯೆಗಳನ್ನು ಅರಸರು ಅವನಿಗೆ ನೀಡಿಸುತ್ತಿದ್ದರು. ಇದರ ಜೊತೆಗೆ ಪ್ರೌಡನಾದ ಯುವಕನಿಗೆ ಇವರ ಸಮ್ಮುಖದಲ್ಲೆ ವಿವಾಹವನ್ನು ಸಹ ನಡೆಸಿಕೊಡುತ್ತಿದ್ದರು. ವಿವಾಹ ಸಂದರ್ಭದಲ್ಲಿ ಶಸ್ತ್ರಾಸ್ತ್ರಗಳ ಜೊತೆಗೆ ಉಡುಗೂರೆಗಳನ್ನು ನೀಡುತಿದ್ದರು. ಯುದ್ಧ ಸಮಯದಲ್ಲಿ ಅರಸರ ಆಜ್ಞೆಯಾದರೆ ತಾಯ್ನಾಡಿನ ರಕ್ಷಣೆಗಾಗಿ ಎಂತಹ ಸಂದರ್ಭದಲಿದ್ದರು ಧಾವಿಸುವ ಪ್ರವೃತ್ತಿ ಈ ಕೊಟಗಾರ ಸೈನಿಕರಲ್ಲಿತ್ತು.

ಸಂಸ್ಥಾನಕ್ಕೆ ಬೆನ್ನೆಲುಬಾಗಿ ನಿಂತು ಹೋರಾಡುವ ಕೊಟಗಾರರ ಯುದ್ಧಕಲೆಯನ್ನು ಅವರ ಸಾಹಸ, ವಿಶ್ವಾಸ, ನಂಬಿಕೆ, ಪ್ರಾಮಾಣಿಕತೆ ಮತ್ತು ಆಜ್ಞಾಪಾಲನೆಯನ್ನು ಮಾಡುತ್ತಿದ್ದರು ಎಂದು ತಿಳಿದುಬರುತ್ತದೆ.

**ಆಕರ ಗ್ರಂಥಗಳು.**


೦೧. ಅಮರೇಶ್ ಯತಗಲ್; ಇತಿಹಾಸ ಮಂಥನ, ಅದಿತಿ ಪ್ರಕಾಶನ, ಲಿಂಗಸೂಗೂರು-೨೦೦೭.

೦೨. ಕಪಟರಾಳ ಕೃಷ್ಣರಾಯರು; ಸುರಪುರ ಸಂಸ್ಥಾನದ ಇತಿಹಾಸ, ಪುಸ್ತಕಶಕ್ತಿ ಪ್ರಕಾಶನ ಬೆಂಗಳೂರು-೨೦೦೫.

೦೩. ಕೊಟ್ರೇಶ್.ಎಂ; ಕಲ್ಯಾಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೧೦.

೦೪. ತಾರಿಹಳ್ಳಿ ಹನುಮಂತಪ್ಪ(ಸಂ); ನಾಯಕರ ಮಹಾಸಂಸ್ಥಾನ ಸುರಪುರ, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೧೨-

೦೫. ತಿರುಮಲ ತಾತಾಚಾರ್ಯ ಶರ್ಮ; ಕರ್ಣಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಮೈಸೂರು ಸಂಸ್ಥಾನದ ಸರಕಾರ, ಬೆಂಗಳೂರು-೧೯೫೭.

೦೬. ನಾಯಕ್ ಪಲಿಮಾರ್ಕರ್; ಸುರಪುರ ವೆಂಕಟಪ್ಪನಾಯಕ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು-೨೦೧೧.

೦೭. ಭಾಸ್ಕರ್‌ರಾವ್ ಮುಡಬೂಳ; ಮರೆತುಹೋದ ಸುರಪುರ ಇತಿಹಾಸ, ಕೃಷಿ ನಿವಾಸ, ಶಹಾಪುರ-೨೦೧೫.

೦೮. ಮಲ್ಲಿಕಾರ್ಜುನ ಸಿ.ಬಾಗೋಡಿ; ಸುರಪುರದ ಚಿತ್ರಕಲೆ, ಸರಚಂದ್ರ ಪ್ರಕಾಶನ, ಚಿತ್ತಾಪುರ-೨೦೧೦.

೦೯. ಲಕ್ಷ್ಮಣ ತೆಲಗಾವಿ(ಸಂ); ಕರ್ನಾಟಕ ಪಾಳೆಗಾರರ ನ್ಯಾಯಾಡಳಿತ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ-೨೦೦೮.

೧೦. ಸೂರ್ಯನಾಥ ಕಾಮತ್;ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು,ಗೀತಾ ಬುಕ್‌ಹೌಸ್,ಮೈಸೂರು-೧೯೭೪.




# ಬಹುಮನಿ ಸುಲ್ತಾನರ ಕೊಡುಗೆಗಳು – ಒಂದು ಅವಲೋಕನ.

**–ಶ್ರೀ ಅಲ್ಲಾಭಕ್ಷ್ ಎಲ್. ಪಟೇಲ್,**
ಸಂಶೋಧನಾರ್ಥಿ, ಇತಿಹಾಸ ಅಧ್ಯಯನ ವಿಭಾಗ,
ಗುಲ್ಬರ್ಗಾ ವಿಶ್ವವಿದ್ಯಾಲಯ, ಕಲಬುರ್ಗಿ.

ಬಹಮನಿ ರಾಜ್ಯ ೧೩೪೭–೧೫೩೮ರ ಅವಧಿಯ ಉತ್ತರ ಕರ್ನಾಟಕದಲ್ಲಿ ಉತ್ತರ ಕರ್ನಾಟಕ ಮತ್ತು ದಖನ್ನಿನ ಬಹುಭಾಗದ ಮೇಲೆ ಒಡೆತನ ನಡೆಸಿದ ಮತ್ತು ಕರ್ನಾಟಕದಲ್ಲಿ ನೆಲೆಹೂಡಿದ ಪ್ರಥಮ ಇಸ್ಲಾಮ್ ರಾಜ್ಯ. ಸುಮಾರು ಎರಡು ಶತಮಾನಗಳ ಕಾಲ ದಕ್ಷಿಣ ಭಾರತದ ಇತಿಹಾಸದಲ್ಲಿ ಈ ರಾಜ್ಯ ಪ್ರಮುಖ ಪಾತ್ರ ವಹಿಸಿತು. ದೆಹಲಿಯ ಸುಲ್ತಾನ ಮಹಮ್ಮದ್–ಬಿನ್–ತುಗಲಕನ ಆಳ್ವಿಕೆಯ ಕಾಲದಲ್ಲಿ ಅವನ ದುರಾಡಳಿತದ ವಿರುದ್ಧ ದಖನ್ನಿನ ಸರದಾರರು ದಂಗೆಯೆದ್ದು ದೌಲತಾಬಾದ್ ಕೋಟೆಯನ್ನು ಸ್ವಾಧೀನಪಡಿಸಿಕೊಂಡು ತಮ್ಮಲ್ಲೇ ಒಬ್ಬನಾದ ಆಫ್ಘನ್ ಇಸ್ಮಾಯಿಲ್ ಮುಖ್ ಎಂಬುವನನ್ನು ನಾಸಿರುದ್ದೀನ್ ಷಾ ಎಂಬ ಬಿರುದನ್ನು ನೀಡಿ ದಖನ್ನಿನ ರಾಜನೆಂದು ಘೋಷಿಸಿದರು. ಇಸ್ಮಾಯಿಲ್ ಮುಖ್ ವೃದ್ಧ, ಸುಖಲೋಲುಪ, ಜವಾಬ್ದಾರಿ ಸ್ಥಾನಕ್ಕೆ ಅನರ್ಹನೆನಿಸಿದ. ಸ್ವಲ್ಪ ಕಾಲದಲ್ಲಿಯೇ ಈತ ತನಗಿಂತಲೂ ಸಮರ್ಥನಾದ ಹಸನ್ ಗಂಗುವಿಗೆ ಅಧಿಕಾರ ಬಿಟ್ಟುಕೊಟ್ಟ. ದಖನ್ನಿನ ಸರದಾರರು ಇವನನ್ನು ಅಬುಲ್ ಮುಜಫರ್ ಅಲ್ಲಾಉದ್ದೀನ್ ಹಸನ್ ಬಹಮನ ಷಾ ಎಂಬ ಬಿರುದಿನಿಂದ ೧೩೪೭ ಆಗಸ್ಟ್ ೩ರಂದು ರಾಜನೆಂದು ಘೋಷಿಸಿದರು.

ಹಸನ್ ಷರ್ಷಿಯನ್ ವೀರ ಇಸ್ ಫಂದಿಯಾರ್ನ ಮಗ ಬಹುಮನನ ಸಂತತಿಯವನೆಂದು ಕೆಲವರ ಅಭಿಪ್ರಾಯ. ಕೆ. ಆರ್. ಕಾನುಂಗೋ ಅವರ ಪ್ರಕಾರ ಈ ಸಂತತಿಯ ಮೂಲಪುರುಷ ಹಸನ್ ಗಂಗು ಮತಾಂತರಗೊಂಡ ರೈನ್ ಎಂಬ ಹಿಂದು ಪಂಗಡಕ್ಕೆ ಸೇರಿದವ. ಗಂಗೂ ಎಂಬುವುದು ಪಶ್ಚಿಮ ಪಂಜಾಬಿನಲ್ಲಿದ್ದ ರೈನ ಪಂಗಡದ ಉಪಶಾಖೆ ಎಂದು ಈ ವಿಷಯದ ಮೇಲೆ ಹೊಸ ಬೆಳಕನ್ನು ಚೆಲ್ಲಿದ್ದಾರೆ. ಹಸನ್ ಬಡತನದಲ್ಲಿ ಹುಟ್ಟಿ, ತನ್ನ ಸ್ವಸಾಮರ್ಥ್ಯದಿಂದ ಉಚ್ಚ ಸ್ಥಾನಕ್ಕೇರಿದ ಎಂಬುದು ನಿರ್ವಿವಾದದ ಸಂಗತಿ.

ಬಹಮನಿ ರಾಜ್ಯದ ಆಳ್ವಿಕೆಯ ಕಾಲವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಗುಲ್ಬರ್ಗವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ಕಾಲ (೧೩೪೭–೧೪೨೨) ಮತ್ತು ಬಿದರ ಅನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ್ದು (ಜೂನ್ ೧೪೨೪–೧೫೨೮). ಇದಾದ ನಂತರ ಬಹುಮನಿ ರಾಜ್ಯ ಐದು ಷಾಹಿ ರಾಜ್ಯಗಳಾಗಿ ಒಡೆದು ಹೋಯಿತು. ಈ ಎರಡೂ ಕಾಲಗಳಲ್ಲಿ ಬಹುಮನಿ ರಾಜ್ಯ ವಿಸ್ತರಣೆ ಮತ್ತು ವಿಜಯನಗರದೊಡನೆ ಸತತವಾಗಿ ಯುದ್ಧ ನಡೆಯುತ್ತಿದ್ದುದು ಮುಖ್ಯಾಂಶ. ಮೊದಲನೆಯ ದೊರೆ ಅಲ್ಲಾಉದ್ದೀನ್ ಹಸನ್ ಬಹಮನ್ ಷಾ (೧೩೪೭–೫೮) ದೂರದೃಷ್ಟಿಯುಳ್ಳ ಸಮರ್ಥ ದೊರೆ. ರಾಜಧಾನಿಯನ್ನು ದೌಲತಾಬಾದಿನಿಂದ ಗುಲ್ಬರ್ಗಕ್ಕೆ ಬದಲಾಯಿಸಿ ಅದಕ್ಕೆ ಅಹಸಾನಬಾದ್ ಎಂದು ಹೆಸರಿಟ್ಟ. ಇದು ದಖನ್ನಿನ ಕೇಂದ್ರದಲ್ಲಿದ್ದುದರಿಂದ ಈ ನಗರ ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರದ ಪ್ರದೇಶಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ಸಾಧ್ಯವಾಗಿತ್ತು. ಅಧಿಕಾರ ಸ್ಥಾಪಿಸಿದ ತತ್‌ಕ್ಷಣ ಬಹಮನ್ ಷಾ ಚಿಕ್ಕಪುಟ್ಟ ಪಾಳೆಯಗಾರರನ್ನು ತನ್ನ ಹತೋಟಿಗೆ ಒಳಪಡಿಸಿದ. ದಖನ್ನಿನಲ್ಲಿದ್ದ ತುಘಲಕ್‌ನ ಸೇನೆಯನ್ನು ಹೊಡೆದೋಡಿಸಲು ನಾಸಿಕ್ ನಗರಕ್ಕೆ ಈತ ಸೇನೆಯ ತುಕಡಿಯೊಂದನ್ನು ಕಳುಹಿಸಿದ. ಬಿಜಾಪುರವನ್ನು ಆಕ್ರಮಿಸಿಕೊಂಡು ಕೊಲ್ಲಾಪುರ, ಮತ್ತು ಕೊಂಕಣ ಬಂದರುಗಳಾದ ದಾಬೋಲ್ ಮತ್ತು ಖಾರೆ ಪಟ್ಟಣಗಳನ್ನು ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಗುಲ್ಬರ್ಗದ ಪೂರ್ವ ಮತ್ತು ದಕ್ಷಿಣ ಭಾಗಗಳಿಗೆ ದಂಡಯಾತ್ರೆ ಕೈಗೊಂಡ. ಸೂರೆ ಮಾಡಿದ ನಿಧಿಯಿಂದ ಬಲವಾದ ಸೇನೆ ಕಟ್ಟಿದ. ಈತನ ರಾಜ್ಯ ಉತ್ತರದಲ್ಲಿ ವೈನಗಂಗಾ ನದಿಯಿಂದ ದಕ್ಷಿಣದಲ್ಲಿ ಕೃಷ್ಣ ನದಿಯವರೆಗೂ ಪಶ್ಚಿಮದಲ್ಲಿ ದೌಲತಾಬಾದ್ನಿಂದ ಪೂರ್ವದಲ್ಲಿ ಬೊಂಗೀರ್ ನಡುವೆ ವ್ಯಾಪಿಸಿತ್ತು.

ಆಡಳಿತ ವ್ಯವಸ್ಥೆಗಾಗಿ ಈತ ತನ್ನ ರಾಜ್ಯವನ್ನು ಗುಲ್ಬರ್ಗ, ದೌಲತಾಬಾದ್, ಬೀರಾರ್ ಮತ್ತು ಬೀದರ್ ಎಂಬ ನಾಲ್ಕು ಪ್ರಾಂತ್ಯಗಳಾಗಿ ವಿಂಗಡಿಸಿ, ಪ್ರಾಂತ್ಯಾಧಿಕಾರಿಗಳಿಗೆ ಹೆಚ್ಚಿನ ಅಧಿಕಾರ ಕೊಟ್ಟ. ಈತನ ಸಾಹಸ ಕಾರ್ಯಗಳು ದಕ್ಷಿಣದ ಪ್ರಬಲ ರಾಜ್ಯಗಳಾದ ವಾರಂಗಲ್ ಮತ್ತು ವಿಜಯನಗರಗಳ ಗಮನ ಸೆಳೆಯುವಂತೆ ಮಾಡಿದುವು. ಸಮಕಾಲೀನ ಬರೆಹಗಾರರು, ಈತ ನಿಷ್ಪಕ್ಷಪಾತ ದೊರೆ, ಪ್ರಜಾರಕ್ಷಕ ಹಾಗೂ ಧರ್ಮಶ್ರದ್ಧೆಯುಳ್ಳವ, ಇವನ ಆಳ್ವಿಕೆಯ ಕಾಲದಲ್ಲಿ ಇವನ ಪ್ರಜೆಗಳೂ ಸೈನಿಕರೂ ಸಂಪೂರ್ಣವಾಗಿ ತೃಪ್ತ ಜೀವನ ನಡೆಸುತ್ತಿದ್ದರೆಂದು ಪ್ರಶಂಸಿಸಿದ್ದಾರೆ. ಹಸನ್ ಗಂಗು ೧೩೫೮ರಲ್ಲಿ ಮರಣ ಹೊಂದಿದ ಮೇಲೆ ಅವನ ಮಗ ಒಂದನೆಯ ಮಹಮ್ಮದ್ (೧೩೫೮–೭೫) ಸಿಂಹಾಸನಕ್ಕೆ ಬಂದ. ಈತನ ಆಳ್ವಿಕೆಯ ಉದ್ದಕ್ಕೂ ವಿಜಯನಗರದೊಡನೆ ಸತತವಾಗಿ ಯುದ್ಧ ನಡೆಯಿತು. ವಾರಂಗಲ್ ಮತ್ತು ವಿಜಯನಗರಗಳು ಒಂದುಗೂಡಿ ಬಹಮನಿ ರಾಜ್ಯದ ಮೇಲೆ ದಾಳಿ ನಡೆಸಿದುವು. ಮಹಮ್ಮದ್ ಈ ದಾಳಿಯನ್ನು ಯಶಸ್ವಿಯಾಗಿ ಎದುರಿಸಿದ. ಮತೀಯವಾದ ಅಂಶಕ್ಕಿಂತ ರಾಜಕೀಯ ಮತ್ತು ಆರ್ಥಿಕ ಅಂಶಗಳೇ ಬಹಮನಿ ವಿಜಯನಗರಗಳ ನಡುವಣ ಕಹಿ ಸಂಬಂಧಗಳಿಗೆ ಪ್ರೇರಕಶಕ್ತಿಯಾಗಿದ್ದುವು.

ಮಹಮ್ಮದ್‌ನ ಉತ್ತರಾಧಿಕಾರಿಗಳು ಅಷ್ಟು ಸಮರ್ಥರಾಗಿರಲಿಲ್ಲ. ಈತನ ಮಗ ಮುಜಾಹಿದ್ (೧೭೭೫–೭೮) ಮೂರು ವರ್ಷಗಳ ಕಾಲ ಆಳಿದ. ವಿಜಯನಗರದ ಮೇಲೆ ನಡೆಸಿದ ಯುದ್ಧದಿಂದ ಹಿಂತಿರುಗಿ ಬರುತ್ತಿದ್ದಾಗ ಇನನ ದಾಯಾದಿ ದಾವೂದ್ ಎಂಬಾತ ಇವನನ್ನು ಕೊಲೆ ಮಾಡಿದ. ಮುಂದೆ ದಾವೂದನಿಗೂ ಅದೇ ಗತಿಯಾಯಿತು. ದಾವೂದನ ತಮ್ಮ ಎರಡನೆಯ ಮಹಮ್ಮದ್ (೧೩೭೮–೯೭) ಸಿಂಹಾಸನ ಏರಿದ.  ಸುಸಂಸ್ಕೃತನಾಗಿದ್ದ ಎರಡನೆಯ ಮಹಮ್ಮದ್ನ ಆಳ್ವಿಕೆ ಶಾಂತಿಪೂರ್ಣವಾಗಿತ್ತು. ಸಾಧುಸಂತರು ಮತ್ತು ಪಂಡಿತರಿಗೆ ತನ್ನ ಆಸ್ಥಾನದಲ್ಲಿ ಆಶ್ರಯ ನೀಡಿದ. ಸ್ವತಃ ಪಂಡಿತನಾಗಿದ್ದ ಈ ಸುಲ್ತಾನನನ್ನು ಪ್ರಜೆಗಳು ಆದರದಿಂದ ಗೌರವಿಸಿದರು. ಕ್ಷಾಮ ತಲೆದೋರಿದಾಗ  ಅನಾಥಾಲಯಗಳನ್ನು ರಾಜ್ಯದ ವಿವಿಧ ಭಾಗಗಳಲ್ಲಿ ಸ್ಥಾಪಿಸಿದ. ಎರಡನೆಯ ಮಹಮದ್‌ನ ಅನಂತರ ಎರಡನೆಯ ಘಿಯಾಸುದ್ದೀನ್ ಸಿಂಹಾಸನಕ್ಕೆ ಬಂದು ಸ್ವಲ್ಪಕಾಲ ಆಳಿ, ಆಸ್ಥಾನದ ಕುತಂತ್ರಗಳಿಗೆ ಬಲಿಯಾಗಿ ಸಿಂಹಾಸನ ಕಳೆದುಕೊಂಡ.

ಅನಂತರ ಅಧಿಕಾರಕ್ಕೆ ಬಂದವ ತಾಜುದ್ದೀನ್ ಫಿರೋಜ್ (೧೩೯೭–೧೪೨೨).  ಬಹುಮನಿ ವಂಶದಲ್ಲಿ ಪ್ರಸಿದ್ಧ ಸುಲ್ತಾನ್ ಫಿರೋಜ್ ಷಾನು ಕುರಾನಿನ ಪ್ರತಿಗಳನ್ನು ತಯಾರಿಸಿ ತನ್ನ ಜೀವನಾಂಶ ಸಂಪಾದಿಸುತ್ತಿದ್ದನು ೧೩೯೭, ೧೪೦೬ ಮತ್ತು ೧೪೧೭ ರಲ್ಲಿ ಈತ ವಿಜಯನಗರದ ಮೇಲೆ ಯುದ್ಧ ನಡೆಸಿದ್ದರಿಂದ ಈತನ ಆಳ್ವಿಕೆ ಪ್ರಸಿದ್ಧಿ ಪಡೆಯಿತು.ತಮ್ಮನ ಪರವಾಗಿ ಫಿರೋಜ್ ಸಿಂಹಾಸನ ತ್ಯಾಗಮಾಡಿದ ಕೆಲವು ದಿವಸಗಳ ತರುವಾಯ ಫಿರೋಜ್ ೧೪೨೨ರಲ್ಲಿ  ಮರಣಹೊಂದಿದ.  ಫಿರೋಜ್ ಒಳ್ಳೆಯ ದೊರೆ, ಪಂಡಿತ. ಅವನು ತತ್ವಶಾಸ್ತ್ರಜ್ಞರಿಗೂ ಕವಿಗಳಿಗೂ ಇತಿಹಾಸಕಾರರಿಗೂ ಆಶ್ರಯ ನೀಡಿದ. ಖಗೋಳಶಾಸ್ತ್ರದಲ್ಲಿ ಅಪಾರ ಆಸಕ್ತಿ. ಈತ ದೌಲತಬಾದಿನಲ್ಲಿ ಒಂದು ವೀಕ್ಷಣಾಲಯವನ್ನು ಸ್ಥಾಪಿಸಿದ. ಭೀಮಾನದಿಯ ದಂಡೆಯ ಮೇಲೆ ಫಿರೋಜಾಬಾದ್ ಎಂಬ ಹೊಸನಗರವನ್ನು ನಿರ್ಮಿಸಿದ. ದಾಬಲ್ ಮತ್ತು ಚೌಲ್ ಬಂದರುಗಳನ್ನು ಅಭಿವೃದ್ಧಿಪಡಿಸಿದ. ಪರ್ಷಿಯ, ಅರೇಬಿಯ, ಆಫ್ರಿಕ ಮತ್ತು ಯೂರೋಪ್ ದೇಶಗಳ ಹಡಗುಗಳು ಈ ಬಂದರುಗಳಿಗೆ ಬರುತ್ತಿದ್ದವು.

೧೪೨೨ ಸೆಪ್ಟೆಂಬರ್ ೨೨ರಂದು ಶಿಹಾಬುದ್ದೀನ ಅಹ್ಮದ್ ಸಿಂಹಾಸನಕ್ಕೆ ಬಂದ. ಜೂನಿನಲ್ಲಿ ಅಹ್ಮದ್ ರಾಜಧಾನಿಯನ್ನು ಗುಲ್ಬರ್ಗದಿಂದ ಬೀದರಿಗೆ ಬದಲಾಯಿಸಿದ, ವಾರಂಗಲ್ಲಿನ ಕಡೆಗೆ ರಾಜ್ಯ ವಿಸ್ತರಿಸಿದ. ಇವನ ಕಾಲದಲ್ಲಿ ಆಸ್ಥಾನದ ಸರದಾರರ ನಡುವೆ ಅಧಿಕಾರಕ್ಕಾಗಿ ಅಂತಃಕಲಹ ಉಂಟಾಗಿ ಎರಡು ಪ್ರಮುಖ ಪಕ್ಷಗಳೇರ್ಪಟ್ಟು ರಾಜ್ಯದ ಏಕತೆ ಮತ್ತು ಸಮಗ್ರತೆಗೆ ಅಪಾಯ ಒದಗಿತು. ಒಂದು ಕಡೆ ದಖನ್ನಿನ ಸರದಾರರು ಮತ್ತೊಂದು ಕಡೆ ಪರದೇಶಿ ಸರದಾರರ ನಡುವೆ ಸ್ಥಾನಮಾನಗಳಿಗಾಗಿ ಪೈಪೋಟಿ ಆರಂಭವಾಗಿ ಅನೇಕ ಕೊಲೆ ಸುಲಿಗೆಗೆ ಕಾರಣವಾದವು. ದಖನ್ನಿನ ಪಕ್ಷದಲ್ಲಿ ಸ್ಥಳೀಯ ಮುಸ್ಲಿಮ್ ಸರದಾರರು ಮತ್ತು ಆಫ್ರಿಕನ್ ಮಿತ್ರರು, ವಿದೇಶಿ ಸರದಾರರಲ್ಲಿ ತುರ್ಕರು, ಅರಬರು, ಪರ್ಷಿಯನ್ನರು

ಮತ್ತು ಮೊಗಲರು ಪ್ರಮುಖರಾಗಿದ್ದರು. ದಖನ್ನಿಗಳು ಪ್ರಧಾನವಾಗಿ ಸುನ್ನಿ ಪಂಥಕ್ಕೆ ಸೇರಿದವರಾಗಿದ್ದಾರೆ ಅವರ ಎದುರಾಳಿಗಳು ಷಿಯಾ ಪಂಗಡಕ್ಕೆ ಸೇರಿದವರಾಗಿದ್ದರು. ಹೀಗಾಗಿ ಬಹಮನಿ ರಾಜ್ಯದ ಇತಿಹಾಸ ಇನ್ನು ಮುಂದೆ ಪಿತೂರಿ, ಕೊಲೆಗಳ ಕಥೆಯಾಗಿದ್ದು ಇದು ರಾಜ್ಯ ಛಿದ್ರಗೊಳ್ಳುವತನಕವೂ ಅದರ ಜೀವಸತ್ವವನ್ನು ಹೀರಿತು.

ಅಹ್ಮದ್ ಪ್ರಬಲವಾದ ವಿದೇಶಾಂಗ ನೀತಿಯನ್ನು ಅನುಸರಿಸಿ ವಿಜಯನಗರದ ಮೇಲೆ ಯುದ್ಧ ಘೋಷಿಸಿದ. ಅಹ್ಮದ್ ೧೪೩೬ ಏಪ್ರಿಲ್ ೧೬ರಂದು ನಿಧನನಾದ. ಒಂದನೆಯ ಅಹ್ಮದ್‌ನ ಹಿರಿಯ ಮಗ ಅಲಾಉದ್ದೀನ್ ಅಹ್ಮದ್ ಪಟ್ಟಕ್ಕೆ ಬಂದ (೧೪೩೬–೫೮). ವಿಜಯನಗರದ ಎರಡನೆಯ ದೇವರಾಯನನ್ನು ಸೋಲಿಸಿ ಸಂಗಮೇಶ್ವರ ಮತ್ತು ಖಾನ್ದೇಶದ ರಾಜರುಗಳನ್ನು ಹತ್ತಿಕ್ಕಿದ. ತನ್ನ ತಂದೆಯ ಗೋರಿಯ ಮೇಲೆ ಭವ್ಯವಾದ ಗೋಳವನ್ನು ನಿರ್ಮಿಸಿದ. ೧೪೩೬ರಲ್ಲಿ ಮತ್ತು ೧೪೪೩ರಲ್ಲಿ ವಿಜಯನಗರದೊಡನೆ ದೋ ಅಬ್ನಲ್ಲಿ ಯುದ್ಧಗಳು ನಡೆದವು. ಅಲ್ಲಾವುದ್ದೀನ್ ಕೊಂಕಣದ ಪಾಳೆಯಗಾರರನ್ನು ಶರಣಾಗತರಾಗುವಂತೆ ಮಾಡಿದ. ಪ್ರಸಿದ್ಧ ಮಹಮ್ಮದ್ ಗವಾನ್ ಇವನ ಮಂತ್ರಿಯಾಗಿದ್ದ.

ಎರಡನೆಯ ಅಲಾಉದ್ದೀನ್ ಅಹ್ಮದ್‌ನ ಮರಣಾನಂತರ ಅವನ ಹಿರಿಯ ಮಗ ಹುಮಾಯೂನ್ ಪಟ್ಟಕ್ಕೆ ಬಂದು (೧೪೫೮–೬೧) ಮೂರು ವರ್ಷಗಳ ಆಳ್ವಿಕೆ ನಡೆಸಿದ. ಇವನ ಮಗ ನಿಜಾಮುದ್ದೀನ್ ಅಹ್ಮದ್ (೧೪೬೧–೬೩) ಸಿಂಹಾಸನಕ್ಕೆ ಬಂದಾಗ ಅವನು ಎಂಟು ವರ್ಷದ ಬಾಲಕ. ಈ ಕಾಲದಲ್ಲಿ ಮಹಮದ್ ಗವಾನ್(೧೪೬೩–೧೪೮೧) ಸಮರ್ಥ ಆಡಳಿತ ನಡೆಸಿದ. ಸುಲ್ತಾನ ಅಪ್ರಾಪ್ತವಯಸ್ಕನಾದ್ದರಿಂದ ಒಂದು ರಾಜಪ್ರತಿನಿಧಿ ಮಂಡಳಿಯನ್ನು ಸ್ಥಾಪಿಸಲಾಯಿತು. ಸುಲ್ತಾನನ ತಾಯಿ ಮತ್ತು ಪ್ರಧಾನಿಯೂ ಈ ಪ್ರತಿನಿಧಿ ಮಂಡಲಿಯಲ್ಲಿದ್ದರು. ಸುಲ್ತಾನನ ತಾಯಿ ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಒಬ್ಬ ಸಮರ್ಥ ಮಹಿಳೆಯಾಗಿದ್ದು, ಗವಾನನಂಥ ಶ್ರೇಷ್ಠ ಆಡಳಿತಾಧಿಕಾರಿಯನ್ನು ಆಯ್ಕೆಮಾಡಿ ರಾಜ್ಯ ಕಷ್ಟಕಾಲದಲ್ಲಿದ್ದಾಗ ಅದನ್ನು ಕಾಪಾಡುವ ಹೊಣೆ ಹೊತ್ತಳು. ಒರಿಸ್ಸಾದ ದೊರೆ ಕಪಿಲೇಂದ್ರ ಈ ಸಂದರ್ಭ ಉಪಯೋಗಿಸಿಕೊಂಡು ಬಿದರೆಯ ಮೇಲೆ ದಂಡಯಾತ್ರೆ ಕೈಗೊಂಡಾಗ ಗವಾನ್ ಅವನನ್ನು ಹಿಮ್ಮೆಟ್ಟಿಸಿದ. ಮಾಳ್ವದ ದೊರೆ ಇದನ್ನೇ ಅನುಸರಿಸಿದಾಗ ಗುಜರಾತಿನ ಸಹಾಯದಿಂದ ಗವಾನ್ ಅವನನ್ನು ಹಿಂದಕ್ಕಟ್ಟಿದ. ನಿಜಾಮುದ್ದೀನ್ ಅಹ್ಮದ್ನ ಮರಣಾ ನಂತರ ಅವನ ಕಿರಿಯ ತಮ್ಮ ಮೂರನೆಯ ಮಹಮ್ಮದ್ (೧೪೬೩–೮೨) ಪಟ್ಟಕ್ಕೆ ಬಂದ. ೧೪೬೬ರ ತನಕ ರಾಜಪ್ರತಿನಿಧಿ ಮಂಡಲಿ ಅಸ್ತಿತ್ವದಲ್ಲಿತ್ತು. ಆ ವರ್ಷ ಗವಾನ್ ಪ್ರಧಾನಮಂತ್ರಿಯಾಗಿ ನೇಮಿಸಲ್ಪಟ್ಟ. ಗವಾನನ ಯುದ್ಧ ನಿಪುಣತೆಯಿಂದಾಗಿ, ರಾಜ್ಯ ಒರಿಸ್ಸಾದಿಂದ ಗೋವಾವರೆಗೆ ವಿಸ್ತರಿಸಿತು. ಹುಬ್ಬಳ್ಳಿ, ಬೆಳಗಾಂವಿ ಮತ್ತು ಬಾಗಲಕೋಟೆ ಗೆದ್ದು ಉತ್ತರ ಕರ್ನಾಟಕ ಹಾಗೂ ಕೊಂಕಣದ ಕರಾವಳಿ ಪ್ರದೇಶವನ್ನು ಸಂಪೂರ್ಣವಾಗಿ ತನ್ನ ಆಡಳಿತಕ್ಕೆ ಸೇರಿಸಿಕೊಂಡು ವಿಜಯನಗರದ ಅಧೀನದಲ್ಲಿದ್ದ ಗೋವಾವನ್ನು ವಶಪಡಿಸಿಕೊಂಡ. ಇದೆಲ್ಲದರ ಪರಿಣಾಮವಾಗಿ ರಾಜ್ಯದ ಐಶ್ವರ್ಯ ಹೆಚ್ಚಿತು. ಗವಾನನ ನೇತೃತ್ವದಲ್ಲಿ ಸುಲ್ತಾನ ರಣರಂಗದಲ್ಲಿ ಧೈರ್ಯ ಪ್ರದರ್ಶಿಸಿ ಲಷ್ಕರಿ ಎಂಬ ಬಿರುದಿಗೆ ಪಾತ್ರನಾದ. ಕಂಚಿಯವರೆಗೂ ಅವನು ನಡೆಸಿದ ದಾಳಿ ಹೆಸರಾದದ್ದು.

ಗವಾನ್ ಪ್ರತಿಯೊಂದು ಇಲಾಖೆಯನ್ನೂ ಸುಧಾರಣೆಗೆ ಒಳಪಡಿಸಿದ. ಹಣಕಾಸು ನ್ಯಾಯಾಡಳಿತ ಮತ್ತು ವಿದ್ಯಾಭ್ಯಾಸ ಕ್ಷೇತ್ರಗಳಲ್ಲಿ ಸುಧಾರಣೆಗಳನ್ನು ಜಾರಿಗೆ ತಂದ. ಪ್ರಾಂತ್ಯಗಳ ಸಂಖ್ಯೆ ದ್ವಿಗುಣವಾಯಿತು. ಪ್ರಾಂತ್ಯಾಧಿಕಾರಿಗಳ ಹೆಚ್ಚಿನ ಅಧಿಕಾರವನ್ನು ಮೊಟಕುಗೊಳಿಸಿ ಕೇಂದ್ರವನ್ನು ಬಲಪಡಿಸಿ ಪ್ರಾಂತೀಯ ಮನೋಭಾವನೆಯನ್ನು ಹತ್ತಿಕ್ಕಿದ. ಹೊಸ ಕಂದಾಯ ಪದ್ಧತಿ ಜಾರಿಗೆ ತಂದ. ಭೂಮಿಯನ್ನು ಅಳೆಸಿ ಕಂದಾಯವನ್ನು ಹಣದ ರೂಪದಲ್ಲಿ ಕೊಡುವ ಕ್ರಮ ಜಾರಿಗೆ ತಂದ. ಸೇನೆಯನ್ನು ಸುಧಾರಿಸಿ ಅದರ ಶಕ್ತಿಯನ್ನು ಹೆಚ್ಚಿಸಿದ. ಭ್ರಷ್ಟಾಚಾರವನ್ನು ನಿರ್ಮೂಲ ಮಾಡಿ ಜನರಿಗೆ ಅನುಕೂಲ ಮಾಡಿಕೊಟ್ಟ. ಸಾಹಿತ್ಯ ಕಲೆಗೆ ಪ್ರೋತ್ಸಾಹ ನೀಡಿದ. ೧೪೬೧ರಲ್ಲಿ ರಾಜಧಾನಿ ಬಿದರೆಯಲ್ಲಿ ಮದ್ರಸಾವನ್ನು ಸ್ಥಾಪಿಸಿದ. ಸ್ವತಃ

ಪಂಡಿತನಾಗಿದ್ದ ಗವಾನ ಅನೇಕ ಶಾಸ್ತ್ರಗಳನ್ನು ಅಭ್ಯಾಸ ಮಾಡಿದ. ಮದ್ರಸಾಕ್ಕೆ ಅನೇಕ ಪಂಡಿತರನ್ನು ಆಹ್ವಾನಿಸಿದ. ಮೂರು ಅಂತಸ್ತುಳ್ಳ ಈ ಕಾಲೇಜಿನಲ್ಲಿ ಪ್ರಾಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ಸ್ಥಳಾವಕಾಶ ಮಾಡಿಕೊಡಲಾಗಿದ್ದಿತು. ಗವಾನನ ಬಳಿ ಇದ್ದ ಪುಸ್ತಕ ಭಂಡಾರದಲ್ಲಿ ೧೦೦೦೦ ಹಸ್ತಪ್ರತಿಗಳಿದ್ದುವು. ಗ್ರಂಥಾಲಯದಲ್ಲಿ ೩೦೦೦ ಹಸ್ತಪ್ರತಿಗಳಿದ್ದುವು.

ಗವಾನನ ಆಡಳಿತ ವಿಚಕ್ಷಣೆ ಹಾಗೂ ಸರ್ಕಾರದ ಮೇಲಿನ ಅವನ ಹತೋಟಿಯಿಂದ ದಖ್ಖನ್ ಸರದಾರರಿಗೆ ಅಸೂಯೆಯುಂಟಾಯಿತು. ಅವನನ್ನು ಕೊಲೆ ಮಾಡಲು ಯೋಚಿಸಿದರು. ದಖ್ಖನ್ ಮತ್ತು ವಿದೇಶೀ ಸರದಾರರ ನಡುವೆ ಮನಸ್ತಾಪ ಉಂಟಾಯಿತು. ಗವಾನ ಸ್ವಲ್ಪಕಾಲ ಬುದ್ಧಿವಂತಿಕೆಯಿಂದ ಈ ಎರಡು ಪಕ್ಷಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲು ಯತ್ನಿಸಿದ. ಆದರೂ ದಖನೀ ಸರದಾರರ ಕುತಂತ್ರಕ್ಕೆ ಬಲಿಯಾಗಬೇಕಾಗಿ ಬಂತು. ಗವಾನನ ಮರಣದಿಂದ ಬಹಮನಿ ರಾಜ್ಯದ ಶಕ್ತಿ ಉಡುಗಿಹೋಯಿತೆನ್ನಬಹುದು.

ಮೂರನೆಯ ಮಹಮ್ಮದ್‌ನ ನಂತರ ಶಿಹಾಬುದ್ದೀನ್ ಮಹ್ಮೂದ್ (೧೪೮೨–೧೫೧೮) ಪಟ್ಟಕ್ಕೆ ಬಂದ. ಇವನಿಗೆ ವೈಯಕ್ತಿಕ ಸತ್ವವಾಗಲಿ ರಾಜ್ಯದ ಐಕ್ಯವನ್ನು ಉಳಿಸಿಕೊಳ್ಳಲು ನೆರವಾಗಬಲ್ಲ ದಕ್ಷಮಂತ್ರಿಯ ಮಾರ್ಗದರ್ಶನವಾಗಲಿ ದೊರಕಲಿಲ್ಲ. ದಖ್ಖನ್ನಿ ಮತ್ತು ಪರದೇಶೀ ಸರದಾರರ ನಡುವೆ ದ್ವೇಷಾಸೂಯೆ ನೂರ್ಮಡಿಗೊಂಡಿತು. ಪ್ರಾಂತೀಯ ಗೌರ್ನರುಗಳು ಈ ಅನಾಯಕತ್ವ ಪರಿಸ್ಥಿತಿಯ ಅವಕಾಶವನ್ನು ತಮ್ಮ ತಮ್ಮ ಸ್ವಾತಂತ್ರ್ಯ ಘೋಷಿಸಲು ಉಪಯೋಗಿಸಿಕೊಂಡರು. ಮಹಮ್ಮದ್‌ನ ನಾಮ ಮಾತ್ರದ ಅಧಿಕಾರ ರಾಜಧಾನಿಯ ಸುತ್ತ ಮುತ್ತಲ ಭಾಗಗಳಿಗೆ ಸೀಮಿತವಾಗಿತ್ತು. ಇವನು ಮತ್ತು ಇವನ ನಾಲ್ವರು ಉತ್ತರಾಧಿಕಾರಿಗಳು ತುರ್ಕಿವಂಶದ ಖಾಸಿಮ್ ಬರೀದ್ ಅನಂತರ ದಖನ್ನಿನ ನರಿ ಎಂದು ಪ್ರಸಿದ್ಧನಾದ ಅವನ ಮಗ ಆಮೀರ್ ಅಲಿ ಬರೀದ್ರ ಕೈಗೊಂಬೆಗಳಾಗಿದ್ದರು. ಈ ಸಂತತಿಯ ಕೊನೆಯ ದೊರೆ ಕಲೀಮುಲ್ಲಾ ಕಳೆದ ಹೋಗಿದ್ದ ತನ್ನ ರಾಜ್ಯದ ಭಾಗವನ್ನು ಮತ್ತೆ ತಡೆಯಲು ಬಾಬರನ ನೆರವನ್ನು ಪಡೆಯಲು ರಹಸ್ಯವಾಗಿ ಪ್ರಯತ್ನಿಸಿ ನಿರಾಶನಾದ. ಸುಮಾರು, ೧೫೩೮ರಲ್ಲಿ ಈತ ಕಾಲವಾದ ಮೇಲೆ ಸುಮಾರು ಒಂದು ನೂರ ಎಂಬತ್ತು ವರ್ಷಗಳ ಆಳ್ವಿಕೆಯ ಬಹಮನೀ ಮನೆತನ ಕೊನೆಗೊಂಡಿತು. ಮುಂದೆ ಆಸ್ಥಾನದ ಎರಡು ಪಕ್ಷಗಳಿಗೂ ಅದರಲ್ಲೂ ದಖನ್ ಪಕ್ಷ ನಾಯಕ ಹಸನ್ ನಿಜಾಮ್ ಉಲ್ ಮುಲ್ಕ್ ಮತ್ತು ಪರದೇಶಿಗಳ ಪಕ್ಷದ ನಾಯಕ ಯೂಸಫ್ ಆದಿಲ್ ಖಾನರ ನಡುವೆ ಪ್ರತಿಸ್ಪರ್ಧೆ ಹೆಚ್ಚುತ್ತ ನಡೆಯಿತು. ಕೊನೆಗೆ ಪರದೇಶಿ ಪಕ್ಷ ಬಿಜಾಪುರಕ್ಕೆ ನಿರ್ಗಮಿಸಿತು. ಅದರ ನಾಯಕ ಆದಿಲ್ಖಾನ್ ಸ್ವತಂತ್ರ ರಾಜ್ಯ ಕಟ್ಟಿದ. ಬಹಮನಿರಾಜ್ಯ ಐದು ಷಾಹಿರಾಜ್ಯಗಳಾಗಿ ಒಡೆಯಿತು. ಅವುಗಳೇ ಬಿಜಾಪುರದ ಆದಿಲ್ಷಾಹಿ, ಗೊಲ್ಕೊಂಡದ ಕುತೂಬ್ ಷಾಹಿ, ಅಹಮದ್ ನಗರದ ನಿಜಾಂಷಾಹಿ, ಬಿರಾರಿನ ಇಮಾಮ್ ಷಾಹಿ ಮತ್ತು ಬಿದರೆಯ ಬರೀದ್ ಷಾಹಿ ರಾಜ್ಯಗಳು.

**ಆಡಳಿತ:**

ಇಸ್ಲಾಂ ಮತ ಶಾಸ್ತ್ರ ಆಧಾರಿತವಾದ ಇವರ ಆಡಳಿತದಲ್ಲಿ ಕೇಂದ್ರ ಪ್ರಾಂತೀಯ ಹಾಗೂ ಗ್ರಾಮಾಡಳಿತವೆಂಬ ಮೂರು ಭಾಗಗಳಿದ್ದು, ಇವುಗಳಲ್ಲಿ ಕಂದಾಯ ನ್ಯಾಯ ಮತ್ತು ಸೈನ್ಯಾಡಳಿತಗಳಿದ್ದವು. ದೆಹಲಿ ಸುಲ್ತಾನರ ಆಡಳಿತಕ್ಕಿಂತ ಬಹಮನಿ ಸುಲ್ತಾನರ ಆಡಳಿತ ಹೆಚ್ಚು ಭಿನ್ನವಾಗಿರಲಿಲ್ಲ. ರಾಜನೇ ರಾಜ್ಯದ ಪ್ರಮುಖ ನ್ಯಾಯಧೀಶ, ಮುಖ್ಯ ಸೇನಾಪತಿ ಮತ್ತು ಧಾರ್ಮಿಕ ಮುಖಂಡ. ರಾಜ ದೇವರ ಪ್ರತಿನಿಧಿ ಎಂಬ ನಂಬಿಕೆಯಿತ್ತು. ಅವನ ಅಧಿಕಾರ ಸೀಮಾತೀತ. ದೇಶದ ವ್ಯವಹಾರಗಳಲ್ಲಿ ಸುಲ್ತಾನ ಮಂತ್ರಿಗಳ ಸಲಹೆ ಕೇಳುತ್ತಿದ್ದ ಮಂತ್ರಿಮಂಡಲಕ್ಕೆ ಮಜ್ಲಿಸ್–ಇಲ್ವಿತ್ ಎನ್ನುತ್ತಿದ್ದರು. ಗವಾನನು ಸುಮಾರು ಮುವತ್ತು ವರ್ಷ ಮಂತ್ರಿಯಾಗಿದ್ದ ಕಾಲದಲ್ಲಿ ಸುಲ್ತಾನ ನೆಪಮಾತ್ರಕ್ಕಿದ್ದನೆಂದು ಹೇಳಬಹುದು. ರಾಜಾಜ್ಞೆಗಳೆಲ್ಲ ಮುಖ್ಯಮಂತ್ರಿಯ ಮೂಲಕವೇ ಹೋಗಬೇಕಾಗಿತ್ತು. ಅಮೀರಿ ಜುಮ್ಲ ಎಂದು ಅರ್ಥಮಂತ್ರಿಯನ್ನು, ವಿದೇಶಾಂಗ ಮಂತ್ರಿಯನ್ನು ಆಷಾಫ್ ಎಂದೂ ನ್ಯಾಯಾಡಳಿತ ಮುಖ್ಯಸ್ಥನಿಗೆ

ಸದರ್–ಇ–ಜಹಾನ್ ಎಂದೂ ಕರೆಯುತ್ತಿದ್ದರು. ಸಾಮಾನ್ಯ ವ್ಯವಹಾರಗಳ ನಿರ್ವಹಣೆಯನ್ನು ಪೇಷ್ವಾ ನೋಡಿಕೊಳ್ಳುತ್ತಿದ್ದ. ವಜೀರ್, ಕೊತ್ವಾಲ್ ಮತ್ತು ದಿವಾನ್ರೆಂಬ ಉಪಮಂತ್ರಿಗಳಿದ್ದರು.

ಪ್ರಾಂತ್ಯಗಳ ಗವರ್ನರ್‌ಗಳಿಗೆ ತರಫ್ದಾರರೆಂದು ಕರೆಯುತ್ತಿದ್ದರು. ಬಹಮನಿ ರಾಜ್ಯದ ಸ್ಥಾಪಕ ಹಸನ್‌ಗಂಗು ರಾಜ್ಯವನ್ನು ನಾಲ್ಕು ತರಫ್‌ಗಳಾಗಿ ವಿಂಗಡಿಸಿದ್ದ. ಈ ಪ್ರಾಂತ್ಯಾಧಿಕಾರಿಗಳು ಹೆಚ್ಚಿನ ಅಧಿಕಾರ ಪಡೆದಿದ್ದರು. ಗವಾನ್ ಪ್ರಾಂತ್ಯಗಳನ್ನು ೮ ಘಟಕಗಳಾಗಿ ಮತ್ತು ಪ್ರಾಂತ್ಯಗಳನ್ನು ೧೫ ಸರ್ಕಾರ ಗಳಾಗಿ ವಿಂಗಡಿಸಿದ.ಅಧಿಕಾರ ವರ್ಗದ ವರಿಷ್ಠರಿಗೆ ಕುತುಬ್–ಉಲ್–ಮುಲ್ಕ್ ಮತ್ತು ಖ್ವಾಜಾ–ಜಹಾನ್ ಎಂಬ ಬಿರುದುಗಳನ್ನು ನೀಡುತ್ತಿದ್ದರು. ಅವರು ಅಧಿಕಾರವರ್ಗದ ಉಕ್ಕಿನ ಚೌಕಟ್ಟಿನಂತ್ತಿದ್ದರು. ಕಂದಾಯ ವಸೂಲಿ, ಸೇನೆಯ ಜಮಾವಣೆ, ಸೇವೆಯ ನಾಯಕತ್ವ ಮತ್ತು ಅಧಿಕಾರಿಗಳ ನೇಮಕ ಇವು ಪ್ರಾಂತ್ಯಾಧಿಕಾರಿಗಳ ಕರ್ತವ್ಯಗಳಾಗಿದ್ದುವು. ಒಂದೇ ಕಡೆ ತಳವೂರದಂತೆ ಮಾಡಲು ತರಫ್ದಾರರನ್ನು ಬೇರೆ ಬೇರೆ ಕಡೆಗೆ ವರ್ಗಾಯಿಸುವ ಸಂಪ್ರದಾಯವಿತ್ತು. ಕೆಲವು ವೇಳೆ ಒಂದಕ್ಕಿಂತ ಹೆಚ್ಚು ತರಫ್ದಾರರು ಬಹಮನಿ ಆಸ್ಥಾನದಲ್ಲಿ ಮಂತ್ರಿಗಳಾಗಿರುತ್ತಿದುದ್ದು ಉಂಟು. ಉದಾಹರಣೆಗೆ ಮಹಮದ್ ಗವಾನ್ ಕೇಂದ್ರದಲ್ಲಿ ಪ್ರಧಾನಮಂತ್ರಿಯಾಗಿದ್ದುದಲ್ಲದೆ ಬಿಜಾಪುರ ವಿಭಾಗದ ತರಫ್ದಾರನೂ ಆಗಿದ್ದ. ಇದರ ಜೊತೆಗೆ ಅವನು ಆಮೀರಿ ಜುಮ್ಲಾ ಸಹ ಆಗಿದ್ದ. ತರಫ್ದಾರನ್ನೂ ಸರ್ಕಾರಗಳಾಗಿ, ಸರ್ಕಾರಗಳನ್ನು ಪರಗಣಗಳಾಗಿ ವಿಂಗಡಿಸಲಾಗಿತ್ತು. ಪ್ರತಿಯೊಂದು ಪರಗಣದಲ್ಲೂ ಗೊತ್ತಾದ ಸಂಖ್ಯೆಯ ಹಳ್ಳಿಗಳಿರುತ್ತಿದ್ದವು. ಗ್ರಾಮಾಡಳಿತ ಪ್ರಾಥಮಿಕ ಘಟಕವಾಗಿತ್ತು ಇದನ್ನು ಪಟೇಲ್, ಕುಲಕರ್ಣಿ, ಮತ್ತು ಕಾವಲುಗಾರ ಎಂಬ ಅಧಿಕಾರಿಗಳು ನೋಡಿಕೊಳ್ಳುತ್ತಿದ್ದರು.

**ಶಾಸನಗಳು:**

ಬಹಮನಿ ಸುಲ್ತಾನರ ಶಾಸನಗಳು ವಿಶೇಷವಾಗಿ ಕಂಡು ಬಂದಿರುವುದು ಪಾರಸೀ ಮತ್ತು ಅರಬ್ಬಿ ಭಾಷೆಗಳಲ್ಲಿ. ಅಪರೂಪವಾಗಿ ಸಂಸ್ಕೃತ, ಕನ್ನಡ, ತೆಲುಗು, ಮರಾಠಿ ಮುಂತಾದ ಸ್ಥಳೀಯ ಭಾಷೆಗಳನ್ನು ಬಳಸಿದ ದ್ವಿಭಾಷಾ ಶಾಸನಗಳು ಕಾಣಿಸಿಕೊಂಡಿವೆ. ಆರಂಭದ ಶಾಸನಗಳಿರುವುದು ಅರಬ್ಬಿ ಭಾಷೆಯ ಗದ್ಯದಲ್ಲೆ. ಅನಂತರ ಬಳಕೆಗೆ ಬಂದ ಪಾರಸಿ ಭಾಷೆಯ ಶಾಸನಗಳು ಹೆಚ್ಚು ಹೆಚ್ಚು ಪದ್ಯಶೈಲಿಯನ್ನು ಆಶ್ರಯಿಸಿವೆ. ಈ ಭಾಷೆಯ ಗದ್ಯ ಶಾಸನಗಳು ಆರಂಭದಲ್ಲೆ ಬಳಕೆಯಲ್ಲಿದ್ದುವು. ಮಹಮ್ಮದೀಯ ಶಾಸನಗಳು ಸಾಮಾನ್ಯವಾಗಿ ಭಾಷಾ ದೃಷ್ಟಿಯಿಂದ ಗಮನಾರ್ಹವಾದದ್ದು. ಆದರೆ ಬಹಮನಿ ಸುಲ್ತಾನರ ಪಾರಸೀ ಭಾಷೆಯ ಪದ್ಯ ಶಾಸನಗಳಲ್ಲಿ ಕಾಣಿಸಿಕೊಂಡಿರುವುದು ಕಲುಷಿತ ಭಾಷೆ. ವ್ಯಾಕರಣ ಹಾಗೂ ಛಂದಸ್ಸಿನ ನಿಯಮಗಳನ್ನು ಪಾಲಿಸದ ಈ ಶಾಸನಗಳಲ್ಲಿ ದೋಷಗಳೇ ಹೆಚ್ಚು. ಆದರೆ ಬಳಸಿದ ಲಿಪಿಮಾತ್ರ ಕಾಗದಗಳ ಮೇಲಿನ ಬರಹಗಳಷ್ಟೇ ಸುಂದರ ಆಲಂಕಾರಿಕ, ಕುಫಿ, ನಸ್ಖ್, ಥುಲ್ತ್, ನಸ್ತಾಲಿಕ್ ಹಾಗೂ ತುಘ್ರಾ ಇವರು ಬಳಸಿದ ಲಿಪಿಗಳು. ಇವುಗಳಲ್ಲೆ ಹೆಚ್ಚು ಆಲಂಕಾರಿತವಾದದ್ದು ನಸಖ್ ಲಿಪಿ. ಬಿಲ್ಲು ಮತ್ತು ಬಾಣದ ಆಕಾರದಲ್ಲಿ ಅಥವಾ ಧ್ವಜಗಳನ್ನು ಎತ್ತಿಹಿಡಿದ ಸೈನ್ಯ ಶಿಸ್ತಿನಿಂದ ಮುಂದುವರಿಯುತ್ತಿರುವ ರೀತಿಯಲ್ಲಿ ಈ ಅಕ್ಷರಗಳನ್ನು ಜೋಡಿಸಲಾಗಿದೆ. ತುಘ್ರಾ ಶೈಲಿಯಲ್ಲಿ ಅಕ್ಷರಗಳನ್ನು ಪಕ್ಷಿಗಳ ಅಥವಾ ಪ್ರಾಣಿಗಳ ಆಕಾರದಲ್ಲಿ ಜೋಡಿಸಲಾಗಿದೆ. ಇವುಗಳಲ್ಲೆ ಸಿಂಹ ಅಥವಾ ಹುಲಿಯ ಚಿತ್ರ ಹೋಲುವ ಅಕ್ಷರ ಜೋಡಣೆ ಪ್ರಮುಖವಾಗಿದ್ದು ಇದು ಸೂಚಿಸುವುದು ದೈವ ಸಿಂಹವೆನಿಸಿದ ಆಲಿಯನ್ನು. ಆದರೆ ಇವನ್ನು ದೃಷ್ಟಿದೋಷಪರಿಹಾರಕ್ಕಾಗಿ ಬಳಸಲಾಗಿದೆ ಎಂಬ ಒಂದು ಅಭಿಪ್ರಾಯವಿದೆ. ಇಂತಹ ಲಿಪಿಯನ್ನು ಸಾಧಾರಣವಾಗಿ ದಖನ್ನಿನ ಕೋಟೆಗಳ ಗೋಡೆಗಳ ಮೇಲೆ ಕಾಣಬಹುದು. ಥುಲ್ತ್ ಹಾಗೂ ಸನ್ತಾಲಿಕ್‌ಗಳು ನಸಖ್ ಉಪಶೈಲಿಗಳು.

ಈ ಶಾಸನಗಳನ್ನು ಬಲುಮಟ್ಟಿಗೆ ಮಸೀದಿ, ಗೋರಿ ಅಥವಾ ಧಾರ್ಮಿಕ ಕಟ್ಟಡಗಳಲ್ಲಿ ಬರೆಸಲಾಗಿದೆ. ಇವುಗಳಲ್ಲಿ ಸಾಮಾನ್ಯವಾಗಿ ಸುಲ್ತಾನರ ಹೆಸರು, ಕಟ್ಟಡ ಕಟ್ಟಿಸಿದವನ ಹೆಸರು, ಶಾಸನದ (ಅಥವಾ ಕಟ್ಟಡ ಕಟ್ಟಿಸಿದ) ಕಾಲಗಳನ್ನು ಒಳಗೊಂಡ ವಿವರಗಳಿವೆ. ಕೋಟೆ, ಬಾಗಿಲುವಾಡ, ಬಾವಿ,

ಮುಂತಾದವನ್ನು ಕಟ್ಟಿಸಿದ ಅಥವಾ ಜೀರ್ಣೋದ್ಧಾರ ಮಾಡಿಸಿದ ಸಂದರ್ಭಗಳಲ್ಲಿಯೂ ಶಾಸನಗಳನ್ನು ಕೆತ್ತಿಸಲಾಗಿದೆ, ಕತ್ತಿ ಬಂದೂಕು ಮುಂತಾದ ಶಸ್ತ್ರಾಸ್ತ್ರಗಳ ಮೇಲೂ ಮುದ್ರೆಗಳು, ಪತ್ರಗಳು, ಮುಂತಾದ ದೈನಂದಿನ ಬಳಕೆಯ ವಸ್ತುಗಳ ಮೇಲೂ ಶಾಸನಗಳನ್ನು ಕೆತ್ತಿಸಿರುವ ಉದಾಹರಣೆಗಳಿವೆ. ಇದು ಆ ಕಾಲದ ಪದ್ಧತಿಯಾಗಿತ್ತು ಎನ್ನಬಹುದು. ನಯಗೊಳಿಸಿದ ಶಿಲೆಗಳನ್ನು ಶಾಸನಗಳಿಗೆ ಬಳಸಲಾಗಿದೆ. ಈ ಅವಧಿಯಲ್ಲಿ ಒಂದೂ ತಾಮ್ರಶಾಸನ ಕಂಡು ಬಂದಿಲ್ಲ. ಕೆಲವೊಮ್ಮೆ ಶಾಸನ ಕಲ್ಲುಗಳನ್ನು ಅವುಗಳ ಸಂರಕ್ಷಣೆಗಾಗಿ ಸ್ಥಾನಪಲ್ಲಟಗೊಳಿಸಿರುವುದರಿಂದ, ಹಲವಾರು ಸಂದರ್ಭಗಳಲ್ಲಿ ಮಸೀದಿಗಳಲ್ಲಿ ಇರಬಹುದಾದ ಶಾಸನಗಳು ಗೋರಿಗಳ ಮೇಲೂ ಗೋರಿಯ ಶಾಸನಗಳು ಮಸೀದಿಗಳ ಮೇಲೂ ಕಾಣಿಸಿಕೊಂಡಿವೆ. ಕಲ್ಲಿನೊಳಗೆ ಅಕ್ಷರಗಳನ್ನು ಕೊರೆಯುವ ಪದ್ಧತಿಯ ಜೊತೆಗೆ ಸುತ್ತಲಿನ ಭಾಗವನ್ನು ತೆಗೆದು ಅಕ್ಷರಗಳು ಉಬ್ಬಿದಂತೆ ಕಡೆದಿರುವುದೂ ಬರೆಹದ ವೈಶಿಷ್ಟ್ಯವಾಗಿದೆ.

ಬಹಮನಿಯ ಸುಲ್ತಾನರ ಕಾಲಕ್ಕೆ ಕಾಗದದ ಬಳಕೆ ತಿಳಿದಿತ್ತಾದ್ದರಿಂದ ಶಾಸನಗಳನ್ನು ಕೊರೆಯಿಸುವ ಪದ್ಧತಿ ಕ್ರಮೇಣ ಕಡಿಮೆಯಾಗುತ್ತ ಬಂತು. ಇದರಿಂದ ವಿಶೇಷ ಪ್ರಯೋಜನ ಕಂಡುಬರಲಿಲ್ಲ ಎಂತಲೆ ಈ ಸಮಕಾಲೀನ ಶಾಸನಗಳಲ್ಲಿ ಐತಿಹಾಸಿಕವಾಗಿ ಮಹತ್ವದ್ದೆನಿಸುವ ಯಾವ ಶಾಸನಗಳೂ ಕಾಣಿಸಿಕೊಂಡಿಲ್ಲ. ಆದರೂ ಕೆಲವು ಸಂದರ್ಭಗಳಲ್ಲಿ ಅರಸರ ವಂಶಾವಳಿ ಆಳ್ವಿಕೆಯ ಕಾಲ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಲಭಿಸುವ ವಿವರಗಳು ಸಮಕಾಲೀನ ಇತಿಹಾಸಕಾರರ, ಯಾತ್ರಿಕರ ಬರೆವಣಿಗೆಗಳಲ್ಲಿನ ಹೇಳಿಕೆಗಳಿಗೆ ಪುಷ್ಟಿ ನೀಡುತ್ತವೆ ಅಥವಾ ಆ ಹೇಳಿಕೆಗಳನ್ನು ಅಲ್ಲಗಳೆಯುತ್ತದೆ. ಬಹಮನಿ ಸುಲ್ತಾನರು ನಾಣ್ಯಗಳನ್ನು ಚಿನ್ನ, ಬೆಳ್ಳಿ ಮತ್ತು ತಾಮ್ರದ ಲೋಹಗಳಲ್ಲಿ ಅಚ್ಚು ಹಾಕಿಸಿದ್ದಾರೆ. ವಿನ್ಯಾಸ, ತೂಕ ಮತ್ತಿತರ ವಿಷಯಗಳಲ್ಲೂ ಇವರ ನಾಣ್ಯಗಳು ಸಮಕಾಲೀನ ದೆಹಲಿಯ ಸುಲ್ತಾನರ ನಾಣಯಗಳನ್ನೇ ಹೋಲುತ್ತವೆ. ಇವರು ಅಚ್ಚು ಹಾಕಿಸಿದ ಟಂಕಗಳು ಮಹಮ್ಮದ್ ಬಿನ್ ತೊಘಲಕ್ ದೀನಾರ್‌ಗಳಷ್ಟೇ ತೂಕವನ್ನು ಹೊಂದಿದ್ದುವು. ಚಿನ್ನದ ನಾಣ್ಯಗಳ ತೂಕ ಸುಮಾರು ೧೭೦ರಿಂದ ೧೯೯ ಗ್ರೈನ್‌ಗಳು. ಬೆಳ್ಳಿ ಹಾಗೂ ತಾಮ್ರದ ನಾಣ್ಯಗಳು ಸಾಮಾನ್ಯವಾಗಿ ಸುಮಾರು ೧೭೦ ಗ್ರೈನ್ ತೂಕದವು. ಆದರೆ ತಾಮ್ರದ ನಾಣ್ಯಗಳಲ್ಲಿ ಅತಿ ಹೆಚ್ಚಿನ ತೂಕದ ನಾಣ್ಯ ೨೬೦ ಗ್ರೈನ್ ಅತಿಕಿರಿದಾದ ನಾಣ್ಯ ಕೇವಲ ೨೬ ಗ್ರೈನ್ ತೂಕ ಪಡೆದಿತ್ತು. ನಾಣ್ಯಗಳು ವೃತ್ತಾಕಾರದಲ್ಲಿದ್ದು ಅವುಗಳ ಎರಡೂ ಕಡೆಗಳಲ್ಲಿ ಆಲೇಖಗಳಿರುತ್ತವೆ. ಆಯಾಕಾರದ ನಾಣ್ಯಗಳು ಬಹಳ ಕಡಿಮೆ ಪ್ರಮಾಣದಲ್ಲಿವೆ. ಗುಲ್ಬರ್ಗ (ಅಹಸಾನಾಬಾದ್), ಬೀದರ್ (ಮಹಮ್ಮದಾಬಾದ್) ಮತ್ತು ದೌಲತಾಬಾದ್‌ಗಳಲ್ಲಿ (ಫುತಹಬಾದ್) ಇವರ ಟಂಕಸಾಲೆಗಳಿದ್ದುವು.

ಮೊದಲನೆಯ, ಎರಡನೆಯ ಹಾಗೂ ಮೂರನೆಯ ಮಹಮ್ಮದ್, ಮುಜಾಹಿದ್, ಫಿರೋಜ್ ಎರಡನೆಯ ಹಾಗೂ ಮೂರನೆಯ ಅಹಮದ್, ಹುಮಾಯೂನ್ ಮತ್ತು ಮಹ್ಮೂದರ ಆಳ್ವಿಕೆಯ ಕಾಲದ ಚಿನ್ನದ ನಾಣ್ಯಗಳು ದೊರೆತಿವೆ. ಈ ನಾಣ್ಯಗಳ ಮುಖಗಳಲ್ಲಿ ಸುಲ್ತಾನನ ಹಾಗೂ ಒಮ್ಮೊಮ್ಮೆ ಅವನ ತಂದೆಯ ಹೆಸರು, ಅವನ ಬಿರುದುಗಳು ಹಾಗೂ ಕುರಾನಿನಿಂದ ಉದ್ಧೃತವಾದ ವಾಕ್ಯಗಳನ್ನೂ ಆಲೇಖಗಳಾಗಿ ಖಂಡರಿಸಲಾಗಿದೆ. ಅಲಾಉದ್ದೀನ್ ಬಹಮನ್ ಬೆಳ್ಳಿಯ ನಾಣ್ಯದಲ್ಲಿ ಸುದೀರ್ಘವಾದ ಅಸ್ ಸುಲ್ತಾನೂಲ್ ಅಜಮ್ ಅಲಾದ್ದು ಸ್ಯಾವದ್ದೀನ್ ಅಬುಲ್ ಮುಝಾಫರ್ ಬಹಮನ್ ಷಾ ಅಸ್ ಸುಲ್ತಾನ್ ಎಂಬ ನಾಲ್ಕು ಸಾಲುಗಳ ಅಲೇಖ್ಯವಿದೆ. ಅತಿ ಹಿರಿದಾದ ೧೯೬ ಗ್ರೈನ್ ತೂಕದ ಒಂದನೆಯ ಮಹಮ್ಮದನ ಚಿನ್ನದ ನಾಣ್ಯ ಆಹಸಾನಾಬಾದಿನ ಟಂಕಸಾಲೆಯಲ್ಲಿ ಅಚ್ಚಾಗಿದ್ದು, ಇದನ್ನು ಈ ಸುಲ್ತಾನ ಚಲಾವಣೆಗೆ ತಂದನೆಂಬುದರ ಬಗೆಗೆ ಏಕಾಭಿಪ್ರಾಯವಿಲ್ಲ. ಇದರ ಹಿಮ್ಮುಖದಲ್ಲಿ ಮಹಮ್ಮದ್ ಹಸನ್ ಬಹಮನೀ ಎಂಬ ಹೆಸರು ಮಾತ್ರ ಇರುವುದು ಸಂದೇಹಕ್ಕೆಡೆ ಮಾಡಲು ಕಾರಣವಾಗಿದೆ. ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳನ್ನು ಟಂಕಿಸಿದ ಫಿರೋಜನ ಚಿನ್ನದ ನಾಣ್ಯದ ಸುತ್ತಲೂ ಬುರಿಬಾಹಜರ್ ದಿನಾರ್ ದಾರಲ್ ಮುಲ್ಕ್ ಅಹಸಾನಾಬಾದ್ ಎಂಬ ಆಲೇಖ್ಯವಿದೆ. ಇದರ ವರ್ಷವನ್ನು ೮೦೦ ಎಂದು ಸೂಚಿಸಿವೆ. ಸಾಮಾನ್ಯವಾಗಿ ಟಂಕಸಾಲೆಗಳನ್ನು ಸೂಚಿಸುವ ಆಲೇಖ ಜುರಿದಾಬೇ ಹಜರತ್ ಅಥವಾ ಹಿಫಾಜರತ್ ಅಹಸಾನಾಬಾದ್ (ಮಹಮ್ಮದಾಬಾದ್) ಎಂದಿರುತ್ತದೆ. ಫಿರೋಜನ ತಾಮ್ರದ ನಾಣ್ಯಗಳಲ್ಲಿ

ಕೆಲವು ಆಯಾಕಾರವುಳ್ಳವು. ಹುಮಾಯೂನ್ ಚಲಾವಣೆಗೆ ತಂದ ಎರಡು ವಿಧದ ಚಿನ್ನದ ಟಂಕಗಳಲ್ಲಿ ಒಂದರ ಮುಮ್ಮುಖದಲ್ಲಿ ಅಬ್ಮುತವಕ್ಕಿಲ್ ಅಲೈಲ್ಲಾಹಿಬ್ ಖವಿಯಿಲ್ ಘನಿ ಅಬ್ದುಲ್ ಮುಘಜಿ ಎಂದೂ ಹಿಮ್ಮುಖದಲ್ಲಿ ಅಲ್ಲಾದ್ದುನವದ್ದೀನ್ ಹುಮಾಯೂನ್ ಷಾ ಬಿನ್ ಅಹ್ಮದ್ ಅಲ್ ವಲಿಯಲ್ ಬಹಮನಿ ಎಂದೂ ಆಲೇಖಗಳನ್ನು ಕೆತ್ತಲಾಗಿದೆ. ಮುಜಾಹಿದ್‌ನ ಬೆಳ್ಳಿ ನಾಣ್ಯದ ಮುಮ್ಮುಖದ ಚೌಕದಲ್ಲಿ ಅಲ್ ಮುವಾಯ್ಯಿದ್ ಬಿನಸ್ತಲ್ಲಾ ಯಮಿನೂಲ್ ಖಿಲಾಫತ್ ನಸಿರು ಅಮಿರಿಲ್ ಮೂಮಿನಿನ್ ಎಂದು ಕೆತ್ತಲಾದ ಆಲೇಖದ ಬರೆವಣಿಗೆ ಕಲಾತ್ಮಕವಾಗಿದ್ದು ಗಮನಾರ್ಹವಾಗಿದೆ. ಹಿಜಾರಾ ಕಾಲ ಗಣನೆಯ ೭೭೯ನೆಯ ವರ್ಷದಲ್ಲಿ ಟಂಕಿಸಲಾದ ಈ ನಾಣ್ಯ ೧೭೦ ಗ್ರೈನ್ ತೂಕ ಪಡೆದಿದೆ. ಇದನ್ನು ಅಹಸಾನಾಬಾದ್ ಟಂಕಸಾಲೆಯಲ್ಲಿ ಅಚ್ಚುಹಾಕಲಾಗಿತ್ತು. ೧೩೯೭ರಲ್ಲಿ ಕೇವಲ ಎರಡು ತಿಂಗಳು ಆಳಿದ ಘಿಯಾಸುದ್ದೀನ ಬೆಳ್ಳಿಯ ಹಾಗೂ ತಾಮ್ರದ ನಾಣ್ಯಗಳನ್ನು ಟಂಕಿಸಿದ್ದು ಉಲ್ಲೇಖನೀಯ. ಇವುಗಳಲ್ಲಿ ಈತನನ್ನು ತಹಂತನ್ಷಾ ಎಂಬ ಬಿರುದಿನಿಂದ ಕರೆಯಲಾಗಿದೆ. ಆದ್ದರಿಂದ ಇದು ಘಿಯಾಸುದ್ದೀನನದೆಂಬುದನ್ನು ಸಂದೇಹಿಸಲಾಗಿತ್ತು. ತಹಂತನ್ ಎಂಬುದನ್ನು ಬಹಮನ್ ಎಂದು ಕೆಲವರು ಓದಿದ್ದರಾದರೂ ಅದು ತಹಂತನ್ ಎಂಬುದೇ ಸರಿಯೆಂದು ಈಗ ಖಚಿತಗೊಳಿಸಲಾಗಿದೆ. ಇತ್ತೀಚೆಗೆ ಇಂತಹ ನಾಣ್ಯಗಳು ಇನ್ನಷ್ಟು ದೊರೆತಿವೆ.

**ವಾಸ್ತುಶಿಲ್ಪ:**

ಬಹುಮನಿಯ ವಾಸ್ತುಶಿಲ್ಪ ಬಲುಮಟ್ಟಿಗೆ ಗುಲ್ಬರ್ಗ ಮತ್ತು ಬಿದರಗಳಿಗೆ ಸೀಮಿತವಾಗಿದೆ. ಆರಂಭದಲ್ಲಿ ಸುಲ್ತಾನರು ಗುಲ್ಬರ್ಗವನ್ನು ರಾಜಧಾನಿಯಾಗಿ ಮಾಡಿಕೊಂಡಾಗ ಅಲ್ಲಿ ಕೋಟಿ ಮಸೀದಿ ಮುಂತಾದ ಇತರೆ ಕಟ್ಟಡಗಳನ್ನು ಕಟ್ಟಿಸಿದರು. ಕರ್ನಾಟಕದಲ್ಲಿ ಇಸ್ಲಾಮ್ ಸಂಪ್ರದಾಯಕ್ಕೆ ಸೇರಿದ ವಾಸ್ತುಶಿಲ್ಪ ಶೈಲಿರೂಢಿಗೆ ತಂದ ಶ್ರೇಯಸ್ಸು ಬಹಮನಿ ಸುಲ್ತಾನರದು. ಗುಲ್ಬರ್ಗದ ಕೋಟೆ ಅಲ್ಲಾಉದ್ದೀನ್ (೧೩೪೭–೫೦) ಕಾಲದ ಸುಮಾರು ೩ ಕಿ. ಮೀ. ಸುತ್ತಳತೆಯ ಸುಭದ್ರವಾದ ಕಟ್ಟಡ. ೧೫.೨೫ ಮೀ. ದಪ್ಪದ ಹೊರ ಗೋಡೆಯ ಸುತ್ತಲೂ ೯.೧೪ ಮೀ. ಅಗಲದ ಆಳವಾದ ಕಂದಕ. ಒಳಭಾಗದಲ್ಲಿರುವ ಶಿಲೆಯ ಮೇಲೆಯೇ ಕಟ್ಟಲಾದ ಗೋಡೆತಳ ಶಿಲೆಯ ಏರು ತಗ್ಗುಗಳನ್ನೇ ಅನುಸರಿಸಿದೆ. ಗೋಡೆಗಳ ಮೇಲೆ ಒಮ್ಮೊಮ್ಮೆ ೩ ಮೀ. ಗಳಷ್ಟು ಎತ್ತರದ ಏಕಶಿಲೆಯ ತೆನೆಗಳು. ಕೋಟೆಯೊಳಗಿನ ಕಟ್ಟಡಗಳೆಲ್ಲ ಈಗ ನೆಲಸಮವಾಗಿವೆ. ಆದರೆ ಒಂದನೆಯ ಮಹಮ್ಮದನ ಕಾಲದಲ್ಲಿ ಕಟ್ಟಲಾದ ಜುಮ್ಮಾಮಸೀದಿ ಇನ್ನೂ ಉಳಿದಿದೆ. ೬೫.೮–೪೫೩.೬೪ ಚ.ಮೀ. ಅಳತೆಯ ಈ ದೊಡ್ಡ ಮಸೀದಿಯ ಶಿಲ್ಪಿ ಇರಾನ್ ದೇಶದ ಕ್ವಾಜಿಪ್ರಾಂತ್ಯದಿಂದ ಬಂದ ರಫಿ ಎಂಬಾತನೆಂದು ತಿಳಿದು ಬಂದಿದೆ. ಒಳಹಜಾರದಲ್ಲಿ ಉದ್ದಗಲಗಳಲ್ಲಿ ಹಬ್ಬಿರುವ ಕಮಾನುಗಂಬಗಳ ಅಂಕಣಗಳಿರುವುದು ಇದರ ವೈಶಿಷ್ಟ್ಯ. ಒಂದೊಂದು ಅಂಕಣದ ಮೇಲೆಯೂ ಒಂದೊಂದು ಗುಮ್ಮಟವಿದೆ. ಕಮಾನುಗಂಬಗಳು ಹೆಚ್ಚು ಎತ್ತರವಾಗಿಲ್ಲ. ಆದರೆ ಪ್ರಾರ್ಥನಾಮಂದಿರದ ಕಮಾನುಗಳು ಇವುಗಳಿಗಿಂತ ಎತ್ತರವಾಗಿದ್ದು ಆ ಅಂಕಣಗಳ ಮೇಲಿನ ಹಿಂಬದಿಯ ಗುಮ್ಮಟಗಳು ಸಹ ಇತರ ಗುಮ್ಮಟಗಳಿಗಿಂತ ಎತ್ತರವಾಗಿವೆ. ಮಸೀದಿಯ ಮುಂಭಾಗ ಹಾಗೂ ಎರಡೂ ಪಕ್ಕಗಳು ತೆರೆದಿದ್ದು ಹಿಂಭಾಗದಲ್ಲಿ ಮಾತ್ರ ಮಟ್ಟ ಗೋಡೆಯಿದೆ. ಪ್ರವೇಶದ್ವಾರವಿರುವ ಪೂರ್ವಭಾಗದ ಕಮಾನಿನ ಚಾವಣಿಯ ಮೇಲೆ ಮೂಲೆಗಳಲ್ಲಿ ತೆಳುವಾದ ಅಷ್ಟೇನೂ ಎತ್ತರವಿಲ್ಲದ ಸ್ತಂಭಗೋಪುರಗಳಿವೆ. ಮಸೀದಿಯ ಮೇಲೇರಿ ಹೋಗಲು ಮುಂಭಾಗದ ಎಡಮೂಲೆಯಲ್ಲಿ ಮೆಟ್ಟಲುಗಳಿದ್ದು ಅದರ ಮೇಲೆ ನಿಂತಾಗ ಸಣ್ಣ ದೊಡ್ಡ ಗುಮ್ಮಟಗಳ ರಾಶಿಯೇ ಕಣ್ಣಿಗೆ ಬೀಳುತ್ತದೆ. ಸ್ಪೇನಿನ ಕಾರ್ಡೋವದ ಮಸೀದಿಯನ್ನು ಇದು ಹೋಲುತ್ತದೆ ಎಂಬುದು ಅಭಿಪ್ರಾಯ. ಆದರೆ ಶಿಲ್ಪಿ ಸಮಕಾಲೀನ ತುರ್ಕಿ ಮಸೀದಿಗಳ ಬೈಜಾಂಟಿನ್ ಶೈಲಿಯನ್ನು ಅನುಸರಿಸಿದ್ದಾನೆಂದು ಯಾಜ್ದಾನಿಯವರು ಸೂಚಿಸಿದ್ದಾರೆ.

ಸಮಕಾಲೀನ ಷಾ ಬಜಾರ್ ಮಸೀದಿ ಜುಮ್ಮಾಮಸೀದಿಯ ಶೈಲಿಗಿಂತ ಭಿನ್ನವಾದುದು. ಮುಂಭಾಗದಲ್ಲಿ ಕಮಾನಿನ ಪ್ರವೇಶದ್ವಾರವುಳ್ಳ ಇದರ ಎರಡೂ ಕಡೆಗಳಲ್ಲಿ ಎತ್ತರದ ಮಿನಾರ್‌ಗಳಿವೆ.

ಇದರ ಹಿಂದೆ ತೆರೆದ ಅಂಗಳ ಅದರ ಹಿಂದಕ್ಕೆ ಮುಚ್ಚಿದ ಹಜಾರ. ಇದು ಪ್ರಾರ್ಥನಾಮಂದಿರ. ೪೫.೭– ೨೧೮.೨೯ ಚ.ಕಿ.ಮೀ. ವಿಸ್ತಾರವಾಗಿದೆ. ಹಜಾರದ ಮುಂಭಾಗದಲ್ಲಿ ೧೫ ಕಮಾನುಗಳಿದ್ದು ಇದೇ ನೇರದಲ್ಲಿ ಪ್ರತಿ ಸಾಲಿನಲ್ಲೂ ಕಮಾನುಗಳು. ಇದರ ಗೋಡೆಗಳು ಒಳಬಾರದಂತೆ ತೋರುತ್ತವೆ. ಬಹಮನಿ ಅರಸರ ಮತ್ತು ಅವರ ಪರಿವಾರದವರ ಏಳು ಸಮಾಧಿಗಳ ಸಮೂಹ ಹಪ್ತುಗುಂಬಜ್. ನಾಲ್ಕು ಸಮಾಧಿಗಳು ಸುಲ್ತಾನರದು. ಮುಜಾಹಿದ್ ಹಾಗೂ ಫಿರೋಜರ ಸಮಾಧಿಗಳು ಇವುಗಳಲ್ಲಿ ಸೇರಿವೆ. ಫಿರೋಜನ ಸಮಾಧಿಯ (೪೮.೧೬–೨೩.೭೭ ಚ.ಕಿ.ಮೀ.) ಗೋಡೆಗಳು ೧೨.೮ ಮೀ. ಎತ್ತರ ಮೇಲುಗಡೆ ೯.೧೪ ಮೀ. ಎತ್ತರದ ಎರಡು ಅರ್ಧವೃತ್ತಾಕಾರದ ಗುಮ್ಮಟಗಳು. ಒಳಗಿನ ಎರಡು ಸಮಾಧಿ ಗೃಹಗಳು ಚೌಕಾಕಾರದಲ್ಲಿದ್ದು ಅವಕ್ಕೆ ಎರಡಂತಸ್ತಿನ ಅಲಂಕೃತ ಕಮಾನುಗಳಿವೆ.

ಬಿದರೆಯ ಕಟ್ಟಡಗಳಲ್ಲಿ ಅರಮನೆ ಹಾಗೂ ಗವಾನನ ಮದರಸಾ ಗಮನಾರ್ಹ ಇವುಗಳಲ್ಲಿ ಪರ್ಷಿಯನ್ ಶೈಲಿಯ ಪ್ರಭಾವ ಕಂಡುಬರುತ್ತದೆ. ಮದರಸಾವನ್ನು ೧೪೭೨ರಲ್ಲಿ ಕಟ್ಟಲಾಯಿತು. ೬೮.೪–೮೫೪.೮೬ ಚ.ಕಿ.ಮೀ. ವಿಸ್ತಾರದ ಈ ಕಟ್ಟಡದ ಸುತ್ತಲೂ ವಿದ್ಯಾರ್ಥಿಗಳಿಗೂ ಅಧ್ಯಾಪಕರಿಗೂ ಕೋಣೆಗಳ ಮಧ್ಯದಲ್ಲಿ ವಿಶಾಲವಾದ ಪ್ರಾಂಗಣ. ಕೋಟೆಯೊಳಗೆ ವ್ಯಾಸಗೃಹಗಳಾಗಿದ್ದ ತಖ್ತಮಹಲ್, ಜನಾನಾಮಹಲ್ ಕಾರಂಜಿಗಳು, ಹಮಾಮ್‌ಗಳು ಅವಶೇಷಗಳಾಗಿ ಉಳಿದಿವೆ. ಕೋಟೆ ಗುಲ್ಬರ್ಗದ ಕೋಟೆಗಿಂತಲೂ ದೊಡ್ಡದು, ಆದರೆ ವಿನ್ಯಾಸದಲ್ಲಿ ಕಟ್ಟುವಿಕೆಯಲ್ಲಿ ಹೆಚ್ಚಿನ ವಿಶೇಷಗಳೇನೂ ಇಲ್ಲ. ಇಲ್ಲಿರುವ ಬಹಮನಿಯರ ಹನ್ನೆರಡು ಸಮಾಧಿಗಳಲ್ಲಿ ಸ್ಥಳೀಯ ದಖನೀ ಶೈಲಿಯನ್ನು ಗುರುತಿಸಬಹುದು.

**ಶಿಕ್ಷಣ:**

ಬಹುಮನಿ ಸುಲ್ತಾನರು ಶಿಕ್ಷಣಕ್ಕೆ ಪ್ರೋತ್ಸಾಹಿಸಿದರು ಕಲಬುರಗಿ, ಬೀದರ್, ದೌಲತಾಬಾದ್, ಎಲಿಚಪುರ ಇಸ್ಲಾಮಿಕ್ ವಿದ್ಯಾ ಕೇಂದ್ರಗಳಾಗಿದ್ದವು. ಶಿಕ್ಷಣದ ಒಂದು ಭಾಗವಾಗಿ ಕುರಾನಿನ ಪಠಣ, ತರ್ಕಶಾಸ್ತ್ರ, ಸೂಫಿ ಪಂಥದ ತತ್ವಗಳ ಬೋಧನೆ, ಅಕ್ಷರ ಜ್ಞಾನ, ಕಾನೂನು, ಕಾವ್ಯ, ಅಲಂಕಾರ ಶಾಸ್ತ್ರಗಳನ್ನು ಬೋಧಿಸಲಾಗುತ್ತಿತ್ತು. ಮದರಸಾಗಳು ಉನ್ನತ ಶಿಕ್ಷಣ ಕೇಂದ್ರಗಳಾಗಿದ್ದವು ಮಹಮ್ಮದ್ ಗವಾನ್ ೧೪೭೨ ರಲ್ಲಿ ಸ್ಥಾಪಿಸಿದ ದಖ್ಖನ್ ಶೈಲಿಯ ಬೀದರ್ ನ ಮದರಸಾ ಮಹಾವಿದ್ಯಾಲಯ ಇದು ೨೪೨ ಅಡಿ ಉದ್ದ,೨೨೨ ಅಡಿ ಅಗಲ ಮತ್ತು ೫೬ ಅಡಿ ಎತ್ತರವಿರುವ ೩ ಅಂತಸ್ತಿನ ಕಟ್ಟಡ. ಇಲ್ಲಿ ೩೦೦೦ ಹಸ್ತಪ್ರತಿಗಳುಳ್ಳ ಗ್ರಂಥಾಲಯವಿತ್ತು. ವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ, ಮತ್ತು ಸಾಂಪ್ರದಾಯಿಕ ವ್ಯಕ್ತಿಗಳಿಗೆ ತಂಗುದಾಣವೂ ಆಗಿತ್ತು. ಇಲ್ಲಿ ಖಗೋಳಶಾಸ್ತ್ರ, ವ್ಯಾಕರಣ, ಗಣಿತ, ತರ್ಕಶಾಸ್ತ್ರ, ಇತಿಹಾಸ, ರಾಜ ನೀತಿಗಳ ಅಧ್ಯಯನ ನಡೆಯುತ್ತಿತ್ತು. ಕೆಲವರ ಪ್ರಕಾರ ಮಹ್ಮದ್ ಗವಾನ್ ಮದರಸಾದಲ್ಲಿ ವಚನ ಸಾಹಿತ್ಯವನ್ನು ಕಲಿಸಲಾಗುತ್ತಿತ್ತು ಎಂದು ಹೇಳಲಾಗುತ್ತದೆ. ಈ ಬಗ್ಗೆ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ.

**ಸಾಹಿತ್ಯ:**

ಬಹುಮನಿ ಸುಲ್ತಾನರ ಕಾಲದಲ್ಲಿ ಪರ್ಷಿಯನ್, ಅರಬಿಕ್ ಮತ್ತು ಉರ್ದು ಭಾಷೆ ಸಾಹಿತ್ಯದ ಬೆಳವಣಿಗೆಯಾಯಿತು. ಪರ್ಷಿಯನ್ ಸುಲ್ತಾನರ ಆಡಳಿತ ಭಾಷೆಯಾಗಿತ್ತು. ಖಾಜಾ ಬಂದೇನವಾಜ್ ಈ ಕಾಲದ ಖ್ಯಾತ ಸೂಫಿಸಂತ ಹಾಗೂ ಗ್ರಂಥಕಾರ ಇವರ ಅವಧಿಯಲ್ಲಿ ದಖನಿ ಭಾಷೆ ಪರಿಚಿತವಾಗಿ ಮುಂದೆ ಇದು ಉರ್ದುಭಾಷೆಯ ಬೆಳವಣಿಗೆಗೆ ಕಾರಣವಾಯಿತು. ಸ್ವತಃ ಮಹಮ್ಮದ್ ಗವಾನ್ ಪರಿಚಯ ಭಾಷೆಯಲ್ಲಿ ರಿಯಾಜ್–ಉಲ್–ಇನಷಾ ಮತ್ತು ಮನಝೀರಿಲ್–ಉಲ್–ಇನಷಾ ಎಂಬ ಕೃತಿಗಳನ್ನು ರಚಿಸಿದ್ದರು. ಸುಲ್ತಾನ್ ಹಸನ್ ಗಂಗು ಆಸ್ಥಾನದಲ್ಲಿ ಸದ್ರುಶ್ ಷರೀಫ್ ಎಂಬ ಗಣಿತಶಾಸ್ತ್ರಜ್ಞ, ಮೀರ್ ಮಹಮ್ಮದ್ ಬಕ್ಷಿ ಎಂಬ ಖಗೋಳ ತಜ್ಞ, ಹಕೀಂ ಆಲಿ ಮತ್ತು ಹಕೀಂ ನಾಸಿರುದ್ದೀನ್ ಎಂಬ ಅರಬಿ ವೈದ್ಯಶಾಸ್ತ್ರಜ್ಞರಿದ್ದರು. ಬದ್ರುದ್ದೀನ್, ಮಹಮ್ಮದ್ ಶೇಕ್, ಅಲ್ಲಾವುದ್ದೀನ್, ಖಾಜಿ ಶಿಹಾಬುದ್ದೀನ್, ಮತ್ತು ಸಾಮಾನ್ಯರ ದೊರೆ ಮತ್ತು ಗೇಸು ದರಾಜ್ ಎಂದೆ ಪ್ರಸಿದ್ಧರಾದ ಸೂಫಿಸಂತ ಖ್ವಾಜಾ ಬಂದೇ ನವಾಜ್

ಉರ್ದುವಿನ ಖ್ಯಾತ ಕವಿಗಳ ಆಗಿದ್ದರು. ಇವರು ದಕನಿ ಭಾಷೆಯಲ್ಲಿ ಗದ್ದೆ ರಚನೆ ಆರಂಭಿಸಿದ ಮೊದಲಿಗರು ಅವರು ೧೦೫ ಕೃತಿಗಳನ್ನು ರಚಿಸಿ ಪ್ರಕಟಿಸಿದ್ದಾರೆ . ಇದರಲ್ಲಿ ಷಿಖರ್ ಒ ನಾಮ ಒಂದು. ಸುಲ್ತಾನ್ ಫಿರೋಜ್ ಷಾ ಸ್ವತಃ ವಿದ್ವಾಂಸನಾಗಿದ್ದ ತನ್ನ ಆಸ್ಥಾನದಲ್ಲಿ ಕವಿಗಳಿಗೆ ಪಂಡಿತರಿಗೆ ತತ್ವಜ್ಞಾನಿ ಗಳಿಗೆ ಆಶ್ರಯ ನೀಡಿದ. ಸರ್–ಹಿಂದ್ ಪೈಜುಲ್ಲಾ ಅಂಜೂ, ಇಸ್ಲಾಖ್  ಸರ್ ಹಿಂದ್, ಮತ್ತು ಹಸನ್ ಗಿಲಾನಿ ಇವನ ಆಸ್ಥಾನದ ಗಳಾಗಿದ್ದರು ಸುಲ್ತಾನ್ ಎರಡನೇ ಮಹಮ್ಮದನು ಪಂಡಿತ ನಾಗಿದ್ದನು. ಮಧ್ಯಕಾಲೀನ ಭಾರತದಲ್ಲಿ ಮೂರು ದಶಕಗಳ ಚರಿತ್ರೆಯ ನಾಯಕ ಮಹಮ್ಮದ್ ಗವಾನ್ ಎಂಬ ಮಹಾಮಂತ್ರಿ ಸ್ವತಃ ಕವಿ ಲೇಖಕನಾಗಿದ್ದ ಆತನು ಪರ್ಷಿಯಾದ ಪ್ರಮುಖ ಕವಿ ವಿದ್ವಾಂಸರೊಂದಿಗೆ ಸ್ನೇಹ ಸಂಬಂಧ ಹೊಂದಿದ್ದ ಅವನು ತರ್ಕಶಾಸ್ತ್ರ ಗಣಿತ ವೈದ್ಯಶಾಸ್ತ್ರದಲ್ಲಿ ಪಂಡಿತನಾಗಿದ್ದ ಅಲ್ಲದೆ ಭಾಷೆಯಲ್ಲಿ ರಿಯಾಜ್–ಉಲ್–ಇನ್ಶಾ, ಮನಜಿರುಲ್ ಇನ್ಶಾ, ದಿವಾನ್–ಇ–ಆಷರ್ ಎಂಬ ಕೃತಿಗಳನ್ನು ರಚಿಸಿದನು. ಇದಲ್ಲದೆ ಶಾಮಿರಂಜಿಯ ಖುಷ್ ನಾಮ ಮತ್ತು ಖುಷ್ ನಗಜ್, ಹಸನ್ ಶಾಕೀಯ ಫತನಾಮ, ಅಬ್ದುಲ್ಲಾನ ಇಬ್ರಾಹಿಂ ನಾಮ, ಫಿರೋಜ್ ಬದ್ರ ಬಿದ್ರಿಯ ಪೀರತ್ ನಾಮ, ಮುಲ್ಲಾನ ಸರತಿಯ ಆಲಿ ನಾಮ, ಮುಲ್ಲಾ ಹರವಿ, ಹಕಿಂ ತಬ್ರಿಜಿ, ಹತಿಂ ಶಿರಾಜ್, ಮುಂತಾದವರು ಪರ್ಷಿಯನ್ ಭಾಷೆಯಲ್ಲಿ ಕೃತಿಗಳನ್ನು ರಚಿಸಿದರು.

**ಸೈನ್ಯಾಡಳಿತ:**

ಸುಲ್ತಾನರ ಆಳ್ವಿಕೆಯಲ್ಲಿ ನಾಲ್ಕು ಬಗೆಯ ಸೈನಿಕ ವರ್ಗಗಳು ಇದ್ದವು. ೧.ಖಾಯಂ ಸೈನ್ಯ, ೨.ಯುದ್ಧಕಾಲದಲ್ಲಿ ನೇಮಿಸಿಕೊಳ್ಳುತ್ತಿದ್ದ ಸೈನ್ಯ.೩. ಯುದ್ಧಕ್ಕಾಗಿ ಸೇರಿಕೊಂಡ ಸೈನ್ಯ ೪. ಸುಲ್ತಾನ ಹಾಗೂ ಕೋಟೆಯ ಕಾವಲು ಪಡೆಗಳು. ಪದಾತಿ, ಅಶ್ವದಳ, ಗಜದಳ ಮತ್ತು ಸಿಡಿಮದ್ದು ಪಡೆಗಳು ಸೈನ್ಯದ ಮುಖ್ಯ ವಿಭಾಗಗಳಾಗಿದ್ದವು. ಅಮೀರ್–ಉಲ್–ಉಮ್ರಾ ಸೈನ್ಯದ ಮಹಾದಂಡನಾಯಕ ನಾಗಿದ್ದನು. ಪ್ರಥಮ ಬಾರಿಗೆ ಸುಲ್ತಾನರ ಕಾಲದಲ್ಲಿ ದಖನಿಗೆ ಬಂದೂಕು ಸಿಡಿಮದ್ದು ಬಳಕೆಯ ಪರಿಚಯವಾಯಿತು.

**ಕಂದಾಯ ವ್ಯವಸ್ಥೆ:**

ಭೂಕಂದಾಯ ರಾಜ್ಯದ ಮುಖ್ಯ ಆದಾಯದ ಮೂಲವಾಗಿತ್ತು. ಉತ್ಪನ್ನದ ೧/೬ ಅಥವಾ ೧೩ರಿಂದ ೧೨ ಭಾಗದ ಭಾಗದಷ್ಟನ್ನು ಭೂ ಕಂದಾಯ ರೂಪದಲ್ಲಿ ಮಾಡಲಾಗುತ್ತಿತ್ತು. ಕಂದಾಯವನ್ನು ಧಾನ್ಯ ಇಲ್ಲವೇ ಹಣದ ರೂಪದಲ್ಲಿ ಕೊಡಬಹುದಿತ್ತು. ಭೂಕಂದಾಯದ ಜೊತೆಗೆ ವೃತ್ತಿ, ವರಮಾನ, ಅರಣ್ಯ, ಗಣಿ, ಮಾರಾಟ, ಗಂಡ, ಯುದ್ಧ ತೆರಿಗೆ, ಮುಂತಾದ ೫೦ ಬಗೆಯ ತೆರಿಗೆಗಳು ಇದ್ದು ಬಂದ ಆದಾಯವನ್ನು ಅರಮನೆ, ಯುದ್ಧ, ಅಂಗರಕ್ಷಕರು, ಕೋಟೆ ಮತ್ತು ಇತರ ಕಟ್ಟಡಗಳ ನಿರ್ಮಾಣಕ್ಕೆ ಬಳಕೆ ಮಾಡಲಾಗುತ್ತಿತ್ತು. ಮಹಮ್ಮದ್ ಗವಾನ್ ಕ್ರಮಬದ್ಧ ಭೂಮಾಪನ ಮಾಡಿಸಿ ಭೂಮಿಯ ಫಲವತ್ತತೆಯ ಆಧಾರಿತವಾಗಿ ನೀರಾವರಿ ಭೂಮಿ, ಖುಷ್ಕಿ ಭೂಮಿ, ಬಂಜರ ಭೂಮಿ, ಥೂ ಗೋಮಾಳ ಭೂಮಿ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಿ ಕಂದಾಯ ನಿಗದಿ ಪಡಿಸುತ್ತಿದ್ದ. ಮಾಪನಕ್ಕೆ ಆತ ತೇನಾಬ್ ಎಂಬ ಕಬ್ಬಿಣದ ಸರಪಳಿಯನ್ನು ಬಳಸಿದನು. ಸುಬೇದಾರ್, ದೇಶ್ಮುಖ್ ,ದೇಸಾಯಿ ಕಂದಾಯವನ್ನು ಸಂಗ್ರಹಿಸುತ್ತಿದ್ದರು.

**ನ್ಯಾಯಾಡಳಿತ:**

ಸುಲ್ತಾನನೇ ರಾಜ್ಯದ ಸರ್ವೋಚ್ಚ ನ್ಯಾಯಾಧೀಶ ಮತ್ತು ದಂಡಾಧಿಕಾರಿ ಆಗಿದ್ದ. ಇವರ ನೆರವಿಗೆ ಸದರ್ ಎಂಬ ನ್ಯಾಯಾಧೀಶನಿದ್ದನು. ನಗರ ಮತ್ತು ಪಟ್ಟಣಗಳಲ್ಲಿ ಖಾಜಿಗಳು, ಪ್ರಾಂತ್ಯಗಳಲ್ಲಿ ತರಫ್ ದಾರರು ಗ್ರಾಮಗಳಲ್ಲಿ ಪಟೇಲ ಸ್ಥಳೀಯ ವ್ಯಾಜ್ಯಗಳನ್ನು ಬಗೆಹರಿಸುತ್ತಿದ್ದರು. ಸುಲ್ತಾನನಿಗೆ ಸುದ್ದಿ ವಾಹಕ ಗುಪ್ತಚಾರರು ಇದ್ದರು. ಡಾಕಿ ಚೌಕಿ ಎಂಬ ಅಂಚೆ ವ್ಯವಸ್ಥೆ ಸುಲ್ತಾನರ ಕಾಲದಲ್ಲಿ ಮಾಡಲಾಗಿತ್ತು. ದಂಡ,

ಸೆರೆಮನೆ ವಾಸ, ಅಂಗಾಂಗ ವಿಚ್ಛೇದನ, ಗಡಿಪಾರು, ಮರಣದಂಡನೆ ಮೊದಲಾದ ಶಿಕ್ಷೆಗಳು ಜಾರಿಯಲ್ಲಿದ್ದವು.

ಹೀಗೆ ಬಹಮನಿಗಳು ಈ ನಾಡಿಗೆ ತಮ್ಮ ಆಳ್ವಿಕೆಯ ಮೂಲಕ ಮಹತ್ವದ ಕೊಡುಗೆಗಳನ್ನು ಈ ನೆಲಕ್ಕೆ ನೀಡಿ ಹೋಗಿದ್ದಾರೆ. ಅವುಗಳನ್ನು ಮತ–ಧರ್ಮಗಳಾಚೆಗೆ ಚಾರಿತ್ರಿಕವಾಗಿ ಅವಲೋಕಿಸಬೇಕಾದ ಅವಶ್ಯಕತೆ ಇದೆ.



# ಕಲ್ಯಾಣ ಕರ್ನಾಟಕದ ಅಮೂರ್ತ ಪರಂಪರೆಗಳಲ್ಲಿ ವಾರಕರಿ ಸಂಪ್ರದಾಯ ಮತ್ತು ಆಚರಣೆ : ಒಂದು ಅವಲೋಕನ.

**–ಶ್ರೀಮತಿ ಸುಧಾ ಲಕ್ಷ್ಮಣದಾಸ್,**
ಸಂಶೋಧನಾರ್ಥಿ,
ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ,
ತುಮಕೂರು ವಿಶ್ವವಿದ್ಯಾಲಯ, ತುಮಕೂರು.

**ಪೀಠಿಕೆ.**

ಕಲ್ಯಾಣವೆಂದರೆ ಅಭಿವೃದ್ದಿ, ಪ್ರಗತಿ, ಬೆಳವಣಿಗೆ ಎಂಬ ಅರ್ಥವಿದೆ. ಕಲ್ಯಾಣ ರಾಜ್ಯವೆಂದರೆ "ಸುಖೀರಾಜ್ಯ"ದ ಪರಿಕಲ್ಪನೆಯಾಗಿದೆ. ಹೈದರಾಬಾದ್ ಪ್ರಾಂತ್ಯಕ್ಕೆ ಸೇರಿದ್ದ ಪ್ರದೇಶಗಳನ್ನೆಲ್ಲಾ ಒಟ್ಟಾಗಿ ಕಲ್ಯಾಣ ಕರ್ನಾಟಕ ಎನ್ನುವರು. ಇಲ್ಲಿನಅಭಿವೃದ್ಧಿಗೆ ಮೂರ್ತ ಪರಂಪರೆಗಳ ಕೊಡುಗೆಗಳ ಜೊತೆಗೆ ಗುರುತಿಸದ ಅನೇಕ ಅಮೂರ್ತ ಪರಂಪರೆಗಳ ಕೊಡುಗೆಗಳೂ ಸಹ ಇವೆ. ಅವುಗಳು ಆಚಾರ–ವಿಚಾರಗಳು, ಉಡುಗೆ–ತೊಡುಗೆಗಳು, ಆಹಾರಕ್ರಮ, ನಂಬಿಕೆಗಳು, ಪದ್ದತಿಗಳು, ಆಚರಣೆಗಳು ಹಾಗೂ ಪರಂಪರಾನುಗತ ಅನುಕರಣೆಗಳನ್ನು ಒಳಗೊಂಡಿವೆ. ನಾಗ, ಕೌಲ, ಜೋಗಿಕುಣಿತ, ಆರೂಢ, ನಾಥ, ಸೋಮ, ಕಪಾಲಿಕ, ಕಾಳಮುಖ ಸಂಪ್ರದಾಯಗಳಂತಹ ಭಿನ್ನ–ಭಿನ್ನ ಆಚರಣೆಗಳು, ಬೌದ್ಧಮತ್ತು ಸೂಫಿಸಂ, ದತ್ತ, ವಾರಕರಿಯಂತಹ ಪರಂಪರೆಗಳಿವೆ. ಇವುಗಳು ಹಬ್ಬ–ಹರಿದಿನಗಳಲ್ಲಿ, ಜಾತ್ರಾ ಸಮಯಗಳಲ್ಲಿ ಮೇಳಗಳಲ್ಲಿ ಹಾಗೂ ಉತ್ಸವಗಳಲ್ಲಿ ಹೆಚ್ಚಾಗಿ ಕಂಡು ಬರುತ್ತವೆ.

ವಾರಕರಿ ಸಂಪ್ರದಾಯವು ಇಲ್ಲಿನ ಆಚರಣೆಗಳಲ್ಲಿ ಒಂದು. 'ವಾರೀ' ಎಂದರೆ 'ಯಾತ್ರೆ', 'ಕರೀ' ಎಂದರೆ ಹಿಂದಿಯಲ್ಲಿ 'ಕರ್ನೇವಾಲ' (ಅದನ್ನೇ ಮಾಡುವವನು) ಕನ್ನಡದಲ್ಲಿ"ಯಾತ್ರೆ ಮಾಡುವವನು"ಎಂದು ಹೆಸರು. ನಿರ್ದಿಷ್ಟ ದಿನಗಳಲ್ಲಿ ರಾಯಚೂರು, ಗುಲ್ಬರ್ಗ, ಗದಗ್, ಬಳ್ಳಾರಿ, ಬೀದರ್, ಯಾದಗಿರಿಹೆಚ್ಚಾಗಿ ಉತ್ತರಕರ್ನಾಟಕದ ಕೆಲವು ಆಸ್ತಿಕ ಜನರುಕೃಷ್ಣಾಮತ್ತು ಭೀಮಾನದಿಯ ಭಾಗದಲ್ಲಿ ಒಟ್ಟಾಗಿ ಸೇರಿಕೊಂಡು ಮಹಾರಾಷ್ಟ್ರದ ಚಂದ್ರಭಾಗ ನದಿಯ ದಂಡೆಯಲ್ಲಿರುವ ವಿಠ್ಠಲನ ದೇವಾಲಯದವರೆಗೂ ಕಾಲುನಡಿಗೆಯಲ್ಲಿಯೇ ಸಾಗುತ್ತಾ, ದಾರಿಯಲ್ಲಿ ವಿಷ್ಣು ಪಾರಮ್ಯದ ಭಜನೆ, ಕೀರ್ತನೆ ಮತ್ತು ಅಭಂಗಗಳ ಜೊತೆಯಲ್ಲಿ ಭಾಗವತದ ಕಥೆಗಳನ್ನೂ ಹೇಳುತ್ತಾ ಸಾಗುತ್ತಾರೆ. ಇವರುಗಳನ್ನು ವಾರಕರಿಗಳು ಎಂದೂ ಭಾಗವತದ ಕಥೆಗಳನ್ನು ಹೇಳುವವರನ್ನು ಭಾಗವತರು ಎನ್ನುವರು. ವಾರಕರಿ ಸಂಪ್ರದಾಯದ ಕೀರ್ತನವು ಇಂದು ಹರಿಕಥೆಯ ವಿಧಗಳಲ್ಲಿ ಒಂದಾಗಿದೆ. ಹಾಗೂ, ಅಮೂರ್ತ ಪರಂಪರೆಗಳಲ್ಲಿಇರುವಜೀವಂತ ಪರಂಪರೆಯಾಗಿದೆ.

**ಅನುಷಂಗಿಕ ಪದಗಳು:**

ಕಲ್ಯಾಣ ಕರ್ನಾಟಕ, ಅಮೂರ್ತ ಪರಂಪರೆ, ವಾರಕರಿ ಸಂಪ್ರದಾಯ, ನಾಮಸ್ಮರಣೆ, ನಾಮಸಂಕೀರ್ತನೆ, ಕೀರ್ತನ, ಕಥಾಕೀರ್ತನ, ಹರಿಕಥಾ.

**ವಿವರಣೆ.**

ವಾರಕರಿ ಸಂಪ್ರದಾಯವು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂದ್ರಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ವಿಷ್ಣುವಿನ ಆರಾಧನೆಗೆ ಇಲ್ಲಿ ಪ್ರಾಧಾನ್ಯತೆ ಇದೆ. ಪಂಡರಾಪುರದ ವಿಠಲನಿಗೆ ಇವರು ಹೆಚ್ಚಾಗಿ ನಡೆದುಕೂಳ್ಳುತ್ತಾರೆ. ವಿಠಲನಲ್ಲಿ ಶರಣಾಗುವ ಮೂಲಕ ಮುಕ್ತಿಯನ್ನು ಪಡೆಯಲು ಸಾದ್ಯ

ಎಂಬುದು ಇವರ ನಂಬಿಕೆ. ಗುರುವಿನಿಂದ ಧೀಕ್ಷೆ ಪಡೆದ ಯಾವುದೇ ಧರ್ಮದವರೂ ಸಹ ಈ ಸಂಪ್ರದಾಯವನ್ನು ಪಾಲಿಸಬಹುದು. ಇವರಲ್ಲಿ ಹೆಣ್ಣು–ಗಂಡು, ಬಡವ–ಶ್ರೀಮಂತ, ಮೇಲು–ಕೀಳು ಜಾತಿಗಳೆಂಬ ಯಾವುದೇ ಭೇಧಭಾವ ಕಂಡುಬರುವುದಿಲ್ಲ. ಹಿಂದೂ ಮಾಸಗಳಾದ ಚೈತ್ರ, ಮಾಘ, ಆಷಾಢ ಮತ್ತುಕಾರ್ತೀಕದಲ್ಲಿ ಹೆಚ್ಚಾಗಿ ವಾರಕರೀಗಳು ಭಜನೆ ಮತ್ತುಕೀರ್ತನೆಯೊಂದಿಗೆ ವಿಷ್ಣುವಿನ ನಾಮಸ್ಮರಣೆ, ನಾಮಸಂಕೀರ್ತನೆಯೊಂದಿಗೆ ಭಾಗವತದ ಕಥೆಗಳನ್ನು ಹೇಳುತ್ತಾ ಕಾಲು ನಡಿಗೆಯಲ್ಲಿಯೇ ಕೃಷ್ಣಾನದಿ ತೀರದಿಂದ ಚಂದ್ರಭಾಗ ನದಿತೀರದ ದಂಡೆಯಲ್ಲಿರುವ ವಿಠಲನ ದರುಷನಕ್ಕೆ ಗುಂಪು ಗುಂಪಾಗಿ ಯಾತ್ರೆ ಕೈಗೂಳ್ಳುತ್ತಾರೆ. ಈ ವಾರಕರಿ ಆಚರಣೆಯು ಭಕ್ತಿಯನ್ನು ಅಭಿವ್ಯಕ್ತಗೊಳಿಸುವ ಒಂದು ವಿಧಾನವಾಗಿದೆ. ಸುಮಾರು ೧೩ ರಿಂದ ೧೭ ನೆಯ ಶತಮಾನದವರೆಗೂ ನಡೆದ ಹರಿದಾಸ ಚಳುವಳಿ ಅಥವಾ ಭಾಗವತದ ಚಳುವಳಿಗಳಿಗೆ ಇವರುಗಳ ಕೊಡುಗೆಗಳು ಸೇರಿವೆ.

ವಾರಕರಿ ಸಂಪ್ರದಾಯ ಮತ್ತುಆಚರಣೆಗೆ ಸುಮಾರು ೮೦೦ ವರುಷಗಳ ಇತಿಹಾಸವಿದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಸಂಪ್ರದಾಯದವರು ಸಂತಜ್ಞಾನೇಶ್ವರರನ್ನು ಮೊದಲ ಗುರುವೆನ್ನುವರು. ಇವರ ಕಾಲ ಕ್ರಿ.ಶ.೧೨೭೫, ಇಂದಿಗೆ ಸುಮಾರು ೭೪೬ ವರುಷಗಳು. ಪಂಡರಪುರದ ವಿಠಲನ ದೇವಾಲಯವನ್ನು ನಿರ್ಮಾಣ ಮಾಡಿದವರು ವಿಜಯನಗರದ ಅರಸು೨ನೇ ಪ್ರೌಢದೇವರಾಯ.ಕ್ರಿ.ಶ. ೧೪೨೨–೧೪೪೬ ಗುಡಿಯ ನಿರ್ಮಾಣವಾಗಿ ಸುಮಾರು ೫೭೩ ವರುಷಗಳಾಗಿವೆ. ಹಂಪಿಯಲ್ಲಿರುವ ವಿಜಯವಿಠಲನ ಗುಡಿಯಲ್ಲಿ ಇಂದು ಮೂಲ ವಿಠಲನಮೂರ್ತಿ ಇಲ್ಲ. ಒಂದುಐತಿಹ್ಯದ ಪ್ರಕಾರ ವಿಜಯನಗರದಅರಸುಕೃಷ್ಣದೇವರಾಯರುಯವನರ ಧಾಳಿಯಿಂದ ಕಾಪಾಡಲು ಪಂಡರಾಪುರದ ವಿಠಲನಮೂರ್ತಿಯನ್ನು ವಿಜಯನಗರಕ್ಕೆ ತಂದು ಪ್ರತಿಸ್ಥಾಪಿಸಿದರು ಎನ್ನುವರು. (ಕ್ರಿ.ಶ. ೧೫೦೯–೧೫೨೯ ರಕೃಷ್ಣದೇವರಾಯರಿಗೂ ಹಿಂದೆಯೇ ವಿಜಯವಿಠಲನ ಗುಡಿ ನಿರ್ಮಾಣವಾಗಿದೆ) ಕಾಲಾನಂತರದಲ್ಲಿ ವಿಜಯನಗರವು ಯವನರ ಧಾಳಿಗೊಳಗಾದಾಗ ಅದನ್ನು ಭಾನುದಾಸ ಎಂಬ ವಾರಕರಿಯು ಪಂಡರಾಪುರದಲ್ಲಿ ಪ್ರತಿಸ್ಥಾಪನೆ ಮಾಡಿದನೆಂದು ಜನರು ನಂಬುತ್ತಾರೆ. ಈ ವಿವರಕ್ಕೆ ಯಾವುದೇ ಸ್ಪಷ್ಟದಾಖಲೆಗಳು ದೊರೆತಿಲ್ಲ.

ಸಂತಜ್ಞಾನೇಶ್ವರರ ತಂದೆ ವಿಠಲಪಂತರು ವಿರಕ್ತರಾಗಿದ್ದು ಸಂಸಾರದಲ್ಲಿ ಆಸಕ್ತಿಯಿಲ್ಲದೆ ನಿತ್ಯಹರಿ ಸೇವೆಯಲ್ಲಿ ನಿರತರಾಗಿದ್ದರು. ಇವರು ತಮ್ಮ ತಂದೆಯನ್ನು ಕುರಿತು ಬರಿದ ಒಂದು ಅಭಂಗದಲ್ಲಿ, "ಹರಿಕಥಾ ನಾಮ ಸಂಕೀರ್ತನೆ। ಸಾಧುಸಂತಾಂ ಚೇ ದರುಷನ ಸರ್ವಕಾಳೀ। ಪಂಡರೀಚೀ ವಾರಿಆಷಾಢೀಕಾರ್ತೀಕೀ। ವಿಠಲ ಏಕಾ ಏಕೀ ಸುಖರೂಪ॥" ವಿವರಣೆ, ಪ್ರತಿದಿನವು ಹರಿಕಥೆ, ನಾಮಸಂಕೀರ್ತನೆ ಸಾಧು–ಸಂತರದರುಷನ, ಆಷಾಢ ಮತ್ತುಕಾರ್ತೀಕ ಮಾಸಗಳಲ್ಲಿ ಪಂಡರಾಪುರಕ್ಕೆ ಅಗಮಿಸುವ ಯಾತ್ರೀಕರನ್ನು(ವಾರೀಗಳುನ್ನು) ಗಮನಿಸುತ್ತಾ ವಿಠಲನ ಭಕ್ತಿಯಲ್ಲಿ ನೆಮ್ಮದಿಯನ್ನು ಕಾಣುತ್ತಿದ್ದರು ಎಂಬುದಾಗಿದೆ. ಸಂತ ಬಹಿಣಾಬಾಯಿ ತನ್ನ ಒಂದು ಅಭಂಗದಲ್ಲಿ "ವಾರಕರಿ ಭಾಗವತ ಸಂಪ್ರದಾಯದ ಮಂದಿರಕ್ಕೆ ಜ್ಞಾನೇಶ್ವರರು ಅಡಿಪಾಯವಾದರೆ, ನಾಮದೇವರು ಆ ಮಂದಿರಕ್ಕೆ ಪೂಜಾರಿಯಗಿ, ಏಕನಾಥರು ಧ್ವಜಪ್ರಾಯರಾಗಿ, ಸಂತತುಕಾರಾಮರು ಕಲಶಪ್ರಾಯರು"ಎನ್ನುತ್ತಾರೆ.

**ವಾರಕರಿಗಳ ವೇಷಭೂಷಣಗಳುಮತ್ತು ಆಚರಣೆಗಳು.**

ಕತ್ತಿನಲ್ಲಿ ತುಳಸೀಮಾಲೆ, ಕೈಯಲ್ಲಿಧ್ವಜ ಹಾಗೂ ತಾಳ, ಹಣೆಯಲ್ಲಿಗೋಪೀಚಂದನ ಮತ್ತು ಕಪ್ಪುಚುಕ್ಕಿಯನ್ನು ಮಂಗಲದ ಚಿನ್ನೆಯಾಗಿ ಧರಿಸುತ್ತಾರೆ. ರಾಮ, ಕೃಷ್ಣ, ಹರಿಇವರ ಮಂತ್ರ.ಹೆಚ್ಚಾಗಿ ಗೃಹಸ್ಥರಾಗಿದ್ದು ಸಂಸಾರದಲ್ಲಿ ನಿರ್ಲಿಪ್ತ ಭಾವ ಹೊಂದಿದವರಾಗಿರುತ್ತಾರೆ. ಲೌಕಿಕ ಜೀವನದಲ್ಲಿದ್ದೇ ಆಧ್ಯಾತ್ಮ ಸಾಧ್ಯ ಎಂಬುದು ಇವರ ನಿಲುವು. ಯಾವುದೇ ನಿರ್ಭಂದ ಇಲ್ಲದೆಯಾರು ಬೇಕಾದರು ಗುರುವಿನಿಂದ ವಾರಕರಿ ಧೀಕ್ಷೆಯನ್ನು ಪಡೆಯಬಹುದು. ಹೀಗೆ ಧೀಕ್ಷಾಬದ್ದರಾದವರಿಗೆ ದೇವರ ಸಮೀಪಕ್ಕೆ ಹೋಗುವ, ಆತನನ್ನು ಮುಟ್ಟಿ ಪೂಜಿಸುವ, ಆಡುಭಾಷೆಯಲ್ಲಿ ಅಭಂಗಗಳನ್ನು ರಚಿಸಿ ಹಾಡುವ

ಅವುಗಳನ್ನು ಜನಸಾಮಾನ್ಯರಿಗೆ ವಿವರಿಸುವ ಅಧಿಕಾರವಿದೆ. ಈ ವಿಧಾನವು ಸಂಸ್ಕೃತ ಪಂಡಿತರೂ ಸಹ ಆಡುಭಾಷೆಯ ಸಾಹಿತ್ಯ, ಸಂಗೀತಕ್ಕೆ ಮಾರುಹೋಗುವಂತೆ ಪ್ರೋತ್ಸಾಹಿಸುತ್ತಿತ್ತು. "ಗಂಗೆಯಲ್ಲಿ ಸೇರುವ ಉಪನದಿಗಳೆಲ್ಲಾ ಗಂಗೆಯೇ ಆಗುವಂತೆ" ದೇವರಿಗೆ ಭಕ್ತೀ ಮುಖ್ಯವೇ ಹೊರತು, ಜಾತಿ–ಧರ್ಮ, ಮೇಲು–ಕೀಳು, ಹೆಣ್ಣು–ಗಂಡೆಂಬ ಭೇಧ–ಭಾವಗಳಿಲ್ಲ ಎಂದುತಮ್ಮ ವಿಚಾರಗಳನ್ನು ಓವಿ, ಅಭಂಗ, ಕಠಾವ್, ದಿಂಡಿ ಹಾಗೂ ಸಾಕಿ ಹೀಗೆ ವಿವಿಧ ಛಂದಸ್ಸುಗಳಲ್ಲಿ ಕೀರ್ತನೆಗಳನ್ನು ಹಾಡುತ್ತಾ ವಿವರಿಸುವ ಮೂಲಕ ವೈಚಾರಿಕತೆಯನ್ನು ಬೆಳೆಸುವುದರಿಂದ, ಸ್ಥಳೀಯ ಭಾಷೆ ಹಾಗೂ ಸಾಹಿತ್ಯದ ಬೆಳವಣಿಗೆಯಲ್ಲಿ ಇವರಕೊಡುಗೆಯೂಇದೆ.

ಮಹಾರಾಷ್ಟ್ರದ ಮೇರೆಯಲ್ಲಿ ಇಂದು ಹರಿಕಥಾ ಪ್ರಾಕಾರವನ್ನು ನಾಲ್ಕು ವಿಧವಾಗಿ ಗುರುತಿಸಿದ್ದಾರೆ. ಅವುಗಳೆಂದರೆ, ೧.ವಾರಕರಿ ಸಂಪ್ರದಾಯದಕೀರ್ತನ ಪದ್ಧತಿ, ೨.ನಾರದೀಯ ಸಂಪ್ರದಾಯದ ಕೀರ್ತನ ಪದ್ಧತಿ, ೩.ರಾಮದಾಸೀ ಸಂಪ್ರದಾಯದ ಕೀರ್ತನ ಪದ್ಧತಿ, ೪.ರಾಷ್ಟ್ರೀಯ ಸಂಪ್ರದಾಯದಕೀರ್ತನ ಪದ್ಧತಿಗಳಾಗಿವೆ. ಉತ್ತರ ಕರ್ನಾಟಕದಲ್ಲಿ ಸಾಧುಗಳ, ಸಂತರ, ಶರಣರ ಗುರುಪರಂಪರೆಯನ್ನು ಹೆಚ್ಚಾಗಿ ಕಾಣುತ್ತೇವೆ. ಹಾಗೆಯೇ ದಕ್ಷಿಣ ಕರ್ನಾಟಕದಲ್ಲಿ ಆಚಾರ್ಯರ, ತೀರ್ಥರ, ಯತಿಗಳ, ಯತಿಪರಂಪರೆಯಿದೆ. ಗುರುಪರಂಪರೆಯಿಂದ ಬಂದವರು ಇಂದು ಅನೇಕ ಮಾರ್ಪಾಡುಗಳಿಂದ ವಾರಕರಿ ಕೀರ್ತನವನ್ನು ಒಂದು ವೇದಿಕೆಯಲ್ಲಿ ಗುಂಪಾಗಿ ನಿಂತು, ಸಮಯ ಸಂದರ್ಬಕ್ಕೆ ತಕ್ಕಂತೆ ಕಥೆಗಳನ್ನು ಆರಿಸಿಕೊಂಡು ದೇವಾಲಯಗಳು ಹಾಗೂ ಮಠಗಳಲ್ಲಿ, ಹಬ್ಬ ಹರಿದಿನ, ಜಾತ್ರೆ, ಉತ್ಸವ ಹಾಗೂ ವಿಶೇಷ ದಿನಗಳಲ್ಲಿ ವಾರ, ತಿಂಗಳುಗಳ ಕಾಲ ಕಾರ್ಯಕ್ರಮಗಳನ್ನು ನೀಡುತ್ತಾರೆ.

ಕರ್ನಾಟಕದಶ್ರೇಷ್ಠ ಹರಿದಾಸರಾದ ಪುರಂದರದಾಸರ ಆರಾಧ್ಯದೈವ ಪುರಂದರವಿಠಲ. ಇವರು ತಮ್ಮೆಲ್ಲಾ ಕೀರ್ತನೆಗಳಲ್ಲಿ ಪುರಂದರವಿಠಲ ಎಂಬ ಅಂಕಿತವನ್ನೇ ಬಳಸಿದ್ದಾರೆ. ಅನೇಕ ಬಾರಿ ಕಾಲ್ನಡಿಗೆಯಲ್ಲಿ ಪಂಡರಾಪುರಕ್ಕೆ ತೆರಳಿ ದೇವರದರುಷನ ಪಡೆದವರಾಗಿದ್ದಾರೆ. ಕನಕದಾಸರು, ಭಕ್ತಿ ಪ್ರತಿಪಾದನೆಯನ್ನು ವೈಚಾರಿಕತೆಯ ಹಿನ್ನೆಲೆಯಲ್ಲಿ ಪ್ರತಿಪಾದಿಸಿದವರು. ಇವರ ಕುಲ, ಜಾತಿಯ ನಿರಾಕರಣೆಗಳು, ಸಮಾನತೆಯ ಪ್ರತಿಪಾದನೆಗಳು, ಧಾರ್ಮಿಕ ಚಿಂತನೆಗಳು, ಮಡಿ ಮೈಲಿಗೆಯ ವಿಚಾರಗಳು ಅಂಧಶ್ರದ್ದೆಯ ಪರಿಪಾಲನೆಯ ವಿರುದ್ದದ ಸಾತ್ವಿಕ ಹೋರಾಟ, ಸಾಮಾಜಿಕ ಕಳಕಳಿಗಳೆಲ್ಲವೂ ಸಮಾಜದಅಜ್ಞಾನವನ್ನುತಿದ್ದಿಕಲ್ಯಾಣದ ಶಿಕ್ಷಣವನ್ನು ತಿಳಿಸಿಕೂಡುತ್ತವೆ.

ಹರಿದಾಸರಾದ ವಿಜಯ ೧ವಿಠ್ಠಲದಾಸರು, ಜಗನ್ನಾಥದಾಸರು, ಪ್ರಸನ್ನ ವೆಂಕಟದಾಸರು, ಕಾಖಂಡಕಿ ಮಹಿಪತಿರಾಯರು, ವಿಜಯದಾಸರು, ಗೋಪಾಲದಾಸರು, ಸುರಪುರದ ಆನಂದದಾಸರು, ಶ್ರೀರಾಮದಾಸರು ಹಾಗೂ ಇತರರನ್ನು ವಾರಕರಿಗಳು ಎಂದು ಹೇಳಲು ಆಗುವುದಿಲ್ಲ. ಇವರುಗಳು ದಾಸಕೂಟಕ್ಕೆ ಸೇರಿದ ಹರಿದಾಸರೇ ಆದರೂ ಪುಣ್ಯಕ್ಷೇತ್ರ ದರ್ಶನ ಮತ್ತು ತೀರ್ಥಯಾತ್ರೆಗಳನ್ನು ಮಾಡುತ್ತಾ ಜೀವನದ ಮೌಲ್ಯಗಳನ್ನು ತಮ್ಮ ಕಥಾ ಮತ್ತು ಕೀರ್ತನಗಳಲ್ಲಿ ಪ್ರತಿಪಾದಿಸಿದವರು. ಇವರೆಲ್ಲರೂ ವಾರಕರಿ ಸಂಪ್ರದಾಯ ಮತ್ತು ಅದರ ತತ್ವಗಳನ್ನು ಪಾಲಿಸಿಕೊಂಡು ಬಂದವರಾಗಿದ್ದಾರೆ. ಇಂದಿಗೂ ಇವರ ಪೀಳಿಗೆಯಿಂದ ಬಂದ ಅನೇಕ ಹರಿದಾಸರುಗಳು ಈ ಸಂಪ್ರದಾಯವನ್ನು ಎಲೆಮರೆಯ ಕಾಯಿಯಂತೆ ಯಾವುದೇ ಪ್ರಚಾರಗಳಿಲ್ಲದೇ ಹರಿಸೇವೆಯೇ ದಾಸರಕರ್ತವ್ಯ ಎಂದು ತಿಳಿದು ಮುಂದುವರೆಸುತ್ತಿದ್ದಾರೆ.

**ಕಾರ್ಯಕ್ರಮ ನೀಡುವಾಗಇವರುಧರಿಸುವ ವೇಷಭೂಷಣಗಳು.**

ಬಿಳಿಯ ಅಥವಾ ಖಾವಿ ಬಣ್ಣದ ನಿಲುವಂಗಿ ಹಾಗೂ ಧೋತಿಯನ್ನು ಧರಿಸಿರುತ್ತಾರೆ. ತಲೆಗೆ ಪೇಟ, ಸೊಂಟಕ್ಕೆ ರುಮಾಲನ್ನು ಬಿಗಿದಿರುತ್ತಾರೆ. ಸಣ್ಣತಂಬೂರಿ ಧರಿಸಿ ಮುಖ್ಯಕೀರ್ತನಕಾರರು ಮಧ್ಯದಲ್ಲಿ ನಿಂತಿರುತ್ತಾರೆ. ಪಕ್ಕದಲ್ಲಿ ಮೃದಂಗದವರಿದ್ದು ಹಾರ್ಮೋನಿಯಂ ಬಳಸುವುದಿಲ್ಲ. ಇವರ ಜೊತೆಗೆ ಗುಂಪಾಗಿ ಅನೇಕ ಟಾಳಕರಿಗಳು (ತಾಳದ ಜೊತೆ ಭಜನೆ ಹಾಡುವವರು) ಸುತ್ತಲೂ ನಿಂತಿರುತ್ತಾರೆ.

ನಿರೂಪಣೆಗೆ ಸಂತರ ಅಭಂಗವೊಂದನ್ನು ಆರಿಸಿಕೊಂಡು ಹಾಡುತ್ತಾ ವಿಷಯ ನಿರೂಪಣೆ ಮಾಡುತ್ತಾ ಮಧ್ಯದಲ್ಲಿ ಸಮಯ ಸಂಧರ್ಭಕ್ಕೆ ಹೊಂದುವಂತಹ ಪುರಾಣದ ಕಥಾಭಾಗವನ್ನು ಪ್ರಸ್ತುತ ಪಡಿಸುತ್ತಾರೆ. ಕಾರ್ಯಕ್ರಮಕ್ಕೆ ಮೆರುಗು ನೀಡಲು ಉಪಕಥೆಗಳನ್ನು, ಕೀರ್ತನೆಗಳನ್ನು ದಾಸರ ಪದಗಳನ್ನು ಹೆಚ್ಚಾಗಿ ಬಳಸುತ್ತಾರೆ. ತಲೆಗೆ ಬಿಳಿಯ  ಅಥವಾ ಭಗವಾಟೋಪಿಯನ್ನು ಹಾಕಲೇಬೇಕು ಮತ್ತು ಗುರುವಿನಿಂದ ಧೀಕ್ಷೆ ಪಡೆದಿರಬೇಕೆಂಬ ನಿಯಮವಿದೆ.

ಈ ವಿವರಗಳನ್ನು ಬೆಂಗಳೂರಿನ ಸಮೀಪದ ನೆಲಮಂಗಲ ವಿಶ್ವಶಾಂತಿ ಆಶ್ರಮದಲ್ಲಿ ೨೦೧೯ ಡಿಶೆಂಬರ್ ೨೧ರಲ್ಲಿ ನಡೆದ ಪುರಂದರೋತ್ಸವದಲ್ಲಿ ಕ್ಷೇತ್ರಕಾರ್ಯ ನಡೆಸಿ ವಾರಕರಿಗಳಿಂದ ವಿಷಯ ಸಂಗ್ರಹಿಸಲಾಗಿದೆ. ಕಲ್ಯಾಣ ಕರ್ನಾಟಕದ ಹರಿದಾಸರುಗಳಾದ ಸಿದ್ದೇಶ್ವರಶಾಸ್ತ್ರೀ ತೆಲ್ಲೂರು, ಗದಗ, ನೀಲಮ್ಮ ತಾಯಿ ಅಸುಂಡಿ ಸಿದ್ದಲಿಂಗನಗರ, ಗದಗ, ಶಿವರಾಜಶಾಸ್ತ್ರೀ ರಾಂಪುರ, ಸಿಂದನೂರು ಕೊಪ್ಪಳ, ಮಲ್ಲಿಕಾರ್ಜುನಶಾಸ್ತ್ರೀ ಐನಾಪುರ ಕಲ್ಬುರ್ಗಿ, ಬಸವರಾಜಶಾಸ್ತ್ರೀ ಹಿರೇಮಠ, ಷಾಪುರ ಯಾದಗಿರಿ ಜಿಲ್ಲೆ, ಹಾಗೂ ಕಲಾಶ್ರೀ ಲಕ್ಷ್ಮಣದಾಸರು, ತುಮಕೂರು ಇವರುಗಳ ಸಂದರ್ಶನ ನಡೆಸಿ ಮಾಹಿತಿ ಸಂಗ್ರಹಿಸಲಾಗಿದೆ. 'ಗದಗದ ವೀರೇಶ್ವರ ಪುಣ್ಯಾಶ್ರಮ' ಉತ್ತರ ಕರ್ನಾಟಕದ ಸಾಂಸ್ಕೃತಿಕ ಕೇಂದ್ರವಾಗಿದೆ. ಇದು ಸಂಗೀತಕ್ಷೇತ್ರವಲ್ಲದೆ.  ಕಥಾಕೀರ್ತನದ ಪರಂಪರೆಯನ್ನು ಹೊಂದಿದೆ. 'ಪುಟ್ಟರಾಜ ಗವಾಯಿಗಳು' ಸ್ವತಃ ಕಥಾಕೀರ್ತನಕಾರರಾಗಿದ್ದರು. ಇವರ ಆಶ್ರಮವು ಸಾಕಷ್ಟು ಹರಿದಾಸರನ್ನು ತಯಾರಿಸಿದೆ. 'ಇಳಕಲ್‌ಮಠ', ಹುಬ್ಬಳ್ಳಿಯ 'ಮೂರುಸಾವಿರಮಠ'ಗಳಲ್ಲಿ ೧೧ದಿನ, ಒಂದು ತಿಂಗಳು ಹಾಗೂ ವರುಷಗಳ ಕಾಲವೂ ಕಾರ್ಯಕ್ರಮಗಳು ನಡೆಯುತ್ತವೆ. ಈ ನಾಡಿನ ಅಮೂಲ್ಯ ಪರಂಪರೆಯೊಂದು ಸದ್ದಿಲ್ಲದೆ ಸಾಗುತ್ತಿದೆ.

**ಉಪಸಂಹಾರ.**

'ಪದ್ಮಪುರಾಣ'ದಲ್ಲಿ ವಾರಕರಿ ಬಗ್ಗೆ ಉಲ್ಲೇಖ ಸಿಗುತ್ತದೆ. ಇದನ್ನು 'ಪಾಲ್ಕೀಯಾತ್ರೆ'ಎಂದೂ ಸಹ ಕರೆಯುವರು. ಹರಿದಾಸರು ಗುಂಪು ಗುಂಪಾಗಿ ಸಾಗುವ ಈ ದಾರಿಗೆ 'ಪಾಲ್ಕೀಮಾರ್ಗ' ಎನ್ನುವರು. ಇಂದು ಭಾರತದಾದ್ಯಂತದ ಸಂತರು ಕಾಲುನಡಿಗೆಯಲ್ಲಿಯೇ ವಿಶೇಷ ದಿನಗಳಲ್ಲಿ ಪಂಡರಾಪುರಕ್ಕೆ ಬರುತ್ತಾರೆ. ಬಿಹಾರ, ಬಂಗಾಲ, ಒರಿಸ್ಸಾ, ಕಾಶ್ಮೀರ ಹಾಗೂ ಗುಜರಾತಿನ ಅನೇಕ ಪಂಥದ ಸಾಧುಸಂತರು ಈ ಸಂಪ್ರದಾಯವನ್ನು ಅನುಸರಿಸುತ್ತಾರೆ. ಕೇಂದ್ರ ಸಾರಿಗೆ ಇಲಾಖೆಯು ಕಾಲುನಡಿಗೆಯಲ್ಲಿ ಬರುವ ವಾರಕರಿಗಳಿಗೆ ಅನುಕೂಲವಾಗಲಿ ಎಂದು ಪುಣೆಯಿಂದ ಪಂಡರಾಪುರದವರೆಗೂ ಎರಡು ರಾಷ್ಟ್ರೀಯ ಹೆದ್ದಾರಿಗಳಲ್ಲಿ ಪಾಲ್ಕೀ ಮಾರ್ಗಗಳನ್ನು ನಿರ್ಮಿಸಿದ್ದಾರೆ. ಸಂತಜ್ಞಾನೇಶ್ವರ ಪಾಲ್ಕೀಮಾರ್ಗವು ಪುಣೆಯ ದೀವೆಘಾಟ್‌ನಿಂದ ಮೋಹೋಲ್‌ವರೆಗೂ ೨೨೧ ಕಿ.ಮೀಗಳವರೆಗಿದೆ. ಮದ್ಯದ ೧೨ ಸೂಕ್ತಜಾಗಗಳಲ್ಲಿ ವಿಶ್ರಾಂತಿಧಾಮಗಳನ್ನೂ ನಿರ್ಮಿಸಿದ್ದಾರೆ. ಸಂತತುಕಾರಾಮ ಹೆಸರಿನ ಪಾಲ್ಕೀಮಾರ್ಗವು ಪುಣೆಯ ದೇಹುವಿನಿಂದ ಶುರುವಾಗಿ ಪಾಠಸ್‌ನಿಂದ ತೋಂಡಲೆವರಿಗೆ ೧೩೦ ಕಿ.ಮೀಗಳವರೆಗಿದೆ. ಯಾತ್ರಿಗಳಿಗಾಗಿ ೧೧ ಸೂಕ್ತಜಾಗಗಳಲ್ಲಿ ವಿಶ್ರಾಂತಿ ಧಾಮಗಳನ್ನೂ ನಿರ್ಮಿಸಿದ್ದಾರೆ. ಕೇಂದ್ರ ಸರಕಾರ ಮತ್ತು ಕೇಂದ್ರ ಸಾರಿಗೆ ಇಲಾಖೆಯು ಈ ಮೂಲಕ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಪ್ರಗತಿಯನ್ನು ಉತ್ತೇಜಿಸುತ್ತಿದೆ.

ಉತ್ತರ ಕರ್ನಾಟಕದಲ್ಲಿ ಸ್ವಲ್ಪ ಮಟ್ಟಿನ ಮಾರ್ಪಾಡುಗಳೊಂದಿಗೆ ವಾರಕರಿ ಸಂಪ್ರದಾಯದ ಕೀರ್ತನವು ಯಾವುದೇ ಹೆಚ್ಚಿನ ಪ್ರಚಾರ, ಪ್ರೋತ್ಸಾಹ ಹಾಗೂ ರಕ್ಷಣೆಗಳಿಲ್ಲದೆ ವರುಷವಿಡೀ ನಡೆಯುತ್ತಿರುತ್ತದೆ. ಸರಕಾರ, ಸಂಘ–ಸಂಸ್ಥೆಗಳು ಹಾಗೂ ಸಮುದಾಯಗಳು ಇವರುಗಳನ್ನು ಗುರುತಿಸುವ, ಅವಲಂಬಿತರ ಜೀವನವನ್ನು ಉತ್ತಮ ಪಡಿಸುವ ಮೂಲಕ ನಾಡಿನ ಅಮೂರ್ತ ಅಮೂಲ್ಯ ಪರಮಪರೆಯೊಂದನ್ನು ಕಾಯ್ದುಕೊಳ್ಳುವ ಅಗತ್ಯವಿದೆ.

**ಆಕರ ಗ್ರಂಥಗಳು.**

೧. ಬಿ.ಎಸ್.ಸ್ವಾಮಿ; ಹರಿಕಥೆ ಒಂದು ಅಧ್ಯಯನ; ಸ್ನೇಹ ಪ್ರಿಂಟರ್ಸ್, ಬೆಂಗಳೂರು–೨೦೧೨.
೨. ದತ್ತಾತ್ರೇಯ ಎಲ್. ವೇಲಣಕರ್; (೨೦೧೯–ಪ್ರಕಟಣೆಯಾಗಿಲ್ಲ), ಕಥಾಕೀರ್ತನದ ಮೇಲೆ ಭಾರತೀಯ ಶಾಸ್ತ್ರೀಯ ಸಂಗೀತದ ಪ್ರಭಾವ; ಷಡ್ಜಕಲಾಕೇಂದ್ರ, ಬೆಂಗಳೂರು.
೩. ಸೀ.ಚ.ಯತೀಶ್ವರ; ಭಾರತೀಯ ಭಕ್ತಿ ಚಳುವಳಿಗಳು; ಮಹಿಮ ಪ್ರಕಾಶನ, ಮೈಸೂರು–೨೦೧೭.
೪. ಕಾಡಶೆಟ್ಟಿಹಳ್ಳಿ ಸತೀಶ್ (ಪ್ರ.ಸಂ), ರಂಗಕೀರ್ತನ ಕರ್ನಾಟಕ ಕಲಾಶ್ರೀ ಅಭಿನಂದನಾ ಸಮಿತಿ ಬಡಗಿ ಪ್ರಕಾಶನ, ತುಮಕೂರು–೨೦೦೬.
೫. ಕೀರ್ತನಾಚಾರ್ಯ ಲಕ್ಷ್ಮಣದಾಸ್ ವೇಲಣಕರ್; ಕಥಾಕೀರ್ತನ ಶಾಸ್ತ್ರ (ಹರಿಕಥೆಯ ವಿಮರ್ಶಾತ್ಮಕ ಗ್ರಂಥ) ಷಡ್ಜಕಲಾಕೇಂದ್ರ, ಬೆಂಗಳೂರು–೨೦೧೭.
೬. Y.B.Damle; Harikatha - A study in communication", Bulletin of the Deccan College Research Institute, Volume 20th, Poona-1960.
7. http://lib.unipune.ac.in>xmiui
8. https://en.m.wikipedia.org.

**ಸಂದರ್ಶನಗಳು.**

೧. ಸಿದ್ದೇಶ್ವರಶಾಸ್ತ್ರೀ ತೆಲ್ಲೂರು, ೫ನೇ ಕ್ರಾಸ್ , "ಗುರು ಪಂಚಾಕ್ಷರಿನಗರ", ಪುಟ್ಟರಾಜ ಗವಾಯಿಗಳ ಆಶ್ರಮದ ಹತ್ತಿರ, ಗದಗ–೫೮೨ ೧೦೨
೨. ಕಲಾಶ್ರೀ ಲಕ್ಷ್ಮಣದಾಸರು, ಕಲಾಸಂಪದ, ಮಲ್ಲಸಂದ್ರ, ಮಲ್ಲಸಂದ್ರ ಅಂಚೆ, ತುಮಕೂರು–೫೭೨೧೦೭.



# ಕಲ್ಯಾಣ ಕರ್ನಾಟಕದ ಜಾತ್ರೋತ್ಸವ ಹಾಗೂ ಪ್ರದರ್ಶನ ಕಲೆಗಳು.

**–ಡಾ. ಶಿವಲೀಲಾ ವೀರಯ್ಯ,**
ಇತಿಹಾಸ ಅತಿಥಿ ಉಪನ್ಯಾಸಕರು,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಟ್ಟಗುಪ್ಪ.

**ಪೀಠಿಕೆ.**

ದೇವರು ಮನುಷ್ಯನನ್ನು ಸೃಷ್ಟಿಸಿದಂತೆ ಮನುಷ್ಯ ಕಲೆಯನ್ನು ಸೃಷ್ಟಿಸಿದ್ದಾನೆ. ಹೆತ್ತ ಮಗುವನ್ನು ಕಂಡು ಆನಂದಿಸುವ ತಾಯಿಯಂತೆ ಮಾನವ ತನ್ನ ಸೃಷ್ಟಿಯ ಕಲೆಯನ್ನು ಕಂಡು ಖುಷಿ ಪಡುತ್ತಾನೆ. **'ಕಲೆ'** ಅಭಿವ್ಯಕ್ತಿ ಮಾಧ್ಯಮದ ವಿಶಿಷ್ಟ ರೂಪ ಜನಪದ ಕಲೆಗಳು ಜನಜೀವನದ ಕನ್ನಡಿಗಳು ಬದುಕಿನ ಬರ್ಬರತೆಯನ್ನು ಜನ ಮರೆಯುವ ಸಂತಸ ಪಡುವ ಸಾಧನ ಆರ್ಥಿಕ ದೃಷ್ಟಿಕೋನಕ್ಕಿಂತಲೂ, ವೈಯಕ್ತಿಕ, ಮನರಂಜನೆಯ ಆಯಾಮವೇ ಜನಪದ ಕಲೆಗಳ ವಿಶಿಷ್ಟತೆ.

**ಕಲ್ಯಾಣ ಕರ್ನಾಟಕದ ಜಾತ್ರೋತ್ಸವ.**

ಹಿಂದುಳಿದ ಪ್ರದೇಶವೆಂದೇ ಪ್ರಖ್ಯಾತವಾದ ನಮ್ಮ ಕಲ್ಯಾಣ ಕರ್ನಾಟಕ ತನ್ನದೇ ಆದ ಐತಿಹಾಸಿಕ, ಭೌಗೋಳಿಕ ಸಾಹಿತ್ಯಿಕ ಹಿನ್ನೆಲೆ ಇದಕ್ಕಿದೆ. ನಾನಾ ಜಾತಿ–ಮತ–ಪಂಥಗಳು, ಹಲವು ಭಾಷೆಗಳ ಸಂಗಮವಾಗಿದೆ. ಶ್ರೀಮಂತ ಖನಿಜ ಸಂಪತ್ತುಗಳಿಂದ, ಫಲವತ್ತಾದ ಭೂಮಿಗುಣದಿಂದ, ಕೃಷ್ಣ–ತುಂಗಾ, ಹಿರಿಯ ನದಿಗಳಿಂದ, ಕೈಗಾರಿಕೆಗೆ ಬೇಕಾಗುವ ಕಚ್ಚಾ ವಸ್ತುಗಳಿದ್ದು, ಹೀಗೆ ಒಳ್ಳೆಯ ಭೌಗೋಳಿಕ ಹಿರಿತನ ಹೊಂದಿದೆ.

ಬೀದರಿನ ಬಿದರಿ ಕೈಗಾರಿಕೆ, ರಾಯಚೂರು, ಜಿಲ್ಲೆಯ ಕಿನ್ನಾಳದ ಗೊಂಬೆಗಳು ಹಟ್ಟಿಯ ಚಿನ್ನದ ಗಣಿ, ಶಾಹಾಬಾದದ ಹಾಗೂ ವಾಡಿಯ ಸಿಮೆಂಟ್ ಕಾರ್ಖಾನೆಗಳು ಅಂತರಾಷ್ಟ್ರೀಯ ಖ್ಯಾತಿ ಪಡೆದಿವೆ. ಇಂತಹ ವೈವಿಧ್ಯಮಯವಾದ ಹಿನ್ನಲೆ ಈ ಪ್ರದೇಶಕೆಕ ಇರುವಾಗಲೂ ಹಿಂದೂಳಿದ ಪ್ರದೇಶವೆನ್ನುವ ಗಣೆಪಟ್ಟೆ ಧರಿಸಲು ಮುಂದೆ ಬಂದ ನಾಯಕರ, ಮುಂಧೋರಣೆ, ಪರಿಶ್ರಮಗಳ ಅಭಾವವೇ ಮುಖ್ಯ ಕಾರಣವಾಗಿರಬಹುದು.

ಅಲ್ಲದೇ ನಿಜಾಮರ ಸಾಮ್ರಾಜ್ಯಶಾಹಿ ಆಡಳಿತ ನೀತಿ, ರಜಾಕಾರರ ಹಾವಳಿ & ರಾಜಕೀಯ ಧುರೀಣರ ಅಲಕ್ಷ್ಯತನದಿಂದಾಗಿ ಇದು ಕಡೆಗಣಿಸಲ್ಪಟ್ಟಿತು. ಇಲ್ಲಿ ತನಕ ಇಲ್ಲಿಯ ಅನೇಕ ಹಳ್ಳಿಗಳಲ್ಲಿ ನಾಗರಿಕತೆಯಗಾಳಿ ಅಷ್ಟಾಗಿ ಬೀಸಿಲ್ಲವಾದ್ದರಿಂದ ಜನಪದ ಸಾಹಿತ್ಯ ಸಂಪತ್ತು ಹಸಿರ ಜನಪದ ಸೊಗಡು ಇಲ್ಲಿನ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಹೆಸರಾಂತ ಕಲಾವಿದರನ್ನು ಇಲ್ಲಿ ಗುರುತಿಸಬಹುದಾಗಿದೆ.

ಜಾತ್ರಾಮಹೋತ್ಸವಗಳು ಜನಪದ ಸಾಂಸ್ಕೃತಿಕ ಪರಂಪರೆಯ ಪ್ರಮುಖ ಆಧಾರಸ್ತಂಭಗಳಾಗಿರುವುದರಿಂದ ಗ್ರಾಮೀಣ ಬದುಕಿನ ಜೀವಂತ ನಾಡಿಮಿಡಿತಗಳಾಗಿವೆ. ಸಾಮಾಜಿಕ ಧಾರ್ಮಿಕ ಹಾಗೂ ಕಲಾತ್ಮಕ ಬದುಕಿನ ಜೀವಸತ್ತ್ವ ಇಲ್ಲಿ ಹಲವು ಮುಖಗಳಲ್ಲಿ ವ್ಯಕ್ತಗೊಂಡಿರುವುದನ್ನು ಕಾಣುತ್ತೇವೆ. ಜಾತ್ರೆ ಕೇವಲ ಜನ–ದನಗಳ, ವ್ಯಾಪಾರ ವಹಿವಾಟುಗಳ ಕೇಂದ್ರವಷ್ಟೇ ಅಲ್ಲ ಅದೊಂದು ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಗಮ. ಒಂದೊಂದು ಜಾತ್ರೆಯೂ ಒಂದೊಂದು ಗ್ರಾಮದ ಗ್ರಾಮದೇವತೆಯ ಹಿನ್ನೆಲೆಯನ್ನು ಅಲ್ಲಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಒಳಗೊಂಡಿರುತ್ತದೆ.

ಜಾತ್ರೆಗಳು ಹಲವಾರು ದೃಷ್ಟಿಯಿಂದ ಹಳ್ಳಿಗರ ಜೀವನದಲ್ಲಿ ಮಹತ್ವದ ಪಾತ್ರವಹಿಸಿದೆ. ಸಾಂಸ್ಕೃತಿಕ ಹಿನ್ನೆಲೆ ಇದಕ್ಕಿದೆ. ಪ್ರತಿಯೊಂದು ಜಾತ್ರೆ ಎಲ್ಲರಿಗೂ ಬಲ ಪ್ರೀತಿ. ಬಹಳ ಆಕರ್ಷಕವಾದ ವಿಷಯ. ಅದು

ಎಲ್ಲ ಕಡೆಗೂ ಕಂಡು ಬರುವ ಎಲ್ಲರನ್ನೂ ರಂಜಿಸುವ ಸಮಷ್ಟಿ ಬದುಕಿನ ಒಂದು ಸಂಕೀರ್ಣ & ಸಾಮಾಜಿಕ ಧಾರ್ಮಿಕ ಸಂಗತಿಗಳಿಂದ ಸಮನ್ವಿತವಾದ, ಸಾಂಸ್ಕೃತಿಕ ಮೊತ್ತವಾಗಿದೆ. ಹಿಂದಿನ ಕಾಲದಲ್ಲಿ ಜಾತ್ರೆ ಜರುಗುವಾಗ ತೇರು ಎಳೆಯುವಾಗ ವೈಭವದಿಂದ ನಡೆಯುತ್ತಿತು. ಜಾತಿ–ಧರ್ಮ ಮರೆತು ಜನರು ಜಾತ್ರೋತ್ಸವದಲ್ಲಿ ಪಾಲ್ಗೊಳ್ಳುತ್ತಿದ್ದರು. ಹಿಂದೂ–ಮುಸ್ಲಿಂ ಬೌದ್ಧ–ಕ್ರೈಸ್ತರೆಂಬ ಅಳುಕು ಅವರಿಗೆ ಇರಲಿಲ್ಲ. ನಾವೆಲ್ಲರೂ ಒಂದೇ ಎನ್ನುವ ಮನೋಭಾವ ಅಂದಿನವರಲ್ಲಿ ಇತ್ತು. ಆದರೆ ಈಗ ಜನಪದ ಸಂಸ್ಕೃತಿಯ ಮೇಲೆ ರಾಜಕೀಯ ಹಾಗೂ ಅಂತರಾಷ್ಟ್ರೀಯ ಪ್ರಭಾವವುಂಟಾಗಿ ಜಾತ್ರೆಗಳ ಆಚರಣೆಯ ಸಂಖ್ಯೆಗಳು ಕಡಿಮೆಯಾಗಿದೆ. ಅದರಲ್ಲೂ ಈ ಕರೋನಾ ರೋಗ ಹರಡಿದ್ದಾಗಿನಿಂದ ಹಲವು ಜಾತ್ರೆಗಳನ್ನು ರದ್ದುಗೊಳಿಸಲಾಗಿದೆ. ಹಳ್ಳಿ–ಪಟ್ಟಣದಲ್ಲಿರುವ ದೇವರ ಮೂರ್ತಿಗಳು ಮೂಲೆ ಸೇರಿವೆ. ದೇವರ ಮೆರವಣಿಗೆ ಹೋಗಿ ಜನರ ಮೆರವಣಿಗೆಯೇ ಹೆಚ್ಚಾಗಿದೆ.

ಜಾತ್ರೆಗಳಿಂದ ಬಳಿಕ ನೂರಾರು ಕಡೆಯಿಂದ ಜನರು ಸೇರುತ್ತಾರೆ. ಎರಡು–ಮೂರು, ಏಳು, ಹತ್ತು, ಹದಿನೈದು, ಇಪ್ಪತ್ತು ದಿನ ಹಾಗೂ ತಿಂಗಳವರೆಗೆ ಜರಗುತ್ತವೆ. ಜಾತ್ರೆಯಲ್ಲಿ ಸೇರಿರುವ ಭಕ್ತರು ಮನರಂಜನೆಯನ್ನು ಅನುಭವಿಸಲು, ನೋಡಲು ಒಳ್ಳೆ ವಿಚಾರವನ್ನು ಕೇಳಲು ಹಾತ್ತೊರೆಯುತ್ತಾರೆ. ಪ್ರೇಕ್ಷಕರ ಸಮ್ಮುಖದಲ್ಲಿ ಹತ್ತಾರು ಕಲಾ ತಂಡದ ಜನರೆಲ್ಲ ಸೇರಿ ಸಂಗೀತ, ನೃತ್ಯ & ಅಭಿನಯದ ಮೂಲಕ ಹಾಡಿ–ಪಾಡಿ, ಕುಣಿದು ಕುಪ್ಪಳಿಸುವ ವಿಧಾನವೇ "ಪ್ರದರ್ಶನ ಕಲೆ".

ಈ ಪ್ರದರ್ಶನ ಕಲೆ ಭಜನೆ, ಡೊಳ್ಳು, ಪ್ರರವಂತಿಕೆ ನಂದಿಕೋಲು, ಕೋಲಾಟ ಹಲಗೆ ಮುಂತಾದ ಕಲೆಗಳ ಪ್ರದರ್ಶನದ ವ್ಯಾಪ್ತಿಗೆ ಒಳಪಡುತ್ತವೆ.

ಈ ಜಾನಪದ ಪ್ರದರ್ಶನ ಕಲೆಗಳು ಮನುಷ್ಯನಿಗೆ ಮನೋರಂಜನೆಯಲ್ಲದೆ, ಮನಸ್ಸಿಗೆ ನೆಮ್ಮದಿಯನ್ನು ಕೊಡುತ್ತದೆ. ಆನರ ಮನಸ್ಸನ್ನು ಕ್ಷಣ ಮಾತ್ರದಲ್ಲಿ ದುಃಖಗಳಿಂದ ದೂರ ಮಾಡಿ ಅದನ್ನು ಸುಲಭಗೊಳಿಸಿ ಶಾಂತಿ ಸಮಧಾನ ಸಂತೃಪ್ತಿಯನ್ನು ತಂದುಕೊಡುತ್ತದೆ.

ಹೀಗಾಗಿಯೇ '<u>ಪ್ರದರ್ಶನ ಕಲೆಗಳು</u>' ಜಾತ್ರೋತ್ಸವಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿವೆ.

**ಪ್ರದರ್ಶನ ಕಲೆಗಳ ಉದ್ದೇಶ.**

ಕಲ್ಯಾಣ ಕರ್ನಾಟಕದ ಪ್ರದೇಶದ ಜಾತ್ರೆಗಳಲ್ಲಿ ಪ್ರದರ್ಶಿಸಲ್ಪಡುವ ಪ್ರದರ್ಶನ ಕಲೆಗಳು ಮೂರು ಉದ್ದೇಶಗಳಿಂದ ನೆರವೇರುತ್ತದೆ.

೧) ಮನೋರಂಜನೆಗಾಗಿ
೨) ಉಪಜೀವನಕ್ಕಾಗಿ (ವೃತ್ತಿ)
೩) ಆರಾಧನೆಯ ಹಿನ್ನೆಲೆ

ಈ ನಾಡುಗಳಲ್ಲಿ ಯಾವುದೇ ಜಾತ್ರೆ ಜರುಗಲಿ ಅಲ್ಲಿ ಒಂದಾದರೂ ಪ್ರದರ್ಶನ ಕಲೆಗಳು ಪ್ರದರ್ಶಿಸಲ್ಪಡುತ್ತವೆ. ಬೀದರ, ಕಲಬುರ್ಗಿ, ರಾಯಚೂರು ಜಿಲ್ಲೆಗಳ ಜಾತ್ರೆಗಳಲ್ಲಿ ಪ್ರದರ್ಶನ ಕಲೆಗಳ ಕುರಿತಂತೆ ವಿಶೇಷವಾಗಿ ಜಾತ್ರೆಗಳಲ್ಲಿ ಪ್ರತಿನಿಧಿಸುವ ಪ್ರಮುಖ ಜನಪದ ಪ್ರದರ್ಶನ ಕಲೆಗಳು ಈ ಕೆಳಗಿನಂತಿವೆ.

ಆನಪದರ ಮನಸ್ಸಿನಲ್ಲಿದ್ದ ಬೇಸರವನ್ನು ದೂರ ಮಾಡಲು ತಮ್ಮ ತಮ್ಮ ದೇಹದಾರ್ಢ್ಯತೆಯನ್ನು ಪ್ರದರ್ಶಿಸಿ ಪ್ರಾಣಿ ಪಕ್ಷಿಗಳ ಮೂಲಕ ಅಭಿನಯ ಮಾಡಿಸಿ, ಮನಸ್ಸಿಗೆ ಸಂತೋಷವನ್ನುಂಟು ಮಾಡುವ ಕಲಾವಂತರೇ ಜನಪದ ಮನರಂಜಕರು, ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗಿ ಮನರಂಜನೆ ನೀಡುವುದೇ ಈ ಕಲಾವಿದರ ಪ್ರಧಾನ ಕಾಯಕವಾಗಿರುತ್ತದೆ. ಅವರ ಉಪ ಜೀವನದ ಕಲೆಯೇ ಇದಾಗಿರುತ್ತದೆ. ಈ ಪ್ರದೇಶದಲ್ಲಿ ಜಾತಗಾರರು, ಕೋಲೆ ಬಸವರು ಬೊಂಬಾಯಿ

ತಮಾಸೆದವರು, ಹಾಬಾಡಿಗರು, ದೊಂಬರಾಟದವರು ಭಜನಾ ಮೇಳಾ, ಹಲಗೆ ಮೇಳಾ, ಡೊಳ್ಳಿನ ಕುಣಿತ, ನಂದಿಕೋಲ ಕುಣಿತ, ಪುರುವಂತರ ಕುಣಿತ, ಬುಡಬುಡಿಕೆ, ಸುಡಗಾಡು ಸಿದ್ದರು, ಬಹುರೂಪಿ ಭೂತೇರು, ಕೋತಿ ಕುಣಿತ, ಕರಡಿ ಕುಣಿತ, ಜಾತಗಾರರು, ಬುರ್ ಬುರ್ ಪೋಚಮ್ಮ, ಕೋಲಾಟ ಮುಂತಾದವು ಪ್ರದರ್ಶನ ಕಲೆಗಳಾಗಿವೆ.

**ಜಾತಗಾರರು.**

ನಾಟಕ ಮೊದಲಾದವುಗಳಲ್ಲಿ ಅಭಿನಯಿಸುವ ವೃತ್ತಿ ಕಲಾವಿದರಿಗೆ ಜಾತಗಾರರೆಂದು ಕರೆಯುತ್ತಾರೆ. ಡೋಲಕ, ತಬಲಾ, ಪೇಟಿ ಇತ್ಯಾದಿಗಳನ್ನು ಬಾರಿಸುವ ಒಂದೇ ಕುಟುಂಬಕ್ಕೆ ಸೇರಿದ ೩–೪ ಜನ ಸೇರಿ ತಮಗೆ ಇಷ್ಟವಾದ ಪಾತ್ರಗಳನ್ನು ಹಾಕಿರುತ್ತಾರೆ. ಕುಣಿತವೇ ಅಧಿಕವಾಗಿರುತ್ತದೆ. ಹಾಡು ಸಂಭಾಷಣೆಗಳಿಂದ ಕೂಡಿರುತ್ತದೆ.

**ಭಜನಾ ಮೇಳ.**

ತಾಳ, ದವಂಡಿ, ಹಾರ್ಮೋನಿಯಂ & ತಬಲಾ ವಾದ್ಯಗಳು ಭಜನಾ ಮೇಳದಲ್ಲಿರುತ್ತವೆ. ಗುಡಿ, ಮಠಗಳಲ್ಲಿ ಪ್ರತಿ ಸೋಮವಾರ ವಿಶೇಷವಾಗಿ ಶ್ರಾವಣ ಮಾಸ & ಹಬ್ಬಹರಿ ದಿನಗಳಂದು ಭಜನೆಯನ್ನು ಮಾಡುತ್ತಾರೆ. ಶರಣರ ವಚನಗಳು, ತತ್ವಪದಗಳು, ಜಾನಪದ ಹಾಡುಗಳನ್ನು ಹಾಡುವರು. ಇಲ್ಲಿ ನಾಯಕನೊಬ್ಬನೇ ತಾಳ ಹಾಕಿ ರಾಗ ಎತ್ತುತ್ತಿದ್ದಂತೆ (ಜಯ, ಜಯ ನಮಃ ಪಾರ್ವತಿ ಪತೇ) ಹಿಮ್ಮೇಳದ ದವಂಡಿ ವಾದಕನು ರಾಣಕ್ಕೆ ತಾಳ ನೀಡುತ್ತಾನೆ. ಉದಾಃ ಕಲಬುರ್ಗಿ ಶರಣ ಬಸವೇಶ್ವರ, ಹುಮನಾಬಾದ ವೀರಭದ್ರೇಶ್ವರ, ಬೀದರಿನ ಪಾಪನಾಶಿನಿ, ಕೊಪ್ಪಳದ ಗವಿ ಸಿದ್ದೇಶ್ವರನ ಜಾತ್ರೆಯಲ್ಲಿ ವಿಶೇಷವಾಗಿ ಭಜನಾ ಮಂಡಳಿ ಭಾಗವಹಿಸುತ್ತವೆ. ಅಲ್ಲಿ ಅವರ ಕಲೆಯ ಹಿರಿಮೆ–ಗರಿಮೆಯನ್ನು ತೋರಿಸುತ್ತಾರೆ.

**ಹಲಗೆ ಮೇಳ.**

ಹಲಗೆ ಒಂದು ಚರ್ಮವಾದ್ಯ, ಇದರಲ್ಲಿ ೫ ರಿಂದ ೬ ಜನ ಕಲಾವಿದರಿರುತ್ತಾರೆ. ಇಬ್ಬರು ಹಲಗೆ ಬಾರಿಸುತ್ತಾರೆ. ಒಬ್ಬ ಟಕಾರಿಸುತಿ ಊದಿದರೆ ಇನ್ನೊಬ್ಬ ಶಹನಾಯಿ ಉಡಿಸುತ್ತಾನೆ. ಮತ್ತೊಬ್ಬ ಬಾರಿಸುವನು. ಜಾತ್ರೆಯ ಮೆರವಣಿಗೆಯಲ್ಲಿ ಹಲಗೆ ಮೇಳಗಳು ಭಾಗವಹಿಸುತ್ತವೆ.

**ಡೊಳ್ಳಿನ ಕುಣಿತ.**

"ಡೊಳ್ಳಿನ ಕುಣಿತ" ಹಲವು ದೇವಿ ಆರಾಧನೆಯ ಜನಪದ ಕಲೆಗಳಲ್ಲಿ ಒಂದು .ಕುರುಬ ಜನಾಂಗದವರು ಡೊಳ್ಳು ಕುಣಿತವನ್ನು ಚೆನ್ನಾಗಿ ಮೈಗೂಡಿಸಿಕೊಂಡು ಅದರಲ್ಲಿ ಪರಿಣತಿಯನ್ನು ಸಾಧಿಸಿದ್ದಾರೆ. ಇದರಲ್ಲಿ ೨೦ ರಿಂದ ೪೦ ಜನರಿರುವುದು ವಾಡಿಕೆ. ಗೋಲಾಕಾರವಾಗಿ ನಿಂತು ಡೊಳ್ಳು ಬಾರಿಸುತ್ತಾರೆ. ಕ್ರಮೇಣ ಶಬ್ದ ಹೆಚ್ಚಾದಂತೆ, ಕಿವಿ ಗಡಚಿಕ್ಕುತ್ತದೆ. ಶಬ್ದ ಹೆಚ್ಚಾದಂತೆ ಮತ್ತೆ ನಿಧಾನಿಸಿ ಬೆರೊಂದು ರೀತಿಯಲ್ಲಿ ಬಾರಿಸಲು ಪ್ರಾರಂಭಿಸುತ್ತಾರೆ. ಕುಣಿತದ ಮುಖ್ಯ ಹಾಡುಗಾರ ಡೊಳ್ಳು ಭಾರಿಸುತ್ತ ಹಾಡಿನ ಚರಣ ಹೇಳಿದರೆ ಹಿಂದಿನ ಮೇಳದವರು ಅದನ್ನು ಪುನರುಚ್ಚರಿಸುತ್ತಾರೆ. ಹಾಡುಗಳಲ್ಲಿ ಮಾರ್ಕಂಡೇಯ, ಪಾಂಡವರು, ಬಸವಣ್ಣ, ಬೀರಲಿಂಗೇಶ್ವರ, ಮೈಲಾರ ಲಿಂಗೇಶ್ವರ ಪ್ರಸಂಗಗಳು ಸೇರಿರುತ್ತವೆ. ತಲೆ ತಲಾಂತರಗಳಿಂದ ದೈವಿ ಆರಾಧನೆಯ ಸಾಧನವಾಗಿ ಬೆಳೆದು ಬಂದ ಈ ಡೊಳ್ಳು ಕಲೆ ಇತ್ತೀಚಿಗೆ ಮನರಂಜನೆಯ ಮಾಧ್ಯಮವಾಗಿ ಜಾತ್ರೋತ್ಸವಗಳಲ್ಲಿ ಮನ್ನಣೆ ಗಳಿಸಿದೆ. ಡೊಳ್ಳು ಹಿಡಿದಾಂಗ ಬಿಟ್ಟಾಂ ಡುಬ್ಬದುರಿ ಎಂದು ಭಾರಿಸುವಾಗ ಚಿಕ್ಕ ಮಕ್ಕಳಂತೂ ಡೊಳ್ಳಿನ ಶಬ್ದದಂತೆ ಅಳುಕಿಸುತ್ತಾರೆ. (ಭಾಲ್ಕಿ ತಾಲ್ಲೂಕಿನ ಖಾನಾಪೂರದ ಮೈಲಾರ ಲಿಂಗೇಶ್ವರ ಜಾತ್ರೆಯಲ್ಲಿ ಈ ಪರಿಪಾಠವಿದೆ)

**ನಂದಿಕೋಲ ಕುಣಿತ.**

ನಂದಿಕೋಲು ಎಂದರೆ ಧಡ್, ಧಕ್ಕ, ಧಕ್ಕು, ಧಡ್ಕೆ, ಧಡ್ಕೆ ಎಂಬ ಶಬ್ದ ನೆನಪಿಗೆ ಬರುತ್ತದೆ ಉತ್ಸಾಹಿ ಯುವಕರು ನಂದಿಕೋಲನ್ನು ಹಿಡಿದುಕೊಂಡು ಧಡ್, ಧಕ್ಕ, ಧಕ್ಕು ಧಡ್ಕೆ, ಧಡ್ಕೆ ಎಂಬ ತಮಟೆಯ ನಾದಕ್ಕೆ ಹೆಜ್ಜೆ ಹಾಕುತ್ತ ಆಗೊಮ್ಮೆ ಈಗೊಮ್ಮೆ ಕಂಬವನ್ನು ಮೇಲಕ್ಕೆತ್ತಿ ಕುಲುಕಿ ಝುಲಕ್ ಝುಲಕ್ ಸದ್ದು ಕೇಳಿಸುವಂತೆ ಮಾಡುತ್ತಾರೆ. ಇದೇ ಸಮಯದಲ್ಲಿ ಸಂಬಾಳ ನುಡಿಸುವ ಕಲಾವಿದರು ಆಕಾಶಕ್ಕೆ ಧ್ವನಿ ಮುಟ್ಟುವಂತೆ ಸಂಬಾಳ ಬಡಿಯುತ್ತಾರೆ. ಶೈವ ಸಂಪ್ರದಾಯಸ್ಥರಲ್ಲಿ ಹೆಚ್ಚು ಜನಪ್ರಿಯವಾದ ಕಲೆ ಇದಾಗಿದೆ. ಈ ಕಲೆಯ ಹುಟ್ಟಿನ ಬಗ್ಗೆ ಪೌರಾಣಿಕ ಹಿನ್ನೆಲೆಯಿದೆ. ನಂದಿಕೋಲು ಜಾತ್ರೆ ಉತ್ಸವಗಳಲ್ಲಿ ಮಾತ್ರ ಹೊರಬಂದು ಮುಂದಿನ ಜಾತ್ರೆಯವರೆಗೆ ಅದೇ ಮಠದ ಒಳಗೆ ಧೂಳು ಹೊದ್ದುಕೊಂಡು ಮೂಲೆಯಲ್ಲಿ ಕುತಿರುತ್ತದೆ. (ಬಸವಕಲ್ಯಾಣದ ಬಸವೇಶ್ವರ ಜಾತ್ರೆಯಲ್ಲಿ ನಂದಿಕೋಲು ಕುಣಿತ ವಿಶೇಷವಾಗಿರುತ್ತದೆ)

**ಪುರವಮತರ ಕುಣಿತ**.

ಪರವ ಮತರ ಕುಣಿತ ಆರಾಧನೆ ಕಲೆಗಳಲ್ಲಿ ಒಂದು. ವೀರಭದ್ರ ದೇವರ ಹಿನ್ನೆಲೆಯಲ್ಲಿಯೇ ಹುಟ್ಟಿದ ಈ ಕಲೆಯನ್ನು ದಕ್ಷಿಣ ಕರ್ನಾಟಕದಲ್ಲಿ 'ವೀರಗಾಸೆ' ಎಂದು ಕರೆಯುತ್ತಾರೆ. ಈ ನಾಡಿನಲ್ಲಿ ಪುರವಂತರೆಂದು ಕರೆಯುವುದುಂಟು. ಭೂತೆರು, ಗೊರುವರು ಚೌಡಿಕೆ ಮೇಳದವರು ಕಲೆಗಳು ದೇವತಾರಧನೆಯ ಹಿನ್ನೆಲೆಯಲ್ಲಿಯೇ ಹುಟ್ಟಿಕೊಂಡಂತೆ ಪುರುವಂತಿಕೆಯ ಒಂದು. ಬಡಿಗ-ಪಂಚಾಳ ವರ್ಗದ ಜನ ಈ ಪುರವಂತಿಕೆಯನ್ನು ಅನುವಂಶಿಕವಾಗಿ ಮೈಗೂಡಿಸಿಕೊಂಡು ಬಂದಿರುತ್ತಾರೆ. (ತಿಂಥಣಿ ಮೌನೇಶ್ವರ ಹುಮನಾಬಾದ ವೀರಭದ್ರೇಶ್ವರ ಜಾತ್ರೆಯಲ್ಲಿ ಪುರವಂತಿಕೆ ಕುಣಿತ ಅದ್ಭುತವಾಗಿರುತ್ತದೆ)

**ಬುಡಬುಡಿಕೆ**.

ಒಳೆದಾಗುತ್ತಪ್ಪ, ಒಳೆದಾಗುತ್ತವ್ವ ಎಂದು ಶುಭವನ್ನು ಹೆಳುತ್ತ ಶಕುನ ನುಡಿಯುತ್ತ ಬರುವ ಬುಡ ಬುಡಿಕೆಯವರು, ಬುಡ-ಬುಡ ಶಬ್ದ ಮಾಡುವ ಚರ್ಮವಾದ್ಯದಿಂದ ಬುಡಬುಡಿಕೆ ಎಂಬ ಹೆಸರು ಬಂದಿದೆ. ಬಲಗೈಯಿಂದ ಡಮರುಗದ ಢಂಢಂ ಶಬ್ದ ಮಾಡುತ್ತ ಎಡಗೈ ಮೇಲೆ ದಾನ ಕೊಟ್ಟವರ ಹಳೆಯ ಬಟ್ಟೆಗಳನ್ನು ಹೊದ್ದುಕೊಂಡು ಮನೆ ಮನೆಗೆ ಬಿಕ್ಷೆಗೆ ಬರುವ ಬುಡಬುಡಿಕೆಯವರು ತಲೆಗೊಂದು ರುಮಾಲ ಸುತ್ತಿರುತ್ತಾರೆ. ಅಂಗಿ, ಕರಿಕೋಟು, ಪಂಚೆ ಧರಿಸುತ್ತಾರೆ. ಬಿಕ್ಷೆ ಬೇಡುವ ಮನೆಯ ಬಾಗಿಲಿಗೆ ಹೋಗಿ ಒಳ್ಳೆಯದಾಗುತಪ್ಪ ಒಳೆದಾಗುತವ್ವ ಎಂದು ಶುಭವನ್ನು ಹೇಳುತ್ತ ಶಕುನ ನುಡಿಯುತ್ತಾರೆ. ಅವರು ನುಡಿದುದೆಲ್ಲಾ ಸತ್ಯವೇ ಎನ್ನುವ ನಂಬಿಕೆ ಜನಪರರದ್ದಾಗಿದೆ. ಅಷ್ಟೇ ಅಲ್ಲ ಬುಡಿಬುಡಿಕೆ ಹೇಳುವುದಿಲ್ಲ. ನಿಜವಾಗಿರುತ್ತದೆಂದು ನಂಬಿ ಬಿಕ್ಷೆ ನೀಡುವ ಮನೆಯವರು ಜೋಳ, ಗೋಧಿ, ಅನ್ನ, ಬಟ್ಟೆ ಇತರ ಕಾಳುಗಳನ್ನು ನೀಡಿ ಕಳಿಸುವ ಸಂಪ್ರದಾಯ ಇದೆ. ಒಟ್ಟಿನಲ್ಲಿ ಇವರು ಚತುರ ಮಾತುಗಾರರು, ಹೇಗಾದರು ಮಾಡಿ ಜೋಳಿಗೆ ತುಂಬಿಕೊಂಡು ಮುಂದಿನ ಮನೆಗೆ ಹೋಗಬೇಕೆಂಬ ಪ್ರಯತ್ನದಲ್ಲಿರುತ್ತಾರೆ. ಜಾತ್ರೋತ್ಸವಗಳು ಹ್ಬ ಹರಿದಿನಗಳ ಲಾಭವನ್ನು ಸಹ ಪಡೆದುಕೊಳ್ಳುವರು. (ಹುಮನಾಬಾದ ವೀರಭದ್ರೇಶ್ವರ ದೇವಸ್ಥಾನದ ಹತ್ತಿರ ಕಾಣುತ್ತಾರೆ).

**ಡೊಂಬರು**.

ಇವರು ಅಲೆಮಾರಿ ಜನರು. ಊರೆಂದೂರಿಗೆ ತಿರುಗಿ ಕಸರತ್ತಿನ ಆಟವಾಡಿ ಜನರಿಂದ ಹಣ, ಆಹಾರ ಸ್ವೀಕರಿಸಿ ಜೀವನ ನಡೆಸುತ್ತಾರೆ. ಇವರು ಹಳ್ಳಿ, ನಗರದ ಕೇಂದ್ರಸ್ಥಳ ಇಲ್ಲವೆ ನಡುಬೀದಿಯಲ್ಲಿ ಆಟ ಆರಂಭಿಸುತ್ತಾರೆ. ಇವರು ಗುಂಪು ೫-೬ ಜನ & ಚಿಕ್ಕ ಮಕ್ಕಳೊಂದಿಗೆ ಇರುತ್ತದೆ. ಶಕ್ತಿಯುತ ವ್ಯಾಯಾಮ ಕಸರತ್ತು ಇವರ ಆಟದ ವೈಶಿಷ್ಟ್ಯ. ಹಗ್ಗದ ಮೇಲೆ ನಡೆಯುವುದು ಲಾಗ್ ಹಾಕುವುದು, ಪಲ್ಟಿ ಹೊಡೆಯುವುದು, ಕಬ್ಬಿಣದ ಚಿಕ್ಕ ರಿಂಗಿನೊಳಗಿಂದ ಎರಡು ದೇಹಗಳು ಹೊರಬರುವುದು. ಚಕ್ರಬಾಣ ನಿರ್ಮಿಸುವುದು, ನಡು-ನಡುವೆ ಸಿನಿಮಾ ಅಥವಾ ಜನಪದ ಹಾಡು ಹಾಡುವುದು ಮಾಡುತ್ತಾರೆ. ಇಂಥ

ಕಸರತ್ತು ಹಾಡುಗಳು ನೋಡಲು ಕುತೂಹಲಕಾರಿಯಾಗಿರುತ್ತದೆ. ಆಟ ಮುಕ್ತಾಯಗೊಂಡ ಮೇಲೆ ತಟ್ಟೆ ಹಿಡಿದು ಜಾತ್ರೆಗೆ ಬಂದ ಭಕ್ತರಿಂದ ಹಣ ಸಂಗ್ರಹಿಸುವರು. (ಕಲಬುರ್ಗಿಯ ಶರಣಬಸವೇಶ್ವರ ಜಾತ್ರೆಯಲ್ಲಿ ಹಾಗೂ ವಿರಭದ್ರೇಶ್ವರ ಜಾತ್ರೆಗಳಲ್ಲಿ)

**ಹಾವಾಡಿಗರು.**

ಹಾವುಗಳನ್ನು ಆಡಿಸುವ ಅಲೆಮಾರಿ ಭಿಕ್ಷಕರಿಗೆ ಹಾವಾಡಿಗಳೆಂದು ಕರೆಯುತ್ತಾರೆ. ಕಾಡಾರಣ್ಯ ಇಲ್ಲವ ಹುತ್ತಗಳಲ್ಲಿ ಹಾವುಗಳನ್ನು ಹಿಡಿದು ತಂದು ವಿಷಹ ಹಲ್ಲುಗಳನ್ನು ಕಿತ್ತು ತಮ್ಮ ಆಟದ ಸಾಧನವನ್ನಾಗಿ ಬಳಸಿಕೊಳ್ಳುತ್ತಾರೆ. ಇವರು ವಂಶಪಾರಂಪರ್ಯವಾಗಿ ಬಂದಿರುತ್ತಾರೆ. ಪುಂಗಿ ಊದುತ್ತಿರುತ್ತಾರೆ. ಹಗ್ಗ ಹಾವಾಗಿಸುವುದು, ಮುಂಗಲಿ ಹಾವಿಗೆ ಜಗಳ ಹಚ್ಚುವುದು ಮಾಡುತ್ತಿರುತ್ತಾರೆ. ನಡುವೆ ಹಾಸ್ಯಭರಿತ ಮಾತನಾಡುವುದು. ಹಾಡು ಹಾಡುವುದು ಮಾಡಿ ಖುಷಿ ಕೊಟ್ಟು ಜಾತ್ರೆಯ ಭಕ್ತರಿಂದ ದಾನ ಪಡೆದುಕೊಳ್ಳುತ್ತಾರೆ. (ಕಲಬುರ್ಗಿ ಶರಣಬಸವೇಶ್ವರ ಹಾಗೂ ಬೀದರಿನ ಪಾಪನಾಶಿನಿ ಜಾತ್ರೆಯಲ್ಲಿ ಈ ಕಲೆ ಹೆಚ್ಚಾಗಿ ಪ್ರದರ್ಶನಗೊಳ್ಳುತ್ತದೆ) ಜಾತ್ರೆಯಲ್ಲಿ ಭಾಗವಹಿಸಿದ ಮಕ್ಕಳಂತು ಹಾವಾಡಿಗರ ಸುತ್ತುವರಿದ ಹಾವುಗಳನ್ನು ಕಣ್ಣು ತುಂಬ ನೋಡಿ, ವಿಸ್ಮಯಗೊಳ್ಳುತ್ತಾರೆ.

**ಬಹುರೂಪಿಗಳು.**

ಉಪಜೀವನ ಮಾಡಲು ವಿವಿಧ ವೇಷಗಳನ್ನು ಹಾಕಿ ಕಲೆ ಪ್ರದರ್ಶನ ಮಾಡುವವರಿಗೆ ಬಹುರೂಪಿಗಳೆಂದು ಕರೆಯುತ್ತಾರೆ. ಇವರು ಕಬ್ಬಲಿಗ ಜಾತಿಗೆ ಸೇರಿದವರಾಗಿದ್ದಾರೆ. ಬಹುರೂಪಿಗಳು ಅಲೆಮಾರಿ ವರ್ಗಕ್ಕೆ ಸೇರಿದವರಾಗಿದ್ದಾರೆ. ಸರಿಸಾರ ಸಮೇತರಾಗಿ ಊರಿಂದ ಊರಿಗೆ ತಿರುಗಿ ಕಲೆ ಪ್ರದರ್ಶನ ಮಾಡಿ ಕಾಣಿಕೆ ಹಣ ಪಡೆದುಕೊಳ್ಳುತ್ತಾರೆ. ಇವರ ಮೇಳದಲ್ಲಿ ಹನ್ನೆರಡರಿಂದ ಹದಿನಾರು ಜನರಿರುತ್ತಾರೆ. ವೇಷ ಪೋಷಾಕುಗಳು ಪಾತ್ರಕ್ಕನುಗುಣವಾಗಿ ಇರುತ್ತವೆ. ಉದಾಃ ಶಿವನ ಪಾತ್ರ ಮಾಡಬೇಕಾದರೆ ಹುಲಿ ಧರ್ಮ, ವಿಭೂತಿ, ಪ್ಲಾಸ್ಟಿಕ್ ಹಾವು ಕೈಯಲ್ಲಿ ತ್ರಿಶೂಲ ಇತ್ಯಾದಿಗಳ ಸಹಾಯ ಪಡೆದುಕೊಂಡು ಕ್ಯಾಲೆಂಡರ್ ಶಿವನಂತೆ ಕಾಣುತ್ತಾರೆ. ಪೇಟೆ, ತಬಲ, ಎಕ್ಕ, ತಾಳ, ದವಂಡಿ ಮೊದಲಾದ ವಾದ್ಯಗಳನ್ನು ಬಳಸಿಕೊಳ್ಳುತ್ತಾರೆ. ಬಹುರೂಪಿಗಳು ಹೆಚ್ಚಾಗಿ ವೀರ ಸಿಂಧೂರ ಲಕ್ಷ್ಮಣ, ಗದಾಯುದ್ಧ, ಪ್ರಸಂಗ, ಭಸ್ಮಾಸುರ, ಹರಿಶ್ಚಂದ್ರ, ವಿಶಿಷ್ಟ ವಿಶ್ವಾಮಿತ್ರ ಮುಂತಾದ ಪೌರಾಣಿಕ ಹಾಗೂ ಸಾಮಾಜಿಕ ಕಥೆಗಳಲ್ಲಿ ಬರುವ ಪಾತ್ರಗಳ ರೂಪತಾಳಿ ತಮ್ಮ ಕಲೆ ಪ್ರದರ್ಶಿಸುತ್ತಾರೆ.

ಬೀದಿ ನಾಟಕಗಳಂತೆ ಜಾತ್ರೆ ಜರುಗುವ ಕೇಂದ್ರ ಸ್ಥಳಗಳಲ್ಲಿ ಬಹುರೂಪಿ ಕಲೆ ಪ್ರದರ್ಶನ ಮಾಡುವರು.

**ಸುಡಗಾಡು ಸಿದ್ದರು.**

ಸ್ಮಶಾನದಲ್ಲಿ ವಿದ್ಯೆಯ ಸಿದ್ದಿಯನ್ನು ಪಡೆದಿರುವುದರಿಂದ ಇವರಿಗೆ ಸುಡಗಾಡು ಸಿದ್ದರೆಂದು ಹೆಸರು ಬಂದಿದೆ. ಮಂತ್ರ ಮಾಟ ಕಲಿಯಲು ಸುಡಗಾಡೆ ಸ್ಥಳ ಎಂಬುವುದು ಇವರ ಹೇಳಿಕೆಯಾಗಿದೆ. ಮಲ್ಲಾಡಿ ಚೌಡಿ ಎನ್ನುತ್ತ ಜಾದು ಮಾಡಿ ತೋರಿಸುವರು. ಜೋಳಿಗೆಯಲ್ಲಿ ಗೊಂಬೆ, ಕವಡೆ, ಮುಳ್ಳು, ಮೊಳೆ, ಚಿಂದಿ ಬಟ್ಟೆಗಳಿರುತ್ತವೆ. ಇವು ಯಕ್ಷಿಣಿ ವಿದ್ಯೆ ಪ್ರತೀಕ ಎನ್ನಲಾಗಿದೆ. ಹೀಗೆಲ್ಲಾ ಪೋಷಾಕು ಹಾಕಿಕೊಂಡು ಹೇಗಲ ಮೇಲೆ ಒಂದು ಗಳೆಗೆ ಜೊಳಿಗೆ ಸಿಕ್ಕಿಸಿಕೊಂಡು ಮನೆ-ಮನೆಗೆ ಭಿಕ್ಷೆ ಬೇಡುವರು.

ಬಸವಕಲ್ಯಾಣದ ಬಸವಣ್ಣ, ಚಾಂಗ್ಲೇರಾ, ವೀರಭದ್ರೇಶ್ವರ ಜಾತ್ರೆ ಸಂದರ್ಭದಲ್ಲಿ ಬಿಡಾರ ಹಾಕಿ ತಮ್ಮ ಕಲೆ ಪ್ರದರ್ಶನ ಮಾಡಿ ಕಾಣಿಕೆ ಸ್ವೀಕರಿಸುವ ಸಂಪ್ರದಾಯವಿದೆ.

**ಭೂತೇರು.**

ಕೈಯಲ್ಲಿ ಧೂಪ ಹಿಡಿದುಕೊಂಡು ಹಾಡುವ ಗಾಯಕರೇ ದೂಪೇರು. ಕಾಲ ಬದಲಾದಂತೆ 'ಧೂಪೇರು' ಪದ ಮಾಯವಾಗಿ 'ಭೂತೇರು' ಆಗಿರಬಹುದು ಇವರು ಎಲ್ಲಮ್ಮ ದೇವಿಯ ಭಕ್ತರು. ದಿನ ನಿತ್ಯ ಇಲ್ಲವೇ ವಿಶೇಷ ವಾರಗಳಾದ ಶುಕ್ರವಾರ ಮಂಗಳವಾರ ಊರೂರು ಕೇರಿ ಕೇರಿ ತಿರುಗಿ ಹಾಡಿ ಕುಣಿದು ಭಿಕ್ಷೆ ಮಾಡಿ ಉಪಜೀವನ ನಡೆಸುತ್ತಾರೆ.

ಐದು ಜನ ಭೂತೇರಲ್ಲಿ ಒಬ್ಬರು ಕರಡಿಗೆ ಬಟ್ಟೆಧರಿಸುತ್ತಾರೆ. ಉಳಿದವರು ಕೊರಳಲ್ಲಿ ಎಲ್ಲಮ್ಮ ತಾಯಿಯ ಪದಕ ಹಾಗೂ ಕವಡೆ ಹಾರ ಇರುತ್ತದೆ. ಕರಡಿಗೆ ಬಟ್ಟೆ ಧರಿಸಿದವರು ಕೈಯಲ್ಲಿ ದೀವಟಿಗೆ ಹಿಡಿದಿರುತ್ತಾರೆ. ಉಳಿದವರು ತುಂತುಣಿ, ಡೋಲಕ, ತಾಳೆ, ದಪ್ಪು ನುಡಿಸುತ್ತಿರುತ್ತಾರೆ.

ಈ ಭೂತೆರು ಸಂಪೂರ್ಣವಾಗಿ ಎಲ್ಲಮ್ಮ ದೇವಿಯ ಸಂಪ್ರದಾಯಕ್ಕೆ ತಮ್ಮನ್ನು ತಾವೆ ಅರ್ಪಿಸಿಕೊಂಡಿರುತ್ತಾರೆ. ದಾನದಿಂದ ಬಂದ ಹಣ. ಧವಸಧಾನ್ಯಗಳು ತಮಗೆ ಎಷ್ಟುಬೇಕೋ ಅಷ್ಟು ತಮ್ಮ ಉಪಜೀವನಕ್ಕಾಗಿ ಬಳಸಿಕೊಂಡು ಉಳಿದೆಲ್ಲಾ ದೇವಿಯ ಹೆಸರಿಗೆ ಮುಡುಪಾಗಿಡುತ್ತಾರೆ. ಬೀದರ ನಗರದ ಚೋಚಾರ ಕಾಲೋನಿ, ಮೈಲೂರು ನಗರ ವಾರುಗಳಲ್ಲಿ ವಾಸವಾಗಿದ್ದಾರೆ.

**ಕೋತಿ ಕುಣಿತ.**

ಇವರು ಅಲೆಮಾರಿ ವರ್ಗಕ್ಕೆ ಸೇರಿದವರಾಗಿದ್ದಾರೆ. ಸಾಧಾರಣ ಉಡುಪನ್ನು ಧರಿಸಿರುತ್ತಾರೆ. ಒಂದು ಕೈಯಲ್ಲಿ ಬಡಿಗೆ ಇನ್ನೊಂದು ಕೈಯಲ್ಲಿ ಕೋತಿಯ ಕೊರಳಿನ ಹಗ್ಗ ಇರುತ್ತದೆ. ಕೋತಿಗೆ ಆಟವಾಡಿಸಿ ಹಣ, ಬಟ್ಟೆ ದಾನವಾಗಿ ಪಡೆದುಕೊಂಡು ಹೋಗುವ ವರತ್ತಿ ಇವರದಾಗಿದೆ. ಕೋತಿಯ ಆಟ ಮುಗಿದ ಬಳಿಕ ಕೋತಿಯು ತಾನೇ ತಟ್ಟೆ ಹಿಡಿದುಕೊಂಡು ಹಣ ಪಡೆದುಕೊಳ್ಳುತ್ತದೆ. ಕಲಬುರ್ಗಿ ಶರಣಬಸಪ್ಪನ ಜಾತ್ರೆಯಲ್ಲಿ ಈ ಕಲಾವಿದರು ಭಾಗವಹಿಸಿ ಕೋತಿಕುಣಿತ ಕಲೆ ಪ್ರದರ್ಶಿಸುವರು.

**ಕರಡಿ ಕುಣಿತ.**

ಕರಡಿ ಕುಣಿತಕ್ಕೆ ಕಾಡಿನಲ್ಲಿರುವ ಮರಿ ಕರಡಿಯನ್ನು ಹಿಡಿದು ಮೂಗುದಾರ ಹಾಕಿ ಮನೆಯಲ್ಲಿಯೇ ಕುಣಿತದ ತರಬೇತಿಕೊಟ್ಟು ಜನರ ಮುಂದೆ ಕುಣಿಸಿ ಅವರಿಂದ ಹಣ ಪಡೆದು ಜೀವನ ನಡೆಸುತ್ತಾರೆ. ಕರಡಿ ಕೈಯಲ್ಲಿ ಬಡಿಗ ಹಿಡಿದುಕೊಂಡು ಮುದುಕನಡಿಗೆ ತೋರಿಸುತ್ತದೆ. ಹಿಂದಿನ ಕಾಲುಗಳ ಮೇಲೆ ನಿಂತು ಮುಂಗಾಲುಗಳನ್ನು ಮೇಲೆ ಮಾಡಿ ಕುಣಿಯುತ್ತದೆ. ಸುತ್ತ ಮುತ್ತ ಜನರಿಗೆ ಎರಡು ಕೈಗಳಿಂದ ನಮಸ್ಕಾರ ಮಾಡುತ್ತದೆ. ವೀರಭದ್ರೇಶ್ವರ ಜಾತ್ರೆಯಲ್ಲಿ ಈ ಕುಣಿತವಿರುತ್ತದೆ.

**ಬುರ್ ಬುರ್ ಪೋಚಮ್ಮ.**

ಡೋಲಕದ ಮೇಲೆ ಬುರ್ ಬುರ್ ಎನ್ನುವ ಶಬ್ದ ಹೊರಬರುವಂತೆ, ಬಾರಿಸುತ್ತ ಮನೆಯಿಂದ ಮನೆಗೆ ಬಿಕ್ಷೆ ಬೇಡುತ್ತ, ಉಪಜೀವನ ನಡೆಸುವ ಇವರಿಗೆ ಬುರ್-ಬುರ್ ಪೋಚಮ್ಮ ಎಂಬ ಹೆಸರು ಬಂದಿದೆ. ಪೋಚಮ್ಮ ಈ ಕಲಾವಿದರ ಧರ್ಮದೇವತೆಯಾಗಿದ್ದಾಳೆ. ದಾನ ಕೊಟ್ಟ ಹರಕು ಬರಕು ಬಟ್ಟೆ ಧರಿಸಿ, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕೈಯಲ್ಲಿ ಡೋಲಕ್ ಹಿಡಿದು ಬುರ್-ಬುರ್ ಶಬ್ದ ಮಾಡುತ್ತ ಕುಣಿಯುತ್ತ ಹಾಡು ಹೇಳುವರು

**ಕೋಲಾಟ.**

ಕೋಲುಗಳನ್ನು ಹೊಡೆಯ್ಯುತ್ತ ಸೇರಿ ಆಡುವ ಆಟವೇ ಕೋಲಾಟ. ಇದು ದೈವೀ ಆರಾಧನೆಯ ಜನಪದ ಕಲೆ, ಹಾಡು & ಸಂಗೀತಗಳನ್ನೊಳಗೊಂಡ ಆಕರ್ಷಕ ನೃತ್ಯ ಕೂಟ ನಡೆಯುತ್ತದೆ. ಲಯ

ವೈವಿಧ್ಯದಿಂದ ನಾದ ಕುಣಿತ ಗತ್ತು ಈ ಜಾತ್ರೆಯ ಕೋಲಾಟದಲ್ಲಿ ಕಂಡು ಬರುತ್ತವೆ. ರಸ್ತೆಯ ಬದಿಗಳಲ್ಲಿ "ಜನ ಮರಳೋ ಜಾತ್ರೆ ಮರಳೋ" ಎಂಬಂತೆ ಜನ ನಿಂತಿರುತ್ತಾರೆ.

ಹೀಗೆ ಹಲವು ಪ್ರದರ್ಶನ ಕಲೆ ಜಾತ್ರೆಗಳಲ್ಲಿ ಪ್ರದರ್ಶಿಸಲ್ಪಡುತ್ತವೆ.

**ಉಪಸಂಹಾರ.**

ಜಾತ್ರೆ ಎಂಬ ಕೂಡಲೇ ಮುದುಕ-ಮುದುಕಿಯರಲು ನವತಾರುಣ್ಯದ ಉತ್ಸಾಹ ತುಂಬಿ ಬರುತ್ತದೆ. ಮನ್ಯಾಗ ಕಾಡಂಗಿಲ್ಲ, ಜಾತ್ರ್ಯಾಗ ಬಿಡಾಂಗಿಲ್ಲ. ಯಾವುದೇ ಕಲೆಗೆ ಜೀವನಾನುಭವಗಳೇ ಆಕರ; ಪ್ರೇರಕ, ಜಾನಪದ ಅಗಣಿತ ಅನುಭವಗಳ ಗಣಿಯಾಗಿರುವುದರಿಂದ ವಿದ್ವಾಂಸರು ಅದು ಬರೀ ಮನರಂಜನೆಯ ಸಾಧನವಲ್ಲ ಎನ್ನುತ್ತಾರೆ. ಆನಪದ ಕಲೆ ಆಸ್ಥಾನದ ಅಲಂಕರಣ, ಅಂತಃಪುರದ ಮನರಂಜನೆ ಪ್ರತಿಷ್ಠಿತ ವರ್ಗಕ್ಕೇ ಮೀಸಲಾದ ಸೌಂದರ್ಯಾಭಿವ್ಯಕ್ತಿ ಅರ್ಥ ಸೌಂದರ್ಯಗಳ ಪ್ರದರ್ಶನವಲ್ಲ. ಅದು ಕೇವಲ ಮೋಜು, ವಿರಾಮ ಕಾಲದ ಚಟವಾಗಿ ಮೂಡಿಬಂದದ್ದೂ ಅಲ್ಲ, ಚೆಲುವಿನ ಹಂಬಲು, ಸೌಂದರ್ಯ ಸೃಷ್ಟಿಯ ಅಭೀಪ್ಸೆ ಎರಡಲ್ಲೂ ಕಾಣುವ ಸಮಾಂತರ ಅಂಶಗಳಾದರೂ ಜನಪದ ಕಲೆ ಜೀವನ ಕ್ರಿಯೆಗಳನ್ನು ಒಳಗೊಂಡು ಪರಿಚಲಿಸುವ ಸಾಂಕೇತಿಕ ಪ್ರತಿಸೃಷ್ಟಿ ಮಣ್ಣಲ್ಲಿ ಮೂಡಿ, ಒಡನೊಡನೆ ಬೆಳೆದು ಮೂರ್ತಗೊಳ್ಳುವ ನಿರಾಳ ಚೆಲುವು. ಅದು ಜನಪದರ ಉಸಿರು, ಜನಪದರ ಬೆವರು.

**ಜಾತ್ರೆಗೆ ಹೋಗಲಾಕ ಜರದ ರುಮಾಲ ಬೇಕ**
**ಮ್ಯಾಲ ಬಂಗಾರ್ದ ಕೊಡಿ ಬೇಕ; ಶರಣಪ್ಪನ**
**ತೇರು ಏಳದು ಬರಬೇಕೋ**
**ಎನ್ನುವ ಮನೋಭಾವ ಜನಪದರರದು.**

**ಆಧಾರ ಗ್ರಂಥಗಳು.**

೧. ಜನಪದ ಕಲೆ : ಅವಲೋಕನ : ಸಂಪಾದಕರು : ಡಾ.ಅಂಬಳಿಕೆ ಹಿರಿಯಣ್ಣ, ಡಾ: ಶಲಿನಿ ರಘುನಾಥ-೨೦೧೦
೨. ಲೋಕ ಸಿರಿ - ಸ್ಮರಣ ಸಂಚಿಕೆ, ಅಖಿಲ ಭಾರತ ಜಾನಪದ ಸಮ್ಮೇಳನ ಬೀದರ-೨೦೧೧
೩. ಜಾನಪದ ಸೆಲೆ-ಡಾ.ಸ.ಚಿ.ರಮೇಶ-೨೦೧೧
೪. ಜಾನಪದ ಗಂಗೋತ್ರಿ : ಡಾ.ಬಸವರಾಜ ಪೊಲೀಸ್ ಪಾಟೀಲ, ಡಾ.ಜಗನ್ನಾಥ ಹೆಬ್ಬಾಳೆ-೨೦೧೧
೫. ಲೋಕ ಜಾನಪದ - ಡಾ.ಬಸವರಾಜ ಪೊಲೀಸ್ ಪಾಟೀಲ-೨೦೧೧
೬. ಕಾಯಕ ಪರಿಣಾಮಿ - ಸಂಪಾದಕರು - ಲಿಂಗಣ್ಣ ಸತ್ಯಂಪೇಟೆ, ಎಂ.ಬಂಡೆಪ್ಪ-೧೯೯೧.



## ಸಗರನಾಡಿನ ಶ್ರೇಷ್ಠಸಂತ ತಿಂತಣಿ ಮೌನೇಶ್ವರರ ವಚನಗಳಲ್ಲಿ ಮಾನವೀಯ ಮೌಲ್ಯಗಳು.

**–ಡಾ. ಗುರುಪ್ರಕಾಶ ಹೂಗಾರ,**
ಇತಿಹಾಸ ಸಹಾಯಕ ಪ್ರಾಧ್ಯಾಪಕರು,
ಸರಕಾರಿ ಪ್ರಥಮ ದರ್ಜೆ ಕಾಲೇಜು, ಜೇವರ್ಗಿ.

ವಿಶಾಲ ಕರ್ನಾಟಕದ ಒಂದು ಭಾಗ ಸಗರನಾಡು.ಕೃಷ್ಣ–ಭಿಮೇಯರು ಮೈದೊಳೆಯುವ ಈ ನಾಡನ್ನು ಶಾಸನ, ಸಾಹಿತ್ಯ ಗ್ರಂಥಗಳಲ್ಲಿ "ಸಗರ ನಾಡು" ಎಂದುಕರೆಯಲಾಗಿದೆ. ಕನ್ನಡ ನಾಡಿನಇತಿಹಾಸ ಮತ್ತು ಸಂಸ್ಕೃತಿಯ ವಿಕಸನದಲ್ಲಿ ಸಗರನಾಡುಅಡಿಪಾಯದಂತಿದೆ. ಈ ಪ್ರದೇಶ ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವನ ನೆಲೆಯಾಗಿದ್ದು ಮೌರ್ಯ, ಶಾತವಾಹನರು, ಚಾಲುಕ್ಯರು, ರಾಷ್ಟ್ರಕೂಟರು, ಯಾದವರು, ವಿಜಯನಗರ, ಬಹಮನಿ, ಆದಲಶಾಹಿ, ಗೋಸಲ ವಂಶದಅರಸರಿಂದ ಆಳಲ್ಪಟ್ಟ ನಾಡುಇದಾಗಿದೆ. ಸಾಂಸ್ಕೃತಿಕವಾಗಿಯೂ ಸುರಪುರಅತ್ಯಂತ ಶ್ರೀಮಂತವಾಗಿದ್ದುಆದ್ಯ ವಚನಕಾರದೇವರ ದಾಸಿಮಯ್ಯ, ಆತನ ಹೆಂಡತಿ ದುಗ್ಗಳೆ, ಕೆಂಬಾವಿ ಬೋಗಣ್ಣ, ಹಾವಿನಾಳ ಕಲ್ಲಯ್ಯ, ಕಕ್ಕೇರಿಯ ಶರಣಕಕ್ಕಯ್ಯ ಮುಂತಾದ ಶರಣರಕಾರ್ಯಕ್ಷೇತ್ರಇದಾಗಿದೆ. ಇವರ ಹೆಸರಿನಲ್ಲಿ ಇಂದಿಗೂ ಪ್ರತಿವರ್ಷಜಾತ್ರೆಅತ್ಯಂತ ವಿಜೃಂಬಣೆಯಿಂದ ನಡೆಯುತ್ತದೆ. ಇವರು ಲಕ್ಷ್ಮೇಶ್ವರ, ಉಳವಿ, ವಿಜಯಪುರ, ಶಹಾಪುರ ಮುಂತಾದ ಕಡೆ ಒಡಾಡಿ ಮಹಿಮೆಗಳನ್ನು ಮೆರೆದರೆಂದು ತಿಳಿದುಬರುವುದು. ವರವಿ ಮತ್ತು ತಿಂಥಿಣಿಗಳಲ್ಲಿ ಇವರ ಹೆಸರಿನ ದೇವಾಲಯಗಳಿವೆ. ಇವು ಹಿಂದೂ–ಮುಸ್ಲಿಂ ಶೈಲಿಯಲ್ಲಿ ನಿರ್ಮಾಣವಾಗಿವೆ. ಇದೇ ಸುರಪುರತಾಲ್ಲೂಕಿನಲ್ಲಿ ಹುಟ್ಟಿ, ಬೆಳೆದು, ನೆಲೆನಿಂತು ಜಗತ್ತಿಗೆ ಕೋಮುಸೌಹಾರ್ಧದ ಸಂದೇಶವನ್ನು ಸಾರಿದ ಮೌನೇಶ್ವರರು ಇಂದಿಗೂ ಯಾದಗಿರ ಜಿಲ್ಲೆಯ ಸುರಪುರ ತಾಲೂಕಿನ ತಿಂಥಣೆಯಲ್ಲಿ ವಿರಾಜಮಾನರಾಗಿದ್ದಾರೆ.

**ಮೌನೇಶ್ವರರ ಜೀವನ:**

ಇಂದಿನ ಯಾದಗಿರಜಿಲ್ಲೆಯ ಸುರಪುರ ತಾಲ್ಲೂಕಿನ ಗೋನಾಲ ಗ್ರಾಮದಲ್ಲಿ ಮೌನೇಶ್ವರರು ಜನಿಸಿದರು. ಇವರ ತಂದೆ ಶೇಷಪ್ಪ (ಹಾವಪ್ಪ), ತಾಯಿ ಶೇಷಮ್ಮ (ಹಾವಕ್ಕ) ರಾಗಿದ್ದರೆಂದು ತಿಳಿದುಬಂದಿದೆ. ಇವರು ವೃತ್ತಿಯಿಂದ ಅಕ್ಕಸಾಲಿಗರಾಗಿದ್ದರು. ಇವರ ತಾಯಿ ಶೇಷಮ್ಮ ಗೋನಾಲದಲ್ಲಿರುವ ಆದಿಲಿಂಗೇಶ್ವರನ ಪರಮ ಭಕ್ತಳಾಗಿದ್ದಳೆಂದು ತಿಳಿದು ಬರುತ್ತದೆ. ಇವರ ಕೃಪೆಯಿಂದಲೆ ಮೌನೇಶ್ವರರು ಜನಿಸಿದರೆಂಬ ಪ್ರತೀತಿ ಇದೆ. ಮುಂದಿನ ಇವರ ಬಾಲ್ಯಜೀವನದ ಕುರಿತು ಹೆಚ್ಚಿನ ಮಾಹಿತಿ ತಿಳಿದುಬಂದಿಲ್ಲ. ಒಂದು ಮಾಹಿತಿಯ ಪ್ರಕಾರ ಇವರಿಗೆ ೮ ವರ್ಷ ತುಂಬಿದಾಗ ಇವರಿಗೆ ಉಪನಯನ ಸಂಸ್ಕಾರ ಮಾಡಿ ನಂತರ ಸುರಪುರದಗುರುಕುಲದಲ್ಲಿ ಶಿವ ಸ್ವಾಮಿ ಗುರುಗಳ ಬಳಿ ನಾಲ್ಕು ವರ್ಷ ಸಂಸ್ಕೃತ, ಉರ್ದು, ಕನ್ನಡ ಕಲಿತು ಹಲವಾರು ವಿಷಯಗಳನ್ನು ಅರಿತುಕೊಂಡರು. ನಂತರ ಸದಾನಂದ ಗುರುಗಳ ಬಳಿ ಸ್ವಲ್ಪ ಸಮಯ ಕಳೆದರು. ಮೌನೇಶ್ವರರು ವಚನವೊಂದರಲ್ಲಿತನ್ನಗುರುಮನೆ ಗೋಗಿನ ಎಂದೂ, ಗುಂಡಿ ಬಸವಯ್ಯ ತಮ್ಮ ಗುರುವೆಂದೂ ಹೇಳಿಕೊಂಡಿದ್ದಾರೆ. ಹೀಗೆ ಮೌನೇಶ್ವರರು ಕೇಲವು ಗುರುಗಳ ಬಳಿ ಸಾಧನೆ ಮಾಡಿದರು.ಮೌನೇಶ್ವರರು ಅನೇಕ ವಚನಗಳಲ್ಲಿ ಅಲ್ಲಮಪ್ರಭುವಿನ ಹೆಸರನ್ನು ಪದೇ ಪದೇ ಬಳಸಿದ್ದಾರೆ. ಇದರಿಂದ ಅಲ್ಲಮನ ಪ್ರಭಾವ ಇವರ ಮೇಲೆ ಗಾಡವಾಗಿತ್ತೆಂದು ತಿಳಿದು ಬರುತ್ತದೆ.

**ಪ್ರವಾಸ:**

ಶಿಕ್ಷಣವನ್ನು ಪೂರ್ಣಗೊಳಿಸಿದ ನಂತರ ಉತ್ತರ ಭಾರತದ ಕಾಶಿ, ಆಂದ್ರ ಪ್ರದೇಶದ ರಾಚೋಟಿಗೆ ತೆರಳಿ ವೀರಭದ್ರದೇವನಆರಾಧನೆ ಮಾಡಿದರು.ನಂತರ ಬಿಜಾಪುರ, ಶಿರಹಟ್ಟಿ, ವರವಿ, ಲಿಂಗನಬಂಡಿ, ಮುಂತಾದ ಕಡೆ ಸಂಚರಿಸಿದರು. ಇದೇ ವೇಳೆಗೆ ಅಪಾರಜ್ಞಾನ ಸಂಪಾದಿಸಿದ ಇವರು

ಜನಸಾಮಾನ್ಯರಲ್ಲಿನ ದುಖ:, ದುಮ್ಮಾನಗಳನ್ನು, ಮೂಡನಂಬಿಕೆ, ಕಂದಾಚಾರಗಳನ್ನು ಖಂಡಿಸಿ ಅವರನ್ನು ಎಚ್ಚರಿಸುವ ಕಾರ್ಯದಲ್ಲಿ ನಿರತರಾದರು. ವಿಜಯಪುರದ ಅಲಿ ಆದಿಲಶಾಹನಿಗೆ ಪಟ್ಟಕಟ್ಟುವುದರಲ್ಲಿ ಪ್ರಸಂಗವನ್ನು ವಚನದಲ್ಲಿ ಉಲ್ಲೇಖಿಸಿದ್ದಾರೆ. ಕ್ರಿ.ಶ. ೧೬೧೨ರಲ್ಲಿ ಬಿಜಾಪುರದ ಸುಲ್ತಾನರ ಸುಬೇದಾರ್ ಆಗಿದ್ದ ಅಂಕುಶ ಖಾನನು ಬಾವಿಯೊಂದನ್ನು ತೊಡಿದರು ಅದರಲ್ಲಿ ನೀರು ಬರುವುದಿಲ್ಲ. ಆಗ ಮೌನೇಶ್ವರರು ಬಾವಿಗಿಳಿದು ನೀರು ಬಂದುದರಕುರಿತ ವಿವರ ಓಂದು ವಚನದಲ್ಲಿದೆ. ಹೀಗೆ ಅನೇಕ ಪವಾಡಗಳನ್ನು ಮಾಡಿ ಜನಸಾಮಾನ್ಯರಲ್ಲಿನ ಮೌಢ್ಯತೆಯನ್ನು ಹೊಗಲಾಡಿಸಲು ಪ್ರಯತ್ನಿಸಿದರು. ಅಂದಿನ ಸಮಾಜದ ಬಹುಮುಖ್ಯ ಸಮಸ್ಯೆಯಾಗಿದ್ದ ಹಿಂದೂ–ಮುಸ್ಲಿಂರ ನಡುವಿನ ಕಂದಕವನ್ನು ಹೊಡೆದುಹಾಕಿಅವರ ಮಧ್ಯ ಐಕ್ಯತೆಯನ್ನು ತರುವ ಪ್ರಯತ್ನವನ್ನು ನಿರಂತರವಾಗಿ ಮಾಡಿದರು.

**ಕೊನೆಯ ದಿನಗಳು:**

ವರವಿಯಿಂದ ತಾವರಗೇರಿ ಮುಖಾಂತರ ಸಂಚರಿಸಿ ಕೃಷ್ಣಾ ನದಿಯ ಬಲ ದಂಡೆಯ ಮೇಲಿರುವ ತಿಂಥಣಿ ಅಗ್ರಹಾರಕ್ಕೆ ಬಂದು ನೆಲೆಸಿದರು. ತದನಂತರ ತಮ್ಮ ವರಪುತ್ರ ಗಂಗಪಯ್ಯನವರಿಗೆ ವಿದ್ಯೆದಾನ ಮಾಡಿತಮ್ಮ ಸತ್ ಸಂಪ್ರದಾಯವನ್ನು ಮುಂದುವರೆಸಿಕೊಂಡು ಹೋಗುವಂತೆ ಬೋದಿಸಿದರು. ಮಾಘ ಶುದ್ದ ಪೂರ್ಣಿಮೆ ಗುರುವಾರದಂದು ಗುಹೆ ಪ್ರವೇಶಿಸಿ ದೈವಾದಿನರಾದರು. ಇಂದಿಗೂ ಅವರು ಬಳಸಿದ ಹೂಜಿ, ಚಪಕೊಡಲಿ ಮತ್ತು ಪಾದುಕೆಗಳು ತಿಂಥಣಿಯ ಗುಹೆಯಲ್ಲಿ ನೊಡಬಹುದಾಗಿದೆ.

**ಮೌನೇಶ್ವರರ ಕಾಲ:**

ತಿಂಥಿಣಿ ಮೌನೇಶ್ವರ ಎಂಬ ಹೆಸರಿನಲ್ಲಿ ಪ್ರಸಿದ್ಧಿ ಪಡೆದಇವರು "ಬಸವಣ್ಣ" ಎಂಬುದು ಇವರ ಅಂಕಿತನಾಮವಾಗಿತ್ತು. ಹಂಪೆಯಎಮ್ಮೆ ಬಸವಣ್ಣನನ್ನು ತಮ್ಮ ವಚನದಲ್ಲಿ ನೆನೆದಿದ್ದಾರೆ. ಮತ್ತೊಂದು ವಚನದಲ್ಲಿ ಗೋಲಗೇರಿಯ ಕುರುಬ ಗೋಲ್ಲಾಳನನ್ನು ಸ್ಮರಿಸಿದ್ದಾರೆ. ಇನ್ನೊಂದು ವಚನದಲ್ಲಿ ಬಿಜಾಪುರದ ಮೊದಲನೆಯ ಆದಿಲ್ ಶಹನಿಗೆ ಪಟ್ಟಕಟ್ಟಿದ ಸಂದರ್ಭವನ್ನು ಉಲ್ಲೇಖಿಸಿದ್ದಾರೆ. ಇವುಗಳ ಆಧಾರದ ಮೇಲೆ ಇವರು ೧೬ನೆ ಶತಮಾನದ ಮಧ್ಯ ಭಾಗದಿಂದ ೧೭ನೆಯ ಶತಮಾನದ ಉತ್ತರಾರ್ಧದವರೆಗೆ ಇದ್ದಿರಬಹುದಾಗಿದೆ.

**ಮೌನೇಶ್ವರರ ವಚನಗಳಲ್ಲಿ ಮಾನವೀಯ ಮೌಲ್ಯಗಳು:**

ಮೌನೇಶ್ವರರು ಜೀವಿಸಿದ್ದ ಕಾಲ ಅತ್ಯಂತ ಸಂದಿಗ್ದವಾಗಿದ್ದಿತು. ಸಮಾಜದಲ್ಲಿ ಮೇಲು, ಕೀಳೆಂಬ ಜಾತಿ ಭೇದ, ಪುರೋಹಿತ ಶಾಹಿಯ ಡಂಭಾಚಾರಗಳು, ಪಾರಂಪರಿಕ ಮೌಢ್ಯಗಳು, ಹಿಂದೂ ಮುಸ್ಲಿಂರ ಕದನಗಳು ಮುಂತಾದವುಗಳು ಮನುಷ್ಯ ಮನುಷ್ಯರ ಮಧ್ಯ ದೊಡ್ಡ ಬಿರುಕುಗಳನ್ನು ಸೃಷ್ಟಿಸಿ ಸಾಮಾಜಿಕ ಬದುಕನ್ನು ಅಸಹನೀಯವಾಗಿಸಿದ್ದವು. ಇದರಿಂದ ಸಮಾಜದ ಸಾಮರಸ್ಯಕೆಟ್ಟು ಹೊಗಿತ್ತು. ಮೌನೇಶ್ವರರು ಇಂತಹ ವ್ಯವಸ್ಥೆಯ ವಿರುದ್ಧ ಸಿಡಿದೆದ್ದು, ಕಂಡದ್ದನ್ನು ಕಂಡಹಾಗೆ ತಮ್ಮ ವಚನಗಳ ಮೂಲಕ ಸಾರಿದರು. ಕರ್ಮ ಸಿದ್ದಾಂತವನ್ನು ಜನರಿಗೆ ಬೋಧಿಸಿ ಹಿರಿದು, ಕಿರಿದೆನ್ನದೆ ಎಲ್ಲರೂ ದುಡಿದು ಉಣ್ಣಬೇಕೆಂದು ಉಪದೇಶಿಸಿದರು. ಇವರ ವಚನಗಳು ಸಗರ ನಾಡಿನಆಡು ಭಾಷೆಯಲ್ಲಿಉರ್ದು ಭಾಷೆಯ ಸಮಿಶ್ರಣದೊಂದಿಗೆ ಬಹುತೇಕ ದ್ವಿಪದಿ, ತ್ರಿಪದಿ ಮತ್ತು ನಾಲ್ಕು ಸಾಲುಗಳಲ್ಲಿ ರಚಿಸಿದ್ದಾರೆ. ಇವರು ಸುಮಾರು ೮೫೦ ವಚನಗಳನ್ನು ಬಾಗಲಕೋಟೆಯ ಹಿರಿಯ ಸಂಶೋದಕ ಸಾಹಿತಿ ಜೀವಣ್ಣ ಮಸಳಿಯವರು ಸಂಪಾದಿಸಿದ್ದಾರೆಂದು ತಿಳಿದುಬಂದಿದೆ. ಇವರ ಕೆಲವು ವಚನಗಳು ಹೀಗಿವೆ.

**ಅಕ್ಕನಾದರೆನು, ತಂಗಿಯಾದರೇನು,**
**ಚಿಕ್ಕವನಾದರೆ ನನಗೇನು, ನಾ ನನ್ನ**
**ಲೆಕ್ಕಕ್ಕೆ ಬಂದಂತೆ ಉಸುರುವೆನು**

ಸಮಾಜದಲ್ಲಿ ದೊಡ್ಡವರು ಮಾತ್ರ ಎನಾದರು ತಿಳಿಹೇಳಬೇಕು, ಚಿಕ್ಕವರು ಸುಮ್ಮನಿರಬೇಕು ಎಂಬ ಮನೋಬಾವದ ವಿರುದ್ದ ನನಗೆ ಎನು ತಿಳಿಯುತ್ತದೆಯೋ ಅದನ್ನು ನಾನು ಯಾರಿಗೂ ಅಂಜದೆ, ಅಳುಕದೆ ಹೇಳುತ್ತೆನೆ ಎಂದು ಈ ವಚನದ ಮೂಲಕ ತಿಳಿಸಿದ್ದಾರೆ.

**ಸಾವು ನೋವುಗಳೋಂದೆ, ನೋವು ಬ್ಯಾನಿಗಳೊಂದಾದರಲ್ಲಿ,**
**ಒಂದೇ ಜನಿತಕ್ಕೆ ಸಕಲ ಕುಲವೆಲ್ಲಒಂದೆ,**
**ಇದರೊಳಗಾವುದು ಹಿರಿದುಕಿರಿದೆನ್ನಬಹುದು ಬಸವಣ್ಣ**

ಸಮಾಜದಲ್ಲಿಯಾವದು ಮೇಲಲ್ಲ, ಯಾವುದು ಕೀಳಲ್ಲ ನಾವು ಎಲ್ಲರೂಒಂದೆಎಂಬುದು ಈ ವಚನದ ಸಾರಾಂಶ.

**ಮುತ್ತು ಚಿಪ್ಪಿನೊಳು ಪುಟ್ಟುವುದು**
**ರತ್ನ ಪಾಷಣದೊಳು ಪುಟ್ಟುವುದು,**
**ಉತ್ತಮ ಶರಣರು ಹೊಲೆಯಲ್ಲಿ ಹುಟ್ಟಿದ ಮೇಲೆ**
**ನನ್ನ ಕುಲ, ತನ್ನ ಕುಲ ಹೆಚ್ಚನ್ನಬಹುದೇ ಬಸವಣ್ಣ**

ನನ್ನಜಾತಿ ಶ್ರೇಷ್ಠ, ಬೇರೊಬ್ಬರ ಜಾತಿ ಕನಿಷ್ಠ ಎಂದು ಹೇಳುವ ಜನರಿಗೆ ಎಲ್ಲರೂ ಜನಿಸುವುದು ಹೆಣ್ಣಿನ ಗರ್ಭದಿಂದಲೇ, ಇದರಿಂದ ಯಾರು ಮೇಲು ಅಲ್ಲ ಕೆಳಗೂ ಎಲ್ಲರೂ ಸಮಾನರು ಎಂಬುದು ಇವರ ವಿಚಾರವಾಗಿತ್ತು. ಭಾವಕ್ಯತೆಯ ಸಾಕಾರ ಮೂರ್ತಿಯಾದ ಮೌನೇಶ್ವರರು ಹಿಂದೂ ಮುಸ್ಲಿಂರಲ್ಲಿ ಸಹೋದರತೆ ಮೂಡಿಸಲು ಅನೇಕ ವಚನಗಳನ್ನು ರಚಿಸಿದ್ದಾರೆ.

**ಹಿಂದೂ ಮುಸ್ಲಿಂರಿಗೆ ಚಂದ್ರಮನೊಬ್ಬನೆ,**
**ನಿಂದಿಸಿದವನು ಅಧಮನು ಕಾಣದ ಆಂಧರಿಗೆಕೆ ದರ್ಪಣವು,**
**ಸಕಲವು ಒಂದೆ ಎಂದು ಕಂಡಗುರು ಬೇರೆ ಬಸವಣ್ಣ**
**ಮತ್ತೋಂದು ವಚನದಲ್ಲಿ**
**ಹಿಂದು ಮುಸಲ್ಮಾನ ಹೋಗೇ,**
**ಬಾತಕರೇತೋ ಶಂಭು ಸಮೆತ ಹೋಗೇ,**
**ಪಾತ್ರೆ, ಪೂಜಿತೋಖ್ಯಾಲ ಗಡೆಗಾಣಿಗಮ್ಮತ**
**ಪಂಚಮುಖಿ ಪರಮಾತ್ಮ ಹೋಗೆ**

ಈ ವಚನದಲ್ಲಿತಾನು ಹಿಂದೂ ಮುಸಲ್ಮಾನನೆಂದು, ಶಂಭುವಿನ ಸಮಾನನೆಂದು ಹಾಗೂ ಪಂಚಮುಖಿ ಸಮಾನನೆಂದು ಸಾರಿದ್ದಾನೆ.

**ಹಲವು ಮೂರ್ತಿಯ ಮಾಡಿದ**
**ಉಳಿಯೊಂದೇ, ಕೊಡತಿಯೊಂದೇ.**
**ಶಿಲೆಯಲ್ಲ ಒಂದೇ ಶಿಲ್ಪಿ ಒಂದೇ**
**ಕೆಲದಾಡಬೇಡಿ ಶರಣರಿರಾ ಬಸವಣ್ಣ**

ಈ ವಚನದ ಮೂಲಕ ದೇವರ ಹೆಸರಿನಲ್ಲಿ ಬಡಿದಾಡಬೇಡಿರಿ, ಬೇರೆ, ಬೇರೆ ಹೆಸರಿನಿಂದ ನೀವು ಪೂಜಿಸುವ ದೇವರಗಳೆಲ್ಲ ತಯಾರದದ್ದು ನಮ್ಮ ಉಳಿ, ಕೊಡತಿಯಿಂದ ಅಂದರೆ ದೇವರು ಒಬ್ಬನೆ ಅವನ ಹೆಸರಿನ ಮೇಲೆ ಕಚ್ಚಾಡಬಾರದು ಎಂಬುದು ಇವರ ವಿಚಾರವಾಗಿತ್ತು.

**ಉಣ್ಣದ ದೇವರಿಗೆ ಹಣ್ಣು, ಕ್ಷೀರ, ನೈವಿದ್ಯ,**
**ಬಣ್ಣ, ಬಿಳಿದೋಸ್ತ್ರ ಆಭರಣ**
**ಶಿಲೆಯ ದೇವರಿಗೆ ಕಣ್ಣು ಬೊಟ್ಟುಗಳನ್ನು ಕೊಟ್ಟು**
**ಉಣ್ಣುವ ದೇವರಿಗೆ ದೊಣ್ಣೆಯ ನೈವೇದ್ಯವನ್ನು ಕೊಡುವ**
**ನರರಿಗೆ ಪುಣ್ಯ ಎಲ್ಲಿಯದು ಬಸವಣ್ಣ.**

ಈ ವಚನದ ಮೂಲಕ ಮೌನೇಶ್ವರರು ಭಕ್ತರು ದೇವರಿಗೆ ಹಣ್ಣು ಹಂಪಲುಗಳನ್ನು, ವಸ್ತ್ರ ಆಭರಣಗಳನ್ನು ಕೊಡುವುದರಿಂದ ಆ ದೇವರು ಅವುಗಳನ್ನು ಸ್ವಿಕರಿಸುವುದಿಲ್ಲ, ಅದಕ್ಕೆ ಬದಲಾಗಿ ನಿರ್ಗತಿಕರಿಗೆ

ಅವುಗಳನ್ನು ನೀಡಿದರೆ ಅದರಿಂದ ಉಪಯುಕ್ತವಾಗುವುದು ಎಂಬುದು ಅವರ ವಿಚಾರವಾಗಿತ್ತು. ಅಂದ ಭಕ್ತರಡಾಂಭಿಕ ಆಚರಣೆಗಳನ್ನು ಖಂಡಿಸಿ ಅವರಕಣ್ಣನ್ನು ತರೆಸುವ ಪ್ರಯತ್ನವನ್ನು ಮಾಡಿದ್ದಾರೆ.

ಈ ರೀತಿ ಮೌನೇಶ್ವರರು ತಮ್ಮ ವಚನಗಳಲ್ಲಿ ಹೇಳಿದ ಮೌಲ್ಯಗಳು, ಜನಪರ ಕಾಳಜಿ, ಸರ್ವಧರ್ಮ ಸಾಮರಸ್ಯ, ಕರ್ತವ್ಯ ಪರತೆ, ನ್ಯಾಯ ನಿಷ್ಠುರತೆ ಮುಂತಾದವುಗಳನ್ನು ಅರಿತು ಆಚರಿಸುವುದು ಅವಶ್ಯವಾದುದಾಗಿದೆ. ದಕ್ಷಿಣ ಭಾರತದಲ್ಲಿ ಹಿಂದೂ ಮುಸ್ಲಿಂ ಐಕ್ಯತೆಯನ್ನು ಜೀವನದುದ್ದಕ್ಕೂ ಸಾರಿದ ಮೌನೇಶ್ವರರ ಒಂದು ಪದ್ಯ ಹೀಗಿದೆ. ಹಿಂದೂ ಮುಸ್ಲಿಂರು ಸೇರಿ ಒಕ್ಕೂರಲಿನಿಂದ ಉದ್ಗರಿಸುವ ಈ ಧರ್ಮಘೋಷಣೆಯು ಹಿಂದೂ ಮುಸ್ಲಿಂರು ಒಗ್ಗೂಡಿದ ಫಲವಾಗಿ ಮೂಡಿಬಂದ ಶಾಂತಿ ಮಂತ್ರವಾಗಿದೆ.

**ಓಂ ಏಕಲಾಖ ಐಶೀಹಜಾರ್/**
**ಪಾಂಚೋ ಪೀರ ಪೈಗಂಬರ ಮೌನದೀನ**
**ಜಿತಾಪೀರ ಪೈಗಂಬರ ಮೌನದ್ದೀನ್/**
**ಕಾಶೀಪತಿ ಗಂಗಾಧರ ಹರಹರ ಮಹಾದೇವ.**

ಮಹಮ್ಮದ ಪೈಗಂಬರ ಮತ್ತುಗಂಗಾಧರಇಬ್ಬರೂಒಂದೇ ಎಂಬ ತಾತ್ವಿಕ ಸೌರ್ಹಾದತೆ ಸಾರಿದ ಮಹಾನ ಮಾನವತಾವಾದಿ, ಸಾಮಾಜಿಕ ಸಂತತಿಂಥಣಿ ಮೌನೇಶ್ವರರಾಗಿದ್ದಾರೆ.

## ಆಧಾರ ಗ್ರಂಥಗಳು.


೧. ಡಾ.ವೀರೇಶ; ಮೌನೇಶ್ವರರ ವಚನ ವಿಚಾರ.
೨. ಎಂ.ಎಂ. ಪಡಶಟ್ಟಿ; ತಿಂಥಣಿ ಮೋನಪಯ್ಯ ಲಿಂಗಾಯತ ಆದ್ಯಯನ ಸಂಸ್ಥೆ, ಡಂಬಳ, ಗದಗ.
೩. ಸಗರನಾಡ ದರ್ಶನ; ಮಹಾಕವಿ ಲಕ್ಷ್ಮೀಶ ವಾಚನ ಸಂಘ ಸುರಪುರ.
4. Gulbarga Distirict Gazetteer, Government of Karnataka.
೫. ಎನ್.ಎಸ್.ಜೋಶಿ; ತಿಂಥಣಿ ಮೌನೇಶ್ವರಚರಿತ್ರೆ.
೬. ಪ್ರೊ.ಕೆ.ಪಿ.ಈರಣ್ಣ; ಶ್ರೀ ಕ್ಷೇತ್ರ ವರವಿ ದರ್ಶನ.
೭. ವಿ.ಜಿ.ದೀಕ್ಷೀತ್; ಶ್ರೀ ಮೌನೇಶ್ವರ ವಚನ ಸುಧೆ.
೮. ಚಿನ್ನದುಂಗುಡಿ ಬೋಳಮಲ್ಲ; ಮೌನೇಶ್ವರ ಬಾಲಲಿಲೆ.
೯. ದೂಳೆಂದ್ರ ಅರಗಂಜಿ; ಶ್ರೀ ಮೌನೇಶ್ವರ್ ಮಹಾತ್ಮೆ.




## ನಮ್ಮ ಊರಿನ ಸೂಫಿ ಸಂತ 'ಹಜ್ರತ್ ಖ್ವಾಜಾ ಬಂದಾ ನವಾಜ್.

**–ಶ್ರೀಮತಿ ಶ್ಯಾಮಲಾ ಎಸ್. ಸ್ವಾಮಿ,**
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ಮಹಾಗಾವ್ ಕ್ರಾಸ್, ಗುಲ್ಬರ್ಗಾ.

ಕಲ್ಯಾಣ ಕರ್ನಾಟಕದ ಹೆಬ್ಬಾಗಿಲು ಕಲಬುರ್ಗಿ ಶರಣ ಸಂತರ ಸೂಫಿಗಳ ನಾಡು ಈ ಕಲಬುರ್ಗಿ ಇಲ್ಲಿ ಎಲ್ಲ ಧರ್ಮಗಳು, ಸಂಸ್ಕೃತಿಯನ್ನು ಒಳಗೊಂಡ ಊರು ಗುಲ್ಬರ್ಗ ಅನೇಕ ಹಬ್ಬ– ಹರಿದಿನಗಳು, ಜಾತ್ರೆಗಳು, ಉತ್ಸವಗಳು, ನಡೆಯುತ್ತವೆ. ಎಲ್ಲರೂ ಒಂದು ಗೂಡಿ ಹಬ್ಬಗಳನ್ನು, ಜಾತ್ರೆಗಳನ್ನು ಆಚರಿಸುತ್ತಾರೆ. ಕಲ್ಬುರ್ಗಿಯಲ್ಲಿ ಎರಡು ಪ್ರಸಿದ್ಧ ಜಾತ್ರೆಗಳು ನಡೆಯುತ್ತವೆ. ಮೊದಲನೆಯದು ಶರಣಬಸವೇಶ್ವರ ಜಾತ್ರೆ. ಎರಡನೆಯದು ಖಾಜಾ ಬಂದೇನವಾಜ್ ದರ್ಗಾ ಜಾತ್ರೆ. ಉರ್ದುವಿನಲ್ಲಿ ಜಾತ್ರೆಯನ್ನು 'ಉರಸ್' ಎಂದು ಕರೆಯುತ್ತಾರೆ.

ಕಲಬುರ್ಗಿ ಎಂಬ ಅಚ್ಚ–ಕನ್ನಡ ಪದವು ಉರ್ದುವಿನಲ್ಲಿ ಗುಲ್ಬರ್ಗ ಎಂದು ಕರೆಸಿಕೊಳ್ಳುತ್ತದೆ. ಗುಲ್ ಎಂದರೆ **'ಹೂ'** ಬರ್ಗ ಎಂದರೆ **'ಎಲೆ'** ಎಲೆ ಹೂಗಳ ನಗರ ಎಂದರ್ಥ. ಎಂದು ಅರ್ಥೈಸುತ್ತಾರೆ. ಒಂದರ್ಥದಲ್ಲಿ ಗುಲ್ಬರ್ಗ ದೂರದಿಂದಲೇ ಕಣ್ಣಿಗೆ ಕಾಣಬರುವ ಅಸಂಖ್ಯಾತ ಗುಂಬಜ ಗಳು ಯಾತ್ರಿಕರನ್ನು ಕೈಮಾಡಿ ಕರೆಯುತ್ತವೆ ನೋಡುಗರಿಗೆ ಆಸಕ್ತಿಯನ್ನು ಹುಟ್ಟಿಸುತ್ತವೆ ಗುಂಬಜ ಗಳು ಮುಸ್ಲಿಂ ಸಂಸ್ಕೃತಿಯ ಪ್ರತಿಬಿಂಬಗಳು ಒಂದು ಜನಾಂಗದ ಗುರುತಾಗಿ ನಿಲ್ಲುವುದರ ಜೊತೆಗೆ ಜನಾಂಗವನ್ನು ತನ್ನೆಡೆಗೆ ಸೆಳೆಯುತ್ತದೆ ಸಮಾಧಿಗಳ ಸ್ಥಳಗಳಲ್ಲಿ ದರ್ಗಾಗಳು ಎಂದು ಕರೆಯುತ್ತಾರೆ. ಇಂತಹ ಒಬ್ಬ ಹೆಸರಾಂತ ಸೂಫಿ ಸೈಯದ್ ಹಜರತ್ ಖ್ವಾಜಾ ಬಂದಾ ನವಾಜ್ ದರ್ಗಾ ಗುಲಬರ್ಗಾದ ರೋಜಾ ದಲ್ಲಿದೆ.

**ಬಂದೆ ನವಾಜ ದರ್ಗಾದ ಹಿನ್ನಲೆ.**

ಹಜ್ರತ್ ಖ್ವಾಜಾ ಬಂದಾ ನವಾಜ್ ಗೆಸು ದರಜ್ (ಜುಲೈ ೧೩, ೧೩೨೧ – ನವೆಂಬರ್ ೧, ೧೪೨೨) ಭಾರತದ ಒಬ್ಬ ಮಹಾನ್ ಸೂಫಿ ಸಂತ. ಅವರು ಎಲ್ಲ ಜಾತಿಯ ಬಗ್ಗೆ ತುಂಬಾ ತಿಳಿವಳಿಕೆ ಹಾಗೂ ತಾಳ್ಮೆ ಹೊಂದಿದವರಾಗಿದ್ದರು. ಗೆಸು ದರಜ್ ಒಬ್ಬ ದಿಲ್ಲಿಯ ಪ್ರಖ್ಯಾತ ಸೂಫಿ ಸಂತ ಹಜ್ರತ್ ನಾಸಿರುದ್ದೀನ್ ಚಿರಗ್ದ್ ದೆಹ್ಲವಿ ಅವರ ಶಿಷ್ಯರಾಗಿದ್ದರು. ಗೆಸು ದರಜ್ ಅವರ್ ಹೆಸರು "ಸಯ್ಯದ್ ಮೊಹಮ್ಮೆದ್ ಹುಸ್ಸೈನಿ". ೧೩೩೬ ರಲ್ಲಿ ಇವರು ದಿಲ್ಲಿಗೆ ಹೋಗಿ ತಮ್ಮ ಶಿಕ್ಷಣ ಹಾಗು ತಾಲೀಮು ಪೂರ್ತಿ ಮಾಡಿದರು. ಗೆಸು ದರಜ್ ಅವರ ಗುರುಗಳು ಹಜ್ರತ್ ಕೆಥ್ಲಿ, ಹಜ್ರತ್ ತಾಜುದ್ದೀನ್ ಬಹಾದುರ್ ಮತ್ತು ಕಜಿ ಅಬ್ದುಲ್ ಮುಕ್ತದಿರ್. ದಿಲ್ಲಿ, ಮೆವಾಥ್, ಗ್ವಾಲಿಯರ್, ಅಇರ್ಚ, ಛತ್ರ, ಚಂದೆರಿ ಮತ್ತು ಬರೋಡ ಅಲ್ಲಿ ಪಾಠವನ್ನು ಮಾಡಿ ೧೪೦೭ರಲ್ಲಿ ಕಲಬುರಗಿಗೆ ಬಂದರು. ಒಂದು ದಿನ ಇವರು ಮತ್ತು ಮಿತ್ರರು ಹಜ್ರತ್ ನಸೀರುದ್ದಿನವರ ಪಲಕಿವನ್ನು ಎತ್ತಿದಾಗ ಗೆಸು ದರಜಿನ ಕೂದಲು ಪಲಕಿಯ ಕಾಲಲ್ಲಿ ಸಿಕ್ಕಿಬಿದ್ದಿತು, ಅವರಿಗೆ ಬಹಳ ನೋವು ಆಗಿತ್ತು, ಆದ್ರೆ ಗುರುವಿನ ಮೇಲೆ ಪ್ರೀತಿ ಹಾಗು ಮರ್ಯಾದೆಯಿಂದ ಅವನು ಯಾರಿಗೂ ಹೇಳಲಿಲ್ಲ. ಈ ಪ್ರೀತಿ ಹಾಗು ಮರ್ಯಾದೆ ನೋಡಿ ಹಜ್ರತ್ ನಾಸಿರುದ್ದೀನ್ ಅವನನ್ನು " ಗೆಸು ದರಜ್ " ಅಂತ ಘೋಷಿಸಿದರು. ಎಲ್ಲ ಜನರು ಗೆಸು ದರಜಿಗೆ "ಖ್ವಾಜಾ ಬಂದಾ ನವಾಜ್ ಗೆಸು ದರಾಜ್" ಹೆಸರಿಂದ ಕರೆಯುತ್ತಾರೆ. ಇವರು ಸನ್ ೧೪೨೨ ನವೆಂಬರ್ ರಲ್ಲಿ ಮರಣರಾದರು. ಇವರು ೧೦೧ ವರ್ಷ ಬದುಕಿದ್ದರು. ಇವರ ಮರಣ ಸ್ಥಳ ಈಗ ಯಾತ್ರಾಸ್ಥಳವಾಗಿದೆ. ಇವರು ೧೯೫ ಪುಸ್ತಕಗಳನ್ನು ಅರಬ್ಬಿ ಪರ್ಸಿಯ ಹಾಗು ಉರ್ದು ಭಾಷೆಯಲ್ಲಿ ಬರೆದಿದ್ದರೆ. ಉದಾ: ಅವರಿಫ್–ಉಲ್–ಮ'ಅರಿಫ್, ಫಾಸೂಸ್–ಅಲ–ಹುಕ್ಮ್, ಅಸೇದ ಅಮಲಿ ಮತ್ತು ಅದಾಬ್–ಅಲ–ಮುರೀದಇನ್. ಸ್ಥಳ ದೊಡ್ಡ ವಿಸ್ತಾರವಾದ ಸಂಕೀರ್ಣ ವಸತಿ ೧೪೧೩ ರಲ್ಲಿ ಕಲಬುರಗಿ

ಬಂದಿದ್ದ 'ಬಂದಾ ನವಾಜ್', ಮಹಾನ್ ಸೂಫಿ ಸಂತನ ಸಮಾಧಿ ಹೊಂದಿದೆ. ಅವರ ಸಮಾಧಿಯ ತಂದೆಯ ಗೋಡೆಗಳ ವರ್ಣಚಿತ್ರಗಳು ಮತ್ತು ಮುಘಲ್ ನಿರ್ಮಿಸಿದ ಮಸೀದಿ ಸಮಾಧಿಯ ಸಮೀಪದಲ್ಲಿದೆ. ಇದು ಇಂಡೋ-ಅರೆಬ್ಬಿಯ ಯಾ ಮುಸಲ್ಮಾನ ಶೈಲಿಯಲ್ಲಿ ನಿರ್ಮಿಸಲಾಗಿದೆ. ಗೋಡೆಗಳು ಮತ್ತು ಮೇಲ್ಛಾವಣಿಯ ಮೇಲೆ ವರ್ಣಚಿತ್ರಗಳು ಟರ್ಕಿಷ್ ಮತ್ತು ಇರಾನಿ ಪ್ರಭಾವ ಸಮ್ಮಿಳನ ಹೊಂದಿವೆ. ಚಾಂದಬೀಬಿ ನಿರ್ಮಿಸಿದ "ಖಂದರ್ ಖಾನ್" ತಂದೆಯ ಮಸೀದಿ ಹಾಗೂ ಹಿರಾಪುರ್ ಮಸೀದಿ (ಒಟ್ಟು ೧೫೮೫) ಇಲ್ಲಿ ಕೆಲವು ಸ್ಮಾರಕಗಳು, ಮತ್ತು ಸುಲ್ತಾನ್ ಹಾಸನ ಮತ್ತು ಇರೊಜೆ ಷಾ ಸಮಾಧಿ ರಚನೆಗಳು ಭವ್ಯವಾದ ಇವೆ. ರಾಜ್ಯದ ಪುರಾತತ್ವ ಮ್ಯೂಸಿಯಂ ಇಲ್ಲಿ ಬೌದ್ಧ ಠಿಟಚಿಡಣಜಣ ಸನ್ನತಿದಿಂದ ತಂದಿದೆ. ಉರಸ್: ಇದು "ಖ್ವಾಜಾ ಬಂದಾ ನವಾಜ್ ಗೆಸು ದರಜ್" ರ ಪುಣ್ಯತಿಥಿಯ ದಿನ ದಂದು ಆಚರಿಸುತ್ತಾರೆ. ಈ ದಿನ ಉಲ್-ಅ'ದಃ ಮುಸ್ಲಿಂ ಕ್ಯಾಲೆಂಡರ ೧೫ನೆ ದಿನಕೆ ಆಚರಿಸುತ್ತಾರೆ. ಈ ದಿನ ಹಲವಾರು ಜನ ವಿಭಿನ್ನ ಸ್ಥಳದಿಂದ ಇಲ್ಲಿ ಗೆಸು ದರಜ್ ರ ಆಶೀರ್ವಾದ್ ಪಡೆಯಲು ಬರುತ್ತಾರೆ. ಈಗ ಇಲ್ಲಿನ ಮುಖ್ಯಸ್ಥರು "ಸೈದ್ ಶಾಹ್ ಖುಸ್ರೋ ಹುಸ್ಸೈನಿ" ಯರಾಗಿದ್ದಾರೆ.

ದರ್ಗಾಗಳು ಸೂಫಿಗಳ ಸಮಾಧಿಗಳು. ಈ ದರ್ಗಾಗಳಲ್ಲಿ ಊರಸ್ ನಡೆಯುತ್ತದೆ. ಕವಾಲಿ ಜರಗುತ್ತದೆ. ಕಾಯಿ ಒಡೆಯುತ್ತಾರೆ.ನೈವೇದ್ಯ ಅರ್ಪಿಸುತ್ತಾರೆ.ಮಜಾಹರಿಗೆ ಗಂಧ ಲೇಪಿಸುತ್ತಾರೆ. ಹೂ ಏರಿಸುತ್ತಾರೆ ಎಲ್ಲಾ ಜನಾಂಗಕ್ಕೂ ಈ ದರ್ಗಾಗಳಲ್ಲಿ ದರ್ಶನಕ್ಕೆ ಅವಕಾಶವಿದೆ.

ಹಿಂದೂಗಳ ಜಾತ್ರೆಯಂತೆ ಉರುಸ್ ಮಾಡುತ್ತಾರೆ. ಬಜನೆ ಯಂತೆ ಕವಾಲಿ ಮಾಡುತ್ತಾರೆ. ಕಾಯಿ ಕರ್ಪೂರ ಅರ್ಪಿಸುತ್ತಾರೆ. ದೀಪ ಹಚ್ಚುತ್ತಾರೆ. ದಾಸೋಹ ದಂತೆ 'ಲಂಗಾರ್' ಎಂದು ಉಣಬಡಿಸುತ್ತಾರೆ. ಅರಬ್ ದೇಶಗಳಲ್ಲಿ ಮಕ್ಕ-ಮದೀನಾ ಗಳಲ್ಲಿ ಆಚರಣೆ ಇಲ್ಲ ಭಾರತದಲ್ಲಿ ಈ ರೀತಿಯ ಆಚರಣೆ ಇರುವುದಕ್ಕೆ ಕಾರಣ ಇಲ್ಲಿಯ ಹಿಂದುಗಳ ಜೊತೆ ಮುಸ್ಲಿಂ ಜನಾಂಗ ಬೆರೆತದ್ದು. ಮುಸ್ಲಿಮರೇ ಹೇಳುವಂತೆ ಈ ಆಚರಣೆಗಳು ಮುಸ್ಲಿಂ ಸಂಸ್ಕೃತಿಯ ವಲ್ಲ ಇದು ಹಿಂದೂ-ಮುಸ್ಲಿಂ ಸಂಸ್ಕೃತಿ ಖಟಿಜಂ ಒಣಟುಟ ಛಿಣಟಣಣಡಿಜ ಎಂದು ಹೇಳುತ್ತಾರೆ.

ಈ ದರ್ಗಾಗಳು ಸೂಫಿ ಸಂತರ ಸಮಾಧಿಗಳ ಆದುದರಿಂದ ಸರ್ವ ಜನಾಂಗಕ್ಕೆ ತೆರೆದ ಬಾಗಿಲು ಗಳಾಗಿವೆ. ಕೋಮು ಸೌಹಾರ್ದತೆಯ ನೆಲೆಗಳಾಗಿವೆ. ಅಂತೆಯೇ ಜಾತಿ - ಮತ,ಭೇದ- ಭಾವ, ಮೇಲು-ಕೀಳು ಯಾವ ಗೋಜಲುಗಳಿಲ್ಲದೆ ಜನ ದರ್ಗಾಗಳಿಗೆ ನಡೆದುಕೊಳ್ಳುತ್ತಿರುವುದು. ವಿಶೇಷತೆಯೆಂದರೆ ಯಾವುದೇ ಊರಿನ ಸಣ್ಣ ಮಜಾಹರಿಗೋ ದರ್ಗಾಕ್ಕೂ ಮುಸ್ಲಿಮರಿಗಿಂತ ಹಿಂದುಗಳೇ ಅಧಿಕ ಸಂಖ್ಯೆಯಲ್ಲಿ ನಡೆದುಕೊಳ್ಳುತ್ತಾರೆ. ಅಲ್ಲಿ ಮತ-ಧರ್ಮದ ಭಿನ್ನತೆ ಅವರಿಗೆ ಕಾಡುವುದಿಲ್ಲ ಕಾರಣ ಸಮಾಧಿಯಾದ ಸಂತನ - ಸೋಫಿಯಾ ತತ್ವಗಳು ನಡೆದುಕೊಂಡ ರೀತಿ ಅವರ ಮೇಲೆ ಗಾಢವಾದ ಪ್ರಭಾವವನ್ನು ಬೀರುತ್ತವೆ ಒಬ್ಬ ಸಂತನ ಸೂಫಿಯ ಶರಣರ ಜಾತಿಗಳಿಗಿಂತ ನಡೆ-ನುಡಿ ತತ್ವ-ಸಿದ್ಧಾಂತಗಳು ಜನರ ಮನದ ಮೂಲೆಯಲ್ಲಿ ಅಚ್ಚಳಿಯದ ಎರಕ ಗಳಾಗಿ ಹೋಗಿರುತ್ತವೆ.

**ಖಾಜಾ ಬಂದೇನವಾಜ್ ಉರಸ್.**

ದಕ್ಷಿಣ ಭಾರತದಲ್ಲಿಯೇ ನಡೆಯುವ ಬಹುದೊಡ್ಡ ಉರಸ್ಎಂದರೆ ಖಾಜಾ ಬಂದೇನವಾಜರದು ಎಂದು ಹೇಳಬಹುದು.ದಕ್ಷಿಣಭಾರತದ ಜನರಂತೂ ಸರಿಯೇ ಸರಿ.ಉತ್ತರ ಭಾರತದಿಂದಲೂ ಕೂಡ ಜನರು ಉರಸ್ ಗೆ ಬರುತ್ತಾರೆ ಮಜಾಹರಿನ ದರ್ಶನ ಪಡೆಯುತ್ತಾರೆ ದರ್ಗಾದಲ್ಲಿ ಸುತ್ತಾಡಿ ಮನ ಪಾವನ ಗಳಿಸಿಕೊಳ್ಳುತ್ತಾರೆ. ಕೇವಲ ಮುಸ್ಲಿಮರಷ್ಟೇ ಅಲ್ಲಾ ಎಲ್ಲ ಜನಾಂಗದ ಜನ ಬಂದು ಉರಸ್ ನಲ್ಲಿ ಪಾಲ್ಗೊಳ್ಳುತ್ತಾರೆ. ಜಾತಿ-ಮತ-ಪಂಥ -ಕುಲ-ಗೋತ್ರ ಯಾವ ತಾರತಮ್ಯ ಗಳಿಲ್ಲದೆ ಒಂದೇ ಮನಸ್ಸಿನಿಂದ ಸೇರಿಕೊಳ್ಳುತ್ತಾರೆ ಭಾವೈಕತೆಯನ್ನು ಬಿಂಬಿಸುವ ಉರಸ್ ಎಂದರೆ ತಪ್ಪಾಗಲಾರದು.

ಗಂಧ, ಚಿರಾಗ, ಝಿಯಾರತ್ ಎಂದು ಮೂರು ದಿನಗಳ ಕಾಲ ನಡೆಯುವ ಧಾರ್ಮಿಕ ವಿಧಿವಿಧಾನಗಳು ಉರಸ್ ಗೆ ಕಳೆ ತರುತ್ತದೆ. ಉರಸ್ ಗಿಂತ ಒಂದು ತಿಂಗಳ ಮುಂಚೆ ಕಾರ್ಯಕ್ರಮ ನಡೆಯುತ್ತದೆ. 'ಝುಲಾ ' ಎಂದರೆ ಗುಂಬಜದ ಮೇಲೆ ಸುತ್ತಲೂ ಬೀಳುವಂತೆ ಹೂವಿನ ಸರಗಳನ್ನು ಹಾಕುತ್ತಾರೆ.

**ಝುಲಾ.**

ಪ್ರತಿವರ್ಷ ಹಿಜರಿ ಶಕೆ ೧೭ ಶವ್ವಾಲ್ ರಂದು ಈ ಝುಲಾ ಜರುಗುತ್ತದೆ. ಹಿಂದೂ–ಮುಸ್ಲಿಂ ಭಾವೈಕ್ಯತೆಯ ಪ್ರತಿರೂಪ ವೆಂಬಂತೆ ಈ ಕಾರ್ಯಕ್ರಮವನ್ನು ಅಂದಿನಿಂದ ಇಂದಿನವರೆಗೆ ಹಿಂದೂ–ಮುಸ್ಲಿಮರು ತಮ್ಮ ಆದ್ಯ ಕರ್ತವ್ಯವೆಂಬಂತೆ ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆ.

ಕ್ಷೌರಿಕ ವೃತ್ತಿಯ ಶ್ರೀಮಂತ ತಂದೆ ಭೀಮಣ್ಣ ಮಶಾಲ್ ದೀವಟಿಗೆಯನ್ನು ಕೈಯಲ್ಲಿಡಿದು ಹಗ್ಗವನ್ನು ಕೈಯಲ್ಲಿಡಿದು ಗುಂಬಜ್ ವನ್ನು ಏರುತ್ತಾನೆ. ಬೆಳಕಿನಲ್ಲಿಯೇ ಗುಂಬಜ್ ಅನ್ನು ಹತ್ತಬೇಕು. ನೋಡುವುದಕ್ಕೆ ರೋಮಾಂಚನ ತರುವ ಮೈಯಲ್ಲಿ ನಡುಕ ಹುಟ್ಟಿಸುವ ಈ ದೃಶ್ಯ ಚೇತೋಹಾರಿಯಾಗಿರುತ್ತದೆ. ಈ ಮಲದ ಬೆಳಕಿನಲ್ಲಿಯೇ ಗುಂಬಜ್ ಬಗ್ಗೆ ಸುತ್ತಲು ಬೀಳುವಷ್ಟು ಹೂವಿನ ಸರಗಳನ್ನು ಮೈಮೇಲೆ ಹಾಕಿಕೊಂಡು ಹಗ್ಗವನ್ನು ಕೈಯಲ್ಲಿ ಹಿಡಿದು ಹೂಮಾರುವ ಹೋಗತಿಯ ಮಹಮ್ಮದ್ ಚನ್ನು ಮಿಯ ತಂದೆ ಶರ್ಫುದ್ದಿನ್ ಜೆರಾ ವನ್ನು ಹೆಗಲ ಮೇಲಿಟ್ಟುಕೊಂಡು ಗುಂಬಜ ವನ್ನು ಹತ್ತುತ್ತಾನೆ.

ಈ ದೀವಟಿಗೆಯನ್ನು ಬಾಯಿ ಹಿಡಿದು ದೇಹವನ್ನು ಹೆಗಲ ಮೇಲಿಟ್ಟುಕೊಂಡು ಇಂದಿನವರೆಗೂ ಅನೂಚಾನವಾಗಿ ನಡೆಸಿಕೊಂಡು ಬಂದಿದ್ದಾರೆ ಝುರಾ ಕಾರ್ಯಕ್ರಮದ ಜರುಗಿದ ಒಂದು ತಿಂಗಳ ನಂತರ ಝಿಯಾರತ್ ನಡೆಯುತ್ತದೆ. ಎಂದರೆ ಉರಸ್ ಗೆ ಒಂದು ತಿಂಗಳು ಪೂರ್ವ ಸಿದ್ಧತೆ ಎಂಬಂತೆ ಜೀರಾ ನಡೆಯುತ್ತದೆ.

**ಗಂಧ.**

ಗುಲಾಬಿಯ ಪನ್ನೀರಿನಿಂದ ಮಜಾ ಹರ್ (ಸಮಾಧಿ) ತೊಳೆಯುತ್ತಾರೆ. ಗಂಧಲೇಪನ ಮಾಡುತ್ತಾರೆ ಆನಂತರ ಗುಲಾಬಿ ಹೂವನ್ನು ಮಜಾಹರಿಗೆ ಏರಿಸುತ್ತಾರೆ. ಈ ಗಂಧಲೇಪನ ಸಂದರ್ಭದಲ್ಲಿ ಜನರಿಗೆ ಪ್ರವೇಶವಿದೆ. ದರ್ಗಾದ ಸಜ್ಜಾದೆ ಯವರು ಅಂದರೆ ಮುಖ್ಯಸ್ಥರು ನಿಂತು ಈ ಕಾರ್ಯವನ್ನು ನಡೆಸಿಕೊಡುತ್ತಾರೆ.

ಮೆಹಬೂಬ್ ಗುಲಶನ್ ಗಾರ್ಡನ್ ನಿಂದ ಗಂಧದ ಮೆರವಣಿಗೆ ಹೊರಡುತ್ತದೆ ಕುರಾನ್ ಪಠಣ ದ ನಂತರ ಸಜ್ಜಾದರು ತಮ್ಮ ಸ್ವಹಸ್ತದಿಂದ ಗಂಧದ ಕರಂಡಕವನ್ನ ತಲೆ ಮೇಲೆ ಇಟ್ಟು ನಡೆಯುತ್ತಾರೆ ಮತ್ತೆ ಹಲವು ಗೌರವಾನ್ವಿತರು ಹಿರಿಯರು ತೆಗೆದುಕೊಳ್ಳುತ್ತಾರೆ. ಬಹಳ ಜನ ಕೂಡಿ ಮೆರವಣಿಗೆಯೊಂದಿಗೆ ಗಂಧವನ್ನು ಗೌರವದಿಂದ ತರುತ್ತಾರೆ ಈ ಗಂಧ ತರುವ ಕಾಲಕ್ಕೆ ಕಂಬದ ಮೇಲೆ ಏರುತ್ತಾರೆ ತಲವಾರ ತಿರುವುತ್ತಾರೆ. ವೀರಾವೇಶದ ತುಣುಕುಗಳನ್ನು ತೋರುತ್ತಾರೆ. ರಾತ್ರಿ ಖವಾಲಿ ಆಗುತ್ತದೆ. (ಸಮೂಹ) (close door khawali ) ಡೋಲು ಬಾರಿಸುವುದಿಲ್ಲ ವಚನಗಳಂತೆ ಹಾಡುತ್ತಾರೆ.

**ಚಿರಾಗ್.**

ಇಡಿ ರಾತ್ರಿಯೆಲ್ಲ ದೀಪವನ್ನು ಬೆಳಗಿಸುತ್ತಾರೆ ಸೂಫಿಯಾ ಜೀವನ ಕುರಿತು,ಗುಣಗಳನ್ನು ತಿಳಿಸಿ. ಪದಗಳನ್ನು ಹಾಡಿ ಇಡೀ ರಾತ್ರಿಯನ್ನು ಕಳೆಯುತ್ತಾರೆ. ಖಾಜಾ ಬಂದೇನವಾಜ್ ಅರು ಅವರು ಬರೆದ ಹಾಡುಗಳನ್ನು ಹಾಡುತ್ತಾರೆ.

**ಝಿಯಾರತ್**.

ಸೂಫಿ ಆತ್ಮ ಶಾಂತಿಗಾಗಿ ಕುರಾನ್ ಪಠಣ ಮಾಡಿ ಫಾತೆ ಕೊಡಿಸುತ್ತಾರೆ. ನಂತರ ತಬುರಕ್ (ಪ್ರಸಾದ) ವಿತರಿಸುತ್ತಾರೆ. ಖಸಿದ ಬುರ್ದಾ ಶರೀಫ್ ಓದುತ್ತಾರೆ. ಹಜರತ್ ಮಹಮ್ಮದ್ ಪೈಗಂಬರರ ಕುರಿತು.

ಈ ಮೇಲಿನ ಮೂರು ವಿಧಿ–ವಿಧಾನಗಳ ಗೊಂಡ ರೀತಿ–ರಿವಾಜುಗಳನ್ನು ಅಳವಡಿಸಿಕೊಂಡು ಸೂಫಿಯ ಮಜಾ ಹರಿನ ದರ್ಗಾದ ಸ್ಥಳದಲ್ಲಿ ಆಚರಿಸುವುದಕ್ಕೆ ಉರಸ್ ಎನ್ನುತ್ತಾರೆ.

ಕಲಬುರ್ಗಿಯ ಖ್ವಾಜಾ ಬಂದೇನವಾಜ್ ಉರುಸ್ ಹಲವು ವಿಶೇಷತೆಗಳ ಸಂಗಮ. ಮಹಿಳೆಯರು, ಪುರುಷರು, ಮಕ್ಕಳನ್ನು ಆಕರ್ಷಿಸುವ ಹತ್ತಾರು ವಿಶೇಷಗಳು ಉರುಸ್ ನಲ್ಲಿರುತ್ತವೆ. ಧರಿಸುವ ಆಭರಣದಿಂದ ಹಿಡಿದು, ತಿನ್ನುವ ಖಾದ್ಯದವರೆಗೂ ಹತ್ತಾರು ವರೈಟಿಗಳನ್ನು ಉರುಸ್ ವೇಳೆ ಕಾಣುತ್ತೇವೆ. ಉರುಸ್ ಸಂದರ್ಭದಲ್ಲಿ ಮಾತ್ರ ಸಿಗುವ ಕೆಲವೊಂದು ಖಾದ್ಯಗಳಿವೆ. ಅದರ ಪೈಕಿ ಮುಖ್ಯವಾಗಿ ಭಕ್ತರನ್ನು ಆಕರ್ಷಿಸುವುದು ಹಲ್ವಾ ಪರೋಟ. ದೊಡ್ಡ ಗಾತ್ರದ ಪರೋಟಗಳನ್ನು ಸಿದ್ಧಪಡಿಸುವ ಪರೋಟಾವನ್ನು, ಹಲ್ವಾ ಜೊತೆ ಸವಿದು ಭಕ್ತರು ಸಂಭ್ರಮಿಸುತ್ತಾರೆ. ಒಂದು ತಿಂಗಳ ಕಾಲ ಈ ಹಲ್ವಾ ಪರೋಟಾ ಲಭ್ಯವಾಗುತ್ತಿದ್ದು, ಎಂಥವರ ಬಾಯಲ್ಲೂ ನೀರೂರಿಸುತ್ತಿದೆ. ಈ ಕುರಿತು ಒಂದು ವರದಿ ಇಲ್ಲಿದೆ.

ಸಾಮಾನ್ಯವಾಗಿ ನೀವು ಖಾರದ ಪದಾರ್ಥಗಳೊಂದಿಗೆ ಪರೋಟಾ ತಿನ್ನುವುದು ಸಹಜ. ಆದರೆ ಕಲಬುರಗಿಯ ಖ್ವಾಜಾ ಬಂದೇನವಾಜ್ ಉರುಸ್ ಗೆ ಬರುವ ಭಕ್ತರು ಪರೋಟಾವನ್ನು ಸಿಹಿಯಾದ ಹಲ್ವಾದ ಜೊತೆ ಸವಿಯುತ್ತಾರೆ. ಎಲ್ಲರ ಬಾಯಲ್ಲಿ ನೀರೂರಿಸುವ ಈ ಹಲ್ವಾ–ಪರೋಟ ಬಂದೇನವಾಜ್ ಉರುಸ್ ನ ವಿಶೇಷಗಳಲ್ಲೊಂದು. ಪ್ರತಿ ವರ್ಷ ಖ್ವಾಜಾ ಬಂದೇನವಾಜ್ ಉರುಸ್ ಬಂತೆಂದರೆ ಈ ಖಾದ್ಯ ತಯಾರಿಸುವ ಬಾಣಸಿಗರು ದೂರದ ದೆಹಲಿ, ಮಧ್ಯಪ್ರದೇಶ, ಉತ್ತರ ಪ್ರದೇಶಗಳಿಂದ ದೌಡಾಯಿಸಿ ಬರುತ್ತಾರೆ. ದೊಡ್ಡ ಗಾತ್ರದ ಪರೋಟಗಳನ್ನು ಸಿದ್ಧಪಡಿಸಿ ಹಲ್ವಾದೊಂದಿಗೆ ಸವಿಯಲು ಗ್ರಾಹಕರಿಗೆ ನೀಡುತ್ತಾರೆ. ಉರುಸ್ ಗೆ ಬಂದ ಬಹುತೇಕ ಭಕ್ತರು ಈ ಖಾದ್ಯವನ್ನು ಸವಿದೇ ಹೋಗುವುದು ವಾಡಿಕೆ. ವರ್ಷಕ್ಕೆ ಒಮ್ಮೆ ಮಾತ್ರ ಸಿಗುವ ಈ ಖಾದ್ಯವನ್ನು ಗ್ರಾಹಕರು ಖುಷಿಯಿಂದ ಆಸ್ವಾದಿಸುತ್ತಾರೆ.

ಕೆಲವೊಬ್ಬರು ಅಲ್ಲಿಯೇ ಕುಳಿತು ತಿಂದರೆ, ಮತ್ತೆ ಕೆಲವರು ಪಾರ್ಸಲ್ ತೆಗೆದುಕೊಂಡು ಹೋಗುತ್ತಾರೆ. ಸಿಹಿಯಾದ ಹಲ್ವಾದೊಂದಿಗೆ ಪರೋಟ ಸವಿಸುವುದು ಡಿಫರೆಂಟ್ ಅನುಭವ ನೀಡುತ್ತದೆ. ಈ ಅನುಭವ ಸಿಗಬೇಕೆಂದರೆ ಪ್ರತಿ ಬಾರಿಯೂ ಬರುವ ಉರುಸ್ ವರೆಗೆ ಕಾಯಲೇಬೇಕು. ಉರುಸ್ ಸಂದರ್ಭದಲ್ಲಿ ದರ್ಗಾಕ್ಕೆ ಬಂದಲ್ಲಿ ತಪ್ಪದೇ ಹಲ್ವಾ–ಪರೋಟ ಸವಿಯುವುದನ್ನು ಮಿಸ್ ಮಾಡಿಕೊಳ್ಳುವುದಿಲ್ಲ ಎನ್ನುತ್ತಾರೆ ಭಕ್ತರು. ತುಪ್ಪದಿಂದ ನಾದಿದ ಮೈದಾ ಹಿಟ್ಟಿನ ಮೂಲಕ ದೊಡ್ಡ ದೊಡ್ಡ ಗಾತ್ರದ ಪರೋಟಗಳನ್ನು ಸಿದ್ಧಪಡಿಸಲಾಗುತ್ತದೆ. ಅದಕ್ಕೆ ಗೋಧಿ ರವೆ, ಸಕ್ಕರೆ, ತುಪ್ಪ, ಡ್ರೈ ಫ್ರೂಟ್ ಗಳ ಮಿಶ್ರಣದಿಂದ ತಯಾರಿಸಿದ ಹಲ್ವಾದೊಂದಿಗೆ ಸವಿಯಲು ನೀಡಲಾಗುತ್ತದೆ.

ಹಲ್ವಾ ಮತ್ತು ಪರೋಟಗಳ ಕಾಂಬಿನೇಷನ್ ಭಕ್ತರನ್ನು ವಿಶೇಷವಾಗಿ ಆಕರ್ಷಿಸುತ್ತದೆ. ಭಕ್ತರ ಬೇಡಿಕೆಯನ್ನು ಗಮನಿಸಿಯೇ ಸಾವಿರಾರೂ ಮೈಲಿ ದೂರದಿಂದ ಬರುವ ಬಾಣಸಿಗರು ವಿಶೇಷ ಖಾದ್ಯವನ್ನು ಸಿದ್ಧಪಡಿಸಿ ಮಾರಾಟ ಮಾಡುತ್ತಾರೆ. ದೆಹಲಿ, ಮಧ್ಯಪ್ರದೇಶ, ಉತ್ತರ ಪ್ರದೇಶಗಳಿಂದ ಬರುವ ಬಾಣಸಿಗರು ಒಂದು ತಿಂಗಳ ಕಾಲ ಬೀಡು ಬಿಟ್ಟು, ಹಲ್ವಾ–ಪರೋಟದ ಸವಿಯನ್ನು ಬಂದೇನವಾಜರ ಭಕ್ತರಗಿ ಉಣಬಡಿಸುತ್ತಾರೆ. ದರ್ಗಾಕ್ಕೆ ಬರುವ ಭಕ್ತರು ಇಷ್ಟಪಟ್ಟು ಹಲ್ವಾ ಪರೋಟ ಸವಿಯುವುದರಿಂದಾಗಿ ಒಳ್ಳೆಯ ವ್ಯಾಪರವೂ ನಡೆಯುತ್ತದೆ ಎನ್ನುತ್ತಾರೆ ಅಂಗಡಿಯ ಮಾಲೀಕ ಮ ಮಹಮ್ಮದ್ ಷಾಹೀದ್.

ಒಟ್ಟಾರೆ ಬಂದೇನವಾಜ್ ರ ಉರುಸ್ ಹಿಂದೂ ಮುಸ್ಲಿಂ ಜನರು ಒಟ್ಟಿಗೆ ಕೂಡಿ ಆಚರಿಸುವ ಜಾತ್ರೆ . ಬಂದೇನವಾಜ್ ಮುಸ್ಲಿಂ ಸೂಫಿ ಸಂತರಲ್ಲಿ ಒಬ್ಬರಾಗಿದ್ದಾರೆ. ಗುಲ್ಬರ್ಗಾದಲ್ಲಿ, ಶರಣ ಬಸವೇಶ್ವರರ ಸಮಕಾಲೀನರಾಗಿದ್ದರು. ಹಿಂದೂ–ಮುಸ್ಲಿಂರು ಗುಲ್ಬರ್ಗಾದಲ್ಲಿರುವ ಖ್ವಾಜಾ ಬಂದೇ ನವಾಜ್ ದರ್ಗಾಕ್ಕೆ ಭಕ್ತರಾಗಿದ್ದಾರೆ. ಈ ದರ್ಗಾ ಒಂದು ಜಾಗೃತವಾದ ಧಾರ್ಮಿಕ ಕ್ಷೇತ್ರವೆಂಬ ಜನನಂಬಿಕೆಯಿದೆ. ಶರಣ ಬಸವೇಶ್ವರ ಮತ್ತು ಬಂದೇ ನವಾಜರ ಸ್ನೇಹದ ಗುರುತಾಗಿ ಈಗಲೂ ಕೂಡ ಕೆಲವು ಸಂಪ್ರದಾಯಗಳು ಉಳಿದಿವೆ. ಬಂದೇ ನವಾಜರ ಉರುಸು ಶುರುವಾಗುವ ಮುನ್ನ ತೇಯ್ದಿರುವ ಗಂಧವು ಶರಣ ಬಸವೇಶ್ವರರ ಗುಡಿಯಿಂದ ಬರಲೇ ಬೇಕು. ಹಾಗೇ ಶರಣ ಬಸವೇಶ್ವರರ ಜಾತ್ರೆ ಆರಂಭ ಆಗುವ ಮುನ್ನ ದೀವಟಿಗೆಗಳು ಬಂದೇ ನವಾಜರ ದರ್ಗಾದಿಂದ ಬರಲೇ ಬೇಕು.

## ಗ್ರಂಥಋಣ.


೧. ಖಾಜಾ ಬಂದೇನವಾಜರು; ಚಂದ್ರಕಾಂತ ಕರದಳ್ಳಿ.
೨. ಬಂದೇನವಾಜ್; ಡಾ. ಅಬ್ದುಲ್ ಹಮೀದ್.
೩. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ; ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ.
೪. ಅಂತರ್ಜಾಲ.




# ಬಿದ್ರಿ ಕಲೆಯ ಚಾರಿತ್ರಿಕ ಹಿನ್ನೋಟ.

–ಶ್ರೀ ಕಲ್ಯಾಣಪ್ಪಾ ಎಂ. ನಾವದಗಿ
ಮುಖ್ಯಸ್ಥರು ಇತಿಹಾಸ ವಿಭಾಗ,
ಎಸ್.ಎಸ್.ಕೆ.ಬಿ ಪದವಿ ಕಾಲೇಜು, ಬಸವಕಲ್ಯಾಣ.

**ಹಿನ್ನೆಲೆ.**

ಜನಪದರು ಹೇಳುವಂತೆ ಯಾವುದೋ ರೀತಿಯಲ್ಲಿ ಇರುವ ಒಂದು ಕಲೆ ಈಗಿರುವ ಬಿದ್ರಿ ಕಲೆಯ ರೂಪದಲ್ಲಿ ಕಂಡುಕೊಂಡಾಗ, ಕಂಡುಕೊಂಡವರು ತನ್ನ ಭಾಗ್ಯ, ವಿಧಿ (ಅದೃಷ್ಟ)ಯಿಂದಲೇ ಕಲೆ ಕರತಗವಾಯಿತು ಎಂದು ತಿಳಿದ. ಆದ್ದರಿಂದ ಇದಕ್ಕೆ ವಿದಿ ಎಂದು ಕರೆದ. ಅದು ವಿಧಿ>ಬಿದಿ ಎಂದು ಅಪಭ್ರಂಶ ಹೊಂದಿ ಬಿದ್ರಿ ಆಯಿತು ಎನ್ನುವುದಿದೆ. ಮತ್ತೆ ಕರಲವರು ಈ ಕಲೆಯ ರೂಪ ಕಂಡುಕೊಂಡವನು ಮುಂದೆ ಬಣ್ಣ ಏರಿಸುವುದಕ್ಕಾಗಿ ತಡಕಾಡುವಾಗ ಅದ್ಹೋಗೋ ಕೆಳಗೆ ಬಿದ್ದ ಹಾಗೆ ಬಿದ್ದಾಗ ಅವನ ಕೈಯಲ್ಲಿರುವ ಕಲೆಯೂ ಕೆಳಗೆ ಬಿತ್ತು. ಆಗ ಕ್ವಾಟಿ (ಕೋಟೆ) ಮಣ್ಣಿನಾಂಶದಲ್ಲಿ ಕಲೆಯ ಬಣ್ಣ ಬದಲಾಗುವುದನ್ನು ಗಮನಿಸಿದ. ಹೀಗೆ ಕಲೆಗಾರ ಕಲೆಗೆ ಬಣ್ಣ ಏರಿಸಲು ಬೀದರ ಕ್ವಾಟಿಯ ಮಣ್ಣನ್ನು  ಬಳಸಿಕೊಳ್ಳಲು ಪ್ರಾರಂಭಿಸಿದ. ಈ ರೀತಿಯಾಗಿ ಇವನು ಬಿದ್ದಾಗಲೇ ಒಂದು ಹೊಸ ಶೋಧವಾಯ್ತು. ಆದ್ದರಿಂದ ಆತನು ಬಿದ್ದೆ, ಬಿದ್ದಿವಿ, ಬಿದ್ದಿವಿರಿ, ಬಿದ್ದಿರಿ, ಬಿದ್ರಿ ಎಂದು ಹೇಳುತ್ತಾ ಅದೇ ಹೆಸರು ಕಲೆಗೆ ಕರೆಯಲು ಪ್ರಾರಂಭಿಸಿದ. ಆದರೆ ಭಾಷೆ ರೀತ್ಯಾದ ಪ್ರಕಾರ ಈ  ಪ್ರದೇಶದಲ್ಲಿ ಬಿದ್ರಿ ಕಲೆಯಲ್ಲಿ ನಿಪುಣತೆಯನ್ನು ಪಡೆದ ಪರಿಣಾಮವಾಗಿ ಬೀದರಿನ ಮೂಲ ಶಬ್ದ ಬಿದಿರ> ಬಿದರೆ> ಬಿದಿರೆ> ಬಿದಿರುಪುರ >ಬಿದಿರೂರು> ಬೀದರ್ ಆಗಿದೆ ಎಂದು ರಾಜಶೇಖರ್ ಕೆ.ಎಲ್ ಅವರು ಉಲ್ಲೇಖಿಸುತ್ತಾರೆ. ನಿಜಾಂರ ಕಾಲದ ನಕ್ಷೆಯೊಂದರಲ್ಲಿ ಆಂಗ್ಲ ಭಾಷೆಯಲ್ಲಿ ಃಜಜಜಡಿ ಎಂದು ನಮೂದಾಗಿದೆ. ಇದನ್ನು ಕನ್ನಡದಲ್ಲಿ ಬಳಸಿಕೊಂಡಾಗ ಬೇಡರ್/ಬೇದರ್ ಎಂದು ಬಳಸಬಹುದಾಗಿದೆ. ಖಚಿತವಾಗಿ ಬಿದ್ರಿ ಶಬ್ಧದ ನಿಷ್ಪತ್ತಿಯ ಬಗ್ಗೆ ಹಲವಾರು ಬಗೆಯ ಗೊಂದಲಗಳಿರುವುದು ದಿಟ.

**ಬಿದ್ರಿ ಕಲೆಯ ಚಾರಿತ್ರಿಕ ಹಿನ್ನೆಲೆ.**

ಶಿಲಾಯುಗದಿಂದಲೂ ಕಲೆಯ ಪ್ರಕಾರ ಕಾಣಿಸುತ್ತದೆ. ಮುಂದಿನ ಯುಗಗಳಲ್ಲಿ ಕಲೆ ಹಂತಹಂತವಾಗಿ ಬದಲಾವಣೆ ಹೊಂದಿರುವುದು ಇತಿಹಾಸದ ಪುಟಗಳಿಂದ ವೇದ್ಯವಾಗುತ್ತದೆ. ಮಣ್ಣಿನ ಮಡಕೆಗಳ ಮೇಲೆ ಲೋಹದ ವಸ್ತುಗಳ ಮೇಲೆ ಚಿತ್ತಾರಗಳನ್ನು (ನಕ್ಷೆ) ಬಿಡಿಸುವ ಕಲೆಯನ್ನೂ ಮಾನವ ಬಹು ಹಿಂದೆಯೇ ಬೆಳೆಸಿಕೊಂಡಿದ್ದ. ಇದು ಮಾನವನ ವಿಕಾಸದ ಸಂಕೇತವಾಗಿ ರಾಜಾಶ್ರಯದಲ್ಲಿ ಈ ಕಲೆಗಳು ಹುಲುಸಾಗಿ ಬೆಳೆದು ಜನ ಮನ್ನಣೆಗಳಿಸಿವೆ. ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದ ಕಳಚೂರಿ ಅರಸರ ಕಾಲದಲ್ಲಿ ವಿವಿಧ ಪರಿಕರಗಳ ಮೇಲಲ್ಲದೇ ಕಬ್ಬಿಣದ ವಸ್ತುಗಳ ಮೇಲೆ ಬೆಳ್ಳಿ, ಬಂಗಾರದ ಲೇಪಿಸುವ ಹಾಗೂ ಚಿತ್ತಾರ ಕೆತ್ತಿ ಅದರಲ್ಲಿ ಕೂಡಿಸುವ ಕಲೆ ಜಾರಿಯಲ್ಲಿದ್ದುದು ಕಂಡುಬರುತ್ತದೆ. ಸುಮಾರು ೮೦೦ ವರ್ಷಗಳಿಂದ ಬೆಳೆದುಬಂದ  ಸಂಪ್ರದಾಯದ ಪ್ರಕಾರ ದಕ್ಷಿಣದ ಬಹಮನಿ ವಂಶದೊಂದಿಗೆ ಬಿದ್ರಿ ಕಲೆಯ ಸಂಬಂಧವಿದೆ. ಒಂದು ಸಂಪ್ರದಾಯದ ಪ್ರಕಾರ ಬಿದ್ರಿಯ ಕಲಾತಂತ್ರವು ಇರಾನದಿಂದ ಇರಾಕಿನ ಮೂಲಕ ಬಹುಮನಿ ರಾಜ್ಯವನ್ನು  ಬಂದು ಸೇರಿತು. ಇದನ್ನು ಭಾರತಕ್ಕೆ ತಂದವನು ಸಿಜಿಸ್ತಾನ್ (ಇರಾನ್)ದಿಂದ ಧರ್ಮ ಪ್ರಚಾರಕ್ಕೆ ಬಂದ ಸೂಫಿ ಖ್ವಾಜಾ ಮೊಯಿನೊದ್ದೀನ್ ಹಸನ ಚಿಸ್ತಿ ಕ್ರಿ.ಶ ೧೧೯೨( ಅ.ಹಿ ೫೮೭) ನಲ್ಲಿ ಅವರ ಮೂಲಕ ಇದು ಮೊದಲಿಗೆ ಅಜಮೀರನ್ನು ಪ್ರವೇಶಿಸಿತು. ಅಲ್ಲಿಂದ ಅದು ವಿಜಾಪುರವನ್ನು ಪ್ರವೇಶಿಸಿತು. ಅನಂತರ ಎರಡನೆಯ ಅಲ್ಲಾವುದ್ದೀನ ಬಹಮನಿಯು (ಕ್ರಿ.ಶ ೧೪೩೬–೫೭) ಕರಕುಶಲ ವಸ್ತುಗಳು ನಿರ್ಮಿಸುತ್ತಿದ್ದ ಕಲಾಕಾರರನ್ನು ವಿಜಾಪುರದಿಂದ ಕರೆತಂದು ಬೀದರಿನಲ್ಲಿ ನೆಲೆಗೊಳಿಸಿದ.

ಮತ್ತೊಂದು ಕಥೆಯ ಪ್ರಕಾರ ಈ ಕಲೆಯ ಮೂಲನೆಲೆ (ಇರಾಕ್) ಡಮಾಸ್ಕಸ್ ಅಲ್ಲಿನ ಕೆಲವರು ಬೆಳ್ಳಿ ಬಂಗಾರವನ್ನು ಹುದುಗಿಸಿ ಕುಸುರಿ ಕೆಲಸವನ್ನು ಮಾಡುವುದರಲ್ಲಿ ನಿಪುಣರಾಗಿದ್ದರು. ಅವರ ಒಂದು ಗುಂಪು ಸಿರಿಯಾ ಅಥವಾ ಇರಾಕಿನ ಮೂಲಕ ಭಾರತಕ್ಕೆ ಬಂದಿತು. ಅವರಲ್ಲಿ ಕೆಲವರು ರಾಜಸ್ಥಾನದ ಅಜಮೀರಿನಲ್ಲಿ ವಾಸವಾಗಿದ್ದರು. ಅಲ್ಲಿಂದ ಈ ಕುಶಲಕರ್ಮಿಗಳು ಕಾರಣಾಂತರಗಳಿಂದ ೧೫ನೆಯ ಶತಮಾನದಲ್ಲಿ ದಕ್ಷಿಣದತ್ತ ವಲಸೆ ಹೊರಟರು. ಅವರು ಬಂದು ನೆಲೆಸಿದ್ದು ಹೈದರಬಾದಿನ ಸಮೀಪದ ಬೀದರಿನಲ್ಲಿ ಮುಂದೆ ಅನೇಕ ಶತಮಾನಗಳವರೆಗೆ ಈ ಕಲೆಯು ಆ

ಪ್ರದೇಶದಲ್ಲಿ ಪಸರಿಸಿ ಗಟ್ಟಿಗೊಂಡಿತು. ಅದಕ್ಕೆ ಬಿದ್ರಿ ಕಲೆಯೆಂಬ ಹೆಸರು ರೂಢವಾಯಿತು. ಅತ್ಯಂತ ಪ್ರಾಚೀನವಾದ ಕಲಾವಿದ ಅಬ್ದುಲ್ಲಾ ಬಿನ್ ಖೈಸರ್ ಅವನು ಮತ್ತು ಅವನ ಶಿಷ್ಯ ಶಿವಣ್ಣ ಇದ್ದುದು ವಿಜಾಪುರದಲ್ಲಿ ಎರಡನೆಯ ಅಲ್ಲಾವುದ್ದೀನ ಬಹಮನಿಯ (೧೪೩೮-೧೪೫೭) ಪಟ್ಟಾಭೀಷೇಕದ ಕಾಣಿಕೆಗಳ ರೂಪದಲ್ಲಿ ಅರ್ಪಿಸಲಾದ ಕಲಾಕೃತಿಗಳನ್ನು ಕಂಡು ಸುಲ್ತಾನರು ಪ್ರಭಾವಿತನಾಗಿ ಕುಶಲಕರ್ಮಿಗಳನ್ನು ವಿಜಾಪುರದಿಂದ ಕರೆಯಿಸಿಕೊಂಡು ಬೀದರಿನಲ್ಲಿ ನೆಲೆಸುವಂತೆ ಮಾಡಿದನು. ಬಿದ್ರಿ ಕರಕುಶಲ ಕಲೆಯು ಬೀದರಿನಲ್ಲಿ ಮೊಟ್ಟಮೊದಲಿಗೆ ಪರಿಚಯವಾಗಿದ್ದು ೧೫ನೆಯ ಶತಮಾನದ ಆರಂಭದಲ್ಲಿಯೇ ಎನ್ನಬಹುದು. ಬಹಮನಿ ಸುಲ್ತಾನ ಅಹಮದ್ ಶಹವಲಿ ಬಹಮನಿ( ಕ್ರಿ.ಶ ೧೪೨೨-೧೪೨೬) ತನ್ನ ರಾಜಧಾನಿಯನ್ನು ಕಲಬುರ್ಗಿಯಿಂದ ಬೀದರಿಗೆ ವರ್ಗಾಯಿಸಿದಾಗ ರಂಗೀನ ಮಹಲ್ ಹಾಗೂ ಇತರ ಕಲಾತ್ಮಕ ಕಟ್ಟಡಗಳನ್ನು ಇರಾನ್‌ನಿಂದ ಕುಶಲಕರ್ಮಿಗಳನ್ನು ಕರೆಸಿದ. ಇವರಲ್ಲಿ ಅಬ್ದುಲ್ಲಾ ಬಿನ್ ಖೈಸರ್ ಎಂಬಾತ ಸತುವಿನ ಮಿಶ್ರಲೋಹದ ಮೇಲೆ ಚಿನ್ನದ ಕುಸುರಿ ಕೆಲಸವನ್ನು ಮಾಡಿ ಸುಂದರ ಕಲಾಕೃತಿ ವಸ್ತುಗಳನ್ನು ತಯಾರಿಸಬಲ್ಲವನಾಗಿದ್ದ. ಸತುವು ಬಿಳಿಯದಾಗಿರುವುದರಿಂದ ಅದರಲ್ಲಿ ಬೆಳ್ಳಿ ಕೂಡಿಸಿದ್ದರೂ ಅದು ಕಾಣುತ್ತಿರಲಿಲ್ಲ. ಕಾರಣ ಅವೆರಡರ ಬಣ್ಣ ಒಂದೇಯಾಗಿದ್ದವು.

**ಸುಲ್ತಾನರ ಕಾಲ (ಕ್ರಿ.ಶ.೧೨೦೬-೧೫೨೬).**

೧೪ನೆಯ ಶತಮಾನದ ಕುಶಲಕರ್ಮಿ ಅಬ್ದುಲ್ಲಾ ಬಿನ್ ಖೈಸರ್‌ನು ಒಮ್ಮೆ ಕೋಟೆಯ ಕಟ್ಟಡದ ಕೆಲಸಕ್ಕೆ ಈ ಕಲಾಕೃತಿಯೊಂದಿಗೆ ಹೋದಾಗ ಆತನ ಕೈಯಿಂದ ಕಲಾಕೃತಿ ಜಾರಿ ಕೆಸರಿನಲ್ಲಿ ಬಿದ್ದು ಸತುವಿನ ಬಣ್ಣವು ಕಪ್ಪಾಗುವುದು ಹಾಗೂ ಬೆಳ್ಳಿ ಮತ್ತು ಬಂಗಾರ ತಮ್ಮ ಮೂಲರೂಪದಲ್ಲಿರುವುದನ್ನು ಕಂಡು ಆಶ್ಚರ್ಯಪಟ್ಟು, ಕಲಾಕೃತಿ ಬಿದ್ದ ಸ್ಥಳವನ್ನು ಮಣ್ಣು ಪರೀಕ್ಷೆ ಮಾಡಿದ. ಮಣ್ಣಿನ ವಾಸನೆ ಹಾಗೂ ರುಚಿ ವಿಚಿತ್ರವಾಗಿದರುವುದನ್ನು ಕಂಡುಕೊಂಡನು. ಆ ಮಣ್ಣಿಗೆ ಉಪ್ಪು ಹಾಗೂ ಖಾರದ ವಿಶಿಷ್ಟ ರುಚಿ ಇರುವುದನ್ನು ತಿಳಿದಕೊಂಡ. ಕಲಾಕೃತಿಗಳ ಮೇಲೆ ವಿವಿಧ ರೀತಿಯಲ್ಲಿ ಮಣ್ಣು ಪ್ರಯೋಗಿಸಿದ ಫಲವಾಗಿ ಬಿದ್ರಿಕಲೆ ಇಲ್ಲಿಂದಲೇ ಹುಟ್ಟಿತೆಂಬುದು ಜನಪದರ ವಾದಗಳಿವೆ. ಈ ಸೃಷ್ಟಿಕರಣದ ಹಿನ್ನೆಲೆಯಲ್ಲಿ ದೊರೆತಿರುವ ಲಿಖಿತ ದಾಖಲೆ ಎಂದರೆ ಪರ್ಶಿಯನ್ ಭಾಷೆಯಲ್ಲಿ ಬರೆದಿರುವ (ಕ್ರಿ.ಶ.೧೭೫೯) ಛಾಹಾರ್ ಗುಲ್ ಶನ್. ಛಾಹಾರ್ ಗುಲ್ ಶನ್‌ದ ೨ನೆಯ ಸಂಪುಟದಲ್ಲಿ ದಕ್ಷಿಣದ ೫ ಸುಭಾಗಳನ್ನು (ಆಡಳಿತ ವಿಭಾಗಗಳು) ಹೆಸರಿಸಲಾಗಿದೆ. ಅವುಗಳಲ್ಲಿ ಬೀದರ ನಗರವೂ ಒಂದು. ಈ ನಗರವನ್ನು ಅದರ ಪರ್ಶಿಯನ್ ಹಾಗೂ ಮೋಗಲ್ ಹೆಸರುಗಳಿಂದ ಸೂಚಿಸಲಾಗಿದೆ. ಬ್ರಿಟೀಷ್ ಗ್ರಂಥಾಲಯದಲ್ಲೂ ಹಸ್ತಪ್ರತಿಯಲ್ಲಿ ಈ ಕೆಳಗಿನ ಪರಿಚ್ಛೇದವಿದೆ. ಮಹಮ್ಮದ್ ಬಾದ್ ಸುಭಾವನ್ನು ಝೂಫರಾಬಾದ್ (ಬೀದರ) ಎಂದು ಕರೆಯಲಾಗಿದೆ. ಈ ಸುಭಾದಲ್ಲಿ ಅತ್ಯಂತ ಸುಂದರವಾದ ಹಾಗೂ ಅಪರೂಪದ ಬಿದ್ರಿ ಪಾತ್ರೆಗಳನ್ನು ಮಾಡಲಾಗುತ್ತದೆ. ಇಲ್ಲಿಯ ಕುಶಲಕರ್ಮಿಗಳು ಅದನ್ನು ಅತಿ ಸೂಕ್ಷ್ಮವಾಗಿ ತಯಾರಿಸುತ್ತಾರೆ.

**ಮೊಗಲರ ಕಾಲ: (ಕ್ರಿ.ಶ೧೫೨೬-೧೮೫೭).**

ಬಹಮಿನಿ ರಾಜ್ಯದ ಪತನದ ನಂತರ ಹೈದರಬಾದಿನ ನಿಜಾಮನ ಆಡಳಿತದಲ್ಲಿ ಈ ಕಲೆಯ ಬೆಳವಣಿಗೆಯಾಗಿ ಮದರಸಾ ಸನತ್ ಹಿಫರತ್ ಎಂಬ ಹೆಸರಿನ ಶಾಲೆಯೊಂದು ಬೀದರಿನಲ್ಲಿ ಆರಂಭವಾಯಿತು. ಅದರಲ್ಲಿ ಬಿದರಿ ಕಲೆಯೊಂದಿಗೆ ವಿವಿಧ ಬಗೆಯ ಕರಕುಶಲ ಕಲೆಗಳಿಗಾಗಿ ತರಬೇತಿ ನೀಡಲಾಗುತ್ತಿತ್ತು. ಬಿದ್ರಿ ಕಲಾನಿಪುಣರಿಗೆ ಮಾಸ್ಟರ್ ಎಂದು ಕರೆಯಲಾಗುತ್ತಿತ್ತು. ರಾಮಣ್ಣ ಮತ್ತು ಹೇಮಣ್ಣ ಎಂಬ ಪ್ರಸಿದ್ಧ ಚಿನಾವರರು ೧೪ನೇಯ ಶತಮಾನದ ಉತ್ತರಾರ್ಧದಲ್ಲಿ ಬೀದರನಲ್ಲಿದ್ದು ಬಂಗಾರ, ಬೆಳ್ಳಿ ಇತ್ಯಾದಿ ಕಲಾಕೃತಿಗಳಲ್ಲಿ ಮುತ್ತು, ರತ್ನ ಹವಳಗಳ ಜೋಡಣೆಯ ಕಲೆ ಕರಗತ ಮಾಡಿಕೊಂಡಿದ್ದರೆಂಬ ಲಕ್ಕಣ ದಂಡೇಶನ ಶಿವತತ್ವ ಚಿಂತಾಮಣಿ ಗ್ರಂಥದಿಂದ ತಿಳಿದು ಬರುತ್ತದೆ. ಸ್ಥಳೀಯ ಚಿನಾವಾರದ ಕಲಾಕೃತಿಗಳ ಪ್ರೇರಣೆಯಿಂದ ಅಬ್ದುಲ್ ಬಿನ್ ಖೈಸರನು ಪರ್ಷಿಯಾದಿಂದಲೇ ಈ ಕಲೆಯನ್ನು ಕರಗತ ಮಾಡಿಕೊಂಡು ಬಂದಿದ್ದನೆಂಬುದು ಮತ್ತೊಂದು ಅಭಿಪ್ರಾಯವಾಗಿದೆ.

ಬಹಮನಿ ವಂಶದ ಕಾಲದಲ್ಲಿ ಊರ್ಜಿತವಸ್ಥೆಯನ್ನು ಮುಟ್ಟಿದ ಈ ಬಿದ್ರಿ ಕಲೆಯನ್ನು ಪರ್ಶಿಯಾದ ಸಾಂಸ್ಕೃತಿಕ ಮತ್ತು ಕಲೆಯ ಮೂಲದಿಂದ ಬಂದಿರುವುದಾಗಿ ಭಾವಿಸಲಾಗಿದೆ. ಅರೇಬಿಯಾ ಮತ್ತು ಪರ್ಶಿಯಾದಲ್ಲಿ ಸ್ಟೀಲ್ ಅಥವಾ ತಾಮ್ರದ ವಸ್ತುಗಳ ಮೇಲೆ ಬಂಗಾರದ ಎಲೆಗಳನ್ನು ಇನ್ ಲೇ ಮಾಡುವ ಕಲೆಯು ಬಿದ್ರಿ ಕಲೆಯನ್ನು ಹೋಲುತ್ತದೆ. ಅಬ್ದುಲ್ ಬಿನ್ ಖೈಸರನು ಮಹಮ್ಮದ್ ಗವಾನನ ಮದರಸಾದಲ್ಲಿ ಈ ಕಲೆಯನ್ನು ಮುಂದುವರೆಸಿಕೊಂಡು ಬಂದ ಕಲಾವಿದ ಸಜ್ಜಾದ್ ಬಾಷಾ ಹಾಗೂ ಅವನ ನೆಚ್ಚಿನ ಶಿಷ್ಯ ಬಸಣ್ಣ (ಬಸಪ್ಪ) ಇವರು ತಮ್ಮ ಚತುರತೆಯಿಂದ ಬಿದ್ರಿ ಕಲೆಯನ್ನು ಬೆಳೆಸಿದರು. ಹೈದರಾಬಾದಿನ ಸ್ಟೇಟ್ ಮ್ಯೂಸಿಯಂನಲ್ಲಿರುವ ಡೆಕ್ಕನ್ನಿನ ಚಿತ್ರವೊಂದರಲ್ಲಿ ಬಿದ್ರಿಯ ಚಿತ್ರವನ್ನು ಸುಮಾರು ಕ್ರಿ.ಶ ೧೬೫೭ರಲ್ಲಿ ಬೀದರಿನಲ್ಲಿ ಚಿತ್ರಿಸಲಾಗಿದ್ದು, ಇದರಲ್ಲಿ ಅಬಿಸೀನಿಯನ್ ಅಧಿಕಾರಿಯೊಬ್ಬನು ಬೆಳ್ಳಿ ಮತ್ತು ಹಿತ್ತಾಳೆಯ ಇನ್ ಲೇ ಇರುವ ಬಿದ್ರಿ ಹುಕ್ಕಾವನ್ನು ಸೇದುತ್ತಿರುವುದನ್ನು ಚಿತ್ರಿಸಲಾಗಿದೆ. ಹದಿನೇಳು ಹದಿನೆಂಟನೆಯ ಶತಮಾನಗಳ ಕೆಲವು ಭಾರತೀಯ ಚಿತ್ರಗಳಲ್ಲಿ ಬಿದ್ರಿ ವಸ್ತುಗಳನ್ನು ಗುರುತಿಸಬಹುದು.

ಹದಿನೇಳನೆಯ ಶತಮಾನದ ಮೊದಲಾರ್ಧದಲ್ಲಿ ಬಿದ್ರಿ ವಸ್ತುಗಳ ಆಕಾರಗಳನ್ನು ವಸ್ತುಗಳಿಂದ ಪಡೆಯಲಾಗುತ್ತಿತ್ತು. ಜೊತೆ ಜೊತೆಗೆ ಮೊಗಲರ ಅಲಂಕರಣ ಕಲೆಯ ಪ್ರಭಾವವು ಕಂಡುಬರುತ್ತದೆ. ಯೂರೋಪಿಯನ್ ಆಶಯ ಮಯ್ಯು ಆಕಾರಗಳ ಬಿದ್ರಿ ವಸ್ತುಗಳನ್ನು ಕಾಣತೊಡಗಿದ್ದವು. ಆದರೆ ಒಟ್ಟಾರೆಯಾಗಿ ಎಲ್ಲಾ ಬಿದ್ರಿ ವಸ್ತುಗಳ ಡೆಕ್ಕನ್ನಿನ ಪ್ರಭಾವ ಮುದ್ರೆಯನ್ನು ಪ್ರದರ್ಶಿಸುತ್ತವೆ. ಬಿದ್ರಿ ವಸ್ತುಗಳಲ್ಲಿ ಹುಕ್ಕಾದ ಬುಡದ ಭಾಗದ ನಿರ್ಮಾಣವು ಹೆಚ್ಚಿನ ಪ್ರಮಾಣದಲ್ಲಿದೆ. ಅವುಗಳ ವಿನ್ಯಾಸದಲ್ಲಿ ಅರಬಿ ಶೈಲಿಯಲ್ಲಿ ಸಸ್ಯಗಳ ಆಶಯಗಳು ಹಾಗೂ ಅನಂತರದಲ್ಲಿ ಹೂವುಗಳ ಹೆಚ್ಚಿನ ಬಲವನ್ನು ಪಡೆದಿವೆ. ಈ ರೀತಿಯ ಸಸ್ಯಗಳ ಆಶಯಗಳ ಮೊಗಲರ ಕಲೆಗಳಲ್ಲಿ ಸುಮಾರು ಕ್ರಿ.ಶ ೧೬೨೦ ರಿಂದ ಪ್ರಾರಂಭವಾಯಿತು. ಇದಕ್ಕೆ ಜಹಾಂಗೀರ ಬಾದಶಾಹ ಸ್ಫೂರ್ತಿಯೆಂದು ಹೇಳಬಹುದು.

**೧೭ನೆಯ ಶತಮಾನ.**

೧೭ನೆಯ ಶತಕದ ವರ್ಣ ಚಿತ್ರಗಳಲ್ಲಿ ಕೂಡ ಬಿದ್ರಿಯನ್ನು ಕಾಣಬಹುದು. ಜಗದೀಶ ಮಿತ್ತಲ್ ಅವರು ಸುಮಾರು ಕ್ರಿ.ಶ ೧೬೨೫ರಲ್ಲಿ ಕಲಾಕೃತಿಯೊಂದರ ಕಡೆಗೆ ಗಮನ ಸೆಳೆದಿದ್ದಾರೆ. ಇದು ಹೈದರಬಾದಿನ ಸಂಗ್ರಹಾಲಯದಲ್ಲಿದೆ. ಇದು ಬೆಳ್ಳಿ ಮತ್ತು ಮಿಶ್ರಲೋಹವನ್ನು ಹುದುಗಿಸಿದ ಹುಕ್ಕಾದ ಚಿತ್ರವಾಗಿದೆ. ಡೆಕ್ಕನ್ನಿನ ಚಿತ್ರಕಲೆಯ ಬಗೆಗೆ ಮಾರ್ಕ ಝೂಬ್ರೋವಸ್ಕಿಯ ಪುಸ್ತಕದಲ್ಲಿ ಸುಮಾರು ಕ್ರಿ.ಶ ೧೬೫೧ರ ಕಾಲದ ಸುಲ್ತಾನ ಮಹಮ್ಮದ್ ಆದಿಲ್ ಶಾಹನ ಚಿತ್ರವೊಂದಿದೆ. ಅದರಲ್ಲಿ ಅವನು ಕೈಯಲ್ಲಿ ಹಿಡಿದು ಸೇದುತ್ತಿರುವ ಹುಕ್ಕಾವು ಕಪ್ಪು ಬಣ್ಣದಾಗಿದ್ದು, ಅಲಂಕರಣವಿಲ್ಲದ ಲೋಹ ನಿರ್ಮಿತವಾಗಿದೆ. ಇದು ಬಿದ್ರಿಯೇ ಆಗಿರಬೇಕು. ನವಾಬ ಅಬ್ದುಲ್ ಗಫಾರ್ ಖಾನನ ಚಿತ್ರದಲ್ಲಿ ಅವನು ಹಿಡಿದಿರುವ ಹುಕ್ಕಾವು ಬಿದ್ರಿಯದೆಂಬುದು ನಿಸ್ಸಂದೇಹವಾಗಿದೆ.

**೧೮ನೆಯ ಶತಮಾನ.**

ಕ್ರಿ. ಶ ೧೮೭೭ರಲ್ಲಿ ನಂತರ ಬಿದ್ರಿ ಕಲೆಯ ಉತ್ತಮ ಕಲಾಕೃತಿಗಳು ಸಿದ್ಧವಾಗತೊಡಗಿದ್ದವು. ಪೂರ್ಣಿಯಾದ ಕಲೆಯು ಎರಡು ಭಾಗಗಳಲ್ಲಿ ವಿಭಜನೆಗೊಂಡಿದೆ. ಒಂದು ಪೂರ್ಣಿಯಾದಲ್ಲಿ, ಇನ್ನೊಂದು ಬೇಲ್ಲೂರಿನಲ್ಲಿ, ಬೇಲ್ಲೂರು ಪೂರ್ಣಿಯಾದಿಂದ ಕೆಲವು ಕಿ.ಮೀ ದೂರದಲ್ಲಿದೆ. ಇಲ್ಲಿನ ಕಾರ್ಮಿಕರು ಹಿಂದು ಧರ್ಮದವರಾಗಿದ್ದರೂ ಪೂರ್ಣಿಯಾದಲ್ಲಿ ಕಾರ್ಮಿಕರು ಹಿಂದು ಮತ್ತು ಮುಸ್ಲಿಂ ಧರ್ಮಗಳಿಗೆ ಸೇರಿದವರಾಗಿದ್ದಾರೆ. ಒಂದು ಪ್ರಕಾರದ ಕಲೆಗೆ ಫರ್ಕಿ ಎಂದೂ ಇನ್ನೊಂದು ಪ್ರಕಾರಕ್ಕೆ ಕರ್ನಾ ಬಿದ್ರಿ ಕಲೆ ಎಂದೂ ಹೆಸರು ಬಂದಿದೆ. ವಿಶ್ವದಲ್ಲಿ ಬೀದರ್ ಬಿದ್ರಿ ಕಲೆಯ ಕೇಂದ್ರ ಬಿಂದುವಾಗಿದ್ದರೂ, ಹೈದರಬಾದ್, ಗೋಲ್ಕಂಡ, ಬಿಜಾಪುರ, ಅಹಮದ್ ನಗರ, ಅಜಮೀರ್, ಮುಂಬಯಿ, ಲಕ್ನೋ, ಮುರ್ಶಿದಾಬಾದ್, ಪೂರ್ಣಿಮ, ಸೂರತ್, ಝಾವರ್ ಜೈಪುರ, ದೆಹಲಿ, ಫೈಜಾಬಾದ್ ಬನಾರಸ್, ಕಲ್ಕತ್ತಾ, ಗಯಾ ಈ ಸ್ಥಳಗಳು ಕೂಡ ಕೇಂದ್ರ ಬಿಂದುಗಳಾಗಿವೆಯೆಂದು ಆಧ್ಯಯನದಿಂದ ಗೊತ್ತಾಗುತ್ತದೆ. ಕ್ರಿ.ಶ ೧೮೮೧ರಲ್ಲಿ ಸಿಮ್ಲಾ ಕ್ರಿ.ಶ ೧೮೮೩–೮೪ರಲ್ಲಿ ಜೈಪುರ ಕ್ರಿ.ಶ ೧೮೮೬ರಲ್ಲಿ ಇಂಗ್ಲೆಂಡ್‌ಗಳಲ್ಲಿ ಬಿದ್ರಿಕಲೆ ಪ್ರದರ್ಶನಗೊಂಡು ವಿಶ್ವವ್ಯಾಪಕವಾಯಿತು. ಇದರಿಂದ ಬಿದ್ರಿ ಕಲಾಕೃತಿಗಳ ಬೇಡಿಕೆ ಹೆಚ್ಚಾಗಿ ಕುಶಲಕರ್ಮಿಗಳಿಗೂ ಮಾನ್ಯತೆ ಪ್ರಾಪ್ತವಾಗಲಾರಂಭಿಸಿತು.

ಛಾಹಾರ್ ಗುಲಶನ್ ಗುರುತಿಸುವಂತೆ ಬೀದರ ನಗರವು ಬಿದ್ರಿ ಕಲೆಯ ನಿರ್ಮಾಣ ಕೇಂದ್ರವಾಗಿತ್ತು. ಕ್ರಿ.ಶ೧೭೭೦ರಲ್ಲಿ ಫೈಜಾಬಾದಿನ ನಿರ್ಮಾಣಗೊಂಡ ಅಟ್ಲಾಸಿನಲ್ಲಿಯೂ ಇದರ ನಿರೂಪಣೆಯನ್ನು ಕಾಣಬಹುದು. ಅವನು ಭಾರತದ ರಾಜಕೀಯ ಹಾಗೂ ಸಾಮಾಜಿಕ ಇತಿಹಾಸಗಳಿಗೆ ಸಂಬಂಧಿಸಿದ ಅನೇಕ ಸುಚಿತ್ರ ಕೃತಿಗಳನ್ನು ರಚಿಸುವುದಕ್ಕೆ ಸ್ಥಳೀಯ ಕಲಾವಿದರನ್ನು ನೇಮಿಸಿಕೊಂಡು ಅವುಗಳಲ್ಲಿ ಮೊದಲನೆಯದಾದ ಅಟ್ಲಾಸಿನಲ್ಲಿ ಬೀದರ ಸುಭಾದ ನಕಾಶೆಯಿದೆ: ಅದು ಈಗ ಇಂಡಿಯಾ ಲೈಬ್ರರಿಯಲ್ಲಿದೆ. ಈ ನಕಾಶೆಯ ಎರಡು ಬದಿಗಳಲ್ಲಿ ಚಿತ್ರಗಳಿವೆ ಇವುಗಳಲ್ಲಿನ ಕಾಶೆಯಿದೆ. ಸೂಫಿಗಳ ಬೇರೆ ಬೇರೆ ಪಂಥಗಳನ್ನು ಚಿತ್ರಿಸುತ್ತವೆಯಾದರೂ ಬೀದರಿನಲ್ಲಿ ನಿರ್ಮಿತವಾದ ಬಿದ್ರಿ ಪಾತ್ರೆಗಳನ್ನು ಮತ್ತು ಕುಶಲಕರ್ಮಿಗಳ ಚಿತ್ರಗಳನ್ನು ಒಳಗೊಂಡಿವೆ. ೧೮೦೬ರಲ್ಲಿ ಭಾರತದಲ್ಲಿ ಅನೇಕ ಬದಲಾವಣೆಗಳಾದವು.

ಔದ್ಯೋಗಿಕರಣದಿಂದಾಗಿ ಅನೇಕ ನಗರಗಳಲ್ಲಿ ಹೊರ ರಾಷ್ಟ್ರದಲ್ಲಿ ಕಂಡುಹಿಡಿದ ಅನೇಕ ಉಪಕರಣಗಳ ಉಪಯೋಗ ನಡೆಯುತ್ತಿತ್ತು. ಈ ಮಧ್ಯೆ ಪೂರ್ಣಿಯಾ ಎಂಬಲ್ಲಿ ಕಂಡುಹಿಡಿದ ವೈಜ್ಞಾನಿಕ ಉಪಕರಣಗಳ ಉಪಯೋಗ ನಡೆಯುತ್ತಿತ್ತು. ಈ ಮಧ್ಯೆ ಪೂರ್ಣಿಯಾ ಎಂಬಲ್ಲಿ ಈ ಬಿದ್ರಿ ಕಲೆಯ ಕಾರ್ಮಿಕರ ಒಂದು ಸಣ್ಣ ಹಳ್ಳಿ ನಿರ್ಮಾಣಗೊಂಡಿತು. ನಂತರ ಇವರಿಗೆ ಆಂಗ್ಲರಿಂದ ಸಹಯೋಗ ದೊರಕಿತು. ಮತ್ತು ನಿರ್ಮಾಣಗೊಂಡ ವಸ್ತುಗಳ ಹೊರ ರಾಷ್ಟ್ರಗಳಿಗೆ ಕಳುಹಿಸುವುದು ಪ್ರಾರಂಭವಾಯಿತು. ಈ ಕಾಲದಲ್ಲಿ ವಸ್ತುಗಳಲ್ಲಿನ ನಕ್ಷೆಗಳಲ್ಲಿನ ನಕ್ಷೆ ಹೆಚ್ಚು ಸ್ಪಷ್ಟವಾಗಿದೆ. ಬೀದರ, ಪೂರ್ಣಿಯಾ, ಲಕ್ನೋ ಮುರ್ಷಿಯಾಬಾದ ಇದರ ಮುಖ್ಯ ಕೇಂದ್ರಗಳಾಗಿದ್ದವು. ಪೂರ್ಣಿಯಾದಲ್ಲಿ ಇಂದಿಗೂ ಆ ಉದ್ದಿಮೆಯು ಚೆನ್ನಾಗಿ ಬೇರೂರಿದೆ. ಆಧುನಿಕರಣದ ಶತಮಾನದಿಂದಲೂ ನಡೆದು ಬಂದಿದೆಯೆಂದು ಖಚಿತವಾಗಿ ಹೇಳಬಹುದು. ಬುಕವನ ಒಟ್ಟು ೭೧ ಜನ ಕುಶಲಕರ್ಮಿಗಳು ಈ ಉದ್ದೇಶದಲ್ಲಿ ತೊಡಗಿಕೊಂಡಿದ್ದಾರೆ ಎಂದು ಅಂದಾಜು ಮಾಡಿದ್ದಾರೆ. ಇಲ್ಲಿ ತಯಾರಾದ ವಸ್ತುಗಳನ್ನು ಮುರ್ಷಿದಾಬಾದ್, ಕಲ್ಕತ್ತಾ, ಢಾಕಾ, ದಿನಾಜಪುರ ಮತ್ತು ರಂಗಪುರಕ್ಕೆ ಕಳುಹಿಸಲಾಗುತ್ತಿತ್ತು. ಹಾಗಾಗಿ ಈ ಉದ್ದಿಮೆಗೆ ಸಾಕಷ್ಟು ಪ್ರಸಿದ್ಧಿಯೂ ದೊರಕಿತು. ಬುಕವನ್ ಪ್ರಕಾರ ಬಿದ್ರಿಯ ಹೆಚ್ಚಿನ ಅಂಶವು ಸ್ಥಳೀಯರ ಜಸ್ತ ಎಂದು ಕರೆಯುವ ಲೋಹದಾಗಿತ್ತು. ಬುಕನನು ಅದನ್ನು ಸಹನೀಯವಾಗದ ಶುದ್ಧ ಸತು ಅಥವಾ ಹಳೆಯ ರಾಸಾಯನಿಕ ಶಾಸ್ತ್ರಜ್ಞರು ಹೇಳುವ ಬಿಳಿಯ ಸತು ಎಂದು ತಿಳಿಯುತ್ತಾರೆ. ಪೂರ್ಣಿಯಾದಲ್ಲಿ ಬಿದ್ರಿ ನಿರ್ಮಾಣದ ಪ್ರತಿಯೊಂದು ಹಂತದಲ್ಲಿಯೂ ಪರಿಣಿತ ಕೆಲಸಗಾರರ ಗುಂಪು ತೂಗಿಕೊಳ್ಳುತ್ತಿತ್ತು. ಬೇರೆ ಬೇರೆ ಪ್ರಕ್ರಿಯೆಗಳಿಗಾಗಿ ಬೇರೆ ಬೇರೆ ಕೈಗಳನ್ನು ಸೇರುತ್ತಿತ್ತು. ೧೯ನೆಯ ಶತಮಾನದ ಮತ್ತು ಪ್ರಸ್ತುತದಲ್ಲಿಯೂ ಬೀದರ ಹೈದರಬಾದ ಪೂರ್ಣಿಯಾ ಲಕ್ನೋ ಮುಷಿದಾಬಾದ್ ಈ ಸ್ಥಳಗಳಲ್ಲಿ ಈ ಕಲೆ ಜೀವಂತವಾಗಿ ಉಳಿಯಲ್ಪಟ್ಟಿದೆ.

**೧೯ನೆಯ ಶತಮಾನ.**

೧೮೫೧ರ ಮಹಾಪ್ರದರ್ಶನಗಳಂತ ಅಂತರರಾಷ್ಟ್ರೀಯ ಪ್ರದರ್ಶನಗಳಿಂದಾಗಿ ದೊರೆತ ಉತ್ತೇಜನದ ಪರಿಣಾಮವಾಗಿ ಬಿದರಿ ಕೇಂದ್ರಗಳ ಬೆಳವಣಿಗೆಯಾಯಿತಾದರೂ ಅವುಗಳಲ್ಲಿ ಹೆಚ್ಚಿನವು ಬಹಳ ಕಾಲ ಬದುಕುವುದಿಲ್ಲ. ಶತಮಾನಸ ಆರಂಭದ ದಶಕಗಳಲ್ಲಿ ಬೀದರವು ಕೂಡ ಅಂಥ ಪ್ರಗತಿಯನ್ನು ಸಾಧಿಸಲಿಲ್ಲ. ಪ್ರಾರಂಭದಿಂದಲೂ ತಯಾರಿಸುವಲ್ಲಿ ತೊಡಗಿಸಿಕೊಂಡಿದ್ದಾರೆ. ಇವರಲ್ಲಿ ಅನೇಕರು ಈ ಕಲೆಯನ್ನು ತಮ್ಮ ಪೂರ್ವಜರಿಂದ ಪಡೆದಿದ್ದಾರೆ. ಈ ಕಲೆಯ ನಿರ್ಮಾಣ ಪಾರಂಪರಿಕ ರೀತಿಯಲ್ಲಿಯೇ ನಡೆಯುತ್ತಿದೆ. ೧೯೫೬ರಲ್ಲಿ ಭಾಷಾವಾರು ರಾಜ್ಯಗಳ ಪುನರ ವಿಂಗಡಣೆ ಆದ ನಂತರ ಬೀದರ ಕರ್ನಾಟಕ ರಾಜ್ಯಕ್ಕೆ ಹೈದರಾಬಾದಿನ ಆಂಧ್ರಪ್ರದೇಶದ ರಾಜಧಾನಿಯಾಯಿತು. ಬೀದರ ಚಿಕ್ಕನಗರವಾಗಿರುವುದು ಮತ್ತು ಸ್ಥಳಿಯ ವ್ಯಾಪಾರ ಕಡಿಮೆಯಾಗಿದ್ದರಿಂದ ಕುಶಲಕರ್ಮಿಗಳು ಹೈದ್ರಾಬಾದಿಗೆ ವಲಸೆ ಹೋದರು. ಇದರ ಪರಿಣಾಮವಾಗಿ ಬೀದರಿನಲ್ಲಿ ಕೆಲವೇ ಕಾರ್ಮಿಕರು ಉಳಿದುಕೊಂಡರು. ೧೯೭೫ರಲ್ಲಿ ಬೀದರ ನಗರದಲ್ಲಿ ೨೫ ಸಂಘಟನೆಗಳಿದ್ದವು. ಇದರಲ್ಲಿ ೧೧೦ ಜನ ಕುಶಲಕರ್ಮಿಗಳು ಕೆಲಸ ಮಾಡುತ್ತಿದ್ದರು. ೧೨೫ ನಮೂನೆಯ ಬಿದ್ರಿ ಕಲೆಯನ್ನು ಇಲ್ಲಿ ಕಾಣಬಹುದಾಗಿತ್ತು. ಕ್ರಿ.ಶ ೧೯೫೦ರಲ್ಲಿ ಸರ್ಕಾರ ಇಲ್ಲಿ ಒಂದು ತರಬೇತಿ ಕೇಂದ್ರವನ್ನು ಆರಂಭಿಸಿತು. ಇದರಲ್ಲಿ ಎರಡು ವರ್ಷಕಾಲ ಈ ಕಲೆಯನ್ನು ಶಿಕ್ಷಣ ನೀಡುವುದರ ಜೊತೆಗೆ ಇದಕ್ಕೆ ಬೇಕಾಗುವ ಅವಶ್ಯಕ ಕಚ್ಚಾ ವಸ್ತುಗಳ ಸರಬರಾಜು ಕೂಡ ಕೇಂದ್ರವೇ ಮಾಡುತ್ತದೆ.

ಶತಮಾನಗಳಿಂದ ನಡೆದು ಬಂದ ಈ ಬಿದ್ರಿ ಕಲೆಯ ಖ್ಯಾತಿಯನ್ನು ಉಳಿಸಿಕೊಳ್ಳುವ ಸಲುವಾಗಿ ೧೯೭೦ರಲ್ಲಿ ಮೈಸೂರು ರಾಜ್ಯ ಸರ್ಕಾರ ಬೀದರಲ್ಲಿಯೂ ಆರ್ಟಿಸಾನ್ ಟ್ರೈನಿಂಗ್ ಸೆಂಟರನ್ನು ಪ್ರಾರಂಭಸಿತು. ಇಲ್ಲಿಯೂ ಇತರ ಕರಕುಶಲ ಕಲೆಗಳಿಗಿಂತಲೂ ಬಿದ್ರಿ ಕಲೆಗೆ ಬಹಳ ಪ್ರಾಮುಖ್ಯತೆ ನೀಡಿದರು. ಶ್ರಮಕ್ಕೆ ತಕ್ಕ ಬೆಲೆ ದೊರೆಯದೆ ಇರುವುದರಿಂದ ಕೆಲವು ಕುಶಲಕರ್ಮಿಗಳು ಈ ವೃತ್ತಿಯನ್ನು ಬಿಡಲು ಯೋಚಿಸಿದ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ಕರಕುಶಲ ಕಲೆ ವಿಭಾಗವು ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟು ಬಿದ್ರಿ ಕಲೆಗಳನ್ನು ಖರೀದಿಸಿ ಭಾರತದ ಇತರ ರಾಜ್ಯಗಳಿಗೆ ಹಾಗೂ ವಿಶ್ವ ಮಾರುಕಟ್ಟೆಗೆ ರಫ್ತು ಮಾಡಲಾರಂಭಿಸಿತು. ಶತಮಾನಗಳಿಂದ ನಡೆದು ಬಂದ ಈ ಬಿದ್ರಿ ಕಲೆಯ ಖ್ಯಾತಿ ೧೯೮೦ರಿಂದ ದಶಕದ ಆರಂಭದಲ್ಲಿ ಕುಗ್ಗುತ್ತಾ ಹೋಯಿತು. ಈ ಬಿದ್ರಿ ಕಲೆಯ ಬೆಲೆ ಹೆಚ್ಚಾಗಿರುವುದರಿಂದ ವ್ಯಾಪಾರ ಮಳಿಗೆಗಳು ಇರಲಿಲ್ಲ. ಬಿದ್ರಿ ಕಲೆಯ ಹೈದರಾಬಾದ್‌ನಂತಹ ದೊಡ್ಡ ಪಟ್ಟಣದಲ್ಲಿ ಒಳ್ಳೆಯ ಬೆಲೆಗೆ ಮಾರುತ್ತಿದ್ದರು. ಕಾರ್ಮಿಕರಿಗಿಂತ ಹೆಚ್ಚಿನ ಲಾಭ ವ್ಯಾಪಾರಿಗಳಿಗೆ ದೊರೆಯುತ್ತಿತ್ತು ಇದರ ಪರಿಣಾಮವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಕಾರ್ಮಿಕರು ಬೇರೆ ಬೇರೆ ಉದ್ಯೋಗವನ್ನು ಪ್ರಾರಂಭಿಸಿದರು.

೧೯೮೫ರಿಂದ ಈಚೆಗೆ ಬಿದ್ರಿ ಕಲೆಯಲ್ಲಿ ಬದಲಾವಣೆಗಳನ್ನು ಕಾಣಬಹುದು. ಪ್ರಮುಖವಾಗಿ ಈ ವಸ್ತುಗಳ ಆಕಾರ ಮತ್ತು ನಕ್ಷೆಯಲ್ಲಿ ಪ್ರಸ್ತುತ ಜನರ ಬೇಡಿಕೆಯನ್ನು ಪೂರೈಸಲೆಂಬಂತೆ ದಿನನಿತ್ಯದ ಬಳಕೆಯ ಸಾಮಾನುಗಳ ರೂಪದಲ್ಲಿ ನೋಡಬಹುದು ಇದರಲ್ಲಿ ಅನೇಕ ಪ್ರಕಾರದ ಉದಾಹರಣೆ ನೀಡಬಹುದು. ಬಳೆಗಳು ಕಿವಿ, ಓಲೆಗಳು, ಸಿಗರೇಟ್ ಪೆಟ್ಟಿಗೆ, ಬೂದಿತಟ್ಟೆ (ಅಸ್ಟ್ರೀ) ಉಂಗುರಗಳು ಮುಂತಾದವು ಪ್ರಮುಖವಾಗಿದೆ. ಬಿದ್ರಿ ಕಲೆ ಬೇಡಿಕೆ ಹೊರ ರಾಷ್ಟ್ರಗಳಾದ ಜಪಾನ, ಇಂಗ್ಲೆಂಡ್, ಅಮೇರಿಕಾ, ಇಟಲಿ ಮತ್ತು ಕೆನಡಾಗಳಲ್ಲಿ ಅಪಾರವಾಗಿದ್ದು ಪ್ರತಿವರ್ಷ ಕನಿಷ್ಠ ಆರರಿಂದ ಎಂಟು ಲಕ್ಷ ರೂ ಬೆಲೆ ಬಾಳುವ ವಸ್ತುಗಳು ಮಾರಾಟವಾಗುತ್ತವೆ. ಹಳೆಯ ಮಾದರಿಯ ಬಿದ್ರಿ ಕೆಲ ವಸ್ತುಗಳ ಬೇಡಿಕೆ ಕಡಿಮೆಯಾಗಿದ್ದು, ಅಂತಹ ವಸ್ತುಗಳ ತಯಾರಿಕೆಯು ಕಡಿಮೆಯಾಗುತ್ತಲಿದೆ. ಆದರೆ ಆಸ್ತಕ್ತಿಯುಳ್ಳವರಿಗೆ ಅಂಥ ವಸ್ತುಗಳ ಬೇಕು ಎಂದಾಗ ಮಾತ್ರ ಇಂದಿಗೂ ಅಂತಹ ವಸ್ತುಗಳನ್ನು ತಯಾರಿಸಿಕೊಡುತ್ತಾರೆ. ಮುಸ್ಲಿಂ ವಾಸ್ತುಶಿಲ್ಪದ ದಟ್ಟವಾದ ಪ್ರಭಾವ ಈ ಕುಶಲಕಲೆಯಲ್ಲಿ ಕಂಡು ಬಂದರು ಅಲ್ಲಿಯ ಕುಶಲಕರ್ಮಿಗಳು ಚಾಣಾಕ್ಷರಾಗಿದ್ದರಿಂದ, ಪರಿಸರದ ಹೊರಗಿನ ಜನರು ಅಭಿರುಚಿಗೆ ಅನುಗುಣವಾಗಿ

ಇತರೆ ಧರ್ಮದವರ ಸಾಂಪ್ರದಾಯಿಕ ವಿನ್ಯಾಸಗಳನ್ನು ಬಿಡಿಸಿ ಜನಮನ್ನಣೆಗೆ ಪಾತ್ರರಾಗಿದ್ದಾರೆ. ಅಜಂತಾದ ವರ್ಣಚಿತ್ರಗಳ ವಿನ್ಯಾಸಗಳನ್ನು ಬಳಸುತ್ತಿದ್ದಾರೆ. ಪದ್ಮಪಾಣಿ, ಬುದ್ದ, ವಾಘರಾಕೃತಿಗಳು ಬಹಳ ಜನಪ್ರಿಯವಾಗಿವೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡ ವಾಸ್ತುಶಿಲ್ಪದ ಶೈಲಿಯ ಕೆಲ ಮಾದರಿಗಳನ್ನು ಬಿದ್ರಿ ವಸ್ತುಗಳಲ್ಲಿ ನೋಡಬಹುದಾಗಿದೆ. ಶಿಲಾ ಬಾಲಕಿಯರ ಶಿವ–ಶರಣರ ಪ್ರತಿರೂಪುಗಳು ಕಾಣಸಿಗುತ್ತವೆ. ಕುರಾನಿವ ಶ್ಲೋಕಗಳ ಕೆತ್ತನೆಗಳು ಮನೋಹರವಾಗಿವೆ.

ಇಂಡೋ–ಇಸ್ಲಾಮಿಕ್ ಲೋಹವಿದ್ಯೆಯ ಕೆಲವು ಪ್ರಮುಖ ಕೇಂದ್ರಗಳು ಮುಸ್ಲಿಮರ ಪ್ರಾಬಲ್ಯವುಳ್ಳ ಪ್ರದೇಶಗಳಾಗಿದ್ದವು. ಅದರ ಪರಿಣಾಮವಾಗಿ ಪರ್ಶಿಯಾ ಪ್ರಭಾವವನ್ನು ಆಕಾರ ಮತ್ತು ಅಲಂಕಾರಗಳಲ್ಲಿ ಕಾಣಬಹುದು. ಹಾಗಿದ್ದರು ಕೆಲವೊಮ್ಮೆ ಇಸ್ಲಾಮಿಕ್ ಆಕಾರವನ್ನು ಹೊಂದಿದ್ದು ಹಿಂದೂ ಆಶಯ ಮತ್ತು ವಿನ್ಯಾಸಗಳನ್ನು ಮೊಘಲ್ ಮತ್ತು ಮುಸ್ಲಿಂ ಅಲಂಕರಣಗಳ ಆಶಯಗಳ ಜೊತೆ ಜೊತೆಗೆ ಕಾಣಬಹುದು. ಡೆಕ್ಕನ್ನಿನ್ ಸುಲ್ತಾನರ ಸಂಪನ್ಮೂಲಗಳು ಮೊಘಲರಿಗಿಂತ ಕಡಿಮೆಯಾಗಿತ್ತಾದರೂ ಅವರು ತುಂಬಾ ಸುಸಂಸ್ಕೃತರಾಗಿದ್ದರು ಮತ್ತು ಕಲಾತ್ಮಕ ಪ್ರಯತ್ನಗಳಿಗೆ ಉದಾರವಾದ ಆಶ್ರಯವನ್ನು ನೀಡಿದರು.

**ಭಾರತದಲ್ಲಿರುವ ಬಿದ್ರಿಯ ಕಲೆಯ ಶೈಲಿಗಳು**.

ಬಿದ್ರಿ ಕಲೆ ಕೇವಲ ಬೀದರ ನಗರ ಮಾತ್ರ ಸೀಮಿತವಾಗದೆ, ಭಾರತದಲ್ಲಿ ಮುಸ್ಲಿಂ ಆಳ್ವಿಕೆ ಇದ್ದ ಪ್ರಮುಖ ನಗರಗಳಲ್ಲಿ ಪ್ರಚಲಿತದಲ್ಲಿರುವುದು ಕಂಡುಬರುತ್ತದೆ. ಆದರೆ ನಗರದ ಸಾಂಸ್ಕೃತಿಕ ಬದುಕಿನ ಭಾಗವಾಗಿ ಅಲ್ಲಿನ ಬಿದ್ರಿ ಕಲೆಯಲ್ಲಿ ವೈವಿಧ್ಯಮಯವಾದ ಶೈಲಿಗಳು ಕಾಣಬಹುದಾಗಿದೆ.

**ಪೂರ್ಣಿಯಾ:**

ಇದು ದೂರ ಪ್ರಾಚ್ಯದ ಹಲವಾರು ಪ್ರಭಾವಗಳನ್ನು ಒಳಗೊಂಡಿದೆ. ಈ ಶೈಲಿಯಲ್ಲಿ ಎರಡು ಪ್ರಕಾರದ ಬಿದ್ರಿ ಪಾತ್ರೆಗಳನ್ನು ಉತ್ಪಾದಿಸಲಾಗುತ್ತಿದದು, ಆಳವಾಗಿ ಕೊರೆಯಲ್ಪಟ್ಟ ಮತ್ತು ಉತ್ತಮ ಗುಣಮಟ್ಟದ ನಕ್ಷೆಯಿರುವ ಪ್ರಕಾರಕ್ಕೆ ಘಾರ್ಕಿಯೆಂದು ಕರೆಯಲ್ಪಟ್ಟರೆ, ಇನ್ನೊಂದು ಪ್ರಕಾರದ ಗುಣಮಟ್ಟದಲ್ಲಿ ಸ್ವಲ್ಪ ಕೀಳಾಗಿದ್ದು ಕಣ ಬಿದ್ರಿಯೆಂದು ಕರೆಸಿಕೊಳ್ಳುತ್ತದೆ.

**ಮುರ್ಶಿದಾಬಾದ:**

ಪಶ್ಚಿಮ ಬಂಗಾಳದಲ್ಲಿರುವ ಮುರ್ಶಿದಾಬಾದ್‌ದಲ್ಲಿ ವೈವಿಧ್ಯಮಯ ವಿನ್ಯಾಸಗಳನ್ನು ರಚಿಸಲಾಗುತ್ತದೆ. ತಂತಿಯ ಜೊತೆ ಬೆಳ್ಳಿ ಮತ್ತು ಬಂಗಾರದ ಲೇಪನಗಳನ್ನು ಧಾರಾಳವಾಗಿ ಬಳಸಲಾಗುತ್ತದೆ.

**ಮೊರದಾಬಾದ:**

ಮೊರದಾಬಾದಲ್ಲಿ ಬಿದ್ರಿಯಂತೆ ಕಾಣುವ ಒಂದು ವಿಧವಾದ ಕರಕುಶಲ ಕೃತಿಯನ್ನು ಕಾಣಬಹುದು ಅದರೆ ಉತ್ಪಾದನೆಯಲ್ಲಿ ಬಳಸುವ ತಂತ್ರವು ಪೂರ್ತಿಯಾಗಿ ವಿಭಿನ್ನವಾಗಿರುತ್ತದೆ. ಸಾಮಾನ್ಯವಾಗಿ ಹಿತ್ತಾಳೆಯ ಮೇಲ್ಮೈಗೆ ತವರವನ್ನು ಲೇಪಿಸಲಾಗುತ್ತದೆ. ಅದಕ್ಕೆ ಕಪ್ಪು ಗಾಜಿನ ಲೇಪನವನ್ನು ಬಳಿಯಲಾಗುತ್ತದೆ. ಕಪ್ಪಾಗಿರುವ ಮೇಲ್ಮೈಯಲ್ಲಿ ಚೂಪಾದ ಉಪಕರಣದಿಂದ ತಳದಲ್ಲಿರುವ ಬಿಳಿಯ ಬಣ್ಣವು ಪ್ರಕಟವಾಗುವಂತೆ ವಿನ್ಯಾಸಗಳನ್ನು ಕೊರೆಯಲಾಗುತ್ತದೆ.

**ಲಕ್ನೋ:**

ಲಕ್ನೋ ಶೈಲಿಯಲ್ಲಿ ಎಲೆ ಮತ್ತು ಹೂವುಗಳ ಮಾದರಿಗಳೊಂದಿಗೆ ಯುರೋಪಿಯನ್ ಆಶಯಗಳ ಗಮನಾರ್ಹವಾದ ಸೇರ್ಪಡೆಯನ್ನು ವಿನ್ಯಾಸಗಳಲ್ಲಿ ಕಾಣಬಹುದು ಅವುಗಳಲ್ಲಿ ವಿಶೇಷವಾಗಿ ಎದ್ದು ಕಾಣುವ ವಿನ್ಯಾಸವೆಂದರೆ ಮಾಹಿ–ಮುರಾಶಿಬ್ ಅಥವಾ ಮೀನುಗಳ ವಿನ್ಯಾಸಗಳು ಲಕ್ನೋದ ಬಿದ್ರಿ ಪಾತ್ರಗಳಲ್ಲಿ ಹುದುಗಿಸಿದ ಮೀನಿನ ಆಶಯಗಳನ್ನು ಜರ್ ನಶೀನ್ ಅಥವಾ ಜರ್ ಬುಲಂದ ಎಂದು ಕರೆಸಿಕೊಳ್ಳುವ ಅರೆಯುಬ್ಬು ರಚನೆಗಳಲ್ಲಿ ಕಾಣಬಹುದು ಇವು ತಹ್ ನಶಿನ್ ಎಂದು ಕರೆಯಿಸಿಕೊಳ್ಳುವ ಸಪಾಟದ ಮೇಲ್ಮೈನ ರಚನೆಗಳಿಂದ ವಿಶಿಷ್ಟವಾಗಿವೆ. ತೆಹನಿಶನ್ ಎನ್ನುವುದು ತಗಡನ್ನು ಇನ್ಲೇ ಮಾಡುವ ತಂತ್ರದ ಸಾಮಾನ್ಯವಾದ ಹೆಸರು ಜರ್ನಿಶಾನ ಎನ್ನುವುದು ತಗಡನ್ನು ಹುದುಗಿಸುವಾಗ ಸ್ವಲ್ಪ ಮಾತ್ರ ಉಬ್ಬಿರುವಂತೆ ಮಾಡುವ ಕಸುಬು ಜರ್ಬುಲಂದದಲ್ಲಿ ಹೆಚ್ಚು ಉಬ್ಬುಚಿತ್ರವಿರುವಂತೆ ಮಾಡಲಾಗುವುದು. ಅಫ್ತಾಬಿ ಎಂಬುದು ಲೋಹದ ತಗಡನ್ನು ವಿನ್ಯಾಸಕ್ಕನುಗುಣವಾಗಿ ಕತ್ತರಿಸಿ ಹುದುಗಿಸುವ ಕೆಲಸ ಜರ್ನಿಶಾನ ಹಾಗೂ ಜರ್ಬುಲಂದ ಪದ್ಧತಿಗಳಲ್ಲಿ ಬೆಳ್ಳಿಯ ತಗಡನ್ನು ತಳದ ಮೇಲಿಟ್ಟು ಗುರುತಿನ ಮೇಲೆ ರೂಪರೇಷಗಳು ಮಾಡುವವರೆಗೆ ಉಜ್ಜಲಾಗುತ್ತದೆ.

ಲಕ್ನೋ ಬಿದ್ರಿ ಪಾತ್ರಗಳ ವಿಶೇಷತೆಯೆಂದರೆ ಜರಬುಲಂದ ತಂತ್ರದ ಬಳಕೆ. ಇಲ್ಲಿ ಬೆಳ್ಳಿಯನ್ನು ಸೀಸದ ಪ್ಯಾಡಿನ ಮೇಲಿಟ್ಟು ಹುದುಗಿಸಲಾಗುತ್ತದೆ. ಇದರಿಂದ ಚಿತ್ರವು ಸ್ಪಷ್ಟವಾಗಿ ಗೋಚರಿಸುತ್ತದೆ.ಇದರ ವಿಶಿಷ್ಟ ಗುಣ ಲಕ್ಷಣವೆಂದರೆ ಮೀನು ಔಧದ ನವಾಬರು ಮೀನಿ ವಿನ್ಯಾಸವನ್ನು ಬಹಳಷ್ಟು ಅಲಂಕರಣ ಕಲೆಗಳಲ್ಲಿ ಹಾಗೂ ಕಟ್ಟಡಗಳಲ್ಲಿ ಬಳಸುವುದನ್ನು ಉತ್ತೇಜಿಸಿದ್ದಾರೆ. ಬಿದ್ರಿ ಪಾತ್ರೆಗಳಲ್ಲಿ ಕೆತ್ತಿದ ಭಾಗದಲ್ಲಿ ತಗಡನ್ನು ಸುತ್ತಣ ಭಾಗಗಳ ಮಟ್ಟಕ್ಕೆ ಇನ್‌ಲೇ ವಿಧಾನವನ್ನು ಜರ್‌ನಿಶಾನ ಎನ್ನುತ್ತಾರೆ. ತರ್‌ಕಶಿ ಎಂಬ ಶೈಲಿಯಲ್ಲಿ ಬೆಳ್ಳಿಯ ಬೇರೆ ಬೇರೆ ದಪ್ಪಗಳುಳ್ಳ ತಂತಿಗಳನ್ನು ಆಯ್ದುಕೊಂಡು ಒತ್ತಿ ತಿರುಗಿಸಿ ಬೇರೆ ಬೇರೆ ವಿನ್ಯಾಸಗಳಲ್ಲಿ ಹುದುಗಿಸಲಾಗುತ್ತದೆ ಮೊದಲು ಮುಖ್ಯವಾದ ಅಡ್ಡಮುಟಗಳಲ್ಲಿ ತಂತಿಗಳನ್ನು ತುಂಬಲಾಗುತ್ತದೆ ಅನಂತರ ಇನ್ನಷ್ಟು ಸೂಕ್ಷ್ಮವಾದ ತಂತಿಗಳನ್ನು ಆರಿಸಿಕೊಂಡು ವಿನ್ಯಾಸಕ್ಕನುಗುಣವಾಗಿ ತುಂಬಲಾಗುತ್ತದೆ. ಅತ್ತರಿನ ಬಾಟಲಿಗಳು ಬೋಗಾಣಿಗಳು ಅಲಂಕಾರಿಕ ಪ್ರಾಣಿ ಹಾಗೂ ಪಕ್ಷಿಗಳ ಆಕೃತಿಗಳಂಥ ವಸ್ತುಗಳನ್ನು ಈ ತಂತ್ರವನ್ನೆ ಬಳಸಿ ನಿರ್ಮಿಸಲಾಗಿದೆ. ತಹನಿಶಾನಿ ಇದನ್ನು ಲಾಲಾ ತಂತ್ರವೆಂದೂ ಕರೆಯುತ್ತಾರೆ ಬೆಳ್ಳಿ ಅಥವಾ ಬಂಗಾರದ ತಗಡನ್ನು ಮಿಶ್ರಣದ ಹೊರಮೈಯಲ್ಲಿ ಹುದುಗಿಸುವ ತಂತ್ರದ ಸಾಮಾನ್ಯವಾದ ಹೆಸರು. ಇನ್‌ಲೇಯು ತಂತಿಯದಾಗಿರಲಿ ಹಲವು ವಿನ್ಯಾಸಗಳು ತಗಡಿನವುಗಳಾಗಿದ್ದು ಕತ್ತರಿಸಲ್ಪಟ್ಟ ತಗಡಿನವುಗಳಾಗಿರುತ್ತವೆ. ವಸ್ತು ಶರೀರದ ಮೇಲೆ ನೆರಳು ಚಿತ್ರವಾಗಿ ಕಾಣುವಂತೆ ಕೌಶಲ್ಯಪೂರ್ಣವಾಗಿರುವುದು ಅಭಿಪ್ರಾಯವೆನಿಸುತ್ತದೆ.

**ಬಿದ್ರಿಕಲೆ ಪ್ರಕಾರಗಳು.**

- **ಕೊಫ್ತಗರಿ**

ಡಮಾಸ್ಕಿನಿಂಗ್ ಎಂಬ ಕಲೆಯು ಮುಖ್ಯವಾಗಿ ಬಂಗಾರ, ಹೆಚ್ಚಾಗಿ ಬೆಳ್ಳಿ ಮತ್ತು ಅಪರೂಪಕ್ಕೆ ತಾಮ್ರದ ತಂತಿ ಅಥವಾ ಎಲೆಗಳನ್ನು ಉಕ್ಕು ಅಥವಾ ಕಬ್ಬಿಣದಿಂದ ನಿರ್ಮಿತವಾದ ಪಾತ್ರೆಯ ಮೇಲ್ಮೈಯನ್ನು ಇನ್‌ಲೇ ಮಾಡುವ ಕಲೆಯಾಗಿದೆ. ಇದು ಬಹುಶಃ ಪ್ರಾಚೀನ ಕಾಲದ ಯೋಧರು ತಮ್ಮ ಶಸ್ತ್ರೋಪಕರಣಗಳನ್ನು ಬೆಳೆ ಬಾಳುವ ಧಾತುಗಳಿಂದ ಅಲಂಕರಿಸಿಕೊಳ್ಳುವ ಆಸೆಯ ಕಾರಣದಿಂದ ಹುಟ್ಟಿರಬಹುದು. ಈ ಕಲೆಗೆ ಪರ್ಶಿಯನ್ ಭಾಷೆಯಲ್ಲಿ ಕೊಪ್ಪಗರಿಯೆಂದು ಕರೆಯುತ್ತಾರೆ.

- **ಗಂಗಾ–ಯಮುನಾ.**

ಇದು ಮತ್ತೊಂದು ವಿಧವಾದ ತಂತ್ರ ಕೌಶಲ್ಯವನ್ನು ಸೂಚಿಸುತ್ತದೆ ಇಲ್ಲಿ ಬೆಳ್ಳಿ ಮತ್ತು ಬಂಗಾರದ ತಂತಿಗಳನ್ನು ಒಂದರ ನಂತರ ಮತ್ತೊಂದರಂತೆ ಬಳಸಿ ಗಂಗಾ ಮತ್ತು ಯಮುನಾ ನದಿಗಳ ಪ್ರವಾಹದ ರೀತಿಯನ್ನು ನೆನಪಿಸುವ ಪ್ರಯತ್ನವನ್ನು ಮಾಡಲಾಗುತ್ತದೆ.

- **ದಿವಾಲಿ ಕಾಮಗಾರಿ.**

ಇದರಲ್ಲಿ ಮೊದಲು ಮೇಲ್ಮೈಯನ್ನು ಕೆತ್ತಿ ನುಣುಪುಗೊಳಿಸಲಾಗುತ್ತದೆ ಇದಕ್ಕೆ ಜ್ವಾಲಾಮುಖಿ ಜನ್ಯವಾದ ಕಚ್ಚಾ ವಸ್ತುವೊಂದನ್ನು ಬಳಸಲಾಗುತ್ತದೆ. ಇದಕ್ಕೆ ಪಮಿಸ್ ಎಂದು ಹೆಸರು ಪಮಿಸ್ಸಿನಿಂದ ಉಜ್ಜಿ ನಯಗೊಳಿಸುತ್ತಾರೆ. ನಿಂಬೆಯ ರಸವನ್ನು ಹಚ್ಚಿ ಸ್ವಚ್ಛಪಡಿಸಿದ ಮೇಲ್ಮೈಯನ್ನು ಕಾಯಿಸಿದ ಮೇಲೆ ಬಂಗಾರದ ತೆಳುವಾದ ಎಲೆಗಳನ್ನು ಚಿಮುಟದಿಂದ ಎತ್ತಿ ಹಿಡಿದು ಕೊರೆದ ಗೆರೆಗಳ ಮೇಲೆ ಇಟ್ಟು ಸುತ್ತಿಗೆಯಿಂದ ಚೆನ್ನಾಗಿ ಬಡಿಯಲಾಗುತ್ತದೆ ಅನಂತೆ ಮೋರಿಕಲ್ಲಿನಿಂದ ಉಜ್ಜಿ ಅದು ಮೇಲ್ಮೈಗೆ ಅಂಟಿಕೊಳ್ಳುವಂತೆ ಮಾಡಲಾಗಿತ್ತದೆ.

- **ಅಷ್ಟಫಕಿ ಬೂತಿ/ತೀನಪತ್ತಿಕಿ ಬೂತಿ.**

ಅಷ್ಟಪಿಷ್ಕಿ ಬೂತಿ ಅಥವಾ ತೀನಪತ್ತಿಕಿ ಬೂತಿ ಎಂದು ಕರೆಯುವ ಪ್ರಕಾರಗಳು ತುಂಬಾ ಸಾಂಪ್ರದಾಯಿಕವಾದ ರಚನೆ ವಿಧಾನಗಳಾಗಿವೆ. ಇಲ್ಲಿ ಹೆಚ್ಚು ಬಳಕೆಗೊಳ್ಳುವಂಥದ್ದು ಹೂವಿನಿಂದ ಕೊಡಿದ ಪೂಪಿ ಸಸ್ಯ ಒಂದೆ ಹೂವುಳ್ಳದ್ದು ಬೇರೆ ಬೇರೆ ಆಕಾರವನ್ನು ತಳದ ಪೂರ್ಣ ಸಸ್ಯ ಇದು ಬಹು ಮಟ್ಟಿಗೆ ದೂಡ್ಡ ಪದಕ ಅಥವಾ ಮಾವಿನ ಕಾಯಿಯ ಆಕಾರದಲ್ಲಿರುತ್ತದೆ ಸಾಮಾನ್ಯವಾಗಿ ಹಳೆಯ ವಸ್ತುಗಳಲ್ಲಿ ಅವು ಕಂಡು ಬರುತ್ತವೆ. ಸಮಾಂತರ ರೇಖೆಗಳ.

- **ಮಹಿಪುಷ್ತ್**

ಬಿದ್ರಿ ಕಲೆಯಲ್ಲಿ ಮತ್ತೊಂದು ಪ್ರಕಾರವೆಂದರೆ ಮಹಿಪುಷ್ತ್ ಎಂಬ ವಿನ್ಯಾಸವಾಗಿದೆ ಮೀನಿನ ಆಕೃತಿಯ ಪೆಟ್ಟಿಗೆಗಳು ಬಹುಮಟ್ಟಿಗೆ ಸಾಮಾನ್ಯವಾಗಿವೆ ಮೀನಿನಾಕೃತಿಯ ಮಸಾಲೆ ಪಟ್ಟಿಗೆಗಳು ಲಕ್ನೋ ಮತ್ತು ಬೀದರನಲ್ಲಿ ಸಾಮಾನ್ಯವಾಗಿವೆ. ಅದರೆ ಮೀನಾಕೃತಿ ವಿನ್ಯಾಸದಿಂದ ಅಲಂಕೃತವಾದ ವಸ್ತುಗಳು ಲಕ್ನೋಕ್ಕೆ ವಿಶೇಷವಾಗಿವೆ. ಅವುಗಳ ಮೇಲೆ ಜೌಧದ ದಿವಂಗತರಾದ ರಾಜರು ದಿಲ್ಲಿ ಸಾಮ್ರಾಜ್ಯದ ಮಾಂಡಲಿಕರಲ್ಲಿ ಶ್ರೇಷ್ಠರು ಎಂಬರ್ಥದ ಲಾಂಚನವನ್ನು ಹೊಂದಿರುತ್ತದೆ. ಈ ಮೀನಿನ ಸಂಕೇತ ಅಥವಾ ಲಾಂಚನವನ್ನು ರಾಜ್ಯಪರವಾದ ಎಲ್ಲಾ ಮೆರವಣಿಗೆಗಳಲ್ಲಿ ಬಳಸಲಾಗುತ್ತಿತ್ತು. ಅದು ಮೇಲ್‌ಸ್ತರದ ಸರದಾರರುಗಳ ಶ್ರೇಷ್ಠತೆಯ ಕುರುಹಾಗಿತ್ತು.

- **ಘೂಲಝುಡಿ.**

ಘೂಲನುಡಿ ವಿನ್ಯಾಸವು ಸಹ ಪ್ರಾಚೀನ ಕಾಲದಲ್ಲಿ ಅತ್ಯಂತ ಪ್ರಚಲಿತವಿದ್ದ ಶೈಲಿ. ಈ ಶೈಲಿಯು ಇಂದಿಗೂ ಪ್ರಸ್ತುತವಾಗಿದ್ದು ಆಧುನಿಕ ಸಂದರ್ಭದ ಬಹುತೇಕ ಬಿದ್ರಿಕಲೆಗಳು ಘೂಲನುಡಿ ವಿನ್ಯಾಸಕಳಿಂದಲೆ ಅಲಂಕರಣಗೊಳ್ಳುತ್ತದೆ. ಈ ಚಿನ್ಹೆಯನ್ನೇ ಬಹುತೇಕವಾಗಿ ಹೋಲುವ ಈ ವಿನ್ಯಾಸಗಳನ್ನು ಮೂಲೆಯಿಂದ ಮೂಲೆಗೆ ಓರಣವಾಗಿ ಬೆಳ್ಳಿಯಿಂದ ಹುದುಗಿಸಿ ಸಂಯೋಜಿಸುವುದು ಬಿದ್ರಿ ವಸ್ತುವಿಗೆ ಅಲಂಕಾರಿಕಾ ಮೆರಗು.

**ಉಪಸಂಹಾರ.**

ಇದು ಒಂದು ರೀತಿಯ ಪದರುಗಟ್ಟಿರುವಿಕೆ ಲೋಹಶಿಲ್ಪ. ಒಂದು ಲೋಹವನ್ನು ಇನ್ನೊಂದು ಲೋಹದ ಮೇಲೆ ಇನ್ ಲೇ ಮಾಡುವುದು ಅಥವಾ ಹೊರ ಪದರವಾಗಿಸುವುದು ಇದರ ವೈಶಿಷ್ಟ್ಯ ಇದು ಬಹು ಮಟ್ಟಿಗೆ ಬಮಗಾರ ಅಥವಾ ಬೆಳ್ಳಿಯೊಂದಿಗೆ ಡಮಾಸ್ಕ್ಸ್ ( ಕೂಫ್ತಾಗರಿ) ಕಾಮಗಾರಿಯನ್ನು ಹೋಲುತ್ತದೆ. ಇದು ಡೆಕ್ಕನ್ನಿನ ಬೀದರಿನಲ್ಲಿ ಹುಟ್ಟಿ ಬಹುಮಟ್ಟಿಗೆ ಅಲ್ಲಿಯೇ ಬೆಳೆದುಬಂದ ಕಾರಣ ಬಿದ್ರಿಯೆಂದು ಕರೆಸಿಕೊಂಡಿದೆ. ಬೀದರಿನ ಕರ್ಮಚಾರಿಗಳ ಪ್ರಕಾರ ಈ ಕುಶಲ ಕಲೆಯನ್ನು ಸುಮಾರು ೬೦೦ ವರ್ಷಗಳ ಹಿಂದೆ ಇರಾಕಿನಿಂದ ಇಂಡಿಯಾಕ್ಕೆ ವಲಸಿಗರ ಮೂಲಕ ತರಲ್ಪಟ್ಟಿತು. ಈ ಕುಶಲ ಕಲೆಯ ಮೂಲ ನೆಲೆಯು ಇರಾಣವಾಗಿರಬೇಕು. ಈ ಕಲೆಯ ಉತ್ಪತ್ತಿಯನ್ನು ಕುರಿತು ಇತರ ವೃತ್ತಾಂತಗಳೂ ಇದೆಯಾದರೂ ಅವೆಲ್ಲ ಕೇವಲ ಐತಿಹ್ಯಗಳಾಗಿವೆ. ಇನ್ ಲೇ ಮಾಡುವ ಈ ತಂತ್ರ ಕೌಶಲ್ಯವೂ ಪರ್ಶಿಯಾ ಅಥವಾ ಸಿರಿಯಾದಿಂದ ಬೀದರನ್ನು ತಲುಪಿರಬೇಕು ಇದು ಆಶ್ಚರ್ಯಕರವಾದುದೇನೂ ಅಲ್ಲ. ಏಕೆಂದರೆ ಆ ಕಾಲದಲ್ಲಿ ಬೀದರವು ಮುಸ್ಲಿಂ ಭಾರತದ ಪ್ರಮುಖ ಪಟ್ಟಣವಾಗಿದ್ದು, ಬಹಮನಿ ಸುಲ್ತಾನರು ವಿದ್ಯಾಪಿಚ್ಚಕ್ಷಣರನ್ನು ಬೀದರಿಗೆ ಆದರದಿಂದ ಬರಮಾಡಿಕೊಳ್ಳುತ್ತಿದ್ದರು ಪ್ರೋತ್ಸಾಹಿಸುತ್ತಿದ್ದರು. ಬಹುಶಃ ವಿದೇಶದ ಲೋಹದ ಇನ್ ಲೇಯಲ್ಲಿ ನೈಪುಣ್ಯವನ್ನು ಪಡೆದ ಕುಶಲ ಕರ್ಮಿಗಳಿ ಬೀದರ್ ನತ್ತ ಆಕರ್ಷಿತರಾಗಿದ್ದಿರಬೇಕು. ಅವರ ಮೂಲಕ ಈ ಕಲೆಯು ಬೀದರಿನಲ್ಲಿ ಪ್ರಚುರವಾಗಿರಬೇಕು. ಈ ಸಮಯದಲ್ಲಿ ಗಮನಿಸಬೇಕಾದ ಇನ್ನೊಂದು ಸಂಗತಿಯೆಂದರೆ ಬೀದರಿನಿಂದ ಸುಮಾರು ೫೦ ಕಿ.ಮೀ ದೂರದಲ್ಲಿರುವ ಕಲ್ಯಾಣಿಯು ಇತ್ತಿಚೀನವರೆಗೆ ಡಮಾಸ್ಕ್ಸ್ ಕಾಮಗಾರಿಯ ಪ್ರಮುಖ ಸ್ಥಳವಾಗಿತ್ತು. ಬಿದ್ರಿಯಲ್ಲಿ ಗಸಗಸೆ ಗಿಡದ ಆಶಯಗಳನ್ನು ಕಾಣಬಹುದಾದರೂ ಅದು ಕ್ರಿ.ಶ ೧೭೭೫ ಕ್ಕಿಂತ ಮೊದಲು ಕಾಣುವುದಿಲ್ಲ. ೧೮ನೇ ಶತಮಾನದ ಮಧ್ಯಭಾಗದ ನಂತರದಲ್ಲಿ ಹೈದರಬಾದಿನ ಅನೇಕ ವರ್ಣಚಿತ್ರಗಳಲ್ಲಿ ಗಸಗಸೆ ಹೂವಿನ ರಾಶಿಯನ್ನು ಸಾಮಾನ್ಯ ಲಕ್ಷಣವಾಗಿ ಗುರುತಿಸಬಹುದು. ೧೮ನೇ ಶತಮಾನದ ಮೊದಲ ಭಾಗಕ್ಕಿಂತ ಹಿಂದಿನ ಬಿದ್ರಿ ಕೃತಿಗಳಲ್ಲಿ ಬೆಳ್ಳಿ ಮತ್ತಿ ಹಿತ್ತಾಳೆಯನ್ನು ಮಿಶ್ರ ಮಾಡಿದ ಇನ್ ಲೇಯನ್ನು ಗುರುತಿಸಬಹುದು.

**ಆಧಾರ ಗ್ರಂಥಗಳು.**


೧. ರಾಜೇಂದ್ರ ಯರನಾಳೆ: ವಿಶ್ವವಿಖ್ಯಾತಿ ಬಿದ್ರಿ ಕಲೆ, ೧೯೯೬ ಪು-೫
೨. ಡಾ ಕೆ. ಎಂ. ಮೈತ್ರಿ ಕರಕುಶಲ ಕಲೆಗಳು, ಕನ್ನಡ ವಿವಿ ವಿಶ್ವಕೋಶ ೨. ಪುಟ-೧೨೮
೩. ಫಾಲಾಕ್ಷಚ ಕರ್ನಾಟಕ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಇತಿಹಾಸ ೨೦೦೫ ಪು-ಸಂ-೨೫೫-೫೬
4. Google.com, History of Bidri ware
5. Ray Desmond, the Indian Museum, 1801-1879, London
೬. L K Gurjar and K T M Hegade, World Archaeology Vol-15, No-2 1983.




# ಮೊಹರಂ ಆಚರಣೆ ತತ್ವಪದಕಾರರು ಹಾಗೂ ಪರಂಪರೆ.

**–ಡಾ. ಎನ್. ಸತ್ಯವತಿ,**
ಸಹಾಯಕ ಪ್ರಾಧ್ಯಾಪಕರು,
ಶ್ರೀಮತಿ ಗಾಲಿ ರುಕ್ಮಿಣಮ್ಮ ಚೆಂಗಾರೆಡ್ಡಿ ಸ್ಮಾರಕ
ಸರ್ಕಾರಿ ವಾಣಿಜ್ಯ ಮತ್ತು ನಿರ್ವಹಣಾ ಕಾಲೇಜು, ಬಳ್ಳಾರಿ.

**ಭಾರತದಲ್ಲಿ ಮೊಹರಂ ಆಚರಣೆ.**

ಮೊಹರಂ ಆಚರಣೆಯನ್ನು ಪ್ರಮುಖವಾಗಿ ಅಮೀರ್ ತೈಮೂರ್‌ನ ಪ್ರೋತ್ಸಾಹಿಸಿದನು. ತಾಜಿಯಾ ಕೂಡಿಸುವ ಪದ್ಧತಿಯನ್ನು ಜಾರಿಗೆ ತಂದರು. ಈ ತಾಜಿಯಾ ಕೂಡಿಸುವ ಅಥವಾ ಆಲಂ ಕೂಡಿಸುವ ಜಾಗವೇ ಆಶೂರ್‌ಖಾನವಾಗಿದ್ದು, ಈ ಆಶೂರಖಾನಗಳ ಮಾಹಿತಿಯು ಶಾಸನ, ಲಿಖಿತ ಆಧಾರಗಳಿಂದ ನಿರ್ಲಕ್ಷಿಸಲ್ಪಟ್ಟವು. ಇವುಗಳ ಅಧ್ಯಯನ ಸಿಗುವುದು ವಿರಳ.

೧೧–೧೨ನೇ ಶತಮಾನದಲ್ಲಿ ಮೊಹರಂ ಆಚರಣೆಯನ್ನು ಭಾರತದಲ್ಲಿ ಆಚರಿಸಲಾಗುತ್ತಿತ್ತು. ನಂತರದಲ್ಲಿ ತಾಜಿಯಾವನ್ನು ಕೂಡಿಸುವ ಪರಂಪರೆಯಾಗಿ ಮಾಡಿಕೊಂಡರು. ಇದಕ್ಕೆ ಅನೇಕ ಸುಲ್ತಾನರ, ಬಾದಷಹರ ಪ್ರೋತ್ಸಾಹವಿದ್ದಿತು. ಅಮೀರ್ ತೈಮೂರ್ ಬಾದಶಹನ ಪ್ರೋತ್ಸಾಹಿಕ ದಾನ, ದತ್ತಿಯನ್ನು ನೀಡುತ್ತಿದ್ದರು. ಶೇರ್ ಷಹಾ ವಂಶದ ಸುಲ್ತಾನರು ಇದನ್ನೆ ಮುನ್ನಡೆಸಿದರು. ಹೀಗೆ ಕಾಲಕ್ರಮೇಣವಾಗಿ ಸಾಂಸ್ಕೃತಿಕ ಹಬ್ಬವಾಗಿ ಗುರುತಿಸಿಕೊಂಡಿತು. ಹಂತ ಹಂತವಾಗಿ ಸ್ಥಿತ್ಯಂತರಕ್ಕೆ ಒಳಪಟ್ಟಿತ್ತು. ಔದ್ ಪ್ರಾಂತ್ಯದ ಮೊಗಲ್ ಸಾಮ್ರಾಜ್ಯದ ನವಾಬನಾದ ಶುಜಾ ಉದೌಲದ ಹೆಂಡ್ತಿಯು ಈ ಆಚರಣೆಗೆ ಸಾಕಷ್ಟು ಹಣವನ್ನು ಸಹಾಯ ಮಾಡಿದರಲ್ಲದೆ ಈ ಆಚರಣೆಯಲ್ಲಿ ಭಾಗವಹಿಸುತ್ತಿದ್ದರು.

ದಕ್ಷಿಣ ಭಾರತದಲ್ಲಿ ಆಳಿದ ಬಹಮನಿ ಸುಲ್ತಾನರು ಕ್ರಿ.ಶ. ೧೩೪೭–೧೫೩೮ರವರೆಗೆ ಬೀದರ್, ಕಲಬುರ್ಗಿಯಲ್ಲಿ ಮೊಹರಂ ಹಬ್ಬದ ಆಚರಣೆಗೆ ಪ್ರೋತ್ಸಾಹಿಸಿದರು. ಅದರಂತೆ ಬಿಜಾಪುರದ ಅದಿಲ್‌ಶಾಹಿ ಅರಸರು ಕ್ರಿ.ಶ. ೧೪೮೯ರಿಂದ ೧೬೮೬ವರೆಗೆ ಮೊಹರಂ ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಿದ್ದರು. ಗೊಲ್ಕೊಂಡದ ಕುತುಬ್‌ಸಾಹಿ ಅರಸರು ೧೫೫೦–೧೬೭೭ರಲ್ಲಿ ಆಲಂ ಕೂಡಿಸುವ ಪದ್ಧತಿಯನ್ನು ಜಾರಿಗೆ ತಂದರು. ಅಬ್ದುಲ್ ಕುತುಬ್‌ಶಾಹನು ಮೊಹರಂ ತಿಂಗಳನ್ನು ಕುತುಬ್ ಶಾಹನು ಸಫರ್ ತಿಂಗಳಾಗಿಸಿದನು. ಆಶೂರಖಾನಗಳನ್ನು ಕಟ್ಟಿಸಿದನು. ಈ ಹಬ್ಬವು ಸಾಂಸ್ಕೃತಿಕ ಹಬ್ಬವಾಗಿ ಪ್ರಾಮುಖ್ಯತೆ ಪಡೆಯಿತು. ಇಂತಹ ಆಶೂರಖಾನಗಳು ಆಲಂ ಕೂಡಿಸುವ ಬಡ ವ್ಯಾಪಾರಸ್ಥ ಮುಸ್ಲಿಮರ ವಸತಿ ಸ್ಥಳವಾಗಿತ್ತು. ಈ ಹಬ್ಬವನ್ನು ಅಕ್ಬರ್ ಬಾದಷಹ ಮೊಹರಮ್ ರಾಷ್ಟ್ರೀಯ ಹಬ್ಬವಾಗಿ ಗುರುತಿಸಿದನು. ಕ್ರಿ.ಶ. ೧೭ನೇ ಶತಮಾನದಲ್ಲಿ ಮೈಸೂರು ಸಂಸ್ಥಾನವನ್ನಾಳಿದ ಟಿಪ್ಪು ಸುಲ್ತಾನನು ಮೊಹರಂ ಇದೊಂದು ಹಬ್ಬವಲ್ಲ, ಹಜರತ್ ಮಹಮ್ಮದ್ ಪೈಗಂಬರರ ಮೊಮ್ಮಕ್ಕಳ ಹುತಾತ್ಮರಾದ ದಿನ. ಇದನ್ನು ಸೂತಕದಂತೆ ಆಚರಿಸಬೇಕೆಂದು ಸಾರಿದನು. ಇದರಿಂದಾಗಿ ಎಲ್ಲಾರೂ ಒಂದಾಗಿ ಈ ಹಬ್ಬ ಆಚರಿಸುವ ಮುಸ್ಲಿಂ ಭಾಂಧವರಲ್ಲಿ ಕಳವಳ ಉಂಟಾಗಿ, ಕೆಲವರು ಮುನ್ನಡೆಸಿದರು.

ದಕ್ಷಿಣ ಭಾರತದಲ್ಲಿ ಕಲಬುರ್ಗಿ ಮತ್ತು ಬೀದರಿನಿಂದ ಆಳಿದ ಬನಹಮನಿ ಸುಲ್ತಾನರ (ಕ್ರಿ.ಶ.೧೩೪೭ –೧೫೩೮) ಬಿಜಾಪುರದ ಆದಿಲ್‌ಸಾಹಿಗಳು ಕ್ರಿ.ಶ. ೧೪೮೯ ರಿಂದ ೧೬೮೬) ಸಂಭ್ರಮ ಹಾಗೂ ಪ್ರೇರಣಾತ್ಮಕವಾಗಿ ಮೊಹರಂ ಆಚರಿಸುತ್ತಿದ್ದರು. ಗೋಲ್ಕೊಂಡಾದ ಕುತುಬ್ ಷಾಹಿಗಳು (ಕ್ರಿ.ಶ.೧೫೫೦–೧೬೭೨) ಹೈದರಾಬಾದ್ ನಗರದಲ್ಲಿ ಆಲಂ ಇಡುವ ಪದ್ಧತಿ ಆರಂಭಿಸಿ ಮುಂದುವರಸಿಕೊಂಡು ಬಂದರು. ಅಬ್ದುಲ್ ಕುತುಬ್ ಷಾ ಮೊಹರಂ ತಿಂಗಳ ಮೊದಲನೆಯ ದಿನದಿಂದ ಸಫರ ತಿಂಗಳಾಗಿ ಪೋಷಿಸಿದನು. ಆಲಂ ಇಡುವುದಕ್ಕಾಗಿ ಕಟ್ಟಿಸಿದ ಆಶೂರಖಾನೆಗಳು ಇಂದಿಗೂ ಸುಸ್ಥಿತಿಯಲ್ಲಿ ಹೈದರಾಬಾದ್ ನಗರದಲ್ಲಿ ಸಾಂಸ್ಕೃತಿಕ ಮಹತ್ವವನ್ನು ತಿಳಿಸುತ್ತವೆ. ಹಾಗೆಯೇ

ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಮಹತ್ವವು ಮೊಹರಂ ಹಬ್ಬದ ಪ್ರತಿರೂಪವಾಗಿದೆ. ಮೊಗಲ್ ದೊರೆಗಳಿಂದ ಈ ಆಚರಣೆಗಳು ದಖ್ಖನಿನ ವಿವಿಧ ಪ್ರದೇಶಗಲಲ್ಲಿ ಮುಸ್ಲಿಂ ಮುಸ್ಲಿಮೇತರರು ಸೇರಿ ಮಾಡುವ ಹಬ್ಬವಾಗಿದೆ. ಆದರೆ ಇದು ಹಬ್ಬವಲ್ಲ. ಮೊಹಮ್ಮದ್ ಪೈಗಂಬರ್ ಅವರ ಮೊಮ್ಮಕ್ಕಳು ಹುತಾತ್ಮರಾದ ದಿನ. ಇದನ್ನು ಸೂತಕದಂತೆ ಆಚರಿಸಬೇಕೆಂದು ಟಿಪ್ಪು ಈ ಹಬ್ಬವನ್ನು ನಿಷೇಧಿಸಿದ. ಬ್ರಿಟಿಷರು ಇದನ್ನು ರಾಜಕೀಯ ಚಹರೆಯಾಗಿ ಸೃಷ್ಟಿಸಿದರು.

ಅಂದಿನ ಬಳ್ಳಾರಿ ಜಿಲ್ಲೆಯ ಇಂದಿನ ವಿಜಯನಗರ ಜಿಲ್ಲೆಯಲ್ಲಿನ ಹೊಸಪೇಟೆಯಲ್ಲಿ ಕೂಡಿಸುವ ಮೌಲಾಲಿ ಆಲಮ್‌ಗಳಿಗೂ ಹಿಂದೂ– ಮುಸ್ಲಿಮರು ರಾಮುಲಸ್ವಾಮಿ ಎಂದೇ ಗುರುತಿಸಿ ಪ್ರಾರ್ಥನೆ ಮಾಡುತ್ತಾರೆ ಎಂಬುದರಲ್ಲಿ ದಸ್ತಗೀರ್ ಅಲ್ಲಿಬಾಯಿ ಅವರು ತಮ್ಮ 'ಕರ್ನಾಟಕದ ಮೊಹರಂ ಪದಗಳು" ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

**ಬಳ್ಳಾರಿ ಪ್ರದೇಶದಲ್ಲಿ ಚಾರಿತ್ರಿಕ ನೋಟ.**

ಆಶೂರಖಾನಗಳ ಗುರುತಿಸುವಿಕೆಯು ಮೊಹರಂ ಆಚರಣೆಯನ್ನು ಪಸ್ತುತೀಕರಿಸುತ್ತದೆ. ಈ ಆಚರಣೆ ಇರಾಕ್‌ನಲ್ಲಿ ನಡೆದ ಹಿಂಸಾತ್ಮಕ ಘಟನೆಯನ್ನು ಪ್ರಾದೇಶಿಕವಾಗಿ ಪ್ರತಿನಿಧಿಸುತ್ತದೆ. ಪ್ರಸ್ತುತವಾಗಿ ಮೊಹರಂ ಆಚರಣೆಯು ಮುಸ್ಲಿಮ್ ಸಮುದಾಯಕ್ಕೆ ಸ್ಥಳೀಯವಾಗಿ ನೆಲೆನಿಂತ ಸಾಂಸ್ಕೃತಿಕ ಪ್ರತಿನಿಧಿತ್ವ ಸೂಚಿಸುತ್ತದೆ. ಮೊಹರಂ ಹಬ್ಬವನ್ನು ಆಚರಿಸುವ ಕಟ್ಟಡ ಸ್ಥಳ, ಜಾಗವನ್ನು ಮಸೀದಿ ಗುಡಿ ಅಥವಾ ಆಶೂರಖಾನ್ ಎಂದು ಗುರುತಿಸಬಹುದು. ಇದು ಮುಸ್ಲಿಮ್–ಮುಸ್ಲಿಮೇತರರ ಸಾಂಸ್ಕೃತಿಕ ಆಚರಣೆಯ ಅಸ್ಮಿತೆಯಾಗಿದೆ. ದಖ್ಖನ್ ಮೂಲದ ಮುಸ್ಲಿಂ ರಾಜ್ಯವಾದ ಬಹಮನಿಯಿಂದ ಸಂಸ್ಥಾನವು ಆಚರಣೆ ಸಾಂಪ್ರದಾಯಿಕವಾಗಿಸಿ, ಸ್ಥಳೀಯತೆ ಪಡೆಯಿತು. ಪ್ರಃಭುತ್ವದ ಪತನಾನಂತರ ಸಾಂಸ್ಕೃತಿಕ ಸ್ಥಿತ್ಯಂತರದ ಕುರುಹಾಗಿ ಮೊಹರಂ ಆಚರಣೆ ರೂಪದಲ್ಲಿ ಮುಂದುವರೆದಿರುವುದನ್ನು ಕಾಣಬಹುದು. ಈಗಿನ ಕಮಲಾಪುರದ ಸುತ್ತಮುತ್ತಲಿನ ಪ್ರದೇಶಗಳಾದ ಕಂಪ್ಲಿ, ಹೊಸಪೇಟೆ, ಬಳ್ಳಾರಿಗಳಲ್ಲಿನ ಆಶೂರರಖಾನಗಳೇ ಸಾಕ್ಷಿಯಾಗಿವೆ.

ಕಮಲಾಪುರದ ಮುಲ್ಲಗಲ್ಲಿ, ಮುದುಗಲ್ ಮಸೀದಿ, ಆಶೂರಖಾನಗಳನ್ನು ಉದಾಹರಿಸಬಹುದು. ಪುರುಷೋತ್ತಮ ಬಿಳಿಮಲೆ ಮತ್ತು ಚಲುವರಾಜು ಅವರ ಕೃತಿಯಾದ 'ಹಂಪಿ ಜಾನಪದ' ಮೊಹರಂ ಸ್ಥಳೀಯವಾಗಿ ಹಿಂದೂ–ಮುಸ್ಲಿಂರು ಸೇರಿ ಆಚರಿಸುವ ಹಬ್ಬ ಎಂದು ಉಲ್ಲೇಖಿಸಿದ್ದಾರೆ. ಇವುಗಳಲ್ಲಿ ಕೆಲವೊಂದಕ್ಕೆ ಭೇಟಿ ಮಾಡಲಾಯಿತು. ಬಳ್ಳಾರಿ ನಗರ ಸಮೀಪದ ಆಲದಹಳ್ಳಿ ಸರ್ವರ್ ಹುಸೇನ್ ಆಶೂರಖಾನೆಗಳು, ಪಿಂಜಾರ ಓಣಿಯಲ್ಲಿ ಹಸೇನ್ ಅಲಿಯವರ ಸಂಪ್ರದಾಯದಂತೆ ಮೊಹರಂ ಆಚರಿಸಲಾಗುತ್ತದೆ. ವಿವಿಧ ಧರ್ಮದವರು ಪೂಜ್ಯಭಾವನೆಯಿಂದ ಮೊಹರಂ ಉತ್ಸವದಲ್ಲಿ ಭಾಗವಹಿಸುತ್ತಾರೆ. ಕುರುಬರೊದಿಗೆ ಹೆಚ್ಚಿನ ನಂಟನ್ನು ಹೊಂದಿ, ಸರ್ವರ್ ಅಲ್ಲಿ ಆಶೂರ್‌ಖಾನ್, ಹುಸೇನ್ ಸಂಪ್ರದಾಯವನ್ನು ಮುನ್ನಡೆಸಿಕೊಂಡು ಬಂದವರು ಕುರುಬರು.

ಮೊಹರಂ ಹಬ್ಬವನ್ನು ಹಿಂದೂ ಮುಸ್ಲಿಮರು ಭಾಗವಹಿಸುತ್ತ, ಇಲ್ಲಿ ಮುಸ್ಲಿಮ್ ಧರ್ಮಕ್ಕಿಂತ ಹಿಂದೂ ಧರ್ಮದವರೇ ಹೆಚ್ಚಾಗಿ ಪೂಜೆಗಳಲ್ಲಿ ಭಾಗವಹಿಸುತ್ತಾರೆ. (ಇಲ್ಲಿ ಆಲಂ ಕೂಡಿಸುವ ಪದ್ಧತಿಯನ್ನು ಹಿನ್ನೆಲೆ ಕುರುಬ ಜನಾಂಗದವರು ಮುಸ್ಲಿರ್ಮ ಧರ್ಮಕ್ಕೆ ಮತಾಂತರಗೊಂಡವರಾಗಿದ್ದು ಇದನ್ನು ಆಚರಣೆಯಾಗಿ ಮುನ್ನಡೆಸಿದರು.)

**ಪಿಂಜಾರ್ ಓಣಿ ಆಶೂರಖಾನ.**

ನ್ಯಾಯಾಲಯದಲ್ಲಿ ವ್ಯಾಜ್ಯವಿರುವ ಕಾರಣ ೧೮೨೬ರಲ್ಲಿ "ಇಲ್ಲಿ ಆಶೂರಖಾನವಿದೆ" ಎರಡು ಮಿನಾರುಗಳ ನಡುವೆ ಗುಮ್ಮಟವನ್ನು ಹೊಂದಿದ್ದು, ಇದು ಇಂಡೋ–ಇಸ್ಲಾಮಿಕ್ ಶೈಲಿಯ ಲಕ್ಷಣ

ಒಳಗೊಂಡಿದೆ. ಎಲ್ಲಾ ಧರ್ಮದವರು ಸೇರಿ ಉತ್ಸವದಲ್ಲಿ ಭಾಗವಹಿಸುತ್ತಾರೆ. ಕುರುಬರು, ಗೊಲ್ಲರು, ಲಿಂಗಾಯತರು, ವಡ್ಡರು, ಈಡಿಗರು, ಭಕ್ತಿಯಿಂದ ಪೂಜೆ ಸಲ್ಲಿಸುತ್ತಾರೆ.

ಬಳ್ಳಾರಿ ನಗರದ ಎಲ್ಲ ಪ್ರದೇಶಗಳ ಜನತೆಯೂ ಮೊಹರಂನ ೭ನೇ ದಿನದಂದು ಸಕ್ಕರೆಯನ್ನು ಓದಿಕೆ ಮಾಡಿಸುತ್ತಾರೆ. ಸಕ್ಕರೆ ಓದಿಕೆಗೆ ಇಲ್ಲಿ ದಿನಗಳನ್ನು ನಿಗದಿ ಮಾಡಲಾಗಿದೆ. ೭ನೇ ದಿನದಂದು ಮುಸ್ಲಿಮರು ಹಾಗೂ ಹರಕೆ ಹೊತ್ತವರು ಸಕ್ಕರೆ ಓದಿಕೆ ಮಾಡಿದರೆ, ಅಗಸರು ಮತ್ತು ಇನ್ನಿತರೆ ಸಮುದಾಯದವರು ೮ನೇ ದಿನದಂದು ಸಕ್ಕರೆ ಓದಿಕೆ ಮಾಡುತ್ತಾರೆ. ೯ನೇ ದಿನದಂದು ಕುರುಬರು, ವಡ್ಡರು, ಮಾದಿಗರು ಸೇರಿದಂತೆ ಎಲ್ಲ ಸಮುದಾಯದವರು ಈ ದಿನದಂದು ಸಕ್ಕರೆ ಓದಿಕೆ ಮಾಡುತ್ತಾರೆ.

ಮೊಹರಂ ೯ನೇ ದಿನದ ಮಧ್ಯರಾತ್ರಿಯಂದೇ ಆಲದಹಳ್ಳಿಯಿಂದ ಬಂಡಿಹಟ್ಟಿ, ಕೌಲ್‌ಬಜಾರ್ ಮಾರ್ಗವಾಗಿ ಸರ್ವರ್ ಹುಸೇನ್ ಆಲಂ ಅನ್ನು ಬ್ರೂಸ್ ಪೇಟೆಯ ಬೆಂಗಳೂರು ರಸ್ತೆಯಲ್ಲಿ ಬೆಳಗಿನ ಜಾವ ೪.೦೦ ಗಂಟೆಗೆ ಮೆರವಣಿಗೆ ಇರುತ್ತದೆ.

ಈ ಮೆರವಣಿಗೆಯಲ್ಲಿ ಬಳ್ಳಾರಿ ನಗರವೂ ಸೇರಿದಂತೆ ಸುತ್ತಮುತ್ತಲಿನ ಗ್ರಾಮಗಳಲ್ಲಿರುವ ಆಲಂಗಳು ಸರ್ವರ್ ಹುಸೇನ್ ಆಲಂನೊಂದಿಗೆ ಅಲಾಯ್‌ಬುಲಾಯ್ ತೆಗೆದುಕೊಳ್ಳುವ ಸಂಪ್ರದಾಯವಿದೆ. ಸರ್ವರ್ ಹುಸೇನ್ ಆಲಂ ಅನ್ನು ಆಡಿಸುತ್ತಾ ಆಡಿಸುತ್ತಾ ಇತರೆ ಆಲಂಗಳೊಂದಿಗೆ ಸ್ಪರ್ಶಿಸುವ ಪರಿಪಾಠವಿದೆ. ಇದು ಒಂದು ರೀತಿಯಲ್ಲಿ ಯುದ್ಧದಂತೆ ಕಂಡು ಬರುತ್ತದೆ. ಇದು ಇರಾಕ್‌ನ ಕರ್ಬಲಾ ಕಾಳಗವನ್ನು ನೆನಪಿಸುತ್ತದೆ. ಈ ವೇಳೆಯಲ್ಲಿ ಸಾವಿರಾರು ಜನರು ಕಿಕ್ಕಿರಿದು ನೆರೆದಿರುತ್ತಾರೆ. ಈ ವೇಳೆ ಆಲಂಗಳ ಆಡಿಸುವುದಕ್ಕೆ ತಪ್ಪಡಿ, ವಾದ್ಯಮೇಳಗಳನ್ನು ಬಳಸಲಾಗುತ್ತದೆ. ತಪ್ಪಡಿಯ ಶಬ್ದಕ್ಕೆ ಆಲಂಗಳ ತಿರುಗಿಸುವಿಕೆ ಮಾಡಿ ಪರಸ್ಪರ ಸ್ಪರ್ಶಿಸಿದಾಗ ನೆರೆದಿದ್ದ ಭಕ್ತರು ಚಪ್ಪಾಳೆ ತಟ್ಟುತ್ತಾ ಹರ್ಷೋದ್ಗಾರವನ್ನು ವ್ಯಕ್ತಪಡಿಸಿ ಕೇಕೆ ಹಾಕುತ್ತಾರೆ. ಬಳ್ಳಾರಿ ಜಿಲ್ಲೆಯ ಎಲ್ಲಾ ಆಶೂರಖಾನಗಳಲ್ಲಿನ ಆಲಂಗಳನ್ನು ಮೊಹರಂ ೯ನೇ ದಿನದಂದು ಅಲ್ವಿದಾಯ ಕಾರ್ಯಕ್ರಮ ಮಾಡಿದರೆ, ಆಲದಹಳ್ಳಿಯ ಆಶೂರಖಾನದ ಆಲಂಗಳ ಅಲ್ವಿದಾಯ ಕಾರ್ಯಕ್ರಮ ೧೦ನೇ ದಿನದಂದು ನಡೆಯುತ್ತದೆ.

ಆಶೂರಖಾನದ ಒಳಗೆ ಮತ್ತು ಹೊರಗೆ ಸಾಕಷ್ಟು ಘೋರಿಗಳಿವೆ. ಆ ಘೋರಿಗಳಲ್ಲಿ ಆಶೂರಖಾನರು ಸ್ಥಾಪಿಸಿದ ಘೋರಿಯು ಪ್ರಮುಖವಾಗಿದ್ದು, ಮೊಹರಂ ಸಂದರ್ಭದಲ್ಲಿ ಆ ಘೋರಿಗೆ ಮಾತ್ರ ವಿಶೇಷವಾಗಿ ಪೂಜಿಸಲಾಗುತ್ತದೆ.

**ನಕಲಿ ನೇಣು ಹಾಕಿಕೊಳ್ಳುವ ಹರಕೆ.**

ಸರ್ವಾರ್ ಹುಸೇನ್ ದೇವರಿಗೆ ಕೌಲ್‌ಬಜಾರಿನ ಮರಾಠಿ ವ್ಯಕ್ತಿಯಾದ ಚಂದ್ರಕಾಂತ ಎನ್ನುವವರು ನಕಲಿ ನೇಣು ಹಾಕಿಕೊಳ್ಳುವ ಮೂಲಕ ತಮ್ಮ ಹರಕೆಯನ್ನು ದೇವರಿಗೆ ಅರ್ಪಿಸಿ ಸಕ್ಕರೆಯನ್ನು ಓದಿಕೆ ಮಾಡಿಸುತ್ತಾನೆ. ಇದು ಅವರ ತಾತ ನಕಲಿ ವೆಂಕಪ್ಪನ ಕಾಲದಿಂದ ನಡೆದು ಬಂದಿದೆ. ಈ ಸಂದರ್ಭದಲ್ಲಿ ಪೊಲೀಸರು ಹೆಚ್ಚಿನ ಬಂದೋಬಸ್ತ್ ಏರ್ಪಡಿಸುತ್ತಾರೆ. ಮುಂಬಯಿಯಿಂದ ತೃತೀಯ ಲಿಂಗಿಗಳು ಬಂದು ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಅಳುವ ಕಾರ್ಯಕ್ರಮವನ್ನು ನಡೆಸಿಕೊಡುತ್ತಾರೆ. ಇದು ವಿಶಿಷ್ಟವಾಗಿದೆ.

**ಸಣ್ಣಪೀರಲ ಹಬ್ಬ ಅಥವಾ ಚೋಟಾ ಮೊಹರಂ.**

ದೊಡ್ಡ ಮೊಹರಂ ಹಬ್ಬವು ಮುಗಿದ ದಿನದಿಂದ ಸಣ್ಣ ಮೊಹರಂ ಹಬ್ಬವು ಪ್ರಾರಂಭವಾಗುತ್ತದೆ. ಈ ಹಬ್ಬವು ಸಹ ಒಂಭತ್ತು ದಿನಗಳ ಕಾಲ ನಡೆಯುತ್ತದೆ. ಸಣ್ಣ ಮೊಹರಂನ ಕೊನೆಯ ದಿನದಂದು ಬಳ್ಳಾರಿ ನಗರದಲ್ಲಿ ಮಧ್ಯ ಮಾರಾಟ ಬಂದ್ ಮಾಡಲಾಗುತ್ತದೆ. ಇದು ಇಡೀ ಬಳ್ಳಾರಿ ಜನರಿಗೆ ದೊಡ್ಡ ಹಬ್ಬವಾಗಿದೆ.

**ಅಗಸನೂರು ಮೊಹರಂ.**

ಕರ್ನಾಟಕದ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲೂಕಿನ ಅಗಸನೂರು ಗ್ರಾಮದ ನಿವಾಸಿಗಳು ನಿದ್ದೆ ಮಾಡಲಿಲ್ಲ. ಅಕ್ಕಪಕ್ಕದ ಹಳ್ಳಿಗಳ ಜನರೊಂದಿಗೆ, ಅವರು ಮೊಹರಂಗಾಗಿ ಹೊಸದಾಗಿ ಬಿಳಿ ಬಣ್ಣ ಬಳಿಯಲಾದ ಮೆಹಬೂಬ್ ಸುಭಾನಿಯ ಸ್ವಾಟ್ ದರ್ಗಾದ ಸುತ್ತಲೂ ಜಮಾಯಿಸಿದರು. ಅರವತ್ತರ ಹರೆಯದ ರಾಘವ ರೆಡ್ಡಿ, ದೋಸೆ ಈರಣ್ಣ ಮತ್ತು ಉಸ್ಮಾನ್ ಅಲಿ ನೇತೃತ್ವದ ಅಗಸನೂರಿನ ರಿವಾಯತ್ (ಕರ್ಬಲಾ ಯುದ್ಧದ ನಾಡಗೀತೆ) ಗಾಯಕರು ದರ್ಗಾದ ಅಂಗಳದಲ್ಲಿ ನಿಂತಿದ್ದರು. ಅವರು ಕನ್ನಡದಲ್ಲಿ ಸಲ್ಲಿಸಿದ ಅತೀಂದ್ರಿಯ ಹಾಡುಗಳು ಪ್ರವಾದಿ ಮುಹಮ್ಮದ್ ಅವರ ಮೊಮ್ಮಕ್ಕಳಾದ ಹುಸೇನ್ ಮತ್ತು ಹಸನ್ ಅವರ ಹುತಾತ್ಮತೆಯನ್ನು ಪ್ರಚೋದಿಸಿತು.

ಸುಮಾರು ೫೦ ಯುವಕರು ಮತ್ತು ಮಕ್ಕಳು ಅವರ ಸುತ್ತಲೂ ಜಮಾಯಿಸಿದರು ಮತ್ತು ನಿಧಾನವಾಗಿ ಹೆಜ್ಜೆ ನೃತ್ಯ ಅಥವಾ ಹೆಜ್ಜೆ ಪದವನ್ನು ಮಾಡಲು ಪ್ರಾರಂಭಿಸಿದರು. ಅವರು ತಮ್ಮ ಅಂಗೈಯಲ್ಲಿ ಎಸೆದ ಸಣ್ಣ ಬಣ್ಣದ ಹೂಜಿಗಳ ಸಹಾಯದಿಂದ ಲಯವನ್ನು ಇಟ್ಟುಕೊಂಡರು. ದೀರ್ಘ ರಾತ್ರಿಯ ಘಟನೆಗಳಿಗೆ ಈ ಸೌಮ್ಯವಾದ ಪೂರ್ವಗಾಮಿಯು ವಿಜೃಂಭಣೆಯ ಮೋಜು ಮಾಡುತ್ತದೆ.

ರಿವಾಯತ್ ಗಾಯಕರು ೬೫ ಹಾಡುಗಳನ್ನು ಹಾಡಿದ ನಂತರ ಗಾಯಗೊಳಿಸಿದರು. ನಂತರ ಕ್ರಮವು ದರ್ಗಾ ಬಳಿ ತೋಡಿದ ಗುಂಡಿಯಲ್ಲಿ ಜೋಡಿಸಲಾದ ಬೇವಿನ ಹಲಗೆಯಿಂದ ಉರಿಯುವ ದೊಡ್ಡ ದೀಪೋತ್ಸವಕ್ಕೆ ಸ್ಥಳಾಂತರಗೊಂಡಿತು. ಸುಮಾರು ೩೦೦ ಪುರುಷರು ಏಕರೂಪವಾಗಿ ಧರಿಸಿರುವ ೫೦ ಡ್ರಮ್ಮರ್‌ಗಳ ಬಿರುಸಿನ ಡ್ರಮ್‌ಗಳನ್ನು ಹೊಡೆಯುವುದರೊಂದಿಗೆ ದೀಪೋತ್ಸವದ ಸುತ್ತಲೂ ಉನ್ಮಾದದಿಂದ ನೃತ್ಯ ಮಾಡಿದರು. ನರ್ತಕರು ಮಧ್ಯಕಾಲೀನ ಆಯುಧಗಳ ಅಗ್ಗದ ಪ್ರತಿಕೃತಿಗಳನ್ನು ಒಯ್ದರು, ಅದನ್ನು ಅವರು ತ್ಯಜಿಸಿದರು. ಪುರುಷರು, ಮಹಿಳೆಯರು ಮತ್ತು ಮಕ್ಕಳು ನೆಲದ ಮೇಲೆ ಹಾಸಿದ ಚಾಪೆಗಳ ಮೇಲೆ ಕುಳಿತು, ಮುಂದೆ ಇರುವ ದೀರ್ಘ ರಾತ್ರಿಗಾಗಿ ಸಿದ್ಧಪಡಿಸಿದರು.

ಗ್ರಾಮದ ರಂಗತಂಡ ಪ್ರದರ್ಶಿಸಿದ ಹಾಸ್ಯ ಚಟಾಕಿಗಳೊಂದಿಗೆ ಕುಣಿತ ನಡೆಯಿತು. ಹುಸೇನ್ ಮತ್ತು ಹಸನ್ ಅವರ ಆಲಂಗಳನ್ನು (ಅಲಂಕೃತವಾದ ಕಂಬವನ್ನು ಹೋಲುವ ಲೋಹದ ಮಾನದಂಡ) ಇಬ್ಬರು ವ್ಯಕ್ತಿಗಳು ಮೆರವಣಿಗೆಯಲ್ಲಿ ಕೊಂಡೊಯ್ಯುವ ಸಮಯದಲ್ಲಿ ಈ ಸಂತೋಷದ ರಾತ್ರಿಯು ಮುಂಜಾನೆ ಅಂತ್ಯಗೊಳ್ಳುತ್ತದೆ, ಮುಹರಮ್ ಅಗಸನೂರಿನ ಪ್ರಮುಖ ಊರು ಹಬ್ಬ ಅಥವಾ ಹಳ್ಳಿ ಹಬ್ಬವಾಗಿದೆ ಮತ್ತು ಹಿಂದೂಗಳು ಇದನ್ನು ಮುಸ್ಲಿಮರಿಗಿಂತ ಹೆಚ್ಚು ಉತ್ಸಾಹದಿಂದ ಆಚರಿಸುತ್ತಾರೆ. ಎಲ್ಲಾ ಇತರ ಹಬ್ಬಗಳು ಮೊಹರಂನ ಮೊದಲ ೧೦ ದಿನಗಳ ಗುರುತುಗೆ ದ್ವಿತೀಯಕವಾಗಿದೆ. ಈ ಹಿಂದೆ, ಮೊಹರಂ ಕಾರಣದಿಂದ ದಸರಾಗೆ ಸಂಬಂಧಿಸಿದ ಹಬ್ಬಗಳನ್ನು ತಾತ್ಕಾಲಿಕವಾಗಿ ಕೈಬಿಡಲಾಗಿತ್ತು. ಅಗಸನೂರು ಮೊಹರಂಗೆ ಮುಂಚಿನ ದಿನಗಳಲ್ಲಿ ಆಧ್ಯಾತ್ಮಿಕತೆಯಿಂದ ತುಂಬಿರುತ್ತದೆ ಮತ್ತು ಆ ೧೦ ದಿನಗಳಲ್ಲಿ ಪಾದರಕ್ಷೆಗಳನ್ನು ಧರಿಸದಿರುವುದು ಮತ್ತು ಮಾಂಸ ಮತ್ತು ಮದ್ಯ ಸೇವನೆ ಮತ್ತು ಲೈಂಗಿಕ ಚಟುವಟಿಕೆಯಿಂದ ದೂರವಿರುವುದು ಮುಂತಾದ ಹಲವಾರು ಕಟ್ಟುನಿಟ್ಟನ್ನು ಗ್ರಾಮ ಸಮುದಾಯವು ಅನುಸರಿಸುತ್ತದೆ.ಮುಸ್ಲಿಂ ಜನಸಂಖ್ಯೆ ಇಲ್ಲದ ಹಳ್ಳಿಗಳು ಕೂಡ ಈ ಕಾರ್ಯಕ್ರಮವನ್ನು ಆಚರಿಸುತ್ತವೆ. ಮೊಹರಂನ ೧೦ ನೇ ದಿನ, ಹಳ್ಳಿಗಳಲ್ಲಿ ದೊಡ್ಡ ಹಬ್ಬವನ್ನು ನಡೆಸಲಾಗುತ್ತದೆ.ಈ ಪ್ರದೇಶದ ಹಿಂದೂ ದೇವರುಗಳ ಪಂಥಾಹ್ವಾನದಲ್ಲಿ ಹುಸೇನ್ ಮತ್ತು ಹಸನ್ ಅವರನ್ನು ಸಹ ಆಯ್ಕೆ ಮಾಡಲಾಗಿದೆ. ಹುಸೇನಪ್ಪ ಅಥವಾ ಹಸನಪ್ಪ ಮುಂತಾದ ಹೆಸರುಗಳನ್ನು ಹೊಂದಿರುವ ಹಿಂದೂ ಹಳ್ಳಿಗರು ಕಂಡುಬರುವುದು ಸಾಮಾನ್ಯವಾಗಿದೆ.

**ಮುದುಗಲ್ ಮೊಹರಂ.**

ರಾಯಚೂರು ಜಿಲ್ಲೆಯ ಮುದುಗಲ್ ಪಟ್ಟಣದ ಕೋಟೆಯಲ್ಲಿರುವ ಹಜರತ್ ಹುಸೇನ್ ಪೀರ್ ಹಾಗೂ ಮೇಗಳ ಪೇಟೆಯಲ್ಲಿರುವ ಹಜರತ್ ಹಸನ್ ಪೀರ್‌ಗಳ ಕತ್ತಲರಾತ್ರಿ ಜರುಗುತ್ತದೆ. ಮೊಹರಂ ಹಬ್ಬದ ಒಂಭತ್ತನೇ ದಿನದಂದು ಹಜರತ್ ಮೌಲಾಲಿ ಪೀರರ ಮಕ್ಕಳು ಎಂದು ಹೇಳಲಾಗುವ ಹಸನ್ ಪೀರ್ ಹಾಗೂ ಹುಸೇನ್ ಪೀರರ ಕತ್ತಲ ರಾತ್ರಿ ಮೂಲ ದರ್ಗಾದಿಂದ ದೇವರುಗಳನ್ನು ಹೊತ್ತು ನಗಾರಿ ಬಾರಿಸುತ್ತಾ ತಮಟೆ, ಬಾಜಾ ಭಜಂತ್ರಿ ಮೇಳದೊಂದಿಗೆ ದರ್ಗಾದಲ್ಲಿ ಪ್ರಾರ್ಥನೆ ಸಲ್ಲಿಸಲಾಗುತ್ತದೆ.

**ತತ್ವಪದಕಾರ ಶಿಶುನಾಳ ಶರೀಫರು.**

ಡಾಂಭಿಕ ಆಚರಣೆಗಳನ್ನು ಶರೀಫ್ ಸಾಹೇಬರು ಮೆಚ್ಚಲಿಲ್ಲ. ಅವರು ಡಾಂಬಿಕ ಮುಲ್ಲಾ, ಖಾಜೀ, ಖತೀಬ ಮತ್ತು ಮೌಲ್ವಿ ಜನಗಳು ಕೈಕೊಳ್ಳುವ ಧರ್ಮಿಕ ಶುಷ್ಕ ಆಚರಣೆಗಳನ್ನು ಕಟುವಾಗಿ ಟೀಕಿಸಿದರು. ಮಸೀದಿ ಯಾರದು? ಅದು ಎಲ್ಲಿದೆ? ಮುಲ್ಲಾ ಎನ್ನುವವನು ಬೆಲ್ಲವನ್ನು ಓದಿಕಿ ಮಾಡುವುದು ಯಾರಿಗಾಗಿ ಮತ್ತು ಯಾಕೆ? ಎಂದು ಮುಲ್ಲಾಗಳನ್ನು ಪ್ರಶ್ನಿಸಿದರು.

**ಮೊಹರಂ ಹಬ್ಬದ ಆಚರಣೆಗೆ ಮುನ್ನ ಮಾಡುವ ಆಚರಣೆಗಳನ್ನು ಶರೀಫರು ಹೀಗೆ ಹೇಳಿದ್ದಾರೆ.**

**ಶುದ್ಧ ಚಂದ್ರನ ಕಿರಣ ಸೋಂಕಿ**
**ಇದ್ದ ಭೂಮಿಗೆ ಗುದ್ದಲಿ ಹಾಕಿ**
**ಸಿದ್ಧವಿದು ವೇದಾಂತ ಶಾಸ್ತ್ರದ**
**ಮಧ್ಯದಲಿ ಹುಡಿಕ್ಯಾಡು ನೋಡು.**

ಎಂದು ಶರೀಫರು ಅಯ್ಯುರಲ್ಲಿ ವೇದಾಂತದ ವಿಷಯವನ್ನು ತಂದಿದ್ದಾರೆ.

**'ಬಲ್ಲವರಾದರೆ ತಿಳಿದು ಹೇಳಿರಿ**
**ಮುಲ್ಲಾನ ಮಸೂತಿ ಎಲ್ಲಿತ್ತೋ**
**ಗುಲ್ಲ ಮಾಡಿ ಗುದ್ದ್ಯಾಟದಲಾವಿಗೆ**
**ಬೆಲ್ಲವೋದಿಸುವದೆಲ್ಲಿತ್ತೋ?**

ಎಂದು ಹಾಡಿದರು. ಅಲಾವಿ ಆಚರಿಸುವುದು ಏಕೆ ಪಂಚೆ ಪೂಜಿಸುವುದೇನು? ಡೋಲಿ ಕಟ್ಟುವುದು ಏನು ಎಂದು ಪ್ರಶ್ನಿಸಿದ್ದಾರೆ.

**'ಡೋಲಿ ಕಟ್ಟುವುದೇನು ಕಾರಣವೋ**

..................................

**ಪಿಂಜಾರನ ಚಸಿಗಿ ಪಂಜಾಗಿ ಅರಿದಿತ್ತೋ**
**ತಾಬೂತಿನೊಳಗೊಂದು ತಡಗಿನಸ್ತವ ಕಂಡು**
**ಮಾಬೂಬೆ ಶಿಶುನಾಳಧೀಶಗೆ ನಗೆ ಬಂದೋ**

ಎಂದು ಅಣಕವಾಡಿದರು. ಶರೀಫರ ಕ್ರಾಂತಿಕಾರೀ ವಿಚಾರಗಳಿಗೆ ಮುನಿದ ಸಮಾಜ ಅವರ ಮೇಲೆ ನಂಜನ್ನು ಕುರಿತು. ಇಂವ ಮಸೂತಿಗೆ ಬಂದಿಲ್ಲ. ನಮಾಜು ಮಾಡಿಲ್ಲ ಎಂದು ಆರೋಪ ಹೊರಿಸಿ, ಶರೀಫರನ್ನು ಬಹಿಷ್ಕರಿಸಿತು.

ಫಕೀರನಾಗಬೇಕಾದರೆ ಮನದ ವಿಕಾರವನ್ನು ಅಳಿದಿರಬೇಕು ಎಂಬುದು ಅವರ ಆಶಯವಾಗಿತ್ತು. ಲಾಡಿ ಹಾಕಿಕೊಂಡ ಮಾತ್ರಕ್ಕೆ ಅವನು ಫಕೀರನಾಗಬಲ್ಲನೇ? ಎಂದು ನೋಡಿ ಕೆಂಪು ಕರಿದು ಹಸಿರು ಹಳದಿ ಲಾಡಿ ಹಾಕಿಕೊಂಡು ಫಕೀರನಾದಿ ಎಂದು  ಫಕೀರರನ್ನು ಶರೀಫರು ಕೆಣಕಿದ್ದಾರೆ.

ಹುಲುಗೂರಿನ ಸತ್ಪುರುಷರ ಹಜರೇಶಾ ಖಾದರಿಯವರ ವರಪ್ರಸಾದದಿಂದ ಜನಿಸಿದ ಶರೀಫರ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ತಂದೆಯವರಾದ ಇಮಾಮ ಭಾಯಿಯವರು ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ಇಸ್ಲಾಮ ಧರ್ಮ ಗ್ರಂಥಗಳ ಅಧ್ಯಯನವನ್ನು ಮಾಡಿಸುವುದರ ಜೊತೆಗೆ ಇಸ್ಲಾಮ ಸಾಧು ಸಂತ, ಪೀರ ಫಕ್ಕೀರರ ಪರಿಶುದ್ಧ ಜೀವನವನ್ನು ಕತಾ ರೂಪದಲ್ಲಿ ಅರುಹುತ್ತಿದ್ದರು. ಪೂಜ್ಯರಾದ ಹಜರತ್ ಮಹಮ್ಮದ್ ಪೈಗಂಬರ, ಹಸೇನ್, ಹುಸೇನ್‌ರ ತ್ಯಾಗಜೀವನ, ಹಿರಿಮೆಗಳನ್ನು ಹೇಳಿ ಕೊಡುವುದರ ಸಂಗಡ ಇಸ್ಲಾಮ ಧರ್ಮದ ತತ್ವಗಳಾದ ಮೂರ್ತಿ ಪೂಜೆ ನಿಷೇಧ, ಸರಳ ಸುಂದರ ನಿರಾಡಂಬರ ಜೀವನ ಕಲ್ಪನೆಯನ್ನು ಮಾಡಿಕೊಟ್ಟರು. ಯಜೀದನು ಮೊಹರಂ ತಿಂಗಳ ೧೦ನೇ ದಇನದಂದು ಕರ್ಬಲಾ ಕಾಳಗದಲ್ಲಿ ಹುಸೇನನ್ನು ಕೊಲ್ಲಿಸಿದ ಸಂಗತಿಯನ್ನು ತಿಳಿಸಿದ್ದಾರೆ.

**ಅಯ್ಯೂರ ಮೊಹರಮ ದಾಟಾ**
**ಕರ್ಬಲದ ಪಡದಾಟಾ**
**ಹೂಡಿದ ಯಜೀದ ಜಾಣವ**
**ಹಿಡಿದ ಕರ್ಬಲದ ದಾರಿಯನು**
**ದುಃಖದಲಾವಿ ಆಯ್ದುರ ಹೇಳುವ ಸುದ್ಧಿ ಮ**
**ಮಕ್ಕಾ ಮದೀನದ ವಿಸ್ತಾರಾ**
**ಲಕಷ್ಯವಿಟ್ಟು ಕತೆಗಳ ಸರ್ವರು ಕೇಳಿರಿ**
**ಸಿಕ್ಕಿಆನೋ ಯಜೀದನ ಗಡಿಯಲ್ಲಿ ತಾನು ಹೋಗಿ**
**ಎಂಥ ಕೆಡಕ ಯಜೀದ**
**ಪಂಥಹ್ವಾಂವ ಪಿತೂರಿ ನಡಸೀದ**
**ಅಂತರಂಗದಿ ಪತ್ರ ಬರೆದು ಬೇಗನೆ ಕಳುಹಿ**
**ತಂತ್ರ ತಿಳಿಯದೆ ಜನ್ಮ ಕೊಲಿಸ್ಯಾನೋ**

ಎಂದು ಶರೀಫರು ಹಾಡಿದ್ದಾರೆ. ಅಲಾವಿ ಪೂರ್ವದಿಂದ ನಡೆದು ಬಂದಿಲ್ಲ. ಹುಸೇನಿಯ ಕೊಲೆಯ ನಂತರ ನಡೆಯಿತು. ಅಲಾವಿ ದುಃಖದ ದಿನ, ಆ ಕಾಲದಲ್ಲಿ ಡೋಲಿ ಕಟ್ಟೆ ಕುಣೀಯುವ ಆಡಂಬರ ಜೀವನ ಬೇಡ ಎಂದರಿತ ಶರೀಫರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

**ಮೊದಲಿಗೆಲ್ಲಿತ್ತೋ ಅಲಾವಿ ಖೂನ**
**ಕದನ ಬೆಳಿಸತ್ತೋ ಕರ್ಬಲದಾ ದಿನ**
**ಡೋಲಿ ಕಟ್ಟುವುದೇನು ಕಾರಣವೋ**
**ಡೋಲ್ಯಾಗ ದೇವರಿಡುವರೇನೋ**

ಎಂಬ ಸಾಲುಗಳು ಶರೀಫರ ಧರ್ಮ ಪ್ರಜ್ಞೆಯನ್ನು ಸಾರುತ್ತದೆ. ಶರೀಫಗೆ ಮಕ್ಕಾ ಮದೀನಾ ಪಟ್ಟಣಗಳ ಕುರಿತು ಅಪಾರ ಗೌರವ ಹುಟ್ಟಿಕೊಂಡಿತು.

ಮುಸಲ್ಮಾನ ಧರ್ಮವು ಅಲ್ಲಗಳೆದ ಮೂರ್ತಿ ಪೂಜೆಯನ್ನು ಶರೀಫರು ಹೀಗೆ ಹೇಳುತ್ತಾರೆ.

**ತಾಬೂತಿನೊಳಗೊಮಡು ತಗಡಿನಹಸ್ತವ ಕಂಡು**
**ಮಾಬೂಬೆ ಶಿಶುನಾಳಧೀಶಗೆ ನಗೆ ಬಂತೋ**

ಎಂದು ಹಾಡಿದ್ದಾರೆ.

ಇವರು ರಿವಾಯತುಗಳ ಮೂಲಕ ಮೂರ್ತಿ ಪೂಜೆಯನ್ನು ಖಂಡಿಸಿದರು. ತಂದೆಯ ಮಾರ್ಗದರ್ಶನದಲ್ಲಿ ಸ್ವಧರ್ಮದ ನೈಜ ಸ್ವರೂಪವನ್ನು ಅರಿತುಕೊಂಡರು. ಮನೆಯ ವಾತಾವರಣದಲ್ಲಿ ಶರೀಫರು ಇಸ್ಲಾಮ ಸಂಸ್ಕೃತಿಯ ಸಾರವನ್ನು ಹೀರಿದರು. ಮುಸಲ್ಮಾನ ಧರ್ಮಕ್ಕೆ ವ್ಯತಿರಿಕ್ತವೆನಿಸಿ

ಧಾರ್ಮಿಕ ಜೀವನದಲ್ಲಿ ಬೇರುಬಿಟ್ಟ ಹಲವಾರು ಆಚರಣೆಗಳನ್ನು ಶರೀಫರು ಮೆಚ್ಚಲಿಲ್ಲ. ಶುಷ್ಕವಾದ ಆಚರಣೆಗಳನ್ನು ಕಂಡು ಅವರು ಕನಿಕರಪಟ್ಟರು. ಅಲಾವಿಯ ಕಾಲದಲ್ಲಿ ಅಗ್ನಿಯ ಸುತ್ತಲೂ ಉತ್ಸಾಹದಿಂದ ಕುಣಿಯುವುದೇ? ಈ ಅಲವಿ ಮೊದಲು ಎಲ್ಲಿತ್ತು? ಎಂದು ಪ್ರಶ್ನಿಸಿದ್ದಾರೆ.

**ಮೊದಲಿಗೆಲ್ಲಿತ್ತೋ ಅಲಾವಿ ಜಾನ**
**ಕದನ ಬೆಳಸಿತೋ ಕರ್ಬಲದಾ ದಿನ**

ಎಂದು ಅಲಾವಿಯ ಚರಿತ್ರೆಯನ್ನು ಜನರೆದುರು ಹೇಳಿದರು. ಅಲಾವಿ ಮುಸಲ್ಮಾನ ಧರ್ಮದಲ್ಲಿಲ್ಲ. ಅದು ನಡುವೆ ಬಂದು ಸೇರಿದುದು. ಮೊರಹಂ ತಿಂಗಳ ಹತ್ತನೆಯ ತಾರೀಖಿನ ದಿವಸ ಕರ್ಬಲಾದಲ್ಲಿ ಯಜೀದನು ಹುಸೇನಿಯನ್ನು ನಿರ್ದಯತನದಿಂದ ಕೊಲ್ಲಿಸಿದನು. ಆತನು ಹುತಾತ್ಮನಾದ ಆ ತಿಂಗಳು ದುಃಖದ ತಿಂಗಳು. ಆ ಹುತಾತ್ಮ ನಾದ ಅವನ ನೆನಪಿಗೆಂದು ಪಂಜೆ ಪೂಜೆ ಮಾಡಬೇಕೆ? ಇಸ್ಲಾಮ ಧರ್ಮವು ಮೂರ್ತಿ ಪೂಜೆಯನ್ನು ಪುರಸ್ಕರಿಸುತ್ತದೆಯೇ ಎಂದು ಪ್ರಶ್ನಿಸಿದ್ದಾರೆ. ಹಸನ್ ಹುಸೇನರಂಥವರ ಪಂಜೆ ಪೂಜೆ ಮಾಡುವುದೇ ಎಂದು ತಿಳಿ ಹೇಳಿದ್ದಾರೆ.

**ಮಾಡಬಾರ್ದೋ ಅಯ್ಯರ ಮೊಹರಂ**
**ಕೇಡ ತಂದು ಕಡದಾಡಿ ಕರ್ಬಲದಿ**

ಎಂದು ಶರೀಫರು ರಿವಾಯತುಗಳ ಮೂಲಕ ತಮ್ಮ ಆಶಯವನ್ನು ತಿಳಿಸಿದ್ದಾರೆ.

**ಅಲಾವಿ ಕುಣಿಯೊಳು ಅಗ್ನಿಯ ಹಚ್ಚಿ**
**ಮುಲ್ಲಾ ಮಾಡುವುದ್ಯಾಕೋ ಓದಿಕಿ**
**ಎಂದು ಮುಲ್ಲಾರ ಕಾರ್ಯವನ್ನು ಪ್ರಶ್ನಿಸಿದ್ದಾರೆ.**
**ಬಲ್ಲವರಾದರೆ ತಿಳೀದು ಹೇಳಿರಿ**
**ಮುಲ್ಲಾನ ಮಸೂತಿ ಎಲ್ಲಿತ್ತೋ**
**ಗುಲ್ಲ ಮಾಡಿ ಗುದ್ದಯಾಡಿದಲಾವಿಗೆ**
**ಬೆಲ್ಲ ಓದಿಸುವುದೆಲ್ಲಿತ್ತೋ**

ಎಂದು ಮೊಹರಂ ಆಚರಣೆಯ ಪರಂಪರೆಯನ್ನು ಕುರಿತು ಪ್ರಶ್ನಿಸಿದ್ದಾರೆ. ಡೋಲಿ ಹೊತ್ತು ಅಲ್ವಿದಾ ಎಂದು ಹೇಳುವ ಜನಗಳನ್ನು ಕಂಡು ಶರೀಫರು ಹೀಗೆ ಹೇಳಿದ್ದಾರೆ.

**ಚೂರು ಚೊಂಗ್ಯಾದ ಎಡಿ ಸಾಲಿಟ್ಟು ಓದಿಕಿ ಮಾಡಿ**
**ನೀರಿನ ಬಳಿ ಹೋಗಿ ಮಾರಿ ತೆಗ್ಗಿಸಿ ನಿಂತು**
**ಸಾಲ ತುರುಕದ ಜತ್ತು**
**ಮ್ಯಾಲ ಡೋಲಿಯ ಹೊತ್ತು**
**ಅಲ್ವಿದಾ ಹೇಳುವಾಗ**
**ಕೋಲು ಬಿದ್ದ ಗಡ್ಡಕ್ಕೆ ನಾಚಿತ್ತೋ ಮೊಹರಂ**

ಎಂದು ಅಣಿಕಿಸಿದ್ದಾರೆ.

ಶರೀಫರು ಹಾಡಿದ ರಿವಾಯತುಗಳು ಬರೀ ಮುಸಲ್ಮಾನ ಧರ್ಮಕ್ಕೆ ಮಾತ್ರ ಸೀಮಿತವಾಗಿಲ್ಲ ಅವರು. ಎವಾಯತುಗಳಿಗೆ ಭಾರತ, ರಾಮಾಯಣಗಳ ಸನ್ನಿವೇಶಗಳನ್ನು ಹದವರಿದು ಬಳಕೆ ಮಾಡಿದರು. ಈ ರಿವಾಯತುಗಳಲ್ಲಿ ಹಿಂದೂ ಮುಸಲ್ಮಾನ ಸಂಸ್ಕೃತಿಗಳನ್ನು ಅವರು ಎರಕ ಹೊಯ್ದಿದ್ದಾರೆ. ಹೀಗೆ ಮೊಹರಂ ಆಚರಣೆ, ತತ್ವಪದಕಾರರ ಸಂಪ್ರದಾಯವನ್ನು ನೋಡಬಹುದಾಗಿದೆ.

**ಪರಾಮರ್ಶನ ಗ್ರಂಥಗಳು.**

೧. ರಹತಮತ್ ತರೀಕೆರೆ, ೧೯೯೮, ಕರ್ನಾಟಕದ ಸೂಫಿಗಳು, ಅಭಿನವ ಪ್ರಕಾಶನ, ಬೆಂಗಳೂರು
೨. ಚಂದ್ರಪ್ಪ ಹೆಬ್ಬಾಳಕರ್, ೨೦೦೯, ಬೀದರ್ ಜಿಲ್ಲೆಯ ಮೊಹರಮ್ ಪದಗಳು,

೩. ಆದಿಲ್ ಶಾಹಿ ಸಾಹಿತ್ಯ ಸಂಪುಟಗಳು, ೨೩, ೧೮
೪. ರಹಮತ್ ತರೀಕೆರೆ, ೨೦೧೪, ಕರ್ನಾಟಕದ ಮೊಹರಂ, ಪ್ರಸಾರಾಂಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
೫. ಚಿನ್ನಸ್ವಾಮಿ ಸೋಸಲೆ, ಎನ್, ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
೬. ಎಂ.ಎನ್.ಸಿಂದಗಿ, ಶಿಶುನಾಳ ಶರೀಫ ಅವರ ಜೀವನ ಕೃತಿಗಳು ಮತ್ತು ದರ್ಶನ,
ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೦.



# ಕಲ್ಯಾಣ ಕರ್ನಾಟಕದಲ್ಲಿ ಸೂಫಿ ಪಂಥ.

**–ಸಂತೋಷಿ. ಸಿ ಹಿಪ್ಪರಗಿ,**
ಸಹಾಯಕ ಪ್ರಾಧ್ಯಾಪಕರು,
ಶರಣಬಸವೇಶ್ವರ ಕಲಾ ಮಹಾವಿದ್ಯಾಲಯ, ಕಲಬುರಗಿ.

ವಿಶ್ವದ ಧಾರ್ಮಿಕ, ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ಸೂಫಿ ಪಂಥದ ಕೊಡುಗೆ ಅಪಾರವಾಗಿದೆ. ಹಿಂದೂ ಧರ್ಮದಲ್ಲಿ ಶಂಕರ ಮಧ್ವಾಚಾರ್ಯ, ಚೈತನ್ಯ, ಕಬೀರ್, ಪುರಂದರ, ಬಸವಾದಿ ಶಿವಶರಣರು ಮೂಢನಂಬಿಕೆಗಳಿಂದ ತುಂಬಿದ್ದ ಸಮಾಜದಲ್ಲಿ ಸಾಮರಸ್ಯ, ಸಮಾನತೆ, ಸತ್ಯ, ಸಹಕಾರ ಭಾವನೆಗಳನ್ನು ಬೆಳೆಸಿದರು. ನಾವೆಲ್ಲರು ಧರ್ಮಾಂಧತೆಯಲ್ಲಿ ಸಿಲುಕದೆ ಭಗವಂತನ ಮಕ್ಕಳು ಎಂದು ಜನರಿಗೆ ಅರ್ಥ ಮಾಡಿಸುವುದು ಸೂಫಿ ಪಂಥದ ಉದ್ದೇಶವಾಗಿತ್ತು. ಸೂಫಿ ಪಂಥವು ಇಸ್ಲಾಂ ಧರ್ಮದ ಅನುಭಾವಿಕ ವಿಚಾರವನ್ನು ಜನರಿಗೆ ಮನವರಿಕೆ ಮಾಡಿಕೊಡುವುದಾಗಿತ್ತು. ದುರಾಸೆಗಳಿಂದ ದೂರವಿದ್ದು, ಶುದ್ಧ ವಿಚಾರಗಳಿಂದ ಮನಸ್ಸನ್ನು ಸ್ವಚ್ಛವಾಗಿಟ್ಟುಕೊಳ್ಳುವುದು, ಪರರ ಒಳಿತನ್ನು ಬಯಸುವುದು, ಆಶ್ರಿತರಿಗೆ ಅಂಗವಿಕಲರಿಗೆ ಸಹಾಯವನ್ನು ಮಾಡುವುದು, ಅನ್ಯರ ಸೇವೆಯಲ್ಲಿಯೇ ಭಗವಂತನ ಸೇವೆ ಅಡಕವಾಗಿದೆಯೆಂದು ತಿಳಿದು, ಅವರ ಆನಂದದಲ್ಲಿಯೇ ಮೈಮರೆತು ನಿರ್ಲಿಪ್ತವಾಗುವುದು ಸೂಫಿ ಪಂಥದಲ್ಲಿ ಅಡಕವಾಗಿರುವ ಮುಖ್ಯ ಗುರಿಯಾಗಿದೆ. ಮಾನವರ ಹೃದಯವೇ ಭಗವಂತನ ಮನೆಯಾಗಿದೆ. ಆ ಭಗವಂತನ ಮನೆಯನ್ನು ಯಾರು ಕೂಡ ಗಾಯಗೊಳಿಸಬಾರದು.

ಕರ್ನಾಟಕದಲ್ಲಿಯ ಸೂಫಿ ಪಂಥದ ಬಗ್ಗೆ ಹೇಳಬೇಕಾದರೆ ಈ ಪಂಥವು ಎಲ್ಲಾ ಧರ್ಮಗಳನ್ನು ಒಂದುಗೂಡಿಸಿದ ಕೀರ್ತಿ ಇದಕ್ಕೆ ಸಲ್ಲುತ್ತದೆ, ಮಹಮ್ಮದ ಪೈಗಂಬರ್ ಮತ್ತು ಖುರಾನ್ ಪವಿತ್ರ ಗ್ರಂಥವು ಸೂಫಿ ಪಂಥದ ಮೂಲವಾಗಿದೆ ಎಂದು ಹೇಳಲಾಗಿದೆ. ಬಹುಮನಿ, ಆದಿಲ್ ಶಾಹಿ, ಮೊಗಲರು ಮತ್ತು ನಿಜಾಮರ ಆಳ್ವಿಕೆಯಲ್ಲಿ ಅನೇಕ ಸೂಫಿ ಸಂತರು ಕರ್ನಾಟಕದ ಅನೇಕ ಭಾಗಗಳಲ್ಲಿ ನೆಲೆಸಿ ಹಿಂದೂ ಮುಸ್ಲಿಂರಲ್ಲಿ ಪ್ರೀತಿ, ವಿಶ್ವಾಸ, ಸಹೋದರತ್ವ ಸೌಹಾರ್ದತೆಯನ್ನು ಬೆಳೆಸಲು ಶ್ರಮಿಸಿದರು.

**ಸೂಫಿ ಪಂಥದ ಅರ್ಥ.**

"ಸೂಫಿ" ಎಂಬ ಪದವು ಮೂಲತಃವಾಗಿ ಸಫ್ ಎಂಬ ಅರಬಿಕ ಭಾಷೆಯಿಂದ ಬಂದಿದೆ. ಸದ್ ಎಂದರೆ "ಸ್ವಚ್ಛ" ಅಂದರರ್ಥ ಪರಿಶುದ್ಧ ನಡವಳಿಕೆಯುಳ್ಳವನು. "ಸೂಫ್!" ಎಂದರೆ "ಉಣ್ಣೆ" ಎಂದರರ್ಥ. ಒಟ್ಟಾಗಿ ಸರಳವಾದ ಉಣ್ಣೆಯ ಬಟ್ಟೆಯನ್ನು ಧರಿಸಿದ ಪರಿಶುದ್ಧ ನಡತೆಯುಳ್ಳವರಿಗೆ ಸೂಫಿ ಎಂದು ಕರೆಯಲಾಯಿತು. ಸೂಫಿಪಂಥದಲ್ಲಿರುವ ವಾಸ್ತವಿಕತೆಯ ಬಗ್ಗೆ ನಾವು ಮಾತನಾಡಬೇಕಾದರೆ ಶಾಂತಿ, ಪರೋಪಕರ, ಸಹಜೀವನ ಮತ್ತು ಸೃಷ್ಠಿಕರ್ತನೊಂದಗಿನ ನಿಕಟ ಪ್ರೀತಿಯ ಬಗ್ಗೆ ಇದು ಹೇಳಿದೆ.

ಭಾರತೀಯ ಸಾಮಾಜಿಕ ಮತ್ತು ಧಾರ್ಮಿಕ ರಂಗಗಳಿಗೆ ಇದು ಆರೋಗ್ಯಕರ ಮತ್ತು ಸೌಹಾರ್ದತೆಯ ಕೊಡುಗೆ ನೀಡಿದೆ. ಇದು ಸಾಮಾಜಿಕ ಮತ್ತು ಧಾರ್ಮಿಕ ಮಟ್ಟಗಳಲ್ಲಿ ಮೌಲ್ಯಗಳನ್ನು ಮತ್ತು ಸಾಮಾಜಿಕ ಶಿಸ್ತನ್ನು ತರಲು ಪರಿಶ್ರಮಿಸಿದೆ.

**ಭಾರತಕ್ಕೆ ಸೂಫಿಪಂಥದ ಆಗಮನ.**

ಪ್ರಾರಂಭದಲ್ಲಿ ಕ್ರಿ.ಶ. ೧೦೮೮ ರಲ್ಲಿ ಭಾರತಕ್ಕೆ ಬಂದು ಮೊದಲು ಸೂಫಿ ಪಂಥ ಪ್ರಚಾರ ಮಾಡಿದವರು, ಅಲ್ ಹುಜ್ವೇರಿ. ಇವರ ಸಮಾಧಿ ಲಾಹೋರನಲ್ಲಿದೆ. ಸೂಫಿ ಪಂಥ ಮೊದಲು ಅರೇಬಿಯಾದಲ್ಲಿ ಉಮವಾಗಿ ಅನಂತರ ಪರ್ಷಿಯ, ಇರಾಕ್ ಮೂಲಕ ಭಾರತಕ್ಕೆ ಹರಡಿತು. ಕ್ರಿ. ಶ.

೧೧೯೨ರಲ್ಲಿ ಸುಲ್ತಾನ್ ಮೈನುದ್ದಿನ್ ಚಿಸ್ತಿ ಅಫಘಾನಿಸ್ತಾನದಿಂದ ಶಹಬುದ್ದಿನ್ ಘೋರಿಯ ಜೊತೆ ಅಜ್ಮೀರದಲ್ಲಿ ಬಂದು ನೆಲೆಸಿದರು.

ಪ್ರವಾದಿ ಮಹಮ್ಮದರು ಸೂಫಿ ಪಂಥದ ಪ್ರವಾದಿ. ಕ್ರಿ.ಶ. ೨ನೇ ಶತಮಾನದಲ್ಲಿ "ಸೂಫಿಸಂ" ಎನ್ನುವ ಶಬ್ದವು ಹುಟ್ಟಿಕೊಂಡಿತು.

**ಸೂಫಿ ಪಂಥ ಇಸ್ಲಾಂಧರ್ಮಕ್ಕಿಂತ ಹೇಗೆ ಭಿನ್ನ.**

೧. ಸೂಫಿ ಪಂಥದ ಅನುಯಾಯಿಗಳು ತಮ್ಮ ಸಂಪತ್ತನ್ನೆಲ್ಲ ದಾನ ಮಾಡಿದರೆ. ಆದರೆ ಇಸ್ಲಾಂ ಧರ್ಮದಲ್ಲಿ ತಮ್ಮ ಸಂಪಾದನೆಯ ಒಂದಷ್ಟು ಭಾಗವನ್ನು ದಾನಕ್ಕಾಗಿ ಮಾತ್ರ ಮೀಸಲಿಡುತ್ತಾರೆ.
೨. ಸೂಫಿ ಪಂಥವು ಆಂತರಿಕವಾಗಿ ದೇವರ ಬಗೆಗಿನ ಪ್ರೀತಿಯ ಕಡೆಗೆ ಹೆಚ್ಚು ಆದ್ಯತೆ ನೀಡಿದರೆ ಅಂದರೆ ಆಂತರಿಕ ಸ್ವಚ್ಚತೆಯ ಬಗ್ಗೆ ಮಹತ್ವ ನೀಡಿದರೆ, ಇಸ್ಲಾಂ ಧರ್ಮವು ಧರ್ಮದ ಪಾಲನೆ ಮತ್ತು ಭಾಹ್ಯ ಶುದ್ದತೆಯ ಕಡೆಗೆ ಹೆಚ್ಚಿನ ಮಹತ್ವವನ್ನು ನೀಡುತ್ತದೆ.

**ಸೂಫಿ ಪಂಥದಲ್ಲಿಯ ಪ್ರಮುಖ ನಂಬಿಕೆ.**

ಮಾನವ ಚೇತನವು ದೈವಿಕ ಆಜ್ಞೆಯಿಂದ ಹೊರಹೊಮ್ಮಿದೆ ನಾನು ಎನ್ನುವ ಭ್ರಮೆಯ ಸ್ವಯಂತನವನ್ನು ಅಳಿಸಿಹಾಕುವುದು ಮುಖ್ಯ ಅದುವೇ ಅಂತಿಮ ಗುರಿ.

**ಸೂಫಿ ಪಂಥವು ತನ್ನದೆ ಆದ ತತ್ವಗಳನ್ನು ಒಳಗೊಂಡಿದೆ.**

೧. ಪ್ರಮಾಣಿಕತೆ, ಸತ್ಯತೆ, ಪಶ್ಚಾತಾಪ, ದಯೆಯಂತಹ ಮೌಲ್ಯಗಳನ್ನು ಬೆಳಸಿಕೊಳ್ಳುವುದು.
೨. ಪರಸ್ಪರರನ್ನು ಗೌರವಿಸುವುದು ಪ್ರೀತಿಸುವುದು, ಹಾಗೇ ದೇವರನ್ನು ಪ್ರೀತಿಸುವುದು.
೩. ದೇವರು ಒಬ್ಬನೇ ನಾವೆಲ್ಲ ಅವನ ಮಕ್ಕಳು.
೪. ದೇವರನ್ನು ತಲುಪಲು ಧರ್ಮದಲ್ಲಿ ಅನೇಕ ಮಾರ್ಗಗಳಿವೆ.
೫. ಆಧ್ಯಾತ್ಮಿಕ, ಸಂಗೀತ, ನೃತ್ಯ ದೇವರನ್ನು ತಲುಪಲು ಅಥವಾ ಅವನ ಹತ್ತಿರ ಹೋಗಲು ಪ್ರಮುಖ ಸಾಧನೆಗಳು ಆಗಿವೆ.
೬. ಉಪವಾಸ, ದೇಹದಂಡನೆ, ಪೂಜೆ ಪುರಸ್ಕಾರಗಳಿಂದ ದೇವರನ್ನು ತಲುಪಲು ಸಾಧ್ಯವಿಲ್ಲ.
೭. ಮತಾಂತರಕ್ಕೆ ಮತ್ತು ಜಾತಿ ಪದ್ದತಿಯಲ್ಲಿ ನಂಬಿಕೆ ಇಲ್ಲ.

**ಭಕ್ತಿ ಚಳುವಳಿ ಮತ್ತು ಸೂಫಿ ಪಂಥಗಳಲ್ಲಿಯ ಸಾಮ್ಯತೆ.**

೧. ಸೂಫಿ ಮತ್ತು ಭಕ್ತಿ ಚಳುವಳಿಗಳೆರಡು ವಿಶ್ವ ಭ್ರಾತತ್ವದ ಬಗ್ಗೆ ಒತ್ತಿ ಹೇಳುತ್ತವೆ ಹಾಗೆ ಸಂಗೀತ ಮತ್ತು ನೃತ್ಯಗಳು ದೇವರನ್ನು ಒಲಿಸಿಕೊಳ್ಳುವ ಸಾಧನಗಳಾಗಿವೆ.
೨. ಸೂಫಿ ಮತ್ತು ಭಕ್ತಿ ಚಳುವಳಿಗಳು ಮನುಷ್ಯನಿಗೆ ಧರ್ಮಾಂದನಾಗಲು ಬಿಡುವುದಿಲ್ಲ.

**ಸೂಫಿ ಪಂಥದಲ್ಲಿ ನೃತ್ಯ ಏಕೆ.**

ಇಸ್ಲಾಂ ಧರ್ಮದ ಅನುಭಾವಿಕ ಶಾಖೆಯಾದ ಸೂಫಿ ಪಂಥ ದೈವಿಕತೆಯೊಂದಿಗಿನ ಅತೀಂದ್ರಿಯ ಸುಖದ ಅನುಭವವಾಗಿದೆ. ಅವರ ನೃತ್ಯವು ಸೂಫಿ ಆರಾಧನೆಯ ಸಾಂಪ್ರದಾಯಕ ರೂಪವಾಗಿದೆ.

ಒಂದು ಕೈಯನ್ನು ಮೇಲಕ್ಕೆ ಎತ್ತಿ ದೈವಿಕತೆಯನ್ನು ತಲುಪುವ ಮತ್ತು ಇನ್ನೊಂದು ಕೈಯನ್ನು ನೆಲದ ಕಡೆ ತೋರಿಸುತ್ತಾ ನಿರಂತರವಾಗಿ ತಿರುವಿಕೆಯಾಗಿದೆ.





**ಸೂಫಿ ಪಂಥದ ಆಚರಣೆಗಳು.**

೧. ಪ್ರಾರ್ಥನೆ
೨. ಉಪವಾಸ
೩. ಪ್ರವಾದಿ ಮೊಹಮ್ಮದರ ಜನ್ಮ ದಿನಾಚರಣೆಯನ್ನು ಆಚರಿಸುವುದು.
೪. ಪುಣ್ಯ ಕ್ಷೇತ್ರಗಳ ಭೇಟಿ
೫. ಧ್ಯಾನ ಮತ್ತು ಇಂದ್ರಿಯಗಳ ನಿಗ್ರಹ.

**ಕಲ್ಯಾಣ ಕರ್ನಾಟಕದಲ್ಲಿ ಸೂಫಿ ಪಂಥ.**

ಪ್ರಸ್ತುತ ಕರ್ನಾಟಕದಲ್ಲಿ ೩೧ ಜಿಲ್ಲೆಗಳಿದ್ದು, ೪೨೫ ಸೂಫಿ ಸಂತರ ಉಲ್ಲೇಖಗಳು ನಮಗೆ ಇತಿಹಾಸದ ಪುಟಗಳಲ್ಲಿ ಸಿಗುತ್ತವೆ.

**ಕಲಬುರಗಿಯಲ್ಲಿ ಸೂಫಿ ಪಂಥ.**

೧. ಸೈಯದ್ ಮೊಹಮ್ಮದ್ ಗೆಸು ರಾಜ್ ಇವರು ಗುಲಬರ್ಗಾಕ್ಕೆ ಬಂದ ಪ್ರಮುಖ ಸಂತರು ಇವರೆ ಹಜರತ್ ಖಾಜಾ ಬಂದೆನವಾಜ್. ಇವರು ಗುಲಬರ್ಗಾಕ್ಕೆ ೧೩೨೧ರಲ್ಲಿ ಬಂದರು ಇವರು ಸೂಫಿ ಪಂಥದಲ್ಲಿ ಬರುವ ಒಂದು ಪಂಗಡ ಚಿಸ್ತಿಗೆ ಸೇರಿದವರಾಗಿದ್ದರು. ಈ ಸಮಯದಲ್ಲಿ ಫೀರೋಜ್ ಶಾಹಾ ಗುಲಬರ್ಗಾದ ಸುಲ್ತಾನನಾಗಿದನು. ಇವರಿಗೆ ಗೆಸೂರಾಜ್ ಮತ್ತು ಬಂದೆನವಾಜ್ ಅವರಿಗಿದ್ದ ಬಿರುದಗಳಾಗಿದ್ದವು. ಪರ್ಶಿಯಾದ ಶ್ರೀಮಂತ ಕುಟುಂಬದಲ್ಲಿ ಜನಿಸಿದ ಇವರು ಈಜೀಪ್ಟಿನ ಕೈರೋ ವಿಶ್ವವಿದ್ಯಾಲಯದಲ್ಲಿ ಧರ್ಮ ಶಾಸ್ತ್ರದಲ್ಲಿ ಶಿಕ್ಷಣ ಪಡೆದರು. ಪ್ರಾರಂಭದಲ್ಲಿ ಭಾರತದ ದೆಹಲಿಗೆ ಬಂದು ನೆಲಸಿ ನಂತರ ನಿಜಾಮುದ್ದಿನ್ ಚಿಸ್ತಿಯ ಶಿಷ್ಯರಾಗಿ ಗುಲಬರ್ಗಾಕ್ಕೆ ಬಂದು ನೆಲಸಿ ಸಂತರಾಗಿ ಪವಾಡ ಪುರಷರಾಗಿ ಹೆಸರು ಗಳಿಸಿದ್ದರು. ರೋಗಿಗಳನ್ನು ಅವರು ಮುಟ್ಟಿದರೆ ರೋಗ ಗುಣವಾಗುತ್ತಿತಂತೆ, ಇಸ್ಲಾಂ ಸಂಪ್ರದಾಯದ ವಿರುದ್ಧ ಧ್ವನಿಯೆತ್ತಿ ಉಲೆಮಾರುಗಳನ್ನು ಕೆರಳಿಸಿದ್ದರೆ, ಪವಾಡಗಳಿಂದ ಜನರಿಗೆ ಪ್ರೀಯರಾದರು. ಗುಲಬರ್ಗಾದಲ್ಲಿಯ ಬಂದೇನವಾಜ್ ದರ್ಗಾ ಹಿಂದು ಮುಸ್ಲಿಂರು ಒಟ್ಟಾಗಿ ಭೇಟಿ ಮಾಡಿ ಪ್ರಾರ್ಥನೆ ಸಲ್ಲಿಸುತ್ತಾರೆ. ಅವರಿಬ್ಬರಿಗೂ ಯಾತ್ರಾ ಸ್ಥಳವಾಗಿದೆ. ಬಂದೆ ನವಾಜ್ ಅವರು ಉರ್ದು ಭಾಷೆಯಲ್ಲಿ ಮೇಧಾವಿಯಾಗಿದ್ದು, ೧೦೫ ಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ. ಗಜಲಗಳನ್ನು ರಚಿಸಿದ್ದಾರೆ. ಹೀಗಾಗಿ ಇವರನ್ನು "ದಖನಿ ಉರ್ದುಸಾಹಿತ್ಯದ ಪಿತಾಮಹಾ" ಎಂದು ಕರೆಯಲಾಗಿದೆ.

೨. ಶೇಖ್ ಸೀರಾಜೋದಿನ್ ಜುನ್ನೈದಿ ಕ್ರಿ.ಶ. ೧೩೪೭ರಲ್ಲಿ ಭಾರತಕ್ಕೆ ಬಂದರು ಇಲ್ಲಿಯ ಸುಲ್ತಾನಾದ ಅಲ್ಲಾವುದೀನ್ ಹಸನ್ ಬಹುಮನ್ ಶಹಾ ಇವರಿಗೆ ರಾಜಾಶ್ರಯ ನೀಡಿದ್ದರು. ಇವರು ಗೋರಿ ಶಹಬಜಾರದ ಶೇಖ್ ರೋಜಾ ಹತ್ತಿರ ಇದೆ.

೩. ಹಜರತ್ ಶೇಖ್ ಸದಜಲಾನಿ ರಹಮತುಲ್ಲಾ, ಕ್ರಿ. ಶ. ೧೩೫೧ರಲ್ಲಿ ಕಲಬುರಗಿಗೆ ಬಂದರು ಅವರ ಗೋರಿ ಜೋರ್ ಗುಂಬಜ ಹತ್ತಿರ ಇದೆ.

**ಬೀದರನಲ್ಲಿ ಸೂಫಿ ಪಂಥ.**

ಕ್ರಿ. ಶ. ೧೪೨೪ರಲ್ಲಿ ಬಹುಮನಿ ಸಾಮ್ರಾಜ್ಯದಲ್ಲಿ ಸೂಫಿ ಸಂತರ ಸುಮಾರು ೩೭ ದರ್ಗಾಗಳಿದ್ದವು. ಸೈಯದ್ ತಾಜುದ್ದಿನ್ ಇವರು ಬೀದರನಲ್ಲಿ ಸಾಮಾಜಿಕ ಸುಧಾರಣೆ ತರುವಲ್ಲಿ ಬಹಳವಾಗಿ ಶ್ರಮಿಸಿದ್ದರು.

ಸೈಯದ್ ಇಸ್ಮಾಯಿಲ್ ಖಾದ್ರಿಯವರು ಬಗ್ದಾದನವರಾಗಿದ್ದು, ಹಿಂದು ಮುಸ್ಲಿಂರಲ್ಲಿ ಏಕತೆಯನ್ನು ತರಲು ಶ್ರಮಿಸಿದ್ದರು.

**ಕರ್ನಾಟಕದಲ್ಲಿ ಮಹಿಳಾ ಸೂಫಿ ಸಂತರು.**

೧೪ನೇ ಶತಮಾನದ ಕರ್ನಾಟಕದಲ್ಲಿ ಹಜರತ ಮಹಾಸಾಹೇಬ್ ಅಶ್ರಫ್ ದೋ ಜಹಾನ್ ಎಂಬ ಮಹಿಳಾ ಸೂಫಿ ಸಂತಳು ಬೆಳಗಾವಿ ಜಿಲ್ಲೆಯ ಕೂಡುಚಿ ಗ್ರಾಮಕ್ಕೆ ಬಂದು ನೆಲಸಿದರು.

ಇತರ ಮಹಿಳಾ ಸೂಫಿ ಸಂತರೆಂದರೆ, ಹಜರತ್ ಹಮೀನ್ ಬಿಬಿ, ಮಸ್ತಾನಾ ಬಿಬಿ, ಸೈಯದಾನಿ ಬಿಬಿ ಮುಂತಾದವರು.

**ಕಲ್ಯಾಣ ಕರ್ನಾಟಕಕ್ಕೆ ಸೂಫಿ ಪಂಥ ನೀಡಿದ ಕೊಡುಗೆಗಳು ಅಥವಾ ಪರಿಣಾಮಗಳು.**

೧. ಸಮಾಜಕ್ಕೆ ಅವರ ಕೊಡುಗೆ.
೨. ರಾಜರುಗಳಿಗೆ ಆಡಳಿತದಲ್ಲಿ ಸಹಾಯ ಮಾಡಿದ್ದರು.
೩. ನೈತಿಕತೆ ಮತ್ತು ಮೌಲ್ಯಗಳನ್ನು ಜನರಲ್ಲಿ ತಂದರು.
೪. ಮಾತೃಭಾಷೆಯಲ್ಲಿಯೇ ಶಿಕ್ಷಣಕ್ಕೆ ಒತ್ತು ನೀಡಿದ್ದರು.
೫. ಖನ್‌ಕಾಹ ಗಳನ್ನು ಸ್ಥಾಪಿಸಿದ್ದರು.
೬. ದಖನಿ ಉರ್ದು ಸಾಹಿತ್ಯವನ್ನು ಶ್ರೀಮಂತಗೊಳಿಸಿದರು.
೭. ಕಾಯಕಕ್ಕೆ ಹೆಚ್ಚಿನ ಮಹತ್ವ ನೀಡಿದ್ದರು.
೮. ದೇವರು ಸರ್ವಶಕ್ತಿ ಜಗತ್ತಿನ ಈ ಜಗತ್ತಿನ ಸೃಷ್ಟಿಕರ್ತ, ಮುಕ್ತಿಗೆ ಭಕ್ತಿಯೆ ಪ್ರಧಾನ.

**ಸೂಫಿ ಪಂಥದಲ್ಲಿಯ ಪಂಗಡಗಳು.**

೧. ಚಿಸ್ತಿ
೨. ಸುಹಲವರ್ದಿ
೩. ಖಾದ್ರಿ
೪. ನಕ್ಷಾ ಬಂದಿ
೫. ಶತ್ತಾರಿಯಾ

ಅಬ್ದುಲ್ ಫಜಲ್ ಪ್ರಕಾರ ಸೂಫಿಗಳಲ್ಲಿ ಒಟ್ಟು ೧೪ ಪಂಥಗಳಿದ್ದವು ಅವುಗಳಲ್ಲಿ ೫ ಪ್ರಮುಖವು.

**ನನ್ನ ಕೊನೆಯ ಮಾತು.**

ಸೂಫಿಗಳು ಅಸಮಾನತೆ ವಿರುದ್ಧ ಬಹಳ ದೊಡ್ಡ ರೀತಿಯ ಸಂಘರ್ಷ ನಡೆಸಿದವರಾಗಿದ್ದಾರೆ. ಸೂಫಿ ಮತ್ತು ಶರಣರ ಪರಂಪರೆ ಒಂದೇ ರೀತಿಯಲ್ಲಿ ಕಾಣುತ್ತವೆ, ಸೂಫಿಗಳು ದರ್ಗಾಗಳಿಗೆ ಮತ್ತು ಶರಣರ ಗದ್ದುಗೆಗಳಿಗೆ ಮಾತ್ರ ಧರ್ಮ ಜಾತಿ ಎಂಬ ಭೇದಭಾವಗಳಿಂದ ನಿರ್ಲಿಪ್ತನಾಗಿ ಮುಕ್ತವಾಗಿ ಹೋಗಬಹುದಾಗಿದೆ. ಅಷ್ಟರ ಮಟ್ಟಿಗೆ ಸೂಫಿ ಪಂಥವು ಸಮಾಜದಲ್ಲಿ ಮಾನವಿಯತೆಯನ್ನು ಸಾರಿ ಸಾರಿ ಹೇಳಿದೆ.



# ಜಾತ್ರೆಗಳಲ್ಲಿ ಆರ್ಥಿಕ ಪರಂಪರೆ.

**–ಶ್ರೀ ಶಿವಶರಣಪ್ಪಾ,**
ಸಹಾಯಕ ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ,
ಸರಕಾರಿ ಪ್ರಥಮ ದರ್ಜೆ ಕಾಲೇಜು, ಸುಲೇಪೇಟ,
ತಾ: ಚಿಂಚೋಳಿ, ಜಿ: ಕಲಬುರಗಿ.

**ಸಾರಾಂಶ.**

ಭಾರತ ಒಂದು ಬಹು ಜನಾಂಗ ಜಾತಿ ಭಾಷೆ ಧರ್ಮ ಹೊಂದಿರುವ ರಾಷ್ಟ್ರ. ಪ್ರತಿಯೊಂದು ಜಾತಿಯು ಒಂದು ಸಂಸ್ಕೃತಿಯನ್ನು ಹೊಂದಿದೆ. ಸಂಸ್ಕೃತಿಯು ಒಂದು ಜನಾಂಗದ ಜೀವನ ಶೈಲಿಯನ್ನು ತಿಳಿಸಿಕೊಡುತ್ತದೆ. ಅವರ ಜೀವನ ಶೈಲಿಯು ಅವರು ಆರಾಧಿಸುವ ದೇವರ ಮೇಲೆ ಅವಲಂಬನೆ ಆಗಿದೆ. ಹೀಗಾಗಿ ಪ್ರತಿಯೊಂದು ಜಾತಿಯ ಜನರು ತಮ್ಮ ದೇವರ ಜಾತ್ರೆಯನ್ನು ಪ್ರತಿ ವರ್ಷ ಬಹಳಷ್ಟು ವಿಜ್ರಂಬಣೆಯಿಂದ ಆಚರಣೆ ಮಾಡುತ್ತಾರೆ. ಹಾಗೆ ಜಾತ್ರೆಗಳನ್ನು ಮಾಡುವುದಕ್ಕೆ ಅಂದರೆ ಅವರ ಹರಕೆಗಳನ್ನು ಅಥವಾ ಬಯಕೆಗಳನ್ನು ಇಡೇರಿಸಿಕೊಳ್ಳುವುದಕ್ಕೆ ಹಲವಾರು ಸರಕು ಮತ್ತು ಸೇವೆಗಳ ಅವಶ್ಯಕತೆ ಇರುತ್ತದೆ. ಅವುಗಳನ್ನು ತಯಾರಿಸಲು ಆರ್ಥಿಕತೆ ಉತ್ಪಾದನೆ ಮಾಡಬೇಕಾಗುತ್ತದೆ. ಹೀಗೆ ಜಾತ್ರೆಗಳಿಂದ ಅನೇಕ ಉದ್ಯೋಗಗಳು ನಿರ್ಮಾಣವಾಗಿ ಅನೇಕ ಜನರಿಗೆ ಉದ್ಯೋಗಗಳು ಒದಗಿಸಿಕೊಡುತ್ತವೆ, ಆದ್ದರಿಂದ ಜಾತ್ರೆಗಳಿಗೂ ಮತ್ತು ಆರ್ಥಿಕತೆಗೂ ಅವಿನಾಭಾವ ಸಂಭಂಧವಿದೆ ಎಂಬುದು ಸಾಮಾನ್ಯಗೋಚರವಾದ ಸಂಗತಿಯಾಗಿದೆ.

**ಮೂಲಾಂಶಗಳು**: ಭಾರತ, ಜಾತ್ರೆ, ಆರ್ಥಿಕತೆ, ಉದ್ಯೋಗ, ಉತ್ಪಾದನೆ , ಪರಂಪರೆ

**ಪೀಠಿಕೆ.**

ಒಂದು ದೇಶದ ಆರ್ಥಿಕತೆಗೂ ಮತ್ತು ಆ ದೇಶದಲ್ಲಿ ಆಚರಣೆಯಲ್ಲಿರುವ ಅಮೂರ್ತ ಪರಂಪರೆ ಅಂದರೆ ಜಾತ್ರೆಗಳಿಗೂ ಸಂಸ್ಕೃತಿಗಳಿಗೂ ಸಂಭಂದವಿದೆ. ಆರ್ಥಿಕತೆ ಎಂದರೆ ಮಾನವನ ದೈನಂದಿನ ವ್ಯವಹಾರಗಳನ್ನು ಕುರಿತು ಅಧ್ಯಯನ ಮಾಡುವುದಾಗಿದೆ. ಮಾನವ ಏಕೆ ದೈನಂದಿನ ವ್ಯವಹಾರಗಳು ಮಾಡುತ್ತಾನೆ ಎಂದರೆ ಅವನ ಬಯಕೆಗಳನ್ನು ಈಡೇರಿಸಿಕೊಳ್ಳಬೇಕೆಂಬ ಮಹದಾಸೆಯಿಂದಾಗಿ. ಅವನ ಬಯಕೆಗಳು ಈಡೇರಬೇಕಾದರೆ ಸರಕುಗಳು ಬೇಕಾಗುತ್ತದೆ ಜೊತೆಗೆ ಸರಕುಗಳು ತಯಾರಿಸಬೇಕಾಗುತ್ತದೆ. ಅದರ ಮುಂದುವರೆದ ಭಾಗವಾಗಿ ಉದ್ಯೋಗಗಳ ನಿರ್ಮಾಣವಾಗುತ್ತವೆ. ಇಲ್ಲಿ ಗಮನಿಸಬೇಕಾದ ಪ್ರಮುಖವಾದ ಅಂಶವೆಂದರೆ, ಉತ್ಪಾದನೆ ಆದ ಸರಕುಗಳು ಉಚಿತವಾಗಿ ಲಭ್ಯವಾಗುವುದಿಲ್ಲ ಅವುಗಳನ್ನು ಹಣಕೊಟ್ಟು ಕೊಂಡುಕೊಳ್ಳಬೇಕಾಗುತ್ತದೆ. ಆಗ ಹಣ ಮತ್ತು ಉದ್ಯೋಗವೆಂಬುದು ಒಂದೇ ಮುಖದ ಎರಡು ನಾಣ್ಯದಂತಿದ್ದು ಜನರಿಗೆ ಲಬ್ಯವಾಗುತ್ತದೆ. ಉದ್ಯೋಗದ ಮೂಲಗಳು ಬಹಳಷ್ಟಿದ್ದು ಈ ಜಾತ್ರೆಗಳಿಂದಲೂ ಅನೇಕ ಉದ್ಯೋಗಗಳು ನಿರ್ಮಾಣವಾಗುತ್ತವೆ ಎಂಬುದು ತಿಳಿದುಬರುತ್ತದೆ.

**ಉದ್ದೇಶಗಳು.**

೧. ಜಾತ್ರೆಗಳಿಗೂ ಒಂದು ದೇಶದ ಆರ್ಥಿಕತೆಗೂ ಇರುವ ಸಂಬಂಧ ತಿಳಿದುಕೊಳ್ಳುವುದು.
೨. ಜಾತ್ರೆ ಮತ್ತು ಉದ್ಯೋಗದ ಮೂಲಗಳು ತಿಳಿಯುವುದು.
೩. ಜಾತ್ರೆಗಳಿಂದಾಗುವ ಆರ್ಥಿಕ ಲಾಭಗಳು ತಿಳಿಯುವುದು.

**ಜಾತ್ರೆಯ ಅರ್ಥ ಮತ್ತು ಸ್ವರೂಪ.**

ಜಾತ್ರೆ ಎನ್ನುವುದು 'ಯಾತ್ರಾ' ಎಂಬ ಸಂಸ್ಕೃತ ಪದದಿಂದ ಮೂಡಿಬಂದಿದೆ. ಪ್ರಸಿದ್ಧ ಕ್ಷೇತ್ರ ದರ್ಶನ ಮಾಡಲು ಜನ ಯಾತ್ರೆಗೆ ಹೊಗುತ್ತಾರೆ. ಸಾಮಾನ್ಯವಾಗಿ ವರ್ಷದ ಯಾವುದೇ ಒಂದು ನಿಯಮಿತ ಸಂದರ್ಭದಲ್ಲಿ ಪುಣ್ಯಕ್ಷೇತ್ರಳಲ್ಲಿ ಜನರು ಜಾತ್ರೆಗೆ ಸೇರುತ್ತಾರೆ. ಕನ್ನಡ ನಿಘಂಟುವಿನಲ್ಲಿ ಜಾತ್ರೆ ಕುರಿತು ವಿವರಣೆ ಹೀಗಿದೆ : ೧. ಪುಣ್ಯಕ್ಷೇತ್ರ ದರ್ಶನವೇ ಮೊದಲಾದ ಧಾರ್ಮಿಕ ಉದ್ದೇಶಗಳಿಂದ ಮಾಡುವ ಪ್ರಯಾಣ; ಯಾತ್ರೆ. ೨. ಯಾವುದಾದರೊಂದು ದೇವತೆಯ ರಥೋತ್ಸವವೇ ಮೊದಲಾದ ವಿಶೇಷ ಕಾರ್ಯಕ್ರಮ. ೩. ದೇವರ ರಥೋತ್ಸವ ಮುಂತಾದ ಸಂದರ್ಭಗಳಲ್ಲಿ ಸೇರುವ ಜನರ ಗುಂಪು; ಸಮೂಹ; ಪರಿಸೆ.

ಜಾತ್ರೆ ಕುರಿತು ಕನ್ನಡ ನಿಘಂಟುವಿನ ವಿವರಣೆಯಿಂದ ನಮಗೆ ಎರಡು ಸಂಗತಿಗಳು ವೇದ್ಯವಾಗುತ್ತವೆ. ೧ ಜಾತ್ರೆಗಳು ಸಾಮಾನ್ಯವಾಗಿ ಪುಣ್ಯಕ್ಷೇತ್ರಗಳಲ್ಲಿ ಜರುಗುವುದು. ೨. ಅವುಗಳ ಸ್ಮಾರಕವಾಗಿ ರಥೋತ್ಸವ ನಡೆಯುವುದು, ಜಾತ್ರೆಗಳ ಉದ್ದೇಶ, ಪ್ರಕಾರ, ಹಾಗೂ ಅವುಗಳಿಂದ ಆವಿರ್ಭವಿಸುವ ಧಾರ್ಮಿಕ ಪದ್ಧತಿಗಳಿಗೆ ಪೂರಕವಾಗಿ ಜಾತ್ರಗಳು ಹುಟ್ಟುಕೊಂಡಿವೆ.

**ಜಾತ್ರೆ ಮತ್ತು ಆರ್ಥಿಕತೆ.**

ಜಾತ್ರೆಯು ಹೆಚ್ಚು ಪ್ರಸ್ತುತವಾಗುವುದು ಅದು ಸಾಮಾನ್ಯ ಜನಜೀವನಕ್ಕೆ ಹತ್ತಿರವಾದಾಗ ಕೃಷಿ ಮೂಲದ ಉದ್ಯೋಗದಲ್ಲಿ ನಿರತರಾಗಿ ಸುಗ್ಗಿಯಲ್ಲಿ ಗಳಿಸಿದ ಹಣದಲ್ಲಿ ಆ ವರ್ಷಕ್ಕೆ ಅಗತ್ಯವಾದ ವಸ್ತುಗಳನ್ನು ಪಡೆದುಕೊಳ್ಳಲು ಸದಾವಕಾಶ ಮಾಡಿಕೊಡುವುದು ಜಾತ್ರೆ. ಹೀಗಾಗಿ ಜಾತ್ರೆ ಒಂದು ವ್ಯವಸ್ಥಿತ ಮಾರುಕಟ್ಟೆಯಯ ಕೂಡಾ ಹೌದು, ಆರ್ಥಿಕತೆ ವೃದ್ಧಿಸುತ್ತದೆ. ಜಾತ್ರೆಯಲ್ಲಿ ಮಂಡಕ್ಕಿ, ಪೂರಿ, ಭಜಿ, ಬೊಂಡಾದಂತಹ ಸಾಮಾನ್ಯರ ಬಾಯಿ ಚಪಲ ತೀರಿಸುವ ತಿನಿಸುಗಳಿಂದ ಹಿಡಿದು ವಿವಿಧ ಬಗೆಯ ಖಾದ್ಯಗಳು ಹಾಗೂ ಸಿಹಿ–ತಿನಿಸುಗಳು ಅಂಗಡಿಗಳ ಮಳಿಗೆಗಳ ಸಾಲು ಸಾಲಾಗಿ ಒಂದಡೆಗಿದ್ದರೆ, ಹೆಂಗೆಳೆಯರ ಪ್ರಧಾನ ಆಕರ್ಷಣೆಯಾದ ಬಳೆ ಅಂಗಡಿ ಸಾಲು, ಮತ್ತೊಂದು ಕಡೆ, ಕೇವಲ ತರಕಾರಿ, ದವಸ ಧಾನ್ಯಗಳಿಂದಷ್ಟೇ ತುಂಬಿ ತುಳುಕುವ ಸಂತೆಗಿಂತ ಭಿನ್ನವಾದ ಈ ಜಾತೆಯೂ ಮಕ್ಕಳನ್ನು ಆಕರ್ಷಿಸಲೆಂದೇ ವಿವಿಧ ರೀತಿಯ ಆಟಿಕೆಗಳನ್ನು ಹೊಂದಿದ ಅಂಗಡಿಗಳು ತಲೆಯೆತ್ತಿರುತ್ತವೆ. ಒಟ್ಟಾರೆ ಮನೋರಂಜನೆಯ ಹಿಂದೆ ವ್ಯಾಪಾರದ ನೆಲೆಯನ್ನು ಕೊಡಾ ಗುರ್ತಿಸಿಕೊಂಡು ವ್ಯಾಪಾರಸ್ಥರು ಇಲ್ಲಿ ಮಳಿಗೆಗಳನ್ನು ಮುಂದಾಗಿ ಕಾದಿರಿಸಿಕೊಳ್ಳುತ್ತಾರೆ. ಹೀಗೆ ಜಾತ್ರೆಯು ಮಾರುಕಟ್ಟೆಯಾಗಿ ಪರಿವರ್ತನೆಯಾಗಿ ಆದಾಯವನ್ನು ತರುವ ಮೂಲಗಳಾಗಿವೆ.

**ಜಾತ್ರೆಗಳಿಂದಾಗುವ ಉದ್ಯೋಗದ ನಿರ್ಮಾಣಗಳು.**

ಜಾತ್ರೆಗಳು ಕೂಡಾ ಒಂದು ದೇಶದ ಉದ್ಯೋಗದ ಮೂಲಗಳಾಗಿವೆ. ಇವು ಅನೇಕ ಜನರಿಗೆ ಉದ್ಯೋಗದ ಮೂಲಕ ಆದಾಯವನ್ನು ತಂದುಕೊಡುತ್ತಿವೆ. ಆದ್ದರಿಂದ ಅನೇಕ ಜನರ ಜೀವನ ಮಟ್ಟ ಜಾತ್ರೆಗಳಿಂದಾಗಿ ಸುಧಾರಣೆ ಆಗುತ್ತಿದೆ. ಜಾತ್ರೆಗಳಿಂದ ನಿರ್ಮಾಣವಾಗುತ್ತಿರುವ ಉದ್ಯೋಗಗಳು ಈ ಕೆಳಗಿನಂತಿವೆ.

**೧. ಮೂರ್ತಿ ತಯಾರಿಕಾ ಉದ್ದಿಮೆಗಳಲ್ಲಿ ಉದ್ಯೋಗ.**

ಜಾತ್ರೆಗಳಲ್ಲಿ ಜನರು ತಮ್ಮ ಆರಾಧ್ಯ ದೇವರ ವಿಗ್ರಹಗಳನ್ನು ಅಥವಾ ಮೂರ್ತಿಗಳು ಹೆಚ್ಚಿನ ರೀತಿಯಲ್ಲಿ ಕೊಂಡುಕೊಳ್ಳುತ್ತಾರೆ. ಉದಾಹರಣೆಗೆ ,ಗಣೇಶ, ರಾಧಾ–ಕೃಷ್ಣ, ಬಸವಣ್ಣ, ಅಂಬಾಭವಾನಿ, ಭಾಗ್ಯವಂತಿ ಮುಂತಾದವರು. ಹೀಗಾಗಿ ಅವುಗಳನ್ನು ಹೆಚ್ಚು ಹೆಚ್ಚು ಉತ್ಪಾದಿಸಲು ಅನೇಕ ಜನ ಕಾರ್ಮಿಕರ ಅವಶ್ಯಕತೆಉಂಟಾಗಿ ಮೂರ್ತಿ ತಯಾರಿಕೆಯಲ್ಲಿ ಅನೇಕ ಉದ್ಯೋಗಗಳು ನಿರ್ಮಾಣವಾಗುತ್ತವೆ.

**೨. ಆಟಿಕೆಗಳ ತಯಾರಿಕಾ ಉದ್ದಿಮೆಗಳಲ್ಲಿ ಉದೋಗ.**

ಜಾತ್ರೆಗಳು ಮಕ್ಕಳ ಸಂತೋಷವನ್ನು ಹೆಚ್ಚಿಸುವ ತಾಣಗಳಾಗಿವೆ ಎಂದರೆ ತಪ್ಪಾಗಲಾರದು. ಮಕ್ಕಳಿಗೆ ಬೇಕಾದ ಆಟಿಕೆ ವಸ್ತುಗಳು ಜಾತ್ರೆಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಾರಟವಾಗುತ್ತವೆ. ಉದಾಹರಣೆಗೆ ಗೊಂಬೆ, ಕಾರು, ಮುಖವಾಟಗಳು, ಕೊಳಲು ಮುಂತಾದವು. ಇವುಗಳು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದಿಸಲು ಹೆಚ್ಚಿನ ಕಾರ್ಮಿಕರು ಅವಶ್ಯಕತೆ ಇದೆ. ಆದ್ದರಿಂದ ಈ ಉದ್ದಿಮೆಗಳಲ್ಲಿ ಬಹಳಷ್ಟು ಕೆಲಸಗಾರರಿಗೆ ಉದೋಗ ಲಭ್ಯವಾಗುತ್ತವೆ.

**೩. ತಿನಿಸುಗಳ ತಯಾರಿಕೆ ಉದ್ದಿಮೆಗಳಲ್ಲಿ ಉದ್ಯೋಗ.**

ಜಾತ್ರೆಗಳಲ್ಲಿ ಹೆಚ್ಚಿನ ಜನರು ಸೇರುತ್ತಾರೆ. ಅಷ್ಟೆ ಅಲ್ಲದೆ, ಅವರು ತಮಗೆ ಇಷ್ಟವಾದ ತಿಂಡಿ–ತಿನಿಸುಗಳು ಸೇವಿಸಲು ಬಯಸುತ್ತಾರೆ. ಆದ್ದರಿಂದ ಕೆಲವು ಉತ್ಪಾದಕರು ಈ ಜಾತ್ರೆಗಳಲ್ಲಿ ಹೆಚ್ಚಿನ ಲಾಭ ಮಾಡಿಕೊಳ್ಳಲು ಅಧಿಕವಾಗಿ ಸಿಹಿ ತಿನಿಸುಗಳು ಉತ್ಪಾದಿಸಿ ಮಾರಾಟ ಮಾಡುವ ಉದ್ದೇಶದಿಂದ ಹೆಚ್ಚಿನ ಜನರಿಗೆ ಉದ್ಯೋಗಗಳನ್ನು ನಿಡುತ್ತಾರೆ.

**೪. ಹೂವಿನ ಮಾರಾಟಗಾರರಿಗೆ ಉದ್ಯೋಗ.**

ಜಾತ್ರೆಗಳಲ್ಲಿ ಹೂವೂ ಬಹಳಷ್ಟು ಪ್ರಮಾಣದಲ್ಲಿ ಮಾರಾಟವಾಗುತ್ತದೆ. ಆ ವ್ಯಾಪಾರ ಮಾಡುವ ಅನೇಕ ಜನರಿಗೆ ಉದ್ಯೋಗಗಳು ಲಭ್ಯವಾಗುತ್ತವೆ. ಹೂವನ್ನು ಉತ್ಪಾದಿಸುವ ರೈತರಿಗೆ, ಹೂವನ್ನು ತೆಗೆದುಕೊಂಡು ಹಾರಗಳನ್ನು ಮಾಡಿ ಮಾರಾಟ ಮಾಡುವವರಿಗೆ, ಉದ್ಯೋಗಗಳು ಲಭ್ಯವಾಗುತ್ತವೆ.

**೫. ತೆಂಗು ಮಾರಾಟಗಾರರಿಗೆ ಉದ್ಯೋಗ.**

ಕೆಲವೊಂದು ಜಾತ್ರೆಗಳಲ್ಲಿ ಬಹಳಷ್ಟು ದೊಡ್ಡ ಪ್ರಮಾಣದಲ್ಲಿ ಜನರು ಸೇರಿರುತ್ತಾರೆ. ಜಾತ್ರೆಗೆ ಬರುವ ಪ್ರತಿಯೊಬ್ಬರು ಕೂಡಾ ದೇವರ ಮೇಲಿನ ಭಕ್ತಿಯಿಂದಾಗಿ ತೆಂಗು ಅರ್ಪಿಸುತ್ತಾರೆ. ಆದ್ದರಿಂದ ಹೆಚ್ಚು ಹೆಚ್ಚು ತೆಂಗುಗಳು ಮಾರಟವಾಗುವುದರಿಂದ ಹೆಚ್ಚಿನ ಜನರು ಇದರಲ್ಲಿ ಕೆಲಸ ದೊರೆಯುವಂತಾಗುತ್ತದೆ.

**೬. ಉದಿನ ಕಡ್ಡಿ ತಯಾರಿಕೆಯಲ್ಲಿ ಉದ್ಯೋಗ.**

ಇದು ಒಂದು ಗೃಹ ಕೈಗಾರಿಕೆ ಎಂದೇ ಭಾರತದಲ್ಲಿ ಪರಿಗಣಿಸಲಾಗಿದೆ. ದೇವರ ಪೂಜೆಗೆ ಉದಿನ ಕಡ್ಡಿ ಅತ್ಯವಾಶಕ ವಸ್ತು. ಆದ್ದರಿಂದ ಅದಕ್ಕೆ ಹೆಚ್ಚಿನ ಬೇಡಿಕೆ ಇದೆ. ಅದನ್ನು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದಿಸಲು ಅನೇಕ ಜನರಿಗೆ ಅದು ಉದ್ಯೋಗಗಳನ್ನು ನೀಡುತ್ತಿದೆ.

**೭. ವಿಭೂತಿ ತಯಾರಿಕೆಯಲ್ಲಿ ಉದ್ಯೋಗ.**

ವಿಭೂತಿಗೆ ಭಾರತದಲ್ಲಿ ಒಂದು ಉತ್ತಮ ಸ್ಥಾನವಿದೆ. ಆದ್ದರಿಂದ ವಿಭೂತಿ ತಯಾರಿಕೆಯ ಉದ್ಯೋಗವು ಬಹಳಷ್ಟು ಪುರಾತನವಾದದ್ದು. ಜಾತ್ರೆಗೆ ಬಂದಿರುವ ಬಹಳಷ್ಟು ಜನರು ವಿಭೂತಿಯನ್ನು ಕೊಂಡುಕೊಳ್ಳುತ್ತಾರೆ ಎಂಬ ನಿರೀಕ್ಷೆಯಿದೆ. ಆದ್ದರಿಂದ ಅದನ್ನು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದಿಸಲು ಹೆಚ್ಚಿನ ಕಾರ್ಮಿಕರು ಬೇಕು.

**೮. ಮನೋರಂಜನಾಕಾರರಿಗೆ ಉದ್ಯೋಗ.**

ಜಾತ್ರೆಗಳು ಮನೋರಂಜನೆಯ ತಾಣಗಳಾಗಿವೆ. ಜನರು ನಾಟಕಗಳು, ಜಾದುಗಾರಿಕೆ, ವಾಹನ ಸವಾರಿ, ಸಂಗೀತ, ತೊಟ್ಟಿಲಲ್ಲಿ ಕೂಡುವುದು ಮುಂತಾದವುಗಳನ್ನು ಬಯಸುತ್ತಾರೆ. ಇಂತಹ ಹವ್ಯಾಸ ಹೊಂದಿದ ಜನರಿಂದ ಅನೇಕ ಜನರಿಗೆ ಜಾತ್ರೆಗಳು ಉದ್ಯೋಗದ ಅವಕಾಶಗಳು ಎದುರುಗೊಳ್ಳುತ್ತವೆ.

**೯. ಸಾರಿಗೆ ವಲಯದಲ್ಲಿ ಉದ್ಯೋಗ.**

ಜಾತ್ರೆಗಳು ದೇಶದ ವಿವಿಧ ಸ್ಥಳಗಳಲ್ಲಿ ಬೇರೆ ಬೇರೆ ಕಾಲದಲ್ಲಿ ನಡೆಯುತ್ತವೆ. ಆದ್ದರಿಂದ ಜಾತ್ರೆಯಲ್ಲಿ ಮಾರಾಟ ಮಾಡಲು ತಯಾರಿಸಿದ ವಸ್ತುಗಳು, ತಿನಿಸುಗಳು, ಆಟಿಕೆ ವಸ್ತುಗಳು ಹಾಗೂ ಜನರನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಬೇಕಾಗುತ್ತದೆ. ಆದ್ದರಿಂದ ಸಾರಿಗೆ ವಲಯದಲ್ಲಿ ಜಾತ್ರೆಗಳಿಂದಾಗಿ ಹಲವಾರು ಉದ್ಯೋಗಗಳು ನಿರ್ಮಿಸಲ್ಪಡುತ್ತವೆ.

**೧೦. ಇತರೆ ಉದ್ಯೋಗಗಳ ನಿರ್ಮಾಣ.**

ಅಲಂಕಾರಿಕ ವಸ್ತುಗಳ ತಯಾರಿಕೆಯಲ್ಲಿ, ಕುಂ ಕುಂ ತಯಾರಿಕೆಯಲ್ಲಿ, ಬಳೆಗಳ ಮಾರಾಟಗಾರರಿಗೆ, ಬಲೂನ ಮಾರಾಟಗಾರರಿಗೆ, ಮನೆ ವಸ್ತುಗಳ ಉತ್ಪಾದಕರಿಗೆ ಮುಂತಾದವರಿಗೆ ಜಾತ್ರೆಗಳಿಂದಾಗಿ ಉದ್ಯೋಗಗಳು ನಿರ್ಮಾಣವಾಗುತ್ತವೆ.

**ಉಪಸಂಹಾರ.**

ಒಂದು ದೇಶದ ಆರ್ಥಿಕ ಪ್ರಗತಿ ಸಾಧನೆಗೆ ಆ ರಾಷ್ಟ್ರದಲ್ಲಿ ಲಭ್ಯವಾಗುವ ಉದ್ಯೋಗಗಳು ಕಾರಣವಾಗುತ್ತವೆ. ಜಾತ್ರೆಗಳಿಂದಾಗಿ ಅನೇಕ ಕ್ಷೇತ್ರಗಳಲ್ಲಿ ಉದ್ಯೋಗಗಳು ನಿರ್ಮಾಣವಾಗುತ್ತವೆ ಎಂಬುದು ಈ ಮೇಲಿನ ವಿಷಯದಿಂದಾಗಿ ತಿಳಿದುಬಂದಿದೆ. ಭಾರತದ ಪ್ರತಿಯೊಂದು ಪ್ರದೇಶದಲ್ಲಿ ಬಹಳಷ್ಟು ದೊಡ್ಡ ಪ್ರಮಾಣದಲ್ಲಿ ಜಾತ್ರೆಗಳು ನಡೆಯುತ್ತವೆ. ಜಾತ್ರೆಗೆ ಬಂದ ಜನರಿಂದ ಅನೇಕ ಆರ್ಥಿಕ ಚಟುವಟಿಕೆಗಳು ನಡೆದು ಉದ್ಯೋಗ ಉತ್ಪಾದನೆ ಆದಾಯ ಸೃಷ್ಟಿ ಆಗಿ ಆ ಪ್ರದೇಶದ ಅಭಿವೃದ್ಧಿ ಆಗುತ್ತದೆ. ಆದ್ದರಿಂದ ಜಾತ್ರೆಗಳು ಮತ್ತು ಆರ್ಥಿಕತೆ ಒಂದೆ ನಾಣ್ಯದ ಎರೆಡು ಮುಖಗಳು ಎಂದು ಹೇಳಿದರು ತಪ್ಪಾಗಲಾರದು.

**ಆಧಾರ ಗ್ರಂಥಗಳು.**


೧. ಕಲಬುರಗಿ ಜಿಲ್ಲೆಯ ಜಾತ್ರೆಗಳು; ಡಾ. ಚಿ.ಸಿ. ನಿಂಗಣ್ಣಾ–೨೦೧೧.
೨. ಡಾ. ಜಗನ್ನಾಥ ಹೆಬ್ಬಾಳೆ; ಹೈದ್ರಾಬಾದ ಕರ್ನಾಟಕ ಜಾತ್ರೆಗಳು.
೩. ಡಾ. ಸಿ.ಎಸ್ ಶಿವುಕುಮಾರಸ್ವಾಮಿ; ಕರ್ನಾಟಕ ಜಾತ್ರೆಗಳು.
೪. ಅಂತರ್ಜಾಲ.
೫. ಎಚ್ಚಾರ್ಕೆ, ಭಾರತದ ಆರ್ಥಿಕತೆ, ೨೦೦೮.




# ಧರಿನಾಡು ಬೀದರ ಜಿಲ್ಲೆ.

**–ಶ್ರೀಮತಿ ಭಾಗ್ಯವತಿ,**
ಸಹಾಯಕ ಪ್ರಾಧ್ಯಾಪಕರು, ಇತಿಹಾಸ ಅಧ್ಯಯನ ವಿಭಾಗ,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಟಗುಪ್ಪ.

ಕರ್ನಾಟಕ ಚರಿತ್ರೆಯಲ್ಲಿ ಕಲ್ಯಾಣ ಕರ್ನಾಟಕದ ಬೀದರ ಜಿಲ್ಲೆಗೆ ತನ್ನದೇ ಆದ ವಿಶಿಷ್ಟ ಸ್ಥಾನಮಾನವಿದೆ. ಭೌಗೋಳಿಕವಾಗಿ, ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ಜಿಲ್ಲೆಯು ಎತ್ತರದ ಸ್ಥಾನದಲ್ಲಿ ನಿಂತಿದೆ. ಹಾಗಾಗಿ ಈ ಭಾಗವನ್ನು 'ಧರಿನಾಡು' ಎಂತಲೂ ಕರೆಯುವರು. ಧರಿ ಕೆಳಗಿನವರು ಧರಿಯ ಮೇಲಿನವರಿಗೆಲ್ಲಾ "ಧ್ವೂರಿ" ಯೆಂದೇ ಕರೆಯುವುದು ಇವತ್ತಿಗೂ ರೂಢಿಯಲ್ಲಿದೆ. ಧರಿಯ ಮೇಲಿನವರು ಕಬ್ಬು ಬೆಳೆಯುವವರು, ಶ್ರೀಮಂತರು ಎಂಬ ಭಾವನೆ ಧರಿ ಕೆಳಗಿನ ಜನರಲ್ಲಿತ್ತು. ಬೀದರ ಜಿಲ್ಲೆಯ ತುಂಬಾ ಅನೇಕ ಧರಿಗಳಿವೆ. ಅವುಗಳಲ್ಲಿ ಕೆಲ ಪ್ರಮುಖವಾದವುಗಳನ್ನು ಮಾತ್ರ ಇಲ್ಲಿ ಆಯ್ದುಕೊಂಡಿದ್ದೇನೆ. ಅವುಗಳೆಂದರೆ ಲಾಲ್ ಧರಿ, ಬಸವಣ್ಣನ ಧರಿ, ಗೋವಿಂದಪ್ಪನ ಧರಿ, ಮಾದಿಗ್ಯಾನ ಧರಿ, ಮುಪನ್ ಧರಿ, ಎಂಟೆತ್ತಿನ ಕೊಟ್ಟಿಗೆ, ದೊಡ್ಡ ಮೂಲಿ, ಶಿಡ್ಲಗುಂಟಾ, ಕುಂಬಾರ ಕೊಳ್ಳ, ಧಬ್ ಧಬ್ ಮೂಲಿ, ಘಟಲಕ್ಷ್ಮಿ, ನರಸಂಡಿ ಇತ್ಯಾದಿ.

**ಲಾಲ್ ಧರಿ.**

ಜಾಜಿ ಮಣ್ಣು ತರಲು ನೂರಾರು ಹಳ್ಳಿ ಜನರು ಇಲ್ಲಿಗೆ ಆಗಮಿಸುತ್ತಿದ್ದರಂತೆ. ಹಿಂದಿನ ಕಾಲದಲ್ಲಿ ಮನೆಗೆ ಬಣ್ಣ ಬಳಿಯಲು ಬಣ್ಣದ ಶೋಧ ಇಲ್ಲದಾಗ ಕೆಂಪು ಬಣ್ಣ ಮನೆಗೆ ಬಳಿಯಲು ಇಲ್ಲಿನ ಮಣ್ಣನ್ನು ಉಪಯೋಗಿಸುತ್ತಿದ್ದರಂತೆ. ಕಡು ಕೆಂಪು ಬಣ್ಣದ ಮಣ್ಣು ಇವತ್ತಿಗೂ ಇಲ್ಲಿ ದೊರೆಯುತ್ತದೆ.

**ಬಸವಣ್ಣನ ಧರಿ.**

ಸುತ್ತಲಿನ ಹೊಲದವರೆಲ್ಲಾ ಬೇಸಿಗೆಯಲ್ಲಿ ಕುಡಿಯಲು ನೀರನ್ನು ಇಲ್ಲಿಂದಲೇ ಹೊತ್ತೊಯ್ಯುತ್ತಾರೆ. ಏಂಥಾ ಇಲ್ಲಿನ ನೀರು ಬತ್ತಿ ಹೋಗುವುದಿಲ್ಲ. ಈ ನೀರಿನ ಸದ್ಬಳಕೆಗಾಗಿ ಇಲ್ಲೊಂದು ಹೊಂಡ ನಿರ್ಮಿಸಲಾಗಿದೆ. ಇದಕ್ಕೆ ಬಸವಣ್ಣನ ಗುಂಡವೆಂತಲೂ ಕರೆಯುತ್ತಾರೆ.

**ಗೋವಿಂದಪ್ಪನ ಧರಿ.**

ಇದಕ್ಕೆ ಖತಮನ ಗದ್ದಿ ಎಂತಲೂ ಕರೆಯುತ್ತಾರೆ. ಹಿಂದೆ ತಮಗಾಗದವರಿಗೆ ಕೊಲೆ ಮಾಡಿ ಈ ಧರಿಯಲ್ಲಿ ಒಗೆದರೆ ಪತ್ತೆ ಯಾರಿಗೂ ಆಗುತ್ತಿರಲಿಲ್ಲವಂತೆ. ಅಷ್ಟೊಂದು ನಿಗೂಢವಾದ ಹಳ್ಳ ಕೊಳ್ಳಗಳು ಇಲ್ಲಿವೆ.

**ಮಾದಿಗ್ಯಾನ ಧರಿ.**

ಇದಕ್ಕೆ 'ಜಾಣಖೋರಿ' ಎಂಬ ಇನ್ನೊಂದು ಹೆಸರಿದೆ. ಜಾಣ ಪ್ರಾಣಿ ಪಕ್ಷಿಗಳು ಇಲ್ಲೆ ತಮ್ಮ ವಾಸಸ್ಥಾನವನ್ನು ಕಂಡು ಕೊಂಡಿದ್ದವು. ಏಕೆಂದರೆ ಇಲ್ಲಿ ಸಾಕಷ್ಟು ಗುಹೆಗಳಿದ್ದು, ಒಂದೊಂದು ಗುಹೆಗಳಲ್ಲಿ ಒಂದೊಂದು ಜಾತಿಯ ಪ್ರಾಣಿ ಪಕ್ಷಿಗಳು ಇಲ್ಲಿ ಆಶ್ರಯ ಪಡೆದಿವೆ. ಅವಕ್ಕಾಗಿ ಕಾದು ಕುಳಿತರೆ ಈಗಲೂ ಕಾಣಸಿಗುತ್ತವೆ.

**ಮುಪನ ಧರಿ.**

ಇಲ್ಲೊಂದು ಬೃಹತ್ತಾದ ಜಲಪಾತವಿದೆ. ಮಳೆಗಾಲದಲ್ಲಿ ಈ ಜಲಪಾತದ ಶಬ್ದ ಭೋರ್ಗರೆಯುತ್ತದೆ. ಕೆಳಗಡೆ ಬಾವಿಯಾಕಾರದ ಹೊಂಡವಿದೆ. ಈ ಹೊಂಡದಲ್ಲಿ ಸುತ್ತಲೂ ನೀರಿನ ಝರಿಗಳಿವೆ. ಬೇಸಿಗೆಯಲ್ಲೂ ಈ ಹೊಂಡದಿಂದ ರಭಸವಾಗಿ ಹೊರಹೊಮ್ಮುತ್ತಿರುತ್ತದೆ.

**ಎಂಟೆತ್ತಿನ ಕೊಟ್ಟಿಗೆ.**

ಧರಿಯ ಪಾಳೆಯದಲ್ಲಿ ನಿಸರ್ಗದತ್ತವಾಗಿಯೇ ಕೊರೆಯಲ್ಪಟ್ಟ ಮನೆಯಿದೆ. ಸುಮಾರು ಎಂಟು ಹತ್ತು ಎತ್ತುಗಳಿಗೆ ಆಶ್ರಯವಾಗುವಷ್ಟು ಕೊಟ್ಟಿಗೆ ನಿರ್ಮಾಣವಾದ್ದರಿಂದ ಇದಕ್ಕೆ ಎಂಟೆತ್ತಿನ ಕೊಟ್ಟಿಗೆ ಎಂಟೆತ್ತಿನ ಕೊಟ್ಟಿಗೆ ಎಂಬ ಹೆಸರಿದೆ. ದನಗಾಹಿ ಹುಡುಗರು ಮಳೆಗಾಲದಲ್ಲಿ ಇದರಡಿ ದಿನವಿಡೀ ಆಶ್ರಯಪಡೆಯುತ್ತಿರುತ್ತಾರೆ.

**ದೊಡ್ಡ ಮೂಲಿ.**

ಎಲ್ಲಾ ಧರಿಯ ತಿರುವುಗಳಿಗಿಂತಲೂ ಈ ಧರಿಯ ತಿರುವು ದೊಡ್ಡದಿದೆ. ಹಿಂದೊಮ್ಮೆ ಊರ ಹಿರಿಯನೊಬ್ಬ ಆಯ ತಪ್ಪಿ ಈ ಧರಿಯಲ್ಲಿ ಬಿದ್ದು ಸತ್ತಿದ್ದರಿಂದ ಇದಕ್ಕೆ ದೊಡ್ಡ ಮೂಲಿ ಎಂಬ ಹೆಸರು ಬಂತಂತೆ.

**ಶಿಡ್ಲ್ ಗುಂಡಾ.**

ಸಿಡಿಲಿಗೆ ಬೀದರಿನ ಆಡು ಭಾಷೆಯಲ್ಲಿ ಶಿಡ್ಲು ಎಂದು ಕರೆಯುತ್ತಾರೆ. ತೀರಾ ಪ್ರಾಚೀನ ಕಾಲದಲ್ಲಿ ಬೃಹತ್ತಾದ ಸಿಡಿಲು ಬಡಿದಿದ್ದರಿಂದ ಇಲ್ಲೊಂದು ಬಾವಿಯಾಕಾರದ ಆಳದ ಗುಂಡ ನಿರ್ಮಾಣವಾಗಿದೆ. ಇದನ್ನು ನೋಡಿಯೇ ಜನ ಆಗ ಬಾವಿ ಕೊರೆದು ನೀರು ತೆಗೆಯಲು ಆರಂಭಿಸಿದರಂತೆ.

ಕುಂಬಾರ ಕೊಳ್ಳ – ಮಣ್ಣಿನ ಗಡಿಗೆ ಮಾಡಲು ಕುಂಬಾರ ಜನಾಂಗ ಈ ಧರಿಯ ಮಣ್ಣು ಹೊತ್ತೊಯ್ಯುತ್ತಿದ್ದರಿಂದ ಇದಕ್ಕೆ ಈ ಹೆಸರು ಬಂದಿದೆಯಂತೆ. ಗಟ್ಟಿಯಾದ ಸುಂದರ ಗಡಿಗೆಗೆ ಈ ಮಣ್ಣು ಪ್ರಸಿಧ್ಧಿಯನ್ನು ಪಡೆದಿದೆ.

**ಧಬ್ ಧಬ್ ಮೂಲಿ.**

ಇಲ್ಲೊಂದು ಭಯಂಕರ ಜಲಪಾತವಿದೆ. ಧಬ್–ಧಬ್ ಎಂದು ಮಳೆಗಾಲವಿಡಿ ನೀರು ಭೋರ್ಗರೆಯುವದರಿಂದಾಗಿ ಈ ಧರಿಗೆ ಈ ಹೆಸರು ಬಂದಿದೆ. ಇಲ್ಲಿನ ನೀರಿನ ಒತ್ತಡಕ್ಕೆ ಆಗಾಗ ಕೆರೆ ಕೂಡ ಒಡೆಯುತ್ತಿರುತ್ತದೆ.

**ಘಟಲಕ್ಷ್ಮಿ.**

ಊರ ಲಕ್ಷ್ಮಿಯಂತೆ ಇಲ್ಲಿ ಘಟ ಕಾಪಾಡುವ ಲಕ್ಷ್ಮೀಯೊಬ್ಬಳಿದ್ದಾಳೆ. ಇಲ್ಲೊಂದು ಸುಂದರವಾದ ಆಕೆಯ ದೇವಸ್ಥಾನವಿದೆ. ಮೇಯಲು ಹೋದ ದನಕರುಗಳನ್ನು ಕಾಡು ಪ್ರಾಣಿಗಳಿಂದ ಈ ಘಟಲಕ್ಷ್ಮೀ ಕಾಪಾಡುತ್ತಾಳೆಂಬ ನಂಬಿಕೆಯಿಂದ ಈ ದೇವರಿಗೆ ಜನ ಹರಕೆ ಹೊರುತ್ತಿರುತ್ತಾರೆ.

ಈ ಮೇಲಿನ ಧರಿಗಳು ಕೇವಲ ಹತ್ತಾರು ಕಿಲೋಮೀಟರ್ ಅಂತರದ ಧರಿ ಪ್ರದೇಶದ ಮಾಹಿತಿಯನ್ನಷ್ಟೆ ಒದಗಿಸುತ್ತದೆ. ಐದಾರು ನೂರು ಕಿಲೋಮೀಟರ ವ್ಯಾಪ್ತಿಯ ಧರಿಯ ಬಗ್ಗೆ ಬರೆಯುವುದು ತೀರಾ ಕಷ್ಟ ಸಾಧ್ಯವಿದೆ. ಅಮೃತಗುಂಡಾದಿಂದ ಚಾಂಗಲೇರಾದವರೆಗೂ ಒಂದು ಮಗ್ಗುಲಿನ ಧರಿಗಳಿವೆ. ಇಂಥ ನಾಲ್ಕು ಮಗ್ಗುಲಿನ ಧರಿಗಳು ಬೀದರನ್ನು ಆವರಿಸಿವೆ.

ಅತ್ಯಂತ ದು:ಖದ ಸಂಗತಿಯಂದರೆ, ಜಾಗತೀಕರಣದ ಭರಾಟೆಯಲ್ಲಿ ಇಂದಿನ ಕಾಂಕ್ರಿಟ್ ಸಂಸ್ಕೃತಿ ಧರಿ ಪ್ರದೇಶಕ್ಕೂ ಲಗ್ಗೆಯಿಟ್ಟಿದೆ. ಇಲ್ಲಿನ ಮಣ್ಣು ಸಿಮೆಂಟ್ ಕಾರ್ಖಾನೆಗಳ ಪಾಲಾಗುತ್ತಿದೆ. ಇಲ್ಲಿನ ಅರಣ್ಯ ಸೌದೆ ಹೆಸರಿನಲ್ಲಿ ನಿತ್ಯ ಮಂಗಮಾಯವಾಗುತ್ತಿದೆ. ಕಾಡು ಪ್ರಾಣಿಗಳ ಬೇಟೆ ಅವ್ಯಾಹತವಾಗಿ ಮುಂದುವರೆದಿದೆ. ಬಾಲ್ಯದ ನೆನಪಿನಂತೆಯೇ ಬಾಲ್ಯದಲ್ಲಿ ಕಂಡು ಓಡಾಡಿದ ಕಾಡು ಮೇಡುಗಳು ಎಲ್ಲಿವೆ? ಎಂದು ಹುಡುಕಾಡುವಂತಾಗಿದೆ. ಅವು ಸಿಕ್ಕಿದರೂ ಸಹ ಅವು ತಮ್ಮ ಮೊದಲಿನ ಸಹಜತೆಯನ್ನು ಕಳೆದುಕೊಂಡು ಆಧುನಿಕ ಕೃತಿಮತೆಯ ಸೋಂಕಿಗೆ ಸಿಲುಕಿದಂತೆ ಭಾಸವಾಗುತ್ತಿರುವುದು ನೋವಿನ ವಿಚಾರವಾಗಿದೆ.

**ಆಕರಗಳು:**


೧. ಧರೆಯ ಸಿರಿ; ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು, ಹುಮನಾವಾದ್ ಪ್ರಕಟಣೆ, ಬೀದರ ಜಿಲ್ಲೆ.
೨. ರುಕ್ಮುದ್ದಿನ್ ಇಸ್ಲಾಂಪುರ್ ಅವರ ಬರಹ.




# ಕಿನ್ನರಿ ಬ್ರಹ್ಮಯ್ಯ ಸ್ಥಾವರ ದೈವದ ಆರಾಧಕನಾಗಿದ್ದನೆ?

**–ಡಾ. ಚಿದಾನಂದ ಚಿಕ್ಕಮಠ,**
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ,
ಶರಣಬಸವ ವಿಶ್ವವಿದ್ಯಾಲಯ, ಕಲಬುರಗಿ.

ಜನಿಸಿದ ಮಗುವಿಗೆ ಅಂಗದ ಮೇಲೆ ಲಿಂಗವನ್ನು ಕರುಣಿಸುವುದೇ ಲಿಂಗಧಾರಣ (ಲಿಂಗದೀಕ್ಷೆ) ಕ್ರಿಯೆಯಾಗಿದೆ. ಕಿನ್ನರಿಬ್ರಹ್ಮಯ್ಯನಿಗೆ ಲಿಂಗದೀಕ್ಷೆಯಾದ ವಿಚಾರ ನೇರವಾಗಿ ಯಾವುದೇ ಕಾವ್ಯ–ಪುರಾಣಗಳಲ್ಲಿ ಕಂಡುಬರುವುದಿಲ್ಲ. ಆದರೆ, ಆತ ಒಬ್ಬ ಲಿಂಗಧಾರಿ ಶಿವಶರಣನಾಗಿದ್ದ ಎಂದು ನಿರ್ಧರಿಸಲು ಕೆಲವು ಉಲ್ಲೇಖಗಳು ವಚನಸಾಹಿತ್ಯ ಮತ್ತು ವೀರಶೈವ ಕಾವ್ಯ–ಪುರಾಣ ಸಾಹಿತ್ಯದಲ್ಲಿ ದೊರಕುತ್ತವೆ. ಮಡಿವಾಳ ಮಾಚಿದೇವರ ವಚನವೊಂದರಲ್ಲಿ ಮಾತ್ರ ಕಿನ್ನರಿಬ್ರಹ್ಮಯ್ಯನಿಗೆ ಗುರುವಿನಿಂದ ಇಷ್ಟಲಿಂಗವನ್ನು ಕರುಣಿಸಲ್ಪಟ್ಟ ವಿಚಾರ ಸ್ಪಷ್ಟವಾಗಿ ಉಲ್ಲೇಖವಾಗಿರುವುದನ್ನು ಕಾಣಬಹುದು.

ಮಡಿವಾಳ ಮಾಚಯ್ಯನ ವಚನದಲ್ಲಿ "ಕಿನ್ನರಯ್ಯಗಳ ಸ್ಥಾವರ ದೈವದ ಸೇವೆ, ಯಾಚಕತ್ವವ ಬಿಡಿಸಿ, ಗುರು ಕೊಟ್ಟ ಇಷ್ಟಲಿಂಗದಲ್ಲಿ ನಿಷ್ಠೆಯ ಗಟ್ಟಿಗೊಳಿಸಿ"[೧] ಎಂದು, "ಬಸವರಾಜದೇವರ ರಗಳೆಯಲ್ಲಿ "ಪಾದಂಗಳಂ ತೊಳೆದು ತೀರ್ಥಜಲಮಂ ತಳೆದು ಆದರಂ ಮಿಗೆ ಕಿಂಕರಾಕಾರದೊಳು ನೆರೆದು ಪನ್ನೆರಡುಸಾವಿರೊಡೆಯರ ನಡುವೆಯಾಡುತಂ ಕಿನ್ನರಯ್ಯಂಗೆ ಲಿಂಗಾರ್ಚನೆಗೆ ನೀಡುತಂ"[೨] ಎಂದು, ಬಸವಪುರಾಣದಲ್ಲಿ "ಘನತರೋತ್ಸುಕಚಿತ್ತದಿಂ ಮೇದಿನಿಯೊರಸಲಭಿವಂದಿಸುತ ತಾನನುನಯೋಚಿತ ಸತ್ಕ್ರಿಯಾದಿಗಳಿಂ ಪ್ರಿಯಂಬಡಿಸಿ"[೩] ಎಂದು, ಬಸವರಾಜ ವಿಜಯಂದಲ್ಲಿ "ಸುಜನಸ್ತೋಮಸ್ತುತಂ ಸತ್ಯಸಂಗರನಂಗೇಂದ್ರಿಯಲಿಂಗಸಂಗತನುದಾರಸ್ಫಾರ ವೀರವ್ರತಾ ಚರಣಂ ಕಿನ್ನರಬೊಮ್ಮಿ ದೇವನೆಸೆದಂ"[೪]ಎಂದು, ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿ ".....ಕಿನ್ನರವೀಣೆಯ ರಚಿಸಿ ಲಿಂಗಕ್ಕೆ ಪಾಡಿ ಕೇಳಿಸಿ ಭಕ್ತರಿಂದ ಕಾಯಕವಂ ತಂದು...."[೫], ".... ಕಿನ್ನರಯ್ಯನು ಬಸವಣ್ಣನೊಡನೆ ಮುನಿದು ಪೋಗಿ ಲಿಂಗಕ್ಕೆ ಸಲುವಂತೆ ಉಳ್ಳಿಯನರ್ಪಿಸಿ ಬಸವಣ್ಣನ ಮನೆಗೆ ಬಂದು ಕಿನ್ನರಿ ವೀಣೆಯ ನುಡಿಸುತಂ ತಮ್ಮ ಲಿಂಗಕ್ಕೆ ಕೇಳಿಸಲಾಗ, ತ್ರಿಪುರಾಂತಕನೆಂಬ ಲಿಂಗವು ಲಾಲಿಸಿ ತಲೆದೂಗಿ ಸಾಕು ಸಾಕೆಂದು ನುಡಿಯಲು ಆಗಂ ಕಿನ್ನರಯ್ಯನು ಲಿಂಗವನರ್ಚಿಸಿ ಸುಖದಲ್ಲಿರ್ದರು"[೬], "..... ತಮ್ಮ ಮಠಕ್ಕೆಯ್ದಿ ಪೋಗಿ ತ್ರಿಪುರಾಂತಕನೆಂಬ ತಮ್ಮಿಷ್ಟಲಿಂಗದಲ್ಲಿ ಓಲಾಡುತಿರ್ದ ಕಿನ್ನರಬ್ರಹ್ಮಯ್ಯನು"[೭] ಎಂದು, ಬಸವೇಶ್ವರನ ಕಾವ್ಯದಲ್ಲಿ "ಗುರುಭಕ್ತಿಯುಕ್ತನು ವರಲಿಂಗನಿಷ್ಟನು ಚರದಾಸೋಹ ಸಂಪನ್ನ ಅರಿವರ್ಗವಿಜಯ ಕಿನ್ನರಬೊಮ್ಮಿದೇವಯ್ಯ......."[೮] ಎಂದು, ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರದಲ್ಲಿ "..... ಅದ ಕೇಳಿ ಶರಣರು ಅವರೆಂದಂತೆ ಇಷ್ಟಲಿಂಗದಲ್ಲಿ ಹಣವ ತೆಗೆದುಕೊಳ್ಳಿ ಎನಲು, ಹಾಗಾಗಲೆಂದು 'ಕರಸ್ಥಲದ ಲಿಂಗ'ದ ಮುಂದೆ ಕಿನ್ನರಯ್ಯ ನುಡಿಸಿ ಹನ್ನೊಂದು ಹಣ ಹಾಗವ ಪಡೆದು ಸುಖದಲ್ಲಿದ್ದರು"[೯] ಎಂದು, ಶ್ರೀ ಶರಣ ಲೀಲಾಮೃತದಲ್ಲಿ "ಕಿನ್ನರಿಬ್ರಹ್ಮನಂದು ಗುರುನಿರೂಪಣೆಯನಾಂತು ಭಕ್ತಿಯಲಿ ಇಷ್ಟಲಿಂಗದ ಪೂಜೆ ನಿಷ್ಟೆಯಿಂದಲಿ ಮಾಡೆ ಕೊಟ್ಟುದಾಲಿಂಗ ಹಾಗ........"[೧೦] ಎಂದು, ಶಿವಶರಣ ವಿಲಾಸದಲ್ಲಿ "ಗುರು'ಲಿಂಗ'ಜಂಗಮದ ಸೇವೆಯೊಳಗವನು ಪರಿಣಾಮದೊಳಗಿರ್ದನದ ಬಲ್ಲ ಶಿವನು"[೧೧] ಎಂದು, ಸಂಸ್ಕೃತ ಬಸವ ಪುರಾಣದಲ್ಲಿ "ಇಷ್ಟಲಿಂಗದಲ್ಲಿ ರಮಿಸುತ್ತಿದ್ದಂಥವನೇ"[೧೨] ಎಂದು, ಹಂತಿ ಹಾಡುಗಳಲ್ಲಿ "ಹೂಡೂರ ಹಳ್ಯಾಗೆ ಹೂಡಿದನು ಕಾಯಕವ ಮಾಡಿ ಜಂಗಮಕೆ ದಾಸೋಹ ಸಿರಿವಂತ ನಿಡಿ ಶಿವಭಕ್ತಿ ಶಿವಮತಕೆ"[೧೩] ಎಂದು ಹೇಳಲಾಗಿದೆ.

ಮಡಿವಾಳ ಮಾಚಿದೇವರ ವಚನದಲ್ಲಿ ಬರುವ 'ಗುರು ಕೊಟ್ಟ ಇಷ್ಟಲಿಂಗದಲ್ಲಿ ನಿಷ್ಟೆಯ ಗಟ್ಟಿಗೊಳಿಸಿ' ಎಂಬ ಸಾಲು ಕಿನ್ನರಿಬ್ರಹ್ಮಯ್ಯನಿಗೆ ಆತನ ಗುರುವು ಇಷ್ಟಲಿಂಗವನ್ನು ಕರುಣಿಸಿದ್ದ ವಿಚಾರವನ್ನು ತಿಳಿಸುತ್ತದೆ. ಇದು ಆತ ಇಷ್ಟಲಿಂಗಧಾರಿಯಾಗಿದ್ದ ಎಂದು ತಿಳಿಸುವ ಅಧಿಕೃತ ದಾಖಲೆಯಾಗಿದೆ. ಜೊತೆಗೆ, ಅತ್ಯಂತ ಸ್ಪಷ್ಟವಾಗಿ ಈತನಿಗೆ ಗುರುವು ಇಷ್ಟಲಿಂಗವನ್ನು ಕೊಟ್ಟಿದ್ದಾನೆ

(ಕರುಣಿಸು) ಎಂದು ಹೇಳಿರುವುದರಿಂದ ಆತ (ಕಿನ್ನರಯ್ಯ) ಇಷ್ಟಲಿಂಗಧಾರಿ ಶಿವಶರಣನಾಗಿದ್ದ ಎಂದು ಹೇಳಬೇಕಾಗುತ್ತದೆ. ಶಾಂತವೀರೇಶ್ವರಾ ಎಂಬ ಅಂಕಿತದಿಂದ ಕೂಡಿ ರಚಿತವಾದ ವಚನವೊಂದರಲ್ಲಿ[೧೪] "ಸೊಡ್ಡಳ ಬಾಚಯ್ಯ ಕಿನ್ನರಿ ಬೊಮ್ಮಯ್ಯ ಏಕಾಂತ ರಾಮಯ್ಯಂಗಲ್ಲದೆ ಲಿಂಗ ನಿಷ್ಠೆಯು ದೊರೆಯದು" ಎಂದು ಹೇಳಲಾಗಿದೆ. ಪ್ರಸ್ತುತ ವಚನದ ಸಾಲು ಕೂಡ ಕಿನ್ನರಿ ಬ್ರಹ್ಮಯ್ಯ ಒಬ್ಬ ಇಷ್ಟಲಿಂಗಧಾರಿಯಾಗಿದ್ದ, ಜೊತೆಗೆ ಇಷ್ಟಲಿಂಗದಲ್ಲಿ ನಿಷ್ಠೆ ಹೊಂದಿದ್ದ ಶರಣನಾಗಿದ್ದ ಎಂಬ ಅಂಶವನ್ನು ಎತ್ತಿ ಹಿಡಿಯುತ್ತದೆ. ಈ ವಚನ ಕೂಡ ಕಿನ್ನರಿ ಬ್ರಹ್ಮಯ್ಯ ಇಷ್ಟಲಿಂಗಧಾರಿಯಾಗಿದ್ದ ಎಂದು ತಿಳಿಸುವ ಅಧಿಕೃತ ದಾಖಲೆಯಾಗಿದೆ. ಕಾವ್ಯ–ಪುರಾಣಗಳಲ್ಲಿ ಬಂದಿರುವ ಉಲ್ಲೇಖಗಳನ್ನು ಅವಲೋಕಿಸುವುದಾದರೆ, ಬಸವರಾಜದೇವರ ರಗಳೆಯಲ್ಲಿ ಹರಿಹರನೂ ಸಹ ಪೂಡೂರಿನಿಂದ ಬಸವಣ್ಣನನ್ನು ಅರಸಿಬಂದ ಕಿನ್ನರಿಬ್ರಹ್ಮಯ್ಯನನ್ನು ಬರಮಾಡಿಕೊಂಡು ಆತನಿಗೆ ಲಿಂಗಾರ್ಚನೆಯ ವ್ಯವಸ್ಥೆ ಮಾಡಿಕೊಡಲಾಯಿತು ಎಂಬ (ಕಿನ್ನರಯ್ಯಂಗೆ ಲಿಂಗಾರ್ಚನೆಗೆ ನೀಡುತಂ) ವಿಚಾರವನ್ನು ತಿಳಿಸುತ್ತಾನೆ. ಅಂದರೆ, ಆತ ಸಹ ಕಿನ್ನರಿಬ್ರಹ್ಮಯ್ಯ ಒಬ್ಬ ಲಿಂಗಧಾರಿ ಶಿವಶರಣನಾಗಿದ್ದ ಎಂದೇ ಅಭಿಪ್ರಾಯ ತಳೆದಿರುವುದನ್ನು ಗುರುತಿಸಬಹುದು.

ಬಸವಪುರಾಣದ ಸಾಲನ್ನು ನೋಡುವುದಾದರೆ, ಕಲ್ಯಾಣವನ್ನರಸಿ ಬಂದ ಕಿನ್ನರಿಬ್ರಹ್ಮಯ್ಯನನ್ನು ಮೊದಲು ಕಂಡವನಾದ ಬಸವಣ್ಣನು ಆತನನ್ನು ಬರಮಾಡಿಕೊಂಡು ಮಾಡಿದ ಉಪಚಾರವನ್ನು ತಿಳಿಸುತ್ತದೆ. ಇಲ್ಲಿ ಕಿನ್ನರಿಬ್ರಹ್ಮಯ್ಯನಿಗೆ ಸತ್ಕ್ರಿಯಾದಿಗಳಿಗೆ ವ್ಯವಸ್ಥೆ ಮಾಡಿಕೊಡಲಾಯಿತು ಎಂದು ಹೇಳಲಾಗಿದೆ. ಸತ್ಕ್ರಿಯೆ ಎಂಬುದು ಬಹುಶಃ ಕಿನ್ನರಿಬ್ರಹ್ಮಯ್ಯನಿಗೆ ಬಸವಣ್ಣನು ಲಿಂಗಪೂಜಾದಿ ಕ್ರಿಯೆಗಳಿಗೆ ಮಾಡಿಕೊಟ್ಟ ವ್ಯವಸ್ಥೆಯನ್ನೇ ಸೂಚಿಸುತ್ತದೆ ಎಂದು ಹೇಳಬಹುದು. ಜೊತೆಗೆ, ಮುಂದೆ ಬರುವ ವರ್ಣನೆಯು ಸಹ ಕಿನ್ನರಿಬ್ರಹ್ಮಯ್ಯ ಒಬ್ಬ ಲಿಂಗವಂತ ಶಿವಶರಣನಾಗಿಯೇ ಕಲ್ಯಾಣಕ್ಕೆ ಬಂದ ಎಂಬ ಅಂಶವನ್ನೇ ಎತ್ತಿ ಹಿಡಿಯುತ್ತವೆ ಎನ್ನಲಡ್ಡಿಯಿಲ್ಲ. ಅದರೊಂದಿಗೆ 'ಲೋಕೈಕಪೂಜ್ಯಂ ಶರಣಮಾರ್ಗದಲಿ'[೧೫] ಎಂದೂ ಭೀಮಕವಿ ವರ್ಣಿಸಿರುವುದನ್ನು ಕಾಣಬಹುದು. ಇದೂ ಸಹ ಈ ಮೇಲಿನ ಊಹೆಯನ್ನು ಎತ್ತಿಹಿಡಿಯುತ್ತದೆ. ಬಸವರಾಜ ವಿಜಯಂ ಕಾವ್ಯದ ಸಾಲುಗಳನ್ನು ನೋಡುವುದಾದರೆ, ಕಿನ್ನರಿಬ್ರಹ್ಮಯ್ಯ ತನ್ನ ಜನ್ಮಸ್ಥಳವಾದ ಪೂಡೂರಿನಲ್ಲಿಯೇ ಲಿಂಗದೀಕ್ಷೆಯನ್ನು ಹೊಂದಿ, ಶಿವಭಕ್ತ (ಶರಣ)ನಾಗಿ ಬದುಕುತ್ತಿದ್ದ ಎಂಬ ಅಂಶವನ್ನು ಮನದಟ್ಟು ಮಾಡುತ್ತದೆ. ಇಲ್ಲಿ ಕವಿ ಷಡಕ್ಷರದೇವನು 'ಸಮಸ್ತ ಅಂಗಗಳಲ್ಲಿಯೂ ಇಂದ್ರಿಯಗಳಲ್ಲಿಯೂ ಲಿಂಗದ ಅರಿವಿನಿಂದ ಕೂಡಿದವನಾಗಿ ಕಿನ್ನರಿಬ್ರಹ್ಮಯ್ಯ ಇದ್ದನು' ಎಂದು ಹೇಳುವ ವರ್ಣನಪರ ನುಡಿಗಳು ಕಿನ್ನರಿಬ್ರಹ್ಮಯ್ಯ ಲಿಂಗಧಾರಿ ಶಿವಶರಣನಾಗಿದ್ದ ಎಂದೇ ಅರ್ಥ ನೀಡುತ್ತವೆ. ಆತ ಶರೀರದ ಮೇಲೆ ಇಷ್ಟಲಿಂಗವನ್ನು ಹೊಂದಿ ಸಾಧನಾಪಥದಲ್ಲಿ ಅತ್ಯುಚ್ಚ ನಿಲುವಿಗೆ ಏರಿದ್ದ ಎಂದರ್ಥವಾಗುತ್ತದೆ. ಜೊತೆಗೆ, ವೀರಶೈವಾಚರಣೆಯಿಂದ ಕೂಡಿದವನಾಗಿ ಕಿನ್ನರಿಬ್ರಹ್ಮಯ್ಯ ಶೋಭಿಸುತ್ತಿದ್ದನು ಎಂದು ಹೇಳುವ ಕವಿಯ ನುಡಿಯೂ ಸಹ ಆತ ಲಿಂಗಧಾರಿ ಶಿವಶರಣನಾಗಿದ್ದ ಎಂಬ ಅಂಶವನ್ನೇ ಎತ್ತಿಹಿಡಿಯುತ್ತವೆ. ಏಕೆಂದರೆ ವೀರಶೈವನಾದವನು ಇಷ್ಟಲಿಂಗವನ್ನು ಧರಿಸಲೇಬೇಕು. ಹೀಗಾಗಿ ಕವಿಯು ಹೇಳುವ "ವೀರಶೈವಾಚರಣೆ" ಎಂಬುದು ಕಿನ್ನರಿಬ್ರಹ್ಮಯ್ಯ ತನ್ನಲ್ಲಿ ಇಷ್ಟಲಿಂಗವನ್ನು ಹೊಂದಿ, ನಿತ್ಯವೂ ಅರ್ಚಿಸಿ ಆರಾಧಿಸುತ್ತಿದ್ದ ಎಂಬ ಅರ್ಥವನ್ನು ನೀಡುತ್ತದೆ ಎನ್ನಬಹುದು. ಒಟ್ಟಾರೆ ಪ್ರಸ್ತುತ ಕಾವ್ಯ ಸಹ ಆತ ಲಿಂಗಧಾರಿ ಶಿವಶರಣನಾಗಿದ್ದ ಎಂದೇ ತಿಳಿಸುತ್ತದೆ ಎನ್ನಲು ಅಡ್ಡಿಯಿಲ್ಲ. ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿ ಶಾಂತಲಿಂಗದೇಶಿಕನು ಕಿನ್ನರಿಬ್ರಹ್ಮಯ್ಯನ ಭಕ್ತಿಯ ವಿಚಾರವಾಗಿ ಹೇಳುತ್ತ, ಕಿನ್ನರ ವೀಣೆಯನ್ನು ರಚಿಸಿ ಅದನ್ನು ತೆಗೆದುಕೊಂಡು ಲಿಂಗದೆದುರು ಹಾಡಿ ಕೇಳಿಸುತ್ತಿದ್ದ ಎಂದೂ, ಬಸವಣ್ಣನೊಡನೆ ಮುನಿದುಹೋಗಿ (ತ್ರಿಪುರಾಂತಕ ಲಿಂಗದೆಡೆಗೆ?) ಭಕ್ತಿ ಮಾಡಿದ ವಿಚಾರ ತಿಳಿದುಬರುತ್ತದೆ. ಈ ಎರಡೂ ವಿಚಾರಗಳು ಕಿನ್ನರಯ್ಯ ಇಷ್ಟಲಿಂಗ ಮತ್ತು ಸ್ಥಾವರಲಿಂಗ (ತ್ರಿಪುರಾಂತಕಲಿಂಗ) ಎರಡನ್ನೂ ಅರ್ಚಿಸಿ ಆರಾಧಿಸುತ್ತಿದ್ದ ಎಂಬಂತೆ ಮಾಹಿತಿ ನೀಡುತ್ತವೆ. "ಮನೆಗೆ ಬಂದು ಕಿನ್ನರ ವೀಣೆಯ ನುಡಿಸುತಂ ತಮ್ಮ ಲಿಂಗಕ್ಕೆ ಕೇಳಿಸಲಾಗ" ಎಂಬ ಸಾಲು ಮತ್ತು "ತ್ರಿಪುರಾಂತಕನೆಂಬ ಲಿಂಗವು ಲಾಲಿಸಿ ತಲೆದೂಗಿ ಸಾಕು ಸಾಕೆಂದು ನುಡಿಯಲು ಆಗಂ ಕಿನ್ನರಯ್ಯನು ಲಿಂಗವನರ್ಚಿಸಿ ಸುಖದಲ್ಲಿರ್ದರು" ಎಂಬ ಸಾಲು ಈ ಎರಡೂ ಸಾಲುಗಳು ಆತ

ಇಷ್ಟಲಿಂಗಧಾರಿಯಾಗಿದ್ದ ಎಂಬ ಅರ್ಥವನ್ನೇ ನೀಡುತ್ತವೆ. "ಮನೆಗೆ ಬಂದು ತಮ್ಮ ಲಿಂಗಕ್ಕೆ" ಎಂಬ ಮಾತು ಇದನ್ನು ಮತ್ತಷ್ಟು ಸ್ಪಷ್ಟಪಡಿಸುತ್ತದೆ. ಬಸವೇಶ್ವರನ ಕಾವ್ಯದಲ್ಲಿ ಕವಿ ಗರಣಿಯ ಬಸವಲಿಂಗದೇವನು 'ವರಲಿಂಗ ನಿಷ್ಟನು' ಎಂದು ತಿಳಿಸಿದ್ದಾನೆ. ಇಲ್ಲಿ ವರಲಿಂಗ ಎಂಬುದು ಅನುಗ್ರಹದಿಂದ ಪಡೆದ ಲಿಂಗ ಎಂದು ಅರ್ಥವಾಗುತ್ತದೆ. ಹೀಗಾಗಿ, ಕಿನ್ನರಯ್ಯ ಗುರುವಿನಿಂದ ಅನುಗ್ರಹಿಸಲ್ಪಟ್ಟ ಲಿಂಗದಲ್ಲಿ ನಿಷ್ಟನಾಗಿ ಬದುಕುತ್ತಿದ್ದನು ಎಂದೇ ಕವಿ ವರ್ಣಿಸಿದ್ದಾನೆ ಎನ್ನಬಹುದು. ಆದ್ದರಿಂದ, ಬಸವೇಶ್ವರನ ಕಾವ್ಯವೂ ಸಹ ಕಿನ್ನರಿಬ್ರಹ್ಮಯ್ಯ ಲಿಂಗದ ಪೂಜಕನಾಗಿದ್ದ, ಇಷ್ಟಲಿಂಗಧಾರಿಯಾಗಿದ್ದ ಎಂದೇ ಹೇಳುತ್ತದೆ ಎನ್ನಲಡ್ಡಿಯಿಲ್ಲ. ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರವನ್ನು ಅವಲೋಕಿಸುವುದಾದರೆ, 'ಕರಸ್ಥಲದ ಲಿಂಗದ ಮುಂದೆ ಕಿನ್ನರಯ್ಯ ನುಡಿಸಿ ಹನ್ನೊಂದು ಹಣ ಹಾಗವ ಪಡೆದು' ಎಂದು ಹೇಳಲಾಗಿದೆ. ಈ ಸಾಲು ಸಹ ಕಿನ್ನರಿಬ್ರಹ್ಮಯ್ಯ ಇಷ್ಟಲಿಂಗಧಾರಿಯಾಗಿದ್ದ ಎಂಬುದನ್ನೇ ಎತ್ತಿ ಹಿಡಿಯುತ್ತದೆ ಎನ್ನಬಹುದು. ಇಲ್ಲಿ 'ಕರಸ್ಥಲದ ಲಿಂಗ' ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಅದು ಅಂಗೈ ಮಧ್ಯೆ ಪ್ರತಿಷ್ಠಾಪಿಸಿ ಪೂಜಿಸುವ ಇಷ್ಟಲಿಂಗ ಎಂದೇ ಅರ್ಥವಾಗುತ್ತದೆ. ಆದ್ದರಿಂದ, ಅಜ್ಞಾತ ಕವಿಯ ಅಭಿಪ್ರಾಯವೂ ಕಿನ್ನರಯ್ಯ ಲಿಂಗವಂತ ಶಿವಶರಣನಾಗಿದ್ದ ಎಂದೇ ಹೇಳುತ್ತದೆ. ಶ್ರೀ ಶರಣ ಲೀಲಾಮೃತದಲ್ಲಿ 'ಇಷ್ಟಲಿಂಗದ ಪೂಜೆ ನಿಷ್ಠೆಯಿಂದಲಿ ಮಾಡೆ ಕೊಟ್ಟುದಾ ಲಿಂಗ ಹಾಗ' ಎಂದು ವರ್ಣಿಸಲ್ಪಟ್ಟಿದ್ದು, ಇಲ್ಲಿ ಸ್ಪಷ್ಟವಾಗಿ 'ಇಷ್ಟಲಿಂಗ' ಎಂದು ಹೇಳಲಾಗಿದ್ದು, ಕಿನ್ನರಿಬ್ರಹ್ಮಯ್ಯ ಆ ಇಷ್ಟಲಿಂಗವನ್ನೇ ನಿಷ್ಠೆಯಿಂದ ಪೂಜಿಸುತ್ತಿದ್ದ ಎಂದು ತಿಳಿಸಿದಂತಾಗುತ್ತದೆ. ಶಿವಶರಣ ವಿಲಾಸ ಕೃತಿಯು ಕಿನ್ನರಿ ಬ್ರಹ್ಮಯ್ಯ ಗುರುಲಿಂಗಜಂಗಮ ಸೇವೆಯಲ್ಲಿದ್ದ ಎಂದು ತಿಳಿಸುತ್ತದೆ. ಈ ವರ್ಣನೆ ಸಹ ಸ್ಪಷ್ಟವಾಗಿ ಆತ ಲಿಂಗಧಾರಿಯಾಗಿದ್ದ ಎಂದು ತಿಳಿಸುತ್ತದೆ.

ಸಂಸ್ಕೃತ ಬಸವ ಪುರಾಣದಲ್ಲಿ ಕವಿ ಶಂಕರಾರಾಧ್ಯನು ಕಿನ್ನರಿಬ್ರಹ್ಮಯ್ಯನು ಲಿಂಗದೀಕ್ಷೆ ಹೊಂದಿ, ಲಿಂಗಾರ್ಚನೆ ಮಾಡುತ್ತ, ಲಿಂಗವಂತ ಶಿವಭಕ್ತನಾಗಿ ಬದುಕುತ್ತಿದ್ದ ಎಂಬುದಾಗಿ ಸ್ವಲ್ಪ ನೇರವಾಗಿಯೇ ಹೇಳಿದ್ದಾನೆ. ಅರ್ಥಾತ್, ಆತನನ್ನು ಕುರಿತು ಕವಿ ಮಾಡುವ ವರ್ಣನೆ ಆತ ಶಿವಭಕ್ತನಾಗಿದ್ದುದರ ಮಾಹಿತಿ ಒದಗಿಸುತ್ತದೆ. ಕಿನ್ನರಿಬ್ರಹ್ಮಯ್ಯನನ್ನು ಕುರಿತು ವರ್ಣಿಸುತ್ತ ಆತನು ತಪೋನಿಧಿಯು, ಶ್ರೇಷ್ಠ ಯೋಗಿಗಳಿಂದ ಪೂಜಿಸಲ್ಪಡುವವನೂ, ತನ್ನ ಶರೀರ ಶಿವನ ಶರೀರವನ್ನಾಗಿ ಮಾಡಿಕೊಂಡವನು (ಅಂಗ ಶರೀರವಳಿದು ಲಿಂಗ ಶರೀರವಾಗಿ ಮಾರ್ಪಟ್ಟಿರುವ ಸ್ಥಿತಿ/ಹಂತವೆಂದರ್ಥ), ವೀರಶೈವಾಚಾರ ಮಾರ್ಗದಲ್ಲಿ ಆದರ ಉಳ್ಳವನು, ನಿಸ್ಸಿಮ ಭಕ್ತಿಯುಳ್ಳವನು ಆಗಿದ್ದನು ಎಂದು ಕಿನ್ನರಿಬ್ರಹ್ಮಯ್ಯನ ವರ್ಣನೆಯನ್ನು ಮಾಡಿರುವುದನ್ನು ಗಮನಿಸುವುದಾದರೆ, ಆತ ಒಬ್ಬ ಲಿಂಗವಂತ ಶಿವಭಕ್ತನಾಗಿ ನಿತ್ಯವೂ ಅರ್ಚನೆ ಆರಾಧನೆಗಳನ್ನು ಮಾಡುತ್ತ, ಜಂಗಮ ದಾನದಾಸೋಹಾದಿಗಳನ್ನು ಮಾಡಿಕೊಂಡು ಪೂಡೂರಿನಲ್ಲಿ ಬದುಕು ನಡೆಸಿದ್ದನು ಎಂಬಂತೆ ಕವಿ ಅಭಿಪ್ರಾಯಪಟ್ಟಿರುವ ಹಾಗೆ ಊಹಿಸಬಹುದಾಗಿದೆ. 'ವೀರಶೈವಾಚಾರ ಮಾರ್ಗದಲ್ಲಿ ಆದರ ಉಳ್ಳವನು'[೧೬] ಎಂಬ ವರ್ಣನೆಯಂತೂ ಕಿನ್ನರಿಬ್ರಹ್ಮಯ್ಯ ವೀರಶೈವ ಶಿವಭಕ್ತನಾಗಿದ್ದ ಎಂದೇ ಹೇಳುತ್ತಿದೆ ಎಂದು ತಿಳಿದುಬರುತ್ತದೆ. ಹೀಗಾಗಿ, ಪ್ರಸ್ತುತ ಕಾವ್ಯ ಸಹ ಕಿನ್ನರಿಬ್ರಹ್ಮಯ್ಯನು ಇಷ್ಟಲಿಂಗಧಾರಿಯಾಗಿದ್ದ ಎಂಬುದನ್ನು ಎತ್ತಿಹಿಡಿಯುತ್ತದೆ. ಹಂತಿ ಹಾಡುಗಳು ಸಹ ಆತನ ಭಕ್ತಜೀವನವನ್ನು ಎತ್ತಿ ಹಿಡಿಯುತ್ತವೆ. ಶಿವಭಕ್ತಿ, ಜಂಗಮಾರ್ಚನೆ, ದಾಸೋಹದಂತಹ ವಿಚಾರಗಳನ್ನು ಅವಲೋಕಿಸುವುದಾದರೆ, ಬಹುಶಃ ಆತ ಲಿಂಗವಂತ ಶಿವಭಕ್ತನಾಗಿದ್ದ ಹಾಗೆ ತ್ರಿಪದಿಕಾರರೂ ಅಭಿಪ್ರಾಯಪಟ್ಟಿರುವಂತೆ ಕಂಡುಬರುತ್ತದೆ.

ಮುಖ್ಯವಾದ ಸಂಗತಿಯೆಂದರೆ, ಕಿನ್ನರಿಬ್ರಹ್ಮಯ್ಯ ಇಷ್ಟಲಿಂಗದ ಜೊತೆ-ಜೊತೆಗೆ ಸ್ಥಾವರದೈವ (ಲಿಂಗ)ದ ಆರಾಧಕನಾಗಿದ್ದ ಹಾಗೆಯೂ ವಚನಸಾಹಿತ್ಯ ಮತ್ತು ಕಾವ್ಯ-ಪುರಾಣಗಳಲ್ಲಿ ಉಲ್ಲೇಖಗಳು ಕಂಡುಬರುತ್ತವೆ. ಮಡಿವಾಳ ಮಾಚಿದೇವರ ವಚನವೊಂದು ಇದನ್ನು ದೃಢಪಡಿಸುತ್ತದೆ. "ಕಿನ್ನರಯ್ಯಗಳ ಸ್ಥಾವರ ದೈವದ ಸೇವೆ, ಯಾಚಕತ್ವವ ಬಿಡಿಸಿ" ಎಂಬ ವಚನವೊಂದರ ಸಾಲು ಕಿನ್ನರಿಬ್ರಹ್ಮಯ್ಯ ಮಾಡುತ್ತಿದ್ದ ಸ್ಥಾವರಲಿಂಗದ ಸೇವೆ (ಪೂಜೆ)ಯನ್ನು ಬಿಡಿಸಲಾಯಿತು ಎಂದು ತಿಳಿಸುತ್ತದೆ. ಇದು ಆತ

ಈ ಮೊದಲು ಸ್ಥಾವರಲಿಂಗ (ತ್ರಿಪುರಾಂತಕಲಿಂಗ)ದ ಆರಾಧಕನಾಗಿದ್ದ ಎಂಬುದನ್ನು ಮನವರಿಕೆ ಮಾಡಿಕೊಡುತ್ತದೆ.

ಸಿಂಗಿರಾಜ ಪುರಾಣ ಮತ್ತು ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರ ಕೃತಿಗಳು ಕಿನ್ನರಿಬ್ರಹ್ಮಯ್ಯ ಸ್ಥಾವರ ಲಿಂಗದ ಆರಾಧಕನೂ ಆಗಿದ್ದ ಎಂದು ಮಾಹಿತಿಯನ್ನೊದಗಿಸುತ್ತವೆ. ಸಿಂಗಿರಾಜ ಪುರಾಣದಲ್ಲಿ "ಹೊಂಗಾಯಕವ ಕೈಗೆ ಮಜೆಯೊಡ್ಡಿ ತ್ರಿಪುರಾಂತಕಂಗೆ ಕಂದೆಜವಾಗಿ ಚರಲಿಂಗ ಭಕ್ತಿ ಮನಸಿಂಗೆ ತನುವಾಗಿಯಾ ಪುರದರಸುಗೆಲಸಕರುಹತೆವಡೆದಿರಲ್ಕೆ...."[೧೭] ಎಂದು ಹೇಳಲಾಗಿರುವ ಸಾಲು ಕಿನ್ನರಿ ಬ್ರಹ್ಮಯ್ಯ ತ್ರಿಪುರಾಂತಕಲಿಂಗದ ಆರಾಧಕನಾಗಿರುವುದರ ಜೊತೆ ಜೊತೆಗೆ ಇಷ್ಟಲಿಂಗ (ಚರಲಿಂಗ)ದ ಆರಾಧಕನೂ ಆಗಿದ್ದ ಎಂದು ತಿಳಿಸುತ್ತದೆ.

ಬಸವೇಶ್ವರ ಷಟ್‌ಸ್ಥಲವಚನದ ಕಥಾಸಾರ ಕೃತಿಯಲ್ಲಿ ಕಿನ್ನರಿಬ್ರಹ್ಮಯ್ಯನಿಗೆ ಸಂಬಂಧಿಸಿದಂತೆ ಕಥೆಯೊಂದು ಬಂದಿದ್ದು, ಮೋಳಿಗೆ ಮಾರಯ್ಯನ ಮಡದಿ ಕಿನ್ನರಿಬ್ರಹ್ಮಯ್ಯ ಇಷ್ಟಲಿಂಗವನ್ನು ಬಿಟ್ಟು ಸ್ಥಾವರಕ್ಕೆ ಹೋಗುವವನಾದ ಕಾರಣ ಅವರ ವಸ್ತ್ರ ನಮಗೆ ಬೇಡವೆಂದು ಮರಳಿ ಕಳುಹಿಸಿದ ವಿಚಾರವನ್ನು ತಿಳಿಸುತ್ತದೆ.[೧೮] ಈ ಕಥೆ ಸಹ ಕಿನ್ನರಿಬ್ರಹ್ಮಯ್ಯ ಸ್ಥಾವರದೈವದ ಆರಾಧಕನಾಗಿದ್ದುದನ್ನು ತಿಳಿಸುತ್ತದೆ.

ಕಿನ್ನರಿಬ್ರಹ್ಮಯ್ಯ ಕೆಲವು ಶರಣರಂತೆ ಕಲ್ಯಾಣಕ್ಕೆ ಬಂದನಂತರ ಲಿಂಗದೀಕ್ಷೆಯನ್ನು ಪಡೆದ ಹಾಗೆ ನಮಗೆ ಎಲ್ಲಿಯೂ ಉಲ್ಲೇಖಗಳು ಕಂಡುಬರುವುದಿಲ್ಲ. ಮಡಿವಾಳ ಮಾಚಿದೇವರ ವಚನವು ಆತ ಗುರುವಿನಿಂದ ಇಷ್ಟಲಿಂಗವನ್ನು ಪಡೆದ ವಿಚಾರವನ್ನು ತಿಳಿಸುತ್ತದೆ. ಕಿನ್ನರಯ್ಯನ ಗುರುವು ಆತನ ಹುಟ್ಟೂರಿನಲ್ಲಿಯೇ ಇದ್ದ ವಿಚಾರ ಈಗಾಗಲೇ ಸ್ಪಷ್ಟವಾಗಿದೆ. ಜೊತೆಗೆ, ಆತನ ಗುರುವೊಬ್ಬ ಕಲ್ಯಾಣ ಪಟ್ಟಣದಲ್ಲಿ ಇದ್ದಹಾಗೆ ತಿಳಿದುಬರುವುದಿಲ್ಲ. ಇದು ಕಿನ್ನರಿಬ್ರಹ್ಮಯ್ಯ ಪೂಡೂರಿನಲ್ಲಿ (ಜನ್ಮಸ್ಥಳ)ರುವಾಗಲೇ ಲಿಂಗದೀಕ್ಷೆಯನ್ನು ಪಡೆದ ವಿಚಾರವನ್ನು ಎತ್ತಿಹಿಡಿಯುತ್ತದೆ. ಹಲವು ಕಾವ್ಯಪುರಾಣಗಳಲ್ಲಿಯೂ ಇದೇ ವಿಚಾರ ಅಭಿವ್ಯಕ್ತವಾಗಿದೆ.

ಕೊನೆಯದಾಗಿ, ಕಿನ್ನರಿಬ್ರಹ್ಮಯ್ಯ ಗುರುವು ಕರುಣಿಸಿದ್ದ ಇಷ್ಟಲಿಂಗದ ಜೊತೆ–ಜೊತೆಗೆ ಸ್ಥಾವರಲಿಂಗದ (ತ್ರಿಪುರಾಂತಕಲಿಂಗ) ಆರಾಧನೆಯನ್ನೂ ಮಾಡಿ ಕೊನೆಗೆ ಇಷ್ಟಲಿಂಗದ ಆರಾಧನೆಯನ್ನೇ ಮುಂದುವರೆಸಿರುವಂತೆ ಭಾವಿಸಬಹುದಾಗಿದೆ. ಕಲಕೇತ ಬ್ರಹ್ಮಯ್ಯ ಈ ಸ್ಥಾವರ ಲಿಂಗದ ಪೂಜೆಯನ್ನು ಬಿಡಿಸಿ ಇಷ್ಟಲಿಂಗವನ್ನು ಪೂಜಿಸುವಂತೆ ಮಾಡಿದ ಎಂದು ಮಡಿವಾಳ ಮಾಚಿದೇವರ ವಚನ ತಿಳಿಸುತ್ತದೆ. ಶರಣಲೀಲಾಮೃತ ಕೃತಿಯಲ್ಲಿಯೂ ಈ ಪ್ರಸಂಗ ಚಿತ್ರಿತವಾಗಿದೆ. ಇನ್ನು, ಕಿನ್ನರಿಬ್ರಹ್ಮಯ್ಯ ಇಷ್ಟಲಿಂಗವನ್ನು ಪೂಜಿಸಿ ಇಷ್ಟ–ಪ್ರಾಣಗಳಿಂದ ಭಾವಲಿಂಗದೆಡೆಗೆ ಸಾಗಿ ಸಾಧನೆಯ ಪರಮೋಚ್ಛ ಸ್ಥಿತಿಯಲ್ಲಿದ್ದ ಎಂಬುದನ್ನು ಸ್ವತಃ ಆತನದೇ ಆದ ವಚನವೊಂದು (ಕಲ್ಲೊಳಗಣ ಬೆಲ್ಲವ ಮೆದ್ದವರಿನ್ನ್ಯಾರೊ...)[೧೯] ತಿಳಿಸುತ್ತದೆ. ಹೀಗಾಗಿ ಆತ ಹಲ ಕೆಲವು ದಿನ ಸ್ಥಾವರಲಿಂಗವನ್ನೋ, ಬರಿ ಇಷ್ಟಲಿಂಗವನ್ನೋ ಪೂಜಿಸಿದರೂ ಕೊನೆಗೆ ಇಷ್ಟಲಿಂಗವನ್ನೇ ಹಿಡಿದ ಎಂದು ನಿರ್ಧರಿಸಲಡ್ಡಿಯಿಲ್ಲ.

ಡಾ. ಎಂ. ಚಿದಾನಂದಮೂರ್ತಿಯವರು ಕಿನ್ನರಿಬ್ರಹ್ಮಯ್ಯನ ಲಿಂಗಧಾರಣೆ ಮತ್ತು ಅಂಕಿತನಾಮಗಳ ಕುರಿತು ಹೇಳುತ್ತ "ಶೈವನಾಗಿದ್ದು ಕಲ್ಯಾಣದ ತ್ರಿಪುರಾಂತಕ ದೇವಾಲಯದಲ್ಲಿ ಕಿನ್ನರಿ ವೃತ್ತಿಯಲ್ಲಿದ್ದ ಕಿನ್ನರಿಬೊಮ್ಮಯ್ಯನನ್ನು ಕಲಕೇತಯ್ಯನು "ಸ್ಥಾವರ ದೈವದ ಸೇವೆ" ಬಿಡಿಸಿ "ಗುರುವು ಕೊಟ್ಟ ಇಷ್ಟಲಿಂಗದಲ್ಲಿ ನಿಷ್ಠೆಯ ಗಟ್ಟಿಗೊಳಿಸಿ ಘನವೀರಶೈವದ ಬಟ್ಟೆಯನರುಹಿದರು...." ಎಂಬ ಮಡಿವಾಳ ಮಾಚಿದೇವನ ಮಾತು ಗಮನಾರ್ಹ. ಕಿನ್ನರಿಬೊಮ್ಮಯ್ಯನ ಅಂಕಿತ "ತ್ರಿಪುರಾಂತಕ ಲಿಂಗ". ತ್ರಿಪುರಾಂತಕೇಶ್ವರ ದೇವಾಲಯದ ದೈವದ ಆರಾಧಕನಾಗಿದ್ದ ಕಿನ್ನರಯ್ಯ ಅದೇ ತ್ರಿಪುರಾಂತಕ ಹೆಸರಿನ ಇಷ್ಟಲಿಂಗಧಾರಕನಾಗಿ ವೀರಶೈವ ಎನಿಸಿಕೊಂಡ[೨೦] ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇವರ ಹೇಳಿಕೆಯೂ ಕಿನ್ನರಿಬ್ರಹ್ಮಯ್ಯ ಇಷ್ಟಲಿಂಗಧಾರಿಯಾಗಿದ್ದ ಎಂಬ ಅಭಿಪ್ರಾಯವನ್ನೇ ಹೊರಹಾಕುತ್ತದೆ.

ಮೇಲಿನ ಎಲ್ಲಾ ಸಂಗತಿಗಳನ್ನು ಪರಿಶೀಲಿಸಿದ ನಂತರ ಕಿನ್ನರಿ ಬ್ರಹ್ಮಯ್ಯ ಇಷ್ಟಲಿಂಗಧಾರಿಯಾಗಿದ್ದ ಎಂದು ಅಂತಿಮವಾಗಿ ತೀರ್ಮಾನಕ್ಕೆ ಬರಬಹುದಾಗಿದೆ.

**ಅಡಿ ಟಿಪ್ಪಣಿಗಳು:**

೧. ಸಂ. ಡಾ. ಬಿ. ಆರ್ ಹಿರೇಮಠ, ಸಂಕೀರ್ಣ ವಚನ ಸಂಪುಟ–೦೩, ಬಸವ ವಚನ ಮಹಾ ಸಂಪುಟ:೦೧, ವಚನ ೫೫೨, ಪುಟ–೧೪೨೧.
೨. ಸಂ. ಪ್ರೊ.ಟಿ.ಎಸ್.ವೆಂಕಣ್ಣಯ್ಯ, ಬಸವರಾಜದೇವರ ರಗಳೆ, ಸ್ಥಲ:೧೧ ಪುಟ:೭೦.
೩. ಸಂ. ಡಾ. ಆರ್. ಸಿ. ಹಿರೇಮಠ, ಬಸವ ಪುರಾಣ, ಸಂಧಿ:೨೩, ಪದ್ಯ:೦೮.
೪. ಅದೇ, ಬಸವರಾಜ ವಿಜಯಂ, ಆಶ್ವಾಸ: ೧೭, ಪದ್ಯ–೦೨.
೫. ಡಾ. ಆರ್. ಸಿ. ಹಿರೇಮಠ ಮತ್ತು ಡಾ. ಎಂ. ಎಸ್. ಸುಂಕಾಪುರ, ಭೈ.ಕಾ.ಕ.ಸೂ–೦೨ ಸಂಧಿ:೦೪, ಪುಟ–೨೭೭.
೬. ಅದೇ, ಸಂಧಿ:೦೪ ಪುಟ:೨೭೮.
೭. ಅದೇ, ಸಂಧಿ:೦೪ ಪುಟ:೪೪೮.
೮. ಸಂ. ಹ. ಕ. ರಾಜೇಗೌಡ, ಬಸವೇಶ್ವರ ಕಾವ್ಯ, ಸಂಧಿ:೧೦, ಪದ್ಯ:೦೪.
೯. ಸಂ. ಫ.ಗು. ಹಳಕಟ್ಟಿ ಬ.ಷ.ವ ಕಥಾಸಾಗರ, ಫ.ಗು.ಹಳಕಟ್ಟಿ ಸಮಗ್ರ ಸಾಹಿತ್ಯ ಸಂಪುಟ:೦೯, ಪುಟ:೪೧೯.
೧೦. ಸಂ. ಶಿವಬಸವ ಸ್ವಾಮಿಗಳು, ಶ್ರೀ ಶರಣ ಲೀಲಾಮೃತ, ಪದ್ಯ:೦೧ ಪುಟ:೦೪.
೧೧. ಸಂ. ಬಿ.ನಂಜುಂಡಪ್ಪ, ಶಿವಶರಣ ವಿಲಾಸ, ಪದ್ಯ:೧೫ ಪುಟ:೪೪೫.
೧೨. ಕವಿ: ಕಂಚಿ ಶಂಕರಾರಾಧ್ಯ, ಶ್ರೀ ಬಸವಪುರಾಣ, ಅಧ್ಯಾಯ:೧೬, ಪದ್ಯ:೯೦, ಪುಟ:೪೩೭.
೧೩. ಸಂ.ಡಾ. ಬಿ. ಎಸ್. ಗದ್ದಗಿಮಠ, ಕನ್ನಡ ಜನಪದ ಗೀತೆಗಳು, ಪದ್ಯ:೦೨ ಪುಟ:೨೬೨.
೧೪. ಸಂ. ಡಾ ವೀರಣ್ಣ ರಾಜೂರ, ಸಂಕೀರ್ಣ ವಚನ ಸಂಪುಟ–೦೯.
೧೫. ಸಂ. ಡಾ. ಆರ್. ಸಿ. ಹಿರೇಮಠ ಬಸವ ಪುರಾಣ, ಸಂಧಿ:೨೭, ಪದ್ಯ:೦೮.
೧೬. ಕವಿ: ಕಂಚಿ ಶಂಕರಾರಾಧ್ಯ ಶ್ರೀ ಬಸವಪುರಾಣ, ಅಧ್ಯಾಯ:೧೬, ಪದ್ಯ:೦೪.
೧೭. ಸಂ. ಎಚ್. ದೇವೀರಪ್ಪ, ಸಿಂಗಿರಾಜ ಪುರಾಣ, ಸಂಧಿ:೧೨, ಪದ್ಯ ೦೫.
೧೮. ಸಂ. ಫ.ಗು.ಹಳಕಟ್ಟಿ ಬಸವೇಶ್ವರ ಷಟ್ ಸ್ಥಲ ವಚನದ ಕಥಾಸಾರ, ಫ.ಗು.ಹಳಕಟ್ಟಿ ಸಮಗ್ರ ಸಾಹಿತ್ಯ ಸಂಪುಟ: ೦೯ ಪುಟ:೪೧೮–೧೯.
೧೯. ಸಂ. ಡಾ. ಎಸ್. ವಿದ್ಯಾಶಂಕರ, ಸಂಕೀರ್ಣ ವಚನ ಸಂಪುಟ:೦೨. ವಚನ :೫೬, ಬಸವಯುಗದ ವಚನ ಮಹಾಸಂಪುಟ–೦೧, ಪುಟ–೧೨೦೪
೨೦. ಡಾ. ಎಂ. ಚಿದಾನಂದಮೂರ್ತಿ, ವಚನಶೋಧ–೧, ಪುಟ–೨೯, ವರ್ಷ–೧೯೯೮.



# ಕಲ್ಯಾಣ ಕರ್ನಾಟಕದಲ್ಲಿ ಕನ್ನಡ ಸಾಹಿತ್ಯಕ್ಕೆ ಸೂಫಿಗಳ ಕೊಡುಗೆ.

**–ಡಾ. ಸಂತೋಷ ಜಗನ್ನಾಥ,**
ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ,
ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು,
ಜೇವರ್ಗಿ ಕಾಲೋನಿ, ಕಲಬುರ್ಗಿ.

**ಪೀಠಿಕೆ.**

ಸೂಫಿಗಳ ಜತೆಗಿನ ಒಡನಾಟವು ೧೪ನೇ ಶತಮಾನದಿಂದ ಲಭಿಸಿದರೂ ಕನ್ನಡ ಸಾಹಿತ್ಯ ಪರಂಪರೆಗೆ ಅದು, ಬಹುಶ: ೧೬ನೇ ಶತಮಾನದ ನಂತರ ಬರತೊಡಗಿತು. ಕೊಡೇಕಲ್ ಬಸವಣ್ಣ, ತಿಂತಣಿ ಮೋನಪ್ಪ ಮುಂತಾದ ಸಂತರಿಂದ ವಿರೂಪಾಕ್ಷ ಪಂಡಿತ, ನಂಜುಡಕವಿ ಮೊದಲಾದ 'ಕವಿ'ಗಳಿಂದ ಶುರುವಾದ ಈ ಒಡನಾಟವು, ಈಗ ಆಧುನಿಕ ಕಾಲದಲ್ಲಿ ಎಚ್.ಎಸ್.ಶಿವಪ್ರಕಾಶರತನಕ ಹರಿದು ಬಂದಿದೆ. ಒಬ್ಬೊಬ್ಬ ಲೇಖಕನೂ ಒಂದೊಂದು ಕಾಲಘಟ್ಟವೂ ಸೂಫಿಪಂಥಕ್ಕೆ ಸ್ಪಂದಿಸಿರುವ ರೀತಿಯಲ್ಲಿ ಸಹಜವಾಗಿ ವ್ಯತ್ಯಾಸಗಳಿವೆ. ಸ್ವತ: ಸಂತರಾದವರು, ಸೂಫಿ ಅನುಭಾವದಿಂದ ಪ್ರಭಾವ ಪಡೆದವರು, ಸೂಫಿಗಳ ಬದುಕಿನ ಕೆಲವು ಘಟನೆಗಳನ್ನು ಆಧುನಿಕ ಮೌಲ್ಯಗಳ ಕಣ್ಣಲ್ಲಿ ಮರುಕೊಳಿಸಿಕೊಂಡವರು, ಸೂಫಿಗಳನ್ನು ಮತೀಯ ಕಣ್ಣಲ್ಲಿ ಎದುರಾಳಿಗಳಂತೆ ಪರಿಭಾವಿಸಿದವರು ಎಷ್ಟೊಂದು ಬಗೆಯಲ್ಲಿ ಕನ್ನಡದ ಮನಸ್ಸುಗಳು ಪ್ರಕ್ರಿಯಿಸಿವೆ? ಈ ಹಲವು ಬಗೆಯ ಪ್ರಕ್ರಿಯೆಗಳಿಗೆ ಕಾರಣ, ಆಯಾ ಲೇಖಕರ ವೈಯಕ್ತಿಕ ಮನೋಭಾವ ಪಾತ್ರವಲ್ಲ, ಆ ಮನೋಭಾವವನ್ನು ಊಂಟುಮಾಡಿದ ಚಾರಿತ್ರಿಕ ಸಂದರ್ಭಗಳೂ ಕೂಡ.

**ಪುರಾಣ ಚಾರಿತ್ರಗಳು.**

ಸೂಫಿಪಂಥವನ್ನು ತಾತ್ವಿಕವಾಗಿ ಒಂದು ಅನುಭಾವ ಪಂಥವೆಂದು ತಿಳಿದು ಒಡನಾಡಿರುವ ಕವಿಗಳು ಕನ್ನಡದಲ್ಲಿ ಸಾಕಷ್ಟಿದ್ದಾರೆ. ಇವರು ಗ್ರಂಥ ಹಾಗೂ ಬಾಯಿ ಪರಂಪರೆಗೆ ಸೇರಿದವರು. ಸಾಮಾನ್ಯವಾಗಿ 'ಪುರಾಣ' 'ಚಾರಿತ್ರ' 'ಲೀಲೆ'ಗಳು ಅನುಭಾವಿ/ಸಂತರ ಕಥನಗಳು. ಕರ್ನಾಟಕದ ಯಾವುದೇ ಸೂಫಿಯನ್ನು ಕುರಿತು ಕನ್ನಡದಲ್ಲಿ ಸ್ವತಂತ್ರ ಕೃತಿ ಬಂದಿಲ್ಲವಾದರೂ, ಸೂಫಿ ಪ್ರಭಾವದಲ್ಲಿ ರೂಪಗೊಂಡು ಕುರಿತು 'ಲೀಲೆಗಳು' ಬಂದಿವೆ. ಇಲ್ಲಿ ಸೂಫಿಗಳ ಪ್ರಸ್ತಾಪ ಬರುತ್ತದೆ. ಕಡಲ ತಡಿಯ ಸೂಫಿಗಳು ಮುಳುಗುತ್ತಿರುವವರನ್ನು ಕಾಪಾಡುವ ಪವಾಡವೆಸಗುವುದು. ಸಾಮಾನ್ಯ ಇಲ್ಲಿ ಈ ಪವಾಡವನ್ನು ಮಕ್ಕೆಗೆ ಹೋಗಿರುವ ಮಳೆಯಮಲ್ಲೇಶ ಮಾಡುತ್ತಿದ್ದಾನೆ. ಖಾಜಿಯೊಡನೆ ಚದುರಂಗವಾಡುವಷ್ಟು ಅವನ ಸಲುಗೆ ಬೆಳೆದಿದೆ. 'ಚೆನ್ನಬಸವಪುರಾಣ'ದಲ್ಲಿ ಏಳನೂರು ಖಲಿಂದರರಿಗೆ ಮಳೆಯ ಮಲ್ಲೇಶ ಗುರುವಾದನು ಎಂದಷ್ಟೆ ಬರುತ್ತದೆ. ಆದರೆ 'ಗುರುರಾಜಚಾರಿತ್ರ'ದಲ್ಲಿ ಅವನು ಹೇಗೆ ಗುರುವಾದ ಎಂಬ ವರ್ಣನೆ ಬರುತ್ತದೆ. ಅಂದರಂತೆ, ಖಲಿಂದರು ಮಲ್ಲೇಶನಿಗೆ ಕಬ್ಬುನದ ಮರುಮುದ್ರೆ ನಿಮಗಿಲ್ಲ' ವೆಂದು ಹೀಯಾಳಿಸುತ್ತಾರೆ. ಕೂಡಲೇ ಮಲ್ಲೇಶನು ಕಾದಬ್ಬುನದ ತೋಡವನ್ನು ಧರಿಸಿ ಪವಾಡ ಮೆರೆಯುತ್ತಾನೆ. ದಿಲ್ಲಿಯ ಜನ ಮಳೆಬೇಡಲು ಮಳೆಬೇಡಲು ಮಳೆ ಸುರಿಸುತ್ತಾನೆ. ಬರಗಾಲಬಿದ್ದಾಗ ಮಳೆಸುರಿವ ಪವಾಡವನ್ನು ಅನೇಕ ಸೂಫಿಗಳಂತೆ ಮಳೆಯಮಲ್ಲೇಶ ತಾನೂ ಮಾಡಿದ್ದಾನೆ. ನೀರಿರಲ್ಲಿ ಮುಳುಗುವ ಜನರನ್ನು ಉಳಿಸುವ ಪವಾಡ ಒಂದು. ನೀರಿಲ್ಲದ ಜನಕ್ಕೆ ಮಳೆಸುರಿಸುವ ಪವಾಡ ಇನ್ನೊಂದು.

**ತತ್ವಪದಗಳೆಂಬ ರಚನೆಗಳು.**

೧೮, ೧೯ನೇ ಶತಮಾನಗಳಲ್ಲಿ ತುಂಗಭದ್ರೆ, ಕೃಷ್ಣಾ, ಭೀಮಾ ನದಿಗಳ ನಡುವಿನ ಸೀಮೆಯಲ್ಲಿ ಅನುಭಾವಿಗಳ ಒಂದು ಪರಂಪರೆ ಹೊರಹೊಮ್ಮಿತು. ನಾಥರು, ಸೂಫಿಗಳು, ಅಲ್ಲಮನಂಥ ಸಿದ್ಧರು, ಶತಮಾನಗಳ ಕಾಲ ಕೊಳ್ಳುಕೊಡೆ ನಡೆಸಿದ ಪರಿಣಾಮಗಳನ್ನೆಲ್ಲ ಈ ಪರಂಪರೆಯಲ್ಲಿ ಗುರುತಿಸಬಹುದಿತ್ತು. ಕಡಕೋಳದ ಮಡಿವಾಳಪ್ಪ, ಕೂಡಲೂರು ಬಸವಲಿಂಗ, ಚನ್ನೂರು ಜಲಾಲಸಾಬ, ಮೊಟನಹಳ್ಳಿ ಹಸನಸಾಬ, ಗೋನಾರೆ ಬಡೆಸಾಬ, ಶಿಶುನಾಳ ಶರೀಫ, ಸಾಹಿಬಣ್ಣತಾತ ಮುಂತಾದ 'ಕವಿ' ಅನುಭಾವಿಗಳು ಇದರೊಳಗೆ ಬರುತ್ತಾರೆ. ಇವರು 'ಸಾಹಿತ್ಯ' ರಚಿಸಿದ್ದೂರೂ, ಅದು ಇಡೀ ಪರಂಪರೆಯ ಒಂದು ಭಾಗ ಮಾತ್ರ, ಯಾಕೆಂದರೆ ಕವಿಗಳಲ್ಲದೆ ಅನೇಕ ಅವಧೂತರು, ಗೋವಿಂದಭಟ್ಟ, ಸಿದ್ಧಾರೂಢ, ಗರಗದ ಮಡಿವಾಳಪ್ಪ, ನಾಗಲಿಂಗಯತಿ, ಚೆಳ್ಳಗಿರ್ಕಿ ಯರ್ರಿತಾತ, ಇವರೆಲ್ಲ ಸಮುದಾಯಕ್ಕೆ ಅಷ್ಟೆ ಮುಖ್ಯರು. ಈ ಅವಧೂತರು ಸೂಫಿಗಳ ಜತೆ ನೇರವಾಗಿ, ಮಹಿಪತಿರಾಯ ಕಾಡಸಿದ್ಧ ಫಕಿರೇಶರಂತೆ ಸಂಬಂಧ ಪಡೆದವರಲ್ಲ. ಇವರ ಕಾಲಕ್ಕೆ ಅಮೀನುದ್ದೀನ್, ನಂದೆನವಾಜರಂಥ ಪ್ರಭಾವಶಾಲಿ ಸೂಫಿಗಳ ಕಾಲ ಮುಗಿದಿತ್ತು. ಶಿಶುನಾಳನು ಹುಲಗೂರಿನ ಹಜರೇಶಾ, ಬಂಕಾಪುರದ ಅಲ್ಲಾವೂದೀನ್ ಖಾದ್ರಿ ಅವರನ್ನು ಗುರುಗಳಂತೆ ನೆನೆಯುತ್ತಾನೆ. ಈ ಅವಧೂತರು ಸೂಫಿಗಳಂತೆ ದಖನಿಯನ್ನು ಬಳಸುವುದುಂಟಾದರೂ, ಫಾರಸಿ ಮೂಲಕ ಪರ್ಶಿಯಾ ಅಥವಾ ಅಖಿಲ ಭಾರತ ನೆಲೆಯಲ್ಲಿ ಸೂಫಿತತ್ವಜ್ಞಾನವನ್ನು ಪಡೆದವರಾಗಿರಲಿಲ್ಲ. ಸ್ಥಳೀಯ ಭಾಷೆಗಳಾದ ಕನ್ನಡ-ತೆಲುಗುಗಳನ್ನು ತಮ್ಮ ಅಭಿವ್ಯಕ್ತಿಗೆ ಬಳಸಿಕೊಂಡವರು. ತಾವು ಹುಟ್ಟಿಬೆಳೆದ ಪ್ರದೇಶಗಳ ಜನಸಮುದಾಯದಲ್ಲಿ ಬೇರು ಬಿಟ್ಟವರು. ಸೂಫಿ ದರ್ಶನವು ನಿಜವಾಗಿಯೂ ಸ್ಥಳೀಕರಣಗೊಂಡು, ಕನ್ನಡದ ಮೂಲಕ ವ್ಯಕ್ತವಾಗತೊಡಗಿದ್ದು, ಇಲ್ಲಿಂದ ಅನಿಸುತ್ತದೆ.

ಅನುಭಾವಿಗಳ ಮೇಲೆ 'ಪುರಾಣ' 'ಚಾರಿತ್ರ' 'ಲೀಲೆಗಳನ್ನು ಬರೆದವರೆಲ್ಲ ಭಕ್ತರು. ಅಭಿಮಾನಿಗಳು, ಸ್ವತಃ ಸಾಧಕರಲ್ಲ ಆದರೆ ಅನುಭಾವಿಗಳು ಸ್ವತಃ ಸಾಧಕರೂ ಕವಿಗಳೂ ಆಗಿದ್ದವರು. ಇವರು ಮೂಲತಃ ಗ್ರಂಥರಚನಕಾರರಲ್ಲ. ಜನಪದ ಶಾಹಿರರಂತೆ ಕೇವಲ ಬಾಯಿಪರಂಪರೆಯವರೂ ಅಲ್ಲ. ಎರಡರಲ್ಲೂ ನೀರಿನಂತೆ ಹರಿದಾಡಿದವರು, ಬಹುಶಃ ಇವರು ಪದಗಳನ್ನು ಕಟ್ಟಿ ಸಿಸುಮಕ್ಕಳ ಎದುರು ಹಾಡಿರಬೇಕು. ಇವರು ಕಾಲವಾದ ಬಳಿಕ ಪದಗಳು (ವಚನಗಳು) ಹಸ್ತಪ್ರತಿ ಪರಂಪರೆಗೆ ದಾಟಿರಬೇಕು. ಕಾಡಸಿದ್ದೇಶ್ವರ, ಮೋನಪ್ಪ, ಕೊಡೇಕಲ್ ಬಸವಣ್ಣ, ಕರಿಬಸವೇಶ್ವರ, ಕೂಡಲೂರು ಬಸಲಿಂಗ, ಮಹಿಪತಿರಾಯ, ಮೋಟ್ನಳ್ಳಿ ಹಸನಸಾಬ, ಸಾಹಿಬಣ್ಣತಾತ, ಮಾಣಿಕಪ್ರಭು, ಶರೀಫ ಇವರೆಲ್ಲ ಈ ಧಾರೆಗೆ ಸೇರಿದವರು. ಬೇರೆ ಬೇರೆ ಪ್ರಮಾಣಗಳಲ್ಲಿ ಸೂಫಿಪಂಥಗಳ ಸಂಪರ್ಕಕ್ಕೆ ಬಂದವರು. ಗುರುಶಿಷ್ಯ ಪರಂಪರೆಯನ್ನು ಉಳ್ಳವರು. ಈ ಕವಿಗಳಿಗೆ ಕನ್ನಡ ಸಾಹಿತ್ಯ ಪರಂಪರೆಯ ಜತೆಗೆ ಒಡನಾಟವಿತ್ತು.

ಶಿಶುನಾಳನು ಕಳೆದ ಹತ್ತು ವರುಷಬಗಳಿಂದ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಚರ್ಚೆಯಲ್ಲಿ ಹೆಚ್ಚು ಕಾಣಿಸಿಕೊಳ್ಳುತ್ತಿದ್ದಾರೆ. ಸಿನಿಮಾ, ಪುಸ್ತಕಗಳ ಮೂಲಕ ಶೀಶುನಾಳ ಕರ್ನಾಟಕದ ಶೈಕ್ಷಣಿಕ ವಲಯಕ್ಕೆ ಈಗೀಗ ಪರಿಚಿತನಾಗಿರಬಹುದು. ಆದರೆ ಅವರ ಮೂಲತಃ ಗದಗು ಸೀಮೆಯ ಜನಸಮುದಾಯದಲ್ಲಿ ಬೆರೆತುಹೋಗಿರುವವರು. ಸಮಸ್ಯೆಯೆಂದರೆ, 'ಮುಸ್ಲಿಮ'ರಾಗಿ ಗೋವಿಂದ ಭಟ್ಟನಂಥ 'ಹಿಂದು' ಗುರುವನ್ನು ಪಡೆದು, ಕನ್ನಡದಲ್ಲಿ ಪದರಚನೆ ಮಾಡಿರುವ ಸಂಗತಿಯು ಸಾಮರಸ್ಯವಾದಿಗಳ ಪಾಲಿಗೆ ಸಲೀಸಾಗಿ ಒದಗಿರುವ ನಿದರ್ಶನವಾಗಿರುವುದು. ಸಂಸ್ಕೃತಿಯ ಸೂಕ್ಷ್ಮಗಳಿರುವ ಸಂಗತಿಯೊಂದು, ಧಾರ್ಮಿಕ ಸಾಮರಸ್ಯಕ್ಕೆ ಬೇಡಿಕೆಯಿರುವ ಈ ದಿನಗಳಲ್ಲಿ, ಮಾರಾಟದ ಸರಕಾಗುವುದಕ್ಕೆ ಶಿಶುನಾಳ ಬಳಕೆಯೇ ಸಾಕ್ಷಿ.

**ಜನಪದ ಹಾಡುಗಳು.**

ಕರ್ನಾಟಕದ ಸೂಫಿ ಜನಪದ ಸಾಹಿತ್ಯದಲ್ಲಿ ಎರಡು ಧಾರೆಗಳಿವೆ. ಒಂದು ಶಾಹಿರರದು. ಇನ್ನೊಂದು ರಚಿಸಿದವರ ಗುರುತಿಲ್ಲದ ತ್ರಿಪದಿಗಳ ರೂಪದಲ್ಲಿ ಹೆಂಗಸರಲ್ಲಿ ಉಳಿದಿರುವಂಥದ್ದು.

ಶಾಹಿರರು ಒಂದಲ್ಲಾ ಒಂದು ಪಂಥದಲ್ಲಿ ಗುರುಬೋಧೆ ಪಡೆದವರು ಸ್ವತ: ಸೂಫಿಸಂತರ ಹೆಸರುಗಳನ್ನು ಇಟ್ಟುಕೊಳ್ಳುವವರು. ಇವರ ಹಾಡುಗಳಲ್ಲಿ ಸೂಫಿಸಂತರ ಕಥನಗಳೂ ಇರುತ್ತವೆ. ಆಯಾ ಶಾಹಿರನ ಸೀಮೆಯ ಸಂತರ ನೆನಪಿನಲ್ಲೆ ಶುರುವಾಗುತ್ತವೆ. ಇವನ್ನು ಯಾವುದಾದರೂ ಸಂತನ ಉರುಸಿನಲ್ಲಿ ಹಾಡಲಾಗುತ್ತದೆ. ಆದರೆ ಸೂಫಿಜನಪದ ಸಾಹಿತ್ಯದ ಸ್ತ್ರೀರಚನೆಗಳ ಧಾರೆ ತುಂಬಾ ಮಾರ್ದವವಾದುದು. ಶಾಹಿರ ಪರಂಪರೆಯಂತೆ ಇಲ್ಲಿ ಪುರುಷರಚನೆಗಳಿಲ್ಲ. ಪುರುಷರಚನೆಗಳಲ್ಲಿಗುರುಭಕ್ತಿಗಾಗಿ ಸಂತನೊಬ್ಬ ಪಟ್ಟ ಸಾಹಸಗಳ ಅಥವಾ ಇಬ್ಬರು ಸಂತರ ಮುಖಾಮುಖಿಯಲ್ಲಿ ಆದ ರೋಮಾಂಚಕ ಬಲಾಬಲಗಳ ಕಥನ ಇರುತ್ತದೆ. ಅವುಗಳ ರಚನೆಯಲ್ಲಿ ನೆರೆದ ಜನಸಮೂಹದಲ್ಲಿ ಹಾಡುವ, ಪ್ರದರ್ಶಿಸುವ, ಅಂಶಗಳು ಅಡಕವಾಗಿರುತ್ತವೆ.

**ಸಾಂಸ್ಕೃತಿಕ ಚಿಂತನೆಗಳು.**

ಕನ್ನಡದಲ್ಲಿ ಅನುಭಾವಿಗಳನ್ನು ಕುರಿತು ಬರುತ್ತಿರುವ ಸಾಂಸ್ಕೃತಿಕ ಚಿಂತನೆಗಳು ಬಹುಶ: ಶಂಬಾ ಅವರ ಪರಂಪರೆಯನ್ನು ಬೇರೊಂದು ರೀತಿಯಲ್ಲಿ ಮುಂದುವರೆಸುತ್ತಿವೆ. ಇದರ ಪರಿಣಾಮವಾಗಿ ಹುಟ್ಟಿದ ಸಂವೇದನೆಗಳು ಈ ಚಿಂತನೆಗಳನ್ನು ರೂಪಿಸಿದವು. ಈ ಚಿಂತನೆಗಳಿಗೆ ಶೈಕ್ಷಣಿಕ ಅಧ್ಯಯನಗಳಿಗಿಂತ ಭಿನ್ನವಾದ ಸಾಂಸ್ಕೃತಿಕ ಹೊಣೆಗಾರಿಕೆಯಿದೆ. ಸೂಫಿಗಳು ಈ ದೇಶದ ಸಮುದಾಯದ ಭಾಗವಾಗಿ ಸೃಷ್ಟಿಮಾಡಿರುವ ಜಾತ್ಯಾತೀತ ಸಂಸ್ಕೃತಿಯ ಜತೆ ಸಂವಾದ ಮಾಡುವುದು ಹಾಗೂ ಆ ಮೂಲಕ ವರ್ತಮಾನದ ಮತೀಯವಾದಿ ರಭಸಗಳನ್ನು ಎದುರಿಸಲು ಬೇಕಾದ ಬದಲಿ ಮನಸ್ಸನ್ನು ಕಟ್ಟುವುದು ಇವುಗಳ ಹಂಲವಾಗಿರುವಂತಿದೆ.

**ಆಧಾರ ಗ್ರಂಥಗಳು:**


೧) ಕರ್ನಾಟಕದ ಸೂಫಿಗಳು, ರಹಮತ ತರೀಕೆರೆ, ಪ್ರಕಾಶಕರು, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ–೧೯೯೮.

೨) ವಚನ ಸಂಸ್ಕೃತಿ, ಡಾ.ಬಸವರಾಜ ಸಬರದ, ಪ್ರಕಾಶಕರು ಪಲ್ಲವಿ ಪ್ರಕಾಶನ, ಗುಲಬರ್ಗಾ–೨೦೦೭

೩) ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಡಾ.ಸೂರ್ಯನಾಥ ಫ್ಹಿ. ಕಾಮತ್, ಪ್ರಕಾಶಕರು ಎಂ.ಸಿ.ಸಿ ಪಬ್ಲೀಕೇಷನ ಬೆಂಗಳೂರು–೨೦೦೫.

೪) ಕರ್ನಾಟಕದ ಇತಿಹಾಸ, ಪ್ರೋ.ಎಲ್.ಜಿ.ಭಟ್, ಪ್ರಕಾಶಕರು ವಿಜಯ ಬುಕ್‌ಡಿಪೋ, ಗದಗ–೨೦೦೬

೫) ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪರಾತತ್ವ, ಸಂಪಾದಕರು ಡಾ.ಆರ್.ಗೋಪಾಲ, ಪ್ರಕಾಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು–೨೦೦೭




# ಸಂಶೋಧನೆಯ ತಾತ್ವಿಕತೆ.

–ಶ್ರೀಮತಿ ಲಕ್ಷ್ಮೀಬಾಯಿ ಮಲ್ಲಿನಾಥ ಕುಂಬಾರ,
ಪ್ರತೀಕ್ಷಾ ನಿಲಯ #೩–೫೦
ಕುಂಬಾರ ಓಣಿ, ಶಹಾಪುರ, ಯಾದಗಿರಿ.

## ಪ್ರಸ್ತಾವನೆ.

ಯಾವುದೇ ವಿಷಯವಾಗಲಿ ಅದನ್ನು ಸಂಶೋಧನೆಗೆ ತೆಗೆದುಕೊಂಡಾಗ ತಾರ್ಕಿಕ, ವಸ್ತುನಿಷ್ಠ ಮತ್ತು ಕ್ರಮಬದ್ಧ ನೆಲೆಗಟ್ಟಿನಲ್ಲಿ ಅಧ್ಯಯನ ಮಾಡುವುದು ಅವಶ್ಯಕವೆನಿಸುತ್ತದೆ. ಇತಿಹಾಸ ಸಂಶೋಧಕನು ಪ್ರಮುಖವಾಗಿ ಆಯಾ ಕಾಲಘಟ್ಟದ ಚರಿತ್ರೆಯನ್ನು ಪುನಃರಚಿಸುವಲ್ಲಿ ಸಮಕಾಲೀನ ಆಕರಗಳನ್ನು ಬಳಸಿಕೊಂಡು ತಾತ್ವಿಕ ಚಿಂತನೆಯ ಮೂಲಕ ಶಾಸ್ತ್ರೀಯವಾಗಿ ಸಂಶೋಧನೆ ಕೈಗೊಂಡು ವೈಜ್ಞಾನಿಕವಾಗಿ ಅಧ್ಯಯನ ಮಾಡಿ ಅದರ ಫಲಿತಗಳನ್ನು ಸಮಾಜಕ್ಕೆ ಕೊಡುಗೆಯಾಗಿ ನೀಡುವದೇ ಆತನ ಮೂಲ ಗುರಿಯಾಗಿರುತ್ತದೆ. ಅದೇ ರೀತಿಯಾಗಿ ಇತಿಹಾಸದ ಅರ್ಥ, ವ್ಯಾಪ್ತಿ, ಉದ್ದೇಶ ಮತ್ತು ಇತರ ಜ್ಞಾನಶಾಖೆಗಳೊಡನೆ ಅದರ ಸಂಬಂಧ ಸಂಶೋಧಕನ ಸಿದ್ಧತೆ ಮುಂತಾದ ಎಲ್ಲಾ ವಿಷಯಗಳನ್ನು ಈ ಸಂಶೋಧನಾ ತಾತ್ವೀಕರಣ ಎಂಬುದು ವಿಸ್ತೃತಪಡಿಸುತ್ತದೆ. ಇಂಥ ಸಂಶೋಧನಾ ತಾತ್ವಿಕತೆಯ ಕುರಿತು ಇಲ್ಲಿ ವಿಶ್ಲೇಷಿಸಲಾಗಿದೆ.

## ಸಂಶೋಧನೆಯ ಪರಿಕಲ್ಪನೆ.

ಸಂಶೋಧನೆ ಎಂಬ ಪದದ ಕಲ್ಪನೆಯು ಬಹಳ ವಿಸ್ತೃತರೂಪದಲ್ಲಿ ಕಂಡುಬರುತ್ತದೆ. ಸಾಮಾನ್ಯವಾಗಿ ಬೆಳಕಿಗೆ ಬಾರದೆ ಮರೆಯಾಗಿರುವಂತಹ ಅನೇಕ ರೀತಿಯ ಸಂಗತಿಗಳನ್ನು ವಿಷಯಗಳನ್ನು ಹೊರತರುವ ಮತ್ತು ಅವುಗಳ ಬಗ್ಗೆ ಬೆಳಕು ಚೆಲ್ಲುವ ವಿಧಾನವಾಗಿದೆ.

ಇತಿಹಾಸಕ್ಕೆ ಸಂಬಂಧಿಸಿದಂತೆ ಗತಕಾಲದ ಮಾನವನ ಜೀವನ ಸಂಸ್ಕೃತಿಯನ್ನು ಹಲವು ದೃಷ್ಟಿಕೋನದಿಂದ ತಾತ್ವಿಕ ಚಿಂತನೆಯ ಮೂಲಕ ಆಧಾರ ಸಹಿತವಾಗಿ ಶಾಸ್ತ್ರೀಯ ಅಧ್ಯಯನ ಕೈಗೊಂಡು ಪನಃರಚಿಸುವುದೇ ಸಂಶೋಧನೆ. ಸಮಾಜ ವಿಜ್ಞಾನಕ್ಕೆ ಅದರದೇ ಆದ ಅಧ್ಯಯನ ವಿಧಾನ ಇರಲಿಲ್ಲ. ವಿಜ್ಞಾನ ವಿಧಾನವನ್ನು ಬಳಸಿಕೊಂಡು ಸಮಾಜ ವಿಜ್ಞಾನ ಒಂದು ಶಿಸ್ತುಬದ್ಧ ಶಾಸ್ತ್ರವಾಗಿ ರೂಪಗೊಂಡಿದೆ. ಸಮಾಜ ವಿಜ್ಞಾನದ ಈ ಬಗೆಯ ಬೆಳವಣಿಗೆಯಿಂದಾಗಿ ವಿಜ್ಞಾನದ ವಿಧಾನದ ಹಲವಾರು ಗುಣಗಳು ಸಮಾಜ ಥಿಯರಿಗಳನ್ನು ಅಂತರ್‌ವಾಗಿವೆ.

## ಸಂಶೋಧನೆ ಮತ್ತು ತಾತ್ವಿಕತೆಯ ಅರ್ಥ.

ಸಂಶೋಧನೆ ಎಂಬುದು ಖಿಇಜಚಿಡಿಛಿ ಎಂಬ ಪದದ ಅನುವಾದ. ಅದು ಖಇ ಎಂಬ ಪೂರ್ವ ಪ್ರತ್ಯಯ ಮತ್ತು ಖಜಚಿಡಿಛಿ ಎಂಬ ಪ್ರಕೃತಿಗಳ ಸಂಯುಕ್ತ ರೂಪವಾಗಿವೆ. ಖಇ ಎಂದರೆ ಚೆನ್ನಾಗಿ ಖಜಚಿಡಿಛಿ ಎಂದರೆ ಹುಡುಕು ಎಂಬರ್ಥ ಕೊಡುತ್ತದೆ. ಆದುದ್ದರಿಂದ ಖಿಇಜಚಿಡಿಛಿ ಎಂಬುದು ಚೆನ್ನಾಗಿ ಅಥವಾ ಸರಿಯಾಗಿ ಹುಡುಕು ಎಂಬ ಅರ್ಥವನ್ನು ಪ್ರತಿನಿಧಿಸುತ್ತದೆ. ಇದಕ್ಕೆ ಪರ್ಯಾಯವಾಗಿ ಸಂಶೋಧನೆ ಎಂದು ಕರೆಯಲಾಗಿದೆ. ಸಂಶೋಧನೆ ಎಂದರೆ ಶುದ್ಧಿಗೊಳಿಸು, ತಿದ್ದು ಎಂದರ್ಥ. ಪರ್ಯಾಯವಾಗಿ ಇದಕ್ಕೆ ಹುಡುಕು ಎಂಬರ್ಥ ಬಂಧು ಈ ಅರ್ಥವೇ ಈಗ ಪ್ರಬಲವಾಗಿದೆ.

ಕನ್ನಡ ಸಾಹಿತ್ಯ ಸಂಶೋಧನೆಯಲ್ಲಿ ತಾತ್ವಿಕತೆ ಎಂಬುದನ್ನು 'ಸೈದ್ಧಾಂತಿಕಕತೆ', 'ಧೋರಣೆ', ಮತ್ತು 'ವಿಧಾನ' ಇವುಗಳಿಗೆ ಸಂವಾದಿಯಾಗಿ ಬಳಸಲಾಗುತ್ತಿದೆ. ಈ ತಾತ್ವಿಕತೆ ಎಂಬುದನ್ನು ಇಂಗ್ಲೀಷ್‌ನಲ್ಲಿ

‘ಥಿಯಾರ್ಟಿಕಲ್’ ಎನ್ನುತ್ತಾರೆ. ಈ ಥಿಯಾರ್ಟಿಕಲ್ ಎನ್ನುವುದು ಥಿಯರಿಯಿಂದ ಬಂದಿದ್ದು, ಅದು ಕನ್ನಡದಲ್ಲಿ ‘ತತ್ವ’ ಎಂದಾಗುತ್ತದೆ.

ಪ್ರಾ.ಸಿ.ಟಿ ಕುರಿಯನ್ ಅವರು ‘ಅರ್ಥಶಾಸ್ತ್ರ ಸಂಶೋಧನೆ ಮಾರ್ಗದರ್ಶಿಕೆ’ ಎಂಬ ಕೃತಿಯಲ್ಲಿ ಕೊಟ್ಟ ಉದಾಹರಣೆಯಿಂದ ಸಂಶೋಧನೆ ಎಂದರೇ ಏನೆಂದು ಮನಗಾಣಬಹುದು. ಇಲ್ಲಿ ಕೊಲೆಯನ್ನು ಉದಾಹರಣೆಯಾಗಿ ನೀಡಿದ್ದಾರೆ. ಕೊಲೆಯಾದ ಸ್ಥಳವನ್ನು ಪೋಲಿಸ್‌ನವರು ವಿಕ್ಷೀಸಿ ಎಲ್ಲಾ ಮಾಹಿತಿಗಳನ್ನು ಕಲೆ ಹಾಕಿ, ಪೋಟೊ ತೆಗೆಯುತ್ತಾರೆ ಮತ್ತು ಆ ದೇಹವನ್ನು ಕಥಣ ಒಐಡಿಣಜಟ ಮಾಡಿಸುತ್ತಾರೆ. ಹೀಗೆ ಎಲ್ಲಾ ರೀತಿಯಿಂದ ಮಾಹಿತಿಯನ್ನು ಕಲೆಹಾಕುತ್ತಾರೆ. ಆಗ ಕೊಲೆಗಾರ ಯಾರು ಎಂಬುದು ತಿಳಿಯುವದಿಲ್ಲ. ನಂತರ ಹಿರಿಯ ಪೋಲಿಸ್ ಅಧಿಕಾರಿಗಳು ಮಾಹಿತಿ ಪರೀಕ್ಷಿಸಿ ಸಂಶಯಾಸ್ಪದ ವ್ಯಕ್ತಿಗಳನ್ನು ಪ್ರಶ್ನಿಸಿದಾಗ ಒಂದೊಂದಾಗಿ ಸಿಕ್ಕ ಮಾಹಿತಿಯೊಡನೆ ಜೋಡಿಸಿ ಆಧಾರವನ್ನು ಗೊತ್ತು ಮಾಡುತ್ತಾರೆ ಇದು ಸಂಶೋಧನೆಯ ಮಹತ್ವದ ಘಟ್ಟ. ಇದರ ಸಾಬೀತು ಕೋರ್ಟ್‌ನಲ್ಲಿ ಆಗಬೇಕಾಗುತ್ತದೆ. ವಿದ್ವತ್ ಸಂಶೋಧನೆಯ ಸಾಬೀತು ಆಯಾ ಕ್ಷೇತ್ರದ ವಿದ್ವಾಂಸರಿಂದ ಆಗಬೇಕಾಗುತ್ತದೆ.

ಸಂಶೋಧನೆಗೆ ಒಳಪಡುವ ಸಂಗತಿ/ಕುಟುಂಬ/ಸಮುದಾಯ ಇತ್ಯಾದಿ ಸಂಬಂಧಿಸಿದ ಮಾಹಿತಿಯನ್ನು ನೇರವಾಗಿ ಆ ಮೂಲಗಳಿಂದ ಪಡೆದರೆ ಅವುಗಳು ಪ್ರಾಥಮಿಕ ಮಾಹಿತಿ ಎಂದು ಪರಿಗಣಿಸಲಾಗುತ್ತದೆ. ಮಾಹಿತಿಯನ್ನು ಎರಡನೇ ಮೂಲದಿಂದ ಪಡೆದಿರುವ ಎನ್ನುವ ಅರ್ಥದಲ್ಲಿ ಅನುಷಂಗಿಕ ಮಾಹಿತಿ ಎನ್ನುವ ಪದ ಬಳಕೆಯಾಗುತ್ತದೆ.

**ಸಂಶೋಧನೆಯ ತಾತ್ವಕತೆಯ ವಿಶ್ಲೇಷಣೆ.**

ತತ್ವದಿಂದ ತಾತ್ವಿಕತೆ ರೂಪತಾಳಿದ್ದು, ಇದು ತತ್ವಶಾಸ್ತ್ರಕ್ಕೆ ಬುನಾದಿಯಾಯಿತು. ಜ್ಞಾನ ಎಂಬುದರ ಹುಟ್ಟು, ಬೆಳವಣಿಗೆ, ಅದರ ಪ್ರಭಾವ ಪ್ರೇರಣೆ ಅದರ ವಿವಿಧ ಧಾರೆಗಳು ಅದರ ಪರಿಣಾಮ ಮತ್ತು ಸ್ವರೂಪ ಮುಂತಾದ ವಿಷಯಗಳನ್ನು ವಿವರಿಸುವ ಶಾಸ್ತ್ರವೇ ತತ್ವಶಾಸ್ತ್ರವಾಗಿದೆ. ಹೀಗಾಗಿ ಸಂಶೋಧನೆಯ ತಾತ್ವಿಕತೆ ಎಂದರೆ ಸಂಶೋಧನೆಯಲ್ಲಿ ಜ್ಞಾನದ ಯಾವ ಶಾಸ್ತ್ರವನ್ನು ಬಳಸಲಾಗಿದೆ ಮತ್ತು ಅದನ್ನು ಹೇಗೆ ಬಳಸಲಾಗಿದೆ ಎಂಬುದರ ಗ್ರಹಿಕೆ ಸಂಶೋಧನೆಯಲ್ಲಿ ತತ್ವಜ್ಞಾನದ ಯಾವ ಆಲೋಚನೆ ಧಾರೆಯನ್ನು ಬಳಸಲಾಗಿದೆ ಎಂಬುದೆ ಸಾಮಾನ್ಯ ಗ್ರಹಿಕೆ.

ತತ್ವಜ್ಞಾನ ಎಂಬುದು ಲೋಕವನ್ನೇ ಗ್ರಹಿಸುವ, ಪರಿಭಾವಿಸುವ, ಅಂದಾಜಿಸುವ, ವಿವರಿಸುವ, ವಿಶ್ಲೇಷಿಸುವ, ಮೌಲ್ಯಮಾಪನ ಮಾಡುವ, ಅದನ್ನು ಬದಲಾಯಿಸುವ ತಿಳುವಳಿಕೆಯಾಗಿದೆ. ಸಂಶೋಧನೆಯಲ್ಲಿ ಇದರ ಪಾತ್ರ ತುಂಬಾ ಇದೆ. ಅಗೋಚರವಾದದ್ದನ್ನು ಗೋಚರವಾಗುವಂತೆ ಮಾಡಲು, ಅದರ ಸತ್ಯ ತಿಳಿಯಲು ವಾದ ಮತ್ತು ತರ್ಕ ಮಾರ್ಗಗಳೇ ಸಾಕ್ಷೀಯಾಗಿ ನಿಲ್ಲುತ್ತವೆ. ಅಂದರೆ ಸಮಾಜವನ್ನು ನೋಡುವ ಗ್ರಹಿಸುವ ವಿಧಾನ ಒಂದೇ ದಿಕ್ಕಾಗಿರದೇ ವಿಭಿನ್ನವಾಗಿರುತ್ತದೆ. ದೇಶ, ಭಾಷೆ, ರಾಜ್ಯ, ರಾಜಕೀಯ, ಸಾಮಾಜಿಕ, ಸಂಸ್ಕೃತಿ ಇವುಗಳನ್ನು ಗ್ರಹಿಸುವ ವಿಧಾನ ಇದೇ ರೀತಿಯಾಗಿರುತ್ತದೆ.

ಹೀಗೆ ತಾತ್ವೀಕರಣ ಎಂಬುದು ಸಂಶೋಧನೆಯಲ್ಲಿ ಜ್ಞಾನದ ಸ್ವರೂಪವನ್ನು ರೂಪಿಸುವ ನಿರ್ಧರಿಸುವ ಮತ್ತು ಪ್ರಭಾವಿಸುವ ವಿಷಯಕ್ಕೆ ಸಂಬಂಧಿಸಿದೆ.

ಸಂಶೋಧನೆಯ ತಾತ್ವಿಕತೆ ಎಂಬುದನ್ನು ಹೀಗೂ ವಿವರಿಸಿಕೊಳ್ಳಬಹುದು ಸಂಶೋಧನೆಗೆ ತತ್ವಶಾಸ್ತ್ರ ತಿಳುವಳಿಕೆಯ ಅಗತ್ಯವಿದೆಯೋ, ಇಲ್ಲವೋ ಒಂದು ವೇಳೆ ತತ್ವಶಾಸ್ತ್ರ ಅಗತ್ಯವಿದೆ ಎನ್ನುವುದಾದರೆ ಯಾವ ಕಾರಣಕ್ಕೆ ಅದರ ಅಗತ್ಯವಿದೆ. ಎಂಬಂತೆ ವಿಸ್ತರಿಕೊಳ್ಳತ್ತಿದೆ. ಅಲ್ಲದೇ ಸಂಶೋಧನೆ ಎಂಬ ಬೌದ್ಧಿಕ ಚಟುವಟಿಕೆಯಲ್ಲಿ ತತ್ವಶಾಸ್ತ್ರ ತಿಳುವಳಿಕೆಯ ಒಂದು ಪೂರ್ವೋಪಾದಿಯಾಗಿ ಇರುತ್ತದೆ.

ಸಂಶೋಧನೆಯ ಮಾತಿರಲಿ, ಸಾಮಾನ್ಯ, ಬೌದ್ಧಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳಿಗೆ ಕೂಡ ತತ್ವಶಾಸ್ತ್ರ ಅಗತ್ಯವಿದೆ. ತತ್ವಶಾಸ್ತ್ರ ಎಂಬುದು ಅತ್ಯಂತ ಸ್ಥೂಲಾರ್ಥದಲ್ಲಿ ಜಗತ್ತನ್ನು ನೋಡುವ ಮತ್ತು ಅದನ್ನು ಬದಲಾಯಿಸುವ ದೃಷ್ಟಿಕೋನ ಜಗತ್ತನ್ನು ನೋಡುವ ದೃಷ್ಟಿಕೋನವು ಕಡೆ ಪ್ರಜ್ಞಾಪೂರ್ವಕವಾದ ಪ್ರಯತ್ನ. ಅಧ್ಯಯನ ಚಿಂತನೆಗಳಿಂದ ಬರುತ್ತದೆ. ಸಮಾಜದ ಜೀವಿಗಳಿಗೆ ಸಾಮಾಜಿಕ ಸಂಬಂಧಗಳ ಕಾರಣದಿಂದ ಮತ್ತು ವಿವಿಧ ಬಗೆಯ ಉತ್ಪಾದನೆಗಳಲ್ಲಿ ತೊಡಗಿರುವ ಕಾರಣದಿಂದಲೂ ಬರುತ್ತದೆ.

**ಇತಿಹಾಸ ಸಂಶೋಧನೆಯ ತಾತ್ವಿಕತೆ ಮತ್ತು ಆಕರಗಳ ಪಾತ್ರ.**

ಮಾನವ ಜೀವನದಲ್ಲಿ ಗತಕಾಲದ ಬಗ್ಗೆ ವಿಚಾರ ಮಾಡಿ ಉಲ್ಲೇಖಿಸುವ ಅವಶ್ಯಕತೆ ಸಾರ್ವತ್ರಿಕವಾಗಿದೆ. ಭೂತಕಾಲದ ಪ್ರತಿ ಪ್ರಯೋಗದಲ್ಲಿ ಇತಿಹಾಸದ ತುಣುಕೇ ಆಗಿದೆ. ಕಾಲಗರ್ಭದಲ್ಲಿ ಅಡಗಿಹೋದ ಸಮಕಾಲೀನ ಇತಿಹಾಸದ ಬಗ್ಗೆ ನಮ್ಮಲ್ಲಿ ಕೂತೂಹಲ ಕೆರಳಿ ಅದನ್ನು ಮುಂದಿನ ತಲೆಮಾರಿನವರಿಗೆ ನೀಡುವದೇ ಇತಿಹಾಸ ಸಂಶೋಧನೆಯ ಉದ್ದೇಶವಾಗಿದೆ.

ವ್ಯಕ್ತಿಯ ಬದುಕನ್ನು ಸಂಪತ್ತು ಸಮೃದ್ಧಗೊಳಿಸುವ ಚಾರಿತ್ರಿಕ ವಿಷಯವು ಜನಸಮೂಹಕ್ಕೆ ಅವಶ್ಯಕವಾಗಿರುತ್ತದೆ. ಐತಿಹಾಸಿಕ ಭಾವನೆ ಮತ್ತು ಪ್ರತೀಕಗಳು ನಮ್ಮ ಬದುಕನ್ನು ರೂಪಿಸಿ ಮುಂದುವರೆಸುತ್ತವೆ. ಕಳೆದು ಹೋದ ಐತಿಹಾಸಿಕ ಘಟನೆಗಳನ್ನು ಯಥಾವತ್ತಾಗಿ ನಿರೂಪಿಸಿ ಅವುಗಳನ್ನು ದೃಗ್ಗೋಚರವಾಗುವಂತೆ ಪ್ರದರ್ಶಿಸುತ್ತೇವೆ. ನೆನಪುಗಳು ಮಾಸದಿರಲೆಂದು ಕಲಾಕೃತಿಗಳನ್ನು ಸಂರಕ್ಷಿಸಿ ಕಾಪಾಡುತ್ತೇವೆ ಮತ್ತು ಐತಿಹಾಸಿಕ ವಾರ್ಷಿಕೋತ್ಸವಗಳನ್ನು ಆಚರಿಸುತ್ತೇವೆ.

ಇತಿಹಾಸದಲ್ಲಿ ತಾತ್ವಿಕತೆ ಎಂದರೆ ವಿದ್ವಾಂಸನಿಗೆ ಪ್ರಾಗ್ಯೈತಿಹಾಸಿಕ ಮತ್ತು ಐತಿಹಾಸಿಕತೆಯ ಬಗ್ಗೆ ಇರಬೇಕಾದ ವಿಮರ್ಶಾತ್ಮಕ ತರ್ಕ ಬುದ್ಧಿಯೇ ಆಗಿದೆ. ಇತಿಹಾಸದಲ್ಲಿರುವ ಊಹಾಪೋಹ ವಸ್ತುಗಳನ್ನು ಬೇರ್ಪಡಿಸಿ, ಪುರಾಣ ಕಥೆಗಳನ್ನು ತೆಗೆದು ಘಟನೆ ಮತ್ತು ಯೋಗ್ಯ ಕಾರಣಗಳ ಸಹಿತ ಮಾರ್ಪಡಿಸುವುದೇ ಇತಿಹಾಸ ತತ್ವದ ಕರ್ತವ್ಯವಾಗಿದೆ. ಈ ಇತಿಹಾಸದ ತತ್ವವು ನಡೆದ ವಿಷಯಗಳನ್ನು ಸಂಘಟಿಸಿ ಪ್ರತಿಯೊಂದಕ್ಕೂ ಬುದ್ಧಗೆಟುಕುವ ನಿಯಮಗಳಿವೆಯೇ ಎಂಬುದನ್ನು ವಿವೇಚಿಸಿ ಅವು ಹೇಗೆ ನಾಗರೀಕತೆ ಅಥವಾ ಸಂಸ್ಕೃತಿಯಾಗಲು ಪ್ರಭಾವ ಬೀರಿದವು ಎಂಬುದನ್ನು ತಿಳಿಸುತ್ತದೆ.

ಆರ್.ಜಿ.ಕಾಲಿಂಗ್‌ವುಡ್‌ನ ಅಭಿಪ್ರಾಯದಲ್ಲಿ ಇತಿಹಾಸ ತತ್ವವು ಹಿಂದಿನ ಘಟನೆ ಮತ್ತು ಇತಿಹಾಸಕಾರನ ಕಲ್ಪನೆಗಳೆರಡರ ಪರಸ್ಪರ ಸಂಬಂಧವನ್ನು ತಿಳಿಸುತ್ತದೆ. ಇತಿಹಾಸವೆಲ್ಲವೂ ಬುದ್ಧಿಯ ಇತಿಹಾಸವೆಂದೇ ಕಾಲಿಂಗ್‌ವುಡ್ ಹೇಳುತ್ತಾರೆ. ಇದೇ ರೀತಿಯಾಗಿ ಇತಿಹಾಸಕಾರ ಕಾರ್ಲಮಾರ್ಕ್ಸ್, ಸ್ಪೆಂಗ್ಲರ್, ಟಾಯ್ನಾಬಿ ಮುಂತಾದವರೆಲ್ಲರೂ ತಮ್ಮದೇಯಾದ ತತ್ವ ಸಿದ್ಧಾಂತಗಳನ್ನು ಬೆಳೆಸಿಕೊಂಡಿದ್ದಾರೆ. ಸ್ಪೆಂಗ್ಲರ್‌ನು ಸಂಸ್ಕೃತಿಗಳ ಹುಟ್ಟು, ಬೆಳವಣಿಗೆ, ಅವನತಿಗಳನ್ನು ಪರೀಕ್ಷಿಸಿದನ್ನು. ಅದನ್ನು ಜೀವಕಣಗಳ ಹುಟ್ಟು, ಬೆಳವಣಿಗೆಗೆ ಹೋಲಿಸಿದನು. ಟಾಯ್ನಾಬಿಯು ಸಹ ನಾಗರಿಕತೆಯ ಹುಟ್ಟು, ಬೆಳವಣಿಗೆ, ಸಾವುಗಳ ಸಮಸ್ಯೆಗಳನ್ನು ಗಮನಿಸಿದನು. ಹೀಗೆ ಹಲವಾರು ವಿದ್ವಾಂಸರು ತಮ್ಮದೇಯಾದ ದೃಷ್ಠಿಪಥದಲ್ಲಿ ಸಂಶೋಧನೆ ಕೈಗೊಂಡು ಇತಿಹಾಸ ತತ್ವವನ್ನು ನಿರೂಪಿಸಿದರು.

ಪ್ರಗತಿಯೇ ಹಿಂದಿನದಕ್ಕೂ ಈಗಿನದಕ್ಕೂ ಸೇತುವೆ ಎಂಬ ಮಾತು ಇತಿಹಾಸದಲ್ಲಿ ಒಗ್ಗಟ್ಟಿನ ಭಾವನೆ ತಂದಿತು. ಇದೇ ಇತಿಹಾಸಕ್ಕೆ ವಿಜ್ಞಾನದ ಜೊತೆ ಮತ್ತು ಇತರ ವಿಜ್ಞಾನ ಶಾಸ್ತ್ರಗಳೊಡನೆ ಸ್ಥಾನ ಒದಗಿಸಿತು. ಹೀಗೆ ಸಂಶೋಧನೆಯಲ್ಲಿ ಇತಿಹಾಸದ ತಾತ್ವಿಕತೆಯನ್ನು ಹಲವಾರು ವಿದ್ವಾಂಸರು ವಿಭಿನ್ನ ದೃಷ್ಠಿಕೋನದಲ್ಲಿ ವಿಸ್ತೃತಪಡಿಸಿದ್ದಾರೆ. ಇತಿಹಾಸವು ವೀಕ್ಷಣೆಯನ್ನು ಸುವ್ಯವಸ್ಥೆಗೊಳಿಸುತ್ತದೆ ಮತ್ತು ತತ್ವವು ಅದನ್ನು ನಿಯಮಗಳಿಗೆ ಒಳಪಡಿಸುತ್ತದೆ.

**ಪ್ರಾಕ್ತನ ಆಕರಗಳು.**

ಪ್ರಾಕ್ತನ ಆಕರಗಳೆಂದರೆ ಪ್ರಾಚ್ಯವಶೇಷಗಳೆ ಆಗಿವೆ. ಇಲ್ಲಿ ಮುಖ್ಯವಾಗಿ ಉತ್ಖನನಗಳು, ಪ್ರಾಚ್ಯವಶೇಷಗಳು ಪುರಾತತ್ವ ಸಂಶೋಧನೆಯಲ್ಲಿ ಪ್ರಮುಖ ಆಕರಗಳಾಗಿ ನಿಖರ ಮಾಹಿತಿಗಳನ್ನು ತಿಳಿಸಿಕೊಡುತ್ತವೆ. **ಉದಾ :** ಶಿಲಾಯುಗದ ಮಾನವನ ಸಂಸ್ಕೃತಿಯನ್ನು ಪುನಃರಚಿಸಲು ಆತನು ಬಳಸಿದ ಆಯುಧಗಳೆ ಅಧ್ಯಯನದ ಆಕರಗಳಾದವು. ಅದರಂತೆ ಸಿಂಧೂ ನಾಗರಿಕತೆಯ ಬಗ್ಗೆ ಅತ್ಯಂತ ನಿಖರವಾದ ಮಾಹಿತಿಯನ್ನು ಒದಗಿಸುವಲ್ಲಿ ಸಮಕಾಲೀನದಲ್ಲಿ ದೊರೆತ ಮಡಿಕೆ–ಕುಡಿಕೆಗಳು, ಪ್ರಾಚ್ಯವಸ್ತಗಳು, ಉತ್ಖನನದಲ್ಲಿ ದೊರೆತ ಹಲವು ಪ್ರಕಾರದ ಅವಶೇಷಗಳಾಗಿವೆ. ಇವುಗಳ ಆಧಾರವಾಗಿಯೇ ಇತಿಹಾಸ ವಿದ್ವಾಂಸರು, ಪುರಾತತ್ವಜ್ಞರು ಆಯಾ ಕಾಲಘಟ್ಟದ ಚರಿತ್ರೆಯನ್ನು ಜಗತ್ತಿಗೆ ಕೊಡುಗೆಯಾಗಿ ನೀಡಿದರು.

ಅದೇ ರೀತಿಯಾಗಿ ಪ್ರಾಚೀನ ಇತಿಹಾಸ ಸಂಶೋಧನೆಯಲ್ಲಿ ಮುಖ್ಯವಾಗಿ ಶಾಸನಗಳು, ನಾಣ್ಯಗಳು, ದೇವಾಲಯ, ವಾಸ್ತುಶಿಲ್ಪ, ವೀರಗಲ್ಲು, ಮಹಾಸತಿಗಲ್ಲು, ಕೋಟೆ–ಕೋತ್ತಲಗಳು ಇವೆಲ್ಲವೂ ಕೂಡ ನಿಖರ ಸ್ಪಷ್ಟ ಮಾಹಿತಿಯನ್ನು ನೀಡುವ ಪ್ರಾಕ್ತನ ಆಕರಗಳಾಗಿವೆ.

**ಸಾಹಿತ್ಯಿಕ ಆಕರಗಳು.**

ಇತಿಹಾಸ ಸಂಶೋಧಕನು ಚರಿತ್ರೆಯನ್ನು ಕಟ್ಟುವಲ್ಲಿ ಪ್ರಮುಖವಾಗಿ ಸಾಹಿತ್ಯಿಕ ಆಕರಗಳ ಮೊರೆಹೋಗಬೇಕಾಗುತ್ತದೆ. ಇಲ್ಲಿ ಮುಖ್ಯವಾಗಿ ಸಮಕಾಲೀನ ರಾಜಮನೆತಗಳ ಐತಿಹಾಸಿಕತೆಯನ್ನು ನಿರೂಪಿಸಬೇಕಾದರೆ ಆ ಕಾಲದಲ್ಲಿ ರಚಿತಗೊಂಡ ಗ್ರಂಥಭಂಡಾರಗಳೇ ಸಂಶೋಧನೆಯಲ್ಲಿ ಪ್ರಮುಖ ಸಾಹಿತ್ಯಿಕ ಆಕರಗಳಾಗಿವೆ. ಆಯಾ ಕಾಲದಲ್ಲಿ ರಾಜಾಶ್ರಯ ಪಡೆದ ಕವಿಗಳು ಅಂದಿನ ಸ್ಥಿತಿಗತಿಯನ್ನು ಕಣ್ಣಾರೆ ಕಂಡು ದಾಖಲೆಯ ರೂಪದಲ್ಲಿ ಹಸ್ತಪ್ರತಿಯ ರೂಪದಲ್ಲಿ ಯಥಾವತ್ತಾಗಿ ನಿರೂಪಿಸಿದ್ದೇ ಸಾಹಿತ್ಯ ಕೃತಿಗಳೆ ಐತಿಹಾಸಿಕ ಕೃತಿಗಳಾಗಿವೆ. ಇದೇ ಇಂದಿನ ಸಂಶೋಧನೆಯ ತಾತ್ವಿಕ ನಿಖರ ಆಕರಗಳಾಗಿವೆ.

ಈ ರೀತಿಯಾಗಿ ಇತಿಹಾಸ ತಾತ್ವಿಕ ಸಂಶೋಧನೆಯಲ್ಲಿ ಪ್ರಾಕ್ತನ ಮತ್ತು ಸಾಹಿತ್ಯಿಕ ಆಕರಗಳು ಸಂಶೋಧಕನಿಗೆ ತಾತ್ವಿಕ ಚಿಂತನೆಯ ಜೊತೆಗೆ ವಿಮರ್ಶಾತ್ಮಕತೆಯನ್ನು ಹುಟ್ಟುಹಾಕುತ್ತವೆ.

**ಸಂಶೋಧನೆಯಿಂದ ತಾತ್ವಿಕತೆಯೋ, ತಾತ್ವಿಕತೆಯಿಂದ ಸಂಶೋಧನೆಯೋ.**

ತಾತ್ವಿಕತೆಯಿಂದ ಸಂಶೋಧನೆ ಎಂಬುದರ ಬಗ್ಗೆ ಗಮನಿಸಿದರೆ, ಒಂದು ವಿಷಯವನ್ನು ಕುರಿತು ಸಂಶೋಧನೆ ಮಾಡಬೇಕೆಂದುಕೊಂಡಾಗ ಅದಕ್ಕೆ ಸಂಬಂಧಿಸಿದ ಕೆಲವೊಂದು ನೀತಿ, ನಿಯಮ, ತಿರ್ಮಾನ, ತತ್ವಗಳನ್ನು ಮೊದಲೇ ಮಾಡಿಕೊಳ್ಳುವುದು, ಅಂದರೆ ಸಂಶೋಧನೆಗೆ ಬೇಕಾದಂತ ಚೌಕಟ್ಟನ್ನು ಮೊದಲೇ ರೂಪಿಸಿಕೊಳ್ಳವುದೇ ತಾತ್ವಿಕತೆಯಿಂದ ಸಂಶೋಧನೆ ಎಂಬುದನ್ನು ತಿಳಿಯಬಹುದು. ಈ ಸಂಶೋಧನಾ ಚೌಕಟ್ಟಿಗೆ ಅನುಗುಣವಾಗಿ ಅಕರಗಳನ್ನು, ಮಾಹಿತಿಗಳನ್ನು, ಅಂಕಿಸಂಖ್ಯೆಗಳನ್ನು, ಸಂಗ್ರಹಿಸುವುದು ಹೀಗೆ ಸಂಗ್ರಹಿಸಿದ ಆಕರಗಳನ್ನು ಮದಲೇ ರೂಪಿಸಿಕೊಂಡಿದ್ದ ಚೌಕಟ್ಟಿಗೆ ಜೋಡಿಸುವುದು. ಈ ಚೌಕಟ್ಟಿಗೆ ಸಂಶೋಧನೆಯ ಆಕರಗಳು ಹೊಂದಲಿಲ್ಲ ಎಂದಾದರೆ ಅಂತಹ ಆಕರಗಳನ್ನು ನಮ್ಮ ಸಂಶೋಧನೆಯಿಂದ ಹೊರಗಿಡುವುದು. ಇಲ್ಲಿ ಆಕರಗಳ ಆಯ್ಕೆ ಮತ್ತು ನಿರಾಕರಣೆ ನಡೆಯುತ್ತದೆ. ಜೊತೆಗೆ ಮೊದಲೆ ಹಾಕಿಕೊಂಡಿದ್ದ ವೈಚಾರಿಕ ಪ್ರಮೇಯವನ್ನು ಸಂಶೋಧನೆಯ ಆಕರ ಪ್ರಶ್ನೆ ಮಾಡುವಂತಿದ್ದರೆ ನಿರಾಕರಿಸುವಂತಿದ್ದರೆ ಅವುಗಳನ್ನು ಪರಿಗಣಿಸುವುದೇ ಇಲ್ಲ. ಒಟ್ಟಿನಲ್ಲಿ ಮೊದಲೆ ರೂಪಿಸಿಕೊಂಡಿದ್ದ ತಾತ್ವಿಕ ಚೌಕಟ್ಟನ್ನು ಆಕರಗಳ ನೆರವಿಂದ ಸಮರ್ಥಿಸುವುದು ತಾತ್ವಿಕತೆಯಿಂದ ಸಂಶೋಧನೆಯ ಸ್ವರೂಪವಾಗಿದೆ.

ಅದೇ ರೀತಿ ಸಂಶೋಧನೆಯಿಂದ ತಾತ್ವಿಕತೆ ಎಂಬುದರ ಬಗ್ಗೆ ಕೆಳಗಿನಂತೆ ವಿಶ್ಲೇಷಿಸಬಹುದು. ಪ್ರತಿಯೊಂದು ಸಂಶೋಧನಾ ವಿಷಯದ ಒಳಗೆಯೇ ಅದನ್ನು ವಿಶ್ಲೇಷಿಸಬಹುದಾದ ಕೆಲವು

ವಿಧಾನಗಳಿರುತ್ತವೆ. ಇದನ್ನು ನಿರ್ಗಮನ ವಿಧಾನ ಎನ್ನುವರು. ಇಲ್ಲಿ ಸಂಶೋಧನೆಗೆ ಪೂರ್ವ ತೀರ್ಮಾನಗಳು ಇರುವದಿಲ್ಲ. ಸಂಶೋಧನೆ ನಡೆಸುವ ಗುರಿ, ಉದ್ದೇಶಗಳಿರುತ್ತವೆ. **ಉದಾ :** ವಿಜಯನಗರದ ಯುದ್ಧ ಮತ್ತು ಸೈನ್ಯ ಎಂಬ ವಿಷಯವನ್ನು ಸಂಶೋಧನೆಗೆ ಆಯ್ಕೆ ಮಾಡಿಕೊಂಡರೆ ಅದಕ್ಕೆ ಮೊದಲೆ ಚೌಕಟ್ಟನ್ನು ನಿರ್ಮಿಸಿಕೊಳ್ಳುವ ಅಗತ್ಯವಿಲ್ಲ. ಬದಲಾಗಿ ಆ ಕಾಲಘಟ್ಟಕ್ಕೆ ಸಂಬಂಧಿಸಿದ ಕೆಲವು ಗ್ರಂಥಭಂಡಾರವು ವಿಜಯನಗರದ ಯುದ್ಧ ಮತ್ತು ಸೈನ್ಯಕ್ಕೆ ಸಂಬಂಧಿಸಿದ ಮಾಹಿತಿ ಸಿಗುತ್ತದೆ. ಅವು ಯಾವ ರೀತಿಯಲ್ಲಿ ವಿಶ್ಲೇಷಿಸಿವೆ ಎಂಬುದರ ಹುಡುಕಾಟ ಶುರುವಾಗುತ್ತದೆ. ಇದು ಸಂಶೋಧನೆಯಿಂದ ತಾತ್ವಿಕತೆಯನ್ನು ಕಂಡುಕೊಳ್ಳುವುದಾಗುದೆ.

**ಸಮಾರೋಪ.**

ಸಂಶೋಧನೆಯ ಕುರಿತು ಮೇಲಿನ ಒಟ್ಟು ವಿಸ್ತೃತ ವಿಶ್ಲೇಷಣೆಯನ್ನು ಪರಿಶೀಲಿಸುವುದಾರೆ ಹಲವಾರು ವಿಷಯಗಳಲ್ಲಿ ಸಂಶೋಧಕನು ಅಧ್ಯಯನ ಕೈಗೊಳ್ಳುವಲ್ಲಿ ಸತ್ಯಾಂಶವನ್ನು ಸಮಾಜಕ್ಕೆ ತೋರಿಸಲ್ಪಡುವುದೇ ಈ ಸಂಶೋಧನೆಯ ತಾತ್ವಿಕತೆಯ ಮೂಲ ತಿರುಳು. ಜೊತೆಗೆ ಪ್ರಸ್ತುತವಾಗಿ ಸಂಶೋಧಕರು ವಸ್ತುನಿಷ್ಠತೆ, ಭಾವನಿಷ್ಠತೆ ಮತ್ತು ತಾತ್ವಕ ಚಿಂತನೆಗಳನ್ನು ಮೈಗೂಡಿಸಿಕೊಂಡು ವಿಮರ್ಶಾತ್ಮಕವಾಗಿ, ತರ್ಕಬದ್ಧವಾಗಿ, ಕ್ರಮಬದ್ಧವಾಗಿ ಒಂದು ವಿಷಯದ ಕುರಿತು ಅಧ್ಯಯನ ಕೈಗೊಳ್ಳಬೇಕೆಂಬುದನ್ನು ತಿಳಿಸಿಕೊಡುತ್ತದೆ.

**ಆಕರ ಗ್ರಂಥಗಳು:**


೧. ಚಂದ್ರ ಪೂಜಾರಿ.ಎಂ, 'ಸಂಶೋಧನ ಜವಾಬ್ದಾರಿ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೮.
೨. ಚಂದ್ರ ಪೂಜಾರಿ.ಎಂ, 'ಸಮಾಜ ಸಂಶೋಧನ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೧೧.
೩. ಚಂದ್ರ ಪೂಜಾರಿ.ಎಂ, 'ಸಂಶೋಧನೆ ಏನು? ಏಕೆ? ಹೇಗೆ?', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೧೧.
೪. ಚಿದಾನಂದಮೂರ್ತಿ.ಎಂ, 'ಸಂಶೋಧನೆ', ಡಿ.ವಿ.ಕೆ.ಮೂರ್ತಿ ಪ್ರಕಾಶನ ಮೈಸೂರು–೨೦೦೨.
೫. ಚಿದಾನಂದಮೂರ್ತಿ.ಎಂ, 'ಸಂಶೋಧನೆ : ತಾತ್ವಿಕ ಮತ್ತು ಆನ್ವಯಿಕ', ಸಪ್ನ ಬುಕ್‌ಹೌಸ್ ಬೆಂಗಳೂರು–೨೦೧೩.
೬. ನಾಯಕ್.ಡಿ.ಬಿ, 'ಸಾಹಿತ್ಯ ವಿಮರ್ಶೆ', ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ–೨೦೧೦.
೭. ವೆಂಕಟರತ್ನಂ.ಎ.ವ್ಹಿ, ಪದ್ಮ.ಎಂ.ಬಿ, 'ಇತಿಹಾಸ ಸಂಶೋಧನಾ ಮಾರ್ಗ', ಬೆಂಗಳೂರು ಪ್ರಿಂಟಿಂಗ್ & ಪಬ್ಲಿಸ್ಸಿಂಗ್ ಕಂಪನಿ ಲಿ, ಬೆಂಗಳೂರು–೨೦೦೩.
೮. ಶಿರೂರು.ಬಿ.ವಿ, 'ಸಂಶೋಧನ ಸ್ವರೂಪ', ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ–೧೯೯೨.




# ವಿಶ್ವ ಯೋಗ ದಿನ : ಮಹತ್ವ ಮತ್ತು ಇತಿಹಾಸ, ಯೋಗದ ಲಾಭಗಳು.

**–ಜಯಲಕ್ಷ್ಮಿ ಎಸ್. ಹಾವಪ್ಪಗೋಳ,**
ದೈಹಿಕ ಶಿಕ್ಷಣ ನಿರ್ದೇಶಕರು,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಫರಹತಾಬಾದ.

ಬಾಹ್ಯ ಸೌಂದರ್ಯ ಎಷ್ಟು ಮುಖ್ಯವೋ ಹಾಗೆಯೇ ಆಂತರಿಕ ಸೌದರ್ಯ ಕೂಡ ದೇಹಕ್ಕೆ ಮುಖ್ಯವಾಗಿರುತ್ತದೆ. ಪ್ರತಿ ನಿತ್ಯವೂ ಮನುಷ್ಯನ ಜೀವನದಲ್ಲಿ ವ್ಯಾಯಾಮ ಎನ್ನುವುದು ಪ್ರಮುಖ ಪಾತ್ರವನ್ನು ವಹಿಸುತ್ತದೆ. ವರ್ಷದಲ್ಲಿ ಉತ್ತರ ಗೋಳಾರ್ಧದ ಅತಿ ಉದ್ದದ ಹಾಗೂ ದಕ್ಷಿಣ ಗೋಳಾರ್ಧದ ಅತಿ ಚಿಕ್ಕ ದಿನವನ್ನು ಅಂತರಾಷ್ಟ್ರೀಯ ಯೋಗ ದಿನಾಚರಣೆಗೆ ಆಯ್ಕೆ ಮಾಡಲಾಗಿದೆ. ಇದನ್ನು ಬೇಸಿಗೆ ಅಯನ ಸಂಕ್ರಾಂತಿ ದಿನವೆಂದು (ವರ್ಷದಲ್ಲಿನ ಅತ್ಯಂತ ಹೆಚ್ಚು ಹಗಲುಳ್ಳ ದಿನ) ಕರೆಯಲಾಗುತ್ತದೆ. ಯೋಗದ ದೃಷ್ಟಿಕೋನದಲ್ಲಿ ಇದು ಅತ್ಯಂತ ಹೆಚ್ಚು ಮಹತ್ವ ಪಡೆದಿದೆ. ಇದು ದಕ್ಷಿಣಯಾನಕ್ಕೆ ಪರಿವರ್ತನೆ ಎಂದು ಗುರುತಿಸಲಾಗುತ್ತದೆ.

ಜೂನ್ ೨೧ ಅವಿಸ್ಮರಣೀಯ ದಿನ. ಅಂದು ಇಡೀ ಜಗತ್ತು ಯೋಗಮಯವಾಗುತ್ತದೆ. ೨೦೧೪ರ ಡಿಸೆಂಬರ್ ೧೧ರಂದು ವಿಶ್ವಸಂಸ್ಥೆಯಲ್ಲಿ ನಡೆದ ಸಾಮಾನ್ಯ ಸಭೆಯಲ್ಲಿ ಜೂನ್ ೨೧ರಂದು 'ಅಂತರಾಷ್ಟ್ರಿಯ ಯೋಗ ದಿನ'ವನ್ನು ಆಚರಿಸಬೇಕೆಂದು ತೀರ್ಮಾನಿಸಲಾಯಿತು. ಅಂದಿನಿಂದ ಪ್ರತಿವರ್ಷ ಜೂನ್ ೨೧ರಂದು ಜಾಗತಿಕ ಮಟ್ಟದಲ್ಲಿ ಅಂತರಾಷ್ಟ್ರಿಯ ಯೋಗದಿನವೆಂದು ಆಚರಿಸಲಾಗುತ್ತದೆ. ಜೂನ್ ೨೧ 'ಗ್ರೀಷ್ಮ ಸಂಕ್ರಾಂತಿ'ಯ ದಿನ, ಸೂರ್ಯ ಉತ್ತರ ದಿಕ್ಕಿನಿಂದ ಪೂರ್ವ ದಿಕ್ಕಿಗೆ ಚಲಿಸುವ ಸಮಯ. ಈ ಕಾರ್ಯಸಾಧನೆಯಲ್ಲಿ ಭಾರತದ ಪ್ರಧಾನ ಮಂತ್ರಿ ನರೇಂದ್ರ ಮೋದಿಯವರ ಪ್ರೇರಣೆ ಬಹಳ ಮುಖ್ಯವಾದುದು. ೧೭೫ ರಾಷ್ಟ್ರಗಳು ಯೋಗ ದಿನಕ್ಕೆ ತಮ್ಮ ಸಹಮತಿಯನ್ನು ಸೂಚಿಸಿವೆ. ಅಂತರಾಷ್ಟ್ರಿಯ ಯೋಗ ದಿನಾಚರಣೆಗಾಗಿ, ೫ ನಗರಗಳು ದೆಹಲಿ, ಅಹಮದಾಬಾದ್, ಸಿಮ್ಲಾ, ರಾಂಚಿ, ಕರ್ನಾಟಕದ ಸಾಂಸ್ಕೃತಿಕ ನಗರಿ ಮೈಸೂರು ಆಯ್ಕೆಯಾಗಿವೆ. ಯೋಗ ದಿನಾಚರಣೆಗೆ ಕೇಂದ್ರ ಸರ್ಕಾರ, ಆಯುಷ್ ಮಂತ್ರಾಲಯ, ಬ್ರಹ್ಮಾಕುಮಾರಿ ಈಶ್ವರೀಯ ವಿಶ್ವ ವಿದ್ಯಾಲಯ ಮತ್ತು ಅನೇಕ ಸಂಘ ಸಂಸ್ಥೆಗಳು ಕೈ ಜೋಡಿಸಿವೆ. ಭಾರತ ತಪೋಭೂಮಿ, ಯೋಗಿಗಳ ತಾಣ, ಆಧ್ಯಾತ್ಮದಲ್ಲಿ ವಿಶ್ವದ ದಾರಿದೀಪವೆಂದು ಪ್ರಸಿದ್ಧವಾಗಿದೆ.

ಯೋಗ ಎನ್ನುವ ಶಬ್ದದ ಉಗಮ ಸಂಸ್ಕೃತದ "ಯುಜ್"ನಿಂದ ಆಗಿದೆ. "ಯುಜ್" ಎಂದರೆ ಜೋಡಿಸು, ಕೂಡಿಸು, ಸಂಬಂಧಿಸು. ಪತಂಜಲಿ ಮಹರ್ಷಿಗಳ ಪ್ರಕಾರ 'ಯೋಗಃಚಿತ್ತವೃತ್ತಿ ನಿರೋಧಃ' ಯೋಗವೆಂದರೆ ಮನಸ್ಸಿನ ಚಂಚಲ ವೃತ್ತಿಗಳನ್ನು ನಿರೋಧಿಸುವುದು." ವಸಿಷ್ಠ ಮಹರ್ಷಿಗಳು "ಮನಃ ಪ್ರಶಮನೋಪಾಯಃ ಯೋಗಃ ಇತಿ ಅಭಿಧೀಯತೆ" ಮನಸ್ಸನ್ನು ಪ್ರಶಾಂತಗೊಳಿಸುವ ಸುಂದರ ಉಪಾಯವೇ ಯೋಗವೆಂದು ಹೇಳಿದ್ದಾರೆ. "ಯೋಗಃ ಸಮತ್ವಂ ಉಚ್ಚತೇ' ಯೋಗವೆಂದರೆ, ಕಾರ್ಯವ್ಯವಹಾರದಲ್ಲಿ ಸಮಭಾವ, ಸಮಚಿತ್ತವಾಗಿರುವುದು. ಸ್ತುತಿ–ನಿಂದನೆ, ಮಾನ–ಅಪಮಾನ, ಸುಖ–ದುಃಖ, ನೋವು–ನಲಿವು ಇತರೆ ಪರಿಸ್ಥಿತಿಗಳಲ್ಲಿ ಸಮಭಾವವನ್ನು ಹೊಂದುವುದೇ ಯೋಗವೆಂದು ಭಗವದ್ಗೀತೆ ಹೇಳುತ್ತದೆ. ಯೋಗವೆಂದರೆ ಕೆಲವರು ಪ್ರಾಣಾಯಾಮ ಅಥವಾ ಯೋಗಾಸನವೆಂದು ತಿಳಿದಿದ್ದಾರೆ. ಆದರೆ ಯೋಗವು ಆತ್ಮನ ಚಂಚಲ ಮನಸ್ಸನ್ನು ಏಕಾಗ್ರಗೊಳಿಸಬಲ್ಲ ಮನೋವ್ಯಾಯಾಮವಾಗಿದೆ. ಅದೇನೇ ಇರಲಿ ಯೋಗವೆಂದರೆ ಸರ್ವ ಮನೋವೃತ್ತಿಗಳ ಮೇಲೆ ಪ್ರಭುತ್ವವನ್ನು ಸ್ಥಾಪಿಸುವುದು. ವರ್ತಮಾನ ಸಮಯದಲ್ಲಿ ಯೋಗದಲ್ಲಿ ಹಠಯೋಗ, ಸನ್ಯಾಸಯೋಗ, ಭಕ್ತಿಯೋಗ, ಕರ್ಮಯೋಗ, ಜ್ಞಾನಯೋಗ, ರಾಜಯೋಗ, ಶುಭಯೋಗ, ಲಾಭಯೋಗ, ಯೋಗಾ–ಯೋಗ ಇತ್ಯಾದಿ ಅನೇಕ ಪ್ರಕಾರಗಳು ಇವೆ.

**ಯೋಗದ ಮಹತ್ವ ಹಾಗೂ ಸಂದೇಶ:** ಯೋಗವು ಪ್ರಪಂಚಕ್ಕೆ ಭಾರತೀಯರ ಕೊಡುಗೆ ಎಂದು ಹೇಳಲು ಹೆಮ್ಮೆ ಯಾಗುತ್ತದೆ. ಜೂನ್ ೨೧ರಂದು ಇಡೀ ವಿಶ್ವವೇ ಯೋಗ ದಿವಸವೆಂದು ಆಚರಿಸುತ್ತಿರುವುದು ನಿಜಕ್ಕೂ ಸಂತೋಷದ ವಿಷಯ. ಯೋಗಕ್ಕೆ ಈ ಹಿರಿಮೆಯ ಗರಿಯನ್ನು ತಂದು ಕೊಟ್ಟವರು ಪ್ರಧಾನಿ ನರೇಂದ್ರ ಮೋದಿಯವರು.

ಯೋಗ ಎಂದರೇನು? ಆಸನಗಳೇ ಪ್ರಾಣಾಯಾಮವೇ ಅಥವಾ ಎರಡೂ ಸೇರಿಯೇ? ಈ ಪ್ರಶ್ನೆಗೆ ಉತ್ತರ ಬಲು ಕಷ್ಟ. ಅಷ್ಟೇ ಅಲ್ಲ ಬಹಳ ವ್ಯಾಪ್ತಿಯುಳ್ಳದ್ದು. ಯೋಗ ಎಂದರೆ ಯೋಗಾಸನವೂ ಹೌದು ಪ್ರಾಣಾಯಾಮವೂ ಹೌದು. ಆದರೆ ಅದಷ್ಟೇ ಅಲ್ಲ. ಯೋಗವು ಎಂಟು ಅಂಗಗಳನ್ನು ಉಳ್ಳದ್ದು, ಅದೇ ಅಷ್ಟಾಂಗ ಯೋಗ. ಇದು ಪ್ರಾಚೀನ ಭಾರತದ ಋಷಿಗಳು ನೀಡಿದ ವಿಜ್ಞಾನ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಇವೇ ಆ ಎಂಟು ಅಂಗಗಳು. ಯೋಗಾಭ್ಯಾಸಿಗಳಿಗೆ ಈ ಶಬ್ದಗಳು ಪರಿಚಿತ.

ನಮ್ಮ ದೇಶದ ಪರಂಪರೆಯಲ್ಲಿ ಅನೇಕ ಯೋಗಿಗಳ ಬಗ್ಗೆ ಅನೇಕರು ಕೇಳಿದ್ದೇವೆ. ಅವರೆಲ್ಲ ಈ ಎಂಟು ಹಂತದ ಯೋಗವನ್ನು ಅಭ್ಯಸಿಸುತ್ತಾ ಭಗವಂತನನ್ನು ಉಪಾಸಿಸಿ ಅವನ ಸಾನ್ನಿಧ್ಯವನ್ನು ಅನುಭವಿಸಿದವರು. ಅಂದರೆ ಈ ಅಷ್ಟಾಂಗ ಯೋಗವು ಕೇವಲ ಶಾರೀರಿಕ ವ್ಯಾಯಾಮವಾಗದೇ ಪರಮಾತ್ಮನ ಜೊತೆ ನಮ್ಮ ಅವಿನಾಭಾವ ಸಂಬಂಧವನ್ನು ಅನುಭವಿಸುವುದೇ ಅದರ ಅಂತಿಮ ಗುರಿ, ಘಟ್ಟ. ಆದರೆ ಆ ಮಟ್ಟಕ್ಕೇರಲು ಎಲ್ಲರಿಂದ ಸಾಧ್ಯವೇ ? ಇಲ್ಲವಾದರೂ ಪ್ರಯತ್ನ ಪಡಬಹುದಲ್ಲವೇ? ಯೋಗದ ಪರಿಪೂರ್ಣತೆಯನ್ನು ಮುಟ್ಟಲು ಹಲವಾರು ಮಜಲುಗಳಲ್ಲಿ ನಮ್ಮ ದೇಹವನ್ನೂ ಮನವನ್ನೂ ಹದಗೊಳಿಸಬೇಕು.

ಮೊದಲಿಗೆ, ಉಸಿರಾಟದ ಮೇಲೆ ನಿಯಂತ್ರಣ ಸಾಧಿಸಬೇಕು. ನೆನಪಿಡಿ, ಉಸಿರಿಗೂ ಮನಸ್ಸಿಗೂ ನಿಕಟ ಸಂಬಂಧವಿದೆ. ಉಸಿರಿನ ನಿಯಂತ್ರಣದಿಂದ ಮನಸ್ಸು ಹತೋಟಿಗೆ ಬರುತ್ತದೆ. ಯಮ, ನಿಯಮ ಎಂಬ ಎರಡು ಹಂತಗಳಲ್ಲಿ ದೇಹವನ್ನು ಶಿಸ್ತುಬದ್ಧ ಜೀವನ ಶೈಲಿಯಿಂದ ಹದಗೊಳಿಸಿದರೆ ಮಾತ್ರ ಯೋಗಾಸನಗಳನ್ನು ಮಾಡುವುದು ಸುಲಭವಾಗುತ್ತದೆ. ಆಸನಗಳನ್ನು ಮಾಡುವಾಗ ಉಸಿರಿನ ಮೇಲೆ ನಮ್ಮ ಗಮನ ಪೂರ್ತಿ ಕೇಂದ್ರೀಕೃತವಾಗಿದ್ದರೆ ಮಾತ್ರ ಆಯಾ ಆಸನದ ಪೂರ್ಣ ಪ್ರಯೋಜನ ಪಡೆಯಬಹುದು. ಹೀಗೆ ಪ್ರಾರಂಭಿಸಿ ಕ್ರಮೇಣ ಉಸಿರಿನ ಮೇಲೂ, ಮನಸ್ಸಿನ ಮೇಲೂ ಏಕಾಗ್ರತೆ ಸಾಧಿಸುವುದರಿಂದ ಅನವಶ್ಯವಾದ ಭಾವನೆಗಳೂ, ವಿಚಾರಗಳೂ ಮೆದುಳಿನಿಂದ ಹೊರಹೋಗಲು ಅನುಕೂಲವಾಗುತ್ತದೆ. ಕ್ರಮೇಣ ಮನಸ್ಸು ಪ್ರಶಾಂತ ಸ್ಥಿತಿಗೆ ಬರುತ್ತದೆ. ಸಾಮಾನ್ಯವಾಗಿ "ನಾನು ಯೋಗ ಮಾಡುತ್ತೇನೆ" ಎಂದು ಹೇಳುವವರು ಈ ಮಟ್ಟದ ಸಾಧನೆಯನ್ನು ಮಾಡಿರುತ್ತಾರೆ.

ಆದರೆ ಯೋಗಾಭ್ಯಾಸ ಇಷ್ಟಕ್ಕೇ ನಿಲ್ಲುವುದಿಲ್ಲ ಎಂಬುದನ್ನು ನಾವು ಮನಗಾಣಬೇಕು. ಆಸನ, ಪ್ರಾಣಾಯಾಮಗಳು ಯೋಗದ ಒಂದು ಹಂತವಷ್ಟೇ. ಅಷ್ಟಕ್ಕೇ ನಿಲ್ಲದೇ, ಈ ಭೌತಿಕ ಶರೀರವನ್ನೇ ಒಂದು ಸಾಧನವಾಗಿ ಪರಿಗಣಿಸಿ (ಶರೀರಮಾದ್ಯಂ ಖಲು ಧರ್ಮಸಾಧನಂ ಎಂಬಂತೆ) ನಮ್ಮ ಗುರಿಯನ್ನು ಪರಮಾತ್ಮನೆಡೆಗೆ ಕೇಂದ್ರೀಕರಿಸಿ ನಡೆದರೆ ಮಾತ್ರ ನಾವು ಪರಿಪೂರ್ಣ ಯೋಗಿಗಳಾಗಬಹುದು. ಸರಳವಾಗಿ ಹೇಳುವುದಾದರೆ, ಆಸನ, ಪ್ರಾಣಾಯಾಮದ ಜೊತೆಗೆ , ನಾವು ಈ ಕೆಳಗಿನ ಅಭ್ಯಾಸಗಳನ್ನು ಮಾಡಿ ನಮ್ಮ ಮನಸ್ಸನ್ನು ನಿಯಂತ್ರಿಸಿ ವ್ಯಕ್ತಿತ್ವವನ್ನು ಉನ್ನತಗೊಳಿಸಬೇಕು. ಈ ಬಗ್ಗೆ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಅನೇಕ ಅಧ್ಯಾಯಗಳಲ್ಲಿ ವಿಶದಪಡಿಸಿದ್ದಾನೆ. ಅದರಲ್ಲಿ ಒಂದು ಅಂಶ ೧೩ನೇ ಅಧ್ಯಾಯದ ೭,೮,೯,೧೦ ಶ್ಲೋಕಗಳಲ್ಲಿ ಈ ರೀತಿಯಾಗಿ ವಿವರಿಸಿದ್ದಾನೆ.

೧. ಅಮಾನಿತ್ವಂ: ನಿರಹಂಕಾರ
೨. ಅದಂಭಿತ್ವಂ: ನಿರಾಡಂಬರ
೩. ಅಹಿಂಸಾ: ಯಾವ ಪ್ರಾಣಿಯನ್ನೂ ಹಿಂಸೆ ಮಾಡದಿರುವುದು

೪. ಕ್ಷಾಂತಿ: ಕ್ಷಮೆ, ಉದಾರವಾಗಿ ಇತರರ ತಪ್ಪುಗಳನ್ನು ಕ್ಷಮಿಸಬೇಕು.
೫. ಆರ್ಜವಂ: ಋಜುಭಾವ ಎಂದರೆ ಪ್ರಾಮಾಣಿಕತೆ.

ಆಚಾರ್ಯೋಪಾಸನಂ: ಗುರೂಪಾಸನೆ, ಗುರು ಶುಶ್ರೂಷೆ.
ಶೌಚಂ: ಶಾರೀರಿಕ ಹಾಗೂ ಮಾನಸಿಕ ಶುಚಿತ್ವ
ಸ್ಥೈರ್ಯಂ: ಧೃತಿಗೆಡದಿರುವಿಕೆ
ಆತ್ಮವಿನಿಗ್ರಹ: ಆತ್ಮ ಸಂಯಮ, ಇಂದ್ರಿಯ ನಿಗ್ರಹ
ಸಮಚಿತ್ತತ್ವ: ಸುಖ ದುಃಖಗಳನ್ನು ಸಮವಾಗಿ ಸ್ವೀಕರಿಸುವುದು.
ಕರುಣೆ, ಪವಿತ್ರತೆಯಿಂದ ಕೂಡಿ ಕಮಲಪುಷ್ಪದಂತೆ ಅನಾಸಕ್ತನಾಗಿ ಇರಬಲ್ಲನು.

**ಯೋಗದ ಲಾಭಗಳು:** ಯೋಗಾವಸ್ಥೆಯಲ್ಲಿ ಶ್ವಾಸೋಚ್ಛ್ವಾಸ ನಿಧಾನವಾಗಿ ನಡೆಯುವುದರಿಂದ ಯೋಗಿಯು ವಿಶ್ರಾಂತಿ ಹಾಗೂ ನೆಮ್ಮದಿಯ ಅನುಭವ ಪಡೆಯುವನು. ಯೋಗಾವಸ್ಥೆಯಲ್ಲಿ ಹೃದಯದಲ್ಲಿ ರಕ್ತ ಸಂಚಾರ ನಿಯಮಿತವಾಗಿ ನಿರ್ದಿಷ್ಟವಾಗಿ ಕಡಿಮೆಯಾಗುವುದರಿಂದ ಹೃದಯಕ್ಕೆ ಸಾಕಷ್ಟು ವಿಶ್ರಾಂತಿ ದೊರೆಯುತ್ತದೆ. ಯೋಗಾವಸ್ಥೆಯಲ್ಲಿ ಯೋಗಿಯ ಶರೀರದಲ್ಲಿ ಸಂಚರಿಸುವ ರಕ್ತದಲ್ಲಿ ಲ್ಯಾಕ್ಟಿಕ್ ಆಮ್ಲದ ಅಂಶವು ಶೀಘ್ರವಾಗಿ ಕೆಳಮಟ್ಟಕ್ಕೆ ಬರುವುದರಿಂದ ಸಂಪೂರ್ಣ ಶಾಂತಿಯ ಅನುಭವವಾಗುವುದಲ್ಲದೇ ಎಲ್ಲಾ ಪ್ರಕಾರದ ಉದ್ವೇಗ ಹಾಗೂ ನಿರುತ್ಸಾಹದಿಂದ ಮುಕ್ತಿ ಲಭಿಸಿ, ನರಮಂಡಲಕ್ಕೆ ಶಕ್ತಿಯು ದೊರೆಯುವುದಲ್ಲದೇ ಯಾವುದೇ ರೀತಿಯ ನರಗಳಿಗೆ ಸಂಬಂಧಿಸಿದ ರೋಗವು ನಿವಾರಣೆಯಾಗುತ್ತದೆ. ಯೋಗಾವಸ್ಥೆಯಲ್ಲಿ ಮಾನಸಿಕ ಉದ್ವೇಗ ದೂರವಾಗುವುದರಿಂದ ಮಾನವನ ತ್ವಚೆಯಲ್ಲಿ ಅಸಾಧಾರಣ ರೋಗ ನಿರೋಧಕಶಕ್ತಿಯು ಪ್ರಫುಲ್ಲಿತವಾಗುವುದರಿಂದ ಯೋಗಿಯು ಉಲ್ಲಾಸಭರಿತನಾಗುವನು. * ಹೃದಯವಿಕಾರ, ರಕ್ತದೊತ್ತಡ. ಮಾನಸಿಕ ಅಶಾಂತಿ, ಅರೆಹುಚ್ಚು, ಕ್ರೋಧ, ಕಾಮ, ಮಾನಸಿಕ ಭಯದಿಂದ ಉಂಟಾದ ರೋಗಗಳೂ ಸಹ ಯೋಗದಿಂದ ಓಡಿ ಹೋಗುತ್ತವೆ.

ಉದ್ವೇಗ ನಿಯಂತ್ರಣ ಯೋಗ ವಿಜ್ಞಾನವು ಮನುಷ್ಯನ ಉದ್ವೇಗಗಳನ್ನು ನಿಯಂತ್ರಿಸಿ, ಅವನ ವಿಚಾರಗಳನ್ನು ವ್ಯವಸ್ಥಿತವಾಗಿಡುತ್ತದೆ. ಯೋಗದ ಫಲವಾಗಿ ನಾವು ಗಹನ ಶಾಂತಿಯ ಅನುಭವ ಮಾಡುತ್ತೇವೆ, ಆಗ ಕೊರ್ಟಿಕೋಸ್ಟಿರಾಯಿ ಗ್ರಂಥಿಯ ಅಂತಃಸ್ರಾವದ ಪ್ರಮಾಣ ಕಡಿಮೆಯಾಗಿ ಆರೋಗ್ಯಕ್ಕೆ ಅತ್ಯಂತ ಸಹಾಯಕಾರಿಯಾಗುತ್ತದೆ. ಅದು ನಮಗೆ ಪೆಪ್ಟಿಕ್ ಅಲ್ಸರ್, ರಕ್ತದೊತ್ತಡ. ಮಧುಮೇಹದಂತಹ ರೋಗಗಳಿಂದ ದೂರವಿಡುತ್ತದೆ. ಅಲ್ಲದೇ ರೋಗ ಪ್ರತಿರೋಧಕ ಶಕ್ತಿ ಹೆಚ್ಚಾಗುತ್ತದೆ. ವೈಜ್ಞಾನಿಕವಾಗಿ ಹೇಳುವುದಾದರೆ ಯೋಗಿಯು ಏಕರಸ ಮತ್ತು ಅಂತರ್ಮುಖತೆ ಹಾಗೂ ಹರ್ಷಿತಮುಖತೆಯ ಸ್ಥಿತಿಯಲ್ಲಿ ಸದಾಕಾಲಕ್ಕೆ ಇರುವುದರಿಂದ ಅವನ ಮಾನಸಿಕ ಹಾಗೂ ಶಾರೀರಿಕ ಕ್ರಿಯೆಗಳಲ್ಲಿ ಅಸಾಧಾರಣ ಬದಲಾವಣೆಗಳಾಗಿ ನಿರೋಗಿ, ದೀರ್ಘಾಯುವಾಗಿ ತೃಪ್ತಿಮಯ ಜೀವನವನ್ನು ಪಡೆಯುವನು. ದುಃಖ, ರೋಗ, ಅಧೈರ್ಯ, ಆಸೆ, ಕಾಮ, ಕ್ರೋಧ, ಲೋಭ, ಮೋಹ, ಅಹಂಕಾರಗಳಾದ ಎಲ್ಲಾ ಮನೋರೋಗಗಳನ್ನು ಶಾಶ್ವತವಾಗಿ ನಿರ್ಮೂಲನೆ ಮಾಡಿ, ಶುದ್ಧ ಸಂಕಲ್ಪದಿಂದ ಸದಾ ಇರಲು ಅತಿ ಸುಲಭವಾದ ಏಕೈಕ ಮಾರ್ಗವೇ ಸಹಜ ರಾಜಯೋಗವಾಗಿದೆ. ಯೋಗದಿಂದ ಯೋಗಿಯು ಅತಿನಿದ್ದೆ, ಆಲಸ್ಯ, ಭಯ, ವ್ಯಕ್ತಿದ್ವೇಷ, ಜಾತಿ, ಮತ, ಲಿಂಗಭೇದ, ವಯೋಭೇದಗಳನ್ನು ನಿರ್ಮೂಲಮಾಡಿ ಪ್ರೇಮ, ದಯೆ, ಕೊನೆಯದಾಗಿ ಹಾಗೂ ಎಲ್ಲಕ್ಕಿಂತ ಮುಖ್ಯವಾಗಿ ಭಗವಂತನಲ್ಲಿ ಅನನ್ಯವಾದ ಭಕ್ತಿ, ಆತ ನಮ್ಮನ್ನೆಂದಿಗೂ ಕೈಬಿಡಲಾರ ಎಂಬ ಅಚಲ ಶ್ರದ್ಧೆ. ಇದೇ ಯೋಗದ ಕೊನೆಯ ಮೆಟ್ಟಿಲು.

ಹೀಗೆ ಈ ಎಲ್ಲಾ ಗುಣಗಳನ್ನು ನಾವು ಅಳವಡಿಸಿಕೊಳ್ಳುತ್ತಾ ಹೋದ ಹಾಗೆ, ಯೋಗದ ಅಂತಿಮ ವಿದ್ಯೆಯು ನಮಗೆ ಗೋಚರವಾಗಿ, ಭಕ್ತಿ, ಶ್ರದ್ಧೆಗಳು ಬಲವಾಗಿ ಬೇರೂರಿ ಮನಸ್ಸು ಸದಾ ಅವನಲ್ಲೇ ಲೀನವಾಗಿರುವ ಸ್ಥಿತಿಯಲ್ಲಿ ಪ್ರಸನ್ನವಾಗಿರುತ್ತದೆ. ಇದೇ ಆನಂದ ಯೋಗ. ಆದ್ದರಿಂದ ಎಲ್ಲ

ಯೋಗಾಭ್ಯಾಸಿಗಳೂ ದೇಹ ಸ್ವಾಸ್ಥ್ಯದ ಜೊತೆಗೆ ಮನಸ್ಸಿನ ಆರೋಗ್ಯವನ್ನೂ, ಆ ಮೂಲಕ ನಮ್ಮ ಚಾರಿತ್ರ್ಯ ವ್ಯಕ್ತಿತ್ವದ ಉನ್ನತಿಯನ್ನೂ ಸಾಧಿಸಿ ನಿಜವಾದ ಯೋಗಿಗಳಾಗೋಣವೇ?

'ಆರೋಗ್ಯವೇ ಭಾಗ್ಯ'



# Makhdum Shamshuddin Abul Fatah Muhammad Multani Padshah: A Renowned Sufi of Muhammadabad Bidar.

**-Abdul Aziz U.Rajput,**
Freelance Historian,
Deccan Studies and Historical Research,
Bijapur.

**Introduction:**

Makhdum Muhammad alias Multani Padshah was a younger son of Shaikh Ibrahim and grandson of Shaikh Fatahullah Multani, Shaikh Muhammad was his name Shamshuddin and Abul Fatah was his titles. He was born at Bidar in 862 A.H./1457 A.D. at the time of his father's death Shaikh Muhammad was a child of six years, Fatimah was his mother, belonged to the family of Makhdum Jan-e-Jahan Gasht, was the famous Sufi of Suharwardi order.

Shaikh Muhammad led a life of seclusion and retirement. He was renowned for his piety and sanctity. The author of *Makhzan-ul-Karamat* says that Shaikh Muhammad has many miracles, which all were compiled in the form of a book. He acquired the knowledge of esoteric and exoteric from his father and other contemporary scholars.

He became disciple and *khalifa* of Shaikh Bahauddin Ansari, then he started initiating the people into Qadri silsila, he first enrolled his own son Shaikh Ibrahim Makhdumji and later initiated many others, taught them *zikr* and *azkar* (rules, regulations and discipline) of Qadri order.

Shaikh Bahauddin Ansari sent a *khirqa-e-khilafat* (Patch garment) and *ijazat nama* (permission letter) through one of his disciples, Shaikh Jalal Qadri, he traveled a long journey of 300 *kose* (460 kms) and reached Bidar. He conferred the robe of *khilafat* and *ijazat nama* to Shaikh Muhammad, which he received from his ancestor Shaikh Abdul Qadir Gilani.

Shaikh Muhammad was one of the eminent Sufis of Deccan, his vast knowledge, deep devotion, charming and attractive personality had won him admiration in the court as well as in the people of Bidar etc. the contemporary sultans of Qutub Shahis of Golconda and Baridis were his patrons. Qasim Barid the founder of Barid Shahis says that in Deccan there are two Muhammads, each one is unrivalled in his times, one is Shaikh Muhammad Multani Padshah and another one is Sayed Muhammad Gesudiraz[1].

Once Shaikh Abul Hasan, a descendant of Sayed Muhammad Gesudiraz visited to Shaikh Muhammad to clarify certain passages of a tract written by his great grandfather, which appeared critical to some scholars, Shaikh Muhammad not only convinced him in arguments but summarized the disputed passages within the light of *sharia*. Shaikh Muhammad was on friendly terms with his fellow Sufis of Junaydi and Chishti orders, who frequently visited him at Bidar and used to hold *malfuzats* (discourses) with him. He was generous, gentle and kind, whatever he received an *atiya* (gift) in cash or kind, he distribute it immediately into his disciples. He use to perform *sama* and also celebrated the *urs* of the Sufi masters in his *khanqua*. Many pious personalities like the *ulema*, the *mashaik* and the *faqirs* all were attended the *majlis*, and felt deeply affected by his personality[2].

Shaikh Muhammad had several *murids* (disciples), but he conferred the *khilafat* only on those whom he considered deserving. They were staunch to follow the rules of Holy Quran and the tradition of Holy Prophet (*sunnah*) and also the tradition and examples of Qadri Sufis. Muhammad Karimuddin was made a long list of the *murids* of Shaikh Muhammad Multani, who were settled in the various places of the Deccan region, they are Shaikh Abdullah, Shaikh Junayd, Miyan Raje Muhammad, Shaikh Yusuf bin Ahmed Bijapuri, Miyan Hasan of Kohir and Shaikh Fatahullah, Shaikh Ibrahim, Miyan Khuda Baksh, Mirza Musa, Shaikh Ayub, Miyan Hussain, Qazi Muhammad, Sayed Hyder Mashhadi, Shaikh Abdul Karim bin Jalal Qadri, Shaikh Abdullah Arab, Shaikh Alauddin bin Sharafuddin, Shaikh Nabina and besides his own sons and his elder brother Shaikh Ahmed. Shaikh Farid Qadri and Shaikh Nizam Hatnuri were his favourite *khalifas*.

In the year 935 A.H./1528 A.D. Sultan of Gujarat Bahadur Shah was led a campaign towards Deccan. Shaikh Muhammad was ill, he summoned all his sons bade them farewell and wrote a last will (*wasiyat nama*). Shaikh Ishaq one of his sons states that on 27th *ramzan* 935 A.H./1528 A.D. while handing over the last will, his father conferred his patched garment upon him together with his three brothers[3] with a permission to enroll disciples in Qadri order, so that they may guide and train them in the way leading to Almighty Allah.

In accordance with the *khilafat nama*, Shaikh Muhammad conferred on his first son Shaikh Ibrahim Makhdumji the robe of *khilafat* which he had received from Shaikh Bahauddin Ansari. To Shaikh Ishaq and Shaikh Ismail, he gifted his own *pairahan* (shirt). To his youngest son Shaikh Badruddin, he gifted the *amama* (Turban) and letter of *ijazat nama* which he had received from his *Pir*.

Shaikh Muhammad died in the month of 1st *shawwal* 936 A.H./8th June 1529 A.D. at the age of 72. He was buried near the grave of his father Shaikh Ibrahim at Bidar and his shrine still the place of visitation. His sons and descendants worked not only among the masses but also took interest in the politics of Adil Shahis and Qutub Shahis courts.

The tomb of Shaikh Muhammad is situated in the North-West corner of the town. It has a large enclosure, and is approached from the main street by a lofty arch whence a branch road leads to the gateway of the tomb. The gateway has an arch at each end towards the north and south and also a pair of rooms, built on either side of the passage. Beyond the gateway a paved walk first passes through a large cemetery containing the graves of the followers of the Sufi. Several of these graves bear inscriptions, one of these inscriptions is carved on a tomb built to the right of the passage, almost midway between the main entrance and the sepulchral chamber of the shrine[4]. The inscribed tablet consists of two lines of Persian verse and reads thus;

Transliteration:

*Rakht Barbast Zain Jahan Deeni, A'an Wali Zamana A'al Nabi*
*Sa'al Ta'arekhsh A'az Khurd Jistam, Guft Andar Bahisht Sayed Wali*

Translation:

'From this low world packed up his chattel,
The saint of the world, an offspring of the Prophet.
I inquired of Wisdom the chronogram of his demise,
It communicated, "*Sayed Wali is in Heaven*" '.

The phrase "*andar bahisht sayed wali*" gives the date 1082 A.H/1671 which falls in Aurangzeb's reign. The style of writing is *nastaliq* of the Mughal period.

Almost opposite Sayed Wali's tomb, on the other side of the passage towards the west, is the tomb of Makka Bi, which has an inscription recording an endowment for the maintenance of the tomb. The style of writing as well as the language of the inscription is crude, and as it is dated 1258 A.H./1842, it shows that public taste in literary matters at that time was at a very low level.

Transliteration:

*……Mustafah……….Muhammad………Salli…….*
*La Ilaha Illa Allah Muhammad Rasool Allah*
*Makka Bi Zahid Kaniz K Qutub Muhammad Multani Qadri*
*Wa Ek Chah Alamgiri Wa Deh Chah Shaikh Bawi Kharidi Khud Ba Nan Wa Halwadat Wa Quran Khwan Wa Roghan Dargah Bad-Yaha Wa Zameen Wa A'amba Wagaira Jair Maqbara Makka Bi Wakf Namudam A'anke*

*Tamah Numa'id Fardah A'aj Deedar Khuda Wa Shafa'at Rasool Mahrum…….*
*Pyase Ko Tou Pani Kya Li Bhukya Want Roti*
*Bismillah Al-Rehman Al-Rahim*
*Chori Gar Kardi Makka Bi Nak Kati Ya Choti*

Enclosed Right of the Slab: *Mohiuddin Gilani Qadri….1258….Makka Bi*

Enclosed Left of the Slab: *Husain…812*

Translation:

…….the Chosen……Muhammad…….bless……..
There is no God but God and Muhammad is the Prophet of God.
Makka Bi, the pious slave of Qutub Muhammad Multani Qadri.
'And one well built by Alamgir and ten wells of Shaikh Bawi, purchased by me (are an endowment for the distribution of) bread and sweets, for the fees of the Quran reciters, and for the expenses of oil (for the lamps of the dargah). I also dedicate the villages, lands, mango trees, etc., attached to the tomb of Makka Bi. Whoever shows avarice in respect of this endowment may he be deprived tomorrow (the Day of Judgment) of the Divine vision and the intercession of the Prophet!'

In the name of God the most Merciful and Compassionate.

'The thirsty may drink the water and the hungry enjoy the bread, but if thou committest a theft it is tantamount to thy cutting the nose or the tresses of Makka Bi'[5].

According to *Mishkat-un-Nabuwa* the spiritual genealogy of Shaikh Muhammad is as follows; Shaikh Muhammad from Shaikh Bahauddin Ansari from Shaikh Ibrahim Ansari from Sayed Ahmed Halbi Al-Magharabi from Sayed Hasan from Sayed Musa from Sayed Ali from Sayed Muhammad Baghdadi from Sayed Hussain Baghdadi from Sayed Muhammad Zu Ahmed from Sayed Abi Nasr Mohiuddin from Sayed Imaduddin Abi Saleh Nasr from Sayed Tajuddin Abdul Razzaque[6].

His family genealogy is as follows; Shah Shamsuddin Abi Al-Fateh Shaikh Muhammad Al-Qadri bin Shaikh Ibrahim bin Shaikh Fateh Allah bin Shaikh Abubakr bin Shaikh Fakhruddin bin Shaikh Badruddin bin Shaikh Sayed Fakhruddin bin Badruddin bin Sayed Shah Maina bin Amir Shah Ghori bin Sultan Shahbuddin Ghori Al-Ghaznawi[7].

**Notes and References:**

1. History of the Qadri Order in India, p.56
2. Ibid
3. Shaikh Muhammad had five sons namely Shaikh Ibrahim, Shaikh Ismail, Shaikh Ishaq, Shaikh Badruddin and Shaikh Fakhruddin. Shaikh Fakhruddin was died in early age of four year and buried near the shrine of his father.
4. Bidar: Its History and Monuments, p.108
5. Epigraphia Indo-Moslemica, 1927-28, p.23
6. Mishkat-un-Nabuwa, p.41
7. Majmua Al-Ansab, in Tazkirat-ul-Ansab, in Abdul Aziz Rajput, Sufis of Deccan and their Shrines, p.154.



# A VIEW ON POLITICAL HISTORY OF GULBARGA DISTRICT.

**-DR. JAGADEVAPPA T. DHARANI, Ph.D.**
Asst. Professor of History, Govt.First Grade College,
Farhatabad-Tq. And Dist-Kalaburagi.

**INTRODUCTION.**

In the former days Gulbarga was known as Kalburgi, which means a 'stony land' or stone roofing or a heap of stones in Kannada. Language. Another version is that Gulabrga was so named to connote a 'leaf' with flower, since 'Gul' means 'flower' and 'Burg' means 'leaf' in the Persian language. It is also said that Kalburgi known later as Kalburgah came to be pronounced as Gulbarga when it was under the Muslim rule. Gulbarga district situated in the North Eastern corner of Karnataka is the heart of the sub-division of Karnataka, popularly known as Hyderabad-Karnataka. Among the three districts of the former Hyderabad Karnataka area, which after the re-organization of states formed part of Karnataka state. Gulbarga occupies a central place with Bidar to its north and Raichur to its south. It lies between $76^{o}4$ and 77.42 longitude and 16.12 and 17.46, latitude is bounded on the north by Bidar district of Karnataka state and Osmanabad district of Maharashtra State on the east by Medak and Mahabubnagar districts of Andhra Pradesh, on the south by Raichur district and on the west by Bijapur district of Karnataka state and Solapur district of Maharashtra state.

There are a few place in Gulbarga district connected with legendary history of which two may be mentioned i.e., Sagara and Chayya. Sagara, or the modern Shahapur got its name from the famous king of Ikshvaku lineage. It is said that somebody had administered poison to his mother, and that therefore he was born with 'gara' (Sa+gara) i.e., poison. He got the lost kingdom of his father and performed, the horse sacrifice. It is said that he was blessed with adventurous deeds of their 60,000 sons by first wife, who in subsequent years were lifted to the heavens by the penance and adventure deeds of their grandson Bhagiratha.

Chhaya, is a famous place of pilgrimage on the banks of the river Krishna. This place is associated with the name of a wife of the sun god. The legend bear his burning radiance, created a women, Chhaya resembling her own form and left for her fathers house leaving her replica at home with Chaya lived with the sun-god as his wife. The sun god was under the impression that it was his real wife. The mystery was somehow revealed afterwards and the sun god

ಸಾಧ್ಯವಾಗಿದೆ. ಅಷ್ಟು ಮಾತ್ರವಲ್ಲ, ಇವುಗಳು ಬೌದ್ಧಿಕ 'ವಾದ' ಮಾತ್ರಗಳಾಗಿರದೇ ಜನಸಾಮಾನ್ಯ ದುಡಿವ ಜನ ಸಮುದಾಯಗಳ ನಿತ್ಯದ ಬದುಕಿನ ನಂಬಿಕೆ ನಡವಳಿಕೆಗಳಲ್ಲಿ ಬೆರೆತಿವೆ, ವ್ಯಕ್ತಗೊಳ್ಳುತ್ತಿವೆ.

ಶಾಕ್ತ ಪರಂಪರೆಯು ಭಾರತ ಮಾತ್ರಕ್ಕಲ್ಲ, ಇದು ಜಾಗತಿಕವಾದ ಆದಿಮ ದರ್ಶನ ಎನ್ನುವುದನ್ನು ಈತನಕದ ಸಾಂಸ್ಕೃತಿಕ ಅಧ್ಯಯನಗಳು ಸಾಕಷ್ಟು ವಿವರಿಸಿವೆ. ಆದಿಮೂಲದಲ್ಲಿ ಅಂದರೆ ಮುಕ್ತ ಸಾಮಾಜಿಕತೆಯ ಚಾರಿತ್ರಿಕ ಕಾಲಘಟ್ಟದಲ್ಲಿ ಸಾರ್ವತ್ರಿಕ 'ದರ್ಶನ'ವಾಗಿದ್ದ ಶಾಕ್ತವು ನಂತರದ ದಿನಗಳಲ್ಲಷ್ಟೇ, 'ಮತ್ತೊಂದರ' ಮೇಲುಗೈಯಿಂದಾಗಿ ಬದಿಗೆ ಸರಿಸಲ್ಪಟ್ಟು 'ಪಂಥ'ವಾಗಿ ಪರಿಣಮಿಸಲ್ಪಟ್ಟಿತು. ಭಾರತದ ಸಂದರ್ಭದಲ್ಲಿ ಆದಿಮ ಶಾಕ್ತದ ಜೊತೆ ಅನುಸಂಧಾನಗೈದ 'ಸನಿಹ'ದ ಸಾಂಸ್ಕೃತಿಕ ತತ್ವವೆಂದರೆ ಅದು ಪೂರ್ವ–ಶೈವ ಅಥವಾ ದ್ರಾವಿಡ. ಈ ಶಿವ–ಶಕ್ತಿಗಳ ಸಮಾಗಮವೇ ಭಾರತದ ಆಧ್ಯಾತ್ಮಿಕ ಸಂಸ್ಕೃತಿಯ ಸಾರ. ಈ ದ್ರಾವಿಡ ಶಿವ, ಮಸಣವಾಸಿಯಾಗಿ ಭಸ್ಮಧಾರಿಯಾದ 'ಪರಿವರ್ತಿತ ರೂಪ'ವು ನಂತರದ, ಬೇರೊಂದು ಚಾರಿತ್ರಿಕ ಸಂದರ್ಭವನ್ನು ಸೂಚಿಸುತ್ತದೆ. ಅದು ಚರ್ಚೆಯನ್ನು ಬಯಸುವ ಇನ್ನೊಂದು ಆಯಾಮ. ಆದರೆ ಈ ಪ್ರಕೃತಿ–'ಶಕ್ತಿ'ಯು ಪುರುಷನ ಹಂಗಿಲ್ಲದೆಯೂ ಮುಕ್ತ ಅನನ್ಯತೆಯನ್ನು ಹೊಂದಿತ್ತು ಮತ್ತು ಇದು ಮಾತ್ರವೇ ನಂತರದ ಎಲ್ಲ ತತ್ವ ದರ್ಶನಗಳ ಮೂಲವಾಗಿತ್ತು ಎಂಬುದನ್ನು ಭಾರತೀಯ ಸಂಸ್ಕೃತಿಯ ಬೇರುಗಳ ಶೋಧದ ಸಂದರ್ಭದಲ್ಲಿ ಬಹು ಮುಖ್ಯವಾದ ಅಂಶ, ಕಡೆಗಣಿಸಲಾಗದ, ಸತ್ಯ.

ಶಕ್ತಿ ಎಂಬ ಸಾಂಸ್ಕೃತಿಕ ಪರಿಕಲ್ಪನೆಯ ಅರ್ಥವೇ ಹೆಣ್ಣು. ಅಥವಾ, ಹೆಣ್ಣು ಎಂಬುದರ ಸಾಂಸ್ಕೃತಿಕ ಪರಿಭಾಷೆಯೇ 'ಶಕ್ತಿ'. ಹೆಣ್ಣು, ಹೆರಬಲ್ಲಳಾದ್ದರಿಂದಲೇ ಫಲಗಳನ್ನು ಬೆಳೆವ ಭೂಮಿಯೊಂದಿಗೆ ಸಮೀಕರಣಗೊಂಡು ಸೃಜನಶೀಲವೂ ಆಧ್ಯಾತ್ಮಿಕವೂ ಆದ 'ಸಂಕೇತ'ವಾಯಿತು. ಸೃಷ್ಟಿಕರ್ತೆಯಾದ 'ತಾಯಿ' ಅಥವಾ 'ಅಮ್ಮ', ನಂತರದಲ್ಲಿ ಈ ಅನನ್ಯ ಸಂಕೇತದ ಮೂಲಕ ಆರಾಧಿಸಲ್ಪಟ್ಟಳು. ಹಾಗೆಂದೇ 'ಭಗವತಿ'ಯು 'ದೇವಿ'ಯಾದರೆ ಈಕೆಯೊಂದಿಗೆ ತನ್ನ ದೇಹವನ್ನು ಸಂಯೋಗಗೊಳಿಸಿಕೊಂಡ 'ದೇವ' 'ಭಗವಂತ' ಎನಿಸಿಕೊಂಡ. ಅರ್ಧನಾರೀಶ್ವರನ ಸಂಯೋಜನೆಯ ಹಿಂದಿರುವ ಅರ್ಥಪೂರ್ಣ ಕಲ್ಪನೆಯೇ ಇದು. 'ಮಾತೃಶಕ್ತಿ'ಯ ಸೃಷ್ಟಿಶೀಲ ಗುಣದಿಂದಾಗಿಯೇ ಭಾರತದ ಆದಿಮ ಬೇಟೆಗಾರ ಹಾಗೂ ಕೃಷಿಕ ಸಮುದಾಯಗಳು ವಿಭಿನ್ನ ಆಚರಣೆಗಳ ಮೂಲಕ 'ತಾಯ್ತನ'ವನ್ನು ಆರಾಧಿಸುತ್ತಾ ಬಂದವು. ಈ ಮೂಲ ಭಾರತೀಯ ಸಾಂಸ್ಕೃತಿಕ ದರ್ಶನವು ಆರ್ಯ ಜನಾಂಗಿಕ 'ಸಂಕರಶೀಲತೆ'ಯ ಮೂಲಕ ಭಿನ್ನ ಸಾಂಸ್ಕೃತಿಕ ಪ್ರತಿಮೆ, ಆಚರಣೆಗಳನ್ನು ಹುಟ್ಟು ಹಾಕಿತು. ಈ ಸಾಂಸ್ಕೃತಿಕ ಸ್ಥಿತ್ಯಂತರವೂ ಭಾರತದ ಸಾಂಸ್ಕೃತಿಕ ಚರಿತ್ರೆಯ ಮತ್ತು ಆಧ್ಯಾತ್ಮಿಕ ಪರಂಪರೆಯ ಅವಿಭಾಜ್ಯ ಭಾಗವೇ ಆಯಿತು. ಈ ಬಗೆಯ ಅನುಸಂಧಾನ ಗತಿಯಲ್ಲಿಯೇ, ಕರ್ನಾಟಕದಲ್ಲಿ ಪಾಶುಪತ, ಕಾಳಾಮುಖ ಮೊದಲಾದ ದರ್ಶನಗಳು ರೂಪ ಪಡೆದವು.

ಶಾಕ್ತವನ್ನು ಕೇಂದ್ರವಾಗಿಟ್ಟು ಇದರ ವಿವರಣೆಯನ್ನಾಗಲಿ, ಅಥವಾ ಈ ಪರಂಪರೆ ಆಚರಣೆಗಳ ವಿಶ್ಲೇಷಣೆಯನ್ನಾಗಲಿ ಈ ಸಮಾರೋಪ ನುಡಿಗಳ ಮೂಲಕ ಆಡಲಾರೆ. ಬದಲಾಗಿ ಶಾಕ್ತದ ಚಾರಿತ್ರಿಕ ಪರಿವರ್ತನೆಯ ಕುರಿತಂತೆ ಹಾಗೂ ಸಾಂಸ್ಕೃತಿಕ ಪರಂಪರೆಯೊಂದು ಹೇಗೆ ಒಂದು ನಿರ್ದಿಷ್ಟ ಸಾಮಾಜಿಕ ಸಂದರ್ಭದಲ್ಲಿ, ಆಯಾ ಕಾಲದ ಉತ್ಪಾದಕ ಸಮುದಾಯಗಳ ಸಮಷ್ಠಿ ಪ್ರಜ್ಞೆಯ ಮೂಲಕ ದಾರ್ಶನೀಕರಿಸಲ್ಪಟ್ಟಿರುತ್ತದೆ ಎಂಬುದನ್ನು ವಿವರಿಸಲು ಶಾಕ್ತವನ್ನು ಒಂದು ಉದಾಹರಣೆ ಮಾತ್ರವಾಗಿ ನಾನಿಲ್ಲಿ ಈ ಅಂಶಗಳನ್ನು ಪ್ರಸ್ತಾಪಿಸಿರುವೆ. ಈಗಾಗಲೆ ಈ ವಿಷಯ ಕುರಿತಂತೆ ಶ್ರೀಮತಿ ಶಿವಗಂಗಾ ರುಮ್ಮಾ ಅವರು ಹಲವು ಆಚರಣೆಗಳ ಉದಾಹರಣೆ, ವಿಶ್ಲೇಷಣೆಗಳ ಮೂಲಕ ಅತ್ಯಂತ ಸಮರ್ಥವಾಗಿ ಮಂಡಿಸಿದ್ದಾರೆ. ಈ ಗೋಷ್ಠಿಯ ಮೇರುಭಾಗ ಇದಾಗಿತ್ತೆಂದು ನಾನು ಭಾವಿಸುತ್ತೇನೆ.

ಕನ್ನಡದ ಸಂಸ್ಕೃತಿ ಚಿಂತನೆಯಲ್ಲಿ ಶಾಕ್ತ ಪರಂಪರೆ ಕುರಿತಂತೆ ಈ ತನಕ ಸಾಕಷ್ಟು ಅಧ್ಯಯನಗಳಾಗಿವೆ. ಕಪಟರಾಳ ಕೃಷ್ಣರಾವ್, ಶಂ.ಬಾ.ಜೋಶಿ, ಅಮೃತ ಸೋಮೇಶ್ವರ,

ಎಸ್.ಎಸ್.ಹಿರೇಮಠ, ಕೋಟಗಾನಹಳ್ಳಿ ರಾಮಯ್ಯ ಅವರುಗಳ ಸಂಶೋಧನೆಗಳನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ವರ್ತಮಾನ ಸಂದರ್ಭದಲ್ಲಿ ಡಾ.ರಹಮತ್ ತರೀಕೆರೆ, ಬಸವರಾಜ ತೂಲಹಳ್ಳಿ, ಲಕ್ಷ್ಮೀಪತಿ ಕೋಲಾರ ಹೀಗೆ ಹಲವರು ಸಂಶೋಧಕರು ಈ ಕುರಿತಂತೆ ಆಳವಾದ ಅಧ್ಯಯನವನ್ನು ಮುಂದುವರಿಸಿದ್ದಾರೆ. ಆದರೆ ಈ ಅಧ್ಯಯನಗಳನ್ನು ಕರ್ನಾಟಕದ ನಮ್ಮ ಶೈಕ್ಷಣಿಕ ವಲಯ ಅದೆಷ್ಟರ ಮಟ್ಟಿಗೆ ಓದಿಗೆ ಒಳಪಡಿಸಿದೆ ಅಥವಾ ಈ ಅಧ್ಯಯನಗಳ ಅರಿವನ್ನು ಮಥಿಸಿ ವಿಸ್ತರಿಸುತ್ತಿದೆ ಎಂಬ ಪ್ರಶ್ನೆಗೆ ಸಿಗುವ ಉತ್ತರದಲ್ಲಿ ನಿರಾಶೆ ಮಡುಗಟ್ಟಿ ನಿಲ್ಲುವಂತಿದೆ. ಹೀಗಾಗಬಾರದು ಎನ್ನುವುದಷ್ಟೇ ನನ್ನ ಮನವಿ. ಕನ್ನಡದ ಹಾಗೂ ಭಾರತೀಯ ಭಾಷಿಕ ವಲಯದಲ್ಲಿ ಮಾತ್ರವಲ್ಲ, ಜಾಗತಿಕ ಮಟ್ಟದ ಚಿಂತನೆ ಸಂಶೋಧನೆಗಳನ್ನು ನಮ್ಮ ವಿಶ್ವವಿದ್ಯಾಲಯಗಳ ವಿದ್ಯಾರ್ಥಿ ಅಧ್ಯಾಪಕರು ಗಮನಿಸದೇ ಹೋದರೆ 'ವಿಶ್ವವಿದ್ಯಾಲಯ'ದ ಪರಿಕಲ್ಪನೆ ಅರ್ಥ ಕಳೆದುಕೊಂಡಂತೆಯೇ ಸರಿ. ಹೀಗಾಗದಂತೆ ಎಚ್ಚರಿಕೆ ವಹಿಸುವ ಅಥವಾ ಬೌದ್ಧಿಕ ಕ್ರಿಯಾಶೀಲತೆಯನ್ನು ಉಳಿಸಿಕೊಳ್ಳುವ ಹೊಣೆ ನಮ್ಮ ಅಧ್ಯಾಪಕ ವರ್ಗದ ಮೇಲೆಯೂ ಇದೆ ಎಂಬುದನ್ನೂ ಅನಿವಾರ್ಯವಾಗಿ ಹೇಳಲೇಬೇಕಿದೆ.

ದರ್ಶನ, ಪಂಥ, ಧರ್ಮಗಳ ಬಗ್ಗೆ ಶ್ರೀಯುತ ಚಂದ್ರಶೇಖರ ಬಿರಾದಾರ್ ಅವರು ವಿಶದವಾಗಿ ಪ್ರಬಂಧವನ್ನು ಮಂಡಿಸಿದ್ದಾರೆ. ಯಾವುದನ್ನು ದರ್ಶನವೆನ್ನಬೇಕು, ಯಾವುದು ಪಂಥ, ಯಾವುದಲ್ಲ? ಧರ್ಮ ಎನ್ನುವ ಪದ ಬಳಕೆಯಂತೂ ಈಗೀಗ ಕ್ಲೀಷೆಯಾಗುತ್ತಿರುವುದು, ಕ್ಲೇಶ ಸೃಷ್ಟಿಸುತ್ತಿರುವುದನ್ನು ಯಾರು ಅಲ್ಲಗಳೆಯಬಲ್ಲರು? ಮತಗಳನ್ನೇ ಧರ್ಮವೆಂದು ಬೊಬ್ಬೆ ಹಾಕಲಾಗುತ್ತಿರುವ, ಹಾಗೆ 'ನಂಬಿಸಲ್ಪಟ್ಟ ಧರ್ಮ'ದ ಹೆಸರಿನೊಂದಿಗೆ ಸಾಂಸ್ಕೃತಿಕ ಪ್ರತಿಮೆ ಪುರಾಣಗಳನ್ನು ಸಮೀಕರಿಸಲಾಗುತ್ತಿರುವ ವಿದ್ಯಮಾನದ ಪರಿಣಾಮಗಳನ್ನು ಕಾಣುತ್ತಿದ್ದೇವೆ, ಪರಿಣಾಮಗಳ ಪಾಲುದಾರರೂ ಅನುಭವಿಗಳೂ ಆಗಿ ಹೋಗಿದ್ದೇವೆ. 'ಪಂಥಗಳು' ಒಂದೆಡೆ ಉಪಜಾತಿಗಳಾಗಿ ಅನನ್ಯತೆಯನ್ನು ತೋರುತ್ತಿದ್ದರೆ ಇನ್ನೊಂದೆಡೆ ಅಪಮೌಲೀಕರಣಗೊಳ್ಳುತ್ತಿವೆ. ಮತಗಳಂತೂ ಮಾನವ ಸಮುದಾಯಗಳನ್ನು ಮತಿಹೀನಗೊಳಿಸುತ್ತಿವೆ. ಇಂತಹ ಕಾಲ ಸಂದರ್ಭದಲ್ಲಿ 'ದರ್ಶನ'ವನ್ನು ವಿವರಿಸಿಕೊಳ್ಳಲಾದೀತೇ?

ದರ್ಶನ ಎನ್ನುವುದೊಂದು ಜ್ಞಾನಾನುಭವ. ಸಾಂಖ್ಯ, ಚಾರ್ವಾಕ, ಲೋಕಾಯತಗಳು ಈ ನೆಲದ ಅಂತಹ ಮಹತ್ವದ ದರ್ಶನಗಳು. ಸೂಫಿಯ ಸೇರ್ಪಡೆಯು ನಂತರದ್ದಾದರೂ ಅದು ಮೂಡಿಸಿದ ಸಂಚಲನವೂ ಚಾರಿತ್ರಿಕವಾದದ್ದು ಮತ್ತು ಚಾಲ್ತಿಯಲಿರುವಂಥಾದ್ದು. ಈ ಬಗೆಯ 'ದರ್ಶನ'ದ ಶಕ್ತಿ ಇದ್ದ ನಮ್ಮ ನೆಲದ 'ಅನುಭಾವ' ಪರಂಪರೆಯೂ ಇದರ ಜೊತೆಗಿನದ್ದೆ. ಸೂಫಿ ಮತ್ತು ಶರಣ ಜ್ಞಾನಕ್ರಮಗಳು ಕನ್ನಡದ ನೆಲದಲ್ಲಿ ಅದರಲ್ಲೂ ಕಲ್ಯಾಣ ಕರ್ನಾಟಕದಲ್ಲಿ ಮೂಡಿಸಿದ ಎಚ್ಚರ, ಹರಡಿದ ಬೆಳಕು ಅನುಪಮವಾದದ್ದು. ಸೂಫಿ ಮತ್ತು ಅನುಭಾವದ ಜೋಡು ನಡೆ ಅದು 'ದೋಸ್ತಾರ'ವಾಗಿ 'ಏಕ್' ಆಗಿ ಸಂಗಮಿಸಿ ವಿಶಿಷ್ಟವಾದದ್ದು. ಈ ಬಗೆಯ ದಾರ್ಶನಿಕ 'ದೋಸ್ತಾರತನ'ದ ದೀನ್–ಧರ್ಮಗಳನ್ನು ಯಾವ ಚೌಕಟ್ಟಿನಲ್ಲಿಡುವುದು? ತತ್ವ–ಜ್ಞಾನದ ನೆಲೆಯಲ್ಲಿ ಒಂದು ದರ್ಶನ ಎಂದೆನ್ನಬಹುದಾದ ಈ ಆಕೃತಿಗಳು ಆಚರಣೆಗಳ ಮಟ್ಟಕ್ಕೆ ವಿಸ್ತರಿಸುತ್ತಲೇ ಪಂಥೀಯವಾಗಿ ಬಿಡುತ್ತವೆ. ಈ ಪಂಥಗಳನ್ನು ತಥಾಕಥಿತ ದನಿಯಲ್ಲಿ ಮಂಡಿಸಲ್ಪಡುವಿಕೆಯಲ್ಲಿ ಇವುಗಳು ಮತವಾಗಿಯೂ ಪರಿವರ್ತನೆಗೊಳ್ಳಬಲ್ಲವು. ಮತಗಳನ್ನೇ ಧರ್ಮವೆಂದು ಬಳಸುವ ಭಾವಾವೇಶವಂತೂ ಎಗ್ಗಿಲ್ಲದೇ ಚಾಲ್ತಿಯಲ್ಲಿದೆ. ದರ್ಶನ, ಪಂಥ, ಮತ–ಧರ್ಮಗಳ ಈ ರೂಪಾಂತರಿತ ಅವಸ್ಥೆಯನ್ನು ಅವುಗಳು ರೂಪು ಪಡೆದ ಸಮಾಜೋ ಆರ್ಥಿಕ ಹಾಗೂ ಸಾಂಸ್ಕೃತಿಕ ರಾಜಕೀಯ ಸನ್ನಿವೇಶಗಳ ಹಿನ್ನೆಲೆಯ ಮೂಲಕ ಗಮನಿಸಿ ಅಧ್ಯಯನಗೈದು ಅರಿಯಲಾದರೆ ಸತ್ಯದ ಸನಿಹವಾದರೂ ತಲುಪಲಾದೀತು.

ಜ್ಞಾನ ಜಗತ್ತಿನ ಪರಿಕಲ್ಪನೆಗಳು ಅರಿವಿನ ವಿವರಣೆಗೆ ಬಳಕೆಯಾಗುವ ಬದಲಿಗೆ ಅವನ್ನು ಅಪಮೌಲ್ಯಗೊಳಿಸಲ್ಪಡುವ ಮೂಲಕ ತನ್ನ ಹಿತಾಸಕ್ತಿಯ ಸಾಧನ–ಅಸ್ತ್ರಗಳನ್ನಾಗಿಸುವುದು ಎಲ್ಲ ಕಾಲದ ಪ್ರಭುತ್ವ ವ್ಯವಸ್ಥೆಯ ಸಾಮಾನ್ಯಗುಣ. ಈ ಬಗೆಯ ಅಪಮೌಲ್ಯಗೊಂಡ ಪರಿಕಲ್ಪನೆಗಳಲ್ಲಿ 'ಸಂಸ್ಕೃತಿ' ಮತ್ತು 'ಧರ್ಮ'ಗಳು ಮುಖ್ಯವಾದವುಗಳು. ತನ್ನ ಹಿತಕ್ಕೆ ಪೂರಕವಾದ ಆಚರಣೆ ನಂಬಿಕೆಗಳನ್ನು ಪ್ರಭುತ್ವ

ವ್ಯವಸ್ಥೆಯು 'ಸಂಸ್ಕೃತಿ'ಯ ಹೆಸರಿನಲ್ಲಿ ಯಾವತ್ತೂ ಪ್ರೋತ್ಸಾಹಿಸುತ್ತಿರುತ್ತದೆ ಮತ್ತು ನಿರ್ಮಿಸುತ್ತಿರುತ್ತದೆ ಕೂಡ. ಅಂತೆಯೇ ಭಾವುಕ ಸಮುದಾಯಗಳು ಅದಕ್ಕೆ ಪ್ರಶ್ನಾತೀತ ಒಪ್ಪಿಗೆಯನ್ನು ನೀಡಿ ಆಚರಿಸುವ ನಿಷ್ಠೆಯನ್ನು ಪ್ರಕಟಿಸುತ್ತವೆ. ಈ ನಂಬಿಸುವ, ನಂಬುವ ಪ್ರಕ್ರಿಯೆಯಲ್ಲಿ ಅಪಮೌಲ್ಯವೂ ಮೌಲ್ಯವಾಗಿ ಮಾನ್ಯತೆಯನ್ನು ಗಳಿಸಿಕೊಂಡುಬಿಡುತ್ತದೆ. ಹೀಗಲ್ಲದಿದ್ದರೆ ಜಾತಿ ಅಸಮಾನತೆಯನ್ನೂ, ಅಮಾನವೀಯ ಅಸ್ಪೃಶ್ಯತೆಯ ಆಚರಣೆಗಳನ್ನೂ 'ಸಂಸ್ಕೃತಿ'ಯ ವಿಶಾಲ ವಿನ್ಯಾಸದಲ್ಲಿ ಜಾರಿಯಲ್ಲಿಡಲು ಹೇಗೆ ಸಾಧ್ಯವಿದ್ದೀತು? ಜಾತಿ ಎಂಬುದು ಸಂಸ್ಕೃತಿಯ ಉತ್ಪನ್ನವೇ ಹೌದಾದರೆ ಇಂತಹ ಸಂಸ್ಕೃತಿಯನ್ನು 'ಸಂಸ್ಕೃತಿ' ಎನ್ನಬಹುದೇ? ಇದನ್ನು, ಸಂಸ್ಕೃತಿ ಅಲ್ಲ ಎನ್ನಲೂ ಈಗ ಸಾಧ್ಯವಿಲ್ಲ. ಬದಲಿಗೆ ಜಾತಿ–ಅಸ್ಪೃಶ್ಯತೆಯ ಆಚರಣೆಯೂ 'ಸಂಸ್ಕೃತಿ'ಯ ಭಾಗ ಎಂದು ಒಪ್ಪಿಕೊಳ್ಳಲೇಬೇಕಿರುವ ಕಟುವಾಸ್ತವ ನಮ್ಮೆದುರಿದ್ದಾಗ, ಹಾಗಾದರೆ, 'ಇದು ಯಾರ ಸಂಸ್ಕೃತಿ?' ಎಂಬ ಪ್ರಶ್ನೆಯ ಮೂಲಕವೇ ಸರಿ ಉತ್ತರವನ್ನು ಕಂಡುಕೊಳ್ಳಲು ಸಾಧ್ಯ. ಇಂತಹ ಪ್ರಶ್ನೆಗಳಿಗೆ ದೊರೆಯುವ ಉತ್ತರದಲ್ಲಿಯೇ ಸಂಸ್ಕೃತಿ ಎಂದರೆ ಇಡಿಯಾಗಿ ಸ್ವೀಕರಿಸುವ ಮೌಲ್ಯವಲ್ಲ ಎಂತಲೂ, ಒಂದು ಹಿತಾಸಕ್ತಿಯ ಸಂಸ್ಕೃತಿಯು ಇನ್ನೊಂದು ಹಿತಾಸಕ್ತಿಯ ಸಂಸ್ಕೃತಿಗೆ ವಿರೋಧವಾಗಿಯೂ ಇರಬಲ್ಲದು ಎಂಬುದನ್ನೂ ಅರ್ಥಮಾಡಿಕೊಳ್ಳಬಹುದು. ಈ ಕ್ರಮದಲ್ಲಿ ಸಂಸ್ಕೃತಿಯು ಪ್ರಧಾನವಾಗಿ ಎರಡು ನೆಲೆಗಳನ್ನು ಹೊಂದಿದೆ. ಆಳುವ ವರ್ಗಗಳ ಪರವಾದುದು ಒಂದಾದರೆ, ದಮನಿತ ಸಮುದಾಯಗಳದ್ದು ಇನ್ನೊಂದು. ವಿಶೇಷವಾಗಿ, ಈ ಎರಡು ಪ್ರಮುಖ ನೆಲೆಗಳಲ್ಲಿ ಭಾರತದ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಅಂತೆಯೇ ಮತ, ಪಂಥ, ಧರ್ಮ, ದರ್ಶನ, ಸಂಸ್ಕೃತಿ, ಪರಂಪರೆ ಇವುಗಳನ್ನು ಒಳಗೊಂಡಂತೆ ಈ ಬಗೆಯ ಸಾಂಸ್ಕೃತಿಕ ಪರಿಕಲ್ಪನೆಗಳನ್ನು ಸ್ಪಷ್ಟಪಡಿಸಿಕೊಳ್ಳದೇ ಹೋದರೆ 'ಸಾಂಸ್ಕೃತಿಕ ಅಧ್ಯಯನ' ಎಂಬುದು ಕಗ್ಗಾಡಿನಲ್ಲಿ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಸುಳಿದಾಡಿದಂತೆಯೇ ಸರಿ. ಈ ಅಂಶವನ್ನು ಮನಗಾಣಿಸಲಷ್ಟೇ ನಾನು 'ಸಂಸ್ಕೃತಿ' ಎಂಬುದನ್ನು ಉದಾಹರಣೆಯಾಗಿ ಪ್ರಸ್ತಾಪಿಸಿರುವೆ.

ದರ್ಶನ, ಮತ, ಧರ್ಮ ಮೊದಲಾದವುಗಳು ದೈವಿಕತೆಗೆ ಸಂಬಂಧಿಸಿದವು ಎಂಬ ತಿಳಿವಳಿಕೆ ಇನ್ನೊಂದು ಬಗೆಯದ್ದು. ದೈವತ್ವವನ್ನು ಸ್ಪಷ್ಟವಾಗಿ ನಿರಾಕರಿಸಿದ ಬುದ್ಧನನ್ನೇ ದೇವನನ್ನಾಗಿ ಸ್ವೀಕರಿಸಿದ ಸಾಮಾಜಿಕತೆ ನಮ್ಮದು. ಬೌದ್ಧದ ಸ್ಥಿತಿಯೇ ಹೀಗಿರುವಾಗ, ಇನ್ನು ಕಾಳಾಮುಖ, ಪಾಶುಪತ, ನಾಥ, ಆರೂಡ, ಲಾಕುಳ, ಸಿದ್ಧ, ಶರಣ, ಸೂಫಿ, ಆಜೀವಿಕ ಜ್ಞಾನ ಜಗತ್ತುಗಳನ್ನು ಪ್ರವೇಶಿಸುವ ಪೂರ್ವ ಸಿದ್ಧತೆಯಾದರೂ ಏನು? ಹುಡುಕಾಟಕ್ಕೆ ಹೊರಡುವ ಮುನ್ನವೇ ಇವನ್ನು ಧಾರ್ಮಿಕವಾಗಿ ಗ್ರಹಿಸಿ ಪ್ರವೇಶಿಸುವುದಾದರೆ ಒಳಗೆ ಬೇರೇನು ಸಿಕ್ಕೀತು? ಇಲ್ಲಿ ಮುಖ್ಯವಾಗಿ ಹೇಳಬೇಕಿರುವುದು, ಈ ತತ್ವಕ್ರಮಗಳು ಧರಿಸಿದ ಅರಿವೆಯ ಒಳಗೆ ಧಾರ್ಮಿಕ ಮಾತ್ರವಲ್ಲದ ಹಲವು ಅರಿವುಗಳನ್ನು ಅಂಗಗಳನ್ನಾಗಿಸಿಕೊಂಡ ಶರೀರವೊಂದಿದೆ ಎಂಬುದನ್ನು. ಈ 'ಶಾರೀರ'ವನ್ನು ಕಾಣುವ, ಕಂಡಿದ್ದನ್ನು ಕಾಣಿಸುವ ಸಂಶೋಧಕನೂ, ಸಾಧಕನಾಗಬೇಕು. ಈ ಹೊತ್ತಿನ ಅಕಡೆಮಿಕ್ ವಲಯವು ಈ ಬಗೆಯ ಸಾಧನೆಯೇ ಇಲ್ಲದ 'ಸಿದ್ಧಪುರುಷ'ರ ಆಡಂಬೋಲವಾಗುತ್ತಿದೆ. ಇಂತಹ ಪರಿಸ್ಥಿತಿಯ ನಡುವೆಯೂ ಜ್ಞಾನಶೋಧದ ಸಮರ್ಥರು ಅಲ್ಲಲ್ಲಿ ಇದ್ದಾರೆ ಎಂಬುದೇ ಸಮಾಧಾನದ ವಿಷಯ. ಈ ವಿಚಾರ ಸಂಕಿರಣವೂ ಈ ಬಗೆಯ ಸಮರ್ಥರನ್ನು ಒಳಗೊಂಡಿದೆ ಹಾಗೂ ಇಂತಹ ಸಾಮರ್ಥ್ಯ ರೂಢಿಸಿಕೊಳ್ಳುವಲ್ಲಿ ಈ ವಿಚಾರ ಸಂಕಿರಣವು ಪ್ರಭಾವ ಬಿರುವಂತಾಗಿರುವುದು ಸಂತಸದ ಸಂಗತಿ.

ನಾನಿಲ್ಲಿ ಈ ವಿಚಾರ ಸಂಕಿರಣದ ಸಮಾರೋಪದ ಮಾತುಗಳನ್ನು ಆಡುವಷ್ಟಕ್ಕೆ ನನ್ನನ್ನು ನಾನು ಮಿತಿಗೊಳಪಡಿಸಿಕೊಂಡಿರುವೆ. ಕಲ್ಯಾಣ ಕರ್ನಾಟಕವು ಶರಣ ಮತ್ತು ಸೂಫಿ ದರ್ಶನಗಳ ಮೈತ್ರಿಭೂಮಿ. ಇಲ್ಲಿ ಇವುಗಳು ಅರಳಿವೆ ಎಂಬುದು ಎಷ್ಟು ದಿಟವೋ, ಅರಳುವಿಕೆಗೆ ಬೇಕಾದ ಇವುಗಳ ಬೇರಿಗೆ ಒದಗಿರುವ ಕಸುವು ಒದಗಿರುವುದು ಈ ನೆಲದ ಹಲವು ತತ್ವ ಪಂಥಗಳ ಸಾಂಸ್ಕೃತಿಕ ಸಾವಯವದಿಂದ. ಕಲ್ಯಾಣ ಕರ್ನಾಟಕದ ಜ್ಞಾನ ಜಗತ್ತಿನಾಳದ ಈ ಸಾಂಸ್ಕೃತಿಕ ಸಾವಯವ ಅದು ನಿಶ್ಚಿತವಾಗಿ ಎಲ್ಲ ಕಾಲಕ್ಕೂ ಒದಗುವ ಅಂತರಗಂಗೆಯೂ ಹೌದು, ವರ್ತಮಾನದ ತಮಂಧವನ್ನು ಬೇಧಿಸುವ ಬೆಳಕಿನೆಳೆಯೂ ಹೌದು. ಈ ಕಿರಣ ಬಿಂದುಗಳನ್ನು ಶೋಧಿಸಿ ಮತಿಗೆರೆಯುವ ಕಾಯಕ ಈ ಹೊತ್ತಿನ

ಚಿಂತಕರದ್ದಾಗಬೇಕು. ಇದು ವರ್ತಮಾನದ ಬೌದ್ಧಿಕ ಜವಾಬ್ದಾರಿ. ಇಂತಹ ಜವಾಬ್ದಾರಿಯನ್ನು ಪೂರೈಸುವ ನಿಟ್ಟಿನಲ್ಲಿ ಈ ವಿಚಾರ ಸಂಕಿರಣ ಒಂದು ಪುಟ್ಟ ಪ್ರಯತ್ನವಾಗಿದೆ ಹಾಗೂ ಇಂತಹ ವಿಚಾರ ಸಂಕಿರಣದ ಸಮಾರೋಪದ ನುಡಿಗಳನ್ನಾಡುವ ಭಾಗ್ಯ ನನ್ನದಾಗಿದೆ ಎಂದು ಭಾವಿಸಿರುವೆ.

ಈ ಅವಕಾಶವನ್ನು ಒದಗಿಸಿದ ಇತಿಹಾಸ ಸ್ನಾತಕೋತ್ತರ ಅಧ್ಯಯನ ವಿಭಾಗ (ಸ್ವಾಯತ್ತ) ಕಲಬುರ್ಗಿಯ ಮುಖ್ಯಸ್ಥರಾದ ಡಾ. ಇಂದುಮತಿ ಪಿ.ಪಾಟೀಲ, ಹಾಗೂ ಪುರಾತತ್ವ, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಉಪ ನಿರ್ದೇಶಕರಾದ ಶ್ರೀ ರಾಜಾರಾಂ.ಬಿ.ಸಿ.ಅವರಿಗೂ, ನನ್ನನ್ನು ಆಹ್ವಾನಿಸಿದ ಗೆಳೆಯ ಡಾ.ವೀರಶೆಟ್ಟಿ ಅವರಿಗೂ ಹಾಗೂ ಈ ವಿಚಾರ ಸಂಕಿರಣದ ಯಶಸ್ಸಿಗೆ ಶ್ರಮಿಸಿದ ಎಲ್ಲ ಸಂಘಟಕರಿಗೂ ವಂದಿಸಿ ನನ್ನ ಮಾತುಗಳನ್ನು ಮುಗಿಸುವೆ.

**ನಮಸ್ಕಾರ.**

